# ಅಮರ
# ವಾಣಿ

ಆಸ್ಥಾನ ವಿದ್ವಾನ್ ಎಂ.ಜಿ.ನಂಜುಂಡಾರಾಧ್ಯರ
ಸಂಸ್ಮರಣಾ ಸಂಪುಟ



ಸಂಪಾದಕರು

**ಎನ್. ಬಸವಾರಾಧ್ಯ**

**ಷಣ್ಮುಖಯ್ಯ ಅಕ್ಕೂರಮಠ**

ಶ್ರೀ ನಂಜುಂಡಾರಾಧ್ಯರಿಗೆ ಮೈಸೂರು ಅರಮನೆಯಿಂದ ಆಸ್ಥಾನ್ ವಿದ್ವಾನ್ (1946), ಭಾರತ ಸರ್ಕಾರದಿಂದ ಆದರ್ಶ ಶಿಕ್ಷಕ ರಾಷ್ಟ್ರ ಪ್ರಶಸ್ತಿ (1970), ಕರ್ನಾಟಕ ಸರ್ಕಾರದಿಂದ ರಾಜ್ಯ ಪ್ರಶಸ್ತಿ (1979), ಶಿವಾದ್ವೈತ ಭೂಷಣ (ರಂಭಾಪುರಿ ಸಂಸ್ಥಾನ ಮಠ), ಸಾಹಿತ್ಯರತ್ನ (ಸುತ್ತೂರು ಮಠ), ಶಿವತತ್ವಚಿಂತಾರತ್ನ (ಚಿತ್ರದುರ್ಗದ ಬೃಹನ್ಮಠ), ವಿದ್ಯಾವಾರಿಧಿ (ಹುಬ್ಬಳ್ಳಿ ಮೂರು ಸಾವಿರ ಮಠ), ಹೀಗೆ ಅರಮನೆ-ಗುರು ಮನೆಗಳಿಂದಲೂ, ರಾಜ್ಯ ಹಾಗೂ ಕೇಂದ್ರ ಸರ್ಕಾರಗಳಿಂದಲೂ, ಸಾರ್ವಜನಿಕ ಸಂಘ-ಸಂಸ್ಥೆಗಳಿಂದಲೂ ಅನೇಕ ಪ್ರತಿಷ್ಠಿತ ಗೌರವ-ಸನ್ಮಾನಗಳು ಸಂದಿವೆ.

ವಿದ್ವತ್ ಪ್ರಪಂಚದಲ್ಲಿ ಸದಾ ನೆನಪಿನಲ್ಲಿ ಉಳಿಯುವ ವ್ಯಕ್ತಿ ಶ್ರೀ ನಂಜುಂಡಾರಾಧ್ಯರು. ಇವರು ವ್ಯಕ್ತಿಯಾಗಿ, ಒಂದು ಸಂಸ್ಥೆಯಾಗಿ ಸಾಹಿತ್ಯಸೇವೆ ಮಾಡಿದರು. ಆಸ್ಥಾನ ಮಹಾವಿದ್ವಾಂಸರಾದ ಶ್ರೀ ಎನ್. ಆರ್. ಕರಿಬಸವಶಾಸ್ತ್ರಿ, ಹಾಗೂ ಗುರುಶಾಂತ ಶಾಸ್ತ್ರಿಗಳ ವಿದ್ವತ್ ಪರಂಪರೆಯನ್ನು ಬೆಳಸಿಕೊಂಡು ಬಂದ ಶ್ರೇಯಸ್ಸು ಇವರದು. ಶ್ರೀಯುತರು ಸಾಹಿತ್ಯದ ಗಿರಿಯನ್ನೇರಿನಿಂತು ಸಂಸ್ಕೃತ ಕನ್ನಡ ಉಭಯ ವಾಙ್ಮಯಗಳ ಉದ್ದಗಲ ಸೀಮೆಯನ್ನು ಕಂಡವರು. ಭಾರತೀಯ ದರ್ಶನಗಳ ಆಳಕ್ಕಿಳಿದು ಅವುಗಳ ನೆಲೆ-ಹಿನ್ನೆಲೆಯನ್ನು ಚೆನ್ನಾಗಿ ಬಲ್ಲವರಾಗಿದ್ದರು. ಪ್ರಾಚೀನ ಜ್ಞಾನದ ಪಾಂಡಿತ್ಯ-ಅವರಲ್ಲಿತ್ತು. ಆದರೂ ಪ್ರಾಚೀನ–ಆಧುನಿಕತೆಗಳನ್ನು ಸಮನ್ವಯವಾಗಿ ನೋಡುವ ದೃಷ್ಟಿಕೋನ ಅವರದಾಗಿತ್ತು. ಅವರು ಒಂದು ಚಲಿಸುವ ವಿಶ್ವಕೋಶವಾಗಿದ್ದರು.

ಕನ್ನಡ ನಾಡಿನ ಸಾಂಸ್ಕೃತಿಕ ಪರಂಪರೆಯನ್ನು ಶ್ರೀಮಂತಗೊಳಿಸಿದ ಹಿರಿಯರಲ್ಲಿ ನಂಜುಂಡಾರಾಧ್ಯರೂ ಒಬ್ಬರು.

# ಅಮರವಾಣಿ

ಸಂಪಾದಕರು
ಎಸ್. ಬಸವಾರಾಧ್ಯ
ಷಣ್ಮುಖಯ್ಯ ಅಕ್ಕೂರಮಠ



ಪ್ರಕಾಶಕರು
ಆಸ್ಥಾನ ವಿದ್ವಾನ್ ಎಂ.ಜಿ. ನಂಜುಂಡಾರಾಧ್ಯ ಸ್ಮಾರಕ ಸಮಿತಿ
61/1, ಶ್ರೀ ಜ್ಞಾನಜ್ಯೋತಿ ವಿದ್ಯಾಮಂದಿರ, 4ನೇ 'ಎನ್' ಬಡಾವಣೆ
ರಾಜಾಜಿನಗರ, ಬೆಂಗಳೂರು 560 010

**AMARAVANI**- Commemoration Volume, Edited By N. Basavaradhya and Shaumukhiah Akkuramatha,
Published by Asthana Vidhwan M.G. Nanjundaradhya Smaraka Samiti 61/1 Sri Jnana Jyoti Vidhyamandira 4th 'N' Extension Rajajinagar, Bangalore-10 xvi + 656 Pages. + 28 Pages Photos

Price : **Rs. 200.00**

First impression : 1994

ಬೆಲೆ : **200.00 ರೂಪಾಯಿಗಳು**

ವರ್ಣ ಶಿಲ್ಪಿ : ಸುಧಾಕರ ದರ್ಭೆ



ಲಕ್ಷ್ಮಿ ಮುದ್ರಣಾಲಯ
5ನೆಯ ಮುಖ್ಯ ರಸ್ತೆ, ಚಾಮರಾಜ ಪೇಟೆ
ಬೆಂಗಳೂರು- 18
ದೂರವಾಣಿ 66 13 123



## ಅಧ್ಯಕ್ಷರ ನುಡಿ

ಗುರುರ್ಬ್ರಹ್ಮಾ ಗುರುರ್ವಿಷ್ಣುಃ
ಗುರುದೇವೋ ಮಹೇಶ್ವರಃ।
ಗುರುಸ್ಸಾಕ್ಷಾತ್ ಪರಬ್ರಹ್ಮ
ತಸ್ಮೈ ಶ್ರೀ ಗುರವೇ ನಮಃ॥

ಆಸ್ಥಾನ ವಿದ್ವಾನ್ ಎಂ.ಜಿ. ನಂಜುಂಡಾರಾಧ್ಯರು ಸಮಾಜಕ್ಕೆ ಹಾಗೂ ಸಾಹಿತ್ಯ ಕ್ಷೇತ್ರಕ್ಕೆ ಸಲ್ಲಿಸಿದ ಸೇವೆ ನಾವೆಂದೆಂದಿಗೂ ಮರೆಯುವಂತಿಲ್ಲ. ಒಂದು ಸಂಸ್ಥೆ ಮಾಡಬಹುದಾದ ಕೆಲಸವನ್ನು ಒಬ್ಬ ವ್ಯಕ್ತಿ ಮಾಡಿತೋರಿಸಿದ್ದಾರೆ ಎಂಬುದಕ್ಕೆ ಸಾಕ್ಷಿ ಎಂ.ಜಿ.ಎನ್ ಅವರು.

ಇವರು ನನಗೆ ಬಾಲ್ಯದಲ್ಲಿ ನೀಡಿದ ಅಕ್ಕರೆ ಪ್ರೀತಿ ವಾತ್ಸಲ್ಯ ಹಾಗೂ ಪ್ರೋತ್ಸಾಹಗಳು ನನ್ನ ಶ್ರೇಯೋಭಿವೃದ್ಧಿಗೆ ಕಾರಣಗಳಾದವು.

ಸಮಾಜದಲ್ಲಿ ಈ ದಿವಸ ನಾನು ಒಂದು ಸ್ಥಾನವನ್ನು ಪಡೆದಿದ್ದೇನೆ ಎಂದು ನಾನೇನಾದರೂ ಭಾವಿಸಿದ್ದರೆ ಅದರ ಕೀರ್ತಿ ಶ್ರೀ ನಂಜುಂಡಾರಾಧ್ಯರಿಗೆ ಸಲ್ಲುತ್ತದೆ. ಅವರೇ ಇಂದಿಗೂ ನನ್ನ ಆರಾಧ್ಯದೇವತೆ ಎಂದು ಭಾವಿಸಿದ್ದೇನೆ.

ಆಸ್ಥಾನ ವಿದ್ವಾನ್ ನಂಜುಂಡಾರಾಧ್ಯರ ಶಿಷ್ಯನಾಗಿ ಬಂಧುವಾಗಿ ಅವರ ಸೇವೆಯನ್ನು ಯಾವ ರೀತಿ ಮಾಡಿ ಋಣಮುಕ್ತನಾಗಬೇಕೆಂದು ಯೋಚಿಸುತ್ತಿದ್ದಾಗ ಶ್ರೀ ಚನ್ನವೀರಸ್ವಾಮಿ ಇವರು ಶ್ರೀ ಎಂ.ಜಿ. ಎನ್. ಅವರ ಬಗ್ಗೆ ರೂಪಿಸಿದ್ದ ಒಂದು ಯೋಜನೆಯನ್ನು ನನ್ನಲ್ಲಿ ಚರ್ಚಿಸಿದರು. ಇದನ್ನು ಎನ್. ಬಸವಾರಾಧ್ಯರಲ್ಲಿ ಸಮಾಲೋಚಿಸಿ, ಈ ಯೋಜನೆ ಸೂಕ್ತವೆಂದು ಪರಿಗಣಿಸಿ ಈ ಯೋಜನೆಯನ್ನು ಕಾರ್ಯಗತಮಾಡಲು ನಿರ್ಧಾರ ಮಾಡಲಾಯಿತು.

ಶ್ರೀ ಆರಾಧ್ಯರ ಜ್ಞಾಪಕಾರ್ಥ ಒಂದು ಸಂಸ್ಮರಣ ಸಂಪುಟವನ್ನು ಹೊರತುವುದೇ ಅಲ್ಲದೆ ಅವರ ಹೆಸರಿನಲ್ಲಿ ಒಂದು ದತ್ತಿಯನ್ನು ಸ್ಥಾಪಿಸಿ ಉಪನ್ಯಾಸ ಹಾಗೂ ವಿಚಾರ ಗೋಷ್ಠಿಗಳನ್ನು ಏರ್ಪಡಿಸುವುದು ಈ ಯೋಜನೆಯ ಧ್ಯೇಯವಾಗಿತ್ತು.

ಇದಕ್ಕಾಗಿ ರೂಪುಗೊಂಡ ಆರಾಧ್ಯರ ಶಿಷ್ಯರು ಅಭಿಮಾನಿಗಳು ಸಭೆ ಸೇರಿ ಸಂಸ್ಮರಣ ಸಮಿತಿಯ ಗೌರವಾಧ್ಯಕ್ಷನನ್ನಾಗಿ ಮಾಡಿ ಈ ಪುಣ್ಯಪ್ರದ ಕಾರ್ಯದ ಹೊಣೆಯನ್ನು ನನ್ನ

ಮೇಲೆ ಹೊರಿಸಿದರು. ಈ ಕಾರ್ಯ ಅಷ್ಟು ಸುಲಭವಲ್ಲವೆಂದು ತಿಳಿದಿದ್ದರೂ "ಕ್ರಿಯಾಸಿದ್ಧಿ ಸ್ಸರ್ವೇ ಮಹತಾಂ ನೋಪಕರಣೆ" ಎಂಬ ಉಕ್ತಿಯಂತೆ ಅತ್ಯಂತ ಶ್ರದ್ಧೆ ಆಸಕ್ತಿಗಳಿಂದ ಈ ಕಾರ್ಯದಲ್ಲಿ ಜಯಶೀಲರಾದೆವು.

ಈ ಸಮಿತಿಯ ಸದಸ್ಯರೆಲ್ಲರೂ ಯಥಾಶಕ್ತಿಯಾಗಿ ಧನಸಹಾಯ ಮಾಡುವುದರ ಜೊತೆಗೆ ಈ ಧನಸಂಗ್ರಹಕಾರ್ಯದಲ್ಲಿ ಸಕ್ರಿಯವಾಗಿ ನನ್ನೊಡನೆ ಸಹಕರಿಸಿದ್ದಾರೆ. ಮುಖ್ಯವಾಗಿ ಹೆಸರಿಸತಕ್ಕವರೆಂದರೆ ಯಜಮಾನ್ ಶ್ರೀಕಂಠಪ್ಪನವರು, ಶ್ರೀಚನ್ನವೀರ ದೇವರು, ಜಿ.ವಿ. ಶಿವಸ್ವಾಮಿ ಇವರು, ಈ ಕಾರ್ಯದಲ್ಲಿ ಭಾಗಿಗಳಾಗಿದ್ದಾರೆ. ಈ ಮಹತ್‌ಕಾರ್ಯದಲ್ಲಿ ನೆರವು ನೀಡಿದ ಎಲ್ಲಾ ದಾನಿಗಳಿಗೂ ಈ ಕಾರ್ಯ ಸುಸೂತ್ರವಾಗಿ ನಡೆಯುವಂತೆ ಸಹಕರಿಸಿದ ಶ್ರೀ. ಎಂ.ಜಿ.ಎನ್ ಸಮಿತಿಯ ಎಲ್ಲಾ ಪದಾಧಿಕಾರಿಗಳಿಗೂ ಹಾಗೂ ಆರಾಧ್ಯರ ಕುಟುಂಬ ವರ್ಗದವರಿಗೂ ನಾನು ಸದಾ ಋಣಿಯಾಗಿದ್ದೇನೆ. ಸಮಿತಿಯ ಕೋರಿಕೆಯಂತೆ ಸಂಸ್ಮರಣ ಸಂಪುಟದ ಸಂಪಾದಕತ್ವವನ್ನು ಸಮರ್ಥವಾಗಿ ನಿರ್ವಹಿಸಿ ಕೊಟ್ಟಿರುವ ಪ್ರಧಾನ ಸಂಪಾದಕರಾದ ಎನ್.ಬಸವಾಧ್ಯರಿಗೂ ಮತ್ತು ಉಪಸಂಪಾದಕರಾದ ಶ್ರೀ ಷಣ್ಮುಖಯ್ಯ ಅಕ್ಕೂರಮಠ ಇವರಿಗೂ ಈ ಸಂಪುಟವನ್ನು ಅತ್ಯಂತ ಸುಂದರವಾಗಿ ಮುದ್ರಿಸಿಕೊಟ್ಟ ಲಕ್ಷ್ಮಿಮುದ್ರಣಾಲಯದ ಮಾಲೀಕರಾದ ಶ್ರೀ ಅಶೋಕ ಕುಮಾರ್ ಹಾಗೂ ಸಿಬ್ಬಂದಿ ವರ್ಗದವರಿಗೂ ಈ ಸಂಪುಟದ ಕರಡಚ್ಚು ತಿದ್ದುವಂಥ, ಕಠಿಣಕೆಲಸವನ್ನು ಬಹಳ ವಿಶ್ವಾಸದಿಂದ ಮಾಡಿಕೊಟ್ಟಿರುವ ಶ್ರೀ ಎನ್. ಚಕ್ರಪಾಣಿ ಅವರಿಗೂ ನನ್ನ ವಂದನೆಗಳು. ಈ ಮಹತ್ತರ ಕಾರ್ಯಕ್ಕೆ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಸಹಕರಿಸಿದ ಎಲ್ಲರನ್ನೂ ನಾನು ಮನಸಾರೆ ಅಭಿನಂದಿಸುತ್ತೇನೆ.

ಬಿ.ಕೆ. ಶಿವಯ್ಯ
ಗೌರವಾಧ್ಯಕ್ಷರು

# ಎರಡು ಮಾತು

'ಅಮರ ವಾಣಿ' ಎಂಬ ಕಾವ್ಯನಾಮದಿಂದ ಪ್ರಸಿದ್ಧರಾದ ವಿದ್ವಾನ್ ಎಂ.ಜಿ. ನಂಜುಂಡಾರಾಧ್ಯರು ವಿದ್ವತ್ ಪ್ರಪಂಚಕ್ಕೆ ಹಾಗೂ ಸಮಾಜಕ್ಕೆ ಸಲ್ಲಿಸಿದ ಸೇವೆ ವೈಶಿಷ್ಟ್ಯಪೂರ್ಣವಾದದ್ದು. ಸಂಸ್ಕೃತ ಕನ್ನಡ ಹಿಂದೀ ಇತ್ಯಾದಿ ಭಾಷೆಗಳಲ್ಲಿ ಅಪಾರವಾದ ಪಾಂಡಿತ್ಯ ಪಡೆದಿದ್ದ ಶ್ರೀಯುತರು ಸುಮಾರು ನೂರಾರು ಲೇಖನಗಳನ್ನು ಹಲವಾರು ಗ್ರಂಥಗಳನ್ನು ರಚಿಸಿ ಕನ್ನಡನಾಡಿನಲ್ಲಿ ತಮ್ಮದೇ ಆದ ವಿಶಿಷ್ಟ ಪರಂಪರೆಯನ್ನು ಬೆಳಸಿಕೊಂಡುಬಂದ ವ್ಯಕ್ತಿ. ಅವರು ಅಭ್ಯಾಸಮಾಡಿದ್ದು ಸಂಸ್ಕೃತ. ವೇದಾಗಮಗಳಿಗೆ ಅವರು ಸಲ್ಲಿಸಿದ ಸೇವೆ ಅವಿಸ್ಮರಣೀಯ.

ದಿನಾಂಕ 11-4-1992ರಂದು ಎಡೆಯೂರು ಶ್ರೀ ಸಿದ್ಧಲಿಂಗೇಶ್ವರ ಕ್ಷೇತ್ರದಿಂದ ಹಿಂತಿರುಗಿ ಬರುವಾಗ ಅಲ್ಲಿನ ಆಗಮಿಕರು ಎಂ.ಜಿ. ನಂಜುಂಡಾರಾಧ್ಯರ ಬಗ್ಗೆ ಆಡಿದ ಮಾತುಗಳು ನನ್ನ ಮೇಲೆ ಬಹಳ ಪ್ರಭಾವ ಬೀರಿದವು. ಆರಾಧ್ಯರು ವೇದಸಂಸ್ಕೃತ ವಾಙ್ಮಯಕ್ಕೆ ಸಲ್ಲಿಸಿದ ಸೇವೆ, ಅವರ ಹೋರಾಟದ ಬದಕು ಅನುಕರಣೀಯವಾದವುಗಳು. ಈ ವಿದ್ವಾಂಸರ ಹೆಸರನ್ನು ಜನ ಮರೆಯುತ್ತಿದ್ದಾರೆ. ಆದುದರಿಂದ ಅವರ ಹೆಸರು ಶಾಶ್ವತವಾಗಿ ಉಳಿಯಬೇಕಾದರೆ ಒಂದು ಸಂಸ್ಮರಣ ಗ್ರಂಥ ಪ್ರಕಟನೆ ಮತ್ತು ಅವರ ಹೆಸರಿನಲ್ಲಿ ಒಂದು ದತ್ತಿಯನ್ನು ಸ್ಥಾಪಿಸಿ, ಆ ಮೂಲಕ ಉಪನ್ಯಾಸ ಹಾಗೂ ಗೋಷ್ಠಿಗಳನ್ನು ಸಂಯೋಜಿಸುವುದು ಅವರಿಗೆ ಸಲ್ಲಿಸುವ ಕಿಂಚಿತ್ ಸೇವೆ ಎಂದು ಭಾವಿಸಿದೆ. ಈ ವಿಚಾರವನ್ನು ಮಾನ್ಯಶ್ರೀ ವೇ.ಬಿ.ಕೆ. ಶಿವಯ್ಯನವರಲ್ಲಿ ಪ್ರಸ್ತಾಪಿಸಿ ತದನಂತರ ನನ್ನ ಹಿರಿಯ ಮಿತ್ರರಾದ ಶ್ರೀ.ಎನ್. ಬಸವಾರಾಧ್ಯ ಇವರೊಡನೆ ವಿಚಾರ ವಿನಿಮಯ ಮಾಡಿಕೊಂಡಾಗ ಈ ಇಬ್ಬರು ಮಹನೀಯರು ಈ ಕಾರ್ಯಕ್ಕೆ ಪ್ರೋತ್ಸಾಹವನ್ನು ನೀಡಿದರು. ಅದರ ಫಲವೇ ಈ ಸಂಸ್ಮರಣ ಸಂಪುಟ.

ಈ ಯೋಜನೆಯನ್ನು ಕಾರ್ಯರೂಪಕ್ಕೆ ತರಲು ಆರಾಧ್ಯರ ಶಿಷ್ಯರು ಮತ್ತು ಅಭಿಮಾನಿಗಳು ಒಂದು ಅನೌಪಚಾರಿಕ ಸಭೆಯನ್ನು ಕರೆಯಲು ತೀರ್ಮಾನಿಸಿದಾಗ ಅದನ್ನು ಯಾವ ಸ್ಥಳದಲ್ಲಿ ಕರೆಯಬೇಕು ಎಂಬ ಸಮಸ್ಯೆ ಉದ್ಭವವಾಯಿತು. ಆಗ ಜ್ಞಾನಜ್ಯೋತಿ ವಿದ್ಯಾಮಂದಿರದ ಸಂಸ್ಥಾಪಕ ನಿರ್ದೇಶಕರಾದ ಶ್ರೀ.ಎಸ್. ಈಶ್ವರ ದೇವರು ಅನಿಮಿತ್ತ ಬಂಧುವಾಗಿ ನಮ್ಮ ನೆರವಿಗೆ ಬಂದರು.

ಪ್ರಥಮ ಸಭೆಯಲ್ಲೇ ಗೌರವ ಅಧ್ಯಕ್ಷರುಗಳಾಗಿ ಶ್ರೀ. ವೇ.ಬಿ.ಕೆ. ಶಿವಯ್ಯ ಮತ್ತು ಶ್ರೀ.ಎನ್. ಬಸವಾರಾಧ್ಯರು, ಕಾರ್ಯಾಧ್ಯಕ್ಷರಾಗಿ ಶ್ರೀ. ಜಿ. ಚನ್ನವೀರಸ್ವಾಮಿ ಅವರು, ಕೋಶಾಧ್ಯಕ್ಷರಾಗಿ ಯಜಮಾನ್ ಶ್ರೀ ಕಂಠಪ್ಪನವರು, ಗೌರವ ಕಾರ್ಯದರ್ಶಿಗಳಾಗಿ ಶ್ರೀ. ಎನ್. ಈಶ್ವರ ದೇವರು ಮತ್ತು ವಿದ್ವಾನ್ ಜಿ.ವಿ. ಶಿವಸ್ವಾಮಿ, ಸಹ ಕಾರ್ಯದರ್ಶಿಗಳಾಗಿ ವಿದ್ವಾನ್ ವೈ.ಎಂ. ಉಮಾಪತಿ ಶರ್ಮಾ ಮತ್ತು ಆರ್. ವೀರಯ್ಯ ಇವರು ಈ ಸಮಿತಿಯ ಪದಾಧಿಕಾರಿಗಳಾಗಿರುವಂತೆ ಸದಸ್ಯರು ಕೋರಿದರು. ಅದರಂತೆ ಈ ಎಲ್ಲ ಮಹನೀಯರು ಅತ್ಯಂತ ತೃಪ್ತಿಕರವಾಗಿ ಆದರಾಭಿಮಾನಗಳಿಂದ ಕಾರ್ಯನಿರ್ವಹಿಸಿದ್ದಾರೆ.

ವಿದ್ವಾನ್ ಬಿ.ಕೆ. ಶಿವಯ್ಯನವರ ಸಾರಥ್ಯದಲ್ಲಿ ಸಮಿತಿಯು ತನ್ನ ಚಟುವಟಿಕೆಯನ್ನು ಪ್ರಾರಂಭಿಸಿ ಧನಸಂಗ್ರಹವೇ ಮೊದಲಾದ ಎಲ್ಲಾ ಕಾರ್ಯಕ್ರಮಗಳನ್ನೂ ಸಮರ್ಥವಾಗಿ ನಿರ್ವಹಿಸಿಕೊಂಡುಬಂದಿದೆ. ಈ ಕಾರ್ಯವನ್ನು ಅತ್ಯಂತ ಯಶಸ್ವಿಗೊಳಿಸಿದ ಅಧ್ಯಕ್ಷರ ಮತ್ತು ಇತರ ಪದಾಧಿಕಾರಿಗಳ ಅಮೂಲ್ಯ ಸೇವೆಯನ್ನು ಸ್ಮರಿಸುವುದು ನನ್ನ ಕರ್ತವ್ಯ ಎಂದು ಭಾವಿಸಿದ್ದೇನೆ. ಈ ಕಾರ್ಯಕ್ಕೆ ಉದಾರವಾಗಿ ಕೊಡುಗೆಗಳನ್ನು ನೀಡಿದ ದಾನಿಗಳಿಗೂ ಸಮಿತಿಯ ಪರವಾಗಿ ಹೃತ್ಪೂರ್ವಕವಾದ ಕೃತಜ್ಞತೆಗಳು ಸಲ್ಲುತ್ತವೆ.

ಈ ಸಂಸ್ಮರಣ ಸಂಪುಟದ ಸಂಪಾದಕತ್ವದ ಗುರುತರವಾದ ಹೊಣೆಹೊತ್ತು ಕಾರ್ಯ ನಿರ್ವಹಿಸಿರುವ ಮಾನ್ಯ ಶ್ರೀ.ಎನ್. ಬಸವಾರಾಧ್ಯರಿಗೂ ಮತ್ತು ಈ ಸಂಪುಟದ ಉಪ ಸಂಪಾದಕರಾಗಿ ಎಲ್ಲಾ ಕಾರ್ಯಗಳನ್ನೂ ನಿರ್ವಹಿಸಿದ ಶ್ರೀ.ಷಣ್ಮುಖಯ್ಯ ಅಕ್ಕೂರ್ ಮಠ ಅವರಿಗೂ ಸಮಿತಿಯ ಪರವಾಗಿ ವಂದನೆಗಳನ್ನು ಸಲ್ಲಿಸುತ್ತೇನೆ.

ಈ ಕಾರ್ಯದಲ್ಲಿ ಪ್ರತ್ಯಕ್ಷವಾಗಿ ಪರೋಕ್ಷವಾಗಿ ಸಹಾಯ ಸಹಕಾರ ಸಲಹೆ ಸೂಚನೆಗಳನ್ನು ನೀಡಿ ಸಹಕರಿಸಿದ ಎಲ್ಲಾ ಬಂಧುಮಿತ್ರರಿಗೆ ಅನಂತಾನಂತ ವಂದನೆಗಳು.

ಜಿ. ಚನ್ನವೀರಸ್ವಾಮಿ
ಕಾರ್ಯಾಧ್ಯಕ್ಷ.

# ಸಂಪಾದಕರ ಮಾತು

ಕನ್ನಡ ನಾಡಿನ ಸಾಂಸ್ಕೃತಿಕ ಪರಂಪರೆಯನ್ನು ಶ್ರೀಮಂತಗೊಳಿಸಿದ ಹಿರಿಯರಲ್ಲಿ ಆಸ್ಥಾನ ವಿದ್ವಾನ್ ಎಂ.ಜಿ. ನಂಜುಂಡಾರಾಧ್ಯರೂ ಒಬ್ಬರು. ಅವರು ಒಂದು ಶಕ್ತಿಯಾಗಿ, ಸಂಸ್ಥೆಯಾಗಿ, ಕಳೆದ ಐದು ದಶಕಗಳಿಂದ ಸಾಹಿತ್ಯ ಸೇವೆ ಮಾಡಿದ್ದಾರೆ. ವಿದ್ವತ್ ಪ್ರಪಂಚದ ನೆನಪಿನಲ್ಲಿ ಸದಾ ಉಳಿಯುವಂತಾಗಿದ್ದಾರೆ. ವೇದ, ವೇದಾಂತ, ಆಗಮ ಹಾಗೂ ಸಾಹಿತ್ಯ ವಿಷಯಗಳಲ್ಲಿ ಅಗಾಧ ಜ್ಞಾನವನ್ನು ಸಂಪಾದಿಸಿದ್ದ ಶ್ರೀಯುತರು ಬೆಂಗಳೂರು ಮತ್ತು ಮೈಸೂರು ಸಂಸ್ಕೃತ ಕಾಲೇಜುಗಳಲ್ಲಿ ಅಲಂಕಾರ, ಶಕ್ತಿವಿಶಿಷ್ಟಾದ್ವೈತ ವೇದಾಂತ ಹಾಗೂ ವೀರಶೈವಾಗಮದ ಪ್ರಾಧ್ಯಾಪಕರಾಗಿ ಸುಮಾರು ಮೂವತ್ತುಮೂರು ವರ್ಷಗಳ ಕಾಲ ಸೇವೆಸಲ್ಲಿಸಿದ್ದಾರೆ.

ಶ್ರೀಯುತರು ಸಂಸ್ಕೃತ, ಕನ್ನಡ, ಹಿಂದಿ ಮತ್ತು ತೆಲುಗು ಭಾಷೆಗಳಲ್ಲಿ ಪ್ರೌಢಿಮೆಯನ್ನು ಸಂಪಾದಿಸಿ, ವೈದಿಕ ಹಾಗೂ ಸಿದ್ಧಾಂತ ಗ್ರಂಥಗಳ ರಚನೆಯಿಂದ ಹಿಡಿದು ವ್ಯಾಖ್ಯಾನ, ಕಾವ್ಯ, ನಾಟಕ, ಪ್ರಬಂಧ, ವಿಮರ್ಶೆ, ಜೀವನ ಚರಿತ್ರೆ, ಗ್ರಂಥಸಂಪಾದನೆ, ಸಂಶೋಧನೆ, ಅನುವಾದ, ಕಾದಂಬರಿ, ಹಾಗೂ ಮಕ್ಕಳ ಸಾಹಿತ್ಯ-ಹೀಗೆ ವಿವಿಧ ಪ್ರಕಾರಗಳಲ್ಲಿ ಸಾಹಿತ್ಯರಚನೆ ಮಾಡಿ ನೂರಾರು ಕೃತಿಗಳನ್ನು ರಚಿಸಿ ಕನ್ನಡ ಹಾಗೂ ಸಂಸ್ಕೃತ ವಾಙ್ಮಯಕ್ಕೆ ಅಪಾರವಾದ ಸೇವೆಸಲ್ಲಿಸಿದ್ದಾರೆ. ನಮ್ಮ ನಾಡಿನ ವಿದ್ವತ್ ಪರಂಪರೆಯನ್ನು ಬೆಳಸಿಕೊಂಡು ಬಂದ ಶ್ರೇಯಸ್ಸು ಇವರಿಗೆ ಸಲ್ಲುತ್ತದೆ.

ಒಂದು ನಾಡಿನ ಭಾಷೆ-ಸಾಹಿತ್ಯ-ಸಂಸ್ಕೃತಿಗಳಿಗೆ ಮಹತ್ವದ ಕೊಡುಗೆ ನೀಡಿದ ಹಿರಿಯ ವ್ಯಕ್ತಿಗಳನ್ನು, ಅವರು ಜೀವಂತವಿರುವಾಗ ಹಾಡಿ ಹೊಗಳಿ ತೃಪ್ತಿಪಟ್ಟುಕೊಳ್ಳುತ್ತೇವೆ. ಅವರು ನಮ್ಮಿಂದ ಕಣ್ಮರೆಯಾದಾಗ ಕಾಲಕಳೆದಂತೆ ಅವರನ್ನು ಮರೆತು ಬಿಡುತ್ತೇವೆ. ಹೀಗಾಗ ಬಾರದೆಂದು ತಿಳಿದು, ಹಿರಿಯರು ನಡೆದ ದಾರಿ, ಪಡೆದ ಜ್ಞಾನ, ಅವರ ಅನುಭವ ಹಾಗೂ ಮೌಲಿಕ ಚಿಂತನಗಳನ್ನು ಪ್ರಚಾರ ಮಾಡುವುದು ಹಾಗೂ ಸಮಾಜದ ಗಮನಕ್ಕೆ ತರುವುದು ಸೂಕ್ತವೆಂದು ಭಾವಿಸಿ ಆಸ್ಥಾನವಿದ್ವಾನ್ ಶ್ರೀ ಎಂ.ಜಿ. ನಂಜುಡಾರಾಧ್ಯರ ಬಹುಮುಖ ಸೇವೆಯ ಸ್ಮರಣೆ ಸದಾಕಾಲ ಉಳಿಯಬೇಕೆಂದು ಅವರು ಬದುಕಿದ್ದಾಗಲೇ ಒಂದು ಸಂಭಾವನಾಗ್ರಂಥವನ್ನು ಸಮರ್ಪಿಸಬೇಕೆಂದು ಒಂದು ಪ್ರಯತ್ನ ನಡೆಯಿತು. ಕಾರಣಾಂತರ ಗಳಿಂದ ಅದು ಕೈಗೂಡಲಿಲ್ಲ.

ಕಳೆದ ವರ್ಷ ಆರಾಧ್ಯರಿಗೆ ಆತ್ಮೀಯರಾದ ವಿದ್ವಾನ್ ಶ್ರೀ ಬಿ.ಕೆ. ಶಿವಯ್ಯನವರ ಅಧ್ಯಕ್ಷತೆಯಲ್ಲಿ ಹಾಗೂ, ಶಿಕ್ಷಣ ಇಲಾಖೆಯ ನಿವೃತ್ತ ಅಧಿಕಾರಿಗಳಾದ

ಶ್ರೀ ಜಿ. ಚನ್ನವೀರಸ್ವಾಮಿ ಅವರ ಕಾರ್ಯಾಧ್ಯಕ್ಷತೆಯಲ್ಲಿ ಸ್ಮಾರಕ ಸಮಿತಿ ರಚನೆಯಾಯಿತು. ಅದು ಎಂ.ಜಿ. ನಂಜುಂಡಾರಾಧ್ಯರ ಹೆಸರಿನಲ್ಲಿ ಒಂದು ಸಂಸ್ಮರಣ ಸಂಪುಟವನ್ನು ಪ್ರಕಟಿಸಬೇಕು ಹಾಗೂ ಒಂದು ಶಾಶ್ವತ ನಿಧಿಯನ್ನಿಟ್ಟು ಆ ಮೂಲಕ ಅನೇಕ ರಚನಾತ್ಮಕ ಕಾರ್ಯಕ್ರಮಗಳನ್ನು ನಡೆಸಬೇಕು ಎಂಬ ಯೋಜನೆಗಳನ್ನು ಇಟ್ಟುಕೊಂಡು ಕಾರ್ಯಪ್ರವೃತ್ತವಾಯಿತು.

ಸ್ಮಾರಕ ಸಮಿತಿ ಸಂಸ್ಮರಣ ಸಂಪುಟದ ಸಂಪಾದನೆಯ ಹೊಣೆಯನ್ನು ನಮ್ಮ ಮೇಲೆ ಹೊರಿಸಿತು. ನಾವು ಶ್ರೀ ನಂಜುಂಡಾರಾಧ್ಯರ ಮೇಲಿನ ಗೌರವದಿಂದಲೂ, ಹಾಗೂ ಇದು ಒಂದು ವಿದ್ವತ್ ಸೇವೆ ಎಂದು ಭಾವಿಸಿ ಈ ಕೆಲಸವನ್ನು ಒಪ್ಪಿಕೊಂಡೆವು. ಸಂಪುಟದ ರೂಪು-ರೇಷೆ ಹಾಗೂ ವಿದ್ವಾಂಸರ ಹೆಸರಿನ ಪಟ್ಟಿಯನ್ನು ಸಿದ್ಧಪಡಿಸಿ, ಸಮಿತಿಯ ಅನುಮತಿ ಪಡೆದು ವಿದ್ವಾಂಸರಿಗೆ ಲೇಖನಗಳನ್ನು ಕಳುಹಿಸಲು ಮನವಿ ಮಾಡಿಕೊಂಡು ಪತ್ರಬರೆದೆವು. ಪತ್ರ ಬರೆಯುವಾಗ, ಇಂಥದೇ ವಿಷಯವನ್ನು ಕುರಿತು ಲೇಖನ ಬರೆಯಿರಿ ಎಂದು ಅವರಿಗೆ ತಿಳಿಸಿರಲಿಲ್ಲ. ಆದರೆ ಇತಿಹಾಸ, ಸಂಶೋಧನೆ, ಸಾಹಿತ್ಯ, ಧರ್ಮ, ಸಂಸ್ಕೃತಿ, ಶಿಕ್ಷಣ ಮತ್ತು ವಿಜ್ಞಾನ ವಿಷಯಗಳಿಗೆ ಸಂಬಂಧಿಸಿದ ಲೇಖನಗಳನ್ನು ಬರೆಯಲು ಸೂಚಿಸಿದ್ದೆವು. ವಿಷಯಗಳನ್ನು ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರ್ಯವನ್ನು ಲೇಖಕರಿಗೆ ಬಿಟ್ಟಿದ್ದೆವು. ಹೀಗಾಗಿ ಈ ಸಂಪುಟದ ಲೇಖನಗಳಲ್ಲಿ ಏಕಸೂತ್ರತೆ ಇಲ್ಲ. ಆದರೂ ಅವುಗಳನ್ನು ಇಲ್ಲಿ ವಿಷಯಕ್ಕನುಗುಣವಾಗಿ ಸಂಯೋಜಿಸಲಾಗಿದೆ.

ಕೆಲವು ಲೇಖನಗಳು ತಮ್ಮ ವಿದ್ವತ್ ಪ್ರಭೆಯಿಂದ ಈ ಸಂಪುಟವನ್ನು ಬೆಳಗಲು ಕಾರಣವಾಗಿವೆ. ವಿದ್ವಾಂಸರು ತಾವು ಆಯ್ಕೆಮಾಡಿಕೊಂಡ ವಿಷಯದ ಬಗ್ಗೆ ಶ್ರಮವಹಿಸಿ ಲೇಖನಗಳನ್ನು ಬರೆದು ಸಕಾಲದಲ್ಲಿ ಕಳುಹಿಸಿ, ಉಪಕರಿಸಿದ್ದಾರೆ, ಅವರಿಗೆ ನಮ್ಮ ಅನಂತವಂದನೆಗಳು.

ನಮ್ಮ ಕೋರಿಕೆಯನ್ನು ಮನ್ನಿಸಿ ಈ ಸಂಪುಟದ ಕೆಲವು ಲೇಖನಗಳನ್ನು ಪರಿಶೀಲಿಸಿ ಸೂಕ್ತ ಸಲಹೆ ಹಾಗೂ ಸಹಕಾರ ನೀಡಿದ ವಿದ್ವಾಂಸರಾದ ಶ್ರೀ. ಟಿ.ಆರ್. ಮಹದೇವಯ್ಯ ಡಾ॥ ಸಿ.ಯು. ಮಂಜುನಾಥ, ವಿದ್ವಾನ್‌ಉಮಾಪತಿ ಶರ್ಮಾ ಇವರಿಗೆ ನಮ್ಮ ಕೃತಜ್ಞತೆಗಳು. ಈ ಸಂಪುಟದ ಲೇಖನಗಳ ಪರಿಶೀಲಕರಾಗಿ, ತಮ್ಮ ಅನಾರೋಗ್ಯವನ್ನು ಕೂಡಾ ಲೆಕ್ಕಿಸದೆ ಪ್ರಾರಂಭದಿಂದಲೂ ನಮ್ಮೊಂದಿಗೆ ಇದ್ದು ಸಂಪುಟದ ಕಾರ್ಯದಲ್ಲಿ ನೆರವಾಗಿ, ಅದು ಬೆಳಕು ಕಾಣುವ ಮೊದಲೇ ನಮ್ಮನ್ನಗಲಿದ ವಿದ್ವಾನ್ ಶಿವಮೂರ್ತಿಶಾಸ್ತ್ರಿಗಳ ಉಪಕಾರವನ್ನು ಸ್ಮರಿಸಿ ಅವರ ಆತ್ಮಕ್ಕೆ ಭಗವಂತನು ಅಮರ ಶಾಂತಿಯನ್ನು ಕರುಣಿಸಲೆಂದು ಪ್ರಾರ್ಥಿಸುತ್ತೇವೆ.

ಸ್ಮಾರಕ ಸಮಿತಿಯ ಯೋಜನೆ ಯಶಸ್ವಿಯಾಗಲು ಕಾರಣರಾದವರು ಶ್ರೀ.ಬಿ.ಕೆ ಶಿವಯ್ಯನವರು, ಶ್ರೀ.ಜಿ. ಚನ್ನವೀರಸ್ವಾಮಿ ಅವರು ಹಾಗೂ ಯಜಮಾನ್ ಶ್ರೀ ಕಂಠಪ್ಪನವರು. ಇವರು ಇದು ತಮ್ಮ ಸ್ವಂತ ಕೆಲಸವೆಂದು ಭಾವಿಸಿ ತ್ರಿಕರಣಪೂರ್ವಕವಾಗಿ ಶ್ರಮಿಸಿದ್ದಾರೆ.

ಎಂ.ಜಿ. ನಂಜುಂಡಾರಾಧ್ಯರ ಅಭಿಮಾನಿಗಳ, ಶಿಷ್ಯರ ಮನೆಗಳಿಗೆ ಹೋಗಿ ಧನಸಂಗ್ರಹ ಮಾಡಿ ಈ ಬೃಹತ್ ಸಂಪುಟದ ಪ್ರಕಟನೆಗೆ-ಕಾರಣಕರ್ತರಾಗಿದ್ದಾರೆ. ಇವರಿಗೆ ನಮ್ಮ ಅನಂತ ನಮನಗಳು.

ಈ ಕಾರ್ಯದಲ್ಲಿ ತುಂಬು ಹೃದಯದಿಂದ ಸಹಕಾರ ನೀಡಿದ ಸಮಿತಿಯ ಅಧ್ಯಕ್ಷರಿಗೂ ಸಮಿತಿಯ ಇತರ ಪದಾಧಿಕಾರಿಗಳಿಗೂ ಅಭಿವಂದನೆಗಳು.

ಈ ಸಂಸ್ಮರಣ ಸಂಪುಟಕ್ಕೆ ಭಾವಚಿತ್ರಗಳನ್ನು ಹಾಗೂ ವಿಶೇಷ ಮಾಹಿತಿಯನ್ನು ನೀಡಿ ಈ ಕಾರ್ಯದಲ್ಲಿ ಸಹಕರಿಸಿದ ಶ್ರೀ ನಂಜುಂಡಾರಾಧ್ಯರ ಕುಟುಂಬ ವರ್ಗದವರನ್ನು ಗೌರವದಿಂದ ಸ್ಮರಿಸುತ್ತೇವೆ.

ಸಂಪುಟದ ಲೇಖನಗಳ ಕರಡುಪ್ರತಿಯನ್ನು ತಿದ್ದುವ ಕೆಲಸದಲ್ಲಿ ನೆರವಾದ ಶ್ರೀ ಎನ್.ಚಕ್ರಪಾಣಿ ಅವರಿಗೂ, ಮುಖಪುಟಕ್ಕೆ ಅರ್ಥಪೂರ್ಣವಾದ ರೇಖಾವಿನ್ಯಾಸದ ವರ್ಣ ಚಿತ್ರವನ್ನು ಬರೆದ ವರ್ಣಶಿಲ್ಪಿ ಶ್ರೀ ಸುಧಾಕರ ದರ್ಭೆ ಅವರಿಗೂ, ಅಂದವಾಗಿ ಮುದ್ರಿಸಿಕೊಟ್ಟ ಲಕ್ಷ್ಮಿ ಮುದ್ರಣಾಲಯದ ಮಾಲೀಕರಾದ, ಶ್ರೀ ಅಶೋಕ ಕುಮಾರ್ ಹಾಗೂ ಅವರ ಸಿಬ್ಬಂದಿ ವರ್ಗದವರಿಗೂ ನಮ್ಮ ಅನಂತ ಧನ್ಯವಾದಗಳು .

ಎನ್. ಬಸವಾರಾಧ್ಯ
ಷಣ್ಮುಖಯ್ಯ ಅಕ್ಕೂರಮಠ
- ಸಂಪಾದಕರು

## ಆಸ್ಥಾನ ವಿದ್ವಾನ್ ಎಂ.ಜಿ. ನಂಜುಂಡಾರಾಧ್ಯ ಸ್ಮಾರಕ ಸಮಿತಿ

61/1 ಶ್ರೀ ಜ್ಞಾನಜ್ಯೋತಿವಿದ್ಯಾಮಂದಿರ 4ನೇ 'ಎನ್'
ಬಡಾವಣೆ, ರಾಜಾಜಿನಗರ ಬೆಂಗಳೂರು 560 010

*ಸ್ವಾಗತ ಸಮಿತಿ*

ಶ್ರೀ ಗೌ. ವಿ. ರುದ್ರಪ್ಪನವರು
ಶ್ರೀ ಗೌ.ವಿ ಚನ್ನಬಸಪ್ಪನವರು
ಪದ್ಮಶ್ರೀ ಆರ್.ಎಂ.ಬಿ. ಆರಾಧ್ಯರು
ಶ್ರೀ ಎನ್.ಆರ್. ಪಂಡಿತಾರಾಧ್ಯರು
ಶ್ರೀ ಜಿ. ತೋಟದಪ್ಪನವರು

### ಕಾರ್ಯಸಮಿತಿ

*ಅಧ್ಯಕ್ಷರು*
ವಿದ್ವಾನ್ ಬಿ.ಕೆ. ಶಿವಯ್ಯ
ಎನ್. ಬಸವಾರಾಧ್ಯ

*ಗೌರವ ಕಾರ್ಯದರ್ಶಿಗಳು*
ಜಿ.ವಿ. ಶಿವಸ್ವಾಮಿ
ಎಸ್. ಈಶ್ವರದೇವರು

*ಸಂಪುಟದ ಸಂಪಾದಕರು*
ಎನ್. ಬಸವಾರಾಧ್ಯ
ಷಣ್ಮುಖಯ್ಯ ಅಕ್ಕೂರಮಠ

*ಕಾರ್ಯಾಧ್ಯಕ್ಷರು*
ಜಿ. ಚನ್ನವೀರಸ್ವಾಮಿ

*ಕೋಶಾಧ್ಯಕ್ಷರು*
ಯಜಮಾನ್ ಶ್ರೀ ಕಂಠಪ್ಪನವರು

*ಸಹಕಾರ್ಯದರ್ಶಿಗಳು*
ವೈ.ಯಂ. ಉಮಾಪತಿ ಶರ್ಮಾ
ಆರ್. ವೀರಯ್ಯ

*ಸದಸ್ಯರು*
ಎಚ್. ಜಿ. ಶರಣಯ್ಯ
ಚನ್ನವೀರ ದೇವರು
ಚನ್ನಬಸವಾರಾಧ್ಯ
ಭೋಗನಂಜಪ್ಪ
ಸಿ. ನಾಗರಾಜ್
ಜಿ.ಗುರುಪಾದಯ್ಯ ಹಿರೇಮಠ

# ಪರಿವಿಡಿ



**ಅಭಿವ್ಯಕ್ತಿ**

**ಅನುರಕ್ತಿ**



ಆಗಮ ವಿಭಾಗ : ಅಧ್ಯಾಪಕರು ಮತ್ತು ವಿದ್ಯಾರ್ಥಿಗಳೊಂದಿಗೆ

ಹುಬ್ಬಳ್ಳಿ ಮೂರು ಸಾವಿರ ಮಠದ ಶ್ರೀಗಳಿಂದ ಪ್ರಶಸ್ತಿ ಸ್ವೀಕಾರ



'ತತ್ತ್ವಪ್ರಕಾಶ' ಬಿಡುಗಡೆಯ ಸಂದರ್ಭದಲ್ಲಿ ಸುತ್ತೂರು ಶ್ರೀಗಳಿಂದ ಅಭಿನಂದನೆ

'ಪರಮಹಂಸ' ಬಿಡುಗಡೆ ಸಂದರ್ಭದಲ್ಲಿ
ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರು ಮತ್ತು ಚದುರಂಗರೊಡನೆ

ಉಪರಾಷ್ಟ್ರಪತಿ ಜಿ. ಎಸ್. ಪಾಠಕ್ ಅವರಿಂದ
ರಾಷ್ಟ್ರಪ್ರಶಸ್ತಿ ಸ್ವೀಕಾರ ೧೭–೧೧–೧೯೭೦




ಗಾಂಧಿ ಸಮಾಧಿಯ ಬಳಿ – ೧೯೭೦ ನವೆಂಬರ್



ಕೇದಾರನಾಥದ ದಾರಿಯಲ್ಲಿ



ಹೆಣ್ಣು ಮಕ್ಕಳು
ಮಧ್ಯೆ ಹಿರಿಯ ಸೊಸೆಯೊಂದಿಗೆ



ಅಧ್ಯಯನದ ನಡುವೆ ಕಾಗದ ಪ್ರತಿವಾಚನ



ಒಟ್ಟು ಕುಟುಂಬ ೧೯೭೦ರಲ್ಲಿ

ಮಗ ಡಾ. ವಿಜಯಕುಮಾರನನ್ನು ಬೀಳ್ಕೊಡುವಾಗ

ಮೊಮ್ಮಗಳು ನಿಶಿತಾಳ ಮೊದಲನೆಯ ಹುಟ್ಟುಹಬ್ಬದಲ್ಲಿ ೧೯೯೦



ಆಸ್ಪತ್ರೆಯಿಂದ ಹಿಂದಿರುಗಿದಾಗ, ಮೊಮ್ಮಕ್ಕಳೊಂದಿಗೆ

# ಸ್ವಾಗತ ಸಮಿತಿ ಸದಸ್ಯರು



ಪದ್ಮಶ್ರೀ ಆರ್. ಎಂ. ಬಿ. ಆರಾಧ್ಯರು



ಎನ್. ಆರ್. ಪಂಡಿತಾರಾಧ್ಯರು



ಜಿ. ವಿ. ರುದ್ರಪ್ಪನವರು

## ಅಧ್ಯಕ್ಷರು ಮತ್ತು ಕಾರ್ಯಕಾರಿ ಸಮಿತಿ



ಕುಳಿತಿರುವವರು : ಬಲದಿಂದ ಎಡಕ್ಕೆ : ಶ್ರೀಯುತರುಗಳಾದ ಎಸ್. ಈಶ್ವರದೇವರು, ಯಜಮಾನ್ ಶ್ರೀಕಂಠಪ್ಪ, ಜಿ. ಚನ್ನವೀರಸ್ವಾಮಿ, ಬಿ. ಕೆ. ಶಿವಯ್ಯ, ಎನ್. ಬಸವಾರಾಧ್ಯ, ಜಿ. ವಿ. ಶಿವಸ್ವಾಮಿ, ವೈ. ಎಂ. ಉಮಾಪತಿಶರ್ಮಾ

ನಿಂತಿರುವವರು : ಎಡದಿಂದ ಬಲಕ್ಕೆ : ಆರ್. ವೀರಯ್ಯ, ಹೆಚ್. ಜಿ. ಶರಣಯ್ಯ, ಜಿ. ಗುರುಪಾದಯ್ಯ, ಭೋಗನಂಜಪ್ಪ, ಸಿ. ನಾಗರಾಜು, ಬಿ. ಸಿ. ವೀರಪ್ಪ, ಷಣ್ಮುಖಯ್ಯ ಅಕ್ಕೂರುಮಠ, ಚನ್ನವೀರದೇವರು, ಚನ್ನಬಸವಾರಾಧ್ಯ

# ಕನ್ನಡ ಹಸ್ತಪ್ರತಿ ಪ್ರಶಸ್ತಿಗಳು :

## -ಒಂದು ಅಧ್ಯಯನ

## (Calophons of Kannada Manuscripts - A Study)

ಡಾ|| ಬಿ.ಆರ್. ಹಿರೇಮಠ

---

ಕವಿ ಕೃತಿಯ ಪಠ್ಯಭಾಗವನ್ನು ಹೊರತುಪಡಿಸಿ ಬರುವ ಈ ಪ್ರಶಸ್ತಿಗಳು ಹಸ್ತಪ್ರತಿಗಳ ಆದಿ ಮತ್ತು ಅಂತ್ಯಭಾಗಗಳಲ್ಲಿ ಕಂಡುಬರುತ್ತದೆ. ಕೃತಿಯನ್ನು ರಚಿಸಿದವರು ಕವಿಗಳಾದರೆ, ಆ ಕೃತಿಯನ್ನು ಪ್ರತಿಮಾಡಿದ ಲಿಪಿಕಾರರು ಈ ಪ್ರಶಸ್ತಿಗಳನ್ನು ಬರೆದಿದ್ದಾರೆ. ಹಸ್ತಪ್ರತಿ ಲಿಪಿಕಾರರು ಈ ಪ್ರಶಸ್ತಿ ಭಾಗದಲ್ಲಿ ತಮ್ಮ ಚರಿತ್ರೆ ಹೇಳುವ ನೆಪದಲ್ಲಿ ನಾಡಿನ ಚರಿತ್ರೆಗೆ ಉಪಯುಕ್ತವಾದ ಚಾರಿತ್ರಿಕ ಸಂಗತಿಗಳನ್ನೂ ನಿರೂಪಿಸಿದ್ದಾರೆ. ಹಸ್ತಪ್ರತಿ ಪ್ರಶಸ್ತಿಗಳನ್ನು ಕೃತಿಯ ಆದಿಭಾಗಕ್ಕಿಂತ ಅಂತ್ಯಭಾಗದಲ್ಲಿಯೇ ಹೆಚ್ಚಾಗಿ ಬರೆಯಲಾಗಿದೆ. ಎಲ್ಲ ಹಸ್ತ ಪ್ರತಿಗಳಲ್ಲಿಯೂ ಈ ಪ್ರಶಸ್ತಿಗಳು ದೊರೆಯುವುದಿಲ್ಲ. ಆದುದರಿಂದ ಲಿಪಿಕಾರರು ಹಸ್ತಪ್ರತಿಗಳಲ್ಲಿ ಕವಿಕೃತಿಯ ಪಠ್ಯದ ತರುವಾಯ ಬರೆದ ಪ್ರಶಸ್ತಿಗಳನ್ನು ಮಾತ್ರ ಇಲ್ಲಿ ಪರಿಶೀಲಿಸಲಾಗಿದೆ.

ಕರ್ನಾಟಕ ಹಸ್ತಪ್ರತಿಗಳ ಪ್ರಶಸ್ತಿಗಳನ್ನು ಕುರಿತು ಅಧ್ಯಯನ ನಡೆಸುವುದು ವಿವೇಚಿಸುವುದು ಬಹುದೊಡ್ಡ ಕೆಲಸ. ಕರ್ನಾಟಕ ಒಳ-ಹೊರಗಿನ ಸರ್ವಸಮಗ್ರ ಕನ್ನಡ ಹಸ್ತಪ್ರತಿಗಳ ಪ್ರಶಸ್ತಿಗಳನ್ನು ಕುರಿತು ಅಭ್ಯಸಿಸುವುದು ಇನ್ನೂ ದೊಡ್ಡ ಕೆಲಸ. ಇಷ್ಟೇ ಅಲ್ಲ

ಅತ್ಯಂತ ಮಹತ್ವದ ಬೆಲೆಯುಳ್ಳ ಹಾಗೂ ಅತ್ಯಗತ್ಯದ ಕಾರ್ಯವೂ ಆಗಿದೆ. ಹೀಗೆ ಹಸ್ತಪ್ರತಿ ಪ್ರಶಸ್ತಿಗಳ ಮಹತ್ವವನ್ನು ಕಂಡುಕೊಂಡ ನಾನು ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ ಪ್ರಕಟಿಸಿದ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿಯ ಎಂಟು ಸಂಪುಟಗಳಲ್ಲಿ ಬರುವ ಹಸ್ತಪ್ರತಿ ಪ್ರಶಸ್ತಿಗಳನ್ನು ಮಾತ್ರ ಆಧಾರವಾಗಿಟ್ಟುಕೊಂಡು ಈ ಲೇಖನ ಸಿದ್ಧಪಡಿಸಿದ್ದೇನೆ. ಈ ಎಂಟೂ ಸಂಪುಟಗಳಲ್ಲಿ ಕಂಡುಬರುವ ಪ್ರಶಸ್ತಿಗಳನ್ನು ಸಂಗ್ರಹಿಸಿ ಇವುಗಳಿಂದ ತಿಳಿದುಬರುವ ವಿವಿಧ ಅಂಶಗಳನ್ನು ಹೀಗೆ ವಿವರಿಸಬಹುದಾಗಿದೆ.

ನಾಡಿನ ಸಂಸ್ಕೃತಿಯನ್ನು ಸಂರಕ್ಷಿಸುವಲ್ಲಿ ಅತ್ಯಂತ ಶ್ರದ್ಧೆಯಿಂದ ದುಡಿದವರು, ಹಸ್ತಪ್ರತಿ ಲಿಪಿಕಾರರು, ಕವಿಕೃತಿಯನ್ನು ಪ್ರತಿಮಾಡುವುದರ ಮೂಲಕ ಇವರು ಕವಿಗಳನ್ನೂ ಆ ಮೂಲಕ ಸಂಸ್ಕೃತಿಯನ್ನೂ ಬದುಕಿಸಿಕೊಟ್ಟಿದ್ದಾರೆ. ಸಂಸ್ಕೃತಿ ಅಕ್ಷಯವಾಗಿ ಉಳಿದುಕೊಂಡು ಬರಲು ಶ್ರಮಿಸಿದ ಕಾರಣಪುರುಷರು ಇವರಾಗಿದ್ದಾರೆ. ಹೀಗೆ ಹಸ್ತಪ್ರತಿ ಲಿಪಿಕಾರರು ಸಾಹಿತ್ಯ-ಸಂಸ್ಕೃತಿಗಳ ರಕ್ಷಣೆಯ ವಾರಸುದಾರರಾಗಿ ಕಾರ್ಯಮಾಡಿದ್ದಾರೆ. ಸಂಸ್ಕೃತಿ ಸಂವಹನಕಾರರಾದ ಇಂಥ ಹಸ್ತಪ್ರತಿ ಲಿಪಿಕಾರರ ಚರಿತ್ರೆಗೆ ಸಂಬಂಧಿಸಿದಂತೆ ಲಿಪಿಕಾರರ ಹೆಸರು ವಾಸಿಸುತ್ತಿದ್ದ ಗ್ರಾಮ, ತಂದೆ-ತಾಯಿ, ಗುರು, ಇಷ್ಟದೈವ, ವಂಶ, ಗೋತ್ರ-ಸೂತ್ರ ಈ ಮೊದಲಾದ ಮಹತ್ವದ ಸಂಗತಿಗಳು ಈ ಪ್ರಶಸ್ತಿಗಳಿಂದ ಗೊತ್ತಾಗುತ್ತದೆ. ಇವುಗಳನ್ನು ಉದಾಹರಣೆಗಳ ಮೂಲಕ ಹೀಗೆ ವಿವರಿಸಬಹುದು.

''ಚೆನ್ನರಾಯ ಪಟ್ಟಣದ ಭದ್ರಯ್ಯನ ಮಗ ಬ್ರಹ್ಮಯ್ಯನು ಬರೆದ ನೇಮೀಶ್ವರ ಸ್ವಾಮಿಯವರ ಪುರಾಣ ಪುಸ್ತಕ (VI- ೪೮೦)''

''ಮುತ್ತೂರ ಮಠದ ಮತ್ತಾಪಾರದ ಕಲ್ಲಕಿ ಮಠದ ಶಿವಪ್ರಸಾದ ಸಿದ್ಧಬಸವನ ಬರಹ'' (VI - ೪೩೫ ನಿಜಲಿಂಗ ಶತಕ)

''ಚೆನ್ನವೀರಾಚಾರ್ಯರಿಗೆ ಶಿಷ್ಯರುಗಳಾದಂತ ಪಂಚಾಕ್ಷರ ದೇವರಿಗೆ ಬೆಡಗಿನ ವಚನ ವ್ಯಾಖ್ಯಾನ'' (VI - ೬೨೭)

''ಸಿರಿಗೆರೆ ಮಠದ ವೃಷಭೇಂದ್ರಾಖ್ಯಾರವರ ಪತ್ನ್ಯಾಃ ನೀಲಮ್ಮನವರ ಗರ್ಭಾಬ್ಧಿ ಚಂದ್ರಮನಾದ ರಾಚಪ್ಪನವರ ಅರ್ಧಾಂಗಿಯಳಾದ ಬಸಮ್ಮನವರ ಒಡಲಾಬ್ಧಿ ಚಂದ್ರೋದಯನಾದ ಬಸಪ್ಪನವರು''(III - ೧೪೦೩ ಮನೋರಂಜನ ವಿಲಾಸ)

''ಇಮ್ಮಡಿ ಮುರಿಗೆ ಸ್ವಾಮಿಗಳ ಪ್ರೀತಿಯ ಶಿಷ್ಯನಾದ ಸಂಗೀತ ಚೆನ್ನಬಸಪ್ಪ ಬರೆದ ಶಿವಯೋಗ ಪ್ರದೀಪಿಕೆ'' (IV-೧೭೩೮)

''ಸ್ಥಳದ ಶ್ಯಾನುಭೋಗರು ತಿಮ್ಮಪ್ಪಯ್ಯನವರ ಪುತ್ರರಾದ ನಂಜಪ್ಪಯ್ಯನವರು. ಇವರ ಪುತ್ರರಾದ ಬಾಲಾಜಯ್ಯನವರು ಇವರ ಕುಮಾರರಾದ ವೆಂಕಟೇಶ್ವರಯ್ಯನವರು ಇವರ ಪುತ್ರ

ವೆಂಕಟರಮಣೈಯನು'' (III-೧೩೪೯ ಮೈಸೂರು ದೊರೆಗಳ ಪೂರ್ವವಂಶಾಭ್ಯುದಯ)

''ಭಾರದ್ವಾಜ ಗೋತ್ರ ಅಶ್ವಲಾಯನ ಸೂತ್ರ ಋಕ್ಶಾಖಾಧ್ಯಾಯಿಗಳಾದ ಚಂದ್ರ ವಂಶೋದ್ಭವರಾದ ಕಳಲೆ ನಗರಾಧಿಪರಾದ ತಿಮ್ಮರಾಜ ಒಡೆಯರವರ ಪೌತ್ರರಾದ ಲಕ್ಷ್ಮೀಕಾಂತ ರಾಜೈಯ್ಯನವರ ಕುಮಾರ ಕಾಂತ ರಾಜೈಯ್ಯ'' (IV-೨೦೨೯ ಹರಿಶ್ಚಂದ್ರ ಶತಕ)

''ಹೊಳೆಯ ನರಸಿಂಹಪುರದ ಪೂಜೆಬಸದಿ ಚಂದ್ರನಾಥ ಸ್ವಾಮಿ ಸೇವಕನಾದ ರಾಯಣ್ಣನ ಕುಮಾರ ಪಾರ್ಶ್ವನಾಥಯ್ಯ'' (VI-೩೧೫ ದ್ವಾದಶಾನುಪ್ರೇಕ್ಷೆ)

ಈ ಮೇಲಿನ ವಿವರಗಳು ಹಸ್ತಪ್ರತಿ-ಲಿಪಿಕಾರರ ಚರಿತ್ರೆ ಬರೆಯುವಲ್ಲಿ ಬಹಳಷ್ಟು ಉಪಯುಕ್ತವಾಗಿರುತ್ತವೆ.

ಹಸ್ತಪ್ರತಿಗಳ ಆದಿಯಲ್ಲಿ ಬರುವ ಶ್ರೀಗುರು ಬಸವಲಿಂಗಾಯನಮಃ, ಶ್ರೀವೀತರಾಗಾಯ ನಮಃ, ಶ್ರೀಗಣಾಧಿಪತಯೇ ನಮಃ, ಶ್ರೀ ಕಡಲೇಗುದ್ದಿನ ಆಂಜನೇಯ ನಮಃ, ಶ್ರೀಮತ್ ಕನಕಾಚಲದ ಗುಂಡಿನ ಬ್ರಹ್ಮದೇವಾಯ ನಮಃ, ಶ್ರೀಕಾಳಿಕಾದೇವಿ ಕಮ್ಮಟೇಶ್ವರ ದೇವಿಯ ಪಾದವೆ ಗತಿ, ಒಬ್ಬಾಳು ಗುರುಬಾಳಿ ಗುರುವಿನ ಶ್ರೀಪಾದವೆ ಗತಿ, ಕೊಲ್ಲೂರ ಮೂಕಾಂಬನವರ ಪಾದವೆ ಗತಿ, ಗದುಗಿನ ವೀರನಾರಾಯಣಸ್ವಾಮಿಯ ಚರಣಾರವಿಂದವೆ ಗತಿ, ಶ್ರೀಗುರು ಮುರಿಗಾ ಶಾಂತವೀರೇಶ್ವರರಾಯ ನಮಃ, ಆದವಾನಿಯ ಯಲ್ಲಮ್ಮನ ಪಾದವೆ ಗತಿ, ಧರಣೇಂದ್ರ ಪದ್ಮಾವತಿಯೆ ನಮಃ, ಸಾಸಲ ಶಂಭು ಸೋಮೇಶ್ವರನ ದಿವ್ಯ ಚರಣಾರವಿಂದವೆ ಗತಿ, ಜಾಲಿಹಾಳ ಗುರುತಾತದೇವರು ಪ್ರಸನ್ನ, ಕಂದಿಕೆರೆಯ ಕೊಳಲ ಗೋಪಾಲಕೃಷ್ಣಸ್ವಾಮಿಯವರ ಶ್ರೀಚರಣಾರವಿಂದವೇ ಗತಿ, ಹಿರೂರ ಚಂನಬಸವೇಶ್ವರಾಯ ನಮಃ, ಶ್ರೀಮದ್ಗುರು ಕಪ್ಪನಂಜೇಶ್ವರಾಯ ನಮಃ, ನೀಲಕಂಠ ಭಾಷ್ಯಕಾರಗುರುವೇ ನಮಃ, ಗಗನ ಸ್ವಾಮಿಗಳ ಪಾದಾರವಿಂದವೆ ಗತಿ, ಶ್ರೀಗುರು ತೋಂಟದ ಸ್ವಾಮಿಯವರ ಪಾದಾರವಿಂದವೆ ಗತಿ, ಪಾತಾಳಪುರಿ ಸೌಮ್ಯಕೇಶವಾಯ ನಮಃ, ರೇವಣಸಿದ್ಧೇಶ್ವರನ ಪಾದಪದ್ಮವೇ ಗತಿ, ಶ್ರೀಗುರು ನಂಜುಂಡಲಿಂಗಾಯ ನಮಃ, ಕನಕಗಿರಿ ವಿಜಯಪಾರ್ಶ್ವನಾಥಾಯ ನಮಃ, ಮಲೆಯೂರ ಆದಿಪರಮೇಶ್ವರಾಯ ನಮಃ, ಉದ್ಯೋಗ ಪುರದ ಚಂದ್ರಪ್ರಭ ಜಿನಾಯ ನಮಃ, ಕಲ್ಲುಗಾರ ಲಕ್ಷ್ಮೀನಾರಾಯಣ ದೇವರ ಪಾದವೆ ಗತಿ, ಶ್ರೀ ವಿದ್ಯಾ ಗುರುಭ್ಯೋನಮಃ, ಶ್ರೀರಾಮಚಂದ್ರಾಯ ನಮಃ, ಶ್ರೀಭಟ್ಟಾಕಲಂಕ ಮುನಯೇ ನಮಃ, ಉಜ್ಜನಿ ಧರ್ಮಸಿಂಹಾಸನಾಧೀಶ್ವರ ನಮಃ, ಮದ್ದುಗ್ಗುರು ಚೆನ್ನಬಸವ ದೇಶಿಕೇಂದ್ರಾಯ ನಮಃ, ಶಾರದಾಯ ನಮಃ ಮೊದಲಾದ ಮಂಗಲ ವಾಚಕಗಳು ಲಿಪಿಕಾರರ ಇಷ್ಟದೈವವನ್ನೂ ವಿದ್ಯಾಗುರುವನ್ನೂ ಅವರ ಧಾರ್ಮಿಕ ಮನೋಭಾವನೆಯನ್ನೂ ಪ್ರತಿನಿಧಿಸುತ್ತವೆ. ಲಿಪಿಕಾರರು ಯಾವ ಧರ್ಮೀಯರಾಗಿದ್ದರೋ ಅದೇ ಧರ್ಮದ ಇಷ್ಟದೈವವನ್ನು ಹಸ್ತಪ್ರತಿಗಳ ಆದಿಯಲ್ಲಿ ವಿಶೇಷವಾಗಿ ಸ್ಮರಿಸಿದ್ದಾರೆ. ಇದರಿಂದ ಆಯಾ ಗ್ರಾಮಗಳಲ್ಲಿದ್ದ ಜೈನ, ವೀರಶೈವ,

ಬ್ರಾಹ್ಮಣ ಹಾಗೂ ಇತರ ದೇವಾಲಯಗಳ ಹೆಸರು ಗೊತ್ತಾಗುತ್ತವೆ.

ಕೆಲವು ಹಸ್ತಪ್ರತಿ ಲಿಪಿಕಾರರು ತಾವು ಪ್ರತಿಮಾಡಿದ ಸ್ಥಳವನ್ನು ಹೇಳಿದ್ದಾರೆ. ಲಿಪಿಕಾರರು ತಮ್ಮ ಮನೋಧರ್ಮ, ವಯೋಧರ್ಮಗಳಿಗೆ ತಕ್ಕಂತೆ ಪವಿತ್ರ ಸ್ಥಳಗಳಲ್ಲಿ ಹಸ್ತಪ್ರತಿಗಳನ್ನು ಪ್ರತಿಗೊಳಿಸಿರುವುದು ವಿದಿತವಾಗುತ್ತದೆ.

ಉದಾಹರಣೆ:

''ಯೇಚಗನಹಳ್ಳಿಯ ಬ್ರಹ್ಮದೇವರ ಸನ್ನಿಧಿಯಲ್ಲಿ ಬರೆದನು'' (VI-೭೨೩ ಪ್ರಸನ್ನ ಚಿಂತಾಮಣಿ)

''ರತ್ನಗಿರಿ ಮಠದ ಶ್ರೀಶಾರದಾಂಬೆ ಸನ್ನಿಧಿಯಲ್ಲಿ'' (VI-೬೨೨ ಪುಣ್ಯಾಸ್ರವ, ಶಕ ೧೭೬೪)

''ಹಾಸನದ ಶ್ರೀಪಾರಿಶ್ವಾನಾಥ ಸ್ವಾಮಿಯ ಸಂನಿಧಿಯಲ್ಲಿ'' (ಶಕ ೧೬೩೯, IV ೧೭೯೫)

''ಮಲೆಯೂರ ಅಧೀಶ್ವರನ ಪಾದಸನ್ನಿಧಿಯಲ್ಲಿ ಮಲೆಯೂರ ಆದಪಯ್ಯ ಹರವೆ ವಿಜಯಂಣಯ್ಯಗೆ ಬರೆದ ಪುಸ್ತಕ....'' (IV-೧೬೫೭)

''ಮೈಸೂರ ಶಾಂತೀಶ್ವರ ಸ್ವಾಮಿಯವರ ಬಸದಿಯಲ್ಲಿ ಬರೆದು ಸಂಪೂರ್ಣವಾದುದಕ್ಕೆ ಜಯ ಮಂಗಳಂ'' (IV-೧೭೦೪ ಶಬ್ದಾನುಶಾಸನ)

''...ಪಟ್ಟಣದ ಆದೀಶ್ವರ ಸ್ವಾಮಿಯವರ ಜಿನ್ನಾಲಯದ ಮುಂದಣ ಮಾನಸ್ತಂಭದ ಜಗತಿ ಮೇಲೆ ಉತ್ತರ ಮುಖವಾಗಿ ಪ್ರಾರಂಭ. ಆ ಬಳಿಯಲ್ಲೆ ಗ್ರಂಥವು ಪೂರ್ಣವಾಯಿತು. ರೂಪೈಯ್ಯ ಬರೆದನು''೪.

''ಕಡೆಕಲ್ಲ ವಿರಕ್ತಮಠದಲ್ಲು ಲಿಖಿಸಿದ ಧನರಾಜಯ ನಿಘಂಟಿಗೆ ಶುಭಮಸ್ತು (VI-೩೧೮)

''ಗುಂಡಮೆಟ್ಟಕಲ್ಲ ಸ್ವಾಮಿಯವರ ಮಠದಲ್ಲಿ ಸ್ವಾಮಿಯವರ ಗದ್ದಿಗೆಯಲ್ಲಿ ಮದನಶಾಸ್ತ್ರವಾಯಿತು''(V -೩ -೨ ಕಕ್ಕೋಕ ಶಾಸ್ತ್ರ)

''ಸಂಕಿಗಟ್ಟದ ಶ್ರೀವೀರ ವರ್ಧಮಾನ ಸ್ವಾಮಿಯವರ ದಿವ್ಯ ಚೈತ್ಯಾಲಯದಲ್ಲಿ ಪದುಮಣ್ಣ ಬರದಂಥಾ ಶ್ರೀಮದ್ಧರ್ಮಾಮೃತ....'' (VI ೩೩೮)

''ಮೂಗೂರ ಪಾರ್ಶ್ವನಾಥ ಸ್ವಾಮಿಯವರ ಚೈತ್ಯಾಲಯದಲ್ಲಿ ಸೂರ್ಯೋದಯದಲ್ಲಿ ಪ್ರಾರಂಭ....'' (VIII-೨೪೧ ವೈದ್ಯಸಂಗ್ರಹ)

''ಹಳೇಬೀಡ ಶ್ರೀವಿಜಯ ಪಾರ್ಶ್ವನಾಥ ಸ್ವಾಮಿಯ ಬಸದಿ ಸಂನಿಧಾನದಲ್ಲಿ ಅಷ್ಟಪತಿ ವ್ಯಾಖ್ಯಾನ ಸಮಾಪ್ತ'' (I - ೪೧೫)

"ಮಿಡಿಗೆ ಸೀತಾವರಣ ವೀರಂಶಾನ ಬೆಟ್ಟದೊಳಗಣ ವೀರಣ್ಣನ ಗುಡಿಯೊಳಗೆ ಬರದ ಪ್ರಭುದೇವರ ಪುಸ್ತಕ..." (VI-೭೨ ಪ್ರಭುಲಿಂಗಲೀಲೆ)

"...ಚಂದ್ರನಾಥಸ್ವಾಮಿ ಚೈತ್ಯಾಲಯದಲ್ಲಿ ಬರದು ಸಂಪೂರ್ಣ ಮಾಡಿದಂತಾ ಜಿನರಾಮಾಯಣ...." (II-೫೬೩)

"ಹೊರಳ ಗುಂದಿಯ ಮಟದಲ್ಲಿ ಬೋಳಮಲ್ಲಿಕಾರ್ಜುನ ದೇವರು ಬರದ ಭೈರವೇಶ್ವರನ ಕಾವ್ಯ..." (VII-೨೯೪)

"ನಾಸಿಕ ಪುರದ ಚೈತ್ಯಾಲಯದ ಮಂಟಪದಲ್ಲಿ ಜ್ಞಾನಚಂದ್ರನ ಪುಸ್ತಕ ಬರದು ಸಂಪೂರ್ಣ" (VI-೧೬೬)

"ಹರವೆಯಲ್ಲಿ ಬರೆದುಯಿರುವ ಧರ್ಮಪರೀಕ್ಷೆ..." (VI-೩೨೬)

"ಚಿಕ್ಕನಾಗಮಂಗಲದ ಸ್ಥಳದಲ್ಲಿ ಬರದಂತಾ ಶಿಲ್ಪವಾಸ್ತುಶಾಸ್ತ್ರ...." (VIII-೬೦)

"ಉಂಮತ್ತೂರ ಹೊಸ ಬಸತಿಯ ವರ್ಧಮಾನ ಸ್ವಾಮಿಯವರ ಬಸದಿಯಲ್ಲಿ..... ಸೂರಯ್ಯನು ಬರದ ತ್ರಿಪುರ ದಹನ ಸಾಂಗತ್ಯ" (V-೬೬೯ ಗುರುದತ್ತಚರಿತೆ)

"ಮರದಾಳ ಚಂದ್ರನಾಥಸ್ವಾಮಿಯ ಚೈತ್ಯಾಲಯದಲ್ಲಿ ಬಲದ ಭಾಗದಲ್ಲಿ ಕುಳಿತು ಬ್ರಹ್ಮದೇವೋಪಾಧ್ಯಾಯರ ಆಜ್ಞೆ ಇಂದ ಬರದ..." (V-೭೧೭ ಗೊಮ್ಮಟಸಾರ)

"ಶಿರಿಗೆರೆಯಲ್ಲಿ ಹರುಷದಿಂ ಜಂಬೈಯನಾಲಯದಿ ಲಿಖಿತ...." (V ೧೧೨೫ ಕಲ್ಲೇ ಲಿಂಗೇಶ್ವರನ ಚಾರಿತ್ರ)

"ದೇವನ ಪುರದ ಶ್ರೀವರ್ಧಮಾನ ಸ್ವಾಮಿ ಸನ್ನಿಧಾನದಲ್ಲು ಬರದ" (VI-೨೫೩ ದಶಭಕ್ತಿ)

"ಶ್ವೇತಪುರದ ಶ್ರೀಆದೀಶ್ವರ ಸ್ವಾಮಿಯವರ ಮುಖಮಂಟಪದಲ್ಲಿ" (VI-೩೯೮ ನಾಗಕುಮಾರ ಚರಿತೆ)

"ಓದಿಸುವ ಬಿದರಹಳ್ಳಿಯ ಮಠದಲ್ಲಿ ಕುಳಿತು ಮುಗಿಯಿತು" (III ೧೨೩೨ ಭೈರವೇಶ್ವರ-ಕಾವ್ಯದ ಕಥೆಗಳು)

ಈ ಮೇಲಿನ ಉದಾಹರಣೆಗಳು ಲಿಪಿಕಾರನು ಹಸ್ತಪ್ರತಿಗಳ ಬಗೆಗೆ ಇಟ್ಟುಕೊಂಡಿದ್ದ ಪೂಜ್ಯತೆಯನ್ನೂ ಪಾವಿತ್ರ್ಯತೆಯನ್ನು, ಹೊಂದಿದ್ದ ದೈವೀಭಾವನೆಯನ್ನೂ ನಮಗೆ ತಿಳಿಸಿಕೊಡುತ್ತವೆ. ಲಿಪಿಕಾರರು ಹಸ್ತಪ್ರತಿಗಳನ್ನು ಹೆಚ್ಚಾಗಿ ದೈವೀಸ್ವರೂಪದಲ್ಲಿಯೇ ಕಂಡಿದ್ದಾರೆ. ಕಾಲ ಕ್ರಮೇಣ ಈ ಪ್ರವೃತ್ತಿ ಕಡಿಮೆಯಾಗುತ್ತ ಬಂದಂತೆ ಕಾಣುತ್ತದೆ. ಆರಂಭದ

ಕಾಲದಲ್ಲಿ ಇವರು ಬರೆದ ಶ್ರೀ ಶಿವಾರ್ಪಣಮಸ್ತು, ಶ್ರೀಕೃಷ್ಣಾರ್ಪಣಮಸ್ತು, ಭಗವದರ್ಪಿತ, ಧನಕನಕವಸ್ತುವಾಹನ, ಆಯುರಾರೋಗ್ಯ ಐಶ್ವರ್ಯ ಪುತ್ರ ಪೌತ್ರಾಭಿವೃದ್ಧಿ ಬಹುಭೋಗಭಾಗ್ಯವಾಗಿ ಬಾಳಲಿ ಎಂದು ಹರಸಿ ಬರಕೊಟ್ಟ ಎಂಬ ವಾಕ್ಯಗಳು ಗ್ರಂಥಗಳ ಬಗೆಗೆ ಇವರು ಹೊಂದಿದ್ದ ದೈವೀಭಾವನೆಗೆ ಸಾಕ್ಷಿಯೆನಿಸಿವೆ. ಆಮೇಲೆ ಕಾಣಿಕೆ ತೆಗೆದುಕೊಂಡು ಒಂದು ವರಕೆ ಒಂದು ಹಡಕೆ ಐದು ಟಂಕೆ ರೊಕ್ಕ ಕೊಡುವರು ಎಂಬ ಮಾತುಗಳು ಇವರಲ್ಲಿ ಕೆಲವರ ವ್ಯಾಪಾರೀ ಪ್ರವೃತ್ತಿಗೆ ನಿದರ್ಶನಗಳಾಗಿರುತ್ತವೆ. ಹೀಗೆ ಕೆಲವು ಹಸ್ತಪ್ರತಿ ಲಿಪಿಕಾರರು ಪಾರಮಾರ್ಥದಿಂದ ಪ್ರಾಪಂಚಿಕದ ಕಡೆಗೆ ಹೊರಳಿದುದು ಕಂಡುಬರುತ್ತದೆ.

ಹಸ್ತಪ್ರತಿ ಲಿಪಿಕಾರರು ವಾಸಿಸುತ್ತಿದ್ದ ಗ್ರಾಮಗಳ ಮೂಲಕ ಹಸ್ತಪ್ರತಿಗಳ ಪ್ರಾದೇಶಿಕತೆಯನ್ನು ತಿಳಿದುಕೊಳ್ಳಲು ಸಾಧ್ಯವಾಗುತ್ತದೆ. ಇದು ಗ್ರಂಥಸಂಪಾದನೆಯ ದೃಷ್ಟಿಯಿಂದ ಅತ್ಯಂತ ಮಹತ್ವದ್ದಾಗಿರುತ್ತದೆ. ಎಲ್ಲ ಲಿಪಿಕಾರರೂ ತಾವು ವಾಸಿಸುತ್ತಿದ್ದ ಗ್ರಾಮಗಳನ್ನು ಹೇಳಿರುವುದಿಲ್ಲ. ಹೀಗಾಗಿ ಲಿಪಿಕಾರರ ವಾಸಸ್ಥಳವನ್ನು ಉಲ್ಲೇಖಿಸುವ ಹಸ್ತಪ್ರತಿಗಳು ಪ್ರಾದೇಶಿಕ ಪಾಠ ಪರಂಪರೆಯ ದೃಷ್ಟಿಯಿಂದ ಅತ್ಯಂತ ಮಹತ್ವದ್ದಾಗಿರುತ್ತದೆ. ಲಿಪಿಗೈದ ಸ್ಥಳ ಹಾಗೂ ಲಿಪಿಕಾರರ ಹೆಸರು ಹೀಗಿರುತ್ತವೆ.

ಗುಮ್ಮಳಾಪುರ-ಬರಹದ ಬಸವಣ್ಣೊಡೆಯ (VIII - ವೀರಮಾಹೇಶ್ವರಾಚಾರ್ಯ ಸಂಗ್ರಹ) ಗುಡಿಕೋಟ - ಸಿದ್ಧರಾಮ (ಶಕ ೧೫೫೨, VI-೧೮೯) ಬೆಟ್ಟನಹಳ್ಳಿ ವೆಂಕಟಭಟ್ಟ (ಶಕ ೧೭೮೮,-VI -೨೩೧) ಅರಕಲುಗೂಡ - ಕಾಡಯ್ಯ (I-೪೨೦ ಗುರು ಭಕ್ತಾಂಡಾರಿಯ ಚರಿತೆ) ಗುಂಮಳಾಪುರ - ವೆಂಕಣ್ಣ(I - ೪೦೧ ಗಿರಿಜಾ ಕಲ್ಯಾಣ)ಹರದನಹಳ್ಳಿ - ಅಕ್ಕರಸೈಯ್ಯ (ಶಕ ೧೬೬೫ IV-೧೭೭೧ ಶುಕಸಪ್ತಸತಿ) ಕಣ್ಣನೂರ - ಶ್ಯಾನುಭೋಗ ನರಸಿಂಹ (IV-೧೭೫೩ ಶಿವ ಷಣ್ಮುಖ) ಪೊಂಗಳ ಕರಿಬಸಪ್ಪ ಮರಿದೇವರು (IV-೧೬೬೨ ಶಂಕರ ದಾಸಿಮಯ್ಯನ ಚರಿತ್ರೆ) ಕಟ್ಟೆಗೆ ಪಟ್ಟಣ ತಿಮ್ಮಯ್ಯ (II ಅಕಾರಾದಿ ನಿಘಂಟು) ಪೆದುದೂರ ಅನಂತ (I-೧೨೩ ಆದಿತ್ಯಪುರಾಣ) ನಂಜನಗೂಡು ನರಸೈಯ್ಯ (I-೧೫೫ ಉತ್ತರ ರಾಮಾಯಣ) ನಾಗಮಂಗಲ ಉಪಾಧ್ಯ ಪುರೋಪತ್ತಮಯ್ಯ (IV-೨೦೦೭ ಹನುಮಂತ ವಿಜಯ) ಮಂಜೇಶ್ವರ-ಲಿಂಗಯ್ಯ (VI-೨೨೦ ತೊರವೆ ರಾಮಾಯಣ) ಮರಳೂರು ಬದ್ದೇಗೌಡ (VIII ೫೮೨ ಷಟ್‌ಸ್ಥಲ ತಿಲಕ ಅರಟಾಳ ಕೆಂಚಸಿದ್ದೇಶ್ವರದೇವ (VIII - ೬೨೧ ಷಡುಸ್ಥಲ ಜ್ಞಾನಸಾರಾಮೃತ) ತಳಕಾಡು ದೇವರಸ ಉಪಾಧ್ಯ(III-೧೫೦೫ ಲೀಲಾವತಿ) ಕೋಡಂಬಿ ಚೆನ್ನಪ್ಪ (III-೧೨೧೫ ಭೀಮಸೇನ ವಿಲಾಸ) ಮೈಸೂರು ಶಾಂತಯ್ಯ (VI-೬ ಚಂದ್ರನಾಥ ಚರಿತೆ) ಹಳೇಬೀಡು - ಅನಂತರಾಜಯ್ಯ(II-೮೧೫ ಪಂಚಪರಮೇಷ್ಠಿ ವ್ಯಾಖ್ಯಾನ) ಮದ್ದಗಿರಿ ಹನುಮಂತಯ್ಯ (V-೫೨೯ ಕೃಷ್ಣರಾಜವಿಲಾಸ) ಕನಕಗಿರಿ ಆದಪ್ಪ (VIII-6೯ ವಿಜಯಕುಮಾರಿ ಚರಿತೆ, ಶಕ ೧೫೭೫) ಮೈಸೂರು ಗಂಗಯ್ಯ (VII-೭೦೮ ರೂಪಾವಳಿ) ಗುಡಿಕೋಟೆ ಸಿದ್ಧರಾಮಯ್ಯ (I-೨೩೦ ಕರಸ್ಥಲದ ನಾಗಲಿಂಗದೇವರ ಚರಿತ್ರೆ ಶಕ ೧೭೪೨) ಕಂಬಳ ಕೋಟೂರಪ್ಪ (II ೭೪೦

ನವಮೋಹನ ತರಂಗಿಣಿ) ಮೈಸೂರು ಕೃಷ್ಣಯ್ಯ (III ೧೧೩೦ ಭಾರತ) ಮಳವಳ್ಳಿ ಮಲ್ಲಿಕಾರ್ಜುನ (IV ೧೫೯೫ ವೀರಮಾಹೇಶ್ವರಾಚಾರ ಸಂಗ್ರಹ ವ್ಯಾಖ್ಯಾನ) ಕಡಬ ಸುಬ್ಬರಾಮಯ್ಯ (III ೧೪೬೪ ರಾಸಕ್ರೀಡೆ) ಸಾಲೂರ-ಚಿಕ್ಕಮಠದ ಕೊಟ್ಟದ ಗುರುಪಾದಸ್ವಾಮಿ (VII ೭೦೬ ರುದ್ರಭಾರತ) ಮುತ್ತಿಗೆ ನಾರಾಯಣ(ಶಕ ೧೭೭೩ VII-೧೦೩ ವಿಶ್ವಕರ್ಮ ಪುರಾಣ) ನಂಜನಗೂಡು ವಿಷಕಂಠ (IV ೧೬೫೩ ವೈಷ್ಣವ ವಾದಖಂಡನ) ಕೋಹಳ್ಳಿ ಚಿಕ್ಕವೀರಯ್ಯ (IV-೧೯ /೭೯ ಸೌಂದರ ಪುರಾಣ) ಶಿರಗಾಮ ದೇವಯ್ಯ (IV-೧೯೬೧ ಸೇತುಮಹಾತ್ಮ್ಯ) ಹೊಳೇನರಸೀಪುರ ಪಾರ್ಶ್ವನಾಥಯ್ಯ(VI-೩೧೫ ದ್ವಾದಶಾನುಪ್ರೇಕ್ಷೆ) ಬೆಳಲಕೊಂಡ ನಂಜಯ್ಯ (IV-೧೮೫೨ ಸತ್ಯೇಂದ್ರಚೋಳನ ಸಾಂಗತ್ಯ) ಮೈಸೂರು ಪದುಮಯ್ಯ (II-ಧರ್ಮಪರೀಕ್ಷೆ) ಕೊಳುಕೋಟೆ ಚಂದ್ರಣ್ಣ (II-೭೦೨ ಧನ್ಯಕುಮಾರ ಚರಿತ್ರೆ) ಚೆನ್ನರಾಯಪಟ್ಟಣ ಸಕ್ರೆಪ್ಪ (II-೮೫೨ ಪರಮ ರಹಸ್ಯ) ಹಿರೇಪಟ್ಟಣ ವೀರಣ್ಣ (II-೮೭೩ ಪರಶುರಾಮ ಭಾರತ) ಮೂಗೂರ ನಂಜಪ್ಪ (II- ೮೭೪ ಪರಶುರಾಮ ರಾಮಾಯಣ) ಅರ್ಜುನಪುರಿ ವೆಂಕಟಸುಬ್ಬಯ್ಯ (II-೮೩೦ ಪಂಚವಟಿ ರಾಮಾಯಣ) ತಮ್ಮಡ ಹಳ್ಳಿ ಬೊಮ್ಮರಸಯ್ಯ (II-೯೧೫ ಪುಣ್ಯಾಸ್ರವ) ಹೆಗ್ಗಡದೇವನಕೋಟೆ ಗೋಪಾಲಶೆಟ್ಟಿ (II-೯೮೫ ಪ್ರಹ್ಲಾದ ಚರಿತ್ರೆ) ವಡಿಗೇನ ಹಳ್ಳಿ ಪುಟ್ಟಪ್ಪ (III-೧೨೭೭ ಮಲ್ಲೇಶ್ವರ ಚರಿತ್ರೆ), ಮಲೆಯೂರ ಧರ್ಮಚಂದ್ರಯ್ಯ (VI ೪೭೮ ಶಕ ೧೭೫೩) ಅಗರ ವೆಂಕಟರಮಣ (VI-೮೨ ಚೋರಕಥೆ) ಮೈಸೂರು ಅರ್ಚಕ ನಾಗರಾಜಯ್ಯ (VI-೧೩೪ ಜೀವಂಧರ ಚರಿತೆ) ಮರವೆನ ಹಳ್ಳಿ ವೀರಪ್ಪಯ್ಯ (VI-೭೦೧೪ ಪ್ರಭುಲಿಂಗಲೀಲೆ) ಆದರಗೋಳ - ಶಾನುಭೋಗ ಗುರಪ್ಪ (VI-೩೬೨ ನನ್ನಯ ಚರಿತ್ರೆ) ಚಿಟ್ಟನ ಹಳ್ಳಿ ಸೇನಬೋವ ಲಿಂಗಪ್ಪ (III ೧೨೪೩ ಮದನವಿಜಯ) ಬೊಮ್ಮಹಳ್ಳಿ ನಾರಣಪ್ಪ (I-೧೫೯ ಉತ್ತರ ರಾಮಕಥೆ) ಕಡವ-ಶಂಭುಶರ್ಮ (V-೧೫ ಅನುಭವ ಮುಕುರ) ಚಿಟ್ಟನಹಳ್ಳಿ ವೆಂಕಟಭಟ್ಟ (V-೨೩೬ ಉತ್ತರ ರಾಮಾಯಣ)ಶಿಲಾಪುರಿ ಸುಬ್ಬರಾಯ (VII-೪೩೬ ಮಹದೇಶ್ವರನ ಸಾಂಗತ್ಯ) ಮುಡಗುಂಡ ರಂಗಯ್ಯ (VII-೪೭೮ ಮಹದೇಶ್ವರನ ಸಾಂಗತ್ಯ) ಚಿಟ್ಟನಹಳ್ಳಿ ಸಿದ್ಧಯ್ಯ (VII-೫೯೩ ಮೋಳಿಗಯ್ಯಗಳ ಪುರಾಣ) ಮಾಣಿಕಹಳ್ಳಿ ಸೇನಬೋವ ದಾಸಪ್ಪ (VII-೬೨೦ ಮೋಹನ ತರಂಗಿಣಿ) ಜೋಗನಹಳ್ಳಿ ಶಿವಲಿಂಗದೇವಾರಾಧ್ಯ (VII-೬೪೧ ರಸರತ್ನಾಕರ) ಚೆನ್ನಪಟ್ಟಣ ತಿರುಮಲಯ್ಯ (VII-೬೭೮ ರಾಮನಾಥ ಚರಿತೆ) ನರಿಹಳ್ಳಿ ಲಿಂಗಯ್ಯ (VII ೬೭೪ ರಾಮನಾಥ ಚರಿತೆ) ಯಲಹಂಕ ವೆಂಕಪ್ಪ (VII-೭೯೧ ಲೀಲಾವತಿ) ಮಲ್ಲಿಗೆರೆ ಬಸವಾರಾಧ್ಯ (VII ೧೧೪ ಬ್ರಹ್ಮೋತ್ತರ ಕಾಂಡ) ಬಿಜ್ಜೂರು ಶಂಭುಲಿಂಗ (VII೧೨೬ ಬ್ರಹ್ಮೋತ್ತರ ಕಾಂಡ )ಹೊಳೆಗದ್ದೆ ಗೋಪಾಲವೈದ್ಯ (VII-೧೭೨ ಭಾಗವತ) ಚಿಟ್ಟನಹಳ್ಳಿ ವೆಂಕಟಭಟ್ಟ (VII-೧೮೪ ಭಾಗವತ) ದೊಡ್ಡಮಲ್ಲೂರ ಕುಪ್ಪಣ್ಣ (VII-೨೨೨ ಭಾರತ) ಶಿಲಾಪುರಿ ಭದ್ರಯ್ಯ (VII-೨೩೦ ಭಾರತ) ಬೇಡರಹಳ್ಳಿ ಹೊನ್ನಪ್ಪಯ್ಯ (III-೧೩೬೩ ಮೋಹನ ತರಂಗಿಣಿ) ಹುಳಿಯೂರ ಕೆಂಚವೀರಯ್ಯ (IV-೧೮೮೬ ಸರ್ವಾಂಗಲಿಂಗ ಸ್ಥಲದ

ವಚನ) ಮಲೆಯೂರ ವಿಜಯಪ್ಪಯ್ಯ (II - ೫೫೫ ಜಾತಕ ತಿಲಕ) ಮೈಸೂರು ನಂಜಪ್ಪ (II-೫೭೯ ಜೈಮಿನಿ ಭಾರತ) ಇದರಿಂದ ಆಯಾ ಪ್ರದೇಶದಲ್ಲಿ ಪ್ರಚಲಿತದಲ್ಲಿದ್ದ ಅಧ್ಯಯನದ ವಿಷಯಗಳು ಜನರ ಅಭಿರುಚಿ ಆಸಕ್ತಿಗಳು ಲಿಪಿಕಾರರ ಕಾಲದ ಭಾಷೆಯ ಸ್ವರೂಪ ಮೊದಲಾದ ಸಂಗತಿಗಳು ಗೊತ್ತಾಗುತ್ತವೆ.

ಹಸ್ತಪ್ರತಿಗಳ ಅಂತ್ಯದಲ್ಲಿ ಲಿಪಿಕಾರರು ತಾವು ಪೂರ್ವ ಪ್ರತಿ ಸಮಾನವಾಗಿ ಪ್ರತಿಯಿದ್ದಂತೆ ನಕಲುಕಾರ್ಯ ಮಾಡಿರುವುದಾಗಿ ಹೇಳಿಕೊಂಡಿದ್ದಾರೆ. ಆದರೆ ಹಸ್ತವೇಗ, ಮರೆವು, ಆಲಸ್ಯಗಳಿಂದ ಹಸ್ತಪ್ರತಿಗಳ ಒಡಲಲ್ಲಿ ಹಲವಾರು ತಪ್ಪುಗಳು ಉಳಿದುಕೊಂಡಿರುತ್ತವೆ. ಇವು ಮುಂದೆ ನಕಲು, ಪ್ರತಿ ನಕಲುಗಳಲ್ಲಿ ದಟ್ಟವಾಗಿ ಬೆಳೆದುನಿಂತವು. ಹೀಗಾಗಿ ಕೆಲವು ಲಿಪಿಕಾರರು ತಪ್ಪುಗಳಾಗದಂತೆ ಪ್ರತಿಮಾಡುವ 'ಆದರ್ಶ ವ್ರತ' ಹಿಡಿದರು. ಮನಃಪೂರ್ವಕವಾಗಿ ಈ ವ್ರತವನ್ನು ಪರಿಪಾಲಿಸುತ್ತ ಬಂದರು. ಹಸ್ತ ಪ್ರತಿಗಳ ಅಂತ್ಯ ಪ್ರಶಸ್ತಿ ಭಾಗದಲ್ಲಿ ಬರುವ "ಪ್ರತಿ ಶುದ್ಧವೆಂದು ಬರೆದೆನು....ಸುತಿಯಾ ತಿದ್ದುವೆ ಕಾವ್ಯಬದ್ಧವನರಿಯೆ ಮತಿಹೀನ ಬರೆದ ಬರಹವ ಅತಿಶಯದಿಂ ತಿದ್ದಿ ಓದಿ ಉತ್ತಮಪುರುಷರು ಬೈಯ್ಯಲಾಗದು" (VI-೩೮೪,ನಳಚರಿತೆ). "ಬಲ್ಲಪುರುಷರು ನೋಡಿ ಗ್ರಂಥದ । ಸೊಲ್ಲು ತಪ್ಪಾಯಿತೆಂದು ಬರೆದನ. ಹೊಳ್ಳುಗಳೆಯದೆ ತಿದ್ದುಉದು ಸತ್ಪುರುಷರಾದವರು.। ಯಿಲ್ಲಿ ಪ್ರತಿಯೊಳಗರಸಿ ನಾ ಪ್ರತಿ।ಯಲ್ಲಿಯಿದ್ದುದ ಬರೆದನಲ್ಲದೆ । ಸಲ್ಲದಾವುದೊ ಸಲ್ಲುದಾವುದೆಂಬುದನರಿಯೆ(V-I೨೨೦ ತೊರವೆ ರಾಮಾಯಣ) "ಏನು ಅರಿಯನು ಬಲ್ಲಂತ ಜ್ಞಾನಿಗಳು ತಿದ್ದಿಕೊಳ್ಳಬೇಕು" (V-೨೮೩ ಏಕೋತ್ತರ ಶತ ಸ್ಥಲ)

"ಮೂಲಪ್ರತಿಯಿಂದ ತಪ್ಪು ಉಂಟಾದರೆ ತಿದ್ದಿ ಓದಿಕೊಂಬುವದು" ತಪ್ಪು ಬರೆದರೆಂದು ಬೈಯಲಾಗದು" (VI-೩೧೮ ಧನಂಜಯ ನಿಘಂಟು)

"ಯಿದನು ಎನ್ನಲ್ಲಿ ತೋಚಿದಷ್ಟು ಅಲ್ಪಮತಿಯಿಂದ ನಾನು ಅನ್ವಯ ಮಾಡಿದೆನು, ಯಿಲ್ಲಿ ತಪ್ಪುಳ್ಳಡೆ ಮಹಾನುಭಾವಿಗಳು ತಿದ್ದಿಕೊಂಡು ಸುಖಿಸುವುದು" (VI-೬೫೭ ಪ್ರಭುದೇವರ ಟೀಕಿನ ವಚನ)

"ಮೊದಲಿದ್ದಂದದಿ ಬರೆಯಂದುದನಂಗೀಕರಿಸಿ ನಾನು ಬರೆದಿರೆ ಸುಜನರ ಪದದೊಳ್ ತಪ್ಪಿರೆ ದೋಷವ ಸೋದಿಸುವುದು ಯುಕ್ತವೆಂದು ತಿಳಿಯುವದೆಂನೊಳ್' (III-೧೪೭೬ ರುಕ್ಮಿಣೀ ಸ್ವಯಂವರ)

"ಪೂರ್ವದ ಪ್ರತಿಯ ಪ್ರತಿಗಳ ಸರಿಪಿಡಿಯೆ ತಪ್ಪುವದು ನಿದ್ರಾಲಸ್ಯ ಮರವೆಯುಲಿ, ಅರಿತು ತಪ್ಪುವನಲ್ಲ. ಮಿಕ್ಕಿನ ಗುರುಹಿರಿಯರಾದವರು ತಿದ್ದಿದ ಪರಿಪಿಡಿಯೆ ನಡೆಸುವುದು ಮರದನತರನಿವನೆಂದು" (VI-೫೭೧ ಕೌಶಿಕ ರಾಮಾಯಣ)

"ಕೊರಟಿಗೆ ಬರಶಾಲೆ ನಂಜುಂಡಯೆಂಬವ ಬರದು, ತಪ್ಪುನೆಪ್ಪು ಯೇನುಯಿದ್ದಾಗ್ಯೂ ತಿದ್ದಿ ವೋದುವದು. ಮತ್ತೆ ಅಪ್ಪಣೆ ಆಗಬೇಕು, ಸ್ವಾಮಿ ಬಾಲ ಚಂನಾಗಿ ಪರಿಶ್ರಮವಿಲ್ಲದಂದು ಬರದ್ದು." (VII-೫೧೨ ಮಿಶ್ರಸ್ತೋತ್ರದ ವಚನ)

"ಇದರೊಳಗೆ ಯೆನ್ನ ತಪ್ಪು ಇದ್ದರೆ ಬಲ್ಲವರು ತಿದ್ದಿ ಶುದ್ಧ ಮಾಡುವದು" (IV-೪೩೦ ನಿಗಮಾಗಮಸಾರ)

"ಯೀ ಬಸವ ಚರಿತ್ರೆಯಲ್ಲಿದೊ ತಿಳಿಯಲಿಲ್ಲವಾದ್ದರಿಂದ ಜಾಗ್ರತೆಯಾಗಿ ಬರೆದುಯಿದೇನೆ. ನಾನು ತಿದ್ದುವುದಕ್ಕೆ ಬರದ್ದೆ ಹೊರತು ನಾನು ಚೆಂನ್ನಾಗಿ ಬರೆಲಿಲ್ಲವಾದರಿಂದ ಬೈಯಲಾಗದು. ಯಾಕ್ಕಂದರೆ ಪ್ರತಿ ಸಹ ಹಳಗನ್ನಡ ಆದರಿಂದ ತಪಂ ಬರದಿರ್ದಡಂ ವಪ್ಪದಿಂದೋದಿಕೊಳ್ಳುವುದು. ತಪ್ಪೆಂದು ಬೈದಡೆ ಆ ಪಾಪ ನಿಂಮನ್ನೆ ಕೂಡಿದು. ಪ್ರತಿಯಿದ್ದ ಹಾಗೆ ಬರದುಯಿದೇನೆ" (III-೧೦೧೯ ಬಸವ ಚರಿತ್ರೆ)

"ಪ್ರಾಗ್ಞರುಗಳು ಪರಾಂಬರಿಸಿ ತಪ್ಪುಯಿದ್ದರೆ ಹಸ್ತದೋಷವಿದ್ದರು ಬೈಯಲಾಗದು. ತಿದ್ದಿ ರಕ್ಷಿಸಬೇಕು" (VIII-೧೦೩ ವಿಶ್ವಕರ್ಮ-ಪುರಾಣ) "ಪ್ರತಿ ನೋಡಿ ಬರೆದೆನು ತಪ್ಪುವೊಪ್ಪುಗಳ । ಬೆಸುಗೆಯುನು ಬುಧರು ನೀವು ಕೋ । ಪಿಸದೆ ತಪ್ಪನು ತಿದ್ದಿವೋದುವ । ಹಸನ ದಯಮಾಡಲಿಕೆ ನಿಂಮಡಿಗಳಿಗೆ ಶರಣಾರ್ತಿ" (II-೧೦೭೯ ಪ್ರಭುಲಿಂಗಲೀಲೆ)

"ತಪ್ಪಿದೊಡೊಪ್ಪುಗೊಂಡು ತಿದ್ದಿ ವಾಚಿಪುದು, ತಪ್ಪು ಬರದಾಯಂದು ಬರದಾತನಂ ಬೈಯ್ಯಲಾಗದು ಸುಜನರ್" (VI-೨೪೧ ತ್ರಿಲೋಕ ಶತಕ)

"ತಪ್ಪುತಡಿಯಿದ್ದರೆ ಬಲ್ಲಂತವರು ತಿದ್ದಿರಿ" (II-೯೫೧ ತ್ರಿಭುವನ ಮೋಹಿನಿ)

"ಯಿದ ಬರದವ ಗಂಗಾಧರ ಶೋಮಿಗಳ ಶೇವಕನಾದವ ಬರೆದೈದನೆ ತಪ್ಪಿದರೆ ನೋಡಿ ತಿದ್ದಿಕೊಂಬುದು" (VII ೭೧ ಬಸವೇಶ್ವರ ಪುರಾಣ ಕಥಾ ಸಾಗರ)

"ಯಾದೃಶಂ ಪುಸ್ತಕಂ ದೃಷ್ಟ್ವಾ ತಾದೃಶಂ ಲಿಖಿತಂ ಮಹಾ
ಅಬದ್ಧೋವಾ ಸುಬದ್ಧೋ ವಾ ಮಮ ದೋಷೋ ನ ವಿದ್ಯತೇ"

"ತಪ್ಪ ಬರೆದಾತಂ ಕಡುಜಡನಪ್ಪಾತನೆಂದು ಬಯ್ಯಲ್ ಬೇಡಂ ।
ತಪ್ಪಿಲ್ಲ ಶುದ್ಧಮಕ್ಕಂ । ತಪ್ಪಿಲ್ಲದೆ ಪ್ರತಿಸಮಾನವಾಗಿಯೆ ಬರೆದಂ"।

(V-೯೦ ಅನುಭವಾಮೃತ, ಶಕ ೧೭೨೨) ಎಂಬ ಉದಾಹರಣೆಗಳು ಲಿಪಿಕಾರರ ಶ್ರದ್ಧೆ, ನಿಷ್ಠೆ, ವಿಧೇಯತೆ ಹಾಗೂ ಪ್ರಾಮಾಣಿಕತೆಗಳನ್ನು ತಿಳಿಸಿಕೊಡುತ್ತವೆ. ಇದ್ದುದನ್ನು ಇದ್ದಂತೆ ಬರೆದಿದ್ದೇನೆ, ತಪ್ಪು ನನ್ನದಲ್ಲ, ಮೂಲಪ್ರತಿಯದೆಂದು ಹೇಳುವ ಇವರ ನೇರ ಹಾಗೂ ಮುಗ್ಧಮನಸ್ಸು ಗಮನಿಸುವಂಥದಾಗಿದೆ. ಮರಹು, ಆಲಸ್ಯ, ಹಸ್ತವೇಗ,ದೃಷ್ಟಿ ದೋಷ ಮತ್ತು

ಶ್ರವಣ ದೋಷಗಳಿಂದ ಗ್ರಂಥಗಳಲ್ಲಿ ತಪ್ಪುಗಳು ತಲೆದೋರುವುದು ಅತ್ಯಂತ ಸಹಜ. ಆದುದರಿಂದ ಈ ಅನಿವಾರ್ಯ, ತಪ್ಪುಗಳನ್ನು ಪ್ರಾಜ್ಞರು ಮನ್ನಿಸಬೇಕೆಂದು ಮಾಡಿಕೊಂಡ ಲಿಪಿಕಾರರ ಕಳಕಳಿಯ ಪ್ರಾರ್ಥನೆ ನಮ್ಮ ಗಮನವನ್ನು ಸೆಳೆಯುತ್ತದೆ.

ಹಸ್ತಪ್ರತಿ ಲಿಪಿಕಾರರಿಗೆ ಹಸ್ತಪ್ರತಿಗಳ ಲೇಖನದಷ್ಟೇ ಸಮಾನವಾದುದು, ಪ್ರಮುಖವಾದುದು ಹಸ್ತಪ್ರತಿಗಳ ಸಂರಕ್ಷಣ ಕಾರ್ಯ.

*ಪುಸ್ತಕಂ ವನಿತಾವಿತ್ತಂ ಪರಹಸ್ತಗತಂ ಗತಂ*
*ಅಥವಾ ಪುನರಾಯಾತಂ ಜೀರ್ಣಂ ಭ್ರಷ್ಟಾಚ ಖಂಡಶಃ*

(ಪುಸ್ತಕ ವನಿತೆ ಧನ ಈ ಮೂರು ಇತರರ ಕೈಗೆ ಸೇರಿದರೆ ಅವು ಹೋದಂತೆಯೇ. ಒಂದು ವೇಳೆ ಅವು ಮರಳಿ ಬಂದರೆ ಜೀರ್ಣವಾಗಿರುತ್ತವೆ. ಭ್ರಷ್ಟವಾಗಿರುತ್ತವೆ. ಇಲ್ಲವೆ ಅರ್ಧಮರ್ಧ ಆಗಿರುತ್ತದೆ)

*ತೈಲಾದ್ರಕ್ಷೇತ್ ಜಲಾದ್ರಕ್ಷೇತ್ ರಕ್ಷೇತ್ ಶಿಥಿಲಬಂಧನಾತ್*
*ಮೂರ್ಖ ಹಸ್ತೇ ನ ದಾತವ್ಯಂ ಏವಂ ವದತಿ ಪುಸ್ತಕಂ ||*

(ಪುಸ್ತಕ ಹೀಗೆಂದು ಬೇಡಿಕೊಳ್ಳುತ್ತದೆ, ನನ್ನನ್ನು ಎಣ್ಣೆಯಿಂದ ರಕ್ಷಿಸಿರಿ, ನೀರಿನಿಂದ ಒದ್ದೆಯಾಗದಂತೆ ರಕ್ಷಿಸಿರಿ. ಕಟ್ಟು ಸಡಿಲು ಆಗದಂತೆ ರಕ್ಷಿಸಿರಿ, ಮೂರ್ಖನ ಕೈಯಲ್ಲಿ ನನ್ನನ್ನು ಕೊಡಬೇಡಿರಿ)

*ಭಗ್ನಪೃಷ್ಠಕಟಿಗ್ರೀವಾ ಬದ್ಧದೃಷ್ಟಿರಧೋಮುಖಂ*
*ಕಷ್ಟೇನ ಲಿಖಿತಂ ಶಾಸ್ತ್ರಂ ಯತ್ನೇನ ಪರಿಪಾಲಯನ್*

(ಬೆನ್ನು ಸೊಂಟ ಕೊರಳುಗಳನ್ನು ನೋಯಿಸಿಕೊಂಡು ಮುಖ ಕೆಳಗೆ ಮಾಡಿ ಕಣ್ಣಲ್ಲಿ ಕಣ್ಣಿಟ್ಟು ಅತ್ಯಂತ ಕಷ್ಟಪಟ್ಟು ಬರೆದಿರುವ ಈ ಶಾಸ್ತ್ರವನ್ನು ಪ್ರಯತ್ನಪೂರ್ವಕವಾಗಿ ಕಾಪಾಡಿರಿ)

ಮೇಲಿನ ಶ್ಲೋಕಗಳು ಹಸ್ತಪ್ರತಿ ಲಿಪಿಕಾರರಿಗಿದ್ದ ಗ್ರಂಥ ಸಂರಕ್ಷಣೆಯ ಭಾವನೆಯನ್ನು ಪ್ರಚುರಪಡಿಸುತ್ತವೆ. ಹೀಗೆ ಹಸ್ತಪ್ರತಿ ಪ್ರಶಸ್ತಿಗಳು ಹಸ್ತಪ್ರತಿ ಲಿಪಿಕಾರರ ಬಗೆಗೆ ವಿಪುಲವಾದ ವೈವಿಧ್ಯಮಯವಾದ ವಿಷಯಗಳನ್ನು ನಮಗೆ ಒದಗಿಸಿಕೊಡುತ್ತವೆ.

ಗ್ರಂಥ ಪರಿಷ್ಕರಣ ಕಾರ್ಯದ ವಿವಿಧ ಹಂತಗಳಲ್ಲಿ ಹಸ್ತಪ್ರತಿಗಳ ವಂಶಾವಳಿ ನಿರ್ಣಯವೂ ಒಂದು. ನಕಲು ಪ್ರತಿಯ ಲಿಪಿಕಾರರು ಅವರ ಮೂಲಪ್ರತಿ (ಸ್ವಹಸ್ತಾಕ್ಷರ ಪ್ರತಿಯನ್ನು) ಹೇಳಿದ್ದರೆ, ವಂಶಾವಳಿಯ ನಿರ್ಣಯ ಕಾರ್ಯ ಸುಲಭವಾಗುತ್ತದೆ. ಇಂಥ ನಕಲು ಪ್ರತಿಯ ಮೂಲ ಪ್ರತಿಯನ್ನು ಹೇಳುವ ಉದಾಹರಣೆಗಳು ಹೀಗಿರುತ್ತವೆ.

“ಕನಕಗಿರಿ ಕಲ್ಲುಮಠದ ನಿರ್ಣಯ ಚರಮೂರ್ತಿ ಚನ್ನಮಲ್ಲಸ್ವಾಮಿ ಗುರುರುದ್ರಸ್ವಾಮಿಗಳ ಪುಸ್ತಕದ ಮೇಲೆ ಕಾಪಿ ಮಾಡಿ ಇರುತ್ತೆ” (II-೭೭೨ ನಿರಾಳ ಮಂತ್ರಗೋಪ್ಯ)

“ಇದು ಹುಂಬಮಠದ ಪುಸ್ತಕದಿಂದ ಕಾಪಿ ಮಾಡಲ್ಪಟ್ಟಿದೆ” (II - ೮೫೮ ಪರಮಾತ್ಮ ಪ್ರಕಾಶ)

“ಬೆಟ್ಟದ ಮೇಲಣ ಮಠದ ರಾಮನ ಚರುತೆಯ ಪ್ರತಿ ನೋಡಿ ಬರೆದದು”(V-೫೧೦ ಕುಮಾರ ರಾಮನ ಕಥೆ)

“ಯೀ ಪುಸ್ತಕವನ್ನು ಜೋಗನಹಳ್ಳಿ ವಿರಕ್ತದೇವರು ತಮ್ಮ ಮನೆಗೆ ಪುಸ್ತಕವಾಗಿರಲೆಂದು ಕಾರ್ಯದ ಮಹಂತ ಸ್ವಾಮಿಗಳ ಬಳಿಯಲಿದ್ದ ಪ್ರತಿಯ ತಂದು ಪ್ರತಿಯಿದ್ದ ಮೇರೆಗೆ ಬರೆದಿರಿಸಿದೆನು”( II-೮೧೭ ಪಂಚಬ್ರಹ್ಮೋದಯ ಭಾಷ್ಯ)

“ಹೊಂಬುಚದ ಅಮ್ಮನವರ ಮೂಲಪ್ರತಿ ಗ್ರಂಥವ ನೋಡಿಕೊಂಡೆ ಅಂತ್ತಂಣ ಬರೆದ ಗ್ರಂತ್ತವು....”(II- ೮೩೭ ಪದ್ಮಾವತಿ ಚರಿತ್ರೆ)

“ಮೂಡಬಿದ್ರೆ ಜೈನ ಸಿದ್ಧಾಂತಭವನದ ಶ್ರೀಶ್ರೀಚಾರುಕೀರ್ತಿ ಸ್ವಾಮೀಜಿಯವರಿಂದ ಬಂದ ಕೈ ಬರೆಹದ ಪುಸ್ತಕದ ಮೇಲೆ ಕಾಪಿಯಾಗಿರುತ್ತೆ”(IV-೧೮೭೯ ಸಮ್ಯಕ್ತ್ವಮಾರ್ಗಣಂ)

“ಕಳಲೆ ರಂಗಸ್ವಾಮಯ್ಯಂಗಾರ್ಯರಿಂದಾ ಚಕ್ರವರ್ತಿ ಶ್ರೀನಿವಾಸಾಚಾರ್ಯರು ತಂದ ಪುಸ್ತಕದಿಂದ ಕಾಪಿಯಾದದ್ದು”(IV -೧೬೨೫ ವೇಣುಪುರದ ಕ್ಷತ್ರಿಯರ ವಂಶಾವಳಿ)

“ರಾಮಸ್ವಾಮ್ಯೆಯಂಗಾರ್ಯರಿಂದ ಮೂಲಪ್ರತಿಯಲ್ಲಿದ್ದಂತೆ ಕಾಪಿ ಮಾಡಲ್ಪಟ್ಟಿತು” (IV-೧೮೮೦ ಸರಜಾ ಹನುಮೇಂದ್ರ ಯಶೋವಿಲಾಸ)

ಈ ಮೇಲಿನ ಉದಾಹರಣೆಗಳಿಂದ ನಿರಾಳಮಂತ್ರಗೋಪ್ಯ, ಪರಮಾತ್ಮ ಪ್ರಕಾಶ, ಕುಮಾರ ರಾಮನ ಕಥೆ, ಪಂಚಬ್ರಹ್ಮೋದಯ ಭಾಷ್ಯ, ಪದ್ಮಾವತಿ ಚರಿತ್ರೆ, ಸಮ್ಯಕ್ತ್ವ ಮಾರ್ಗಣಂ, ವೇಣುಪುರದ ಕ್ಷತ್ರಿಯರ ವಂಶಾವಳಿ, ಸರಜಾ ಹನುಮೇಂದ್ರ ಯಶೋವಿಲಾಸಗಳ ಮೂಲ ಪ್ರತಿಗಳ ವಿಷಯ ತಿಳಿದುಬರುತ್ತದೆ. ಹಸ್ತಪ್ರತಿಗಳಲ್ಲಿ ಮೂಲಪ್ರತಿಗಳ ಮಾಹಿತಿ ದೊರೆಯುವುದು ಅತ್ಯಂತ ವಿರಳ. ಆದುದರಿಂದ ಇಂಥ ವಿಷಯಗಳುಳ್ಳ ಹಸ್ತಪ್ರತಿಗಳಿಗೆ ಗ್ರಂಥ ಸಂಪಾದನೆಯ ದೃಷ್ಟಿಯಿಂದ ಹೆಚ್ಚಿನ ಮಹತ್ವ ಸಲ್ಲುತ್ತದೆ.

ಗ್ರಂಥ ಪರಿಷ್ಕರಣ ಕಾರ್ಯಕ್ಕಾಗಿ ಬಳಸುವ ಆಧಾರ ಪ್ರತಿ, ಕವಿಕೃತಿಗೆ ಸಮೀಪವಿದ್ದಷ್ಟೂ ಒಳ್ಳೆಯದು. ಯಾಕೆಂದರೆ ಇಂಥ ಪ್ರತಿಗಳಲ್ಲಿ ಸ್ಖಾಲಿತ್ಯಪ್ರಮಾಣ ಕಡಿಮೆಯಿದ್ದು ಅವು ಕವಿ

ಪಾಠಕ್ಕೆ ಹೆಚ್ಚು ಹತ್ತಿರವಾಗಿರುತ್ತವೆ. ಆದರೆ ಈ ಆಧಾರ ಪ್ರತಿಗಳನ್ನು ಕಂಡುಹಿಡಿಯುವುದು ಸುಲಭದ ಕೆಲಸವಲ್ಲ. ಹಸ್ತಪ್ರತಿಗಳ ಅಂತ್ಯದಲ್ಲಿ ಲಿಪಿಕಾರರು ಹೇಳಿರುವ ಲೇಖನ ಮಿತಿಗಳ ಮೂಲಕ ಈ ಆಧಾರ ಪ್ರತಿಗಳನ್ನು ಗುರುತಿಸಲು ಸಾಧ್ಯವಿದೆ. ಆದರೆ ಎಲ್ಲ ಲಿಪಿಕಾರರು ಹಸ್ತಪ್ರತಿಗಳ ನಕಲುಕಾರ್ಯದ ಮಿತಿ ಹೇಳಿರುವುದಿಲ್ಲ. ಹೀಗಾಗಿ ಲೇಖನ ಮಿತಿ ಇರುವ ಹಸ್ತಪ್ರತಿಗಳು ಆಧಾರಪ್ರತಿಗಳನ್ನು ನಿರ್ಣಯಿಸುವಲ್ಲಿ ಬಹಳಷ್ಟು ಸಹಾಯ ನೀಡುತ್ತವೆ. ಉದಾಹರಣೆ: ಪುಣ್ಯಾಸ್ರವದ ಮೂರು ಪ್ರತಿಗಳಲ್ಲಿ ಒಂದನ್ನು ಶಕ ೧೬೬೦, ಇನ್ನೊಂದನ್ನು ಶಕ ೧೬೬೮, ಮತ್ತೊಂದನ್ನು ಶಕ ೧೭೬೪ ರಲ್ಲಿ ಪ್ರತಿಗೊಳಿಸಲಾಗಿದೆ. ಈ ಮೂರರಲ್ಲಿ ಶಕ ೧೬೬೦ ರಂದು ಪ್ರತಿಮಾಡಿದ ಹಸ್ತಪ್ರತಿಯೇ ಪ್ರಾಚೀನವೆನಿಸುತ್ತದೆ. ಇದನ್ನೇ ಆಧಾರ ಪ್ರತಿಯಾಗಿ ಪರಿಭಾವಿಸುವುದು ಸೂಕ್ತ.

"ಈ ಮಹಾಲಿಂಗಸ್ವಾಮಿ ಪುರಾಣ ಮಹಾಸಂಸ್ಥಾನ ಚಿತ್ರಕಲ್ಲು ದುರ್ಗದ ಶೂನ್ಯ ಸಿಂಹಾಸನ ಮಠದ್ದು"(III -೧೨೯೭ ಮಹಾಲಿಂಗೇಂದ್ರವಿಜಯ, ಶಕ ೧೭೯೪)

"ಬೆಂಗಳೂರು ದೊಡ್ಡ ಪ್ಯಾಟೆ ಕೆಂಪನಂಜಪ್ಪನವರ ಕುಮಾರ ಚನ್ನಂಜಪ್ಪನವರ ಚೋರಬಸವ ಚರಿತ್ರೆ"(VI ೮೮)

ಈ ಮೇಲಿನ ಉದಾಹರಣೆಗಳು ಮಹಾಲಿಂಗೇಂದ್ರ ವಿಜಯ ಮತ್ತು ಚೋರ ಬಸವ ಚರಿತ್ರೆ ಕೃತಿಗಳ ಒಡೆತನದ ವಿಷಯವನ್ನು ವ್ಯಕ್ತಪಡಿಸುತ್ತವೆ.

ಪರಂಪರಾಗತ ಹಸ್ತಪ್ರತಿಗಳಲ್ಲಿ ಶುದ್ಧಸಂತಾನದ ಪರಂಪರಾಗತ ಪ್ರತಿಗಳು, ಅಶುದ್ಧ ಸಂತಾನದ ಪರಂಪರಾಗತ ಪ್ರತಿಗಳು ಎಂದು ಎರಡು ಪ್ರಕಾರವಿರುತ್ತದೆ. ಎರಡು ಬೇರೆ ಮೂಲದ ಪ್ರತಿಗಳನ್ನು ಆಧಾರವಾಗಿಟ್ಟುಕೊಂಡು ಬರೆದ ಸಮ್ಮಿಶ್ರಪ್ರತಿ, ಅಶುದ್ಧ ಸಂತಾನದ ಪರಂಪರಾಗತಪ್ರತಿ ಎನಿಸಿಕೊಳ್ಳುತ್ತದೆ. ಇಂಥ ಅಶುದ್ಧ ಸಂತಾನದ ಪರಂಪರಾಗತ ಪ್ರತಿಗಳನ್ನು ಗ್ರಂಥ ಪರಿಷ್ಕರಣ ಕಾರ್ಯಕ್ಕೆ ಬಳಸಬಾರದು. ಹೀಗೆ ಗ್ರಂಥ ಪರಿಷ್ಕರಣ ಕಾರ್ಯಕ್ಕೆ ಅಪ್ರಯೋಜಕವೆನಿಸಿರುವ ಇಂಥ ಅಶುದ್ಧ ಸಂತಾನದ ಪರಂಪರಾಗತ ಪ್ರತಿಗಳ ವಿರಳ ಉಲ್ಲೇಖಗಳನ್ನು ಹಸ್ತಪ್ರತಿ ಪ್ರಶಸ್ತಿ ಭಾಗದಿಂದ ಹೀಗೆ ತಿಳಿದುಕೊಳ್ಳಬಹುದು.

"ಯರಡು ಮೂಲಪ್ರತಿಗಳನ್ನು ಯಿಟ್ಟುಕೊಂಡು ಸಮಗ್ರವಾಗಿ ಬರೆಯಲ್ಪಟ್ಟಿದೆ"(III-೧೫೦೮ ಲೀಲಾವತಿ)

"ಬೊಲ್ಲನ ತಂದುದು ಮೊದಲಾಗಿ ಜೋಡುಪ್ರತಿ - ನೋಡಿ ಪ್ರತಿಯಿದ್ದ ಹಾಗೆ..."(III-೧೪೪೮ ರಾಮನ ಚರಿತೆ)

"ಯೀ ಪ್ರತಿಯನು ಹೊಸೂರ ಗ್ರಂಥಿಗೆ ಅಂಗಡಿ ನಾಗಂಣ ಲಿಂಗಂಣ್ಣನವರು ಸಹಾಯಿವರ ಸೋದರ ಅಳಿಯನಾದ ಯಲ್ಲಂಣನು ಬರದ ವೀರಭದ್ರ ವಿಜಯ"(VIII -೧೧೫)

“ಸುಬ್ಬಂಣ್ಣನು ಬರೆದ ಪದ ೧೯೦೮. ಆಮೇಲೆ ಜೇಡ್ಯಿನ ನಾಸಿಂಹನ ಮಗ ಸುಬ್ಬಂಣನು ಬರದ ಪದ ೭೫೭. ಉಭಯಪದ ೨೬೬೫”(V-೨೦೨ ಆದಿತ್ಯಪುರಾಣ)

ಹೀಗೆ ಲೀಲಾವತಿ, ರಾಮನ ಚರಿತೆ, ವೀರಭದ್ರ ವಿಜಯ, ಆದಿತ್ಯ ಪುರಾಣ ಕೃತಿಗಳು ಅಶುದ್ಧ ಸಂತಾನದ ಪರಂಪರಾಗತ ಪ್ರತಿಗಳಾಗಿರುತ್ತವೆ.

ಹಸ್ತಪ್ರತಿಗಳಲ್ಲಿ ನಡೆಯುವ ಗ್ರಂಥಲೋಪ, ಗ್ರಂಥ ಪ್ರಕ್ಷಿಪ್ತಗಳ ವಿಷಯವೂ ಈ ಪ್ರಶಸ್ತಿಗಳಿಂದ ಗೊತ್ತಾಗುತ್ತದೆ.

“ಅಂತೂ ಸಂಧಿ ೧೧ಕ್ಕಂ ಪದನು ೬೫೧ ಕಂದ ೧೦೦ ಶ್ರುತಿ ಗ್ರಂಥಂಗಳೂ ೩೦೫ ಉತ್ತ ಳಳ ಉಭಯಂ ೧೧೦೦ ಯಿದರಲ್ಲಿ ಹೊಸ್ತಾಗಿ ನಾರುವೆ ಶ್ಯಾನುಭಾಗ ಲಿಂಗಪ್ಪ ಬದಲಿ ಪುರಾಣ ಪುಸ್ತಕವಲ್ಲಿದಂತಾದ ತಂದು ಸೇರಿಸಿ ಬರದ ಭಾಮಿನಿ ಪದ ೧೦೦ ದೀಕ್ಷಾ ವಿಧಾನ ಗ್ರಂಥ ೪೦ ಪುರಾತರ ವಚನ ಗ್ರಂಥ ಕಲಾಪ ಸಹವಾಗಿ ೧೩೦ ಅಂತೂ ೨೭೦ ಉಭಯ ೧೩೭೦ ಕಂ ಸಮಾಪ್ತ ಮಂಗಳ ಮಹಾಶ್ರೀ”(IV ೧೭೫೮ ಶಿವಾಧಿಕ್ಯ ಪುರಾಣ)

“ಗುರುಭಕ್ತನ ಕಥೆ ಮೊದಲಾದವು ಪ್ರಕ್ಷಿ ಪ್ತಂಗಳು, ಆ ಕಥೆಗೆ ಸೇರಿಸಿದ ಪದನು ಸಂಧಿ ೧೦ಕ್ಕಂ ಪದ ೫೭೬ಕ್ಕಂ ಅಂತು ಸಂಧಿ ೬೦ಕ್ಕಂ ಪದನೂ ೩೬೧೬ಕ್ಕಂ ಮಂಗಳ ಮಹಾಶ್ರೀಶ್ರೀಶ್ರೀ”(VII ೧೯ ಬಸವ ಪುರಾಣ).

ಗ್ರಂಥಪರಿಷ್ಕರಣ ಕಾರ್ಯದಲ್ಲಿ ಈ ಪ್ರಕ್ಷಿಪ್ತದ ಉಲ್ಲೇಖಗಳು ತುಂಬ ಸಹಾಯಕಾರಿಯಾಗಿ ನಿಲ್ಲುತ್ತವೆ. ಇದರಿಂದ ಮೂಲಕವಿಯ ಪಠ್ಯಭಾಗವನ್ನು ನಿರ್ಧರಿಸಲು ಅನುಕೂಲವಾಗುತ್ತದೆ. ಪ್ರೌಢ ಲಿಪಿಕಾರರು ಇಲ್ಲವೆ ಸಹೃದಯರು ಮಾಡಿರಬಹುದಾದ ಈ ಪ್ರಕ್ಷಿಪ್ತಗಳನ್ನು ಗುರುತಿಸುವಲ್ಲಿ ಇವು ನೆರವಾಗುತ್ತವೆ. ಹೆಚ್ಚಿನ ಹಸ್ತಪ್ರತಿಗಳಲ್ಲಿ ಇಂಥ ಉಲ್ಲೇಖಗಳು ದೊರೆಯುವುದಿಲ್ಲ.

ಹಸ್ತಪ್ರತಿಗಳ ಅಂತ್ಯಪ್ರಶಸ್ತಿಗಳಿಂದ ಕೆಲವು ವಿಶೇಷ ಸಂಗತಿಗಳೂ ನಮಗೆ ಗೊತ್ತಾಗುತ್ತವೆ. ಇವು ಅನೇಕ ರೀತಿಯಿಂದ ಬೆಲೆಯುಳ್ಳವಾಗಿರುತ್ತವೆ.

“ಯೀ ಪುಸ್ತಕ ರಕ್ಕೆಯಿರುವ ಬರೆದ ವಾಲೆ ೩೫೪. ಚೆನ್ನಾಗಿ ನೋಡಿ ಬರೆದು ಯಿರುವಂಥಾದ್ದರಿಂದ ಯೀ ಕೃತಿಗೆ ಆಚಂದ್ರಾರ್ಕವಾಗಿ ಸದ್ಗುರು ಸಿದ್ಧಿವಿನಾಯಕರು ಬಸವರಾಜರು ಸಾಂಬಶಿವ ಷಣ್ಮುಖರು ಭದ್ರಕಾಳಿ ಮನೋಹರ ಶ್ರೀಪಾರ್ವತೀ ಕ್ರುಪೆಯಿರಬೇಕೆಂಬ ಗಣಂಗಳ ಆಶೀರ್ವಾದ ಕಟಾಕ್ಷ ಸಿದ್ಧಿರಸ್ತು ॥ ಯೀ ಪುಸ್ತಕದಲ್ಲಿ ಯಿರುವ ಬರೆದ ವ್ಯಾಲೆ ಲೇಖನವಾಲೆ. ೧೫೪ಕ್ಕೆ ಅಷ್ಟಕದ ವಾಲೆಗೆ ಈಚೆಗೆ ತೆಗೆದುಕೊಂಡದ್ದರಿಂದಾ ಯೀಗ ಯೀ ಪುಸ್ತಕದಲ್ಲಿ ಬರೆದು ಕಪ್ಪನಿಟ್ಟುಯಿರುವ ವಾಲೆ ೨೫೩ ನಿಧಾನವಾಗಿದೆ.... ಯೀ

ಪುಸ್ತಕದಲ್ಲಿ ತುಂಬಾ ಬರೆದಿರುವಂಥಾ ಕೃತಿಗಳ ವಿವರ''(I -೨೭೬ ಕಾಲಜ್ಞಾನ) ''ಉತ್ತ್ರೊಳಲಲ್ಲಿ ನಿರುದ್ಯೋಗದಲ್ಲಿಯಿದ್ದಾಗ ಭಾರತದ ಪುಸ್ತಕ ಬರದ್ದು. ಬರದೋನು ಶೇಷಯ್ಯನ ಬರಹ''(VII-೨೧೧ ಭಾರತ)

''ಕಲ್ಯಾಣದ ಕಲಾಬುರ್ಗಿಯ ನಡುಮಧ್ಯದ ಗ್ರಾಮವಾದ ಗೌಡನಹಳ್ಳಿ ಕಿಂನರಿ ಬ್ರಹ್ಮಯ್ಯನ ಸಾಂಪ್ರದಾಯಕರಾದ ಮಲ್ಲಪ್ಪನವರ ಪುತ್ರನಾದ ಬಸವಪ್ಪನು ಬರೆದ ಹಸ್ತಾಕ್ಷರ''(VII೩೦೯ ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ ಶಕ ೧೭೬೯)

''ಸೂಲೆಗಾವಿ ಶಾಂತಲಿಂಗಮರಿದೇವರಿಗೆ ತೋಂಟದ ಡಂಬಳದ ತೋಟದ ಸ್ವಾಮಿಗಳ ಪಾದದ ಮರಿಮಳ್ಳಿಯು ಬರಕೊಟ್ಟ ಪುಸ್ತಕವೊಂದು ವರಕೆ ವೊಂದು ಹಡಕ್ಕೆ ಆೖದು ಟೆಂಕೆ ರೊಕ್ಕ ಕೊಡುವರು. ಮೇಲೆ ಯೇನು ಕೊಟ್ಟರು ಯಾವು ಕೊಡದಿದ್ದರೆ ಯಿಲ್ಲ''(VII ೪೦೬ ಮರುಳ ದೇವರ ಕಂದ)

''ಗೂಳೂರ ಸಿದ್ಧವೀರಂಣ್ಣೊಡೆ ದೇವರಿಗೆ ನಂದಿಯಪುರದ ಪರ್ವತ ದೇವರು ಶಿಷ್ಯರು ತೋಟದ ದೇವರು ಲೇಖಿನವ ಮಾಡಿದ ಪ್ರಭುದೇವರ ಶೂನ್ಯ ಸಂಪಾದನೆ...''(ಶಕ ೧೫೩೮, VIII-೫೧೦)

''ಸ್ವಸ್ತಿಶ್ರೀ ಶಾಲಿವಾಹನ ಶಕಾಬ್ದಃ ೧೮೧೧ ಸಂದು ವರ್ತಿಸುವ ವಿರೋಧಿ ನಾಮ ಸಂವತ್ಸರ ಭಾದ್ರಪದ ಕೃಷ್ಣಸಪ್ತಮಿ ಚಂದ್ರವಾರ ರೋಹಿಣಿ ನಕ್ಷತ್ರ ಪ್ರಾತಃಕಾಲದಲ್ಲಿ ಚಾಮರಾಜನಗರ ತಾಲ್ಲೂಕು, ಮಲೆಯೂರು ಹೋಬ್ಳಿ ಸ್ಕೂಲ್ ಮಾಸ್ಟರ್ ಪದ್ಮರಾಜ ಪಂಡಿತ ನಂದೀ ಕೌಮುದೀ ಕಥೆಯು ತಪ್ಪುಗಳಿಂ ತಿದ್ದಿ ಪರಿಷ್ಕೃತವಾಗಿ ಬರೆಯಲ್ಪಟ್ಟಿತು''(IV-೧೫೩೦ ಸಮ್ಯಕ್ತ್ವಕೌಮುದಿ)

ಈ ಮೇಲಿನ ಉಲ್ಲೇಖಗಳಿಂದ ಕೃತಿಯಲ್ಲಿರುವ ಒಟ್ಟು ಓಲೆ ಗರಿಯ ಸಂಖ್ಯೆ ಹಾಗೂ ಬರೆದು ಕಪ್ಪು ಇಟ್ಟಿರುವ ಓಲೆಗಳ ಸಂಖ್ಯೆ, ನಿರುದ್ಯೋಗದ ಸಮುಪಯೋಗ ಕಿನ್ನರಿ ಬ್ರಹ್ಮಯ್ಯನ ಸಂಪ್ರದಾಯ, ಡಂಬಳದ ತೋಂಟದ ಸ್ವಾಮಿಗಳು ಹಾಗೂ ಚಲಾವಣೆಯಲ್ಲಿದ್ದ ನಾಣ್ಯಗಳ ಹೆಸರು, ಗೂಳೂರ ಸಿದ್ಧವೀರಣ್ಣೊಡೆಯರ ಕಾಲ (ಕ್ರಿ.ಶ. ೧೬೧೬)ನಿರ್ಧಾರ, ಪರಿಷ್ಕೃತ ಬರವಣಿಗೆ ಮೊದಲಾದ ಅಂಶಗಳು ವಿದಿತವಾಗುತ್ತವೆ.

ಹಸ್ತಪ್ರತಿಗಳ ಪ್ರಶಸ್ತಿ ಭಾಗದಲ್ಲಿ ಕರ್ನಾಟಕದ ವೀರಶೈವ, ಜೈನ, ಬ್ರಾಹ್ಮಣ ಮಠಗಳ ಹೆಸರು, ಸಂಖ್ಯೆ ಮಠಾಧಿಪತಿಗಳ ಹೆಸರು, ಕಾಲಾವಧಿ, ಶಿಷ್ಯಪರಂಪರೆ ಹಾಗೂ ಅರಸು ಅಧಿಕಾರಿಗಳಿಗೆ ಸಂಬಂಧಿಸಿದ ಚರಿತ್ರೆಯ ವಿಷಯಗಳು ನಿರೂಪಿತವಾಗಿವೆ. ಉದಾಹರಣೆ: ಗಿಳಿಲ ಗುಂಡಿಮಠ (ಶಕ ೧೫೭೫) ಗುಡಿಕೋಟ ಬಾಲವಾಡಿಯರ ಮಠ (ಶಕ ೧೭೫೩),

ಬೆಂಗಳೂರು ಮಹಾಮಹಂತಿನ ಸಿಂಹಾಸನದ ಕೆಂಪನಂಜೇಸ್ವಾಮಿ (ಶಕ ೧೭೩೬) ಆಗಗೋಡಮಠದ ಚನ್ನಬಸವ ದೇಶಿಕೇಂದ್ರ (ಶಕ ೧೭೭೦) ಸುಲ್ತಾನಪುರ ಮಠದ ಚಿಕ್ಕವೀರಸ್ವಾಮಿ (ಶಕ ೧೬೮೧) ಮೈಸೂರು ಪಂಚಗವಿಮಠದ ಚರಮೂರ್ತಿ ಶಿವಬಸವ ದೇಶಿಕೇಂದ್ರ (ಶಕ ೧೭೬೩) ಹಂಜಗೆ ಮಠ (ಶಕ ೧೭೩೯) ಸಿರಿಗೆರೆಮಠ ತುಮಕೂರು ಕೊಪ್ಪಲು ಮಠ, ಪುನಬುಗಟೆಯ ಮಠ, ಹೊಸಕೋಟೆ ಮಠ, ಸುತ್ತೂರು ಸಿಂಹಾಸನದ ಗೆಜ್ಜೆಯ ನಂಜಯ್ಯದೇವ - ಶಿಷ್ಯ ಚೆನ್ನಂಜಯ್ಯನದೇವ, ಬೆಳಗೊಳದ ಸಿದ್ಧಸಿಂಹಾಸನಾಧೀಶ್ವರ ಚಾರುಕೀರ್ತಿಪಂಡಿತದೇವ ... ಶಿಷ್ಯ, ಅಂಜನಗಿರಿ ಸಿಂಹಾಸನಾಧೀಶ್ವರ ಲಲಿತಕೀರ್ತಿ ಭಟ್ಟಾರಕ (ಶಕ ೧೪೫೭) ಇವು ನಾಡಿನ ಮಠಗಳ ಚರಿತ್ರೆ ರಚನೆಗೆ ಮಹತ್ವದ ಆಕರಸಾಮಗ್ರಿಗಳೆನಿಸಿವೆ. ಇದರಿಂದ ಮಠ ಹಾಗೂ ಮಠಾಧೀಶರ ಕಾಲ ನಿರ್ಣಯ ಸಾಧ್ಯವಾಗುತ್ತದೆ.

ಮಹಾನಾಡಪ್ರಭು ಇಮ್ಮಡಿ ಚಿಕ್ಕಭೂಪಾಲ (II೯೨೧೨) ಹದಿನಾಡ ಇಮ್ಮಡಿ ರಾಮರಾಜ ನಾಯಕ (III-೧೫೦೫) ಕಳಲೆಯ ಮಲ್ಲರಾಜ ಒಡೆಯ (II-೮೩೫) ಸಾಸಲದ ಪ್ರಭು ಸೋಮರಾಜಯ್ಯ (III-೧೦೭೪) ಮೈಸೂರು ಅರಸರ ಕಾಲದ ಉಗ್ರಾಣದ ಕರಣಿಕ ದೊಡ್ಡಯ್ಯ, ರಾಯಸದ ಗಿರಿರಾಮ, ಭಾಗವತ ಕೃಷ್ಣಪ್ಪ (IV-೧೭೯೨), ವೆಂಕಟರಮಣಯ್ಯ (IV-೬), ಅರಮನೆ ಲೇಖರಿ ದಾಸಪ್ಪ, ಬೊಕ್ಕಸದ ನರಸಯ್ಯ, ಸೇರುವೆಗಾರ ಪುಟ್ಟಣ್ಣಯ್ಯ (I ೧) ಸುಬೇದಾರ ವೀರಣ್ಣ (VI-೬) ಅರಮನೆ ಬೊಕ್ಕಸದ ಗುರಿಕಾರ ಕಾಡಯ್ಯ (II-೫೭೯) ಮುಂತಾದ ಅರಸು-ಅಧಿಕಾರಿಗಳ ಉಲ್ಲೇಖಗಳೂ ಇಲ್ಲೆ ಎಡೆ ಪಡೆದಿರುತ್ತದೆ. ಈ ಉಲ್ಲೇಖಗಳು ನಾಡಿನ ಅರಸುಮನೆತನದ ಚರಿತ್ರೆಗೆ ಉಪಯುಕ್ತ ಮಾಹಿತಿ ಒದಗಿಸುತ್ತವೆ.

ಒಟ್ಟಿನಲ್ಲಿ ಹಸ್ತಪ್ರತಿಪ್ರಶಸ್ತಿಗಳು ಹಸ್ತಪ್ರತಿ ಲಿಪಿಕಾರರ ಚರಿತ್ರೆ, ಗ್ರಂಥ ಸಂಪಾದನೆ, ಮಠ, ಅರಸು-ಅಧಿಕಾರಿಗಳ ಚರಿತ್ರೆ ರಚನೆಗೆ ಮಹತ್ವದ ಆಕರ ಸಾಮಗ್ರಿಗಳಾಗಿರುತ್ತವೆ. ಆದರೆ ನಮ್ಮಲ್ಲಿ ಕರ್ನಾಟಕ ಕವಿಚರಿತೆಯ ಮಾದರಿಯಲ್ಲಿ ಕರ್ನಾಟಕದ ಹಸ್ತಪ್ರತಿ ಲಿಪಿಕಾರರ ಚರಿತ್ರೆ ಇನ್ನೂ ರಚನೆಯಾಗಿಲ್ಲ. ಇತಿಹಾಸಕಾರರು ಇಲ್ಲಿಯ ಐತಿಹಾಸಿಕ ಅಂಶಗಳನ್ನು ಗಮನಿಸಿದಂತೆ ತೋರುವುದಿಲ್ಲ. ಇನ್ನು ಮುಂದೆಯಾದರೂ ಚರಿತ್ರೆಕಾರರು ಹಾಗೂ ಸಾಹಿತ್ಯಚರಿತ್ರೆಕಾರರು ಈ ಆಕರ ಸಾಮಗ್ರಿಯನ್ನು ಬಳಸಿಕೊಳ್ಳುವರೆಂದು ಭಾವಿಸಿದ್ದೇನೆ.

■



# 'ಗೋಸಲ' - ಶಬ್ದಕಲ್ಪದ್ರುಮ

ಪ್ರೊ. ಸಿ. ಮಹಾದೇವಪ್ಪ

ಶ್ರೀ ಸಿದ್ಧಲಿಂಗೇಶ್ವರರ ಗುರುಪರಂಪರೆಯ ಗೋಸಲದೇವರು, ಗೋಸಲಾರ್ಯ, ಗೋಸಲೇಶ, ಗೋಸಲಾರ್ಯ ಗುರುಯತಿ, ಗೋಸಲಿಯ ಸಿದ್ಧೇಶ್ವರ ಸ್ವಾಮಿ ಹಾಗೂ ಗೋಸಲ ಚನ್ನಬಸವೇಶ್ವರರ ಅಂಕಿತನಾಮಗಳಲ್ಲಿ ಕಂಡುಬರುವ 'ಗೋಸಲ' ಇಲ್ಲವೆ 'ಗೋಸಲಿ' ಶಬ್ದದ ಅರ್ಥವೇನು ಎಂಬುದರ ಜಿಜ್ಞಾಸೆ ಈವರೆಗೆ ನಡೆದಿದ್ದರೂ ಯಾವ ನಿರ್ಣಯಕ್ಕೂ ಬಂದಂತೆ ಕಂಡುಬರದು. ಹಾಗೆ ನಿರ್ಣಯಿಸಲಾಗದಿದ್ದರೂ 'ಗೋಸಲ' ಶಬ್ದದ ಅರ್ಥ ಪ್ರತಿಪಾದನೆಯಾದರೂ ಸಾಂಗವಾಗಿ ಸಾಗಿದಂತಿಲ್ಲ. 'ಗೋಶಾಲೆ - ಗೋಸಾಲೆ - ಗೋಸಲ' ಆಗಿರಬಹುದೆಂಬ ಅನಿಸಿಕೆ ಮಾತ್ರ ವ್ಯಕ್ತ ಪಟ್ಟಂತಾಗಿದೆ. ಅದೂ ಭಾಷಾ ಶಾಸ್ತ್ರೀಯ ವಿಶ್ಲೇಷಣೆಯಂತಲ್ಲ. 'ಗೋಸಲ ಚೆನ್ನಬಸವೇಶ್ವರರು ತಮ್ಮ ಗುರುಪರಂಪರೆಯಲ್ಲಿನ ಗೋಸಲ ಸಿದ್ಧೇಶ್ವರರ ಹೆಸರಿನಲ್ಲಿ ಪ್ರಸಿದ್ಧವಾದ 'ಗೋಸಲ' ಶಬ್ದವನ್ನು ತಾವೂ, ಗೋವಿಗೆ ಕೊಟ್ಟ ಮಹತ್ವದ ದೃಷ್ಟಿಯಿಂದ, ತಳೆದಿರಬಹುದೆಂದು ಊಹಿಸಿ ಇದು ಇನ್ನೂ ಸಂಶೋಧನೆಗೆ ಒಳಪಡಬೇಕಾದ ವಿಚಾರವೆಂಬ ಅಭಿಪ್ರಾಯ ಮಾತ್ರ ಖಚಿತಗೊಂಡಂತಿದೆ.

ಶ್ರೀ ಸಿದ್ಧಲಿಂಗೇಶ್ವರರು ಕಗ್ಗೆರೆಯ ತೋಟದಲ್ಲಿ ತಪಸ್ಸಿಗೆ ಬಹುದೀರ್ಘಕಾಲ ಕುಳಿತಿದ್ದರಿಂದ ಅವರ ಮೈಮೇಲೆ ಬೆಳೆದ ಹುತ್ತದ ಬಾಯಿಗೆ 'ಗೋ' ವೊಂದು ಬಂದು ಪ್ರತಿದಿನವೂ ಕೆಚ್ಚಲ ಸೊರೆ ಬಿಟ್ಟು ಹಾಲು ಕೊಟ್ಟು ಹೋಗುತ್ತಿತ್ತೆಂಬ ಪ್ರತೀತಿ ಪ್ರಸಿದ್ಧವಷ್ಟೆ! 'ಗೋ'

ಸಂಬಂಧವಾದ ಈ ಘಟನೆಯ ಕಲ್ಪನೆಗೂ 'ಗೋಸಲ' ಶಬ್ದವನ್ನು ಆ ಹಿಂದಿನ ಯತೀಶ್ವರರು ಸ್ವೀಕರಿಸಿ ಜನಜನಿತವಾದುದಕ್ಕೂ ಹೇಗೆ ಸಂಬಂಧವನ್ನು ಕಲ್ಪಿಸುವುದು ? ಎಂದ ಬಳಿಕ 'ಗೋಸಲ' ಶಬ್ದಕ್ಕೆ ವ್ಯಾಪಕವೂ ಗೂಢವೂ ಆದ ಅರ್ಥವಿರಬೇಕೆಂದು ತಿಳಿಯಬಹುದು.

ಶ್ರೀ ಸಿದ್ಧಲಿಂಗೇಶ್ವರರು ತಮ್ಮ ಒಂದು ವಚನದಲ್ಲಿ ತಮ್ಮ ಗುರುಪರಂಪರೆಯನ್ನು ನಿರ್ದೇಶಿಸುತ್ತ 'ಹರದನ ಹಳ್ಳಿಯ ಗೋಸಲದೇವರನ್ನು ಸ್ಮರಿಸಿದ್ದಾರೆ. ಆ ಪರಂಪರೆಯಲ್ಲಿ ಅವರು ಹನ್ನೆರಡನೆಯವರು, ಗೋಸಲದೇವರಿಗಿಂತ ಹಿಂದಿನಿಂದಲೂ ಹರದನಹಳ್ಳಿಯ ಗುರುಪರಂಪರೆ ಸಾಗಿ ಬಂದಿತ್ತೆಂಬುದು ಖಚಿತ ನಿರ್ವಿವಾದದ ಸಂಗತಿ. ಗೋಸಲದೇವರ ಪ್ರಶಿಷ್ಯರ ಶಿಷ್ಯರಾದ ಚೆನ್ನಬಸವೇಶರಂತು ಗೋಸಲ ಚನ್ನಬಸವೇಶ್ವರರೆಂದೇ ಪ್ರಸಿದ್ಧರಾದವರು. ತೋಂಟದ ಸಿದ್ಧಲಿಂಗೇಶ್ವರರ ಉಪದೇಶಗುರುಗಳಾದ ಈ ಗುಬ್ಬಿ ಚನ್ನಬಸವೇಶ್ವರರನ್ನು ಶಾಂತೇಶಕವಿ ತನ್ನ ತೋಂಟದ ಸಿದ್ಧೇಶ್ವರ ಪುರಾಣದಲ್ಲಿ 'ಗೋಸಲೇಶ' ನೆಂದೇ ಕರೆದಿದ್ದಾನೆ. ಆದರೆ ಸಿದ್ಧಲಿಂಗೇಶ್ವರರನ್ನು ಕುರಿತು 'ತೋಂಟದ ಚೆನ್ನಿಧಾನ' 'ತೋಂಟದ ಸಿದ್ಧೇಶ' ನೆಂದೂ ಸ್ತುತಿಸಿದ್ದಾನಲ್ಲದೆ .ಗೋಸಲೇಶನೆಂದಾಗಲಿ, ಗೋಸಲ ಗುರುವೆಂದಾಗಲಿ ಹೆಸರಿಸದಿರುವುದು ಗಮನಾರ್ಹ. ಹಾಗಾದರೆ 'ಗೋಸಲ' ಶಬ್ದದ ಮೂಲಾರ್ಥವೇನಿರಬಹುದೆಂದು ನೋಡೋಣ.

'ಗೋಸಲ' - ಇದೊಂದು ಸಮಸ್ತಪದ. 'ಗೋ' ಮತ್ತು 'ಸಲ' ಎಂಬ ಎರಡು ಪದಗಳು ಕೂಡಿ ಆದದ್ದು. 'ಗೋ' ಎಂಬ ಪದಕ್ಕೆ ಇರುವ ಅರ್ಥ ಒಂದಲ್ಲ, ಹಲವಾರು : 'ಗೋ' (೧) ಹಸು, ಹಸುವಿನ ಉತ್ಪನ್ನಗಳು (೨) ವೃಷಭ - ಎತ್ತು (೩) ನಕ್ಷತ್ರ (೪) ಆಕಾಶ (೫) ಸಿಡಿಲು (೬) ಕಿರಣ (೭) ರತ್ನ ಇಲ್ಲವೇ ವಜ್ರ (೮) ಸ್ವರ್ಗ (೯) ಬಾಣ (೧೦) ಭೂಮಿ (೧೧) ವಾಕ್-ಮಾತು (೧೨) ಸರಸ್ವತಿ (೧೩) ತಾಯಿ (೧೪) ದಿಕ್ಕು (೧೫) ಶಿರೋಜ - ಮುಡಿ, ಜಟೆ, ಕೇಶ (೧೬) ಶಿರಸ್ಸು (೧೭) ಮೈಗೂದಲು (೧೮) ಉದಕ (೧೯) ಇಂದ್ರಿಯ (೨೦) ಕುದುರೆ (೨೧) ತ್ರಿವಿಷ್ಟಪ = ತ್ರಿದಿವ (ಇದೇ ೮) (೨೨) ದ್ವಿಪದ - ನರ (೨೩) ನೇತ್ರ (೨೪) ಲಜ್ಜಾ-ನಾಚಿಕೆ (೨೫) ಗುರು (೨೬) ಕರಿ-ಆನೆ (೨೭) ಬೆಳಕು-ಪ್ರಭಾ, ಜ್ಯೋತಿ (೨೮) ರಮಾ (೨೯) ಶ್ರೀ (೩೦) ಉಮಾ (೩೧) ಶರಣ (೩೨) ವರ (೩೩) ಕುಕ್ಷಿ (೩೪) ಬಸ್ತೊ (೩೫) ಕಿವಿ (೩೬) ಅಲೆ (೩೭) ಪಕ್ಷಿ (೩೮) ಶೃಂಗ - ಕೊಂಬು (೩೯) ಸೂರ್ಯ (೪೦) ಚಂದ್ರ (೪೧) ವಾಯು (೪೨) ಪರ್ವತ (೪೩) ನಾಗ (೪೪) ವೃಕ್ಷ (೪೫) ಮನೆ-ವಾಸಸ್ಥಾನ (೪೬) ದೃಷ್ಟಿ ಇದೇ (೨೩) (೪೭) ವಸ್ತ್ರ (೪೮) ಪಾಖಂಡವಾಕ್ (೪೯) ಒಬ್ಬಾನೊಬ್ಬ ಋಷಿಯ ಹೆಸರು (೫೦) ವೇದ (೫೧) ನಾಲಗೆ ಇತ್ಯಾದಿ.

ಇನ್ನು 'ಸಲ' ಎಂಬ ಮಾತಿಗಿರುವ ಅರ್ಥವನ್ನು ಗಮನಿಸಬಹುದು. ಸಲ್-ಚಲ್-ಚರ್ ಎಂಬ ಧಾತುಗಳಿಗೆ 'ಚರಿಸು' 'ಚಲಿಸು' 'ನಡೆ' ಎಂಬುದೆ ಅರ್ಥ. ಚರ್ + ಅ > 'ಚರ'

ಆಕಉಂತೆ ಸಲ್ + ಅ > 'ಸಲ' ಆಗಿ ಚರಿಸುವವ ಎಂಬ ಅರ್ಥಹೊಂದಿದೆ. ಎಡೆಯೂರ ಶ್ರೀ ಸಿದ್ಧಲಿಂಗೇಶ್ವರರ ಗದ್ದುಗೆಯ ಅಂಗಳದ ಸುತ್ತಾಲದ ಜಗಲಿಯಲ್ಲಿ ನಟ್ಟ ಶಿಲಾಶಾಸನದ ಪೀಠಿಕಾರಂಭದ 'ಜಗಹಿತಾರ್ಥವಾಗಿ ಚರಿಸಿದ ಕ್ರಮವೆಂತೆಂದರೆ' ಎಂಬ ವಿವರವಿದೆ. 'ಗೋ' - (= ಭೂ) ಸ್ಥಲ - (ತಳ / < ಸ್ಥಳ > / ಸಳ) - 'ಸಲ'ವೇ 'ಗೋಸಲ'ವಾಗಿ 'ಜಗತೀತಳ' ವೆಂಬರ್ಥ ತಾಳಿದೆ. ಲೋಕಹಿತಾರ್ಥವಾಗಿ ಭೂ ಸಂಚಾರಮಾಡುತ್ತ ಜನಸಾಮಾನ್ಯರಿಗೆ ಉಪದೇಶ ಮಾಡುವ ಗುರು, ಜಂಗಮ ಇಲ್ಲವೆ ಚರಂತ, ಚರಾಚಾರ್ಯ ಎಂಬ ಅರ್ಥದ ವೈಶಿಷ್ಟ್ಯ ಪಡೆದ ಶಬ್ದ 'ಗೋಸಲ.' 'ಗೋಸಲ ದೇವರು', 'ಗೋಸಲೇಶ', ಮೇದಿನೀಸ್ವಾಮಿ, ಜಗದ್ಗುರು - ಇವು ಏಕಾರ್ಥವಾಚಕಗಳು, ಕೇವಲ ದೇಶಿಕ, ಪರಿವ್ರಾಜಕರಾಗದೆ ದೇಶಿಕೋತ್ತಮರೂ, ಪರಿವ್ರಾಜಕಾಚಾರ್ಯರೂ ಎಂದೆನಿಸಿದವರು. ''ಆ ದೇಶಮಧ್ಯದಲ್ಲಿರುವ ಗೋಸಲಿಯ ಯತೀಶ್ವರರಾದ ಸಿದ್ಧೇಶ್ವರ ಸ್ವಾಮಿ'' - ಎಂಬಲ್ಲಿ ಪ್ರಯೋಗವಾಗಿರುವ 'ಗೋಸಲಿ' ಪದ ಒಂದು ಊರ ಹೆಸರಾಗಿರಬಹುದು ಎಂಬ ಸಂದೇಹ ಸಹಜವಾದದ್ದೆ. ಆ ಶಬ್ದರೂಪವನ್ನು ಹೋಲುವ, ಆ ಶಬ್ದರೂಪ ಸದೃಶ್ಯವಾದ ಊರುಗಳಿಲ್ಲದೆಯಿಲ್ಲ. ಉದಾ :ಸ್ವಾಸಲಿ ಸೋಸಲಿ =ಸೋಸಲೆ ಎಂಬುದು ಒಂದು. ಇದು ಮೈಸೂರು ಜಿಲ್ಲೆ ಕಾವೇರಿ-ಕಪಿಲಾ ಸಂಗಮಕ್ಕೆ ಮೊದಲೇ ಕಾವೇರಿ ದಡದ ಮೇಲಿದೆ. ಯೋಗೀಶ್ವರರೂ, ಶರಣರೂ, ಕವಿಗಳೂ ಇದ್ದ ಊರು. ಒರಿಸ್ಸಾ ದೇಶದ ಈಗಿನ ಧೌಲಿ, ಹಿಂದೆ 'ತೋಸಲಿ' ಎಂದು ಹೆಸರುಗೊಂಡಿದ್ದಿತು. ಆದರೆ 'ಗೋಸಲಿ' ಎಂಬ ಊರು ಇದ್ದಿತು ಎಂಬುದಕ್ಕೆ ಯಾವ ದಾಖಲೆಯು ಇದ್ದ ಬಗ್ಗೆ ಮಾಹಿತಿಯಿಲ್ಲ.

'ಗೋ' ಶಬ್ದಕ್ಕೆ ಹಿಂದೆ ಕೊಟ್ಟಿರುವ ಅರ್ಥಗಳಲ್ಲಿ 'ಗುರು' ಎಂಬ ಅರ್ಥವಿದ್ದಂತೆ 'ವೃಕ್ಷ' - 'ಭೂಜ' ಎಂಬ ಮತ್ತೊಂದು ಅರ್ಥವೂ ಉಂಟಷ್ಟೇ. 'ಸ್ಥಲಿ'-ಸಂಸ್ಕೃತ ಶಬ್ದವೆ 'ಸಲಿ' ಎಂಬ ತದ್ಭವರೂಪ ಹೊಂದಿ 'ಗೋ' ಶಬ್ದದೊಡನೆ ಕೂಡಿ 'ಗೋಸಲಿ' ಯಾಗಿದೆ. ಮರಗಳಿರುವ ಸ್ಥಳ, ತೋಪು, ಉಪವನ, ಕಡೆಗೆ ಅರಣ್ಯ ಎಂಬರ್ಥವನ್ನೇ ಹೊಂದಿದ್ದಾಗಿದೆ. 'ಸಾಲ್' ಎಂಬ ಶಬ್ದಕ್ಕೂ 'ರಾಜಿ' - ರಾಶಿ, ಗುಂಪು ಎಂದು ಅರ್ಥವಿರುವುದರಿಂದ ಗೋಸಲ್, ಗೋಸಲ, ಗೋಸಲಿ - ಎಂಬ ಈ ಎಲ್ಲ ಪದಗಳಿಗೂ ತೋಪು, ವನ, ತೋಟ ಎಂದೇ ಅರ್ಥವಿದ್ದು ಹರದನಹಳ್ಳಿಯ ಗುರುಪರಂಪರೆಯ ವಾಸಸ್ಥಳದ ನಿರ್ದೇಶಕ ಪದವಾಗಿ ಕಂಡುಬರುತ್ತವೆ. ಆ ಕಾರಣದಿಂದಲೇ ತಾನೆ, ಶ್ರೀ ಸಿದ್ಧಲಿಂಗೇಶ್ವರರಿಗೆ ಶಿವನೆ 'ತೋಂಟದ ಸಿದ್ಧೇಶ್ವರ'ನೆಂದು ಹೆಸರಿಟ್ಟನೆಂದು ಶಾಂತೇಶನು ತನ್ನ ಕೃತಿಯಲ್ಲಿ ವರ್ಣಿಸಿದ್ದಾನೆ. ಈ ಹರದನಹಳ್ಳಿಯ ಸಿದ್ಧೇಶ್ವರನ ಶಿಷ್ಯ ಪರಂಪರೆ ತೋಂಟದ ಗುರುಪರಂಪರೆಯೆಂದೇ ಪ್ರಸಿದ್ಧವಾಗಿದ್ದುದಕ್ಕೆ ಸೋಸಲಿಯ ತೋಪಿನ ಮಠವೂ ಒಂದು ನಿದರ್ಶನವಾಗಿದೆ. ನಿರಂಜನ ಪೀಠಕ್ಕೂ ತೋಂಟಕ್ಕೂ ಅವಿನಾ ಸಂಬಂಧವಿದ್ದಂತೆ ಕಾಣುತ್ತದೆ 'ಸಲ' (ತೆ), ಸಾಲಮು(ತೆ) - ಈ ಎರಡು ಶಬ್ದಗಳಿಗೂ ತೆಲುಗಿನಲ್ಲಿನ ಪ್ರತಿಬಂಧ (barricade) ಪ್ರಾಕಾರ (enclosure), ಗುಪ್ತಿ

(protection) ಎಂಬ ಅರ್ಥ ಬಳಕೆಯಲ್ಲಿದ್ದುದರಿಂದಲೋ ಏನೋ ಸೋಸಲಿಯ ತೋಪಿನ ಮಠ ಮರಗಳ ಗುಂಪಿನ ಮಧ್ಯದಲ್ಲಿರದೆ ಕೇವಲ ಹೂಗಿಡಗಳ ಬೇಲಿಯೇ ಮಠದ ಒಂದು ಬದಿಗೂ, ಕಳ್ಳಿಯ ಬೇಲಿಯೇ ಮಠದ ಹೊರ ಪ್ರಾಕಾರವಾಗಿಯೂ ಇದ್ದು ಹೊರಗಿನ ಸಂಪರ್ಕದಿಂದ ಅನುಷ್ಠಾನಕ್ಕೆ ಅಡ್ಡಿಯಾಗದೆ ಇದ್ದುದು ಆ ಶ್ರೀಮಠದ ವೈಶಿಷ್ಟ್ಯವಾಗಿತ್ತು. ಹರದನಹಳ್ಳಿಯ ಶ್ರೀ ಗೋಸಲ ಸ್ವಾಮಿಯವರ ಮಠದ ಹಿಂಬದಿಯಲ್ಲಿ ಈಗಲೂ ಅಡಿಕೆ ತೆಂಗು ಬಾಳೆಯ ತೋಟವಿರುವುದನ್ನು ನೋಡಿದಾಗ 'ಗೋಸಲ' ಶಬ್ದಕ್ಕೆ ಇರುವ 'ತೋಂಟ, ತೋಟದ ಗುರುಪರಂಪರೆಯ ದ್ಯೋತಕವಾದ ಪದವೆನ್ನಬಹುದು. ಹರದನಹಳ್ಳಿಯ ಶ್ರೀಪೀಠದ ಇತಿಹಾಸವೇ ಅರಣ್ಯಮಧ್ಯದಿಂದ ಪ್ರಾರಂಭವಾಗಿದ್ದಿತೆಂಬುದಕ್ಕೆ ಇಂದಿಗೂ ಹರದನಹಳ್ಳಿ ಅರಣ್ಯ ೧ ಮತ್ತು ಅರಣ್ಯ ೨ ಎಂಬುದಾಗಿ ಗ್ರಾಮ ಸೂಚಿಯಲ್ಲಿನ ದಾಖಲಾತಿಯೇ ಸಮರ್ಥನೆ ನೀಡುತ್ತದೆ. 'ಗೋ' ಶಬ್ದಕ್ಕಿರುವ 'ವೃಕ್ಷ' ಎಂಬ ಅರ್ಥದ ಅನ್ವಯದಿಂದ ವೃಕ್ಷಸ್ಥಲಿಯೇ (ಹೋ:ವೃಕಸ್ಥಲಿ) 'ಗೋಸಲಿ' - ಉಪವನ, ಅರಣ್ಯ ಸ್ಥಲ, ಅಲ್ಲಿ ವಾಸಿಸುವ ಗುರುವೇ, ಈಶನೇ ಗೋಸಲಿಯ ಗುರು, ಗೋಸಲೇಶ ಎಂದೆಂಬುದು ಸುವಿದಿತವಾಗಿಯೇ ಇದೆ.

ಈ ತನಕ ಕೇವಲ 'ಗೋಸಲ' 'ಗೋಸಲಿ' ಪದಗಳ ವ್ಯುತ್ಪತ್ತಿಯನ್ನೂ ಅವುಗಳ ಅರ್ಥ ಹೇಗೆ ಹರದನಹಳ್ಳಿಯ ಮಠಕ್ಕೂ, ಆ ಪೀಠದ ಅಧಿಪತಿಗಳಿಗೂ ಅನ್ವಯಿಸುತ್ತವೆ ಎಂಬುದನ್ನು ನಿರೂಪಿಸಿದಂತಾಯಿತು. ಆದರೆ ಮೂಲತಃ ಈ ಗುರುಪರಂಪರೆಯ ಮೂಲ ಎಲ್ಲಿಂದ ಹೇಗೆ ಆಗಿರಬಹುದೆಂಬುದನ್ನು ಕುರಿತು ನಮ್ಮ ಪೂರ್ವಜರಾದ ಶರಣಕವಿಗಳು ಭಾವಿಸಿ ನಿರೂಪಿಸಿದ ಬಗೆಯನ್ನು ಗಮನಿಸಿ ವಿವೇಚಿಸದೆ ಗತ್ಯಂತರವಿಲ್ಲ. ಈ ಸಂದರ್ಭದಲ್ಲಿ ಎಚ್ಚರದಿಂದ ಪರಿಶೀಲಿಸಬೇಕಾದ ಅಂಶವೊಂದುಂಟು. ಏನೆಂದರೆ ಒಬ್ಬ ಕವಿಯ ಕಾಲದ ಬಗೆಗೆ ನಿಸ್ಸಂದೇಹವಾಗಿಯೂ ನಿರ್ದಿಷ್ಟವಾಗಿ ಖಚಿತವಾಗದೆ ಇರುವಾಗಲೂ ಅಂತಹ ಕವಿಯೊಬ್ಬನು ರಚಿಸಿದ ಕೃತಿಯಲ್ಲಿ ಉದಾಹರಣೆಗೆ "ಸಿದ್ಧಲಿಂಗೇಶ್ವರ ಸಾಂಗತ್ಯ"ದಲ್ಲಿ ಶ್ರೀಗಳವರ ತಂದೆತಾಯಿಯರ ಹೆಸರುಗಳನ್ನು ಮಲ್ಲಿಕಾರ್ಜುನ ಜ್ಞಾನಾಂಬೆಯೆಂದು ಹೇಳಿದಾಗ ಆ ವ್ಯಕ್ತಿಗಳ ಹೆಸರು ಚಾರಿತ್ರಿಕವಾಗಿ ಇದ್ದ ವ್ಯಕ್ತಿಗಳನ್ನು ಕಂಡು ಕೇಳಿದ ಹೆಸರುಗಳೆಂದೇ ಗ್ರಹಿಸುವುದಕ್ಕಿಂತ ಸಾಂಕೇತಿಕವೂ ಧ್ವನ್ಯರ್ಥಸೂಚಕವೂ ಆದ ಕೇವಲ ಕಲ್ಪನೆಯ ಹೆಸರುಗಳೆಂದು ತಿಳಿಯುವುದೊಳ್ಳಿತು. ಶಿವ-ಪಾರ್ವತಿಯರ ನೆನಪು ಮಾಡಿಕೊಡುವ ಹೆಸರುಗಳೇ ಆಗಿ ಪಾರಮಾರ್ಥಿಕವಾದ ಮೂಲಾರ್ಥದ ಕಡೆಗೆ ಆ ಅಂಕಿತಗಳು ನಮ್ಮ ಶ್ರದ್ಧೆಯನ್ನು ಇಂಗಿತವಾಗಿ ಸೆಳೆಯುವ ಕವಿತಾಸೃಷ್ಟಿಯ ಒಂದು ರಚನಾ ತಂತ್ರವೆಂದು ಮಾತ್ರ ಪರಿಗಣಿಸಿದರೆ ಸಾಕೆಂದು ತೋರುತ್ತದೆ.

ಇದೇ ಬಗೆಯ ಕವಿಕಲ್ಪನೆಯ ಮತ್ತೊಂದು ಮುಖವನ್ನು ತೋಂಟದ ಸಿದ್ಧೇಶ್ವರ ಪುರಾಣದಲ್ಲಿ ಕಾಣಬಹುದು. "ಹರುಷದಿಂ ಶಿವನಾಜ್ಞೆಯಂ ತಳೆ । ದುರುರಜತಗಿರಿಯಿಂದ

ಮರ್ತ್ಯಕೆ । ಪರಮ ತೋಂಟದ ಸಿದ್ಧಲಿಂಗಂ ಬಂದನತಿಶಯದಿಂ'' - ಎಂಬಲ್ಲಿ 'ಗೋ' ಶಬ್ದಕ್ಕಿರುವ 'ಸ್ವರ್ಗ,' 'ಪರ್ವತ' ಎಂಬ ಅರ್ಥಗಳನ್ನು ಅಂಗೀಕರಿಸಿ ಅನ್ವಯಿಸಿರುವುದನ್ನು ಕಾಣಬಹುದು. ಮರ್ತ್ಯವನ್ನು ಬಿಟ್ಟು ಸ್ವರ್ಗ ಅಥವಾ ಕೈಲಾಸವು ಇಲ್ಲವೆಂದು ಬೋಧಿಸುವ ಸಲುವಾಗಿಯೋ ಎಂಬಂತೆ ಕೈಲಾಸಗಿರಿಯು ಭೂ ಮಂಡಲದ ಅತ್ಯುಚ್ಚ ಶಿಖರವಾಗಿ, ಶಿವನ ನಿವಾಸವಾಗಿರುವುದಾಗಿ ವರ್ಣಿತವಾಗಿದೆ. ಶಿವನ ಹಾಗೂ ಶಿವಗಣ ಚಾರಿತ್ರದ ಕಥಾರಂಭದ ಹಿನ್ನೆಲೆಗೆ ಕೈಲಾಸವಲ್ಲದೆ ಮತ್ತಾವ ಸನ್ನಿವೇಶದ ವರ್ಣನೆ ಔಚಿತ್ಯಪೂರ್ಣವಾಗಿ ಮೆರಗುಕೊಡಬಲ್ಲುದು · ? ಶೈವ ಪುರಾಣಗಳ ಕಥೆಯ ಮೂಲ ಹಾಗೂ ಚೂಲಗಳು ಕೈಲಾಸವೇ ತಾನೆ ! ಅದೇ ಗೋ - ಸಾಲ !ಧವಳ ಗಿರಿಶಿಖರ !

ಸತ್ಕವೀಶ್ವರನಾದ ಹಂಪೆಯ ಹರೀಶ್ವರದೇವನ ಉದಿತ ಕಾವ್ಯಮಾರ್ಗವನ್ನು ಹಿಡಿದು ನಡೆದ ಶರಣಕವಿಗಳ ಪಂಕ್ತಿಯಲ್ಲಿ ಗುಬ್ಬಿಯ ಕಪಿ ಮಲ್ಲಣಾರ್ಯನೂ ಒಬ್ಬನಷ್ಟೆ. ಹರಿಹರನಿಂದ ನಿರೂಪಿತವಾದ ಕೈಲಾಸದ ಕಥಾರಂಭದಲ್ಲಿ ಕಂಡುಬರುತ್ತಿದ್ದ ಶಾಪ ಪ್ರಸಂಗಗಳ ದೃಷ್ಟಿಯನ್ನು ಅನುಸರಿಸಲು ಹೋಗಿ, ಒಡನೆಯೇ ಮರುಪರಿಶೀಲನೆಯಿಂದ ಆ ಕಾವ್ಯನಿರೂಪಣೆಯ ಕಥನ ದೃಷ್ಟಿಯನ್ನೇ ಬದಲಿಸಿ ಒಂದು ಹೊಸ ತಿರುವು ಕೊಟ್ಟುದನ್ನು 'ಶಾಪವೆನ್ನವರಿಗುಂಟೇ ಗಣಂಗಳ್ ನೀವು ಭೂ ಪವಿತ್ರಾರ್ಥದಿಂ ಜನಿಸಿ ಭಕ್ತ ವ್ರಜಾಳಪಮಂ ತಿರ್ದಿ' ಬರುವಂತೆ ಹೇಳಿ ಷಡ್ವದನನ ಜೊತೆಯಲ್ಲಿ ಆ ತನ್ನ ಗಣಂಗಳನ್ನು ಭೂಲೋಕಕ್ಕೆ ಕಳುಹಿಸಿದಂತೆ ವರ್ಣಿಸಿದ ಕಥಾಭಾಗದಲ್ಲಿ ಕಾಣಬಹುದು. ತಂದೆ ಮಲ್ಲಣಾರ್ಯನ ಆ ಕಥನ ಕ್ರಮವನ್ನೇ ಅನುಸರಿಸಿ ಆತನ ಮಗ ಶಾಂತೇಶನೂ ಜಗದ ಸಮಸ್ತರನ್ನೂ ಬೋಧಿಸಿ ಎಚ್ಚರಿಸುವ ಸಲುವಾಗಿ ಬಸವರಾಜನ ಭಕ್ತಿ, ಚನ್ನಬಸವೇಶ್ವರನ ಸುಜ್ಞಾನ, ಅಲ್ಲಮಪ್ರಭುವಿನ ವಿರಕ್ತಿ, ಭೃಂಗೀಶ್ವರನ ಲಿಂಗನಿಷ್ಠೆಯ ಜೊತೆಗೆ ಶಿವನು ತನ್ನ ಸದ್ಗುಣವನ್ನು ಒಡಗೂಡಿಸಿ 'ತೋಂಟದ ಚಿನ್ನಿಧಾನಂ ವಿಮಲ ಸಿದ್ಧೇಶ್ವರನೆನಿಪ ಪೆಸರಂ ಕೊಟ್ಟು' ಗುರುರೂಪಿಂದ ಸಕಲರನ್ನೂ ಬೋಧಿಸೆಂದು ಕೈಲಾಸದಿಂದ ಭೂಲೋಕಕ್ಕೆ ಕಳುಹಿಸಿದನೆಂದು ನಿರೂಪಿಸಿದ್ದಾನೆ. ಹರಿಹರನ ರಗಳೆಗಳಲ್ಲಿನ ಶಾಪ ಪ್ರಸಂಗಗಳ ತಂತ್ರಕ್ಕೆ ಬದಲಾಗಿ ಲೋಕಕಾರುಣ್ಯದಿಂದ ಜಗದ ಜೀವರನ್ನು ಎಚ್ಚರಿಸಿ ಸನ್ಮಾರ್ಗಿಗಳನ್ನಾಗಿ ಮಾಡಲು ಮಾತ್ರ ಶಿವಶರಣರ ಉದ್ಭವವೆಂದು ಪ್ರತಿಪಾದಿಸುವ ಈ ಕಾವ್ಯದೃಷ್ಟಿಯಲ್ಲಿ ವಿನೂತನತೆಯಿದೆ, ಲೋಕವ್ಯಾಪ್ತಿಯ ಆಜೀವಕ ಧರ್ಮದ ವೈಶಾಲ್ಯವಿದೆ.

ಮಲ್ಲಣಾರ್ಯನ ಭಾವಚಿಂತಾರತ್ನ ಕೃತಿ - ಪ್ರೇರಕನಾದ ಬೋಳಬಸವೇಶ್ವರನ ಶಿಷ್ಯನಾದ ಗೂಳೂರು ಸಿದ್ಧವೀರಣಾರ್ಯನ ಶಿಷ್ಯ ಎಳಂದೂರ ಕವಿ ಹರೀಶ್ವರನು ತನ್ನ 'ಪ್ರಭುದೇವರ ಪುರಾಣ' (೧-೧೯) ದಲ್ಲಿ ತೋಂಟದ ಸಿದ್ಧೇಶ್ವರರನ್ನು ಕುರಿತು ನುತಿಸಿರುವ ಬಗೆ ಇದು. ''ಶುದ್ಧನ ಸೂನೃತಬದ್ಧನ ಮಾಯೆಯ । ನೊದ್ದನ ಶಿವಸನ್ನದ್ಧನ ಶಮನನ । ತದ್ದನ ಹರಗಣ ಖುದ್ದನ ಕುಮುದ ವಿರುದ್ಧನ ಗದಭಯಮಂ । ಉದ್ಧರಣನ ಹಿಮಕೃದ್ಧರ ವಿತತ ಚಿ । ರದ್ಬೇಹನ

ಗತವೃದ್ಧನ ಸುಕೃತಪಿ । ನದ್ಧನ ಭಕ್ತಿಸಮೃದ್ಧನ ತೋಂಟದ ಸಿದ್ಧನ ಸನ್ನುತಿಪೆಂ" ॥ ಈ ಷಟ್ಪದಿಯ 'ಶಿವಸನ್ನದ್ಧನ ಎಂಬೀ ಮಾತಿನ ಮರ್ಮವೇ "ಸರ್ವೇಶಂ ತನ್ನ ಸದ್ಗುಣವಾದಿಯಾದವನುನ್ನತದೆ ಕೂಡುತ್ತ" ಸಿದ್ಧೇಶ್ವರನೆನಿಪ ಪೆಸರಂ ಕೊಟ್ಟನೆಂಬ ಶಾಂತೇಶ ಈ ವರ್ಣನೆಯಲ್ಲಿ ಮೂಡಿದಂತಿದೆ. ಉದ್ಧೃತ ಪದ್ಯದ 'ತೋಂಟದ ಸಿದ್ಧನೆ ಶಾಂತೇಶನ ಪುರಾಣದಲ್ಲಿ 'ತೋಂಟದ ಚಿನ್ನಿಧಾನ'ನಾಗಿರುವುದನ್ನು ಕಾಣಬಹುದು. ಶಿವನ ಸದ್ಗುಣದಿಂದ ಸನ್ನಹಿತನಾದ ಸಿದ್ಧೇಶ್ವರನನ್ನೇ ಆ ಮೊದಲ ಎಳಂದೂರ ಹರಿಹರ ಕವಿಯು 'ಅಮೃತ ಕಲಾಧರ' ಶಿವಸಿದ್ಧ' "ಚಿರದ್ದೇಹ" - ಚಿರಜೀವಿ, ಆಜೀವಕ - ದೀರ್ಘಾಯು, ಪ್ರಾಣದನೆಂಬರ್ಥದಿಂದ ಕೊಂಡಾಡಿದ್ದಾನೆ. ಶಾಂತೇಶನೂ ಜಂಗಮನ ಚಿನ್ಮಯವಾಗಿ ಪರಮ ಸತ್ಕಲೆಯೇ ಚಿದ್ರೂಪ ಭಕ್ತನ ಭಾವಕ್ಕೆ ತೃಪ್ತಿಲಿಂಗ, ಮನಕ್ಕೆ ಪ್ರಾಣಲಿಂಗ, ಕರಕ್ಕೆ ಇಷ್ಟಲಿಂಗವಾದ ಘನಶೂನ್ಯಲಿಂಗವು ಸರ್ವಕಾರಣರೂಪವೆಂದು ನಿರೂಪಿಸುತ್ತ ಆ ಶೂನ್ಯ ಲಿಂಗವು 'ಆಜೀವಕಂ ಸಲೆ ಬೀಜವೆನಿಸಿತ್ತು'. ತನುವೆ ಶೂನ್ಯವೆನಿಸಿತ್ತು ? ಎಂಬಲ್ಲಿ ಶಾಂತೇಶನು ! ಆಜೀವಕ "ಶೂನ್ಯಧ್ಯಾನ'ದತ್ತ ನಮ್ಮ ಗಮನವನ್ನು ಸೆಳೆದಿದ್ದಾನೆಂಬುದು ವಿದಿತವಾದ ವಿಷಯವೆ. ಪ್ರಚ್ಛನ್ನವೂ ಪ್ರಕಟವೂ ಆಗಿ ನಿರೂಪಿತವಾಗಿರುವ ಈ 'ಆಜೀವಕ' ಪದಪ್ರಯೋಗ ನಮಗೆ ಆಜೀವಕರೆಂಬ ಸಾಧುವರ್ಗವೊಂದಿದ್ದುದರ ಅರಿವನ್ನು ತಂದುಕೊಡುತ್ತದೆ. ದೇವಾನಾಂಪ್ರಿಯದರ್ಶಿ (ದೇವರಿಗೆ ಪ್ರಿಯವಾಗಿ ಕಂಡುಬಂದಾತ) - ಅಶೋಕ ಚಕ್ರವರ್ತಿ (ಕ್ರಿ.ಪೂ. ೨೭೨-೨೩೨) -ಯ ಶಾಸನಗಳಲ್ಲಿ ಆಜೀವಕರ ಪ್ರಸ್ತಾಪವಿದೆ. ಬಿಹಾರದ ಗಯೆಗೆ ೧೫ ಮೈಲಿ ಉತ್ತರಕ್ಕೆ ಬಹುಸುಂದರವಾಗಿ ಕಂಡುಬರುವ ಸ್ಥಲತಿಕ ಇಲ್ಲವೆ ಬರಬರ ಪರ್ವತ ಶಿಖರದ ಮೇಲೆ ಬಂಡೆಗೊರೆದ ಕೃತಕ ಗುಹೆಗಳಲ್ಲಿ ಅಶೋಕ ಚಕ್ರವರ್ತಿಯು ಪಟ್ಟಕ್ಕೆ ಬಂದಮೇಲೆ ಬೇರೆ ಬೇರೆ ವರ್ಷಗಳಲ್ಲಿ ಶಿಲಾಶಾಸನಗಳನ್ನು ಹಾಕಿಸಿ ಆ ಗುಹೆಗಳನ್ನು "ಆಜೀವಕರಿಗೆ ದಾನವಾಗಿ ಅರ್ಪಿಸಿದ್ದಾನೆ" "ನೆಗ್ರೋಧ ಗುಹಾ ಶಾಸನ" ದಂತೆಯೆ ಇನ್ನೊಂದು ಶಾಸನ, ಮತ್ತೊಂದು ಗುಹೆಯಲ್ಲಿ - ಈಗ "ವಿಶ್ವ ಝೋಪ್ರಿ' ಎಂಬ ಹೆಸರು - ದೊರೆ ಪ್ರಿಯದರ್ಶಿಯ ಪಟ್ಟಾಭಿಷೇಕವಾದ ಹನ್ನೆರಡನೆಯ ವರ್ಷದಲ್ಲಿ ಈ ಗುಹೆಯನ್ನು ಆಜೀವಕರಿಗೆ ದಾನವಾಗಿ ಅರ್ಪಿಸಿದ್ದಾನೆ' ಎಂದಿದೆ. ಅಶೋಕನ ಕಾಲದಲ್ಲಿ ಆಜೀವಕರಿಗೆ ಕೊಟ್ಟ ಗುಹೆಯೊಂದಕ್ಕೆ ಇಟ್ಟ " ನೆಗ್ರೋಧ ವೃಕ್ಷಗುಹೆ" ಎಂಬ ಹೆಸರಿನಿಂದ ಆಜೀವಕರ ಆತ್ಮೀಯವಾದ ವೃಕ್ಷನ್ಯಗ್ರೋಧ ಅಥವಾ ವಟವೃಕ್ಷವೆಂದು ತಿಳಿಯಬಹುದಾಗಿದೆ. ಇನ್ನೊಂದು ಗುಹೆಯ ವಿಶ್ವ ಝೋಪ್ರಿ ಎಂಬ ಈಚಿನ ಹೆಸರೂ ಆಜೀವಕರ ವಿಶ್ವಪ್ರೇಮದ ಪ್ರತೀಕವೆನ್ನಬಹುದು. ಅದೇ ಪರ್ವತದ ಮತ್ತೊಂದು ಗುಹೆಯನ್ನು (ಈಗ ಕರ್ಣಚೌಪಾರ್) ಪಟ್ಟಾಭಿಷೇಕವಾದ ಹತ್ತೊಂಬತ್ತನೆಯ ವರ್ಷದಲ್ಲಿ ಮಳೆಗಾಲದ ಪ್ರವಾಹಕ್ಕೆ ಸಿಕ್ಕದಂತೆ ದೂರದಲ್ಲಿ ಸನ್ಯಾಸಿಗಳ ವಾಸಕ್ಕಾಗಿ ಅಶೋಕನು ಅರ್ಪಿಸಿರುವುದು ಕಂಡುಬರುತ್ತದೆ.

"ದೇವರಿಗೆ ಪ್ರಿಯನಾದ ದೇವನಾಂಪ್ರಿಯದರ್ಶಿಯ ತರುವಾಯ ಪಟ್ಟಕ್ಕೆ ಬಂದ ದಶರಥನು ಈ 'ವಾಹಿವಕ' (ವಾಹಿಕ ಹೇಟು, ಪತ್ತಿನಗಾದಿ) ಗುಹೆಯನ್ನು ಪೂಜ್ಯ ಆಜೀವಕ ಸನ್ಯಾಸಿಗಳಿಗೆ ಚಂದ್ರಾರ್ಕಪರ್ಯಂತ ಮಳೆಗಾಲದಲ್ಲಿ ಆಶ್ರಯ ಸ್ಥಾನವಾಗಿರಲೆಂದು ದಾನವಾಗಿ ಅರ್ಪಿಸಿದನು " - ಎಂಬ ಈ ಶಾಸನದಿಂದ ಆಜೀವಕ ಸನ್ಯಾಸಿಗಳು ಪೂಜ್ಯರೂ, ದಾನಾರ್ಹರೂ ಆಗಿದ್ದವರೆಂಬ ಅಂಶ ದೃಢಪಡುತ್ತದೆ. ಇದೇ ಶಿಲಾಶಾಸನ 'ವಡತಿಕ' (ವೃಕ್ಷವಾಟಿಕಾ ಗಿರಿಶಿಖರ) ವೆಂಬ ಹೆಸರಿನ ಮತ್ತೊಂದು ಗುಹೆಯಲ್ಲಿಯೂ ಇದ್ದು ಅಶೋಕನ ಕಾಲದ 'ನಿಗ್ರೋಧ ಎಂದರೆ ವಟವೃಕ್ಷದ ಗುಹೆಯನ್ನು 'ವಡತಿಕ'[೧] ಗುಹೆ ಪ್ರತಿಷ್ಠಸಿಸುವಂತಿದೆ. ಈ ಶಾಸನಗಳಲ್ಲಿ ಉಕ್ತರಾದ ಆಜೀವಕ ಮತಾವಲಂಬಿಗಳು ಅಶೋಕನ ಕಾಲಕ್ಕಿಂತ ಬಹು ಹಿಂದೆಯೇ ಬಹು ಪ್ರಬಲರೂ ಪ್ರಮುಖರೂ ಪೂಜ್ಯರೂ ಆಗಿದ್ದವರು. ಅಶೋಕನ ಶಾಸನಗಳ[೨] ಆಧಾರದಿಂದ ಬ್ರಾಹ್ಮಣಾದಿ ಚಾತುರ್ವಣ್ಯ ದವರಿಂದಲೂ, ಜೈನ ಬೌದ್ಧ ಮತೀಯರಿಂದಲೂ ಭಿನ್ನವಾದ, ತಮ್ಮದೇ ಆದ ಆಚರಣೆಯನ್ನುಳ್ಳ ಧರ್ಮೀಯರೆಂಬುದು ತಿಳಿದ ಸಂಗತಿಯೇ ಆಗಿದೆ. ಹೀಗೆ ಆಜೀವಕ ಮತ ಸ್ವತಂತ್ರವಾಗಿತ್ತೆಂಬುದು ಚಾರಿತ್ರಿಕ ಸತ್ಯವಾಗಿದೆ. ಅವರು ಹೊರನೋಟಕ್ಕೆ ನಗ್ನರಾಗಿ ಜೈನದಿಗಂಬರರಂತೆ ಕಂಡುಬರುತ್ತಿದ್ದರೂ ಆಚರಣೆಯಲ್ಲಿ ಅವರು ಜೈನ ಬೌದ್ಧರಿಂದ ಬೇರೆ ಧರ್ಮೀಯರೆಂಬುವರ ಬಗೆಗೆ ಆಗಿನ ಸಮಕಾಲೀನ ಮತೀಯರಿಗೆ ಯಾವ ಸಂಶಯವೂ ಇರಲಿಲ್ಲ. ಆದರೆ ಅರ್ವಾಚೀನರು ಅವರನ್ನು ಜೈನದಿಗಂಬರರೆಂದು ತಪ್ಪಾಗಿ ಗ್ರಹಿಸಿದುದನ್ನು ಕಂಡು 'ಜೈನ ಬೌದ್ಧ ಮತಗಳಿಗಿಂತ ಆಜೀವಕರು ಭಿನ್ನಮತೀಯರೆಂಬುದನ್ನು ಯಾರೂ ಮರೆಯಬಾರದೆಂದು ಎಚ್ಚರಿಸುವ ಒಂದು 'ನೀಲಿ ಕೇಶೀ' ಎಂಬ ಕಾವ್ಯದಲ್ಲಿ ಆಜೀವಕ ಮತ ತತ್ತ್ವವನ್ನು ಕುರಿತ ಒಂದು ಪ್ರತ್ಯೇಕ ಅಧ್ಯಾಯವೇ ಇದೆಯೆಂದು ತಿಳಿದುಬಂದಿದೆ.[೨] ಪ್ರಸ್ತುತ ಲೇಖಕನಿಗೆ ನೋಡಲು ಸದ್ಯದಲ್ಲಿ ಲಭ್ಯವಾಗಿಲ್ಲ. ವೀರಾಗಮದ ಶೂನ್ಯತತ್ತ್ವದ ಪ್ರತಿರೂಪವೇ ತಾವಾದವರೋ ಎಂಬಂತಿದ್ದ ಆಜೀವಕರು 'ತನು ಶೂನ್ಯ' ರಾಗಿದ್ದವರು ಎಂಬುದಕ್ಕೆ ದೇವರು ಇದ್ದಾನೋ ಇಲ್ಲವೋ ! ಆ ಕಾರಣ ಶೂನ್ಯದ ಧ್ಯಾನವನ್ನು ಮನದ 'ಇಷ್ಟ'ದಂತೆ ಮಾಡಲಿಕ್ಕೇಬೇಕು ಎಂಬ ಉಪದೇಶದಂತೆ ಅವರು ನಡೆದುಕೊಂಡುದೇ ನಿದರ್ಶನ. ಆ ಕಾರಣ ನಿರ್ವಾಣ ಸ್ವರೂಪದಿಂದ ಶೂನ್ಯ ತತ್ತ್ವ ಪ್ರತಿಪಾಲಕರಾದ ಆಜೀವಕರನ್ನು ಗುಬ್ಬಿಯ ಶಾಂತೇಶನ ಬಳಿಕ ನೆನೆದಿರುವ ಕವಿಯೆಂದರೆ ಷಡಕ್ಷರದೇವ ; ತೋಂಟದ ಸಿದ್ಧ ಲಿಂಗೇಶ್ವರರನ್ನು ಕುರಿತ ಸ್ತೋತ್ರದಲ್ಲಿ ಅವರ ಗುರುಪರಂಪರೆಯ ಪ್ರಾರಂಭಿಕ ಇಲ್ಲವೆ ನಡುಗಾಲದ ವೀರವಾಣಿಜಸ್ವಾಮಿಗಳ ಹಾಗೂ ಆಜೀವನಾಮಕ ನಿರ್ವಾಣ ಸ್ವಾಮಿಗಳ ಪ್ರಸ್ತಾಪವಿರುವುದನ್ನು ಮನಗಾಣಬಹುದು. "ಶ್ರೀಕರವೀರ ಸಾಧು ಸಹಕಾರನುದಂಚಿತ ಮುಕ್ತಕಂ ಸುಪ।ದ್ಮಾನುದ್ಗಮ ಪ್ರರುಚಿ ಮಂಜುಲತಾನ್ವಿತನೂರ್ಜಿತಾಗಮಾ। ನೀಕನುತಂ ಮಹಾವಿರತಿಸಂಯುತನಾದುವ ಜಿಂದೆ ಸಾರ್ಥನಾ। ಮಾಕರನಾದ ತೋಂಟದ ಗುರೂತ್ತಮನೋರ್ವನೆ ಸತ್ಫಲಪ್ರದಂ ॥

೧. ವಡ m ಗಾರ್ಡನ್ = ತೋಂಟ ಅಶೋಕನ ಶಾಸನಗಳು ಪುಟ.೪೫

೨. ಜೈನ ಲಿಟರೇಚರ್ ಇನ್ ತಮಿಳ್ ಪು. ೬೫ (ತಮಿಳ್)

ಶ್ರೀ ಪುಷ್ಪ - ಪತ್ರ, ಬಾಲಪುಷ್ಪಿ; ಕರವೀರ - ಕಣಗಿಲೆ; ಸಾಧು-ದವನ, ಜವನ; ಮತ್ತೆಯೂ ಸಾಧು - ಸಾಧು ವೃಕ್ಷ - ವರುಣ, ನ್ಯಗ್ರೋಧ - ವಟ ವೃಕ್ಷ, ಸಹಕಾರ - ಮಾವು ; ಮುಕ್ತಕಂ - ತಾರಂ, ಮುಕ್ತಾಗುಣಕಂ. ಪದ್ಮವೃಕ್ಷ ; ಮತ್ತೆಯೂ ಪದ್ಮಾಕರನ್. - ಪದ್ಮಕಾಷ್ಠಗಳಿಗೆ ಆಗರವಾದವನು. ಉದ್ಗಮ - ಮೇಲಕ್ಕೆ ಹಬ್ಬಿದ, ಪ್ರರುಚಿ - ರೋಚಿನೀ, ಕಂಪಿಲ್ಲವೆಂಬ, ಮಂಜುಲತಾ - ಹಿಮದಿಂದ ವೃದ್ಧಿಸುವ ಬಳ್ಳಿ, ಹೂಗಳ ಕಾಯಿಯಿಂದ ಸುಂದರವಾದ ಬಳ್ಳಿಹಬ್ಬಿದ, ಊರ್ಜಿತ - ಅಗಮ - ಬೇರುಬಿಟ್ಟ ಮರಗಳ, ಅನೀಕ - ಸಮೂಹದಿಂದ, ನುತಂ - ಸ್ತುತ್ಯನು. ಮಹಾ - ದೊಡ್ಡ, ಅವಿ - ವೃಕ್ಷಗಳ, ರತಿ - ತಣ್ಣಲೆಳಲ ಹಾಗೂ ನಿರ್ಮಲವಾಯುವಿನ ಪ್ರೀತಿಯಿಂದ ಸಂಯುತನ್ - ಒಡ - ಗೂಡಿ ನಿತ್ಯನಾದವನು, ಆದುದರಿಂದೆ, ಸಾರ್ಥ - (ಸ + ಅರ್ಥ), ಸ - ಆ, ಅರ್ಥ - 'ಜೀವ' ನಾಮಕ್ಕೆ ಆಕರನ್ - ಜೀವಕ - ಚಿರಜೀವಿ, ಆಯುಷ್ಮಾನ್, ಪ್ರಾಣದ ಎಂಬ, ಜೀವಕ ವೃಕ್ಷದಿಂದೊಡಗೂಡಿದ ತೋಂಟದ ಗುರೂತ್ತಮನೊರ್ವನೆ, ಸತ್ಫಲ ಪ್ರದಂ - ಸುಫಲ ವನ್ನೇ ನೀಡುವವನು. ಇದೇ ವೃತ್ತದ ಮುಂಮುರಿದಂದ್ರ ಕನ್ನಡದ ಗುಪ್ತ ರಚನೆಯಲ್ಲಡಗಿರುವ ಶ್ರೀ ತೋಂಟದ ಸಿದ್ಧಲಿಂಗೇಶ್ವರರ ವ್ಯಕ್ತಿ ಚಾರಿತ್ರವನ್ನೂ, ಅವರ ಪೂರ್ವಪರಂಪರೆಯ ದಿಗ್ದರ್ಶನವನ್ನೂ ಕವಿ ಮಾರ್ಮಿಕವಾಗಿ ಚಿತ್ರಿಸಿರುವ ಬಗೆಯನ್ನು ನೋಡಿ :-

ವೃತ್ತ|| ಶ್ರೀಕರ ವೀರಸಾಧುಸಹಕಾರನ್ ಉದಂಚಿತ ಮುಕ್ತ - ಕಂ ಸು|ಪದ್ಮಾಕರನ್ ಉದ್ಗಮ ಪ್ರರುಚಿ ಮಂಜುಲ - ತಾನ್ವಿತನ್ ಊರ್ಜಿತ ಆಗಮಾ ನೀಕಡಾಳಂ ಮಹಾ ವಿರತಿ ಸಂಯುತನ್ ಆದುದರಿಂದೆ. ಸಾರ್ಥನಾ| ಮಾಕರನಾದ ತೋಂಟದ ಗುರೂತ್ತಮನೋರ್ವನೆ ಸತ್ - ಫಲಪ್ರದಂ||.

ಶ್ರೀಕರ-ಶುಭಪ್ರದ, ವೀರಸಾಧು - ವೀರವ್ರತಾಚರಣರಾದ ಸಾಧುಗಳಿಗೇ ಸಹಕಾರನ್ - ವಿವೇಕವೆಂಬ ಸಹಕಾರಹಸ್ತವನ್ನುಳ್ಳವನೂ, ಉದಂಚಿತ ಮುಕ್ತ - ಕಂ - ಎತ್ತಿ ಕಟ್ಟಿದ ಬಿಟ್ಟಮಂಡೆಯುಳ್ಳವನೂ, ಮತ್ತೆಯೂ ಉದಂಚಿತ ಮುಕ್ತಕಂ - ಎತ್ತಿ ಹಿಡಿದ ಶಕ್ತ್ಯಾಯುಧ ಇಲ್ಲವೆ ದಂಡವನ್ನುಳ್ಳವನೂ, ಸು-ಪದ್ಮಾಕರನ್ - ಸುಸಾತ್ತ್ವಿಕರಾದ ಯತೀಶ್ವರರಿಗೆ ಆಶ್ರಯನಾದವನೂ, ಉದ್ಗಮ ಪ್ರರುಚಿ - ಮಂಜುಲ - ತಾ - ಅನ್ವಿತನ್ - ಮೂಲಾಧಾರ ಸ್ಥಾನದಿಂದ ಊರ್ಧ್ವಗಾಮಿಯಾದ ವಿದ್ಯುಲ್ಲತಾಕಾರದ ಕುಂಡಲಿನೀಶಕ್ತಿಯ ತೇಜಃಸ್ಫುರಿತ ಪ್ರಾಣಹಂಸದ ಪರಿಶುದ್ಧ ಜ್ಞಾನಚೈತನ್ಯಾತ್ಮಕನೂ, ಊರ್ಜಿತ ಆಗಮಾನೀಕನುತನ್ - ಆಪ್ತಪರಂಪರಾಗತ ಸ್ವಾನುಭವಸಿದ್ಧ ವಚನಾಗಮಗಳ ಸಮೂಹಗಳಿಂದ ಸ್ತುತ್ಯನಾದವನೂ, ಮಹಾ ವಿರತಿಸಂಯುತನ್ ಆದುದಱಿಂದೆ - ಮಹಾ ವೈರಾಗ್ಯ ಸಂಪನ್ನತೆಯಿಂದ ಕೂಡಿದವನೂ ಆದುದರಿಂದೆ, ಸ - ಅರ್ಥ 'ಆಜೀವ' ನಾಮಕ್ಕೆ ಆಕರನಾಗಿ ನಿತ್ಯ ಸ್ವರೂಪನೂ, ಮತ್ತೆಯೂ ಸ - ಅರ್ಥ - ಶರಣಭಾವದ ನಯವಿನಯ ವಿಜ್ಞಾನಿಯೂ ಮತ್ತೆಯೂ 'ಸಾರ್ಥ'

ನಾಮಾಕರನ್ ಆದ-'ವಾಣಿಜ ಸಂಘ'ವೆಂಬ ಹೆಸರಿನ ಹರದರ ಸಮೂಹವನ್ನುಳ್ಳವನೂ ಆದ, ತೋಂಟದ ಗುರೂತ್ತಮನ್, ಒರ್ವನೆ - ಒಬ್ಬನೆ, ಸತ್ - ಸತ್ತ್ವಗುಣವೆಂಬ ಫಲ-ಫಲವನ್ನು, ಪ್ರದಂ - ಅನುಗ್ರಹಿಸುವವನು.

ಈ ವೃತ್ತದಲ್ಲಿನ ನಿರೂಪಣೆಯಲ್ಲಿ ಶ್ರೀತೋಂಟದ ಗುರೂತ್ತಮನು ವೀರಸಾಧುಗಳಿಗೆ ಸಹಕಾರಿಯಾಗಿಯೂ, ಜಟಾಮಕುಟದಿಂದ ಶೋಭಿಸುವವನೂ, ಜೀವನ್ಮುಕ್ತಾತ್ಮಸಾಕಾರ ಸುಖಿಯೂ, ನಿಯ ವಿನಯ ವಿಜ್ಞಾನಿಗಳಾದ ಶರಣ ಯತಿಗಳಿಗೆ ಆಶ್ರಯನಾದವನೂ, ಹುಟ್ಟಿನ ಪ್ರಸ್ತುತಾರ್ಥದ ಪ್ರಶಂಸೆಯ ಜೀವಾತ್ಮನ ಮಹಿಮೆಯಿಂದ ಕೂಡಿದವನೂ, ಆಪ್ತರ ಪರಂಪರಾಗತ ಸ್ವಾನುಭವ ಸಿದ್ಧವಚನಾಗಮಗಳ ಸಮೂಹಗಳಿಂದ ಸ್ತುತ್ಯನಾದವನೂ, ಮಹಾ ವೈರಾಗ್ಯ ಮೂರ್ತಿಯಾದುದರಿಂದ 'ಆಜೀವ' ನಾಮಾಕರನೂ, ಸ್ವಾಮಿವೆಸರ ವಾಣಿಜ ಸ್ವಾಮಿಗಳ ಸಮೂಹವುಳ್ಳವನೂ ಆದವನು. ಆ ಗುರೂತ್ತಮನೊಬ್ಬನೇ ಜಗದ ಜೀವರಿಗೆ ಸತ್ತ್ವಗುಣವೆಂಬ ಸುಫಲವನ್ನು ಅನುಗ್ರಹಿಸಬಲ್ಲನು ಎಂಬುದು ವೇದ್ಯ ವಾಗುತ್ತದೆ.

'ವೀರಸಾಧುಸಹಕಾರನ್', ಹಾಗೂ ಸಾರ್ಥ ನಾಮಾಕರನ್' - ಎಂಬೀ ಪದ ಪ್ರಯೋಗಗಳ ಅಂತರಾರ್ಥ ಔಚಿತ್ಯಪೂರ್ಣವಾದದ್ದು. ಸಕಲ ಜೀವರಿಗೆ ಲೇಸನೇ ಬಯಸಿದ ಬಸವಾದಿ ಪ್ರಮಥರ ಕಾಲದ (೧೨ನೆಯ ಶತಮಾನ) ಧಾರ್ಮಿಕ, ಸಾಮಾಜಿಕ, ನೈತಿಕ, ಆಧ್ಯಾತ್ಮಿಕ ಹಾಗೂ ಸಾಹಿತ್ಯಜಾಗ್ರತಿಯ ಕೇಂದ್ರಗಳಲ್ಲಿ ಒಂದಾದ[೧] ಐಹೊಳೆಯ ಐನೂರ್ವರು ಸ್ವಾಮಿವೆಸರ ವಾಣಿಜ ಸ್ವಾಮಿಗಳ ವೀರ ಶಾಸನ ಸಮುದ್ಧರಣರಾದ ಮುಂಮುರಿದಂಡಂಗಳ ಸಂಬಂಧವನ್ನೂ, ಮಹಿಮೆಯನ್ನೂ ವಾಚ್ಯವಾಗಿ ಅಲ್ಲದಿದ್ದರೂ, ಸೂಚ್ಯವಾಗಿ ಪ್ರಚ್ಛನ್ನ ಪ್ರಕಟಾರ್ಥದಿಂದ ಷಡಕ್ಷರದೇವನು ತನ್ನ ಪದ ರಚನಾ ಸಂಯೋಗದ ಚಾತುರ್ಯದಿಂದ ಪ್ರಜ್ಞಾಮತಿಗೆ ಸುಗೋಚರವಾಗುವಂತೆ ಮಾಡಿದ್ದಾನೆ.

ಕಲ್ಯಾಣಪುರದಿಂದ ಆಳುತ್ತಿದ್ದ ಮಹಾಮಂಡಲೇಶ್ವರ ರಾಚಮಲ್ಲ ನೃಪನ ಅನುಮತದಿಂದ ಕುರುಗೋಡ ಮೂಲ ಸ್ತಂಭವೋ ತಾವೆನಿಸಿ ಇದ್ದಂತಹ ಮುಂಮುರಿದಂಡಂಗಳಾದರೋ ಅಯ್ಯಾವೊಳೆಯ ಇಲ್ಲವೆ 'ಆರ್ಯಾನಾಮಪುರದ ಪ್ರಮುಖರಾದ ಐನೂರ್ವರು ಸ್ವಾಮಿವೆಸರ ಗಣವಂಶೋದ್ಭವರಾದ ವೀರ ಬಣಂಜುಗಳು. ಪ್ರಳಯಕಾಲದ ರುದ್ರಮೂರ್ತಿಗೂ ಮಿಗಿಲಾದ ಉಗ್ರತೇಜರು. ಭಗವತೀ ವರ-ದಾನ ಪ್ರಸಾದರಾದವರೂ ಹರಪದಪದ್ಮಾರಾಧಕರೂ ಆದವರು ವಿಸ್ತೀರ್ಣ ವಸ್ತು (=ಆತ್ಮ) ಗುಣವಿನಿಹಿತಾ (=ಗುಣನಿಷ್ಠಾ-) ಚರಣರೂ ಸಂಚಿತ ಸಮಸ್ತ ಧರ್ಮೈಕನಿಸ್ತರಣರೂ (=ಸಕಲ ಜೀವರ ಭವ ಭವಗಳಿಂದ ಸಂಚಿತವಾದ ಎಲ್ಲ ಧರ್ಮವನ್ನೂ ಉದ್ಧರಿಸಿದವರೂ)

೧. ಬಳ್ಳಿಗಾವೆ : ಪ್ರಭುದೇವರ ಜನ್ಮಸ್ಥಳ ಹಾಗೂ ಶಿರಾಳಕೊಪ್ಪಗಳನ್ನೂ ಇಲ್ಲಿ ಸ್ಮರಿಸಬಹುದು.

ವ್ಯವಹಾರ ನಯವಿನಯ ವಿಜ್ಞಾನವಿದ್ಯರೂ ಆಗಿದ್ದ ಕುರಗೋಡ ವಾಣಿಜರ ಇಲ್ಲವೆ ಹರದರ ಸಂಬಂಧವು ಹರದನ ಹಳ್ಳಿಯ ಹರದರಿಗೂ ಇದ್ದಿತೆಂಬುದನ್ನು ಷಡಕ್ಷರ ದೇವನ ವೃತ್ತದಲ್ಲಿನ ಪದಪ್ರಯೋಗ ನಿರ್ದೇಶಿಸುತ್ತದೆ.

ಕುರುಗೋಡಿನ ಧರ್ಮಪ್ರತಿಪಾಲಕರಾದ ಮುಂಮುರಿದಂಡಗಳು ಗವದಿಜೆಶ್ವರ ದೇವರನ್ನು ಪ್ರತಿಷ್ಠೆಮಾಡಿದಂತೆ ಹರದನಹಳ್ಳಿಯ ಅರಣ್ಯ ಭಾಗದ ಮೂಲಕ ವ್ಯಾಪಾರಕ್ಕೆ ಹೊರಟಿದ್ದ ವಾಣಿಜರು ತಮ್ಮ ಹೆಸರು ಅಳಿಯದಂತೆ 'ವಾಣಿಜ್ಯಪುರಿ' ಯೆಂಬ ಹರದನಪಳ್ಳಿಯೊಂದನ್ನು ಕಟ್ಟಿ 'ಅಣಿಲೇಶ್ವರ ಲಿಂಗ ಪ್ರತಿಷ್ಠೆ ಮಾಡಿ ಅದಕ್ಕೆ ದೇವಾಲಯವನ್ನು ನಿರ್ಮಾಣಮಾಡಿದ ಸಂಗತಿಯ ಸ್ಮರಣೆಯನ್ನು ಶ್ರೀಸಿದ್ಧಲಿಂಗೇಶ್ವರರನ್ನು ಕುರಿತ ಈ ಸ್ತುತಿಪದ್ಯವು ಮನಮುಟ್ಟುವಂತೆ ಮಾಡಿದೆ.

ಪ್ರಸ್ತುತ ಲೇಖಕನು ಮನಗಂಡ ಮತ್ತೊಂದು ಲಿಖಿತಾಧಾರದ ಕಡೆಗೆ ಓದುಗರ ಗಮನವನ್ನು ಸೆಳೆಯಲು ಬಯಸುವನು.. ಶೂನ್ಯ ಸಿಂಹಾಸನದ ಮೂರನೆಯ ಅಧಿಕಾರಿಗಳಾದ "ಶ್ರೀ ಸೊನ್ನಲಾಪುರದ ಸಿದ್ಧರಾಮೇಶ್ವರ ಸ್ವಾಮಿಗಳವರ ತರುವಾಯದಲ್ಲಿ ದಕ್ಷಿಣ ದಿಗ್ಭಾಗ ಕರ್ನಾಟಕದೇಶ ಮೈಸೂರು ರಾಜಧಾನಿಗೆ ಸೇರಲ್ಪಟ್ಟ ಕಾವೇರಿತೀರದ ಪ್ರಾಂತದಲ್ಲಿ ಇರುವ ಐವಳ್ಳಿ ಮಠಾಧೀಶ್ವರನಾದ ಪಂಚಮಗಣನಾಥನ ವಂಶಜರಾದ ವಾಣಿಜರೆಂಬ ಹರದರಿಂದ ನಿರ್ಮಿತವಾದ ವಾಣಿಜ್ಯಪುರವೆಂಬ ಹರದನಹಳ್ಳಿ ದೇವಭಕ್ತರ ಭಕ್ತಿಯಲ್ಲಿ ಇರ್ದ ವಾಣಿಜ್ಯಪುರ ಶೂನ್ಯಸಿಂಹಾಸನಕ್ಕೆ ಕಾರಣ ಕರ್ತೃಗಳಾದ ಶಿವಾನುಭವ ಚರಂತಿಗೆ ಪಟ್ಟದ ಅನಾದಿಗಣನಾಥ ಇವರಿಂದ ಆದಿಗಣವರ." ಕುರುಗೋಡ ಶಾಸನೋಕ್ತ ಐಹೊಳೆ ಐನೂರ್ವರು ಸ್ವಾಮಿವೆಸರ ಗಣವಂಶೋದ್ಭವರಾದ ಕುರುಗೋಡ ವಾಣಿಜರಂತೆ ಹರದನಹಳ್ಳಿಯ ಹರದರೂ ಐವಳ್ಳಿಯ ಪಂಚಮ ಗಣನಾಥವಂಶಜರು ಎಂಬುದು ಈ ಗ್ರಂಥಾಧಾರದಿಂದ ವ್ಯಕ್ತವಾಗಿದೆ. ಅಲ್ಲದೆ ವಾಣಿಜ್ಯಪುರಿ ಶೂನ್ಯಸಿಂಹಾಸನಕ್ಕೆ ಕಾರಣಕರ್ತೃಗಳಾದವರು ಶಿವಾನುಭವ ಚರಂತಿಗೆ ಪಟ್ಟದ ಅನಾದಿಗಣನಾಥರೆಂಬುದೂ ಶ್ರೀ ತೋಂಟದ ಸಿದ್ಧಲಿಂಗೇಶ್ವರರು ನಿರೂಪಿಸಿದ ಅವರ ಗುರುಪರಂಪರೆಯನ್ನೇ ತಿಳಿಸುತ್ತದೆ.

ವಾಣಿಜ್ಯಪುರ ಶೂನ್ಯಸಿಂಹಾಸನದ ಪೀಠಾಧೀಶ್ವರರೂ, ಅವರ ಮೂಲ ಗುರುಪರಂಪರೆಯೂ 'ಋಷಿಗಳೇ ಆಗಿರುವುದರ ಸಂಕೇತವೋ ಎಂಬಂತೆ ಐವಳ್ಳಿ ಗಣನಾಥ ವಂಶಜರಾದ ಹರದನಹಳ್ಳಿಯ ಹರದರು ನಿರ್ಮಿಸಿದ ಬೃಹತ್‌ದೇವಾಲಯವನ್ನು ಹೊತ್ತ ಭಾರಿ ಶಿಲಾಸ್ತಂಭಗಳಲ್ಲಿ ಕೆತ್ತಿರುವ ಜಟಾಮಕುಟವನ್ನುಳ್ಳ ಯತಿಗಳು, ಅವರ ಕೈಯಲ್ಲಿರುವ ಲಿಂಗ, ಅವರ ಪೂಜಾ ವಿಜೃಂಭಣೆಯ ವೈಭವದ ಶಿಲಾಶಿಲ್ಪ ಮೂರ್ತಿಗಳು ಮೆರೆಯುತ್ತಿವೆ. ವಾಣಿಜ್ಯಪುರೀ ಮಠದ ಗುರುಪರಂಪರೆಯು ಅತಿ ಪ್ರಾಚೀನ ಜಂಗಮಾಚರಣೆಯ ಪ್ರತೀಕವೋ

ಎಂಬಂತೆ ಆ ಗುರು ಯತಿಗಳ ಪ್ರತಿಮಾ ಮೂರ್ತಿಗಳಿವೆ. ಹರದನ ಹಳ್ಳಿಯ ಗೋಸಲ ದೇವರನ್ನು "ಶ್ರೀಗೋಸಲಾರ್ಯಯತಿ" ಎಂದೇ ನಿರೂಪಿಸಿರುವುದನ್ನು ಕಾಣಬಹುದು.

'ಗೋ' ಶಬ್ದವು ಒಬ್ಬ ಋಷಿಯ ಹೆಸರೆಂದೇ ತಿಳಿದಿದ್ದೇವೆ. ಈ ಮೊದಲೆ ಆಜೀವಕ ನಗ್ನ ಸನ್ಯಾಸಿಗಳ ಬಗೆಗೆ ಶಾಸನಗಳಲ್ಲಿ ವ್ಯಕ್ತವಾದ ವಿಷಯಗಳ ನಿರೂಪಣೆಯನ್ನು ಮಾಡಲಾಗಿದೆ. ಆಜೀವಕ ಮತವು ಪ್ರಾಚೀನ ಭಾರತದ ಒಂದು ಧಾರ್ಮಿಕ ಪಂಥ. ಬುದ್ಧನ ಹಿರಿಯ ಸಮಕಾಲೀನನಾದ 'ಗೋಶಾಲ'ನಿಂದ ಪ್ರವರ್ತಿತವಾದುದೆಂದು ಗ್ರಂಥಾಧಾರಗಳಿಂದ ತಿಳಿದು ಬಂದ ವಿಷಯ. ಗೌತಮ ಬುದ್ಧನು ಬೌದ್ಧಮತದ ಸ್ಥಾಪಕನಾದರೆ ಗೋಸಾಲನು ಆಜೀವಕಮತ - ಪ್ರವರ್ತಕನೆಂದು ಹೆಸರಾಂತವನು. ಜೈನದಿಗಂಬರರಂತೆ ನಗ್ನನಾಗಿಯೇ ಇದ್ದವನು. ಜೈನ 'ಪೂರ್ವಗತ' ಗ್ರಂಥಗಳಲ್ಲಿ ಪರಿಣತನಾಗಿದ್ದು ತನ್ನದೇ ಆದ ಮತ ಸಿದ್ಧಾಂತವನ್ನು ಸ್ಥಾಪಿಸಿದವನು[೧]. ಅಹಿಂಸಾ ತತ್ತ್ವಕ್ಕೆ ಜೈನ ಧರ್ಮವಿತ್ತ ಪ್ರಾಧಾನ್ಯ ಮಾತ್ರವಲ್ಲದೆ ಹಿಂಸಾ ಪ್ರಧಾನವಾದ ಯಾಗಾಚರಣೆಯ ವೈದಿಕ ಮತದ ಕಾರ್ಮಕಾಂಡವನ್ನು ಖಂಡಿಸಿದ್ದರಿಂದ ಗೋಸಾಲನ ಬೋಧೆಯಿಂದ ಪವಿತ್ರೀಕೃತವಾದ ಆಜೀವಕ ಮತಾನುಯಾಯಿಗಳು ಪಾಖಂಡವಾಕ್ ಎಂಬುವರಾಗಿ ಪಾಪ ಕಾರ್ಯವನ್ನು ಖಂಡಿಸಿದವರೆಂಬ ಮೆಚ್ಚುಗೆಗೆ ಪಾತ್ರರಾದರು.

ಜೈನರ ಇಪ್ಪತ್ತನಾಲ್ಕನೆಯ ತೀರ್ಥಂಕರನಾದ ಭಗವಾನ್ ಮಹಾವೀರನ ಸಮಕಾಲೀನನೂ ಮಿತ್ರನೂ ಆಗಿದ್ದು ಕಡೆಗೆ ಪ್ರಬಲವಾದ ಮತಸ್ಥಾಪನೆ ಮಾಡಿ ಪ್ರತಿಸ್ಪರ್ಧಿಯೂ ಆಗಿದ್ದವನು, ಗೋಸಾಲ[೨] ಆತನಿಗೆ 'ಮಸ್ಕರಿ ಗೋಶಾಲಿ ಪುತ್ರ'; ಇವನನ್ನೆ ಮಙ್ಖಲಿ ಗೋಶಾಲ'ನೆಂದೂ ಕರೆಯುತ್ತಿದ್ದುದಾಗಿ ತಿಳಿದು ಬರುತ್ತದೆ. 'ಮಸ್ಕರ' ಎಂದರೆ 'ಜ್ಞಾನ' ವೆಂದರ್ಥ. 'ಜ್ಞಾನಿಗೋಶಾಲಿ ಪುತ್ರ' ನೆಂದು ಮಙ್ಖಲಿ ಗೋಶಾಲನನ್ನು ಕರೆದಿರುವಂತಿದೆ. ಜ್ಞಾನಿಯಾದ 'ಗೋ' ಎಂಬ ಒಬ್ಬ ಋಷಿಯ 'ಶಾಲಿಪುತ್ರ' ಎಂದರೆ ವಂಶದಲ್ಲಿ ಹುಟ್ಟಿದವನೆಂದೂ, 'ಗೋ' ಋಷಿ ವಂಶೋದ್ಭವನೆಂದೂ ಹೇಳಲ್ಪಟ್ಟಿದ್ದಲ್ಲಿ ಆಶ್ಚರ್ಯವಿಲ್ಲ. ಏಕೆಂದರೆ ಕಾಲಗತಿಯಲ್ಲಿ 'ಗೋ' ಶಾಲಿಪುತ್ರನು 'ಗೋಶಾಲಿ ಪುತ್ರ'ನಾಗಿ ಅರ್ಥ ವ್ಯತ್ಯಾಸಕ್ಕೆ ಗುರಿಯಾಗುವುದು ಸಹಜವೆ. ಅದಕ್ಕೆ ಪದಚ್ಛೇದದ ಕ್ರಮ ತಪ್ಪಿದ್ದೇ ಕಾರಣ. ಪದದ ಮೂಲಾರ್ಥದ ಅರಿವಿಲ್ಲದಾಗ ಆಗುವ ಪ್ರಮಾದ

೧. ಇವನು ಸ್ಥಾಪಿಸಿದ ಆಜೀವಿಕ ಸಂಪ್ರದಾಯದ ಉಲ್ಲೇಖವು ಜೈನ, ಬೌದ್ಧ ಸಾಹಿತ್ಯದಲ್ಲಿ ಬಹಳ ಕಡೆಗೆ ಬರುವುದು. ಈ ಸಂಪ್ರದಾಯದ ಶಾಸ್ತ್ರ ಹಾಗೂ ಸಿದ್ಧಾಂತಗಳು ಜೈನ ಆಗಮಗಳಿಗೆ ಬಹಳ ನಿಕಟ ವರ್ತಿಯಾಗಿವೆ. ದೃಷ್ಟಿಕೋಣದಲ್ಲಿ ಸ್ವಲ್ಪ ಅಂತರವಿದೆ. ಭೂಮಿಕೆಯು ಜೈನ ಆಜೀವಿಕ ಸಂಪ್ರದಾಯಗಳಿಗೆ ಒಂದೇ ಆಗಿರುವುದರಿಂದ ಮುಂದಿನ ಕಾಲದಲ್ಲಿ ಆಜೀವಿಕ ಸಂಪ್ರದಾಯದ ಗ್ರಂಥಗಳನ್ನು ಜೈನಾಗಮಗಳು ಸಂಗ್ರಹಿಸಿಕೊಂಡುಬಿಟ್ಟುವು. ಇಷ್ಟೇ ಅಲ್ಲ, ಆಜೀವಿಕ ಸಮಾಜವು ಜೈನ ಸಮಾಜದಲ್ಲಿ ಸೇರಿಹೋಗಿಬಿಟ್ಟಿತು". "ಜೈನಧರ್ಮ" ಪುಟ ೧೫೬, ಅಡಿಟಿಪ್ಪಣಿ. ಉಡುಪಿಯಲ್ಲಿ ವೀರಶೈವರ ಜೈನಜಂಗಮಮಠವಿರುವುದನ್ನಿಲ್ಲಿ ಸ್ಮರಿಸಬಹುದು.

೨. ನೋಡಿ ಜೈನಧರ್ಮ ಪುಟ ೧೫೬

ಅದೆಂದು ಹೇಳಬೇಕಾದುದಿಲ್ಲ. ಏನೇ ಇರಲಿ ಗೋಶಾಲ ಇಲ್ಲವೆ ಗೋಸಾಲನು ಜ್ಞಾನಿ ಇಲ್ಲವೆ ಜ್ಞಾನಿಯಾದ 'ಗೋ' ಋಷಿಕುಲೋದ್ಭವನಾದ ನಗ್ನ ಸನ್ಯಾಸಿ ಇಲ್ಲವೆ ಯತಿಯೆಂದು ತಿಳಿಯಬಹುದು. ಮಸ್ಕ್ ಅಥವಾ ಮಂಕ್‌|ಗ್ ಎಂಬ ಧಾತುಗಳಿಗೆ 'ಚರಿಸು' ಎಂದರ್ಥವಿರುವುದರಿಂದ ಮಸ್ಕರಿ ಇಲ್ಲವೆ ಮಙ್ಖಲಿ ಎಂದರೆ ಚರಮೂರ್ತಿ ಪರಿವ್ರಾಜಕನೆಂದೇ ಅರ್ಥವಾಗುತ್ತದೆ. ಆವಕಾರಣ ಗೋಸಾಲ ಗುರೂತ್ತಮನು ಮಹಾಜ್ಞಾನಿ, ಚರಚಕ್ರವರ್ತಿಯಾದವನು. ಜೈನಧರ್ಮ ಗ್ರಂಥಗಳಲ್ಲೊಂದರಲ್ಲಿ ನಿರೂಪಿತವಾಗಿರುವಂತೆ.

*"ಗೋಶಾಲ ಪ್ರವರ್ತಿತಾ ಆಜೀವಿಕಾಃ*
*ಪಾಖಂಡಿನ ಸ್ತ್ರೈರಾಶಿಕಾ ಉಚ್ಯಂತೇ।*
*ಕಸ್ಮಾದಿತಿ ಚೇದುಚ್ಯತೇ, ಇಹ ತೇ ಸರ್ವಂ ವಸ್ತು ತ್ರ್ಯಾತ್ಮಕಮಿಚ್ಛಂತಿ।*
*ತದ್ಯಥಾ,[೧] ದೇವ ಧರ್ಮಾರ್ಥದಾ ವಿಶೇಷಜ್ಞ*
*ಸತ್ಕವಿ ಕಣಾ, ಋಷಿಕುಲೋದ್ಭವಂ"*
*ಜೀವೋಽಜೀವೋ ಜೀವಾಜೀವಶ್ಚ ನಯಚಿಂತಾಯಾಮಪಿ*
*ತ್ರಿವಿಧಂ ನಯಮಿಚ್ಛಂತಿ ತತ ಸ್ತ್ರೀ ಭೀ ರಾಶಿ ಭಿಶ್ಚರಂತೀತಿ ತ್ರೈರಾಶಿಕಾಃ।*

ಆಜೀವಕರ ತತ್ತ್ವದೃಷ್ಟಿಯಂತೆ ಸರ್ವವಸ್ತುವೂ ತ್ರ್ಯಾತ್ಮಕ. ಸತ್, ಅಸತ್ ಸದಸತ್. ಈ ಮೂರೂ ಒಂದುಗೂಡಿ ಒಂದೇ ಆದುದರಿಂದ್ನ ತ್ರೈರಾಶಿಕರೆಂದು ಹೆಸರುಗೊಂಡಂತೆ ತೋರುತ್ತದೆ. ಲೌಕಿಕ, ಪಾರಮಾರ್ಥಿಕ ಫಲಪ್ರಾಪ್ತಿಯ ಉಪಾಯವಾಗಿ ಅವರ ತ್ರ್ಯಾತ್ಮಕ ತತ್ತ್ವ ಚಿಂತನೆ ಇದ್ದಿತೋ ಏನೋ ಇನ್ನೂ ಆಳವಾದ ಅಭ್ಯಾಸದಿಂದ ತಿಳಿದು ಹೇಳಬೇಕಾದ ವಿಚಾರ. ಈ ಲೇಖನದ ವ್ಯಾಪ್ತಿಗೆ ಮೀರಿದ್ದು. ಮೂರರ ರಾಶಿಯಾಗಿ ಇಷ್ಟ, ಪ್ರಾಣ, ಭಾರ ಲಿಂಗರೂಪದಿಂದ ಶಿವಸಂಗಮವಾಗಿ ಸ್ವಯ, ಚರ ಪರಜಂಗಮ ತ್ರೈವಿಧರೋ ಆಜೀವಕರು ಎಂಬ ನಿರ್ಣಯ ಮುಂದೆ ಸಾಗಬೇಕಾದ ಸಂಶೋಧನೆಗೆ ವಸ್ತುವಾಗುತ್ತದೆ. 'ಮೂಗುಳ ಬುದ್ಧಿ'' 'ಮುಂಮುರಿದಂಡಂಗಳಿಗೂ ತ್ರೈರಾಶಿಕ, ತ್ರ್ಯಾತ್ಮಕ ತತ್ತ್ವಾಚರಣೆಗೂ ಇರುವ ಸಾಮ್ಯ ವೈಷಮ್ಯಗಳೇನೆಂಬುದು ವಿಚಾರಾರ್ಹ ಚಿಂತನೆಗಳು. ಶೂನ್ಯಧ್ಯಾನವನ್ನು ಮಾಡಲಿಕ್ಕೇಬೇಕೆಂದು ಬೋಧಿಸಿದ ಗೋಸಾಲನ 'ಶೂನ್ಯ' ತತ್ತ್ವಕ್ಕೂ ಶೂನ್ಯಸಿಂಹಾಸನಾಧೀಶ್ವರರ, ಶೂನ್ಯ ಸಂಪಾದನಕಾರರ ವಚನಾಗಮಸಿದ್ಧ 'ಶೂನ್ಯಲಿಂಗ' ತತ್ತ್ವಕ್ಕೂ ಇರಬಹುದಾದ ಇನ್ನೂ ಹೆಚ್ಚಿನ ಸಂಬಂಧದ ಸ್ವರೂಪವು ವಿಮರ್ಶೆಗೆ ಯೋಗ್ಯವಾದ ವಸ್ತು. ಶಿವಪಾರ್ವತಿಯರಿಗಿಂತ ಶಿವ ಶರಣರೇ ಅಧಿಕವೆಂದು ಸಾರಲು ಹೊರಟ ಆಗಮಜ್ಞಾನವನ್ನು ತಿಳಿದು ಶರಣರ ಅಡಿಯನ್ನು ಹೊಗಳುವ ನಿಜಗುಣ ಶಿವಯೋಗಿಗಳ

---

೧. ಕವಿಮಲ್ಲಣಾರ್ಯ

೨. ಷಟ್ ಖಂಡಾಗಮ : ೧೪೭

ಅರುವತ್ತುಮೂವರ ತ್ರಿವಿಧಿವಹಾಗದ್ಯೈತ ಸಿರಸನ ತ್ರಿವಿಧಿ, ಶೀಲವಂತಯ್ಯನ ತ್ರಿವಿಧಿ, ಅಕ್ಕನ ಯೋಗಾಂಗ ತ್ರಿವಿಧಿ ಸಿದ್ದೇಶ್ವರ ತ್ರಿವಿಧಿ, ಗಣನಾಮಸ್ತೋತ್ರದ ತ್ರಿವಿಧಿ ಇತ್ಯಾದಿ ತ್ರಿವಿಧಿಗಳ ರಾಶಿಗೂ ತ್ರೈರಾಶಿಕ ತತ್ವಕ್ಕೂ ಏನಾದರೂ ಸಂಬಂಧವಿದ್ದರೆ ಎಷ್ಟರ ಮಟ್ಟಿಗೆ ಎಂಬುದರ ವಿವೇಚನೆ ಸಾರ್ಥಕವೋ ನಿರರ್ಥಕವೋ ಯತ್ನಿಸಿಯೇ ತಿಳಿಯಬೇಕಾದ ವಿಷಯ. ನಿರ್ವಾಣನಾಯಕನಾದ ಗೋಸಾಲನ ಅನುಯಾಯಿಗಳಾದ ಆಜೀವಕರೂ ನಿರ್ವಾಣ ಚರಮೂರ್ತಿಗಳಾಗಿ ಪೂಜ್ಯರಾಗಿ ಚಕ್ರವರ್ತಿಗಳಿಂದ ಮಾನ್ಯರಾದುದರ ಕುರುಹಿಗೊ ಏನೋ ೧೧೧ ವಿರಕ್ತರಲ್ಲಿ ನಿರ್ವಾಣಬೋಳೇಶ, ಬತ್ತಲೇಶ್ವರ, ಲಿಂಗಪೂಜಾವಿಧಾನದ ಟೀಕಾ ಕರ್ತೃವಾದ ನಿರ್ವಾಣ ಮಂತ್ರಿ, ನಿರ್ವಾಣಸ್ವಾಮಿ ಹೀಗೆ ಅನೇಕರು 'ನಿರ್ವಾಣ' ನಾಮಾಂಕಿತ ರಾದುದರ ಅಂತರಾರ್ಥವೇನು ? ಎಂಬುದೂ ಬುದ್ಧಿಮಂಥನಕ್ಕೆ ಒಳ್ಳೆಯ ಸಾಮಗ್ರಿ. ಅಂತೆಯೇ ಮರುಳ ಶಂಕರದೇವ, ಮರುಳಾರ್ಯ, ಮರುಳ ಸಿದ್ಧೇಶ್ವರ, ಮರುಳ ಸ್ವಾಮಿ ಎಂಬ 'ಮರುಳ' ನಾಮಾಂಕಿತ ಪದ್ಧತಿಗೂ ಲೋಕದ ದೃಷ್ಟಿಕೆ 'ವಿಚಿತ್ರ'! ವೆನಿಸಿದ್ದ ಗೋಸಾಲ ಗುರುವಿಗೂ ಸಂಬಂಧವಿರಬಾದೇಕೆ ?- ಇದೂ ದೃಢಪಡಬೇಕಾದದ್ದೆ. ಗಣ್ಯ ಜಿಜ್ಞಾಸೆಯ ಸಮಸ್ಯೆಯೇ ಸರಿ.

ವೀರ ಸಾಧುವರ್ಗದ ಆಜೀವಕರು ಇಲ್ಲವೆ - ಸ್ವಾರ್ಥೇ 'ಕ' ಪ್ರತ್ಯಯವಾದ ಕಾರಣ ಆಜೀವರು ಸಹಜ ಸದ್ಭಕ್ತರಾದವರು. ಇಹ-ಪರಬಂಧ- ಮೋಕ್ಷಗಳ ಇಚ್ಛೆ-ಅನಿಚ್ಛೆಗಳೆರಡನ್ನೂ ತ್ಯಜಿಸಿದವರಾದ ಕಾರಣ ಅವರಿಗೆ ಪುಣ್ಯ-ಪಾಪಗಳೆಂಬುದಿಲ್ಲವೆಂಬುದನ್ನು ವೀರಶೈವ ಷಟ್‌ಸ್ಥಲ ಸಿದ್ಧಾಂತದ ಮುಂದಿನ ಪದ್ಯ ಪ್ರತಿಪಾದಿಸಿರುವುದನ್ನು ಗಮನಿಸ ಬಹುದು.

*ಬಹು ಪುಣ್ಯವಶದಿಂದ ಸ್ವರ್ಗದೈವತ ಜನ್ಮ*
*ಬಹುಪಾಪವಶದಿಂದ ನರಕ ಸೂಕರಜನ್ಮ*
*ಬಹು ಪುಣ್ಯಪಾಪವೆರಡರ ಸಮತ್ವದಿಂ ವಿದಿತಮಾನುಷ ಜನ್ಮವು ।*
*ಅಹುದು ಈ ಪರಿಯೊಳನವರತಮಾಜೀವರಿಗೆ*
*ಸಹಜಸದ್ಭಕ್ತರಿಗೆ ಪುಣ್ಯಪಾಪಗಳಿಲ್ಲ*
*ಇಹಪರದ ಬಂಧಮೋಕ್ಷಂಗಳಿಚ್ಛೆಯನಿಚ್ಛೆಯೆರಡನುಳಿದಿಪ್ಪರಾಗಿ*

ಪೂಜೆ ಪುಣ್ಯಕ್ಕೆ ಒಡಲಾದಂತೆ ಶೂನ್ಯಕ್ಕೆ ಜ್ಞಾನ ಒಡಲಾದ ಕಾರಣ ಆ ಚಿತ್ಕಲಾರೂಪ ಪರವಸ್ತುವಾದ ಶೂನ್ಯದ ಧ್ಯಾನವಲ್ಲಿ ನಿರತರಾದ ಆಜೀವಕರು-ಜ್ಞಾನಾನಂದ ಲಾಂಛನವಾದ ಶೂನ್ಯಲಿಂಗಧ್ಯಾನಿಗಳಾದವರೆಂದು ತಿಳಿಯಲು ಬರುತ್ತದೆ. ಭಕ್ತಿ ಜ್ಞಾನವೈರಾಗ್ಯಾವೇಶವುಳ್ಳವ ರಾದುದರಿಂದ ಮರುಳರೆಂದು ಕರೆಯಲ್ಪಟ್ಟವರು. ನಗ್ನರಾದ ಆಜೀವಕರ ಗಣಾಚಾರ್ಯನಾದ ಮಕ್ಖಲಿ ಗೋಸಾಲನು ವಿಚಿತ್ರ ಚರಿತ್ರನಾದ ಸಾಧುವೆಂದು ಸಮಕಾಲೀನರು ಭಾವಿಸಿದ್ದುದನ್ನು

ಇಲ್ಲಿ ಸ್ಮರಿಸಬಹುದು. ಬುದ್ಧನ ಹಿರಿಯ ಸಮಕಾಲೀನನಾದ ಮಹಾವೀರನಿಗಿಂತ (ಕಿ.ಪೂ.೫೨೮) ಹದಿನಾರು ವರ್ಷದ ಮೊದಲೆ (ಕ್ರಿ.ಪೂ.೫೪೪) ಮಸ್ಕರಿ ಗೋಸಾಲನು ತೀರಿಕೊಂಡರೂ ಆ ವರ್ಧಮಾನ ಮಹಾವೀರನ ಜೈನಮತದ ತತ್ತ್ವೋಪದೇಶದ ಪ್ರಭಾವವು ಹೆಚ್ಚು ವ್ಯಾಪಿಸದಂತೆ ತನ್ನದೇ ಆದ ಧರ್ಮಾಚರಣೆಯ ಮಾರ್ಗವನ್ನು ಪ್ರಚುರಗೊಳಿಸಿದ್ದ ನೆಂಬುದು ಗಮನಾರ್ಹ.

'ಇಷ್ಟ' ನಿಷ್ಠೆಯಿಂದ ಶೂನ್ಯಧ್ಯಾನವನ್ನು ಮಾಡಲಿಕ್ಕೇಬೇಕೆಂಬ ಆಜೀವಕರ ಗುರು ಗೋಸಾಲನ ಶೂನ್ಯಧ್ಯಾನ ಪ್ರತೀಕವೋ ಎಂಬಂತೆ ಅನಾದಿಜಂಗಮದ ಮಕುಟದಲ್ಲಿ ಶೂನ್ಯಲಿಂಗ ಧಾರಣೆಯ ನಿರೂಪಣೆಗೆ ಎಡೆಯೂರ ತೋಂಟದ ಸಿದ್ಧಲಿಂಗೇಶ್ವರರ ಮೂರ್ತಿ ಚಿತ್ರಣದಲ್ಲಿನ ''ಮೇಘಂಗಳೇ ಜಟಾಬಂಧ, ಆ ಜಟಾಬಂಧದಲ್ಲಿ ಶೂನ್ಯ - ಲಿಂಗ; ವೇದ ಪುರಾಣ''ಗಳೇ ಕ್ರೀ'' ಎಂಬ ಶಿಲಾಶಾಸನೋಕ್ತಿ[೧] ಯೇ ಸಾಕ್ಷಿ ಪಾತವಾಗಿದೆ ಎಂಬುವಕ್ಕೆ ಶಿವಯೋಗ ಸಮಾಧಿಸ್ಥರಾಗಿರುವ ಶ್ರೀ ಮಠದಲ್ಲಿ ಇಂದಿಗೂ ಕಿತ್ತಿಟ್ಟಿರುವ ನಟ್ಟಕಲ್ಲಿನ ೧೨ನೇ ಸಾಲನ್ನು ಗಮನಿಸಿ. ಗಣಸಹಸ್ರನಾಮಾವಳಿಯ ಯೋಗಾಚಾರ್ಯಗಣವರ್ಗದಲ್ಲಿ ಒಬ್ಬರ ಗಣನಾಮವು 'ಜಟಾಮಾಲಿ' (೬೩೬) ಎಂದಿರುವ ಅಂಕಿತವು ಯೋಗಾಚಾರ್ಯರ ಅನ್ವರ್ಥನಾಮವೋ ಎಂಬಂತೆ ಇದ್ದಲ್ಲಿ ಯೋಗಾಚಾರ್ಯರಿಗೂ ಜಟಾಧಾರಣೆಗೂ ಸಂಬಂಧವಿರುವುದರ ಸಾಧ್ಯತೆಯನ್ನು ಅಲ್ಲಗಳೆಯಲಾಗದು. ವಟಪುರದ ಸಿದ್ಧೇಶ್ವರನಾದ ಅನಾದಿ ಗಣ ಮರುಳಾರ್ಯನ ವಂಶಪರಂಪರಾನುಗತ ಪರಿವಿಡಿದ ರಾಜಗುರು ಅಪ್ಪಣಾರ್ಯರ ನಿಜಗರ್ಭಸಂಜನಿತರಾದ ಗೋಸಲದೇವರನ್ನು 'ಗುರು-ಯತಿ' ಎಂದು ತಾಮ್ರ ಶಾಸನಗಳಲ್ಲಿ ವರ್ಣಿಸಿರುವುದರಿಂದ ಯತೀಶ್ವರರು ಜಟಾಬಂಧವುಳ್ಳವರಾಗಿದ್ದುದು ಹರದನ ಹಳ್ಳಿಯ ದಿವ್ಯಲಿಂಗೇಶ್ವರ ದೇವಾಲಯದಲ್ಲಿ ಕೆತ್ತಿರುವ ಮೂರ್ತಿ ಶಿಲ್ಪಗಳಲ್ಲಿ ಮಾತ್ರವಲ್ಲದೆ ತೋಂಟದ ಸಿದ್ಧಲಿಂಗೇಶ್ವರರ ಚಿಟ್ಟಿಗ ದೇವರೇ ಮೊದಲಾದ ಶಿಷ್ಯರ ಎಂಟು ಜಡೆಯ ಬಗೆಯ ಹಿರಿಯರ ಪ್ರಸ್ತಾಪದಲ್ಲಿಯೂ ಸುವಿದಿತವಾಗಿದೆ. 'ಜಡೆಯ ಮಠ' ಗಳ ಅಸ್ತಿತ್ವವೂ ಜಟಾಬಂಧದ ಬಗೆಗೇ ಸಂಬಂಧ ಪಟ್ಟದ್ದೆಂಬುದರಲ್ಲಿ ಸಂಶಯವಿಲ್ಲ.

ವಟ (*m*ನ್ಯಗ್ರೋಧ ವೃಕ್ಷಾ) ಧಾಮನಾದ ಅನಾದಿಪರಶಿವನೇ ಈ ಆಜೀವಕರ ಧ್ಯಾನವಸ್ತುವಾದ ಪರಮ ಪರಂಜ್ಯೋತಿ ಎಂಬುದರ ಸ್ಪಷ್ಟ ಸೂಚನೆಯೋ ಎಂಬಂತೆ ಅವರಿಗೆ ಅಶೋಕ ಚಕ್ರವರ್ತಿ (ಕ್ರಿ.ಪೂ. ೨೩೨) ಯಿಂದ ಮಳೆಗಾಲದ ವಾಸಸ್ಥಾನವಾಗಿ ದಾನಮಾಡಿದ ಗುಹೆಯ ''(ನ್ಯಗ್ರೋಧ ವೃಕ್ಷ ಗುಹೆ'' ಎಂಬ ಹೆಸರೇ ತಿಳಿಸುತ್ತದೆ. ಅಶೋಕನ ಧರ್ಮ ಮಹಾಮಾತ್ಯರು 'ಸಂಘಗಳ, ಬ್ರಾಹ್ಮಣರ, ಆಜೀವಕರ, ನಿರ್ಗ್ರಂಥರ, ಇನ್ನೂ ಇತರ ಎಲ್ಲ

---

೧. ನೋ. ಇ.ಸಿ. ವಾಲ್ಯೂಂ XII ನಂ. ೪೯, ಕುಣಿಗಲ್ ತಾಲ್ಲೂಕು.

ಮತದವರ ಕಾರ್ಯಗಳನ್ನೂ ನೋಡಿಕೊಳ್ಳುವುದರಲ್ಲೂ ತೊಡಗಿದ್ದಾರೆ, ಎಂಬ ಬಂಡೆಗಲ್ಲ ಲೇಖದಿಂದ ಬೌದ್ಧ, ಜೈನ ಹಾಗೂ ಬ್ರಾಹ್ಮಣ ಧರ್ಮದಿಂದ ಭಿನ್ನವಾದ ಮತ ಅಜೀವಕ ಮತವೆಂಬುದು ಸುಸ್ಪಷ್ಟವಿದೆ. ಬುದ್ಧ (ಕ್ರಿ.ಪೂ. ೫೪೩-೪೮೩)ನ ಹಿರಿಯ ಸಮಕಾಲೀನರಾದ ಆರುಮಂದಿ ಹಿರಿಯರಲ್ಲಿ[೧] ನಿರ್ಗ್ರಂಥ ಜ್ಞಾತಪುತ್ರನ ಎಂದರೆ ಮಹಾವೀರನ ಹಾಗೆ ಮಸ್ಕರಿ (mಜ್ಞಾನಿ)[೨] ಗೋಸಾಲನೂ ಒಬ್ಬನಷ್ಟೆ. ಆ ಆರು ಜ್ಞಾನಿಗಳಾದ ಹಿರಿಯರನ್ನು ಕುರಿತು: "ಸಂಘಿನೋ ಗಣಿನೊ ಗಣಾಚಾರಿಯಾ ಞಾತಾ ಯಸಸ್ಸಿನೊ।ತಿತ್ಥಕರಾ ಸಾಧುಸಮ್ಮತಾ ಬಹುಜನಸ್ಸ ಸೆಯ್ಯಥೀದಂ" ಎಂದು ವರ್ಣಿಸಲಾಗಿದೆ. ಸಂಘದಿಂದ ಒಡಗೂಡಿದವರೂ, ಗಣಂಗಳುಳ್ಳವರೂ, ಗಣಾಚಾರ್ಯರೂ ಎಂದರೆ ಗಣಂಗಳಿಗೆ ಆಚಾರವನ್ನು ಕಲಿಸುವವರೂ, ಲೋಕ ವಿಜ್ಞಾತರೂ, ಕೀರ್ತಿಶಾಲಿಗಳೂ ತೀರ್ಥಂಕರರೂ, ಸಾಧುಗಳಿಂದು ಬಹುಜನರಿಂದ ಸಮ್ಮತಿಸಲ್ಪಟ್ಟವರೂ ಆಗಿದ್ದ 'ಪೂರಾಣ ಕಸ್ಸಪ'ನಿಂದ ನಾತಪುತ್ರ ಪರ್ಯಂತ ಆರು ಹಿರಿಯರಲ್ಲಿ- ಮಸ್ಕರಿ ಗೋಸಾಲನೂ ಒಬ್ಬನಾಗಿದ್ದುದರಿಂದ ಆತನು ವಟ (mಶಿವ) ಮತದ ಗಣಾಚಾರ್ಯನೆಂಬುದರ ಸ್ಪಷ್ಟ ಸೂಚನೆಯಿರುವುದನ್ನು ಗುರುತಿಸಬಹುದಾಗಿದೆ. ನಿರ್ವಾಣನಾಯಕ ಮಕ್ಖಲಿ ಗೋಸಾಲನ ಅನುಯಾಯಿಗಳಾದ ಆಜೀವಕರನ್ನು ಬುದ್ಧಘೋಷನು 'ಮನೋರಥ ಪೂರಣಿ'ಯಲ್ಲಿ 'ಬೆತ್ತಲೆ ಪರಿವ್ರಾಜಕರೆಂದು ಹೇಳಿದ್ದಾನೆ.

ಸಹಸ್ರದಳದಲ್ಲಿ ಚಂದ್ರಸೂರ್ಯಾಗ್ನಿ ಮಂಡಲತ್ರಯದಿಂದ ಅಲಂಕೃತವಾದ ಪರಬಿಂದು ರೂಪ ನಿರ್ವಾಣಶಕ್ತಿಯ ಮಧ್ಯಶೂನ್ಯದಲ್ಲಿ ಮಾಯಾಮಲರಹಿತವಾದ ಶಿವಪದ ಇಲ್ಲವೆ ಬ್ರಹ್ಮಸ್ಥಾನವು ಯೋಗಿಗಮ್ಯವು. ಸಿದ್ಧಿಕಾರಣವಾದ ಈ ನಿರ್ಗಣ ಬಿಂದುವನ್ನು ಕೆಲವರು ಬ್ರಹ್ಮವೆಂದೂ, ಕೆಲವರು ವಿಷ್ಣುವೆಂದು, ಕೆಲವರು ರುದ್ರನೆಂದೂ ಕರೆದಿರುವರು. ಮಹಾಪೂರ್ಣ, ಏಕೋದೇವ, ನಿರಂಜನ, ಚಣಕಾಕಾರರೂಪನಾದ ಆತ್ಮಶಕ್ತಿಯುತ ದೇವನೆಂದೂ ಹೇಳುವರು. ಈ ನಿರ್ಗುಣ ಬಿಂದುವಿನ ಕೇಶಾಗ್ರಕೋಟಿಭಾಗದಲ್ಲಿ ಒಂದು ಭಾಗವಾದ ಸೂಕ್ಷ್ಮ ತೇಜೋಂಶವು ನಿರ್ವಾಣಶಕ್ತಿ ಮಧ್ಯದಲ್ಲಿ ಗೂಢಾತ್ ಗೂಢತಮವಾಗಿ ಅತಿಗುಪ್ತವಾಗಿರುವುದರಿಂದಲೇ ಶೂನ್ಯವೆಂದೆನಿಸಿದುದು. ಪರಮ ಕುಂಡಲಿಯಾದ ಈ ಪರಬಿಂದು ಸೃಷ್ಟಿ ಸ್ಥಿತಿಲಯಾತ್ಮಕವು. ಸರ್ವಕಾರಣವಾಗಿ ಸತ್ತ್ವಾಣರೂಪವೂ ಸಕಲ ತತ್ತ್ವಗಳ ಉತ್ಪತ್ತಿಗೆ ಆಕರವೂ ಅದುದಾಗಿ ಉಕ್ತವಾಗಿದೆ., ಆಜೀವಕರ ಬತ್ತಲೆಯ ಸಂಪ್ರದಾಯವೂ ಶೂನ್ಯ (mಶಿವಶಕ್ತ್ಯಾತ್ಮಕ ಬಿಂದು) ಧ್ಯಾನಯೋಗ ಪದ್ಧತಿಯೂ ನಿರ್ವಾಣ ಸ್ವಾಮಿವೇಸರ ಬತ್ತಲೆ ಗುರುಗಳು ಕೋರುವ ಆರಣ್ಯ ಭಿಕ್ಷೆ ಇಲ್ಲವೆ ವನಸ್ಪತಿ ಭೋಜನಾಚರಣೆಗೆ ಮೂಲ ಪ್ರೇರಣೆಯುಳ್ಳಿತ್ತ ಅಧ್ಯಾತ್ಮ ಸಾಧನೆಯ ಬೀಜಾಂಕುರವೆಂದು ತಿಳಿಯಬಹುದು.

೧. 'ಆರುಹಿರಿಯರು' ಎಂಬ ಪದ ಪ್ರಯೋಗಕ್ಕೆ ಶರಣರ ವಚನಗಳನ್ನು ನೋಡಿ.
೨. ಮಸ್ಕರಿ ಗೋಪಾಲನೂ ಒಬ್ಬನಾಗಿದ್ದುದರಿಂದ

ಪ್ರಾಚೀನ ಭಾರತದ ಐತಿಹಾಸಿಕ ಮಹತ್ವವನ್ನು ಹೊಂದಿ ಪೂಜ್ಯವಾದ ಮತವೊಂದನ್ನು ಸ್ಥಾಪಿಸಿದ ಮಹಾಜ್ಞಾನಿಯೂ ಆ ಜೀವ್ರೋಪದೇಶಕನೂ[೧] ನಿರ್ವಾಣ ನಾಯಕನೂ, ಶೂನ್ಯ ತತ್ತ್ವ ಪ್ರತಿಪಾದಕನೂ ಲೋಕಕ್ಕೆ ಮರುಳಾಗಿ ತೋರಿದವನೂ ಆದ ಗುರು ಗೋಸಾಲನ ಅಂಕಿತವೆ ಜನಬಳಕೆಯ ಮಾತಿನಲ್ಲಿ 'ಗೋಸಲ' ಎಂದಾಗಿ ಜೀವನ್ಮುಕ್ತವೃಕ್ಷಸ್ಥಲ ಮಹಾತ್ಮ್ಯ ಸೂಚಕವೂ ಗೋಸಲ ಅರ್ಥಾತ್ ಸ್ಥಿರಗ ಅಥವಾ ಹರದ ಚರಚಕ್ರವರ್ತಿಗಳ ಎಂದರೆ ವಾಣಿಜಸ್ವಾಮಿಗಳ ಗುರುವಿನ ನಾಮನಿರ್ದೇಶಕವೂ ಆದ ಪದ ಪ್ರಯೋಗವೆಂದು ಭಾವಿಸಬಹುದಾಗಿದೆ.

'ಗೋಸಲ ಸಿದ್ಧೇಶ' (ನೋ ತ್ರಿವಿಧಿ ೧೨) ನನ್ನೇ ತೋಂಟದ ಸಿದ್ಧೇಶ' (ತ್ರಿವಿಧಿ ೨೮) ನೆಂದು ಸಿದ್ಧೇಶ್ವರ ತ್ರಿವಿಧಿಯಲ್ಲಿ ಸ್ತುತಿಸಿದ ಅದರ ಕರ್ತೃ 'ನಂದಿ' ಕವಿಯು 'ಗೋಸಲ' ಶಬ್ದಕ್ಕೆ ತೋಂಟವೆಂದೇ ಅರ್ಥೈಸಿರುವುದು ಸುಸ್ಪಷ್ಟವಾಗಿದೆ.

ಗೋಗೇಶ್ವರ - 'ಗೋ' ಪ್ರಿಯನಾದ, ವಟಧಾಮನಾದ ಈಶ್ವರನೇ ತನ್ನ ಇಷ್ಟಲಿಂಗವಾದ ಪ್ರಭುದೇವರು ತನುವ ತೋಂಟವ ಮಾಡಿ ಬ್ರಹ್ಮಬೀಜವ ಬಿತ್ತಿ ಸಲಹಿದ ಬಗೆಯಿದು :

"ತನುವ ತೋಟವ ಮಾಡಿ, ಮನವ ಗುದ್ದಲಿ ಮಾಡಿ ಅಗೆದು ಕಳೆದೆನಯ್ಯ ಭ್ರಾಂತಿನ ಬೇರ, ಒಡೆದು ಸಂಸಾರದ ಹೆಂಟೆಯ, ಬಗಿದು ಬಿತ್ತಿದೆನಯ್ಯಾ ಬ್ರಹ್ಮಬೀಜವ, ಅಖಂಡ ಮಂಡಲವೆಂಬ ಬಾವಿ, ಪವನವೇ ಏಾಟಳ, ಸುಷುಮ್ನನಾಳದಿಂದವೆ ಉದಕವ ತಿದ್ದಿ, ಬಸವಗಳೈವರು ಹಸಗೆಡಿಸಿಹರೆಂದು ಸಮತೆ ಸೈರಣೆಯೆಂಬ ಬೇಲಿಯನಿಕ್ಕಿ ಆವಾಗಳೂ ಈ ತೋಂಟದೊಳಗೆ ಜಾಗರವಿದ್ದು ಈ ಸಸಿಯ ಸಲಹಿದೆ ಕಾಣಾ ಗೋಗೇಶ್ವರಾ" ಹೀಗೆ 'ಗೋಸಂಸ್ಥಿತನಾಗಿ ಗೋಸಲೇಶನಾದ ಆ ಗುರೂತ್ತಮನು 'ಚಕ್ಷುರಗ್ರೇಸ್ಥಿತಃ' ಆದ ಪ್ರಣವ ಪ್ರಕಾಶನು ಪರ-ಶಿವಜ್ಯೋತಿ: ಸ್ವರೂಪನು, ಶೂನ್ಯಲಿಂಗಧ್ಯಾನಯೋಗಿಯು.

'ಅಂಗ' ಪದವಾಚ್ಯನಾದ ಆತ್ಮ, ಆ ಆತ್ಮನ ಶಕ್ತಿಯೇ ಬೀಜರೂಪವಾದ ಭಕ್ತಿಯನ್ನೊಳಗೊಂಡ ಕ್ಷೇತ್ರ. ಆ ಭಕ್ತಿಬೀಜವೆ ಅಂಕುರಿಸಿ, ಅಂಗವಿಸಿ ಅಂಗ-ಲಿಂಗಸಮರಸಾನಂದ ರೂಪ ಫಲವನ್ನು ನೀಡುವ ವೃಕ್ಷ, ಬೀಜಕ್ಕೂ, ಬೀಜಿಯಾದ ವೃಕ್ಷಕ್ಕೂ, ಬೀಜದ ಉತ್ಪತ್ತಿಗೆ ಸ್ಥಾನವಾದ ಕ್ಷೇತ್ರಕ್ಕೂ ವಿಯೋಗವಾಗದ ಸಂಯೋಗದಿಂದ ಕೂಡಿದ ಗೋಸ್ಥಲ ಇಲ್ಲವೆ ಗೋಸಲಗುರುವಿನ ಜೀವನ್ಮುಕ್ತ ಸ್ಥಿತಿಯಲ್ಲಿ ಕ್ಷೇತ್ರ, ಬೀಜ, ಬೀಜಿತ್ರಯಾತ್ಮವು ಏಕಾತ್ಮವಾದುದೇ ಸಚ್ಚಿದಾನಂದ ನಿರಂಜನ ಪರವಸ್ತು. ಶಿವಾನುಭವ ಸೂತ್ರದಲ್ಲಿ ಮೊಗ್ಗೆಯ ಮಾಯಿದೇವರು ತ್ರ್ಯಾತ್ಮಕವಾದ ಏಕದ ಅವಿರಳವೂ ಅಚಲವೂ ಆದ ಅಖಂಡಿತ ಸ್ವರೂಪವನ್ನು ನಿರೂಪಿಸಿರುವ ಬಗೆಯಿದು :

---

೧. "ಮುರತೀತ ಮುರಃ । ಮುರಶ್ಚರ್ಮವೇಷ್ಟನಂ ತಿದೇಷಾಂ ಅಸ್ತೀ ।
ಮುರಿಣಶ್ಚರ್ಮ ಶರೀರಿಣಃ । ಚರಾಚರ ಜೀವಿನಸ್ತಾನ್ ಗಚ್ಛ ತೀತಿ ಮುರಿಗ್ಧಾ ।"

ಏವಂ ಲಿಂಗಾಂಗಸಂಯೋಗವಿಧಿನಾ ಸ್ವಾತ್ಮನಿ ಸ್ಥಿತಾ।
ಬೀಜರೂಪಾ ಪರಾಭಕ್ತಿಃ ಪ್ರರೋಹತಿ ಸಮಂತತಃ॥
ಆತ್ಮಾ ಕ್ಷೇತ್ರಂ ಭವೇದ್ಭಕ್ತಿರ್ಬೀಜಂ ಬೀಜೀ ಮಹೇಶ್ವರಃ
ತಸ್ಮಾತ್ ಕ್ಷೇತ್ರಸ್ಯ ಬೀಜಸ್ಯ ಬೀಜಿನಶ್ಚ ಕದಾಚನ
ವಿಯೋಗೋನೇಕ್ಷ್ಯತೇ ಕ್ವಾಪಿ ಸದಾ ಸಂಯೋಗ ಏ ವಹಿ॥

ಮಹಾನುಭಾವ ಜಂಗಮನ ಈ ತ್ರಿವಿಧಾತ್ಮಸ್ವರೂಪವನ್ನು ಭಗವಾನ್ ತೋಂಟದ ಸಿದ್ಧಲಿಂಗೇಶ್ವರರು ನಾ- ನೀನೆನಲಿಲ್ಲದ ಆ ಪರಾತ್ಪರ ಸ್ಥಿತಿಯನ್ನು ಹೀಗೆ ಮನಗಾಣಿಸಿದ್ದಾರೆ:- ಮನ ಘನವಸ್ತುವಾದ ಬಳಿಕ, ಮನ-ವಚನ-ಕಾಯವೆಂಬ ತ್ರಿಕರಣ ಶುದ್ಧಾತ್ಮನೆಂಬೆ, ನಿತ್ಯಮುಕ್ತನೆಂಬೆ, ನಿರಾಲಂಬಿಯೆಂಬೆ. ಆತನ ತನು ಶುದ್ಧವಾಗಿ ತನುವೇ ಗುರು, ಆತನ ಮನ ಶುದ್ಧವಾಗಿ ಮನವೇ ಲಿಂಗ, ಆತನ ಭಾವ ಶುದ್ಧವಾಗಿ ಭಾವವೇ ಮಹಾನುಭಾವ ಚರಲಿಂಗ ನೋಡಾ ! ಇಂತೀ ಜ್ಞಾನಗುರು, ಅರುಹೆಂಬ ಶಿವಲಿಂಗ, ಮಹಾನುಭಾವವೆಂಬ ಜಂಗಮ. ಇಂತೀ ತ್ರಿವಿಧವು ತನ್ನ ತ್ರಿವಿಧಾತ್ಮನೋಡಾ ! ಜ್ಞಾನಗುರುವೆಂದಡೆ ತನ್ನ ಜೀವಾತ್ಮ, ಅರುಹೆಂಬ ಶಿವಲಿಂಗವೆಂದಡೆ ತನ್ನ ಅಂತರಾತ್ಮ, ಮಹಾನುಭಾವ ಜಂಗಮವೆಂದಡೆ ತನ್ನ ಪರಮಾತ್ಮ. ಇಂತೀ ತ್ರಯಾತ್ಮ ಏಕಾತ್ಮವಾದಡೆ ಸಚ್ಚಿದಾನಂದ ನಿರಂಜನ ಪರಾತ್ಪರ ವಸ್ತು ನೀನೆ. ಅಲ್ಲಿ ನಾ-ನೀನೆನಲಿಲ್ಲ, ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ.

ಶೂನ್ಯಲಿಂಗ ಹಾಗೂ ತ್ರೈವಿಧ[1] ಜಂಗಮ ಸ್ವರೂಪ, ಬ್ರಹ್ಮಬೀಜಾಂಕುರದ ಸಸಿಯನ್ನು ಕುರಿತ ಕೆಲವು ವಚನ ಹಾಗೂ ವಚನ ಭಾಗಗಳನ್ನು ಉದ್ಧರಿಸುವ ಮೂಲಕ ಈ ಲೇಖನವನ್ನು ಪೂರ್ಣಗೊಳಿಸಬಹುದಾಗಿದೆ.

## ತಾನೇ ಘನಶೂನ್ಯ

'ಅನಾದಿ ತ್ರಿತತ್ತ್ವಂಗಳು ತಾನಲ್ಲ' 'ಆದಿತ್ರಿತತ್ತ್ವಂಗಳು ತಾನಲ್ಲ' 'ಗಣಾಧೀಶ್ವರರೆಂಬ ಮಹಾಗಣಂಗಳು ತಾನಲ್ಲ' 'ವಿರಾಟ್ ಪುರುಷ', ಮಹಾಪುರುಷ ತಾನಲ್ಲ' 'ಪತಿ ಪಶು ಪಾಶವೆಂಬ ಸಿದ್ಧಾಂತಗಳು ತಾನಲ್ಲ.' 'ತ್ವಂಪದ, ತತ್ ಪದ, ಅಸಿಪದವೆಂಬ ವೇದಾಂತ ಪಾದತ್ರಯಂಗಳು ತಾನಲ್ಲ' 'ಪಂಚಭೌತಿಕದ ಪಂಚವಿಂಶತಿ ಗುಣಂಗಳಿಂದಾದ ದೇಹವು ತಾನಲ್ಲ', 'ಶಿವಜ್ಞಾನವೇ ಶೃಂಗಾರವಾದ ತನ್ನ ತಾನರಿದು, ಅಂತಃಶೂನ್ಯ, ಸರ್ವಶೂನ್ಯ, ನಿರಾಕಾರವಾಗಿಹ, ತನ್ನ ಅಂಗ, ಪ್ರತ್ಯಂಗ ಸ್ವರೂಪ ಭಾವಾಂಗವ ತಿಳಿದ ಮಹಾ ಶರಣನು ತಾನೇ ಗುರು, ತಾನೇ ಲಿಂಗ, ತಾನೇ ಜಂಗಮ, ತಾನೇ ಪರಮ ಪಾದೋದಕ ಪ್ರಸಾದ ನೋಡಾ, ತಾನೇ ನಾದ ಬಿಂದು ಕಳಾತೀತನು. ತಾನೇ ಶೂನ್ಯ, ತಾನೇ ಘನ ಶೂನ್ಯ, ಮಹಾ ಘನ ಶೂನ್ಯ ನೋಡಾ,

---

೧. ಸ್ವಯಂ, ಚರ, ಪರ ಜಂಗಮ

ತಾನೇ ಬಯಲು, ನಿರ್ಬಯಲು ತಾನೇ ನಿರುಪಮ ನಿರಾಕಾರ, ತಾನೇ ನಿರಾಳ ನಿರಾಲಂಬ ನೋಡಾ !"

- ಸರ್ಪಭೂಷಣ ಶಿವಯೋಗಿ

## ಮಹಾ ಘನಶೂನ್ಯಬ್ರಹ್ಮ

ಸಕಲನಾಗಬಲ್ಲ, ನಿಷ್ಕಲನಾಗಬಲ್ಲ, ಸಕಲ ನಿಷ್ಕಲಾತೀತನಾಗಿ, ಏನೂ ಏನೂ ಇಲ್ಲದ ಮಹಾ ಘನ ಶೂನ್ಯ ಬ್ರಹ್ಮವಾಗಿ ಇರಬಲ್ಲನಯ್ಯಾ, ನಮ್ಮ ಗುಹೇಶ್ವರಲಿಂಗವು -

ಪ್ರಭುದೇವರು - (ಸೃಷ್ಟಿಯ ವಚನಭಾಗ)

## ಮೂರೊಂದಾದಡೆ

ಧ್ಯಾತೃ, ಧ್ಯಾನ, ಧ್ಯೇಯ ಮೂರೊಂದಾದಡೆ ಜೀವ ಪರಮರೈಕ್ಯವಯ್ಯಾ. ಆ ಜೀವ ಪರಮರೈಕ್ಯವಾದುದೇ ಮನಲೀಯ. ಮನಲೀಯವಾದ ಬಳಿಕ ಇನ್ನು ಧ್ಯಾನಿಸಲುಂಟೆ ? ಅರಿಯಲುಂಟೆ ?ಹೇಳು, ಬಾಹ್ಯಾಭ್ಯಂತರ ಮನ ಇಂದ್ರಿಯವಿಕಾರವಳಿದು, ಅವಿದ್ಯಾವಾಸನೆ - ಯಡಗಿ ಅಹಂಕಾರವುಡಗಿದ ಜೀವನ್ಮುಕ್ತಂಗೆ, ಸರ್ವಶೂನ್ಯವಾಗಿ ಸಮುದ್ರ ಮಧ್ಯದ ತುಂಬಿದ ಕೊಡದಂತೆ ಇದ್ದನಯ್ಯಾ ನಿಜಗುರು ಸ್ವತಂತ್ರ್ಯ ಸಿದ್ಧಲಿಂಗೇಶ್ವರಾ, ನಿಮ್ಮ ಶರಣ.

ಸ್ವ.ಸಿ.ವ. ೩೭೮

## ಪರಮ ನಿರ್ವಾಣ

ಸರ್ವಜ್ಞತ್ವ, ನಿತ್ಯತೃಪ್ತಿ, ಅನಾದಿ ಪ್ರಬೋಧ, ಸ್ವತಂತ್ರ, ಸಿದ್ಧಶಕ್ತಿಯೆಂಬ ಷಡ್ಗುಣೈಶ್ವರ್ಯ ತನಗೂ ಶಿವಂಗೂ ಸಮವಾಗಿ ಶಿವ, ಶಿವನೊಳಗೆ ತಾನು, ತನ್ನೊಳಗೆ ಶಿವನು ಅಡಗಿ ಸಮರಸವಾದುದೆ ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರನಲ್ಲಿ ಪರಮನಿರ್ವಾಣವೆನಿಸಿಸುವುದು.

- ಸ್ವತಂತ್ರ ಸಿದ್ಧಲಿಂಗೇಶ್ವರ ವಚನ ೪೮೯

## ಮೂರ್ತಿಗೌಪ್ಯ : ಸಪ್ತತನುಗಳಲ್ಲಿ ಒಂದಾದ ಶೂನ್ಯತನು.

"ತನುತ್ರಯಗಳೆಂಬವ ಮರೆಗೊಂಡುಯೆನ್ನ ಗುಣಮೂಱಱೊಳಾಡಿಪ ನಿನ್ನ ಮೂರ್ತಿಗೌಪ್ಯವ ತಿಳಿಯಲ್ ವಚೋಮನಕಭೇದ್ಯಕಣಾ ಗುರುಶಂಕರೇಶ್ವರಾ ।

ಗು. ಶಂ. ಶತಕ ೨೭

## ಏಕಮೂರ್ತಿಸ್ತ್ರಯೋ ಭಾಗಾ

ಒಂದಱೊಳಂ ತ್ರಯ, ತ್ರಯ ತಾನೊಂದೇರೊ
ಸಂದೇಹಿಸಿ ಬೇಱೆನ್ನದಿರೊಂದೇ

ದೀಕ್ಷಾ ಬೋಧ - ೩-೧೨೧ ಪು. ೯೭

ಅಂಗದೊಳಗಣ ಲಿಂಗ, ಲಿಂಗದೊಳಗಣ ಅಂಗ, ಅಂಗ-ಲಿಂಗ-ಸಂಗ ಹಿಂಗದಂತೆ ಮಾಡಿಕೊಳ್ಳಯ್ಯಾ; ದೇಹವಿದ್ದಲ್ಲಿಯೆ ದೇವರ ಧರಿಸಿಕೊಳ್ಳಿರಯ್ಯಾ ; ಬಲ್ಲವರು ; ಲಿಂಗದೇವರ ಹಿಡಿದು, ಪೂಜಿಸಿ ಪ್ರಸಾದವ ಕೊಳ್ಳಿರೋ, ಬಲ್ಲವರು; ತಾ ಸತ್ತಬಳಿಕ ದೇವರ ಕೂಡಿದೆನೆಂದರೆ ಗೋಗೇಶರ್ವ ಲಿಂಗಕ್ಕೆ ಬೇಱೊಂದು ವಂಟೆ, ಹೇಳಿರೈ ಮರುಳುಗಳಿರಾ !

**ಓಲೆ : ೪೮ ಹಲಗೆಯ ದೇವರ ಶೂನ್ಯ ಸಂಪಾದನೆ**

ಶೂನ್ಯಲಿಂಗಾಂಗ ಸಮರಸ ಸಂಪಾದನೆಯಲ್ಲಿ ಬರುವ ಜಗದಾರಾಧ್ಯರೂ ಶೂನ್ಯಸಿಂಹಾಸನಾಧೀಶ್ವರರೂ ಆದ ಪ್ರಭುದೇವರ ಈ ವಚನಾನುಭಾವಕ್ಕೂ 'ಜ್ಞಾನದಿಂದ ಮೋಕ್ಷವಾಗುವುದಿಲ್ಲ. 'ದೇವ ಅಥವಾ ಈಶ್ವರನು ಇದ್ದಾನೋ, ಇಲ್ಲವ್ರೋ ! ಆದಕ್ಕಾಗಿ ಸ್ವೇಚ್ಛಾಪೂರ್ವಕ ಶೂನ್ಯಧ್ಯಾನವನ್ನು ಮಾಡಲಿಕ್ಕೇಬೇಕು - ಎಂಬ ಕ್ರಿ.ಪೂರ್ವಕ್ಕೆ ಮುನ್ನ ಆರು ಶತಮಾನಗಳ ಹಿಂದೆ ಜನಮನವನ್ನು ಸೂರೆಗೊಂಡ ಗೋಸಾಲನ ಜೀವ್ರೋಪದೇಶಕ ಶೂನ್ಯ ತತ್ತ್ವದ ವಿಚಾರ ಸರಣಿಗೂ ಒಂದು ಬಲವಾದ ಕುಣಿಕೆ ಬಿದ್ದಿರುವಂತೆ ಕಂಡು ಬಂದರೂ ಈ ಎರಡೂ ತತ್ತ್ವ ದೃಷ್ಟಿಗಳು ಒಂದೇ ಸ್ವರೂಪವುಳ್ಳದ್ದೆಂದೂ ಸರ್ವಸಮವೆಂದೂ ಹೇಗೆ ತಾನೆ ತುಲನಾತ್ಮಕವಾಗಿ ಪರಿಶೀಲಿಸದೆ ಹೇಳಲಾದೀತು ? ಆ ಶೂನ್ಯಧ್ಯಾನ ಖಂಡನೆಯನ್ನು ಶೈವಾಚಾರ್ಯರು ಮಾಡಿದ್ದಲ್ಲಿ ಗೋಸಾಲಪ್ರತಿಪಾದಿತ ಶೂನ್ಯತತ್ತ್ವದ ಮೂಲ ಸ್ವರೂಪ, ಅದರ ಸಮಗ್ರ ವಿಕಾಸದ ಹಾಗೂ ವ್ಯಾಪ್ತಿಯ ಲುಪ್ತವಾದ ಮಜಲುಗಳ ವಿವಿಧ ಸ್ತರಗಳನ್ನು ಕಂಡುಹಿಡಿಯುವ ಪ್ರಯತ್ನ ಸಂಶೋಧಕರ ಪಾಲಿಗೆ ಒಂದು ಸವಾಲಾಗಿದೆ ಎಂದುಹೇಳಿ 'ಗೋಸಲ' ಶಬ್ದಕಲ್ಪ ದ್ರುಮದ ಬೇರನ್ನು ಬೆದಕುವ ಸಾಹಸವನ್ನು ಸದ್ಯಕ್ಕೆ ಇಲ್ಲಿಗೆ ಸಮಾಪ್ತಿ ಗೊಳಿಸಬಹುದಾಗಿದೆ.

ಇತಿ ಓಂತತ್ ಸತ್

# ಬಸವಣ್ಣನವರ ಒಂದು ಹೊಸ ವಚನ

ಪ್ರೊ. ಚ. ಸುಂದರೇಶನ್

---

ಇಂದು ಪ್ರಸ್ತಾವಿಸಲೆಳಸಿರುವ ವಿಷಯ, ಸಂಶೋಧನೆಯ ಕಾರ್ಯದಲ್ಲಿ ತತ್ಪರನಾಗಿದ್ದಾಗ ತನ್ಮಯಗೊಳಿಸಿದ ಬಸವಣ್ಣನವರ ಒಂದು ಹೊಸವಚನ. ಈ ಬಗೆಗೆ ತೀವ್ರ ಆಸಕ್ತಿ, ಆನಂದ ನನಗೆ ಏಕೆ ಉಂಟಾಯಿತು ? ಈ ಒಂದು ವಚನದ ಬಗೆಗೆ ಹೆಮ್ಮೆ ತಾಳಬೇಕಾದ ಅಗ್ಗಳಿಕೆಯ ಅಂಶಗಳು ಯಾವುವು ?- ಎಂಬುದನ್ನು ಸಮಚಿತ್ತರ ಲಕ್ಷ್ಯಕ್ಕೆ ತಂದು, ಈ ಹೊಸ ವಚನದ ಬಗೆಗೆ ಹೊಂಬೆಳಗನ್ನು ಹೊಮ್ಮಿಸುವುದು ಇಂದಿನ ನನ್ನ ಉದ್ದೇಶವಾಗಿದೆ. ಈವರೆಗೂ ಯಾರಿಗೂ ದೊರೆಯದ ಬಸವಣ್ಣನವರ ಒಂದು ಹೊಸ ವಚನವನ್ನು ಸಾರಸ್ವತ - ಧಾರ್ಮಿಕ ಪ್ರಪಂಚಕ್ಕೆ ಸಮರ್ಪಿಸುವ ಸೌಭಾಗ್ಯ ನನ್ನ ಪಾಲಿಗೆ ದೊರೆತದ್ದು ಅದೂ ಒಂದು ಸುಕೃತ ವಿಶೇಷವೇ !

ಪುರಾತನರ ಹೆಚ್ಚಿನ ವಚನ ಒಂದೇ ಒಂದು ದೊರಕಿದರೂ ಅತಿಶಯವಾದ ಸಂತೋಷ ಪ್ರಾಪ್ತವಾಗುವುದು ಸಹಜ ! ಸರ್ವಪುರಾತನರ ವಚನಗಳ ಕಟ್ಟಿನಲ್ಲಿ 'ಗುರುಸಿದ್ಧಮಲ್ಲು' - ಎಂಬ ಅಂಕಿತವಿರುವ ಪಂಡಿತಾರಾಧ್ಯರ ಒಂದೇ ಒಂದು ವಚನ ಲಭ್ಯವಾಗಿರುವುದು ಈಗಾಗಲೇ ಸಂಶೋಧಕ ಸಾಹಿತಿಗಳಿಗೆ ತಿಳಿದಿರುವ ಸಂಗತಿಯಾಗಿದೆ. ಆ ವಚನ ಅಷ್ಟೊಂದು ಮಹತ್ತ್ವದ ಭಾವಗಳನ್ನೇನೂ ಬಿಂಬಿಸುತ್ತಿಲ್ಲ ಎಂದು ಭಾಸವಾದರೂ ಕಾಲಮಾನದ ದೃಷ್ಟಿಯಿಂದ ಹಾಗೂ ಗುರುಪೀಠದ ಆಚಾರ್ಯರೊಬ್ಬರಿಂದ ವಚನ ರಚನೆ ಪ್ರಾರಂಭವಾಗಿರುವುದು ಅತ್ಯಂತ ಮನನೀಯ ಸಂಗತಿ. ಆದ್ಯವಚನಕಾರ ೧೧ನೇ ಶತಮಾನದ ದಾಸಮಯ್ಯನವರು ಎಂಬ ಭಾವನೆಯನ್ನು ಬಯಲುಮಾಡಿ ೧೦ನೇ ಶತಮಾನದಲ್ಲಿಯೇ ಪಂಡಿತಾರಾಧ್ಯರಿಂದ ವಚನ ಮೊದಲಾಗಿದೆ

ಎಂಬ ಸತ್ಯ ಈಗಾಗಲೇ ಇದರಿಂದ ಹೊರಪಟ್ಟಿವೆ. ಕ್ರಿ. ಶ. ಎಂಟನೆಯ ಶತಮಾನದಲ್ಲಿದ್ದ ಇಮ್ಮಡಿ ಪಂಡಿತಾರಾಧ್ಯರು ಈ ವಚನದ ಕರ್ತೃ ಎಂಬ ಅಭಿಪ್ರಾಯವೂ ಇದೆ.[೧] ಅದೇನೇ ಇರಲಿ, ೧೧ನೇ ಶತಮಾನದ ದಾಸಮಯ್ಯನವರಿಗಿಂತ ಪೂರ್ವದವರ ಒಂದು ವಚನ[೨] ಲಭ್ಯವಾಗಿರುವುದು ಪುಣ್ಯವಿಶೇಷವೆಂದೇ ಭಾವಿಸಬೇಕು.

೧೨ನೇ ಶತಮಾನದಲ್ಲಂತೂ ವಚನಸಾಹಿತ್ಯ ಅತ್ಯಂತ ಸಮೃದ್ಧವಾಗಿದೆ. ಪ್ರಭುದೇವರೊಬ್ಬರೇ 'ಎರಡೆಂಬತ್ತು ಕೋಟಿ ವಚನವನ್ನು ಹಾಡಿರುವರೆಂಬುದಕ್ಕೆ ಅವರ ವಚನದಲ್ಲಿಯೇ ನಿದರ್ಶನವಿದೆ.[೩] 'ಅರವತ್ತೆಂಟು ಸಹಸ್ರವಚನಗಳ ಹಾಡಿ ಹಾಡಿ ಸೋತಿತ್ತೆನ್ನ ಮನ ನೋಡಯ್ಯ ! ಎಂದಿದ್ದಾರೆ ಸಿದ್ಧರಾಮೇಶ್ವರರು.[೪]

**ಪಾಠಾಂತರ :**

ಶಿವಯೋಗರಹಸ್ಯವು ೧೯೦೮. ವೇ. ಸಂ. ಶಿವಪ್ಪಶಾಸ್ತ್ರಿ, ಬೆಂಗಳೂರು

॥ ಬಂಕಣ್ಣಗಳ ವಚನ ॥ ತಾತ್ಪರ್ಯವು ಈ ಒಂದೇ ನಿಕ್ಷೇಪವಾಗಿದ್ದೀತು ಶರಣಂಗಲ್ಲದೆ ೫ ಅರಿಯಬಾರದಯ್ಯ ಜಂಗಮಕ್ಕೆ ಜಂಗಮವುಂಟು ಆ ಶರಣಂಗೆ ಇಂತೀ ನಷ್ಟವಾದ ಶರಣಂಗೆ ತಾತ್ಸ್ವರೂಪವ ತಿಳಿವಲ್ಲಿ ಅದೆಂತೆಂದೆಡೆ ? ಪೂರ್ವವಚನಾರ್ಥದಲ್ಲಿ ಇದ್ದಿತ್ತಾದ ಕಾರಣ ಈ

---

೧. ಹನ್ನೆರಡನೆಯ ಶತಮಾನದ ಪೂರ್ವಯುಗ : ಶ್ರೀಜಚನಿ ವೀರಶೈವ ಸಾಹಿತ್ಯ ಸಮೀಕ್ಷೆ ಪುಟ ಆರು.

೨. "ಇಲ್ಲದ ಕುತ್ತವ ಕೊಂಡ ಬಲ್ಲವರ ಬಾಯ ಹೋಗ ಹೋದರೆ
ಆ ಬಲ್ಲ ಬಲ್ಲವರೆಲ್ಲಾ ಆ ಬಲ್ಲಲ್ಲಿಯೆ ಅಲ್ಲತ್ತಗೊಳುತಿದ್ದರು.
ಇದೆಲ್ಲಿಯ ಕುತ್ತು ಎಂದು ವಿಚಾರಿಸಲು
ಅದಲ್ಲೇ ಬಯಲಾಗಿತ್ತು ಗುರುಸಿದ್ಧಮಲ್ಲು"

- ಸರ್ವಪುರಾತನರ ವಚನ ಪುಟ ॥ ೧೭೫ ॥

೩. "ಎರಡೆಂಬತ್ತು ಕೋಟಿ ವಚನವ ಹಾಡಿ
ಹಲವ ಹಂಬಲಿಸಿತ್ತೆನ್ನ ಮನವು
ಮನ ಘನವನರಿಯದು; ಘನ ಮನವನರಿಯದು
ಗುಹೇಶ್ವರನೆಂಬ ಲಿಂಗವನರಿದ ಬಳಿಕ ಗೀತವೆಲ್ಲಾ
ಒಂದು ಮಾತಿನೊಳಗು

ಅಲ್ಲಮನ ವಚನ ಚಂದ್ರಿಕೆ ॥ ೬೨೭ ॥

೪. "ಅರವತ್ತೆಂಟು ಸಹಸ್ರವಚನಗಳ ಹಾಡಿ ಹಾಡಿ ಸೋತಿತ್ತೆನ್ನ ಮನವು ನೋಡಯ್ಯ !
ಹಾಡುವುದೊಂದೇ ವಚನ, ನೋಡುವುದೊಂದೇ ವಚನ, ವಿಷಯ ಬಿಟ್ಟು
ನಿರ್ವಿಷಯಿಯಾಗುವುದೊಂದೇ ವಚನ ಕಪಿಲಸಿದ್ಧಮಲ್ಲೇಶನಲ್ಲಿ"

- ವಚನ ಶಾಸ್ತ್ರಸಾರ III ಪುಟ 15 ವಚನ 69

ಷಡ್ವಿಧವ ಬಲ್ಲಾತನೆ ಬ್ರಹ್ಮಜ್ಞಾನಿಯಯ್ಯ. ಪಿಡಿವುದು ಮೇಲಿಹ ಫಲದ ಪಕ್ವವನಲಿದು ವಾಸನಾಫಲಧರ್ಮವ ನೋಡಿ ಜ್ಞಾನರಸವಂ ತಿಳಿದು ಬೋಧಿಸುವುದು ಮರ್ಕಟ ಪಿಪೀಲಿಕ ಇವೆರಡರಲ್ಲಿಯೂ ಗುರುವಿನ ಗುಣವು ಉಂಟಾಗಿ ಇದ್ದಿತ್ತು. ಆ ಶರಣನ ಭಾವಕ್ಕೆ ಗುರುಸ್ವರೂಪವೆನ್ನಬೇಕಾಯಿತಯ್ಯ - ಈ ಶರಣಂಗೊಮ್ಮೆ ಪ್ರಾಣಲಿಂಗಸ್ವರೂಪವಾದ ಕಾರಣ ಕಕ್ಕುಟನು ಸಮಯವರಿದು ಎಚ್ಚರವಾಗುವುದು. ಶರಣನು ತನ್ನ ದೇಹ ಪ್ರಾರಬ್ಧದಿಂದ ಪ್ರಕಾಶಿಸುತ್ತಿರ್ಪನು. ಅದು ವಿಹಂಗ ಕುಕ್ಕುಟ ಈ ಎರಡರಲ್ಲಿ ಲಿಂಗದ ಗುಣವುಂಟಾಗಿದ್ದುದಾಗಿ ಈ ಶರಣನ ಭಾವಕ್ಕೆಲಿಂಗ ಸ್ವರೂಪವೆನ್ನ ಬೇಕೀಯಿತಯ್ಯ. ಅದು ಕಾರಣ ಶ್ವಾನ ಗಜ ಎರಡರಲ್ಲಿ ಜಂಗಮವುಂಟಾಗಿದ್ದಿತಾಗಿ ಈ ಶರಣನ ಭಾವಕ್ಕೆ ಜಂಗಮದ ಸ್ವರೂಪವೆನ್ನಬೇಕಾಯಿತಯ್ಯಾ.

ಆತ್ಮಾನುಭವದ ಅನಿವಾರ್ಯ ಮಂಗಲ ಅಭಿವ್ಯಕ್ತಿಯೇ ವಚನ. ಅಂದಂದಿನ ಅನುಭಾವದ ತೀವ್ರತೆಗೆ ಉಕ್ತಿರೀತಿ ಕಾಣಿಸಿರುವ ವಚನಕಾರರ ಮನೋಧರ್ಮ ಅತ್ಯಂತ ವಿಶಾಲ. ನಿರ್ಮಲ ಮನಸ್ಸಿನ ವಚನಕಾರರು ನಿಶ್ಚಿತ ವಿಮರ್ಶನ ಪ್ರಜ್ಞಾಶೀಲರೂ ಸಾರಗ್ರಾಹಿಗಳೂ ಆಗಿದ್ದಾರೆ. ಎರಡೆಂಬತ್ತು ಕೋಟಿ ವಚನದ ತಾತ್ಪರ್ಯದ ಅರ್ಥವನ್ನು ಒಂದು ವಚನದಲ್ಲಿ ನಿಕ್ಷೇಪಿಸಿ ನಿರೂಪಿಸುವ ಶರಣ ಬಂಕಯ್ಯಗಳ ನಿಲವನ್ನು ಈ ಸಂಧರ್ಭದಲ್ಲಿ ನಾವು ಗಂಭೀರವಾಗಿ ಗುರುತಿಸಿ ಹೆಮ್ಮೆ ಪಡಬೇಕು.[೫]

ಜೀವನ ದರ್ಶನಾನುಭವದಿಂದ ಉಚ್ಚಮಟ್ಟಕ್ಕೆ ಏರಿ ನಿಂತವರು ಶಿವಶರಣರು. ಶರಣರ ತೌಲನಿಕ ಪ್ರಜ್ಞೆ, ವಿಮರ್ಶಾತ್ಮಕ ದೃಷ್ಟಿ, ವಚನಗಳ ಮೌಲ್ಯ ನಿರ್ಧಾರ-ನಿರ್ಣಯ ಇಂದಿಗೂ ಆಶ್ಚರ್ಯವನ್ನುಂಟುಮಾಡುತ್ತಿದೆ. ತಮ್ಮ ಕಾಲದ ಅಪ್ರತಿಮ ಶರಣರ ವಚನಗಳ ನೆಲೆ ಬೆಲೆಗಳನ್ನು ಗುರುತಿಸಿ ನಿರ್ಧರಿಸಿರುವ ಷಟ್ಸ್ಥಲ ಚಕ್ರವರ್ತಿ ಚನ್ನಬಸವಣ್ಣನವರ ನಿರ್ಣಯಾತ್ಮಕ ಉದ್ಘೋಷಣೆ ಮುಂದಿನ ಈ ವಚನ.

---

**ಬಂಕಣ್ಣಯ್ಯಗಳ ವಚನ : ಅಂಕಿತ : ಗುಹೇಶ್ವರ ಲಿಂಗಯ್ಯ.**

೫."ಎರಡೆಂಬತ್ತು ಕೋಟಿ ವಚನದ ತಾತ್ಪರ್ಯದರ್ಥವನು ಈ ಒಂದು ವಚನದಲ್ಲಿ ನಿಕ್ಷೇಪಿಸಿ ಇದ್ದಿತ್ತು. ಈ ವಚನದ ಅನುಭಾವ ಅನಾದಿ ಶರಣರಿಗಲ್ಲದೆ ಆರಿಗೂ ತಿಳಿಯಬಾರದು. ಅದೆಂತೆಂದೊಡೆ ಗುರುವಿಗೆ ಗುರು ಉಂಟು. ಲಿಂಗಕ್ಕೆ ಲಿಂಗ ಉಂಟು. ಜಂಗಮಕ್ಕೆ ಗುರುವಿಲ್ಲ, ಲಿಂಗವಿಲ್ಲ, ಜಂಗಮವಿಲ್ಲ. ಈ ತ್ರಿವಿಧವೂ ನಾಸ್ತಿಯಾದ ಮಹಾಮಹಿಮಂಗೆ ಗುರು ಉಂಟು, ಲಿಂಗ ಉಂಟು ಜಂಗಮ ಉಂಟು. ಇದರ ಶಾಶ್ವತ ಸ್ವರೂಪವೆಂತೆಂದೊಡೆ ಮರ್ಕಟ, ಪಿಪೀಲಿಕ ವಿಹಂಗ, ಕುಕ್ಕುಟ, ಶ್ವಾನ, ಗಜ - ಈ ಷಡ್ವಿಧ ಶರಣಂಗೆ ಗುರು, ಲಿಂಗ, ಜಂಗಮ ಸ್ವರೂಪವೆಂದು ಪೂರ್ವದ ವಚನಾರ್ಥದಲ್ಲಿಹುದು. ಅದೆಂತೆಂದೊಡೆ, ಮರ್ಕಟನು ಆವುದಾನೊಂದು ಫಲವಸ್ತುವ ಕೈಯ್ಯಿಂದ ಹಿಡಿದು ವಾಸಿಸಿ ನೋಡಿ, ಪಕ್ವವಾದುದ ಹಿಡಿದು, ಅಪಕ್ವವಾದುದ ಬಿಡುವುದು. ಶರಣ ತನ್ನ ಅಂತರಂಗಕ್ಕೆ ಸರಿ ಬಂದುದ ಹಿಡಿವನು, ಸರಿಬಾರದುದ ಬಿಡುವನು. ಪಿಪೀಲಿಕನು ಮರವ ಮೊದಲೂ ವಾಸಿಸಿ ನೋಡಿ, ಆ ಮರದ ಮೇಲಿಹ ಫಲಕೆ ಮೋಹನಂಗೈದು, ಅಲ್ಲಿಗೆ ಹೋಗಿ ಆ ಫಲದ ರಸವ ಸೇವಿಸುವುದು. ಅದು ಕಾರಣ ಗುರುವಿರಲು ಶಿಷ್ಯನಾದೆನೆಂದು ಬರಲು, ಆ ಶಿಷ್ಯನ ವಾಸನಾಧರ್ಮವನರಿದು ಆತನಲ್ಲಿಹ ಅಜ್ಞಾನವ ಶೋಧಿಸುವನಾದ ಕಾರಣ ಮರ್ಕಟ ಪಿಪೀಲಿಕ ಇವೆರಡೂ ಶರಣಂಗೆ ಗುರುಸ್ವರೂಪು ಎಂದು ಹೇಳಲ್ಪಟ್ಟಿತ್ತು. ವಿಹಂಗ ಕುಕ್ಕುಟವೆರಡು ಶರಣಂಗೆ ಲಿಂಗಸ್ವರೂಪವೆಂದು ಪೂರ್ವವಚನಾರ್ಥದಲ್ಲಿಹುದು. ಅದೆಂತೆಂದೊಡೆ, ವಿಹಂಗ ಎಷ್ಟು ದೂರದಲಿರ್ದಡೂ ನೆನೆದಲ್ಲಿ ಆ ಫಲವನರಿವುದು.

ಆದ್ಯರ ಅರುವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ.
ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತು ವಚನ.
ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದು ವಚನ
ಅಜಗಣ್ಣನ ಐದು ವಚನಕ್ಕೆ ಕೂಡಲ ಚೆನ್ನಸಂಗಮದೇವಾ,
ಮಹಾದೇವಿಯಕ್ಕಗಳ ಒಂದು ವಚನ ನಿರ್ವಚನ ಕಾಣಾ ![೬]

ಬಸವ, ಪ್ರಭು, ಅಕ್ಕನವರ ವಚನಗಳೇನೋ ದೊರೆತಿವೆ. ಪ್ರಭುದೇವರ ವಚನಗಳಿಗಿಂತ ಪ್ರಶಸ್ತವೆನ್ನಲಾದ ಅಜಗಣ್ಣನ ವಚನಗಳಲ್ಲಿ ಐದು ವಚನವಿರಲಿ, ಒಂದು ವಚನವೂ ಈವರೆಗೂ ನಮಗೆ ದೊರಕದಿರುವುದು ದುರದೃಷ್ಟವೇ ಸರಿ.

ಬಸವಣ್ಣನವರ ವಚನಗಳು ವಚನವಾಙ್ಮಯದ ಪ್ರಾತಿನಿಧಿಕ ಸ್ವರೂಪವಾದವು. ಅಂಥ ಶರಣರ ಹೆಚ್ಚಿನ ವಚನವೊಂದರ ವಿಶ್ಲೇಷಣೆ ಇಂದಿನದಾಗಿದೆ. ಸಿದ್ಧಾಂತ - ಅನುಭಾವಗಳ ನವೀನ ಕಾಂತಿ, ಮೌಲ್ಯದಿಂದ ಯುಕ್ತವಾಗಿರುವ ಈ ಹೊಸವಚನ ಸತ್ಯಸದ್ವಕ್ತರ, ಸಂಶೋಧಕ ಸಾಹಿತಿಗಳ ಪರಿಭಾವನೆ, ಪರಿಚಿಂತನೆಗೆ ಸಂಜೀವನವಾಗಿದೆ.

ಪಿಂಡವೇ ಆದಿಯಾಗಿ, ಜ್ಞಾನವೇ ಶೂನ್ಯವಾಗಿ
ಆದಿ ಅಂತ್ಯಗಳೆರಡು ಮಧ್ಯದಲ್ಲಿ ನಿಲ್ಲಲು
ನೂರು ಒಂದರ ಮೇಲೆ ನಿಂದು
ಒಂದೇ ನೂರಾಗಿ ನಿಂದ ಮೇಲೆ
ನೂರೊಂದೆಂಬುದಿಲ್ಲವಾಗಿ
ಶ್ರೀ ಕೂಡಲಸಂಗಮದೇವನೆಂಬ ಸೊಲ್ಲು ಇಲ್ಲ.

---

ಹಾಂಗೆ ಶರಣ ತನ್ನ ಪ್ರಾಣಲಿಂಗವನರಿದ ಕಾರಣ, ಕುಕ್ಕುಟ ಸಮಯವರಿದು ಎಚ್ಚರಿಹುದು. ಶರಣ ತನ್ನ ಪ್ರಾರಬ್ಧ ಸ್ಥಾನವನರಿದ ಕಾರಣ, ವಿಹಂಗ ಕುಕ್ಕುಟ ಶರಣಂಗೆ ಲಿಂಗ ಸ್ವರೂಪವೆನಬೇಕಾಗುವುದು. ಶ್ವಾನ ಗಜ ಎರಡು ಶರಣಂಗೆ ಜಂಗಮ ಸ್ವರೂಪವೆಂದು ಪೂರ್ವವಚನಾರ್ಥದಲ್ಲಿಹುದು. ಅದೆಂತೆಂದೊಡೆ, ಶ್ವಾನ ನಿದ್ರೆಗೆಯ್ವಾಗ ತನ್ನ ಆದಿ ಮಧ್ಯ ಅವಸಾನವನರಿವುತ್ತಿಹುದು. ಶರಣ ತನ್ನ ಪ್ರಾರಬ್ಧವಿಸ್ತಾರವನರಿದು ಪ್ರಕಾಶಿಸುತ್ತಿಹನಾಗಿ, ಶ್ವಾನ ಜಂಗಮಸ್ವರೂಪವೆನಬೇಕು. ಗಜ ಮಲೆಯೊಳಗಿಂದ ಪುರದಲ್ಲಿಗೆ ಬಂದು, ಆ ಪುರದಲ್ಲಿ ಎಷ್ಟು ಸುಖಿಯಾಗಿರ್ದಡೂ ತನ್ನ ಮಲೆಯ ನೆನೆವುತ್ತಿಹುದು. ಆ ಜಂಗಮ ಮೊದಲು ಪರಬ್ರಹ್ಮದಿಂದ ದೇಹವಿಡಿದು ಬಂದನಾಗಿ, ಆ ದೇಹದಲ್ಲಿ ಎಷ್ಟು ಸುಖಿಯಾದಡೂ ಆ ಪರಬ್ರಹ್ಮವನೆ ನೆನೆವುತ್ತಿಹನು. ಅದು ಕಾರಣ ಮನವೇ ಮರ್ಕಟ, ಅರಿವೇ ಪಿಪೀಲಿಕ, ಮಹಾಜ್ಞಾನವೇ ವಿಹಂಗ, ನಿತ್ಯ ಎಚ್ಚರಿಹುದೇ ಕುಕ್ಕುಟ, ತನ್ನ ತಾನರಿವುದೇ ಶ್ವಾನ, ತನ್ನ ಬುದ್ಧಿಯೇ ಗಜ, ಇಂತೀ ಷಡ್ವಿಧವ ಬಲ್ಲಾತನೇ ಪರಬ್ರಹ್ಮಜ್ಞಾನಿ, ನಿಮ್ಮಾಣೆ ನಿಮ್ಮ ಪ್ರಮಥರಾಣೆ ಗುಹೇಶ್ವರ ಲಿಂಗಯ್ಯ. ಗುಹೇಶ್ವರ ಪ್ರಿಯ ಬಂಕಣ್ಣ.

- ಕದಂಬವಚನಗಳ ಕಟ್ಟು
(ಗುಹೇಶ್ವರ ಪ್ರಿಯ ಬಂಕಣ್ಣನ ವಚನ)

೬. ಚನ್ನಬಸವಣ್ಣನವರ ವಚನ''
ಗುಹೇಶ್ವರ ಪ್ರಿಯ ಬಂಕಣ್ಣ

ಇದು ಹೊಸವಚನದ ಪೂರ್ಣಪಾಠ. ಶ್ರೀ ಬಸವೇಶ್ವರ ದೇವರು ನಿರೂಪಿಸಿದ ಷಟ್ಸ್ಥಲ ವಚನ - ಎಂಬ ಪೂರ್ವಿಕರ ಹಸ್ತಪ್ರತಿಯಲ್ಲಿ ಈ ವಚನ ಕಂಡುಬಂದಿದೆ[೭]. ಮೀರಿದ ಕ್ರಿಯಾ ಐಕ್ಯಸ್ಥಲಂಗಳಿಗೆ ಸೇರಿದ ವಚನವಾಗಿದೆ. ನೂರೊಂದು ಸ್ಥಲಗಳ ಸಂಬಂಧದಲ್ಲಿ ನೂತನ ಪ್ರಕಾಶವನ್ನು ಚೆಲ್ಲುತ್ತಿರುವ ಕಾರಣ ಈ ವಚನದ ಮೌಲ್ಯ ಅತ್ಯಂತ ಶ್ರೇಷ್ಠವೆಂದು ನಿಶ್ಚಯಿಸಿರುವೆ.

ಆಗಮಗಳಲ್ಲಿ ಮೂಡಿಬಂದಿರುವ ಷಟ್ಸ್ಥಲದರ್ಶನಕ್ಕೆ ವ್ಯಾಪಕತೆಯನ್ನು ದಿವ್ಯಪರಿಣಾಮವನ್ನು ತಂದುಕೊಟ್ಟವರು ಹನ್ನೆರಡನೆಯ ಶತಮಾನದ ಶಿವಶರಣರು. ೧೦೧ ಸ್ಥಲದ ಕಲ್ಪನೆ ಬಸವಾದಿ ಪ್ರಮಥರಿಗೆ ಇರಲಿಲ್ಲ. ಷಟ್ಸ್ಥಲದ ಆಚರಣೆ, ವಿವೇಚನೆಯೇ ಅವರೆಲ್ಲರ ಮುಖ್ಯ ಗುರಿಯಾಗಿತ್ತು. ಏಕೋತ್ತರ ಶತಸ್ಥಲದ ವಿಚಾರ ಏನಿದ್ದರೂ ಬಸವೋತ್ತರ ಯುಗಕ್ಕೆ ತೋಂಟದ ಸಿದ್ಧಲಿಂಗೇಶ್ವರರ ಶಿಷ್ಯಪರಂಪರೆಗೆ ಅನ್ವಯಿಸಿದ್ದು. ೧೨ನೇ ಶತಮಾನದ ಶರಣರ ವಚನಗಳಲ್ಲಿ ನೂರೊಂದು ಸ್ಥಲಗಳ ಬಗೆಗೆ ಉಲ್ಲೇಖವಿಲ್ಲ; ನಿರೂಪಣೆ ಇಲ್ಲ - ಎಂಬುದು ಈ ವರೆಗಿನ ವಿದ್ವಜ್ಜನರ ಅಭಿಪ್ರಾಯವಾಗಿದೆ; ವಿಚಾರ ಶೀಲರ ನಿರ್ಣಯವಾಗಿದೆ. ನಿದರ್ಶನಕ್ಕೆ :

1. "There seems to be no trace of this division in the books of Basava or Chennabasava or their Colleagues. For lack of authentic proof of antiquity, the development of these 101 sthalas may be taken to be later than the 12th century"[೮]

Dr. S.C. Nandimath

೨. "೧೫ ನೆಯ ಶತಮಾನದವರೆಗೆ ಷಟ್ಸ್ಥಲದ ವಿಷಯವಾಗಿ ಉಲ್ಲೇಖಗಳು ದೊರೆಯುವಂತೆ, ೧೦೧ ಸ್ಥಲದ ವಿಷಯವಾಗಿ ದೊರೆಯದಿರಲು ಕಾರಣಗಳಾವುವು ? ೧೦೧ ಸ್ಥಲಗಳ ಬಗೆಗೆ ೧೨ನೇ ಶತಮಾನದಲ್ಲಿ ಶಿವಶರಣರಿಗೆ ಆಲೋಚನೆಯಿರಲಿಲ್ಲವೇ ?- ಎಂಬುವು ನಿಶ್ಚಿತವಾಗಿ ತಿಳಿದ ಹೊರತು ೧೦೧ ಸ್ಥಲದ ಉಗಮವು ಹೇಗೆ ಆಯಿತು ಎಂದು ಹೇಳುವುದು ಕಷ್ಟಸಾಧ್ಯವಾದುದು. ೧೦೧ ರ ಅನುಭವವು ಸಂಸ್ಕೃತದಲ್ಲಿರಲಿ, ಕನ್ನಡದಲ್ಲಿರಲಿ, ಸ್ವತಂತ್ರವಾಗಿ ಬಾಳಿ ಬಂದಿರಲಿ, ಷಟ್ಸ್ಥಲ ಕ್ರಮದ ಆಧಾರದಲ್ಲಿ ಬೆಳೆದು ಬಂದಿರಲಿ ಅದೆಲ್ಲ ೧೫ನೆಯ ಶತಮಾನದಿಂದ ಎಂದು ಹೇಳಬಹುದು.[೯]

- ಶ್ರೀ ವೀ. ರು. ಕೊಪ್ಪಳ

೭. ಪುಟ ಸಂಖ್ಯೆ ೧೧೫೮, ವಚನ ॥ ೪ ॥ ಟೀಕು ಇರುವ ಹಸ್ತಪ್ರತಿಯಿದು. ಪ್ರಕೃತ ವಚನದ ಮುಂದೆ 'ಕಾಣ ಬಂದರ್ಥ' ಎಂದಿದೆ.

೮ A Handbook of Virasaivism. Page 207. Yr. 1942 LEA, Dharwar.

೯. ಸ್ಥಲಕಟ್ಟು : ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಸಾಹಿತ್ಯ ಸಮಿತಿ ಪತ್ರಿಕೆ ಸಂಚಿಕೆ. ವರ್ಷ ೧೯೪೩

ಬಸವಣ್ಣ ಚನ್ನಬಸವಣ್ಣ ಮೊದಲಾದ ಶರಣರ ವಚನಗಳಲ್ಲಿ ಈ ಸೂರೊಂದು ಸ್ಥಲಗಳ ವಿವೇಚನೆಯಾಗಲೀ, ಅವರ ವಚನಗಳು ಈ ಸ್ಥಲಕಟ್ಟಿನಲ್ಲಿ ಅಳವಟ್ಟಿರುವುದಾಗಲೀ ಕಂಡುಬರದಿರುವುದನ್ನು ಗಮನಿಸಬೇಕು.[೧೦]

**- ಡಾ|| ಎಚ್. ತಿಪ್ಪೇರುದ್ರಸ್ವಾಮಿ**

"ನೂರೊಂದು ಉಪಸ್ಥಲಗಳ ಬಗೆಗೆ ವಿಚಾರ ವಿಮರ್ಶೆ ಮತ್ತು ಕಾಲಮಾನ ಕಲ್ಪನೆ ಒಡೆಯಲಾರದ ಒಗಟಾಗಿ ಸಾಗಿ ಬಂದಿವೆ; ಬರುತ್ತಿದೆ. ೧೦೧ ಸ್ಥಲ ವಿಚಾರ ಪಸಿದ್ದರೂ ೧೫ ನೆಯ ಶತಮಾನದ್ದು ಎಂಬುದು ಈವರೆಗಿನ ಅಭಿಪ್ರಾಯ"[೧೧]

**- ಡಾ|| ಶ್ರೀ ಜ.ಚ.ನಿ. ಮಹಾಸನ್ನಿಧಿಯವರು**

೧೯೪೨ ರಿಂದ ೧೯೮೨ರವರೆಗೆ ೧೦೧ ಸ್ಥಲಗಳನ್ನು ಕುರಿತ ವಿಚಾರ ವಿಶ್ಲೇಷಣೆ ನಮ್ಮ ವಿದ್ವಜ್ಜನರಲ್ಲಿ ಹೇಗೆ ಸಾಗಿ ಬಂದಿದೆ ಎಂಬುದನ್ನೂ ನೂತನ ಸಂಶೊಧನೆಯ ಅಂಶಗಳು ಈ ದಿಸೆಯಲ್ಲಿ ಈವರೆಗೆ ಬೆಳಕಿಗೆ ಬಂದಿಲ್ಲ ಎಂಬುದನ್ನು ಮೇಲೆ ಕಾಣಿಸಿದ ಅಭಿಪ್ರಾಯಗಳಿಂದ ಚೆನ್ನಾಗಿ ಮನವಟ್ಟಾಗುತ್ತಿದೆ. ಈ ಎಲ್ಲ ವಿಚಾರಗಳ ಹಿನ್ನೆಲೆಯಲ್ಲಿ ನನಗೆ ಈಗ ಸಿಕ್ಕಿರುವ ಬಸವಣ್ಣನವರ ಒಂದು ಹೊಸವಚನದ ನೆಲೆ-ಬೆಲೆಗಳನ್ನು ಕಾಣಲು ಸಾಧ್ಯವಾಗುತ್ತದೆ.

ಪರಿಶೋಧನೆಯ ಸಾರಸತ್ವಲವಾಗಿ ಒದಗಿರುವ ಬಸವಣ್ಣನವರ ಈ ವಚನದಲ್ಲಿ ಕೇವಲ ನೂರೊಂದು ಸ್ಥಲದ ಬಗೆಗೆ ಉಲ್ಲೇಖವಿಲ್ಲ. ನೂರೊಂದರ ಬಗೆಗೆ ಬಸವಣ್ಣನವರ ಅನುಭಾವ ಈ ವಚನವಲ್ಲಿ ಸಮಗ್ರವಾಗಿ, ಸೂಚ್ಯವಾಗಿ ಕಂಡುಬಂದಿದೆ. ೧೦೧ ಸ್ಥಲಗಳ ಪ್ರಜ್ಞೆ, ಪ್ರತಿಭೆ, ವಿವೇಚನಾ ಕೌಶಲ ಬಸವಣ್ಣನವರಿಗಿತ್ತು ಎಂಬುದನ್ನು ತಿಳಿಯಲು ಹಾಗೂ ಈ ಶರಣರ ನೂತನ ದರ್ಶನಾನುಭವವನ್ನು ಸಂಪಾದಿಸಲು ಈ ಹೊಸವಚನ ತಂಬಾ ಸಹಾಯಕವಾಗಿದೆ. ಈ ವರೆಗೆ ಇದ್ದ ತಪ್ಪು ಗ್ರಹಿಕೆಯನ್ನು ಪರಿಹರಿಸುತ್ತಿದೆ ಪ್ರಕೃತ ವಚನ.

ಬಸವಣ್ಣನವರ ಈ ಹೊಸವಚನದಲ್ಲಿ ೧೦೧ ಉಪಸ್ಥಲಗಳ ನಿರ್ದೇಶವಿದೆ. ನಿರೂಪಣೆ ಸೂಚ್ಯವಾಗಿದೆ ; ಅನುಭಾವಿಕವಾಗಿದೆ. ಪಿಂಡಸ್ಥಲದಿಂದ ಪ್ರಾರಂಭವಾಗಿ ಜ್ಞಾನಶೂನ್ಯಸ್ಥಲ ಎಂದರೆ ೧೦೧ ನೆಯ ಸ್ಥಲವನ್ನೂ ಒಳಗೊಂಡಿದೆ. ನೂರೊಂದರ ಪೂರ್ಣಪ್ರಜ್ಞೆಯನ್ನು ಆದಿ-ಅಂತವಾಗಿ ನಿರೂಪಿಸಿದ್ದಾರೆ. ಹಾಗೆ ನಿರೂಪಿಸಿ ಆಚೆಯ ಸರ್ವಶೂನ್ಯಸ್ಥಲವನ್ನೂ ನಿರ್ದೇಶಿಸಿದ್ದಾರೆ.

ನೂರೊಂದು ಉಪಸ್ಥಲಗಳಲ್ಲಿ ಪಿಂಡವೇ ಆದಿಸ್ಥಲ, ಜ್ಞಾನಶೂನ್ಯವೇ ಅಂತ್ಯಸ್ಥಲ. ಈ ಆದಿ, ಅಂತ್ಯಗಳೆರಡೂ ಮಧ್ಯವಲ್ಲಿ ನಿಲ್ಲಲು ಎಂದರೆ ೧೦೧ ಸ್ಥಲಗಳ ಸಾರ್ಥಕತೆ ಮಧ್ಯದ ಶೂನ್ಯವಲ್ಲಿ

---

೧೦. ವಚನಗಳಲ್ಲಿ ವೀರಶೈವ ಧರ್ಮ ಪುಟ ೧೪೦ (೧೯೬೯)

೧೧. ನೂರೊಂದು ಸ್ಥಲದ ಬಗೆಗೆ ಪೂಜ್ಯ ಶ್ರೀಗಳವರಿಂದ ಒದಗಿದ ಅಭಿಪ್ರಾಯ (೧೯೮೨)

ತಾನೇ !(ಶೂನ್ಯ = ಸೊನ್ನೆ) ಆದಿ ಎಂದರೆ ಪಿಂಡಸ್ಥಲ ; ಸೃಜನಶೀಲ, ಮಧ್ಯ ಎಂದರೆ ಆಚರಣೆ, ಸ್ಥಿತಿ. ಅಂತ್ಯವೆಂದರೆ ಜ್ಞಾನ ಶೂನ್ಯಸ್ಥಲ ; ಜ್ಞಾನಾಲಯ. ಇಲ್ಲಿ 'ಲಯ' ಎಂದರೆ ನಾಶ ಎಂದರ್ಥವಲ್ಲ ತಲ್ಲೀನತೆ ಎರಕತೆ. ಮೂಲವಸ್ತುವಿನಲ್ಲಿ ಬೆರದೇಕವಾಗುವ ಸ್ಥಿತಿ.

ಪಿಂಡ, ಜ್ಞಾನಗಳೆರಡು ಮಧ್ಯದಲ್ಲಿ ಎಂದರೆ ಸ್ಥಿತಿಯಲ್ಲಿ ಆಚರಣೆಯಲ್ಲಿ ನಿಲ್ಲಲು, ಬಾಳಿನಲ್ಲಿ ಹಾಸುಹೊಕ್ಕಾಗಿ ನಿಲ್ಲಲು, ಆಚರಿಸುತ್ತಾ, ಆಚರಿಸುತ್ತಾ ೧೦೦ ಸ್ಥಲಗಳನ್ನು ಅಳವಡಿಸಿಕೊಂಡು ೧೦೧ರ ಮೇಲೆ ಎಂದರೆ ಜ್ಞಾನ ಶೂನ್ಯಸ್ಥಲದ ಮೇಲೆ, ನಿಶ್ಶೂನ್ಯವಾಗಿ ನಿಂದು ಸಂದ ಕಾರಣಾತೀತ ಪರವಸ್ತುವಿನ ನಿಲವನ್ನು ಬಸವಣ್ಣನವರು ಸಾಂದ್ರವಾಗಿ ಬಂಧುರವಾಗಿ ಈ ವಚನದಲ್ಲಿ ಕಾಣಿಸಿದ್ದಾರೆ.

೧೦೦ ಸ್ಥಲಗಳ ಸಾಫಲ್ಯ ೧೦೧ನೆಯದರಲ್ಲಿದೆ. ಆ ಒಂದೇ ಅಖಂಡವಸ್ತುವು ನೂರಾಗಿ ನಿಂದ ಮೇಲೆ ೧೦೧ ಎಂಬುದಿಲ್ಲ. ಎಂದರೆ ಪಿಂಡವೇ ನೂರಾಗಿ ನಿಂದ ಮೇಲೆ ನೂರೊಂದು ಎಂಬುದಿಲ್ಲ. ಪೂರ್ಣಸ್ವರೂಪವನ್ನು ಶುದ್ಧಾತ್ಮನು ತಳೆಯುತ್ತಾನೆ ಎಂದರ್ಥ.

ಇನ್ನೂ ಮನಮುಟ್ಟುವಂತೆ ಈ ವಚನದ ಅಂತರಾರ್ಥವನ್ನು ಸೂಚಿಸುವುದಾದರೆ ಒಂದೇ ಬೀಜ ನೂರಾಗಿ ಎಂದರೆ ಮರವಾಗಿ ನೆಲೆಗೊಂಡಮೇಲೆ ೧೦೧ ಎಂಬುದಿಲ್ಲ. ಎಂದರೆ ಮತ್ತೆ ಆ ಮರದ ಸ್ವರೂಪವಿಲ್ಲ. ಪೂರ್ಣಸ್ವರೂಪ ಲಭ್ಯವಾಗುತ್ತದೆ.

---

ಲಿಂಗಾಂಗ ಲೀಲೆ

೧೦೧

ಬೀಜ ಮರ ಬೀಜ

ಆದಿ ಮಧ್ಯ ಅಂತ್ಯ

ಅಂಗ ಲೀಲೆ ಲಿಂಗ

ಪಿಂಡಸ್ಥಲ ಆಚರಣ ಜ್ಞಾನಶೂನ್ಯಸ್ಥಲ

ಸೃಷ್ಟಿ ಸ್ಥಿತಿ ಲಯ

(ಸೃಜನ) (ಜೀವನ) (ವಿಲೀನ)

---

ನೂರು ಉಪಸ್ಥಲಗಳು ಆದಿಯ ಪಿಂಡಸ್ಥಲವನ್ನೇ ಆಧರಿಸಿವೆ. ಎಂದರೆ ಮರವೆಲ್ಲ ನಿಂತಿರುವುದು ಬೀಜದ ಮೇಲೆ. ಪಿಂಡಸ್ಥಲದಲ್ಲಿಯೂ ಜ್ಞಾನ ಅವ್ಯಕ್ತ ; ಕೊನೆಯ ಜ್ಞಾನಶೂನ್ಯಸ್ಥಲದಲ್ಲಿಯೂ ಅವ್ಯಕ್ತ.

ಪರತತ್ತ್ವವು ಪ್ರಚ್ಛನ್ನವಾಗಿ ಪ್ರತ್ಯಕ್ಷವಾಗಿ ಹೇಗೆ ಇರುತ್ತದೆ ಎಂಬುದನ್ನು ವಚನಕಾರರು ಪಿಂಡಸ್ಥಲದ ವಚನಗಳಲ್ಲಿ ಸೊಗಸಾದ ಹೋಲಿಕೆಗಳೊಡನೆ ಸ್ಫುಟಗೊಳಿಸಿರುವರು. ಉದಾ :

*ಉದಕದೊಳಗೆ ಬಯ್ಚಿಟ್ಟ ಬಯಕೆಯ ಕಿಚ್ಚಿನಂತಿದ್ದಿತ್ತು.*
*ಸಸಿಯೊಳಗಣ ರಸದ ರುಚಿಯಂತಿದ್ದಿತ್ತು,*
*ನನೆಯೊಳಗಣ ಪರಿಮಳದಂತಿದ್ದಿತ್ತು.ಕೂಡಲಸಂಗಮದೇವರ ನಿಲವು*
*ಕನ್ನೆಯ ಸ್ನೇಹದಂತಿದ್ದಿತ್ತು.*[೧೨]

ಬಸವಣ್ಣನವರ ವಚನ ಪಿಂಡಸ್ಥಲ ॥ ೧ ॥

ಶುದ್ಧಜೀವ, ಪರಾತ್ಪರದೈವದ ವಿಚಾರವನ್ನು ಶರಣರು ವಚನಗಳಲ್ಲಿ ಸೊಗಸಾಗಿ ತಿಳಿಸಿರುವಂತೆ, ಸಿದ್ಧಾಂತಕಾರರೂ ನೂರೊಂದು ಸ್ಥಲ ನಿರೂಪಣೆಯ ಬಗೆಗೆ ಗ್ರಂಥವನ್ನು ವಿರಚಿಸಿರುವರು. ಸಿದ್ಧಾಂತಶಿಖಾಮಣಿಯಲ್ಲಿ ಆದಿಯ ಪಿಂಡಸ್ಥಲವನ್ನು ಕುರಿತ ವಿವರಣೆ ಹೀಗಿದೆ.

*ಬಹು ಜನ್ಮಕೃತೈಃ ಪುಣ್ಯೈಃ ಪ್ರಕ್ಷೀಣೇ ಪಾಪಪಂಜರೇ ।*
*ಶುದ್ಧಾಂತಃಕರಣೋ ದೇಹೀ ಪಿಂಡಶಬ್ದೇನ ಗೀಯತೇ॥*[೧೩]

ಜನ್ಮಾಂತರಗಳಲ್ಲಿ ಮಾಡಿದ ಪುಣ್ಯಗಳಿಂದ ಪಾಪಪುಂಜವೆಲ್ಲ ನಷ್ಟವಾಗಲು ಶುದ್ಧ ಅಂತಃಕರಣನಾದ ಜೀವನೇ ಪಿಂಡ ಎಂದು ಹೇಳಿಸಿಕೊಳ್ಳುವನು.

೧೦೧ ಸ್ಥಲಗಳಲ್ಲಿ ಪಿಂಡಸ್ಥಲ ಸಾಧನರೂಪವಾದುದು. ಇನ್ನುಳಿದ ಪಿಂಡಜ್ಞಾನವೇ ಮುಂತಾದ ನೂರು ಸ್ಥಲಗಳು ಸಾಧ್ಯರೂಪವಾದವು. ಶೂದ್ಧಜೀವನಿಗೆ ಸಂಬಂಧಿಸಿದುದಾದರೂ ಆದಿಯ ಪಿಂಡಸ್ಥಲ, ಶಿವಸ್ವರೂಪಸ್ಥಲ ಎಂಬುದು ವೀರಶೈವಸಿದ್ಧಾಂತದ ಧ್ವನಿ ರಮ್ಯಸೂತ್ರ !

ನೂರೊಂದರ ಆದ್ಯಂತ ಸ್ಥಲಗಳಲ್ಲಿ ಜ್ಞಾನ ಅಂತರ್ಲೀನ. ಜ್ಞಾನಶೂನ್ಯ ಸ್ಥಲ ಸಂಪನ್ನನ ನಿಲವನ್ನು

*ಜಲೇ ಜಲಮಿವ ನ್ಯಸ್ತಂ ವಹ್ನೌ ವಹ್ನಿರಿವಾರ್ಪಿತಃ ।*
*ಪರ ಬ್ರಹ್ಮಣಿ ಲೀನಾತ್ಮಾ ವಿಭಾಗೇನ ನ ದೃಶ್ಯತೇ*[೧೪]

---

೧೨. ಬಸವಣ್ಣನವರ ವಚನ ಪಿಂಡಸ್ಥಲ ॥ ೧ ॥
೧೩. ಸಿದ್ಧಾಂತ ಶಿಖಾಮಣಿ : ಆದಿ-ಅಂತಸ್ಥಲಗಳು
೧೪. ಸಿದ್ಧಾಂತ ಶಿಖಾಮಣಿ : ಆದಿ-ಅಂತಸ್ಥಲಗಳು ೧ ಹಾಗೂ ೬೦

ಎಂದು ಸಿದ್ಧಾಂತ ಶಿಖಾಮಣಿಯಲ್ಲಿ ಕಾಣಿಸಲಾಗಿದೆ.

ನೀರಿನಲ್ಲಿ ಬೆರೆದ ನೀರು, ಬೆಂಕಿಯಲ್ಲಿ ಬೆರೆದ ಬೆಂಕಿ ಹೇಗೆ ಬೇರೆ ಎಂಬ ಪ್ರತೀತಿಗೆ ಅವಕಾಶ ಕಲ್ಪಿಸುವುದಿಲ್ಲವೋ ಹಾಗೆ ಪರಾತ್ಪರಸ್ವರೂಪ ಮಹಾಲಿಂಗದಲ್ಲಿ ಸಮರಸವಾದ ಶಿವಯೋಗಿಯ ನಿಲವು ಎಂಬ ಈ ಭಾವ ಅತ್ಯಂತ ಪ್ರಶಸ್ತವಾಗಿದೆ. ಪರಸ್ಪರಾಪೇಕ್ಷಿಯಾದ ಭಾವ, ಅಭಾವಗಳಿಗೆ ಸಾಧನವಾದುದು ಜ್ಞಾನ. ಭಾವ-ಅಭಾವಲಯದಿಂದ ಪರಬ್ರಹ್ಮಸ್ವರೂಪನಾಗಿರುವ ಶಿವಯೋಗಿಯಲ್ಲಿ ಆ ಜ್ಞಾನವೂ ಶೂನ್ಯವಾದುದರಿಂದ ಆತನ ನಿಲವನ್ನು ಶಿವಯೋಗಿ ಶಿವಾಚಾರ್ಯರು ಜ್ಞಾನಶೂನ್ಯಸ್ಥಲದಲ್ಲಿ ನಿದರ್ಶನಗಳೊಡನೆ ಮನಗಾಣಿಸಿದ್ದಾರೆ.

ಜ್ಞಾನಶೂನ್ಯವೆಂದರೆ ಅತ್ಯಂತ ಅಭಾವವಲ್ಲ ; ಅವ್ಯಕ್ತಭಾವ ; ಅವ್ಯಕ್ತದಲ್ಲಿ ಇರುವಿಕೆ. ಹೀಗೆ ಸಮರಸತತ್ತ್ವದಲ್ಲಿ ಬೆರೆದೇಕವಾದ ನಿರುಪಾಧಿಕ ಸಂಪನ್ನನೇ ೧೦೧ನೆಯ ಸ್ಥಲದವನು. ಜ್ಞಾನ ಶೂನ್ಯ ಸ್ಥಲ ಸಂಪನ್ನನ ಅಖಂಡ ಸ್ಥಿತಿಯನ್ನು ಅನುಭಾವಿಗಳೂ ರಸಾತ್ಮಕ ಶೈಲಿಯಲ್ಲಿ ನಿರೂಪಿಸಿದ್ದಾರೆ.

*ಘೃತ ಘೃತವ ಬೆರಸಿದಂತೆ*
*ಕ್ಷೀರ ಕ್ಷೀರವ ಬೆರಸಿದಂತೆ*
*ತೈಲ ತೈಲವ ಬೆರಸಿದಂತೆ*
*ನೀರು ನೀರ ಬೆರಸಿದಂತೆ*
*ಜ್ಯೋತಿ ಜ್ಯೋತಿಯ ಬೆರಸಿದಂತೆ*
*ಬಯಲು ಬಯಲ ಬೆರಸಿದಂತೆ*
*ಪ್ರಾಣ ಪ್ರಾಣ ಸಂಯೋಗವಾದ*
*ಲಿಂಗ ಸಮರಸವನೇನೆಂಬೆನಯ್ಯಾ*
*ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ !* [೧೫]



- (ತೋಂಟದ ಸಿದ್ಧಲಿಂಗ ಶಿವಯೋಗಿಗಳವರು)

ಷಟ್ಸ್ಥಲದ ವಿವೇಚನೆ ಹನ್ನೆರಡನೆಯ ಶತಮಾನದ ವಚನಕಾರರ ಕಾಲಕ್ಕೆ ಪ್ರಮುಖವಾಗಿತ್ತು ಎಂಬುದೇನೋ ನಿಜ. ಆದರೆ ಬಸವಾದಿ ಪ್ರಮಥರು ನೂರೊಂದು ಸ್ಥಲಗಳ ಪ್ರಜ್ಞೆಯನ್ನು ಮಾತ್ರವಲ್ಲ, ಈ ಉಪಸ್ಥಲಗಳ ನಿಜಾಚರಣೆಯನ್ನು ತಮ್ಮ ಬಾಳಿನಲ್ಲಿ ಕರತಲಾಮಲಕ ಮಾಡಿಕೊಂಡಿದ್ದರು. ನೂರೊಂದರ ಬಗೆಗೆ ಬೌದ್ಧಿಕ ವಿವೇಚನೆಯ ಜೊತೆಗೆ ಅನುಭಾವಿಕ ನಿರೂಪಣೆ ನಿಜಾಚರಣೆಯ ಬಲದಿಂದ ಹೊಮ್ಮಿ ಬಂದಿರುವುದು ಪ್ರಶೋಧಕರಿಗೆ ವೇದ್ಯವಾಗುವ ವಿಷಯವಾಗಿದೆ.

---

೧೫. ಷಟ್ಸ್ಥಲ ಜ್ಞಾನ ಸಾರಾಮೃತ : ಐಕ್ಯಸ್ಥಲದ ವಚನ ॥ ೪೪ ॥ ಪುಟ : ೩೪೯

ಹದಿನೈದನೆಯ ಶತಮಾನದ ವಚನಕಾರರು, ತೋಂಟದ ಸಿದ್ಧಲಿಂಗ ಶಿವಯೋಗಿಗಳ ಶಿಷ್ಯಪರಂಪರೆಯವರು, ಅವರ ಪ್ರಭಾವ ಮುದ್ರೆಗೆ ಒಳಗಾದವರು ಏಕೋತ್ತರ ಶತಸ್ಥಲಗಳಿಗೆ ನಿರ್ದಿಷ್ಟರೂಪವನ್ನು ತಮ್ಮದೇ ಆದ ರೀತಿಯಲ್ಲಿ ಕೊಟ್ಟಿರುತ್ತಾರೆ. ನೂರೊಂದರ ಸಾಹಿತ್ಯವನ್ನು ವ್ಯವಸ್ಥಿತರೂಪದಲ್ಲಿ ಒದಗಿಸಿದ್ದಾರೆ. ಸಂಪಾದನೆಯ ಸಮಯದವರು, ವಚನಸಂಕಲನಕಾರರು ಈ ದಿಸೆಯಲ್ಲಿ ಸಲ್ಲಿಸಿರುವ ಸೇವೆ ಸ್ತೋತ್ರಾರ್ಹ.

ಒಟ್ಟಿನಲ್ಲಿ ಸಿದ್ಧಾಂತ, ಅನುಭಾವಗಳೆರಡರ ದೃಷ್ಟಿಯಿಂದಲೂ ಏಕೋತ್ತರ ಶತಸ್ಥಲಗಳ ವಿವೇಚನೆ ಅದೊಂದು ಗಂಭೀರವೂ, ನಿಡುಗಾಲದ ಗಾಢವಾದ ಅಭ್ಯಾಸಕ್ಕೆ ಪ್ರಚೋದಕವೂ, ಶಾಶ್ವತಮೌಲ್ಯ ಪ್ರದವೂ ಆದ ಮಹಾಪ್ರಬಂಧದ ವಿಷಯವಾಗಿದೆ.

ಈ ಸಂಬಂಧದಲ್ಲಿ 'ವಚನಗಳಲ್ಲಿ ನೂರೊಂದು ಸ್ಥಲ' ಎಂಬ ಪರಿಶೋಧನೆಯ ಪ್ರಬಂಧವನ್ನು ಈಗಾಗಲೇ ನಾನು ಸಿದ್ಧಪಡಿಸಿ ಹಲವೆಡೆ ಈ ಬಗೆಗೆ ಉಪನ್ಯಾಸದ ಸೇವೆ ಸಲ್ಲಿಸಿರುವೆನೆಂಬ ಸಂಗತಿಯನ್ನು ನಿವೇದಿಸಲು ಹರುಷವಾಗುತ್ತಿದೆ. ಆ ಸಂಶೋಧನ ಕಾರ್ಯ ಅದಕ್ಕಾಗಿ ತತ್ಪರನಾದ ಆ ದಿನಗಳು ನನ್ನ ಬಾಳಿನಲ್ಲಿ ಮರೆಯಲಾಗದ ಹರುಷ ಪ್ರಾಯದ ದಿನಗಳು. 'ಬಸವಣ್ಣನವರ ಒಂದು ಹೊಸ ವಚನ' - ಎಂಬ ಈ ಪ್ರಬಂಧ ವಚನಗಳಲ್ಲಿ ನೂರೊಂದು ಸ್ಥಲ' ಎಂಬ ನನ್ನ ಮೊದಲಿನ ಪರಿಶೋಧನ ಪ್ರಬಂಧಕ್ಕೆ ಪೂರಕ, ಪೋಷಕರೂಪದಲ್ಲಿದೆ ಎಂದೆನ್ನಬಹುದು.

ಶಿವಂ ಭೂಯಾತ್

# ಹೇಮಗಲ್ಲ ಹಂಪನ ಸ್ವರವಚನ ಸಾಹಿತ್ಯ

ಡಾ॥ ಚನ್ನಕ್ಕ ಎಲಿಗಾರ

---

ಭಾರತೀಯ ಸಾಹಿತ್ಯಕ್ಕೆ 'ವಚನ'ಗಳ ಅಪರೂಪದ ಕಾಣಿಕೆಯಿತ್ತು ಶರಣ ಸಮುದಾಯ 'ಸ್ವರವಚನ'ಸಾಹಿತ್ಯ ಕೊಡುವಲ್ಲಿ ಪ್ರಥಮಿಗರಾದರು. ವಚನಗಳಿಗಿಂತ ಭಿನ್ನವಾದ ನಿರ್ದಿಷ್ಟ ತಾಳ-ರಾಗ ಸಮನ್ವಿತವಾಗಿರುವ ಇದನ್ನು 'ಸ್ವರವಚನ' 'ಸ್ವರಪದ' 'ಹಾಡುಗಬ್ಬ'ವೆಂದು ಕರೆದಿರುವರು. ಕಾವ್ಯಾವಲೋಕನದಲ್ಲಿ ಹಾಡುಗಬ್ಬದ ಪ್ರಸ್ತಾಪವಿದ್ದರೂ ಹನ್ನೆರಡನೆಯ ಶತಮಾನದ ಶಿವಶರಣರ ಅಪೂರ್ವ ಸೃಷ್ಟಿ ಸ್ವರವಚನಗಳೇ ಪ್ರಾಚೀನ ಉಪಲಬ್ಧ ಹಾಡುಗಳು.

ಮೂಲತಃ ಸ್ವರವಚನ ಪದ್ಯಪ್ರಧಾನ ಮಾಧ್ಯಮದ ಸಾಹಿತ್ಯ. ಗದ್ಯ ಓದಿ ನೋಡಿದರೆ ಸ್ವರವಚನ ಹಾಡಿ ಅದರ ಸವಿಯನ್ನು ಅರಿಯಬೇಕು. ಬಸವಣ್ಣನವರ ಮಡದಿ ನೀಲಲೋಚನೆಯ 'ನೋಡು ನೋಡು ನೋಡು ಲಿಂಗವೇ' ಎಂಬ ಸ್ವರವಚನದ ರಾಗಮಾಧುರ್ಯ ಹಾಡಿದಾಗ ಸ್ಪಷ್ಟವಾದಷ್ಟು ಓದಿದರೆ ಆಗದು.

ಶಿವಶರಣರ ಈ ಮಾಲಿಕೆವಿಡಿದು ಬಸವೋತ್ತರಯುಗದ ಪ್ರತಿನಿಧಿ ಅನುಭಾವಿ ವಚನಕಾರನೆನಿಸಿದವ ಹೇಮಗಲ್ಲ ಹಂಪ. 'ಜಯ ಜಯ ಹರಹರ ಶಿವಶಿವ ಪರಮಗುರು, ಪಡುವಿಡಿ ಸಿದ್ಧಮಲ್ಲಿನಾಥಪ್ರಭುವೇ' ಅಂಕಿತ ಈತನದು. ವೀರಶೈವ ಸಂಪ್ರದಾಯದ 'ಪಡುವಿಡಿಬಗೆ'ಯ ಈ ವಚನಕಾರ ಇಲ್ಲಿಯವರೆಗೆ ಅಜ್ಞಾತನಾಗಿದ್ದು ಈಗ ಸಮಗ್ರ ವಚನ ಸಂಪುಟ ಜನಪ್ರಿಯ ಆವೃತ್ತಿಯ ಸಂಕೀರ್ಣ ವಚನಸಂಪುಟ ೯ರ ಮೂಲಕ ಪ್ರಕಟಗೊಂಡಿರುವನು.

ಇಲ್ಲಿ 'ಹೇಮಗಲ್ಲು' ಹೇಮಕೂಟವನ್ನು ನೆನಪಿಗೆ ತರುವ ಪದ. ಹೇಮಕೂಟ ಪರಿಸರದಲ್ಲಿರಬಹುದಾದ ಹೇಮಗಲ್ಲು ಇಂದು ಹಾಳಾಗಿದೆ. 'ಅಂಕಿತನಾಮ ಮತ್ತು ಸ್ಥಳನಾಮ ಎರಡೂ ಹಂಪೆಯ ಪರಿಸರಕ್ಕೆ ಸಂಬಂಧಪಡುವುದರಿಂದ ಈತ ಅದೇ ಪ್ರದೇಶದವನಾಗಿರಬೇಕೆಂದು ಹೇಳುವುದು ಹೆಚ್ಚು ಸಮರ್ಥನೀಯವಾದ ಅಭಿಪ್ರಾಯವೆಂದು ಕೃತಿ ಸಂಪಾದಕರ ಮುನ್ನುಡಿಯ ನುಡಿ.

ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿನ ಜಾಲಹಳ್ಳಿಯ ಗುರುಪರಂಪರೆಯ ಹಂಪ ಪಡುವಿಡಿ ರಾಜೇಶ್ವರನ ವರಶಿಷ್ಯ. ತನ್ನ ವಚನ ಹಾಗೂ ಸ್ವರವಚನ ಸಾಹಿತ್ಯಕ್ಕೆ ಗುರುವಿನ ಗುರು 'ಸಿದ್ಧಮಲ್ಲಿನಾಥ' ಅಂಕಿತ ಉಪಯೋಗಿಸಿಕೊಂಡಿರುವನು. ಹೇಮಗಲ್ಲ ಹಂಪನ 'ಹೇಮಗಲ್ಲು ಷಟ್‌ಸ್ಥಲ' ಸದ್ಯ ದೊರೆತ ಏಕೈಕ ಕೃತಿ. ಇವರಲ್ಲಿ **ಒಟ್ಟು ೨೮೨ ವಚನ, ೨೧ ಸ್ವರವಚನ ೧ ರಗಳೆ ೪ ಶಂಕರ ಲಿಂಗಾಂಕಿತ ಕಂದ ೩ ಹಂಪವಿರಚಿತ ಕಂದಗಳ ಸಂಗ್ರಹವಿದೆ**. ೨೩ ಸ್ಥಲಗಳನ್ನೊಳಗೊಂಡ ಈ ಕೃತಿಯಲ್ಲಿ ಕ್ರಮವಾಗಿ ಶಿವಸ್ತೋತ್ರ, ಪಿಂಡ, ಪಿಂಡಜ್ಞಾನ, ಮಾಯಾವಿಡಂಬನ, ಮಾಯಾತಮಂಧನಿರಸನ, ದಶವಾಯುನಿರಸನ, ಅಂತರಂಗದ ಅಷ್ಟಮದನಿರಸನ, ಬಹಿರಂಗದ ಅಷ್ಟಮದ ನಿರಸನ, ಅರಿಷಡ್ವರ್ಗ, ಸಪ್ತವ್ಯಸನ ನಿರಸನ, ಪಂಚೇಂದ್ರಿಯ ನಿರಸನ, ಮನೋವಿಕಾರ ನಿರಸನ, ಆಶಾಬದ್ಧ ನಿರಸನ, ಶಿವನಧಿಕಾಂಕ್ಷೆ, ಸಂಸಾರಹೇಯ, ಗುರುಕರುಣ, ಲಿಂಗಧಾರಣ, ಅನ್ಯದೈವನಿರಸನ, ವಿಭೂತಿ, ರುದ್ರಾಕ್ಷಿ, ಅಷ್ಟಾವರಣ ಸ್ಥಳಗಳಿವೆ. ಪ್ರತಿಸ್ಥಲದ ವಚನಗಳ ಕೊನೆಯಲ್ಲಿ ಒಂದೊಂದು ಸ್ವರವಚನವನ್ನು ಹೆಣೆದುದು ಕೊನೆಯಲ್ಲಿ ಸ್ವರವಚನದ ಬದಲಾಗಿ ಕಂದ ರಗಳೆಯ ಜೋಡಣೆ ಇದೆ. ಇದನ್ನು ಕರ್ತೃವೇ ಸ್ಥಲಾನುಗುಣವಾಗಿ ಸಂಯೋಜಿಸಿರುವುದರಿಂದ ಇದರಲ್ಲಿ ವೀರಶೈವ ಷಟ್‌ಸ್ಥಲಗಳು ಅಳವಟ್ಟಿರಬಹುದೆನಿಸಿದರೂ ಈಗ ದೊರೆತ ಹಸ್ತಪ್ರತಿಗಳು ಭಕ್ತಿಸ್ಥಲಕ್ಕೆ ನಿಲ್ಲುತ್ತವೆ. ಭಕ್ತಸ್ಥಲದ ಅಂತ್ಯದಲ್ಲಿ ಉಳಿದ ಸ್ಥಳಗಳಲ್ಲಿ ಇರುವಂತೆ ಸ್ವರವಚನ ಇಲ್ಲದೆ ಇರುವುದು ; ಈ ಸ್ಥಲದಲ್ಲಿ ಕಡಿಮೆ ಸಂಖ್ಯೆಯ ವಚನಗಳಿರುವುದು ; ಈ ಕೃತಿ ಅಪೂರ್ಣ ಎಂದು ಹೇಳಲು ಪುಷ್ಟಿ ದೊರೆಯುತ್ತದೆ.

ಹೇಮಗಲ್ಲು ಷಟ್‌ಸ್ಥಲದ ಆದಿಯಲ್ಲಿ ಸೂತ್ರ, ಅದರಲ್ಲಿ ಆ ಸ್ಥಲದ ವಿಷಯ ಸಾರಸಂಗ್ರಹ, ಮಧ್ಯೆ ಹಲವು ವಚನಗಳು, ಕೊನೆಯಲ್ಲಿ ಆ ವಚನಗಳ ಭಾವವನ್ನೇ ಒಳಗೊಂಡ ಒಂದೊಂದು ಸ್ವರವಚನ, ಪಂಚಾಕ್ಷರಿಯಸ್ಥಲದ ಅಂತ್ಯದಲ್ಲಿ ಸ್ವರವಚನಕ್ಕೆ ಬದಲಾಗಿ ೫೮ ನುಡಿಯ ರಗಳೆ, ಅದರ ಆದಿಯಲ್ಲಿ ಒಂದು ಅಂತ್ಯದಲ್ಲಿ ಎರಡು ಕಂದಗಳನ್ನೊಳಗೊಂಡಿದೆ. ಇಲ್ಲಿಯ ಎರಡು ವಚನಗಳು ೧೨೮-೧೩೦. ಇವು ಶಂಕರದೇವರ (ಕ್ರಿ.ಶ.೧೫೮೦) ನಾಲ್ಕು ಕಂದಗಳು ಉದ್ಧರಣೆವಾಕ್ಯದಂತೆ ಬಳಸಿದ್ದನ್ನು ಗಮನಿಸಿದರೆ ಶಂಕರದೇವನ ತರುವಾಯ ಹೇಮಗಲ್ಲ ಹಂಪ ಜೀವಿಸಿದ್ದಂತೆ ಕಾಣುತ್ತದೆ. ಈ ಷಟ್‌ಸ್ಥಲದಲ್ಲಿ ಬಳಕೆಗೊಂಡ ಭಂಗಿಯ ಸೊಪ್ಪು, ಸೀಸ,

ಶೇವಣಿ ಮುಂತಾದ ದೇಸಿಪದಗಳ ಬಳಕೆ, ಗ್ರಾಮ್ಯಭಾಷಾಶೈಲಿ ಇವನನ್ನು ೧೭, ೧೮ನೆಯ ಶತಮಾನಕ್ಕೆ ತಂದು ನಿಲ್ಲಿಸುತ್ತವೆ.

ಪ್ರಸ್ತುತ ಲೇಖನ ಹೇಮಗಲ್ಲ ಹಂಪನ ೨೧ ಸ್ವರವಚನಗಳನ್ನಾಧರಿಸಿ ರಚಿತವಾದುದು.

**ಷಟ್‌ಸ್ಥಲತತ್ತ್ವ** : ಷಟ್‌ಸ್ಥಲತತ್ತ್ವ ನಿರೂಪಣೆ ಈ ಕೃತಿಯ ಮುಖ್ಯಗುರಿ. ವೀರಶೈವ ತತ್ತ್ವಗಳ ಸಾರಸರ್ವಸ್ವವನ್ನು ಮನಗಂಡ ಹಂಪನಿಗೆ ರಕ್ತಗತವಾಗಿ ಬಂದು ಅನುಭಾವ ಸ್ವರವಚನ ಸಾಹಿತ್ಯ ರಚನೆಗೆ ಪ್ರೇರಣೆನೀಡಿದೆ. ಸ್ವರವಚನ, ಕರ್ತೃಗಳಿಗೆ ತಾತ್ವಿಕ ತಳಹದಿ ಅನುಭವದ ನೆಲೆಯ ಮೇಲೆ ಭದ್ರವಾಗಿದ್ದಂತೆ ಸ್ವರಸಂಯೋಜನೆಯ ಸ್ಪಷ್ಟ ತಿಳಿವಳಿಕೆ ಅತ್ಯಾವಶ್ಯ. ಇಲ್ಲಿ ತನ್ನ ಸ್ವರವಚನಗಳಿಗೆ ಹಂಪ ಬಳಸಿಕೊಂಡ ವಿಭಿನ್ನ ರಾಗಮಾಲಿಕೆ ಅವರ ಸಂಗೀತ ಪ್ರಜ್ಞೆಗೆ ರಾಗಸಂಯೋಜನೆಗೆ ಹೆಚ್ಚಿನ ಮಹತ್ವ ನೀಡಿವೆ. ಇಲ್ಲಿಯ ದೇಶಿ, ಮಧುಮಾಧವಿ, ಶಂಕರಾಭರಣ, ಶಾಂತಭೈರವಿ, ಸಾರಂಗ, ಭೂಪಾಳಿ, ಕನ್ನಡ ಕಾಂಬೋಧಿ, ವರಾಳಿ, ಆಹೋರಿ, ಧನಶ್ರೀ, ಮಲಹರಿ, ಭೈರವಿ, ದೇಶವರಾಳಿ ಪಹಾಡಿ ಹಾಗೂ ನಾದನಾಮ ರಾಗಗಳು ಪ್ರತಿ ಸ್ವರವಚನವನ್ನು ಅಲಂಕರಿಸಿವೆ. ಪ್ರತಿಸ್ಥಲಕ್ಕೆ ಒಂದರಂತೆ ಸ್ವರವಚನವನ್ನು ಜೋಡಿಸುವಲ್ಲಿ ಈತನಿಗೆ ಏಕೋತ್ತರ ಶತಸ್ಥಲ, ವೀರಶೈವ ಚಿಂತಾಮಣಿ, ಸೂಕ್ಷ್ಮಮಿಶ್ರ ಷಟ್‌ಸ್ಥಲದಂತಹ ಕೃತಿಗಳು ಪ್ರೇರಣೆ ನೀಡಿರಬೇಕೆಂಬುದು ಪ್ರಸ್ತಾವನಾಕಾರರ ಅಭಿಪ್ರಾಯ.

ವೀರಶೈವ ಷಟ್‌ಸ್ಥಲ, ಅಷ್ಟಾವರಣ, ಪಂಚಾಚಾರಗಳಂತಹ ತಾತ್ವಿಕ ವಿಷಯಗಳ ಗಂಭೀರ ಸಾಹಿತ್ಯಕ್ಕೆ ಸಂಗೀತದ ಜೋಡಣೆಯಿಂದ ವೈದಿಕಪರಂಪರೆಯ ಕೀರ್ತನ ಸಾಹಿತ್ಯದ ಪಕ್ಕದಲ್ಲಿಯೆ ವೀರಶೈವ ಪರಂಪರೆಯ ಸ್ವರವಚನ ಸಾಹಿತ್ಯ ತಲೆಎತ್ತಿ ನಿಲ್ಲುತ್ತದೆ. ಜನಸಾಮಾನ್ಯರಿಗೆ ಸಂಗೀತದ ಮೂಲಕ ವೀರಶೈವ ತತ್ತ್ವಗಳನ್ನು ಸಹಜ ಸುಂದರವಾಗಿ ಪ್ರಸ್ತುತ ಪಡಿಸಲೆಳಸಿದ ಸ್ವರವಚನಕಾರರ ಪ್ರಯತ್ನ ಗೌರವಾರ್ಹ ಎನಿಸುತ್ತದೆ.

ಷಟ್‌ಸ್ಥಲವನ್ನು ಆಧ್ಯಾತ್ಮಿಕ ಸಾಧನೆಗೆ ಒಡ್ಡಿರುವ ಒಂದು ಮನಃಶಾಸ್ತ್ರದ ಕೈಪಿಡಿ ಎಂದು ಕರೆಯುವರು. ಸಾಧನೆಯ ಮಾರ್ಗದಲ್ಲಿ ಮುನ್ನಡೆಯುವ ಸಾಧಕ ಹಂತ ಹಂತವಾಗಿ ಮೇಲೇರುವ ಆಧ್ಯಾತ್ಮಿಕ ಮೆಟ್ಟಿಲುಗಳೇ ಈ ಸ್ಥಲಗಳು. ಭಕ್ತಸ್ಥಲದ ಈ ಮೆಟ್ಟಿಲುಗಳು ಸಾಧಕನ ಸಂದೇಹ, ತಳಮಳ, ಆತಂಕ, ಕುತೂಹಲ, ನಿಷ್ಠೆ, ನಿರೀಕ್ಷಣೆ ಎಲ್ಲ ಬಗೆಯ ಭಾವಗಳನ್ನು ವಚನ ಸ್ವರವಚನಗಳ ಮೂಲಕ ಪ್ರಸ್ತುತಪಡಿಸಿವೆ. ಸಾಧಕನಾದವನಿಗೆ ಈ ಜಗತ್ತು ಒಂದು ಪ್ರಯೋಗಶಾಲೆ ಎನಿಸುತ್ತದೆ. ಸಾಧನೆಯ ಮೂಲಕ ಅಂತರಂಗ ಬಹಿರಂಗಗಳ ಶೋಧನೆಗೆ ಮೊದಲಾಗುತ್ತದೆ. ಭಕ್ತಸ್ಥಲದ ಮೊದಲನೆಯ ಹಂತ ಪಿಂಡಸ್ಥಲ, ಪಾಪಸಮೂಹವನ್ನು ನಾಶಮಾಡಿ ಶುದ್ಧಾಂತಃಕರಣನಾದವನು ಪಿಂಡಯೋಗ್ಯನಾಗುತ್ತಾನೆ. ಅವನಲ್ಲಿ ಶಿವತತ್ತ್ವ ಸುಪ್ತವಾಗಿ ಅಡಗಿದುದನ್ನು ಹಂಪ ತುಂಬ ತಾತ್ವಿಕವಾಗಿ ತನ್ನ ಸ್ವರವಚನದಲ್ಲಿ ವ್ಯಕ್ತಪಡಿಸಿರುವನು.

ನೆಲ ನೀರು ಶಿಲೆಯಿಂದ ಭಿತ್ತಿಗಟ್ಟಿಯೆ ಅದನು
ಸಲೆ ಗೋಮಯದಿ ಶುದ್ಧಮಾಡಿ ಸಾರಿಸುವಂತೆ
ಎಲು ಚರ್ಮ ನರ ತೊಗಲು ಮಾಂಸಮಜ್ಜೆಯ ಕೂಡಿಯೆ
ಚಲುವಾಗಿ ಈ ಕಾಯ ಗಾಳಿ ತುಂಬಿ ವೃಕ್ಷ
ಉಲಿವಂತೆ ಶಿವಬೀಜವ ಚೈತನ್ಯದಿಂದಲಿ
ಇಳೆಗೆ ತೋರುತಿರೆ....."

ಎಂದು ಇದರ ಸುಪ್ತತೆಯ ನಿಲವನ್ನು ತಿಳಿಸುವಲ್ಲಿ ಆತನ ಅಭಿಮತ ಇದು: ಪಂಚಭೂತಾತ್ಮಗಳಿಂದ ರಚಿತವಾದುದು ಈ ದೇಹ. ಭೂಮಿಗೆ ಬರುವಾಗಲೇ ಜಡ. ಇಂಥ ಜಡದೇಹದಿಂದ ಶಿವಚೈತನ್ಯದ ವೃಕ್ಷ ಉಲಿಯಬೇಕು, ಶಿವನಾದ ಹೊರಹೊಮ್ಮಬೇಕು ಎಂಬುದನ್ನು ಸೂಚ್ಯವಾಗಿ ಧ್ವನಿಪೂರ್ಣವಾಗಿ ತಿಳಿಸಿರುವನು. ಈ ಮಟ್ಟದ ಜ್ಞಾನ ಸಾಧಕನಲ್ಲಿ ನೆಲೆಗೊಂಡರೆ 'ಅಭೇದ್ಯಗುರು ಪಡುವಿಡಿ ಸಿದ್ಧಮಲ್ಲಿನಾಥನ ಪಾದವಿಡಿದ ತನುವು ಸುಕೃತದೋಹಿ, ಶಿವಸ್ವರೂಪಿ' ಎಂಬ ಭಾವ ಅಳವಟ್ಟು ಪಿಂಡಜ್ಞಾನಿಯೆನಿಸುತ್ತಾನೆ. ಈತ ಜೀವಾತ್ಮ ಪರಮಾತ್ಮರ ಸ್ವರೂಪ ತಿಳಿದವನಾಗಿರುತ್ತಾನೆ.

**ಸಂಸಾರ ವ್ಯಾಮೋಹ ನಿರಸನ :**

ತನ್ನ ಸ್ವರೂಪ ತಿಳಿದ ಭಕ್ತ ಅದರಿಂದ ವಿಸ್ಮೃತಿಗೊಂಡ ತನ್ನ ಇಂದಿನ ಪರಿಮಿತ ಶಕ್ತಿಯಲ್ಲಿಯ ಪರಿಭಾವಿಸುವನು. ಈ ಮರವೆಗೆ ಕಾರಣ ಸಂಸಾರದ ಬಗೆಗಿನ ಜಿಹಾಸೆ. ಇಲ್ಲಿ ಸಂಸಾರವೆಂಬುದೇ ಜಿಹಾಸೆ ಅಲ್ಲ. ಅದರ ಸುತ್ತುಮುತ್ತಲು ಬೆಳೆದುನಿಂತ ಮಾಯಾ ಮೋಹಗಳ ಬಲೆ. ಈ ಬಲೆಯಲ್ಲಿ ಸಿಲುಕಿದರೆ ಇದು ಎಂದಿಗೂ ಮನುಷ್ಯನನ್ನು ಹೊರಗೆ ಬಿಡದು. ಇದರ ಆಕರ್ಷಣೆಯನ್ನು ಶಿವಶರಣರು ಎಷ್ಟು ಸರಳ ಸುಂದರವಾದ ರೀತಿಯಲ್ಲಿ ಅಭಿವ್ಯಕ್ತಿಸಿದರೆಂಬುದು ಅವರ ವಚನಗಳಿಂದಲೇ ವಿದಿತವಾಗುವುದು. ಅದೇ ಶರಣರ ಮಾಲಿಕೆಯಲ್ಲಿ ನಡೆದುಬಂದ ಹೇಮಗಲ್ಲ ಹಂಪ ಯಾವ ಕಾಲಕ್ಕೂ ಅವರಿಂದ ಭಿನ್ನವಾದ ರೀತಿಯಲ್ಲಿ ಯೋಚಿಸಿದವನಲ್ಲ. 'ಪಶುವಿನ ಮುಂದೆ ಗ್ರಾಸವ ಚಲ್ಲಲದು ಹಸುರೆಂದು ಆಸೆ'ಗೈವಂತೆ, 'ಶರೀರ ಮಾಯೆಗೆ ಎನ್ನ ಗುರಿಮಾಡಿ ಹರ ನೀನಗಲಿದರೆ ಪರುಷಕೆ ಪಾಷಾಣವನೊತ್ತೆಯಿಡುವಂತೆ', 'ಹುಲಿಯ ಬಾಯೊಳು ಸಿಕ್ಕಿದ ಎರಳೆಯ ಮರಿ, ಸರ್ಪದ ಬಾಯೊಳ್ ಸಿಲ್ಕಿದ ಕಪ್ಪೆಯ ಮರಿ' 'ಮಾರ್ಜಾಲದ ಬಾಯೊಳು ಸಿಲ್ಕಿದ ಮೂಷಕ' 'ದೀಪದ ಮುಂದಣ ಪತಂಗದಂತೆ' ಸಾಧಕನ ಸ್ಥಿತಿ. ಇಂಥ ವಿಷಮ ಸನ್ನಿವೇಶದಲ್ಲಿ ಹರಿತವಾದ ಖಡ್ಗದ ಮೇಲೆ ನಡೆದಂತೆ ನಡೆಯಬೇಕಾದ ಭಕ್ತ ಹೊನ್ನು ಹೆಣ್ಣು ಮಣ್ಣು ಯಾವ ಮಾಯಾಪಾಶಗಳು ಎದುರಾದರೂ ಅವನ್ನು ಜಯಿಸಿ ಮುನ್ನಡೆಯಬೇಕಾಗುತ್ತದೆ. ನಡೆಯುತ್ತಲೇ ಬದುಕಿನಲ್ಲಿ ನಿರ್ಲಿಪ್ತ ಮನೋಭಾವನೆ ಬೆಳೆಸಿಕೊಳ್ಳಬೇಕಾಗುತ್ತದೆ.

ಶರಣರ ನೈತಿಕನಿಷ್ಠೆಯಲ್ಲಿ ಅಂತರಂಗ ಬಹಿರಂಗ ಶುದ್ಧಿಗೆ ಹೆಚ್ಚಿನ ಬೆಲೆ. ಇವು ಶರಣರ ಎಲ್ಲ ಸಾಧನೆಗೆ ಅಡಿಗಲ್ಲುಗಳು. ಹೊರಗಿನ ಕ್ರಿಯೆ ಕಾರ್ಯಗಳಿಗೆ ಬೆಲೆ ಬರುವುದು. ಅವುಗಳನ್ನು ಸದಾಕಾಲ ನಿಯಂತ್ರಿಸಿಕೊಂಡು ಹೋಗುವ ಅಂತರಂಗದ ಅರಿವಿನಿಂದ ಅಲ್ಲವೆ. 'ತನು ಬತ್ತಲೆ ಇದ್ದರೇನಯ್ಯ ಮನ ಶುಚಿಯಾಗದನ್ನಕ್ಕ ? ಮಂಡೆ ಬೋಳಾದಡೇನು ಭಾವ ಬಯಲಾಗದನ್ನಕ್ಕ ? ಭಸ್ಮವ ಪೂಸಿದಡೇನು ರಂಗಾದಿ ಗುಣಂಗಳ ಮೆಚ್ಚಿ ಸುಡದನ್ನಕ್ಕರ ?ಎಂಬ ಅನೇಕ ಮಾತುಗಳಲ್ಲಿ ಪ್ರಭುದೇವರು ಸಾಧಕನ ಜೀವನದ ನಿಷ್ಠೆಯನ್ನು ವ್ಯಕ್ತಪಡಿಸುತ್ತಾರೆ.

ವೈಚಾರಿಕ ಪ್ರತಿಭಟನೆ ಪ್ರಾಣಿವರ್ಗದಿಂದ ಮಾನವನನ್ನು ಬೇರ್ಪಡಿಸಿದ್ದು ಮಂಗಗಳಿಂದ ಮಾನವನ ಉದಯವೆನ್ನುವಲ್ಲಿ ಮಾನವನ ಬುದ್ಧಿ ಮಂಗನನ್ನೇ ಹೋಲುವಂತಾದರೆ ಮಾಡುವದೇನು ?ಮಂಗತನ ಮಾಯವಾದರೆ ತಾನೇ ಮಾನವ ಇಂಥ ಮಾನವ ಅನ್ನ,ಉದಕ, ನಿದ್ರೆ, ಕಾಮಕರ್ಮಗಳಂತಹ ಲೌಕಿಕವಿಷಯಗಳಲ್ಲಿಯೇ ಪೂರ್ಣಸುಖ ತೃಪ್ತಿ ಕಾಣುವುದಾದರೆ ಅವನಿಗೂ ಮಂಗನಿಗೂ ಅಂತರವೇನು. ಇಂಥವರ ಪರಿಸ್ಥಿತಿಯನ್ನು ಹಂಪ ಸುಂದರವಾಗಿ ವಿವರಿಸಿದ್ದಾನೆ. ಮೊದಲೇ ಜನ್ಮಜಾತವಾದ ಕಪಿ ಕಪಿಚೇಷ್ಟೆ ಬೇರೆ. ಮೇಲೆ ಮದ್ಯಪಾನ, ವಿಜಯಪತ್ರಿ, ದತ್ತೂರದ ಕಾಯ ತಿಂದು ಚೋಳು ಕಡಿಸಿಕೊಂಡು ಭೂತ ಬಡಿದು ವಿಕಾರದಿಂದ ಕಲ್ಲನೆಲ ಹಾಯ್ದು ಸಾಯುವ ಮಂಗನ ಸ್ಥಿತಿ ಮಾನವನಿಗಾದರೆ ಇವನನ್ನು ರಕ್ಷಿಸುವವರಾರು ? ಈ ಅಲ್ಪಸುಖದಿಂದ ಮನುಷ್ಯ ತೃಪ್ತನಾಗದೇ ಇದೆಲ್ಲದರಿಂದ ಬೇರೆಯಾದ ಆಂತರಿಕ ತೃಪ್ತಿಯನ್ನು ಬಯಸುವುದು ಸಂಸಾರಹೇಯ ಸ್ಥಲದಲ್ಲಿ ಕಂಡುಬರುವ ಸಾಧಕನ ಮನೋಧರ್ಮ.

**ಆತ್ಮಜಾಗೃತಿ:** ಭಕ್ತಸ್ಥಲದಲ್ಲಿ ಆತ್ಮಜಾಗೃತಿಯ ಎಚ್ಚರಿಕೆ ತುಂಬ ಆವಶ್ಯಕ. 'ಗುಡಿಯ ಮುಖದಿ ದೇವರ ಕಾಣ್ಬಂದದಿಂ ಒಡಲ ವಾಯುಮುಖದಿ ಲಿಂಗವ ಕಂಡು' ಒಡವೆರೆದು ಒಂದಾಗುವುದು. 'ಅಂಗದೊಳಗಣ ಅಷ್ಟಮೂರ್ತಿ ಮದಂಗಳ ಹಿಂಗಿ ನಿರ್ಮದವಾಗುವುದು. ಈ ಮನಸ್ಸಿನ ತಾಮಸದ ಪರಿಹಾರವನ್ನು ಶರಣರು ತುಂಬ ಸರಳವಾದ ರೀತಿಯಲ್ಲಿ ಅಭಿವ್ಯಕ್ತಿಸಿರುವರು.

*ವೇದವನೋದಿದರೆ ವ್ಯಾಧಿ ಪರಿಹಾರವಾಗದು*
*ಶಾಸ್ತ್ರವನೋದಿದರೆ ಸಂಕಲ್ಪ ಹಿಂಗದು*
*ಪುರಾಣವನೋದಿದರೆ ಪೂರ್ವಕರ್ಮವ ಕಳೆಯಲರಿಯದು ॥*

ಹೇಮಗಲ್ಲ ಹಂಪ ವೇದ ಶಾಸ್ತ್ರ ಪುರಾಣಗಳ ಅಧ್ಯಯನಕ್ಕಿಂತ ಮಿಗಿಲಾಗಿ ಅಧ್ಯಾತ್ಮದ ಅನುಭಾವವನ್ನಳವಡಿಸಿಕೊಂಡು ತಾಮಸ ನಿರ್ಮೂಲನೆಯ ಮೂಲಮಂತ್ರವನ್ನೇ ಸೂಚ್ಯವಾಗಿ ಬೋಧಿಸಿರುವನು. 'ನಾ ಬಲ್ಲೆನೆಂಬ ಗರ್ವ, ಅಹಂಕಾರಿಕೆಯೆಂಬ ಅಜ್ಞಾನಕ್ಕೆ ಗುರಿಮಾಡುವುದು' ಮನುಷ್ಯನ ಅಹಂಕಾರವೇ ಅವನ ದಾರಿತಪ್ಪಿಸುವ ಮಾರ್ಗ.

ಚಂಚಲಗೊಂಡ ಮನಸ್ಸು ನೂರಾರು ಕಡೆಗೆ ಹರಿದು 'ಎರವಲೆಯಂತೆ ಒಳಗೊಂದು ಹೊರಗೊಂದಾಗಿ' ತನ್ನ ದುಃಖಕ್ಕೆ ತಾನೇ ಕಾರಣವೆನಿಸಿಕೊಳ್ಳುವುದು 'ಬಸುರಿಲ್ಲದ ಬಯಕೆ' 'ಶಿಶುವಿಲ್ಲದೆ ಜೋಗುಳ' ಪ್ರಾರಂಭವಾಗುವುದು ಮನಸ್ಸಿನ ತಾಮಸದಿಂದಲ್ಲವೇ ? ಕುಲ, ರೂಪ, ಯೌವನ, ಧನ, ವಿದ್ಯೆ, ರಾಜ್ಯ, ತಪಮದಗಳನ್ನು ದೃಢವೆಂಬ ಕಂಬಕ್ಕೆ ಕಟ್ಟಿ ಹರಿಯಗೊಡದಂತೆ ಮಾಡಿ, ಶಿವಜ್ಞಾನವೆಂಬ ಅಂಕುಶದಿಂದ ಮೀಟಿ ಆತ್ಮವನ್ನು ಎಚ್ಚರಗೊಳಿಸಿಕೊಳ್ಳಬೇಕು. ಅಂತರಂಗದ ತಾಮಸದಂತೆ ಬಹಿರಂಗದ ತಾಮಸವೂ ತುಂಬ ಅಪಾಯಕಾರಿ. ಬಹಿರಂಗದ ಅಷ್ಟಮದಗಳು ಮನುಷ್ಯನನ್ನು ಪಶುವನ್ನಾಗಿಸುವ ಸಾಧನಗಳು. ಅಂತರಂಗದ ಅರಿಷಡ್ವರ್ಗಗಳನ್ನು ಲಿಂಗಮುಖದಿಂದ ಗೆಲ್ಲಬೇಕು. ಬಹಿರಂಗದ ಅಷ್ಟಮದಗಳ ಮೂಲವನ್ನೇ ಮುರಿಯಬೇಕು. ಹೀಗಾದಾಗ 'ತಾಮಸಗುಣವಳಿದು ಮಹಾಜ್ಞಾನದೊಳುಳಿಯಬೇಕು' ಸಾಧಕ. ಅವನ ಮನದಲ್ಲಿ ನೆಲೆನಿಂತ ಸಪ್ತವ್ಯಸನಗಳು ತರಹರಗೊಳ್ಳಬೇಕು. ಈ ಸಪ್ತವ್ಯಸನಗಳು ಅವನ ದಿಕ್ಕುತಪ್ಪಿಸುತ್ತವೆ. ಅದಕ್ಕೆ ಹೇಮಗಲ್ಲ ಹಂಪ 'ಉರಿಯ ತಾಗಿದ ಅರಗಿನಂತೆ ಕಿರಾತನ ಕೈಯ ಎರಳೆಯ ಮರಿಯಂತೆ' ಸಪ್ತವ್ಯಸನಕ್ಕೆ ಬದ್ಧನಾಗಿ ಗುರುವೆ ಎನ್ನನು ಅಗಲಿ ಹೋಗದಿರು' ಎಂದು ಹಂಬಲಿಸಿ ಆರ್ತಭಾವ ವ್ಯಕ್ತಪಡಿಸಿದುದು ಭಕ್ತಸ್ಥಲದ ಹಂಬಲವೆನಿಸಿದೆ. ಪಂಚೇಂದ್ರಿಯಗಳ ಲೌಕಿಕ ವಿಷಯಕ್ಕೆ ಸಾಧಕನ ಮನಸ್ಸು ಮೀಸಲಾಗದೆ ಲಿಂಗಾನುಭವದ ಜ್ಞಾನವಾಸನೆಯನ್ನರಿಯಬೇಕು. ಮನುಷ್ಯನೂ ಒಂದು ಪ್ರಾಣಿಯೇ. 'ಆರು ನಾನೆಂದು ವಿಚಾರಿಸು' ಎಂಬ ಮೊದಲ ಅನ್ವೇಷಣೆ ಮನುಷ್ಯ ಮತ್ತು ಪ್ರಾಣಿಯನ್ನು ವಿಭಿನ್ನಗೊಳಿಸಿದ ವೈಚಾರಿಕ ಅಂಶ. ಮನುಷ್ಯನಿಗಿರುವ ಬೆಲೆ ಈ ದೇಹದಿಂದ ಬಂದದ್ದಲ್ಲ. ಈ ದೇಹವನ್ನು ಯುಕ್ತವಾಗಿ ಬಳಸಿಕೊಳ್ಳುವ ಅರಿವಿನಿಂದ ಬಂದದ್ದು. ಆ ಅರಿವು ಈ ಪಂಚೇಂದ್ರಿಯಗಳ ಪುನರ್‌ವಿವೇಚನೆಯನ್ನು ಮಾಡುತ್ತದೆ. ಏಕೋತ್ತರ ಶತಸ್ಥಲ ವ್ಯವಸ್ಥೆಯಲ್ಲಿ 'ತಾಮಸ ನಿರಸನ' ಶರಣಸ್ಥಲದ ಒಂದು ವಿಭಾಗವಾಗಿ ಬರುತ್ತದೆ. ಸೃಷ್ಟಿ-ಸೃಷ್ಟಿಕರ್ತ, ಪರಮಾತ್ಮ-ಜೀವಾತ್ಮ, ಭಕ್ತಿ, ಜ್ಞಾನ, ಕರ್ಮ, ಅಂಗ-ಲಿಂಗ ಅವುಗಳ ಸಾಮರಸ್ಯ - ಈ ಮಾತುಗಳೆಲ್ಲ ಅವರ ಸಾಧನೆಯ ಮಾರ್ಗದಲ್ಲಿ ಬರುತ್ತವೆ. ಸಾಧಕನ ಪರಮಸತ್ಯದ ಆವಿಷ್ಕಾರಕ್ಕೆ ನಿಷ್ಠೆ, ಅವಧಾನ, ಅನುಭಾವಗಳ ಮೇಳವಿಸುವುದಕ್ಕೆ ಭಕ್ತಸ್ಥಲದಿಂದಲೇ ತಾಮಸ ನಿರಸನ ಆಗುವುದು ಹೆಚ್ಚು ಸೂಕ್ತವೆನಿಸುತ್ತದೆ.

**ಜೀವನ ಶೋಧನೆ** : ಸಾಧಕ ಈ ಮಾರ್ಗವಲ್ಲಿ ಕೈಕೊಳ್ಳುವುದು ಜೀವನಶೋಧನೆ. ಪರಂಪರೆಯ ಜೀವಸತ್ವ ಅರಗಿಸಿಕೊಂಡು ಸಾರ್ವಕಾಲಿಕ ಮೌಲ್ಯಗಳ ಮೇಲೆ ಜೀವನ ನಿರೂಪಣೆ. ಅದರಲ್ಲಿ ಮೊದಲಹೆಜ್ಜೆ ಅಹಂಕಾರ ಮನೋವಿಕಾರ ನಿರಸನ. ದೈವಭಕ್ತಿಗೆ ಸಂಪೂರ್ಣ ಶರಣಾಗತಿ. ಸಮಷ್ಟಿ ಜೀವನದ ಉತ್ಥಾನಕ್ಕೆ ಆನಂದದ ಅನ್ವೇಷಣೆ. ಇದನ್ನೇ ಶರಣರು ಅಂತರಂಗಶುದ್ಧಿ ಬಹಿರಂಗಶುದ್ಧಿ ಎಂದು ಕರೆದುದು. ಬಹಿರಂಗ ಕ್ರಿಯೆಗಳಿಗೆ ಬೆಲೆ ಬರುವುದು ಅವುಗಳನ್ನು ನಿಯಂತ್ರಿಸುವ ಅಂತರಂಗದ ಅರಿವಿನಿಂದ, 'ಮನವೆಂಬ ಪಕ್ಷಿಯ

ಮುರಿದು ನುಂಗಬಲ್ಲಡೆ ಆತನೆ ಸತ್ಯ ಶಿವಯೋಗಿ'. ಹಾರುತ್ತಿರುವ ಮನವೆಂಬ ಪಕ್ಷಿಯನ್ನು ಹಿಡಿತದಲ್ಲಿಡುವುದು ಈ ಅಹಂಕಾರ ನಿರಸನ ಶ್ರದ್ಧೆ ಮತ್ತು ನಿಷ್ಠೆಗಳೆರಡೂ ಸಾಧಕ ಜೀವನದ ನೆಲೆಗಟ್ಟುಗಳು. ಶ್ರದ್ಧಾಭಕ್ತಿ ನೈಷ್ಠಿಕಭಕ್ತಿಗಳ ಸಮನ್ವಯ ಮನೋವಿಕಾರನಿರಸನದ ಪಲಾಯನ.

ಈ ಸಂಸಾರಬಂಧನ ನಶ್ವರ ಹೇಯ ಎಂದು ತಿಳಿದ ಭಕ್ತ ಇದನ್ನು ತ್ಯಜಿಸಿ ಓಡಿಹೋಗಬೇಕೆಂದು ಷಟ್‌ಸ್ಥಲ ಹೇಳುವುದಿಲ್ಲ. ಇದು ಮಾಯೆ, ಭ್ರಾಂತಿಜನ್ಯ, ವ್ಯರ್ಥ ಎಂಬ ವೈರಾಗ್ಯದ ದಾರಿ ತೋರಿಸುವುದಿಲ್ಲ. ಈ ಸಂಸಾರವನ್ನು ಸತ್ಯವೆಂದು ಒಪ್ಪಿ ಇಲ್ಲಿಯೆ ಇದ್ದು ಚೆನ್ನಾಗಿ ಬಾಳಿ ಬದುಕಿ ಇದಕ್ಕೆ ಅತೀತ ಮಾರ್ಗವನ್ನು ಹುಡುಕಬೇಕು. ಈ ಲೋಕದ ಯಾವೊಂದು ಅಂಶವನ್ನು ತಿರಸ್ಕರಿಸದೇ ಅದರ ಮಿತಿಯನ್ನರಿತು ತನ್ನ ಉದ್ದೇಶಕ್ಕೆ ಅಳವಡಿಸಿಕೊಳ್ಳುವ ಬಗೆಯಲ್ಲಿಯೇ ಅದರ ಕೌಶಲ ಅಡಗಿರುವುದು. ಅದಕ್ಕೆ ಬಸವಣ್ಣನವರು ಹೇಳಿದ್ದು 'ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟ, ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು, ಎಂದುದು. ಈ ಚರಾಚರ ಸೃಷ್ಟಿ ನಮ್ಮನ್ನು ಬಹುವಿಧದಲ್ಲಿ ಆಕರ್ಷಿಸುತ್ತದೆ.

*ಚಣಚಣಕ್ಕೆ ಪಾತಾಳಲೋಕಕ್ಕೈದುವ ಮನಂ*
*ಚಣಚಣಕ್ಕೆ ಆಕಾಶದತ್ತ ಹಾರುವ ಮನಂ*
*ಚಣಚಣಕ್ಕೆ ಸಪ್ತಸಮುದ್ರವ ಚರಿಸಿಬರುವದೀ ಮನಂ*

ಈ ಲೌಕಿಕಸೃಷ್ಟಿ ಪಂಚೇಂದ್ರಿಯಗಳಿಗೆ ಯಾವ ರೂಪದಿಂದ ಸಂಕೋಲೆ ತೊಡಿಸಲು ಬಂದರೂ ಆಯಾ ರೂಪದಲ್ಲಿಯೆ ಆ ಸಂಕೋಲೆಗಳನ್ನು ಗೆದ್ದು ಬದುಕಿನ ನಿಚ್ಚಣಿಗೆಯನ್ನಾಗಿಸಿಕೊಳ್ಳಬೇಕು. 'ಮನವನ್ನು ನಿರಸನ ಮಾಡಿ ನಿರ್ಮೋಹಿಯಾಗಬೇಕು.' ಅಂದರೆ ಅವುಗಳನ್ನು ನೋಡುವ ಮನೋಧರ್ಮ ಬದಲಾಗಬೇಕು. ಮನದ ಮುಂದಣ ಆಶಾಪಾಶವ ಗೆಲ್ಲಬೇಕು. ಮಾಯೆಯನ್ನು ತಿರಸ್ಕರಿಸುವುದರಿಂದ ಅವುಗಳ ಪ್ರಲೋಭನೆಯನ್ನು ಗೆಲ್ಲಲು ಸಾಧ್ಯವಾಗದು. ಈ ಪ್ರಲೋಭನೆಗೆ ಒಂದು ವೇಳೆ ಬದ್ಧವಾದರೆ ಈ ಮನ ಪಾಪಿಮನ, ಠಕ್ಕಮನ, ಕೋಪಿಮನ, ಕುಕ್ಕಮನ, ಕಾಕುಮನ, ಚಾಪಿಮನ, ಹೇವ ಮನ, ಹೆಬಗಮನ, ಇತ್ಯಾದಿ ಇತ್ಯಾದಿ. ಧರ್ಮದ ವಿಚಾರದಲ್ಲಿ ಶರಣರ ಮೂಲಭೂತವಾದ ಮೌಲ್ಯ ಅಂತರಂಗದ ಅರಿವು ಮತ್ತು ಅದರ ಮುನ್ನಡೆ. ಇದನ್ನು ಸಾಧಿಸುವಲ್ಲಿ ಇಷ್ಟಲಿಂಗ ಸಾರಸರ್ವಸ್ವವಾಗಿ, ಪರಮಮೌಲ್ಯವಾಗಿ ಪರಿಣಮಿಸಿತು. ಇದಕ್ಕೆ ಸಹಾಯಕವಾಗುವಂತೆ ಆಚಾರ ವಿಚಾರ ನಡೆನುಡಿ ಇಹಪರಗಳ ಸಮನ್ವಯಮಾರ್ಗವನ್ನು ಅವರು ರೂಪಿಸಿದರು. ಬಂಧಮೋಕ್ಷಕ್ಕೆ ಕಾರಣವಾದುದು ಮನ. ಇದರ ಮೂಲವನ್ನು ಹಿಡಿದು ಜಗತ್ತಿನ ಸ್ವರೂಪವನ್ನೇ ಬದಲಿಸುವ ಪ್ರಯತ್ನ ಶರಣರದು.

*ಉದಯವಾಯಿತೆಂದು ಉದರಕ್ಕೆ ಕುದಿವುದು ಮನ*
*ರಾತ್ರಿಯಾದುದ ಕಂಡು ವಿಷಯಕ್ಕೆ ಕುದಿವುದು ಮನ॥*

ಎಂದು ನಂಬಿದ ಅವರು ಈ ಬದುಕಿನ ದಂದುಗದ ದಾಳಿಯಲ್ಲಿ ನೊಂದು ಬೆಂದು ಹೋಗುವ ಮುನ್ನ ಇದನ್ನು ನ್ಯಾಯಮಾರ್ಗದಲ್ಲಿ ಮುನ್ನಡೆಸುವ ನಿರ್ಣಯ ಹೊಂದಿದರು. ಬರುವ ವಿಷಯಸುಖಗಳನ್ನು ಸನ್ಮಾರ್ಗದಿಂದ ಪಡೆದು ಅನುಭವಿಸಿ ಅವುಗಳ ಪರಿಮಿತಿಯಲ್ಲಿ ಮುಂದುವರೆದು ಈ ಲೌಕಿಕಸುಖವನ್ನು 'ನಸುಗುನ್ನಿ ಚುರಿಚಿತನ' ದಿಂದ ಬಿಡುಗಡೆ ಮಾಡಿಸುವುದು.

**ಕಾಮಿನಿ ಕಾಂಚನಗಳ ಆವಶ್ಯಕತೆ** : ಧರ್ಮ ಅರ್ಥ ಕಾಮಗಳ ವಿವೇಚನೆಯಲ್ಲಿ ಅವರದು ಸ್ವತಂತ್ರ ವಿಚಾರ. ಕಾಮಿನಿ ಕಾಂಚನಗಳು ಬದುಕಿನ ಆವಶ್ಯಕತೆಗಳನ್ನು ಪೂರೈಸುವ ಮೂಲಭೂತ ಮೌಲ್ಯಗಳಾಗಿದ್ದರೂ ಅವುಗಳಿಗೆ ಪರಿಮಿತತೆ ಆವಶ್ಯಕ. ಮನೋನಿಗ್ರಹದ ಜೊತೆಗೆ ಸಂಯಮವನ್ನು ಅವರು ಬೋಧಿಸಿರುವರು.

*ಆಸೆ ಮಾಡದಿರು ಪರರಿಗೆ ಹೇಳು ಮನವೆ*
*ದೋಷರಹಿತಲಿಂಗವಲ್ಲದನ್ಯರಿಗೆ ದಯವೆಂದು*

ಆಶಾಪಾಶದ ಭ್ರಾಂತಿನ ಹಂಗ ಹರಿದು, ಲೋಕದ ಲೌಕಿಕಕ್ಕೆ ಬದ್ಧರಾಗದೆ ದೋಷರಹಿತ ಲಿಂಗದೇವನಿಗೆ ಮೊರೆಹೋಗಬೇಕು ಎಂಬುದು ಹಂಪನ ಎಚ್ಚರಿಕೆಯ ಮಾತು. ಸತ್‌ಚಿತ್ತಶಕ್ತಿಯನ್ನು ಅಳವಡಿಸಿಕೊಂಡ ಸಾಧಕನಾದವನು ಮತ್ತೊಬ್ಬರನ್ನು ಬೇಡುವ ಆವಶ್ಯಕತೆ ಇಲ್ಲ.

*ಪರುಷ ಮನೆಯೊಳಿರೆ ಪರರ ಹಣವ ಬೇಡಲುಂಟೇ?*
*ಜಲವಿಲ್ಲದ ಕೆರೆಗೆ ತುರುಬಂದು ಹಿಂತಿರುಗುವಂತೆ*
*ಫಲವಿಲ್ಲದ ಮರಕೆ ಗಿಳಿವಿಂಡು ಮುಸುಕಿದಂತೆ*
*ನಳಿನವಿಲ್ಲದ ಕೊಳಕೆರಗಿದಳಿಚರದಂತೆ*
*ಮಲಹರನ ಭಕ್ತಿಜ್ಞಾನ ವೈರಾಗ್ಯವಿಲ್ಲದವರಿಗೆ ॥*

ಜೀವನದಲ್ಲಿ ಏನಿದ್ದರೂ ವ್ಯರ್ಥ, ಏಷ್ಟಿದ್ದರೂ ವ್ಯರ್ಥ. ಕಾಮಧೇನುವನ್ನು ಬೇಡಿದರೆ ಅಮೃತವನ್ನು ಕೊಟ್ಟೀತು, ಸದಾ ಧರೆಯ ಮೇಲಿನ ಗೋವುಗಳು ಈ ಅಮೃತವನ್ನು ಕೊಡಬಲ್ಲವೇ ? ಬದುಕಿನ ಮರ್ಮವನ್ನರಿತ ಹೇಮಗಲ್ಲ ಹಂಪ ಹೇಳಿದ ಕಿವಿಮಾತು 'ಸರ್ವರ ಮನಧರ್ಮವನ್ನರಿದ ಪರಮಾತ್ಮ ನಿನ್ನ ಕರದೊಳಿರೆ ಅನ್ಯಸಂಗವ ಮಾಣಿಸು' ಎಂದು.

ಧರ್ಮಸಾಧನೆಯ ಪರಮಗಂತವ್ಯವನ್ನು ಶರಣರು ಲಿಂಗಾಂಗಸಾಮರಸ್ಯ ಎಂದು ಕರೆದರು. ಇಷ್ಟಲಿಂಗವೇ ಪರಮಸಾಧನವೆಂದು ನಂಬಿ ನಡೆದರು. ಸತ್ಕ್ರಿಯಾಚಾರದ ತಳಹದಿಯ ಮೇಲೆ ಧಾರ್ಮಿಕ ಜೀವನದ ಸೌಧ ಕಟ್ಟಿದರು. ಅಂಗಕ್ರಿಯೆಗಳನ್ನು ಲಿಂಗಕ್ರಿಯೆಗಳನ್ನಾಗಿ ಪರಿವರ್ತಿಸಿದರು. ಅಂತರಂಗದ ವಿಕಾಸದ ಸಾರ್ಥಕತೆಯನ್ನು

ಮನಗಂಡರು. ಸಂಸಾರ ಹೇಯವೆಂದರಿತು ಕಾಯವನ್ನು ಕೈಲಾಸವನ್ನಾಗಿಸಿಕೊಳ್ಳುವುದಕ್ಕೆ ಜನಸಾಮಾನ್ಯರ ಸುಪ್ತಶಕ್ತಿಯನ್ನು ಎಚ್ಚರಗೊಳಿಸಿ ಕಾರ್ಯಸನ್ನದ್ಧರನ್ನಾಗಿಸಿದರು. ಈ ಲೌಕಿಕ ಸಂಸಾರ ನಶ್ವರವೆಂಬ ಭಾವ ಮನದಲ್ಲಿ ಗಟ್ಟಿಗೊಳ್ಳಲು ಇದರಿಂದ ಮುಕ್ತಿಯ ಮಾರ್ಗವೇ ಆಧ್ಯಾತ್ಮದ ಅನ್ವೇಷಣೆಯಾಯಿತು.

*ತೆರಣಿಯ ಹುಳು ನೂಲು ಸುತ್ತಿಕೊಂಡು ಎಸೆವ*
*ತೆರದಿ ಈ ಸಂಸಾರ ಸುಖ ದುಃಖ ಎನ್ನನು ಸುತ್ತಿ*
*ಪರಿಭವಕ್ಕೆ ಗುರಿಯಾಗಿ ಯೋನಿಯಂತ್ರದೆ*
*ತಿರುಗಿಯೆ ಬರುತಲಿರ್ದನು ಘೋರ ಅರಣ್ಯದೊಳು ಸುತ್ತಿ*
*ಹರಹರ ನಿಮ್ಮ ಸ್ಮರಣೆಯ ಮರೆದ ಕಾರಣ*
*ದುರಿತ ಅನ್ಯಾಯ ಬಂಧನಕೆ ಗುರಿಯಾಗಿದ್ದೆನಯ್ಯ ಶಿವನೆ ॥*

ಎಂದು ವಿಚಾರದೌರ್ಬಲ್ಯದ, ಅವಿವೇಕದ, ಭವಸುಖಕ್ಕೆ ಬದ್ಧನಾದ ಬದುಕು ಕಂಡು ಮರುಗದೇ ಇಲ್ಲ. ತಾನು ನಂಬಿದ ಮಾಯಾಪ್ರಪಂಚ ಶೋಷಣೆ, ದೌರ್ಜನ್ಯ ದಬ್ಬಾಳಿಕೆಯ ಸಮಾಜವನ್ನು ಕಂಡಾಗ, ತಾನು ನಂಬಿ ಸಾಧಿಸಿದ ಆಧ್ಯಾತ್ಮದ ಬೆಳಕು ಕೈದೀವಿಗೆಯಾಗಿ ಮುನ್ನಡೆಸಿದೆ. ಕಾಮಿನ ಕಾಂಚನದ ಮರ್ಮ ಹೃದ್ಗತವಾಗಿದೆ. 'ಕೆಚ್ಚಲ ಕಚ್ಚಿದ ಉಣ್ಣೆ ಪಂಚಾಮೃತದ ಸವಿಯನೆತ್ತಬಲ್ಲದು' ಎಂಬಂತೆ ತನ್ನ ಅಲ್ಪತನದ ಪರಿಣಾಮ ಅನುಭಾವದ ಮಾರ್ಗಕ್ಕೆ ದಾರಿಮಾಡಿಕೊಟ್ಟಿದೆ.

**ಗುರುಕಾರುಣ್ಯ:** ಅಪ್ಪಾವರಣದಲ್ಲಿ ಅರುಹನ್ನು ಮಂಡಿಸಿ ದಾರಿತಪ್ಪಿದ ಸಾಧಕನಿಗೆ ಸನ್ಮಾರ್ಗದರ್ಶನ ಮಾಡಿ ಅಪಮೌಲ್ಯವಾಗುತ್ತಿರುವ ಜೀವನವನ್ನು ಮಹಾಮೌಲ್ಯವಾಗಿ ಪರಿವರ್ತಿಸುವವ ಗುರು. ವೀರಶೈವ ತತ್ತ್ವಮಾಲಿಕೆಯಲ್ಲಿ ಸಾಕ್ಷಾತನಿರಂಜನತತ್ತ್ವ, ಸಾಕಾರರೂಪನೆಂದು ವರ್ಣಿತನಾದವ. ಇಂಥ ಗುರು ಹೇಮಗಲ್ಲ ಹಂಪನ ಪಾಲಿಗೆ ಪರಮನಿರಂಜನ ಮೂರ್ತಿಯೆನಿಸಿರುವನು.

*ಗುರು ಕರುಣೆಯೆ ಸದಾಚಾರ*
*ಗುರು ಕರುಣೆಯೆ ಶಿವಾಚಾರ*
*ಮುಂದೆ ಗುರು, ಹಿಂದೆ ಲಿಂಗ*
*ಅಂಗದಲ್ಲಿ ಆಚಾರವನ್ನು ತೋರುವವನು ಗುರು*
*ಆಚಾರವೇ ಲಿಂಗವೆಂದರುಹುವವನು ಗುರು*
*ಪ್ರಾಣದಲ್ಲಿ ಅರಿವನ್ನು ನೆಲೆಗೊಳಿಸುವವನು ಗುರು*
*ಮಾಂಸಪಿಂಡವನ್ನು ಮಂತ್ರಪಿಂಡವನ್ನಾಗಿಸುವವನು ಗುರು*
*ಗುರುಮಹಿಮೆಯನ್ನು ಎಷ್ಟು ಕೊಂಡಾಡಿದರೂ ಹಂಪನಿಗೆ ತೃಪ್ತಿ ಇಲ್ಲ.*

ಸದ್ಗುರುವಿನಿಂದ ಪಡೆದ ದೀಕ್ಷೆ ತನ್ನಂತಹ ಶಿಷ್ಯನ ಬದುಕಿಗೆ ಹೊಸಆಯಾಮ ನೀಡಿರುವುದನ್ನು ಮನದುಂಬಿ ತನ್ನ ಸ್ವರವಚನವಲ್ಲಿ ವ್ಯಕ್ತಪಡಿಸಿದ್ದಾನೆ.

*ಮಾಡಿಕಲಿಸಿದ ಲಿಂಗದ ಸೇವೆಯ ಸದಾ*
*ನೀಡಕಲಿಸಿದ ಜಂಗಮಕಮೃತಾನ್ನವ*
*ಬೇಡಕಲಿಸಿ ಮುಕ್ತಿಯ ಫಲಪದವ*
*ಗೂಡಕಲಿಸಿ ಶಿವಾನಂದಲೀಲೆಯೊ*
*ಳಾಡಕಲಿಸಿ ನಿಜನಿತ್ಯ ನಿರ್ಮಳಿನ*
*ಮಾಡಿದ ಗುರುವರ ಸಿದ್ಧಮಲ್ಲೇಶಾ //*

ಎಂದು ನರಜನ್ಮವ ಕಳೆದು ಹರಜನ್ಮವ ಮಾಡಿದ ಸದ್ಗುರುವಿನ ದಿವ್ಯಕರುಣಾ ಕಟಾಕ್ಷವನ್ನು ಸ್ತುತಿಸಿರುವನು. ತಾನೇ ಒಬ್ಬ ಆಧ್ಯಾತ್ಮ ಸಾಧಕನಾಗಿ ತನ್ನ ಗುರುವು ದೀಕ್ಷೆಯ ಮೂಲಕ ತನ್ನ ಭವಿತನವನ್ನು ಕಳೆದು ಅಂಗದ ಮೇಲೆ ಲಿಂಗವಿರಿಸಿ ತರತಮ ಭಾವನೆಗಳನ್ನು ಸುಟ್ಟುಹಾಕಿ ತನ್ನ ಮುಕ್ತಿಗೆ ಕಾರಣನಾದುದನ್ನು ಅವನ ಸ್ವರವಚನಗಳೇ ಅರುಹುತ್ತವೆ.

ಗುರುಶಿಷ್ಯ ಸಂಬಂಧವನ್ನು ತುಂಬ ಪರಿಣಾಮಕಾರಿಯಾಗಿ ಹಂಪ ಚಿತ್ರಿಸಿರುವನು. ಸದ್ಗುರುವಿಗೆ ಸತ್‌ಶಿಷ್ಯ ದೊರಕಿದಾಗಲೇ ಗುರುಜನ್ಮಕ್ಕೆ ಮುಕ್ತಿ. ಸದ್ಗುರುವಿನ ಕಾರುಣ್ಯವಾದರೂ ಅದನ್ನು ದೊರಕಿಸಿಕೊಳ್ಳುವ ನಿಷ್ಠೆ ಭಕ್ತನಲ್ಲಿ ಹುಟ್ಟಬೇಕು. 'ತನ್ನಂತೆ ಎನ್ನನು' ಮಾಡಿಕೊಳ್ಳುವ ಭವರೋಗವೈದ್ಯನಾಗಬೇಕು ಗುರು. ಆತನ ಕರುಣಾಪೂರ್ಣ ದೀಕ್ಷೆಯಿಂದ ಗುರುಶಿಷ್ಯವೆಂಬ ಭೇದವಳಿದು 'ಜ್ಯೋತಿಯ ಸಂಗದಿಂದ ಕರ್ಪೂರ ಜ್ಯೋತಿಯುಪ್ಪಂತೆ' ಆಗಬೇಕು. ಅಂದಾಗಲೇ ಗುರು ಶಿಷ್ಯರ ಸಂಬಂಧದ ನಿಲುಕಡೆ ಎಂಬುದು ಹೇಮಗಲ್ಲನ ಅಭಿಪ್ರಾಯ.

**ಅಷ್ಟಾವರಣಗಳ ಮಹತ್ವ** : ಶಿವಯೋಗ ವಿವೇಚನೆಯಲ್ಲಿ ಅಷ್ಟಾವರಣಗಳು ಅತ್ಯಾವಶ್ಯಕ. ಗುರುವನ್ನು ಮೊದಲ್ಗೊಂಡು ರುದ್ರಾಕ್ಷಿ ಮಂತ್ರದವರೆಗೆ ಎಂಟು ಆವರಣಗಳ ಹರುಹು ಈ ಅಷ್ಟಾವರಣಕ್ಕಿದೆ. ಇವು ಬಹಿರಂಗದ ಸಾಧನಗಳಲ್ಲ. ಆಂತರಿಕ ಅರಿವು ಬಹಿರ್ ರೂಪವನ್ನು ಧರಿಸುವ ಸಂಕೇತಗಳೆಂಬುದು ಶರಣರ ಅನಿಸಿಕೆ. ಸ್ಥೂಲಶರೀರದಲ್ಲಿ ಇವುಗಳನ್ನು ಧರಿಸಿಕೊಳ್ಳುವುದರಿಂದ ತನುಗುಣಗಳನ್ನು ಕಳೆದುಕೊಂಡು, ದೇಹದಲ್ಲಿರುವ ಸುಪ್ತಶಕ್ತಿಯನ್ನು ಜಾಗೃತಗೊಳಿಸಿಕೊಂಡು ಅವುಗಳ ವಿಕಾಸಕ್ಕೆ ಅವಕಾಶವಾಗುವುದು. ಇವುಗಳ ಧಾರಣೆಯಿಂದ ಶ್ರದ್ಧೆ, ಧ್ಯಾನದಲ್ಲಿ ಏಕಾಗ್ರತೆ, ಅಂತರಂಗ ಬಹಿರಂಗ ಶುದ್ಧಿ ಲಭಿಸುತ್ತದೆ.

ವಿಭೂತಿ ಶಿವನ ದಿವ್ಯತೇಜಸ್ಸು. ಪರಶಿವನ ಪರಮಚೈತನ್ಯ ವಿಭೂತಿಯನೆ ಧರಿಸಿ ಮಲತ್ರಯಂಗಳ ತೊಳೆದೆನು ನೋಡಾ, ಮಲತ್ರಯಂಗಳು ಪರಿಹಾರವಾಗಿ ಮುನ್ನ

ಭವಬಂಧನದ ಬೇರ ಸಂಹರಿಸಿದೆ ಎಂದು ಉದ್ಗಾರ ತೆಗೆದಿರುವನು. ರುದ್ರಾಕ್ಷಿ ಪರಶಿವನ ಜ್ಞಾನಚಕ್ಷುವಿನಿಂದ ಉದಯವಾದುದೆಂದು ಶರಣರು ನಂಬಿದ್ದಾರೆ. 'ಧರಿಸಿರೋ ಶ್ರೀ ರುದ್ರಾಕ್ಷಿಯ ಬಾಹು ಉರ ಕಂಠ ಪಣೆ ಮಸ್ತಕದಲಿ ಒಲಿದು' ಎಂದು ರುದ್ರಾಕ್ಷಿಯ ಮಹಿಮೆಯನ್ನು ಕೊಂಡಾಡಿದ್ದಾರೆ. ಹೀಗೆ ಅಷ್ಟಾವರಣಗಳ ಮಹಿಮೆ ಮುಂದುವರೆದಿದೆ.

ಬಸವಾದಿ ಶರಣರ ವಿಷಯದಲ್ಲಿ ಹೇಮಗಲ್ಲ ಹಂಪನಿಗೆ ವಿಶೇಷ ಗೌರವವಿದೆ .ಅವರು ಸಾಧಿಸಿದ ಸಾಧನೆ, ಸಾಧನೆಯಿಂದ ಉಜ್ವಲಗೊಂಡ ದಿವ್ಯವ್ಯಕ್ತಿತ್ವ, ರೂಢಿಸಿಕೊಂಡ ಲೌಕಿಕ ಅನುಭಾವಿಕ ದೃಷ್ಟಿಧೋರಣೆಗಳು ಹೇಮಗಲ್ಲ ಹಂಪನಿಗೆ ದಿವ್ಯಮಾರ್ಗದರ್ಶನ ಮಾಡಿವೆ. ಬಸವಣ್ಣ ಪ್ರಭುದೇವ, ಸಿದ್ಧರಾಮ, ಅಜಗಣ್ಣ ಅಂಬಿಗರ ಚೌಡಯ್ಯ, ಮಡಿವಾಳ ಮಾಚಯ್ಯ, ಮಹಾದೇವಿಯಕ್ಕ ಮುಂತಾದ ಶರಣ ಶರಣೆಯರನ್ನು ಪುರಾತನರು, ತೇರಸರು, ಷೊಡಶರು, ದಶಗಣರು, ಅಮರಗಣಾಧೀಶ್ವರರನ್ನು ಭಕ್ತಿಯಿಂದ ನೆನೆದು ತಾನು ಅವ ಆಳಿನಾಳೆಂದು ವಿನೀತನಾಗಿ ನುಡಿಯುವಲ್ಲಿ ಶರಣಸನ್ನಿಧಿಯಲ್ಲಿ ಹಂಪನಿಗಿದ್ದ ಗೌರವಕ್ಕೆ ಸೂಚನೆಯೆನಿಸುತ್ತದೆ.

ಹಂಪನ ಸ್ವರವಚನಗಳಲ್ಲಿ ತತ್ತ್ವವಿವೇಚನೆ ಮುಖ್ಯವಾದರೂ ಸಾಹಿತ್ಯದ ಸೊಬಗು ಮೇಳೈಸಿದೆ. ವಚನಕಾರರಿಂದ ತುಂಬ ಪ್ರಭಾವಿತನಾಗಿ ವಚನಗಳ ವಸ್ತು, ಭಾವ, ಧಾಟಿ, ಧೋರಣೆಗಳನ್ನು ತನ್ನವನ್ನಾಗಿಸಿಕೊಂಡಿದ್ದು ಇವನ ವಿಶೇಷ. ಸಂಪಾದಕರೇ ತಿಳಿಸುವಂತೆ ಮಾಯಾವಿಡಂಬನ ಸ್ಥಲ, ಮಾಯಾತಮಂಥ ನಿರಸನಸ್ಥಲ, ಸಂಸಾರಹೇಯ ಸ್ಥಲದ ವಚನಗಳು ಬಸವಣ್ಣನವರ ವಚನಗಳ ಪಡಿಯಚ್ಚು. ಮೂಲದ ಸತ್ವ ಈ ಸ್ವರವಚನಗಳಲ್ಲಿ ಇಲ್ಲವೆಂದು ಹೇಳಿದ್ದು ಸ್ವರವಚನಗಳನ್ನು ಗಮನಿಸಿದಾಗ ಸತ್ಯವೆನಿಸುವುದು.

ಸಮಕಾಲೀನ ಸಮಾಜದಲ್ಲಿ ಕಂಡುಬರುವ ಮೂಢನಂಬಿಕೆಗಳನ್ನು ಹಂಪ ವಿಡಂಬಿಸಿದ್ದಾನೆ. ಮಾರಿ ಮಸಣಿ, ಮೈಲಾರ, ಕೋತ ಮುಂತಾದ ಕೀಳುದೈವಗಳಿಗೆ ಹರಕೆ ಹೊತ್ತು, ಬೇವಿನುಡುಗೆ ಸುತ್ತಿಕೊಳ್ಳುವುದು, ಬತ್ತಲೆ ಸೇವೆ ಸಲ್ಲಿಸುವುದು, ಸಿಡಿಯಾಡುವುದು, ಶಸ್ತ್ರ ಹಾಕಿಕೊಳ್ಳುವುದು, ಬೆಂಕಿ ಹಾರುವುದು, ಕೆಂಡ ಹಾಯ್ದುವುದು ಮುಂತಾದ ವಿಕೃತ ಕಾರ್ಯಸಾಧನೆ ಮಾಡುವವರನ್ನು ಅಜ್ಞಾನಿಗಳೆಂದು ಹಂಪ ಕಟುವಾಗಿ ಖಂಡಿಸಿ ಸನ್ಮಾರ್ಗದರ್ಶನ ಮಾಡಿರುವನು. ಹೀಗಾಗಿ ಹೇಮಗಲ್ಲ ಹಂಪನ ಸ್ವರವಚನ ಸಾಹಿತ್ಯ ಶರಣರ ಕಾಲದ ಸ್ವರವಚನಗಳಷ್ಟು ಮೌಲ್ಯಪೂರ್ಣವಾಗಿರದಿದ್ದರೂ ತಕ್ಕಮಟ್ಟಿನ ಯೋಗ್ಯತೆಯನ್ನು ವ್ಯಕ್ತಪಡಿಸುವ ಅನುಭಾವ ಸಾಹಿತ್ಯವೆಂದು ಹೇಳಬೇಕಾಗುತ್ತದೆ.



# ಹೇಮಗಲ್ಲ ಷಟ್ಸ್ಥಲ

ಡಾ|| ಬಿ. ವಿ. ಶಿರೂರ

ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದಲ್ಲಿರುವ ಎರಡು ಕಾಗದ ಪ್ರತಿಗಳ[1] ಪ್ರಾರಂಭದಲ್ಲಿ "ಹೇಮಗಲ್ಲ ಷಟ್ಸ್ಥಲವ ಬರೆವುದಕ್ಕೆ ಶುಭಮಸ್ತು' ಎಂದಿರುವುದರಿಂದ ಈ ಕೃತಿಯ ಹೆಸರು "ಹೇಮಗಲ್ಲ ಷಟ್ಸ್ಥಲ" ಎಂಬುದು ಸ್ಪಷ್ಟವಾಗುತ್ತದೆ. ಇದೊಂದು ವಚನ ಗ್ರಂಥ. ಈವರೆಗೆ ಎಲ್ಲೂ ಪ್ರಕಟವಾಗಿಲ್ಲ. ಕರ್ತೃ ಹೇಮಗಲ್ಲ ಹಂಪ. ಆದ್ದರಿಂದ ಈ ಕೃತಿಯನ್ನು 'ಹೇಮಗಲ್ಲಿನ ಹಂಪನು ಬರೆದ ಷಟ್ಸ್ಥಲ' ಎಂದು ಅರ್ಥೈಸಬಹುದಾಗಿದೆ. 'ಹಂಪ' ಎಂಬ ಹೆಸರು ಹಂಪೆಯ ಪ್ರಭಾವದಿಂದ ಬಂದಿರಬೇಕು. 'ಹೇಮಗಲ್ಲು' ಹೆಸರಿನ ಊರು ಸದ್ಯ ಕರ್ನಾಟಕದಲ್ಲಿ ಯಾವುದೂ ಇಲ್ಲ. ಬಹುಶಃ ಇದು ಹಂಪೆಯ ಸುತ್ತ-ಮುತ್ತಲ ಪ್ರದೇಶದಲ್ಲಿ ಇದ್ದಿರಬಹುದಾದ ಯಾವುದಾದರೂ ಒಂದು ಊರು ಆಗಿರಬಹುದು. ಏಕೆಂದರೆ ಇವತ್ತಿಗೂ ಅಲ್ಲಿ 'ಹೇಮ' ಎಂಬ ಪದ (ಹೇಮಕೂಟ ಮುಂತಾಗಿ) ಪ್ರಯೋಗದಲ್ಲಿದೆ. ಅಲ್ಲಿಯ ಕಲ್ಲಿನ ಬಣ್ಣವೂ ಹೇಮಮಯವಾಗಿದೆ. ಆದ್ದರಿಂದ ಈ ಊರು ಈ ಪ್ರದೇಶದಲ್ಲಿದ್ದಿರಬಹುದು. 'ಹೇಮಗಲ್ಲು' ಎಂಬುದನ್ನು ಕೃತಿಕಾರ ತನ್ನ ಅಂಕಿತನಾಮ ರೂಪದಲ್ಲಿಯೂ ಬಳಸಿದ್ದಾನೆ.[2]

---

೧. ನಂ. ೬೬೭, ನಂ. ೩೫೨೭

೨. ಷಡುಸ್ಥಲ ಪಂಚಾಕ್ಷರಿಯನು| ಬಿಡದೆ ಜಪಿಸಲು ಮುಕ್ತಿಯೆಂದು ಪೊಗಳ್ದ ಹೇಮಗಲ್ಲಂ ತನ್ನ ದೃಢಮೂರ್ತಿ| ಶಂಭು ಗುರುರಾಯ ಪಡುವಿಡಿ ಸಿದ್ಧ ಮಲ್ಲಿನಾಥ ಕೃಪೆಯಿಂ. ಸ್ಥಲ 16, ಕೊನೆಯ ಕಂದ.

ಈ ಕೃತಿಯ ವಚನಗಳ ಮಧ್ಯದಲ್ಲಿ ಶಂಕರದೇವರ ನಾಲ್ಕು ಕಂವಗಳನ್ನು ಬಳಸಿಕೊಂಡಿರುವುದರಿಂದ[೧] ಈ ಕೃತಿಯ ಕರ್ತೃ ಸು.೧೫೪೦ ರ ತರುವಾಯದವನು. ಭಾಷೆಯನ್ನು ನೋಡಿದರೆ ಇವನು ೧೭೧೪ನೆಯ ಶತಮಾನದವನು ಎಂಬುದು ಸ್ಪಷ್ಟವಾಗುತ್ತದೆ.

ಇವನು ವೀರಶೈವ ಸಂಪ್ರದಾಯದಲ್ಲಿ ಪ್ರಮುಖವಾದ ಪಡುವಿಡಿ ಸಂಪ್ರದಾಯದವನು. ಈ ಕೃತಿಯಲ್ಲಿ ತನ್ನ ಗುರುಪರಂಪರೆಯನ್ನು ಈ ರೀತಿ ಹೇಳಿಕೊಂಡಿದ್ದಾನೆ. ''ಅನಾದಿ ಪರಶಿವನ ಶಿಷ್ಯ ಆದಿಶಂಭುವೆಂಬ ಗಣೇಶ್ವರನು. ಆದಿಗಣೇಶ್ವರನ ಶಿಷ್ಯರು ನಿರಂಜನನೆಂಬ ಗಣೇಶ್ವರರು. ನಿರಂಜನನೆಂಬ ಗಣೇಶ್ವರನ ಶಿಷ್ಯರು ಆದಿ ಪಡುವಿಡಿ, ಅನಾದಿ ಪಡುವಿಡಿ, ಶಿವಸಿದ್ಧ ಪಡುವಿಡಿಯ ಪ್ರಭುವೆಂಬ ಗಣೇಶ್ವರ. ಪ್ರಭುವೆಂಬ ಗಣೇಶ್ವರನ ಶಿಷ್ಯರು ಮಹಾಂತ ಮಲ್ಲಿಕಾರ್ಜುನನೆಂಬ ಗಣೇಶ್ವರ. ಮಹಾಂತ ಮಲ್ಲಿಕಾರ್ಜುನನ ಶಿಷ್ಯರು ಜಾಲಹಳ್ಳಿಯ ಶಾಂತಿದೇವರು. ಜಾಲಹಳ್ಳಿಯ ಶಾಂತಿದೇವರ ಶಿಷ್ಯರು ಸಿದ್ಧಮಲ್ಲಿನಾಥೇಶ್ವರ. ಸಿದ್ಧಮಲ್ಲಿನಾಥೇಶ್ವರರ ಶಿಷ್ಯರು ಪಡುವಿಡಿಯ ರಾಚೇಶ್ವರ. ಪಡುವಿಡಿಯ ರಾಚೇಶ್ವರನ ಕರಕಮಲದಲ್ಲಿ ಉತ್ಪತ್ಯವಾದ ಶಿಶುವು ಹೇಮಗಲ್ಲ ಹಂಪ ನಾನಯ್ಯ....' (೩.೧೨). ಇದರಿಂದ ಇವನು ಪಡುವಿಡಿಯ ರಾಚೇಶ್ವರ ಶಿಷ್ಯನೆಂಬುದು ಸ್ಪಷ್ಟವಾಗುತ್ತದೆ.[೨] ಆದರೆ ಇವನು ತನ್ನ ವಚನಾಂಕಿತಕ್ಕಾಗಿ ತನ್ನ ಗುರುವಿನ ಗುರು ಸಿದ್ಧನಾಥನ ಹೆಸರನ್ನು ಬಳಸಿಕೊಂಡ ಉದ್ದೇಶವೇನೋ ತಿಳಿಯದು. ಆ ಸಿದ್ಧನಾಥನನ್ನು ಬಹುಭಕ್ತಿಯಿಂದ ಕೃತಿಯ ಆರಂಭದಲ್ಲಿ[೩], ವಚನಗಳ ಮಧ್ಯದಲ್ಲಿ ಮತ್ತು ಹಾಡುಗಳ ಕೊನೆಯಲ್ಲಿ[೪] ಸ್ಮರಿಸಿದ್ದಾನೆ.

'ಹೇಮಗಲ್ಲ ಪಟ್ಟಲ'ವು ವೀರಶೈವ ಪಟ್ಟಲಗಳನ್ನು ಕುರಿತು ಬರೆದಿರಬಹುದಾದ ಕೃತಿಯಾಗಿದ್ದರೂ ಭಕ್ತಸ್ಥಲದ ಪ್ರಾರಂಭಕ್ಕೆ ನಿಂತಿದೆ. ಕೃತಿಕಾರನು ಅದನ್ನು ಅಲ್ಲಿಗೇ ನಿಲ್ಲಿಸಿದನೋ ಪ್ರತಿಕಾರನು ಅಷ್ಟನ್ನೇ ಬರೆದುಕೊಂಡನೋ ತಿಳಿಯದು. ಆದರೆ ಅಂತ್ಯದಲ್ಲಿ ಮಾತ್ರ ಸೂತ್ರ : ಇಂತು ಸಂಪೂರ್ಣ ಮಂಗಳ ಮಹಾ ಶ್ರೀ ಶ್ರೀ ಶ್ರೀ ಎಂದಿದೆ. ಈಗ ಇದರಲ್ಲಿರುವ ಸ್ಥಲ ಮತ್ತು ವಚನಗಳನ್ನು ಈ ರೀತಿ ಗುರುತಿಸಬಹುದು.

---

೧. ಹೇ. ಪ. ಸ್ಥಲ ೧೧. ವ.೩ ಮತ್ತು ೫

೨. ನಿಶ್ಚಿಂತ ಹೇಮಗಲ್ಲನೆಂದೊರೆದ ಗುರು ಪಡುವಿಡಿ ಶಾಂತರಾಚೇಶ್ವರನ ಪಾದಕಮಲಕೆ ಭೃಂಗನಾಗಿಹನು ಸದಾ. ಸ್ಥಲ ೨೨.ವ.೭

೩. ಶ್ರೀಗುರು ಬಸವಲಿಂಗಾಯನಮಃ ಶ್ರೀ ಗುರು ಪಡುವಿಡಿ ಸಿದ್ಧಮಲ್ಲಿನಾಥಾಯ ನಮಃ

೪. ಕುವರ ಹಂಪನ ಪ್ರಾಣ ಜಯ ಜಯ, ಗುರು ಸಿದ್ಧ ಮಲ್ಲಿನಾಥನ ಪಾದ ಜಯಜಯ ಸ್ಥಲ ೧. ಪ. ೫. ಅಲ್ಲದೆ ಸ್ಥಲ ೬. ಪ. ೫, ೭ ಸ್ಥಲ ೭. ಪ.೩

| ಅ.ಕ್ರ | ಸ್ಥಲ | ವಚನ | ಪದ್ಯ |
|---|---|---|---|
| 1 | ಶಿವಸ್ತೋತ್ರಸ್ಥಲ | 9 | 5 |
| 2. | ಪಿಂಡಸ್ಥಲ | 19 | 5 |
| 3. | ಪಿಂಡಜ್ಞಾನ ಸ್ಥಲ | 15 | 5 |
| 4. | ಮಾಯಾವಿಡಂಬನಸ್ಥಲ | 23 | 5 |
| 5. | ಮಾಯಾತಮಂಧ ನಿರಸನ ಸ್ಥಲ | 7 | 5 |
| 6. | ಮಲಮಾಯಾ ನಿರಸನಸ್ಥಲ | 4 | 5 |
| 7. | ಅಂತರಂಗ ಅಷ್ಟಮದ ನಿರಸನಸ್ಥಲ | 7 | 3 |
| 8. | ಬಹಿರಂಗ ಅಷ್ಟಮದ ನಿರಸನಸ್ಥಲ | 7 | 3 |
| 9. | ಅರಿಷಡ್ವರ್ಗ ನಿರಸನ ಸ್ಥಲ | 14 | 3 |
| 10. | ಸಪ್ತವ್ಯಸನ ನಿರಸನ ಸ್ಥಲ | 10 | 3 |
| 11. | ಪಂಚೇಂದ್ರಿಯ ನಿರಸನ ಸ್ಥಲ | 6 | 5 |
| 12. | ಮನೋವಿಕಾರ ನಿರಸನ ಸ್ಥಲ | 13 | 9 |
| 13. | ಆಶಾಬದ್ಧ ನಿರಸನ ಸ್ಥಲ | 9 | 3 |
| 14. | ಶಿವನಧಿಕಾಂಕ್ಷೆ ಸ್ಥಲ | 5 | 5 |
| 15. | ಸಂಸಾರ ಹೇಯಸ್ಥಲ | 31 | 5 |
| 16. | ಗುರು ಕರುಣಸ್ಥಲ | 30 | 5 |
| 17. | ಲಿಂಗಧಾರಣ ಸ್ಥಲ | 18 | 6 |
| 18. | ಅನ್ಯದೈವ ನಿರಸನಸ್ಥಲ | 13 | 5 |
| 19. | ವಿಭೂತಿಸ್ಥಲ | 11 | 5 |
| 20. | ರುದ್ರಾಕ್ಷಿಸ್ಥಲ | 4 | 5 |
| 21. | ಪಂಚಾಕ್ಷರಿಯ ಸ್ಥಲ | 9 | 232 ಸಾಲು ರಗಳೆ 3 ಕಂದ |
| 22. | ಅಷ್ಟಾವರಣಮಹಾತ್ಮೆ ಸ್ಥಲ* | 7 | 7 |
| 23. | ಭಕ್ತಿಸ್ಥಲ | 9 | - |

*. ೨೨ನೆಯ ಸ್ಥಲದ ಕೊನೆಯಲ್ಲಿ 'ಈ ಸ್ಥಲ ಇಪ್ಪತ್ತೆರಡಕೆ ಸೇರಿದ ವಚನ [ಎರಡುನೂರ ಎಪ್ಪತ್ತ] ನಾಲ್ಕು ೨೭೪. ಸ್ಥಲ ನಿರ್ದೇಶದ ಪದ ಇಪ್ಪತ್ತೆರಡ ೨೨ಕ್ಕೆ ಮಂಗಳ ಮಹಾ ಶ್ರೀ ಶ್ರೀ ಶ್ರೀ ಎಂದಿದೆ. ಆದರೆ ಇದರಲ್ಲಿ ೨೭೧ ವಚನ ೧೦೨ ಪದಗಳಿವೆ.

ಇಲ್ಲಿಯ ಹಾಡುಗಳು ದೇಶಿ, ಮಧುಮಾಧವಿ, ಶಂಕರಾಭರಣ, ಶಾಂತಭೈರವಿ, ಸಾರಂಗ, ಭೂಪಾಳಿ, ಕನ್ನಡ ಕಾಂಬೋದಿ, ವರಾಳಿ, ಆಹೇರಿ, ಧನಶ್ರೀ, ಮಲಹರಿ, ಭೈರವಿ, ದೇಶವರಾಳಿ, ಪಹಾಡಿ, ನಾದರಾಮಕ್ರೀ ಮೊದಲಾದ ರಾಗಗಳಲ್ಲಿ ಬರೆಯಲ್ಪಟ್ಟಿವೆ. ಹಾಡುಗಳಲ್ಲಿ ಕೆಲವು ನಾಲ್ಕು ಸಾಲಿನವು, ಕೆಲವು ಆರು ಸಾಲಿನವು. ಇನ್ನು ಕೆಲವು ಎಂಟು ಸಾಲಿನವಿವೆ. ಆದರೆ ೨೧ನೆಯ ಸ್ಥಲದ ಕೊನೆಯಲ್ಲಿ ೨೩೨ ಸಾಲುಗಳುಳ್ಳ ರಗಳೆ ಮತ್ತು ೩ ಕಂದಪದ್ಯಗಳಿವೆ.

ಪ್ರಾಚೀನ ಶರಣರ ವಿಷಯವಾಗಿ ಹೇಮಗಲ್ಲ ಹಂಪನಿಗೆ ವಿಶೇಷ ಭಕ್ತಿ. ಅವರ ಆದರ್ಶ ಇವನಿಗೆ ಮಾರ್ಗದರ್ಶಿ. ಅದಕ್ಕಾಗಿ ಅವರನ್ನು ಆಗಾಗ ತನ್ನ ವಚನಗಳಲ್ಲಿ ಸ್ಮರಿಸಿದ್ದಾನೆ.[1] ಇಲ್ಲಿಯ ಬಹಳಷ್ಟು ವಚನಗಳು ತಾತ್ವಿಕ ವಿವರಣೆಗೆ ಮೀಸಲಾಗಿವೆ ಮತ್ತು ಶಿವಶರಣರ ವಚನಗಳ ಅನುಕರಣೆಗಳಾಗಿವೆ. ಆದರೂ ಅವುಗಳಲ್ಲಿ ಕೆಲವು ಸಾಹಿತ್ಯದ ಸೊಗಸಿನಿಂದ ಕೂಡಿವೆ. ಉದಾಹರಣೆ ಪಿಂಡ ಬ್ರಹ್ಮಾಂಡದೊಳಗಣ ಶಿವನಿಲವನ್ನು ಈ ರೀತಿ ನಿರೂಪಿಸಲಾಗಿದೆ :

*"…. ಹಸುವಿನೊಳಗಣ ಘೃತದಂತಿದ್ದಿತ್ತು ಆ ಪರಬ್ರಹ್ಮದ ನಿಲವು.*
*ಇದ್ದರೇನು ? ಕಾಣಬಹುದೆ ? ಕಾಣಬಾರದು.*
*ಕಾಣುವ ಬಗೆ ಹೇಗೆಂದರೆ ಹೇಳುವೆ ಕೇಳಿರಣ್ಣಾ*
*ಶಿಲೆಯೊಳಗಣ ಅಗ್ನಿ ಚಕಮಕಿ ದೂಡಿವಿಡಿದು*
*ಕ್ರೀಯಿಟ್ಟು ಮಾಡಿದಲ್ಲದೆ ಪ್ರಜ್ವಲಿಸದು.*
*ತಿಲದೊಳಗಣ ತೈಲ ಯಂತ್ರದಲ್ಲಿ ಕ್ರೀಡಿಸಿದಲ್ಲದೆ ತೋರದು…."*

ಮತ್ತೊಂದೆಡೆ ಕೈಲಾಸದ ವಿವರಣೆ ಈ ರೀತಿ ಇದೆ :

*"ಕೈಲಾಸವೆಂಬುದು ಬೇರಿಲ್ಲ ಕಾಣಿರೋ !*
*ಲಿಂಗಾಂಗ ಸಂಗ ಸಮರಸದಲ್ಲಿಪ್ಪ ಶರಣನ*
*ಅಂತರಂಗದಲ್ಲಿ ಕೈಲಾಸವಿಪ್ಪುದು*
*ಎಂತಿಪ್ಪುದೆಂದರೆ ಹೇಳುವೆ ಕೇಳಿರಣ್ಣಾ*
*ಆಚಾರ ಕ್ರಿಯೆಗಳೆಂಬ ಕೋಟೆ ಕೊತ್ತಳಂಗಳು*
*ಶುಚಿ ಶೀಲಗಳೆಂಬ ಅಗಳಂಗಳು*
*ಪುಣ್ಯ-ಪಾಪಗಳೆಂಬೆರಡ ನೋಡಿ ನಡೆದುದೆ*
*ಕೈಲಾಸದ ಹೆಬ್ಬಾಗಿಲು ಕಾಣಿರೆ…. ೧೭-೧೭*

ಹಲವು ವಚನಗಳು . ಹೇಮಗಲ್ಲ ಹಂಪನ ಅನುಭವಾಮೃತದ ನುಡಿಗಳಂತಿವೆ. ಉದಾಹರಣೆಗೆ

೧. ಸ್ಥ ೩ ೧೪, ಸ್ಥ ೫ ವ೭, ಸ್ಥ ೯ವ೩, ೧೧, ಸ್ಥ ೧೨ ಪದ್ಯ ೯, ಸ್ಥಲ ೧೪. ವ ೩೦, ಸ್ಥ ೧೭. ವ.೫

''ನಾಯ ಬಾಲವ ನಂಬಿ ಹೊಳೆಯ ದಾಂಟಿದವರುಂಟೇ ?
ವೃಷಭನ ಬಾಲವ ಪಿಡಿದರೆ ನದಿಯ ತಡಿಯ ಸೇರುವರಲ್ಲದೆ.'' ೧೪-೨

''ವಾರಿಯಿಲ್ಲದ ಕೆರೆಗೆ ಹಾರೈಸಿ ಬಂದ ತುರದಂತೆ
ಬೂರದ ಮರಕ್ಕೆ ಹಾರೈಸಿ ಬಂದ ಗಿಣಿಹಿಂಡಿನಂತೆ'' ೧೪-೩

''ಬೆಟ್ಟದಷ್ಟು ಕರ್ಮವುಳ್ಳರೆ ಬೊಟ್ಟೆನಷ್ಟು ಶ್ರೀ ವಿಭೂತಿಯ ಧರಿಸಲು
ಬಟ್ಟಬಯಲಾಗಿ ದುರಿತನ್ಯಾಯ ದೆಸೆಗೆಟ್ಟು ಓಡುವುವು ೧೯-೪

ಇವನು ಸೊಗಸಾದ ಹಲವು ಬೆಡಗಿನ ವಚನಗಳನ್ನು ಬರೆದಿದ್ದಾನೆ. ಉದಾಹರಣೆಗೆ :

''ವನದೊಳಿಪ್ಪ ಕಪಿ ವನವ ನುಂಗಿ, ವನದ ತಿಳಿಗೊಳನ ನುಂಗಿ,
ತಿಳಿಗೊಳದೊಳಗಿಪ್ಪ ಕಮಲವ ನುಂಗಿ, ಕಮಲದ ಪರಿಮಳವ ನುಂಗಿ,
ವಾಯುವಿನೇಣಿಯಿಂದ ಆಕಾಶಕ್ಕೆ ಹಾರಿದುದಿದೇನು ಚೋದ್ಯಹೇಳಾ
ಪರಮಗುರು ಪಡುವಿಡಿ ಸಿದ್ಧಮಲ್ಲಿನಾಥ ಪ್ರಭುವೆ'' ೧೨-೧೦

ಸಮಕಾಲೀನ ಮೂಢನಂಬಿಕೆಗಳನ್ನು ವಿಡಂಬಿಸಿರುವುದು ಈ ಕೃತಿಯ ಇನ್ನೊಂದು ವೈಶಿಷ್ಟ್ಯ. ಇದರಿಂದ ಆ ಮೂಢನಂಬಿಕೆಯ ಹಿಂದಿನ ಆಚರಣೆ ಸಂಪ್ರದಾಯ ಮೊದಲಾದವು ವ್ಯಕ್ತವಾಗುತ್ತಿವೆ. ಉದಾಹರಣೆಗೆ

''ಮುಂದೆ ಮಾಡಿದ ಕರ್ಮ ಬೆನ್ನಟ್ಟಿ ಬರುವಾಗ
ಆದಕಿನ್ನು ದೇವರ ಹರಕೆಯೆಂದು ನುಡಿಯಲೇಕೆ ?
ಭ್ರಷ್ಟರಿರಾ ಕೇಳಿರೌ !
ಮಾನವನಾಗಿ ಹುಟ್ಟಿ, ಕೊರಳಲ್ಲಿ ಕವಡಿಯ ಕಟ್ಟಿ
ಶ್ವಾನನಾಗಿ ಬೊಗಳುವುದು ಮುನ್ನಿನ ಕರ್ಮದ ದೆಸೆಯಲ್ಲವೆ
ವಗ್ಗನ ಕರೆತಂದು ಮೈಲಾರನ ಹರಕೆ ಮುಟ್ಟಿತೆಂದು
ನೀಡುವವನೊಬ್ಬ ಹಳೆನಾಯಿ.
ಮೈಲಾರನ ಪೂಜಿಸುವವರೆಲ್ಲ ನಾಯಾಗಿ ಹುಟ್ಟುವುದು ತಪ್ಪದು. ೧೮-೧೦

ಒಕ್ಕಲುತನವನ್ನು ರೂಪಕವಾಗಿ ಬಳಸಿಕೊಂಡಿರುವ ಒಂದು ವಚನ ಈ ರೀತಿ ಇದೆ.

'' ತನುವೆಂಬ ಹೊಲದೊಳು ಜೀವವೆಂಬ ಒಕ್ಕಲಿಗ
ಅಜ್ಞಾನವೆಂಬ ಕೂರಿಗೆ, ಪಂಚೇದ್ರಿಯವೆಂಬ ತಾಳಗಳಿಗೆ
ಪಂಚವಿಷಯವೆಂಬ ಸೆಡ್ಡಿಯ ಕೋಲನಿಕ್ಕಿ....'' ೧೩-೬ .

ಕಾಯವನ್ನು ಪುರದ ಆಡಳಿತಕ್ಕೆ ಹೋಲಿಸಿ ವಿವರಿಸಿರುವ ವಚನ ಈ ರೀತಿ ಇದೆ.

*ನಗನುರತಾಣ್ಯದ ಕೆಳಗಿಪ್ಪ ಇಪ್ಪತ್ತೈದು ಹಳ್ಳಿಯ ಸಾಗಿಸಿ*
*ಕೋರನಡಸುವ ಕಾರಕೂನರೈವರು*
*ಕಾಡ ಹೊಲನ ಕಂಡಣೆಯ ಮಾಡುತಿರೆ*
*ಹಾರುವರು ಹರಿಕಾರರು, ಗೌಡರಿಬ್ಬರು ಗೊಮಗುಸುಕರು,*
*ಊರೊಳಹೊರಗೆ ಬಾರದ ಸೇನಬೋವರು..... ೩-೧೮*

ಹೀಗೆ ಹಲವಾರು ಜೀವಂತ ದೃಷ್ಟಾಂತಗಳಿಂದ ಈ ಕೃತಿ ತನ್ನತನವನ್ನು ತೋರುತ್ತಿದೆ.

ಈವರೆಗೆ ಈ ಕೃತಿಯ ಎರಡು ಪ್ರತಿ ಮಾತ್ರ ದೊರೆತಿದ್ದು ಅವುಗಳಲ್ಲಿ ಒಂದು ಕಾಗದ ಪ್ರತಿ (ನಂ. ೬೬೭) ಪಿಂಡಸ್ಥಲದ ೧೯ನೆಯ ವಚನಕ್ಕೆ ನಿಂತುಹೋಗಿದೆ ; ಇನ್ನೊಂದು ಕಾಗದ ಪ್ರತಿ (ನಂ. ೩೫೨೭) ಭಕ್ತಸ್ಥಲದವರೆಗಿದ್ದು ಬಹಳಷ್ಟು ಅಶುದ್ಧವಾಗಿದೆ. ಇಲ್ಲಿ ಪ್ರತಿಸ್ಥಲದ ವಚನಗಳಾದ ಮೇಲೆ ಆ ಸ್ಥಲದ ಸಮಾಪ್ತಿವಾಕ್ಯ ಹೇಳಿ ಅದಕ್ಕೆ ಸಂಬಂಧಿಸಿದ ಹಾಡುಗಳನ್ನು ಹೊಸಸ್ಥಲದ ಆರಂಭದಂತೆ 'ಶ್ರೀ ಗುರುಬಸವಲಿಂಗಾಯನಮಃ' ಎಂದು ಆರಂಭಿಸಲಾಗಿದೆ. ಈ ಹಾಡುಗಳಿಗೂ ಮುಂದಿನಸ್ಥಲದ ವಚನಗಳಿಗೂ ಸಂಬಂಧವಿರುವಂತೆ ಬರೆದುಕೊಂಡು ಹೋಗಿದೆ. ಆದರೆ ಆ ಹಾಡುಗಳು ಹಿಂದಿನ ಸ್ಥಲದ ವಚನಗಳಿಗೇ ಸಂಬಂಧಿಸಿದವು. ಬಹುಶಃ ಈ ತಪ್ಪು ಪ್ರತಿಕಾರನಿಂದಾಗಿರಬೇಕು. ಅಲ್ಲದೆ ಕೆಲವೆಡೆ ವಚನದಲ್ಲಿಯ ವಿವರಣೆಯ ಅನುಕ್ರಮಣಿಕೆ ತಪ್ಪಿದೆ. ಉದಾಹರಣೆಗೆ ೨೧ನೆಯ ಸ್ಥಲದ ೭ನೆಯ ವಚನವನ್ನು ನೋಡಬಹುದು. ಅಲ್ಲಿ ಆಧಾರ ಚಕ್ರದ ವರ್ಣ ಹೇಳಿಲ್ಲ. ಅಧಿದೇವತೆ ದಾಕ್ಷಾಯಣಿ ಎಂದಿದೆ. ಅದೇ ರೀತಿ 'ಸ್ವಾಧಿಷ್ಠಾನ ಚಕ್ರದ ಬಣ್ಣ ಪಚ್ಚೆ, ಅಧಿದೇವತೆ ಬ್ರಹ್ಮ, ಮಣಿಪೂರ ಚಕ್ರದ ವರ್ಣ ಕೃಷ್ಣ, ಅಧಿದೇವತೆ ವಿಷ್ಣು, ಅನಾಹತ ಚಕ್ರದ ವರ್ಣಕುಂಕುಮ, ಅಧಿದೇವತೆ ಮಹೇಶ್ವರ, ಕ್ರಿಯಾ ಶಕ್ತಿ, ವಿಶುದ್ಧ ಚಕ್ರದ ವರ್ಣ ಶ್ವೇತ....' ಎಂದಿದೆ. ಆದರೆ ವೀರಶೈವರಲ್ಲಿ ಸಾಮಾನ್ಯವಾಗಿ ಸ್ವಾಧಿಷ್ಠಾನ ಚಕ್ರದ ಬಣ್ಣ ಶ್ವೇತ, ಅಧಿದೇವತೆ ವಿಷ್ಣು, ಮಣಿಪೂರಕ ಚಕ್ರದ ಬಣ್ಣ ಹರಿತ, ಅಧಿದೇವತೆ ರುದ್ರ, ಅನಾಹತ ಚಕ್ರದ ವರ್ಣ ಮಾಂಜಿಷ್ಟ, ಅಧಿದೇವತೆ ಈಶ್ವರ.... ವಿಶುದ್ಧಿ ಚಕ್ರದ ವರ್ಣ ಕಪೋತ...." ಎಂಬ ವಿಚಾರ ರೂಢಿಯಲ್ಲಿದೆ. ಮೇಲಿನ ಶಬ್ದಗಳ ಪಲ್ಲಟಕ್ಕೆ ಕೃತಿಕಾರ ಕಾರಣನೋ, ಪ್ರತಿಕಾರ ಕಾರಣನೋ ತಿಳಿಯದು.

ಏನೇ ಆದರೂ ಇದೊಂದು ಉತ್ತಮ ವಚನಕೃತಿ ಆಗಿದೆಯೆಂಬುದರಲ್ಲಿ ಸಂಶಯವಿಲ್ಲ.

# ದೇಶಿಕೇಂದ್ರ ಸಂಗನಬಸವಯ್ಯನ ಷಟ್‌ಸ್ಥಲವಚನಗಳು - ಒಂದು ಅಧ್ಯಯನ

ಡಾ|| ವೀರಣ್ಣ ರಾಜೂರ

---

ದೇಶಿಕೇಂದ್ರ ಸಂಗನಬಸವಯ್ಯ ಬಸವೋತ್ತರಯುಗದ ಒಬ್ಬ ಗಮನಾರ್ಹ ವಚನಕಾರ. ಈಚೆಗೆ ತಾನೆ, ಬೆಳಕಿಗೆ ಬಂದ ಈತನ ವೈಯಕ್ತಿಕ ಸಂಗತಿಗಳಾವವೂ ಸದ್ಯಕ್ಕೆ ಲಭ್ಯವಿಲ್ಲ. ಚಿದೈಶ್ವರ್ಯ ಚಿದಾಭರಣದಲ್ಲಿ ಒಬ್ಬ ಸಂಗನ ಬಸವೇಶ್ವರನ ಉಲ್ಲೇಖ ಬರುತ್ತದೆ. ಅದರಲ್ಲಿ ಆತನ ಒಂದು ವಚನ ಎಡೆಪಡೆದಿದ್ದು 'ಬಸವಲಿಂಗ' ಎಂಬ ಅಂಕಿತವನ್ನು ಹೊಂದಿದೆ. ಪ್ರಸ್ತುತ ದೇಶಿಕೇಂದ್ರ ಸಂಗನಬಸವಯ್ಯನ ವಚನಾಂಕಿತ 'ಗುರುನಿರಂಜನ ಬಸವಲಿಂಗ' ಎಂದಿರುವುದರಿಂದ ಇಬ್ಬರು ಭಿನ್ನರೆಂಬುದು ಸ್ಪಷ್ಟ.[೧] ವಿರಕ್ತ ಪರಂಪರೆಯ ಮುರಿಗಾಸಮಯದಲ್ಲಿ 'ಹುಬ್ಬಳ್ಳಿ ಸಂಗನ ಬಸವ ದೇಶಿಕ' ಎಂಬುವನ ಹೆಸರು ಬರುತ್ತದೆ. ಈತನಿಗೂ ಆತನಿಗೂ ಏನಾದರೂ ಸಂಬಂಧವಿದೆಯೋ ಹೇಗೋ ತಿಳಿಯದು.

ಸಂಗನಬಸವಯ್ಯನ ಹೆಸರಿನ ಹಿಂದೆ ವಿಶೇಷಣವಾಗಿ ಸೇರಿದ 'ದೇಶಿಕೇಂದ್ರ' ಎಂಬುದು ದೇಶಸಂಚಾರ ಮಾಡುವ ಚರಜಂಗಮ ಸೂಚಿಯಾಗಿದೆ. ಅವರ ಪರಂಪರೆಯಲ್ಲಿ, ಅವೂ

---

೧. ಇಬ್ಬರ ಅಂಕಿತದಲ್ಲಿ 'ಬಸವಲಿಂಗ' ಎಂಬುದು ಸಮಾನವಾಗಿದೆ. ಆದರೆ ಇಷ್ಟರಿಂದಲೇ ಇವರು ಅಭಿನ್ನರೆಂದು ಹೇಳಲು ಬರುವಂತಿಲ್ಲ.

ಮುರಿಗಾ ಸಮಯ ಮತ್ತು ಕುಮಾರ ಸಮಯುಗಳಲ್ಲಿ ಈ ವಿಶೇಷಣ ಹಚ್ಚಿಕೊಂಡ ಹೆಸರುಗಳೇ ಹೆಚ್ಚು - (ಕುಮಾರ ದೇಶಿಕೇಂದ್ರ, ಶಾಂತವೀರ ದೇಶಿಕ, ಬಸವಲಿಂಗ ದೇಶಿಕ, ಇಮ್ಮಡಿ ಬಸವಲಿಂಗ ದೇಶಿಕ, ಸಿದ್ಧಬಸವಲಿಂಗ ದೇಶಿಕ ಇತ್ಯಾದಿ). ಹಾಗೆಯೇ ಈತನ ಅಂಕಿತದಲ್ಲಿ ಸೇರಿದ 'ನಿರಂಜನ' ಎಂಬ ಪದವೂ ತೋಂಟದ ಸಿದ್ಧಲಿಂಗರ ನಂತರವೇ ಹೆಚ್ಚು ಪ್ರಚಾರಕ್ಕೆ ಬಂದುದಾಗಿದೆ. ಹೀಗಾಗಿ ದೇಶಿಕೇಂದ್ರ ಸಂಗನಬಸವಯ್ಯ ತೋಂಟದ ಸಿದ್ಧಲಿಂಗರ ತರುವಾಯ ಬಂದವನಾಗಿರಬೇಕು. ಅಲ್ಲದೆ ಅವರ ಶಿಷ್ಯಪರಂಪರೆಗೆ ಸೇರಿದವನೂ ಆಗಿರಬೇಕು. 'ಬಾಜಾರ' ಮೊದಲಾದ ಪದಗಳು ಈತನ ವಚನಗಳಲ್ಲಿ ಬಳಕೆಯಾಗಿರುವುದರಿಂದ ಸುಮಾರು 17ನೆಯ ಶತಮಾನದಲ್ಲಿ ಇದ್ದವನಾಗಿರಬೇಕು.

'ದೇಶಿಕೇಂದ್ರ' ಎಂದು ಈತ ತನ್ನನ್ನು ಕರೆದುಕೊಂಡಿರುವುದರಿಂದ ವಿರಕ್ತಪರಂಪರೆಗೆ ಸೇರಿದ ಚರಜಂಗಮನಾಗಿ ದೇಶಸಂಚಾರ ಕೈಕೊಂಡು, ಕೊನೆಯಲ್ಲಿ ಒಂದು ವಿರಕ್ತಮಠದ ಸ್ವಾಮಿಯಾಗಿ ನೆಲೆನಿಂತಿರಬೇಕು. ಆದರೆ ಎಲ್ಲಿ ಎಂಬುದು ತಿಳಿದುಬಂದಿಲ್ಲ. ಈತನ ವಚನಗಳ ಹಸ್ತಪ್ರತಿ ಸೊಲ್ಲಾಪುರ ತಾಲ್ಲೂಕಿನ 'ಕರಜಗಿ'[2]ಯ ಒಂದು ವಿರಕ್ತಮಠದಲ್ಲಿ ದೊರೆತಿದ್ದು, ಈತ ಆ ಮಠದ ಸ್ವಾಮಿಯೇನಾದರೂ ಆಗಿದ್ದನೋ ಹೇಗೋ ತಿಳಿಯದು.

ಹೀಗೆ ಸಂಗನಬಸವಯ್ಯನ ಜೀವನಕ್ಕೆ ಸಂಬಂಧಿಸಿದ ವಿವರಗಳೇನೂ ದೊರಕದಿದ್ದರೂ ಈತನ ಬಹುಸಂಖ್ಯೆಯ ಅಮೂಲ್ಯವಾದ ವಚನಗಳು ದೊರೆತುದು ಒಂದು ವಿಶೇಷ. ಈತನ ಕೃತಿಯ ಹೆಸರು 'ಷಟ್‌ಸ್ಥಲ ವಚನಗಳು'. ಕರ್ತೃವೇ ಇದನ್ನು ಸ್ಥಲಾನುಗುಣವಾಗಿ ಸಂಯೋಜಿಸಿದ್ದಾನೆ. ಷಟ್‌ಸ್ಥಲಗಳ ಒಂದೊಂದು ಸ್ಥಲದಲ್ಲಿ ಮತ್ತೆ ಆರಾರು ಅವಾಂತರ ಸ್ಥಲಗಳನ್ನು ಕಲ್ಪಿಸಿರುವುದರಿಂದ ಇದು 'ಮಿಶ್ರಷಟ್‌ಸ್ಥಲ' ಗುಂಪಿಗೆ ಸೇರುವ ಕೃತಿಯೆನಿಸಿದೆ. ಇದರಲ್ಲಿರುವ ಒಟ್ಟು ಸ್ಥಲಗಳು 53, ವಚನಗಳು 1282. ಇಲ್ಲಿನ ಸ್ಥಲಯೋಜನೆ ಹೀಗಿದೆ.

1. ಪಿಂಡಸ್ಥಲ, 2. ಪಿಂಡ ಜ್ಞಾನಸ್ಥಲ, 3. ಸಂಸಾರ ಹೇಯಸ್ಥಲ, 4. ಗುರುಕಾರುಣ್ಯ ಸ್ಥಲ, 5. ಲಿಂಗಧಾರಣಸ್ಥಲ, 6. ವಿಭೂತಿ ಸ್ಥಲ, 7. ರುದ್ರಾಕ್ಷಿ ಸ್ಥಲ, 8. ಪಂಚಾಕ್ಷರಿ ಸ್ಥಲ, 9. ಭಕ್ತ ಸ್ಥಲ, 10. ಭಕ್ತನ ಮಾಹೇಶ್ವರ ಸ್ಥಲ, 11. ಭಕ್ತನ ಪ್ರಸಾದಿ ಸ್ಥಲ, 12. ಭಕ್ತನ ಪ್ರಾಣ ಲಿಂಗಿ ಸ್ಥಲ, 13. ಭಕ್ತನ ಶರಣ ಸ್ಥಲ, 14. ಭಕ್ತನ ಐಕ್ಯ ಸ್ಥಲ, 15. ಮಾಹೇಶ್ವರ ಸ್ಥಲ, 16. ಮಾಹೇಶ್ವರನ ಭಕ್ತ ಸ್ಥಲ, 17. ಮಾಹೇಶ್ವರನ ಪ್ರಸಾದಿಸ್ಥಲ, 18. ಮಾಹೇಶ್ವರನ ಪ್ರಾಣ ಲಿಂಗಿಸ್ಥಲ, 19. ಮಾಹೇಶ್ವರನ ಶರಣಸ್ಥಲ, 20. ಮಾಹೇಶ್ವರನ ಐಕ್ಯ ಸ್ಥಲ, 21. ಪ್ರಸಾದಿ ಸ್ಥಲ, 22. ಪ್ರಸಾದಿಯ ಭಕ್ತ ಸ್ಥಲ, 23. ಪ್ರಸಾದಿಯ ಮಾಹೇಶ್ವರ ಸ್ಥಲ, 24. ಪ್ರಸಾದಿಯ ಪ್ರಾಣಲಿಂಗಿ ಸ್ಥಲ, 25. ಪ್ರಸಾದಿಯ ಶರಣಸ್ಥಲ, 26. ಪ್ರಸಾದಿಯ ಐಕ್ಯ ಸ್ಥಲ, 27. ಪ್ರಾಣಲಿಂಗಿ ಸ್ಥಲ, 28. ಪ್ರಾಣಲಿಂಗಿಯ ಭಕ್ತ ಸ್ಥಲ, 29. ಪ್ರಾಣಲಿಂಗಿಯ ಮಾಹೇಶ್ವರ ಸ್ಥಲ, 30. ಪ್ರಾಣಲಿಂಗಿಯ

2. ಇದು 'ಗಜೇಶ ಮಸಣಯ್ಯ'ನೆಂಬ ವಚನಕಾರನ ಸ್ಥಳವಾಗಿದೆ.

ಪ್ರಸಾದಿ ಸ್ಥಲ, 31. ಪ್ರಾಣಲಿಂಗಿಯ ಶರಣ ಸ್ಥಲ, 32. ಪ್ರಾಣ ಲಿಂಗಿಯ ಐಕ್ಯ ಸ್ಥಲ, 33. ಶರಣ ಸ್ಥಲ, 34. ಶರಣನ ಭಕ್ತ ಸ್ಥಲ, 35. ಶರಣನ ಮಾಹೇಶ್ವರ ಸ್ಥಲ, 36. ಶರಣನ ಪ್ರಸಾದಿ ಸ್ಥಲ, 37. ಶರಣನ ಪ್ರಾಣಲಿಂಗಿ ಸ್ಥಲ, 38. ಶರಣನ ಐಕ್ಯ ಸ್ಥಲ, 39. ಐಕ್ಯ ಸ್ಥಲ, 40. ಐಕ್ಯನ ಭಕ್ತ ಸ್ಥಲ, 41. ಐಕ್ಯನ ಮಾಹೇಶ್ವರ ಸ್ಥಲ, 42. ಐಕ್ಯನ ಪ್ರಸಾದಿಸ್ಥಲ, 43. ಐಕ್ಯನ ಪ್ರಾಣ ಲಿಂಗಿ ಸ್ಥಲ, 44. ಐಕ್ಯನ ಶರಣ ಸ್ಥಲ, 45. ನಿರವಯ ಸ್ಥಲ, 46. ಗುರುಭಕ್ತಿ ಸಂಸಾರಿ, 47. ಲಿಂಗಾಂಗಲೀಲಾ ಷಟ್‌ಸ್ಥಲ, 48. ಆಚಾರಾಂಗಸ್ಥಲ, 49. ಗೌರವಾಂಗಸ್ಥಲ, 50. ಶಿವಾಂಗಸ್ಥಲ, 51. ಚರಾಂಗ ಸ್ಥಲ, 52. ಶೇಷಾಂಗ ಸ್ಥಲ, 53. ಮಹದಂಗಸ್ಥಲ.

ಇಲ್ಲಿನ ಕೊನೆಯ ಎಂಟು ಸ್ಥಲಗಳು ಈವರೆಗಿನ ಯಾವುದೇ ಸ್ಥಲಕಟ್ಟಿನ ಕೃತಿಗಳಲ್ಲಿ ಕಾಣದ ನೂತನ ಸ್ಥಲಗಳಾಗಿವೆ. ಇವುಗಳಲ್ಲಿ ಕೊನೆಯ ಆರುಸ್ಥಲಗಳ ಹೆಸರು ಮಾತ್ರ ಮೂರುಸಾವಿರ ಮುಕ್ತಿಮುನಿಯ 'ಸರ್ವಾಚಾರ ಸಾರಾಮೃತ ಸುಧೆ'ಯ ಕೊನೆಯ ವಚನದಲ್ಲಿ ಬರುತ್ತವೆ. ಆದರೆ ಪ್ರಸ್ತುತ ಕೃತಿಯಲ್ಲಿ ಒಂದೊಂದು ಸ್ಥಲದ ಅಡಿಯಲ್ಲಿ ಅವುಗಳಿಗೆ ಸಂಬಂಧಿಸಿದ ವಚನಗಳೂ ಸಂಗ್ರಹಗೊಂಡಿವೆ. ಈ ಸ್ಥಲಗಳನ್ನು ಇವರಿಬ್ಬರಲ್ಲಿ ಯಾರಿಂದ ಯಾರು ತೆಗೆದುಕೊಂಡರೆಂಬುದು ತಿಳಿಯದು. ಮುಕ್ತಿಮುನಿಯ ಕಾಲ 18ನೆಯ ಶತಮಾನವೆಂದು ನಿರ್ಧರಿಸುವುದಾದರೆ, 17ನೆಯ ಶತಮಾನದಲ್ಲಿ ಇದ್ದಿರಬಹುದಾದ ದೇಶಿಕೇಂದ್ರ ಸಂಗನಬಸವಯ್ಯನಿಂದಲೇ ಮುಕ್ತಿಮುನಿ ತೆಗೆದುಕೊಂಡಿರಬೇಕೆಂದು ಹೇಳಬೇಕಾಗುತ್ತದೆ.

ಷಟ್‌ಸ್ಥಲ ತತ್ತ್ವನಿರೂಪಣೆ ಈ ಕೃತಿಯ ಮುಖ್ಯ ಉದ್ದೇಶ. ಅದನ್ನು ಹೆಚ್ಚು ಶಾಸ್ತ್ರಜಡಗೊಳಿಸದೆ ನೇರ ಹಾಗೂ ಸರಳವಾಗಿ ಸೂತ್ರಬದ್ಧವಾದ ಸಂಕ್ಷಿಪ್ತ ಮುಕ್ತಕ ರೂಪದ ವಚನಗಳ ಮೂಲಕ ವಿವರಿಸಲಾಗಿದೆ. ನಿರೂಪಣೆಯೆಲ್ಲ ಬಸವಾದಿ ಶರಣರ ದಟ್ಟವಾದ ಪ್ರಭಾವ ವಲಯದಲ್ಲಿಯೇ ಸಾಗುತ್ತದೆ. ಹೀಗಿದ್ದೂ ಈ ವಚನಕಾರ ಇತರರಿಂದ ಭಿನ್ನವಾದ ಕೆಲವು ವೈಶಿಷ್ಟ್ಯಗಳನ್ನು ತೋರುತ್ತಾನೆ.

ತಾವು ಹೇಳುವ ವಿಚಾರಗಳಿಗೆ ವೇದ, ಆಗಮ, ಉಪನಿಷತ್ತು, ಪುರಾಣ, ಶಾಸ್ತ್ರಗ್ರಂಥಗಳಿಂದ ಸಂಸ್ಕೃತ ಪ್ರಮಾಣಗಳನ್ನು ಎತ್ತಿ ಕೊಡುವುದು ಒಂದು ಪರಂಪರೆಯಾಗಿಯೇ ವಚನಸಾಹಿತ್ಯದಲ್ಲಿ ನಡೆದುಬಂದಿದೆ. ಇದು ಬಸವೋತ್ತರ ಯುಗದ ವಚನಕಾರರಲ್ಲಂತೂ ಅಧಿಕ ಪ್ರಮಾಣದಲ್ಲಿ ಕಂಡುಬರುತ್ತದೆ. ಈ ಕ್ರಮವನ್ನು ಪ್ರಥಮ ಬಾರಿಗೆ ಟೀಕಿಸಿ ಪುರಾತನ ಶರಣರ ವಚನಗಳಿಗಿಂತ ಮಿಗಿಲಾದ ಸಾಕ್ಷಿ ಮತ್ತೊಂದಿಲ್ಲವೆಂದು ಘೋಷಿಸಿ, ತಾನು ಒಂದೂ ಸಂಸ್ಕೃತ ಉದ್ಧರಣೆಯನ್ನು ಬಳಸದೆ ಅಚ್ಚಗನ್ನಡದಲ್ಲಿ ವಚನಗಳನ್ನು ರಚಿಸಿ ಅಪೂರ್ವತೆಯನ್ನು ಮೆರೆದುದು ಈತನ ಮೊದಲ ಗಮನಾರ್ಹ ವೈಶಿಷ್ಟ್ಯ.

ದೇಶಿಕೇಂದ್ರ ಸಂಗನಬಸವಯ್ಯ ತನ್ನ ವಚನ ರಚನೆಯ ಧೋರಣೆಯನ್ನು ಹೀಗೆ ಹೇಳಿಕೊಂಡಿದ್ದಾನೆ.



"ಅಯ್ಯಾ, ನಿಮ್ಮ ಶರಣರನುಭಾವಕ್ಕೆ ಪ್ರತಿಸಾಕ್ಷಿಯೆಂದು
ಬೆರಸಿ ಹೇಳುವರು ಹಾದಿ ಹತ್ತಿಕೆಯ ನುಡಿಗಳ
ಅದು ಎನಗೆಂದೂ ಸೊಗಸದು ಕಾಣಾ,
ಎನ್ನ ನಿಜರತ್ನ ಪ್ರಕಾಶ ನಿಮ್ಮ ಶರಣರ ವಚನ.
ಇದಕ್ಕೆ ಸಾಕ್ಷಿ ತಂದು ಹೇಳುವ ಭಾವವ ದಹಿಸಿ,
ಭಸ್ಮವ ಮಾಡಿ ಧರಿಸಿರ್ದೆನಾಗಿ ಕಾಣೆಸದು.
ಶರಧಿಗೆ ತೊರೆಗಾವಲಿ, ಮೇರುವಿಗೆ ಮೊರಡಿ,
ಗಗನಕ್ಕೆ ಕೊಪ್ಪರಿಗೆ ತೋರಿಸಿದರೆ ಸರಿಯಪ್ಪುದೆ ?
ಆ ಕುರಿಗಳ ನುಡಿ ಅತ್ತಿರಲಿ,
ಗುರುನಿರಂಜನ ಚನ್ನಬಸವಲಿಂಗಾ,
ನಿಮ್ಮ ಶರಣರ ನುಡಿಬೆಳಗನಗಲದಿರ್ದೆನು ನಿಮ್ಮೊಳಗೆ" - ೭೬೦

"ವೇದಾಗಮ ಸಾಕ್ಷಿಯ ಘನವೆಂದು ನುಡಿವರು,
ನುಡಿದ ನುಡಿ ಏನೆಂದರಿಯರು,
ಇದು ಏನು ಹೇಳಾ ಪಶುಭಾವ ?
ಐವತ್ತೆರಡಕ್ಷರವನುದಯಿಸುವುದೇ ವೇದ ?
ನುಡಿಯುವುದೇ ಆಗಮ ?
ಬೇರರಸಲೇನು, ಕಸನುಜರಿರಾ,
ನಿಮ್ಮ ಕುರುಹು ಕುರುಹನರಿಯದೆ ಕುರಿಗಳಾದವು.
ಕಳೆದುಳಿದು ಬನ್ನಿರಿ,
ಗುರುನಿರಂಜನ ಚನ್ನಬಸವಲಿಂಗನಾಗಬೇಕಾದಡೆ
ಕಳೆ-ನಾದ-ಬಿಂದುವನರಿಯಿರಿ". - ೭೫೯

"ಶ್ರುತಿಯ ನೋಡುವ ಮತಿಕುಶಲದನುವಿಂಗೆ
ನೆಗೆದು ನೋಡಲೊಲ್ಲದೆನ್ನ ಭಾವ.
ಆಗಮವ ನೋಡುವ ಮತಿಕುಶಲದನುವಿಂಗೆ
ವಿಕಸನವಾಗಲೊಲ್ಲದೆನ್ನ ಮನ.
ಅಭ್ಯಾಸಿಗಳರಿವ ಮತಿಕುಶಲದನುವಿಂಗೆ
ಸೊಗಸನೆತ್ತಲೊಲ್ಲದೆನ್ನ ತನು.
ಅದೇನು ಕಾರಣವೆಂದೊಡೆ,
ಬಸವ, ಚನ್ನಬಸವ, ಪ್ರಭುಗಳ ವಚನಾನುಭಾವದ
ಪರಮಪ್ರಕಾಶ ಎನ್ನೊಳಹೊರಗೆ
ಪರಿಪೂರ್ಣಾನಂದ ತಾನೆಯಾಗಿಪ್ಪುದಾಗಿ....." ೭೫೮

ಹಾಗೆಯೇ 'ಆದ್ಯರ - ವೇದ್ಯರ - ಸಾಧ್ಯರ ಸತ್ - ಚಿತ್ - ಆನಂದ ಪ್ರಕಾಶ ಸಕಲಪುರಾತನರ ಅನುಭಾವ ಪ್ರಕಾಶದೊಳು ಮುಳುಗಿ, ಘನಪರವಶದಿಂದೋಲಾಡಿ, ಈ ಮಹಿಮರ ಅನುಭಾವಕ್ಕೆ ತನ್ನನೊತ್ತೆಯನಿತ್ತು'-

*''ಆದ್ಯರನುಭಾವ ಲಕ್ಷ್ಯಬಂದಲ್ಲಿ ದಾಸೋಹಿಯಾಗಿರ್ದೆನು*
*ವೇದ್ಯರನುಭಾವ ಲಕ್ಷ್ಯಬಂದಲ್ಲಿ ಪೂಜಿತನಾಗಿರ್ದೆನು*
*ಸಾದ್ಯರನುಭಾವ ಲಕ್ಷ್ಯಬಂದಲ್ಲಿ ಸೇವಕನಾಗಿರ್ದೆನು*
*ನೂತನ ಪುರಾತನರನುಭಾವ ಲಕ್ಷ್ಯಬಂದಲ್ಲಿ*
*ಗುರುನಿರಂಜನ ಚನ್ನಬಸವಲಿಂಗದಲ್ಲಿ ಸರ್ವಾಚಾರ*
*ಸಂಪತ್ತಿನೊಳಿರ್ದೆನು''* ೨೯೨

ಎಂದು ಶರಣರ ಅನುಭಾವದ ಬೆಳಕಿನಲ್ಲಿ ಮುನ್ನಡೆಯುವ ತನ್ನ ಸತ್ಯಸಂಕಲ್ಪವನ್ನು ಸ್ಪಷ್ಟಪಡಿಸುತ್ತಾನೆ. ಬಸವ, ಚನ್ನಬಸವ, ಪ್ರಭು, ಅಜಗಣ್ಣ, ಸಿದ್ಧರಾಮ, ಘಟ್ಟಿವಾಳಯ್ಯ, ಉರಿಲಿಂಗಪೆದ್ದಿ, ಮಡಿವಳ ಮಾಚಿದೇವ, ಮರುಳ ಶಂಕರದೇವ, ನೀಲಲೋಚನೆ, ನಾಗಲಾಂಬಿಕೆ, ಅಕ್ಕಮಹಾದೇವಿ, ಮುಕ್ತಾಯಕ್ಕ, ಚಂಗಳೆ, ನಂಬಿಯಕ್ಕ, ಬೋಳಿಯಕ್ಕ, ಅಮ್ಮವ್ವೆ ಮೊದಲಾದ ಶರಣ-ಶರಣೆಯರನ್ನು ಕೊಂಡಾಡಿ ತನ್ನ ಭಕ್ತಿ-ಗೌರವಗಳನ್ನು ಸಲ್ಲಿಸಿದ್ದಾನೆ.

ತತ್ತ್ವವಿವೇಚನೆ ಪರಂಪರೆಯಂತೆ ಪಿಂಡ-ಪಿಂಡ ಜ್ಞಾನ, ಸಂಸಾರಹೇಯ, ಗುರುಕಾರುಣ್ಯ ಮುಂತಾಗಿ ಸಾಗಿನಡೆದಿದೆ. ಮನದ ಚಂಚಲತೆಯನ್ನು :

*''ಹೊನ್ನಿರ್ದು ಪರಧನಕಿಚ್ಚೆಯ ಮಾಡಿಸುವುದು.*
*ಹೆಣ್ಣಿರ್ದು ಪರಸ್ತ್ರೀಯರ ಇಚ್ಛೆಯ ಮಾಡಿಸುವುದು.*
*ಮಣ್ಣಿರ್ದು ಪರಭೂಮಿಗೆ ಇಚ್ಛೆಯ ಮಾಡಿಸುವುದು.*
*ಸುರ-ನರಾದಿ ಸಕಲರಲಿ ಇವುಗಳಿಚ್ಛೆಯ ಕಳೆವ*
*ನರರನಾರನು ಕಾಣೆನಯ್ಯ....''* - ೧೭

ಎಂದು ತಿಳಿಸುತ್ತಾನೆ. ಈ ಮನವೇ ಸಂಸಾರ. ಇದನ್ನು ಬಿಟ್ಟು ಬೇರೆ ಸಂಸಾರವೆಂಬುದಿಲ್ಲ ಎಂದು ಹೇಳುತ್ತಾನೆ.

*''ಹೊನ್ನು ಸಂಸಾರವಲ್ಲ, ಹೆಣ್ಣು ಸಂಸಾರವಲ್ಲ, ಮಣ್ಣು ಸಂಸಾರವಲ್ಲ,*
*ಈ ಮೂರರ ಮೇಲಣ ಮೋಹವೆರಸಿದ ಮನವು ಸಂಸಾರ ನೋಡಾ!*
*ಆ ಮನವನು ಸಂಸಾರಮೋಹವನು ಬೇರ್ಪಡಿಸಿ,*
*ತನ್ನ ಕೂಡಿ ನಡೆವ ಗತಿ-ಮತಿಗಳನಾರನು ಕಾಣೆನಯ್ಯಾ*
*ನಿರಂಜನ ಚನ್ನಬಸವಲಿಂಗ''* - ೧೬

ಇದು ಪ್ರಭುದೇವರ 'ಹೊನ್ನು ಮಾಯೆಯೆಂಬರು ಹೊನ್ನುಮಾಯೆಯಲ್ಲ' ಎಂಬ ವಚನದ ಅನುಕರಣೆಯಿಂದ ಕೂಡಿದೆ. ಆದರೆ ಹೇಳುವ ರೀತಿ ನೂತನವಾಗಿದೆ.

ಭಕ್ತಿಯನ್ನು ಪ್ರಕಟಿಸುವ ಕೆಲವು ವಚನಗಳೂ ಇಲ್ಲಿವೆ. ಆದರೆ ಅವುಗಳಲ್ಲಿ ಭಾವತೀವ್ರತೆ ಅಷ್ಟಾಗಿ ತೋರುವುದಿಲ್ಲ. ಬಸವಣ್ಣನವರ 'ಆಡಿ ಕಾಲುದಣಿಯವು' ಎಂಬ ವಚನದಿಂದ ಪ್ರೇರಿತವಾದ ಒಂದು ರೂಪ ಹೀಗಿದೆ.

*"ಕಾಯ ದಣಿವರಿಯದು ; ಮಾಡಿ ಮಾಡಿ ಮುಂದೆ ಉಲಿವುದು.*
*ಮನ ದಣಿವರಿಯದು ; ಮಾಡಿ ಮಾಡಿ ಮುಂದೆ ಉಲಿವುದು.*
*ಭಾವ ದಣಿವರಿಯದು ; ಮಾಡಿ ಮಾಡಿ ಮುಂದೆ ಉಲಿವುದು.*
*ಸರ್ವಾಂಗ ದಣಿವರಿಯದು ; ಮಾಡಿ ಮಾಡಿ*
*ಗುರು ನಿರಂಜನ ಚನ್ನಬಸವಲಿಂಗದಲ್ಲಿ ತಾನೆಯಾಗಿ"* ೧೧೭

ಸಂಗನಬಸವಯ್ಯ ಸತಿ-ಪತಿ-ಭಾವದ ಅನೇಕ ವಚನಗಳನ್ನು ರಚಿಸಿದ್ದಾನೆ. ಅವುಗಳಲ್ಲಿ ಹೆಚ್ಚಿನವು ಬಸವಣ್ಣ, ಅಕ್ಕಮಹಾದೇವಿ, ಉರಿಲಿಂಗ ಪೆದ್ದಿ, ಗಜೇಶ ಮಸಣಯ್ಯಗಳ ಪಡಿಯಚ್ಚಾಗಿದ್ದರೆ, ಕೆಲವು ಹೊಸ ಕಲ್ಪನೆಯಿಂದ ಕೂಡಿವೆ.

*"ಎನ್ನ ಮನೆಯ ರಮಣನ ಮಾಧುರ್ಯವನೇನೆಂದು ಹೇಳಲಮ್ಮ*
*ನೆಲಮನೆಯಲ್ಲಿ ನೆರೆವ ಸುಖವ, ಕಂಡವರರಿಯರು,*
*ಮನಮಂದಿರದಲ್ಲಿ ಕೂಡುವ ಸುಖವ, ವಾಗದ್ವೈತರೇನುಬಲ್ಲರು ?*
*ಪವನ ಗೃಹದಲ್ಲಿ ನೆರೆವ ಸೌಖ್ಯವ ಅವರಿವರರಿಯರು,*
*ಗಗನಮಂಟಪದಲ್ಲಿನ ಲೋಲಸಂಯೋಗವ ಕಾಲಕೆಳಗಲವರರಿಯರು*
*ಗುರುನಿರಂಜನ ಚನ್ನಬಸವಲಿಂಗನ ನಿಜಾಂಗನೆಯರಲ್ಲದೆ*
*ಹೋಗಿ ಬರುವ ಸೋಗಿನ ನಾರಿಯರೆತ್ತಬಲ್ಲರು ಹೇಳಾಯಮ್ಮ"* - ೬೭೮

*"ಮೊದಲೆನ್ನ ಕೈವಶವಾಗಿರ್ದ ಪುರುಷನ*
*ಕಣ್ಣಸನ್ನೆಯಲ್ಲಿರಿಸಿಕೊಂಡಳೆಮ್ಮಕ್ಕ, ಇದು ನೀತಿಯೇ?*
*ಕಾಮಿಸಿ, ಕಲ್ಪಿಸಿಕೊಂಡವಳಕ್ಕ, ಇದು ನೀತಿಯೆ ?*
*ಒಳಗೊಳಗೆ ಮಾತನಾಡಿ ಮೋಹಿಸಿಕೊಂಡವಳಕ್ಕ, ಇದು ನೀತಿಯೆ?*
*ಇದನರಿದು, ಮುನಿಸನುಳಿಸಿ, ಹಿರಿಯಕ್ಕನೊಲುಮೆಯೊಳು*
*ಪರಸ್ತ್ರೀಯಾಗಿ, ಪರಿಪರಿಯಿಂದ ಅವರ ಮೇಲೆ ನೆರೆದರೆ*
*ಮರುಳುಗೊಂಡೆನ್ನೊಳಗಾದರು.*
*ಗುರುನಿರಂಜನ ಚನ್ನಬಸವಲಿಂಗಕ್ಕೆ ಪರಿಣಾಮವಾಯಿತು".* ೬೮೧

ಈತನ ಕೆಲವು ಬೆಡಗಿನ ವಚನಗಳೂ ನೂತನ ಸಂಕೇತಗಳಿಂದ ಕೂಡಿ ಆಕರ್ಷಕವೆನಿಸಿವೆ.

''ಭೂಪಾಲನ ಹೆಂಡತಿಯ ಭುಜದ ಮೇಲಿರ್ದ ಕೋಡಗ
ಗಾಲುಮೇಲಾದ ಶಾಖೆಗಳಿಗೆ ಲಂಘಿಸುವುದು ನೋಡಾ
ಕೋಡಗನ ನಾಭಿಯಲ್ಲಿ ಚಿಕ್ಕೆಮೂಡಿ ಚಂದ್ರನ ಕೂಡಲು
ದೇವಗನ್ನೆಯರು ಆರತಿಯ ಬೆಳಗುತಿರ್ದರು ನೋಡಾ
ಆ ಬೆಳಗಿನೊಳಗೆ ಗುರು ನಿರಂಜನ ಚನ್ನಬಸವಲಿಂಗವನಿದಿರುಗೊಳ್ಳಬಲ್ಲರೆ
ಪ್ರಾಣಲಿಂಗಿಯೆಂಬೆ ಕಾಣಾ'' - ೫೦೪

ಸಮಾಜ ವಿಮರ್ಶೆ ಈತನ ವಚನಗಳಲ್ಲಿ ಕಂಡುಬರುವ ಇನ್ನೊಂದು ವೈಶಿಷ್ಟ್ಯ. ತನ್ನ ಕಾಲದ ಸಮಾಜದಲ್ಲಿ ಕಂಡುಬಂದ ಮೂಢನಂಬಿಕೆ, ಮೋಸ, ವಂಚನೆಗಳನ್ನು ಕಟುವಾಗಿ ಟೀಕಿಸಿದ್ದಾನೆ.

''ಮಠಮಾನ್ಯದೈತನದ ಹಿರಿಯರೆನಿಸುವ ಅಟಮಟದಯ್ಯಗಳ
ಹಟದ ಕುಟಿಲಗಳ ಪರಿಯ ನೋಡಾ
ತಾವು ದೇವರೆಂದು ಸಕಲಭಕ್ತಜನರಿಂದ ಪೂಜೆಯ ಕೈಕೊಂಡು
ಮೆರೆಯುತಲಿರ್ದು, ತಮಗೊಂದುದೇವರುಂಟೆಂದು,
ಈರಣ್ಣ, ಬಸವಣ್ಣ, ಕಲ್ಲಣ, ಮಲ್ಲೇಶ, ಜಗುಲಿಯ ಮೇಲೆ
ಭುಗಿ ಭುಗಿಲೆನಿಸುತ್ತ, ಅಪ್ಪ, ಅಜ್ಜ, ಮುತ್ತಯ್ಯನ ಮುಚ್ಚಿದ ಗದ್ದುಗೆಯೆಂದು
ಹಾವುಗೆ ಬೆತ್ತ ಪುರಾಣ ಧೂಳತಾದಿಗಳಿಂಗೆ ನೇಮಿಸಿದ
ವಾರ ತಿಥಿವಿಡಿದರ್ಚಿಸಿ, ಕಾಯಿಫಲ ಕೂಳ ತೋರಿತೋರಿ ತಿಂಬುವ
ನಾಯಿಭವಿಗಳನೆಂತು ದೇವರೆಂದು ಪೂಜಿಸಬಹುದು !
ಕಾಲು ತೊಳೆದ ನೀರು, ತಿಂದ ಕೂಳು ಇವನೆಂತು ಘನವೆನ್ನಬಹುದು ?
ಮತ್ತೆ ಮನೆಯೊಳಗೆ ಸತ್ತವರಿಗೆಂದು ಹಚ್ಚಡ ಸೀರೆ ಕುಪ್ಪಸಾದಿಗಳ ತಂದು
ಹುಣ್ಣಿವೆ ಅಮವಾಸ್ಯೆಗೆ ವಸ್ತ್ರವವಿಡಿದು ಮಾಡಿ,
ಕರ್ಮಕಾಟವ ಕಳೆದು ಗೆದ್ದೆವೆಂಬ ಮೂಳ ಹೊಲೆಯರು ತಾವು
ದೇವರೆನ್ನಬಹುದೆ ?
ಇಂಥ ಕಾಳ ಮೂಳರಿಗೆ ಮಾಡಿದ ದುರ್ಗತಿ
ಗುರು ನಿರಂಜನ ಚನ್ನಬಸವಲಿಂಗ ಸಾಕ್ಷಿಯಾಗಿ'' - ೨೨೫

ಹೀಗೆಯೇ 'ಬಂದ ಜಂಗಮಕ್ಕೊಂದು ಕಾಸನೀಯದೆ ಬೆಂದವೊಡಲಿಗೆ ಸಂದಿಸದೆ ಹಂದಿನಾಯಿಯಂತೆ ಸಾವ ಹೆಂದ ಮೂಢ' ಮಾಹೇಶ್ವರರನ್ನು (೨೧೮) 'ಆಸೆಗೆ ಹುಟ್ಟಿದ ಭಾಷೆಹೀನ ವೇಷಧಾರಿ'ಗಳನ್ನು (೨೨೦), ದಾಸೋಹಿಗಳೆಂದು ದೇಶವ ತಿರುಗುವ

ಡಂಭಕರನ್ನು (೩೬೫), ಜಡಶೀಲಗಳ ಹೊತ್ತು ಕೆಡು ವೊಡಲಹೊರೆವ ತುಡುಗುಣಿಗಳನ್ನು (೨೩೪), ರಾಜಯೋಗಿ, ಶಿವಯೋಗಿಯೆಂದು ಹೆಸರಿಟ್ಟುಕೊಂಡು ತಿರುಗುವ ಕಪಟ ಜಂಗಮರನ್ನು (೧೧೧೬, ೧೧೧೭), ಅನಾಚಾರಿ ಗುರುಶಿಷ್ಯರನ್ನು (೨೨೧), ವಾರ, ತಿಥಿ, ಅಮವಾಸ್ಯೆಗಳನ್ನು ಆಚರಿಸುವ ಮೂಢಜನರನ್ನು (೩೮೫), 'ಆದ್ಯರೊಚನ ಸಾಧ್ಯವಾಯಿತ್ತೆಂದು' ತಿರುಗುವ ಮಾತಿನ ಮಲ್ಲರನ್ನು (೫೩೦) ತರಾಟೆಗೆ ತೆಗೆದುಕೊಂಡಿದ್ದಾನೆ. ಇಲ್ಲಿ ತೋರುವ ಸಾತ್ವಿಕ ರೋಷ ಈತನ ಸಾಮಾಜಿಕ ಕಾಳಜಿಗೆ ಹಿಡಿದ ಕನ್ನಡಿಯಾಗಿದೆ.

ಸಂಕ್ಷಿಪ್ತತೆ, ಲಯಬದ್ಧತೆ, ಸರಳತೆಗಳನ್ನು ಅಳವಡಿಸಿಕೊಂಡು, ಸಾಹಿತ್ಯಕ ಲಕ್ಷಣಗಳನ್ನು ಪ್ರಕಟಿಸುವುದು ಈ ವಚನಗಳ ಮತ್ತೊಂದು ವೈಶಿಷ್ಟ್ಯ. ಬಹುಸಂಖ್ಯೆಯ ವಚನಗಳು ಮುಕ್ತಕ ರೂಪದಲ್ಲಿವೆ. ತತ್ತ್ವನಿರೂಪಣೆಯನ್ನೊಳಗೊಂಡ ವಚನಗಳು ಸ್ವಲ್ಪ ದೀರ್ಘವೆನಿಸಿದರೂ ಗದ್ಯದ ವಾಚ್ಯತೆಯನ್ನು ಪಡೆದುಕೊಂಡಿಲ್ಲ. ಭಾಷೆ ಸಮಕಾಲೀನ ಪ್ರಾದೇಶಿಕ ಪದ, ನುಡಿಗಟ್ಟುಗಳನ್ನು ಬಳಸಿಕೊಂಡೂ ಶಿಷ್ಟವೆನಿಸಿದೆ. ವಚನಬಂಧ ಶಿಥಿಲವೆನಿಸಿಲ್ಲ. ರಚನೆಯಲ್ಲಿ ಪ್ರಯತ್ನಶೀಲತೆ, ಅಚ್ಚುಕಟ್ಟುತನ ಒಡೆದು ಕಾಣುತ್ತದೆ. ಇಲ್ಲಿ ಬಳಕೆಯಾದ ಅನೇಕ ವಾಕ್ಯಗಳು ಅನುಭವೋಕ್ತಿಗಳೆನಿಸಿವೆ. 'ಸಿಂಹನ ಹಾಲ ಆನೆಯ ಮರಿ ಉಣಬಲ್ಲುದೆ ? ಹುಲಿಯ ಹಾಲ ಹುಲ್ಲೆಯ ಮರಿ ಉಣಬಲ್ಲದೆ ?ಗರುಡನಿಂದೆ ಗುಟುಕ, ಹಂದಿಯ ಮರಿ ಕೊಳಬಲ್ಲುದೆ ? 'ವೇಷಕ್ಕೆ ತಕ್ಕ ಭಾಷೆಯುಳ್ಳರೆ ಹಿರಿಯರು ಮೆಚ್ಚುವರು' 'ಆಸೆಗೆ ಹುಟ್ಟಿದ ಭಾಷೆಹೀನ ವೇಷಧಾರಿಗಳು ಸಹಜವನೆತ್ತಬಲ್ಲರಯ್ಯ ? 'ನೀತಿಯನರಿಯದ ಸೂತಕ ಪ್ರಾಣಿಗಳಿಗೆ ಅಜಾತ ಗುರೂಪದೇಶ ಅಳವಡುವುದೇ ? 'ಸಿಂಹದ ಹಾಲತಂದು ಶುನಕಂಗಿತ್ತು ಸಲಹಿದಡೆ ನಡೆನುಡಿಯಲ್ಲಿ ಶುನಕನಲ್ಲದೆ ಸಿಂಹನಾಗಿತ್ತೆ ? 'ಹಂಗಿಲ್ಲದ ಉದ್ಯೋಗ ಭಂಗವಿಲ್ಲ ಕಾಣಾ' 'ಕಾಲೊಳಗಿನ ಮುಳ್ಳ ಕಣ್ಣಿನಿಂದೆ ತೆಗೆಯಬಹುದು, ಕಣ್ಣೊಳಗಿನ ಮುಳ್ಳ ಕಾಲಲ್ಲಿ ತೆಗೆವ ಜಾಣರನಾರನೂ ಕಾಣೆ', 'ಕೆಂಡಕ್ಕೆ ಬಂದೊರಲೆ ನಿಂದಿರಲೆಡೆಯಿಲ್ಲ' 'ಪಂಚಾಕ್ಷರ ಸಂಬಂಧವಾದ ನಿಜಾನಂದ ಶರಣ ಗಜಬಜೆಯ ಗೋಷ್ಠಿಗಳನೊಮ್ಮೆ ತೋರ' 'ಪತಿಮೋಹ ಪೂರ್ಣೆ ಅತಿ ಉನ್ನತೆಯೆನಿಸುವಳು ಒಳಹೊರಗೆ' 'ಕಸಗೂಡಿದ ಭೂಮಿಯಲ್ಲಿ ಸಸಿ ಪಲ್ಲೈಸುವುದೆ? 'ಐವತ್ತಾರು ದೇಶದೊಳಗುಳ್ಳ ಸ್ಥಾವರಂಗಳ ತನ್ನೊಳಗುಳ್ಳ ಭಕ್ತಿಯಲ್ಲರ್ಚಿಸಬಲ್ಲರೆ ಶರಣ' - ಇಂಥ ಮಾತುಗಳಲ್ಲಿ ವಚನಕಾರನ ಲೋಕಾನುಭವ, ವಚನ ರಚನಾಕೌಶಲಗಳು ಎದ್ದು ಕಾಣುತ್ತವೆ.

ಸಂಗನಬಸವಯ್ಯನ ಶಬ್ದಸಂಪತ್ತು ಸಮೃದ್ಧವಾಗಿದೆ. ಪಾರಂಪರಿಕ ವಚನಭಾಷೆಯನ್ನು ಸಂಪೂರ್ಣ ಕರಗತಮಾಡಿಕೊಂಡುದಲ್ಲದೆ, ಅನೇಕ ದೇಶೀಪದಗಳನ್ನು, ನುಡಿಗಟ್ಟುಗಳನ್ನು ಹದವರಿತು ಬಳಸಿಕೊಂಡು ವಚನಗಳ ಸತ್ವ-ಶಕ್ತಿಗಳನ್ನು ಹೆಚ್ಚಿಸಿದ್ದಾನೆ. ಇಂಬು, ಅಗಿನ, ಉಚ್ಚಹ, ಉಡುಗು, ಉಲುಚು, ಬೊಂಪಾಸ, ಉಳುಮೆ, ಎಡ್ಡೆಡ್ಡು, ಎರೆಯ, ಒಬ್ಬುಳಿ,

ಬಣತೆ, ಗೊಂದಣ, ಕರಡಪಿ, ನಿಗುರು, ಕಾವಳಿ, ಕೌಲು, ಗುಂಜು, ಗಂಪ, ಗಬ್ಬು, ತೊಂಡಲ, ದಿಂಡಿ, ತಿಗಳ, ಹಣ್ಣೆ, ಹದುರು - ಮೊದಲಾದ ದೇಶೀಪದಗಳು, ಗಾಲಮೇಲು, ಹುಲ್ಲಹೊಟ್ಟುಮಾಡು, ತುಳಿದು ತೂರು, ಕಾಸುಕಪ್ಪಟ, ಬರುಕಾಯಿನಾಗು, ಪಟ್ಟುಗುಡು, ಕಚ್ಚುಕಳೆದಕ್ಕಿ, ಕಣ್ಣೆರಪ ಮಾಡು, ಕೆಡಬಡೆ, ಕೂಕ-ಕುಟಿಲ, ಗಜಿಬಜೆ, ಗುಂಭ ಭ್ರಾಂತ, ತರಳನುಡಿ, ಪೋರಜಂಗುಳಿ, ಬಯಲ ಭ್ರಾಂತಿ, ಬಟ್ಟಗುಡು, ಬಟ್ಟೆಹರುಕರು ಎಂಬಂಥ ನುಡಿಗಟ್ಟು, ಜೋಡುನುಡಿಗಳು ಇವಕ್ಕೆ ಉದಾಹರಣೆ.

ಈ ವಚನಕಾರನ ಅಂಕಿತದಲ್ಲಿ ವೈವಿಧ್ಯ ಕಂಡುಬರುತ್ತದೆ. 'ಗುರು ನಿರಂಜನ ಚನ್ನಬಸವಲಿಂಗ' ಎಂಬುದು ಬಹುಸಂಖ್ಯೆಯ ವಚನಗಳಲ್ಲಿ ಬರುವ ಅಂಕಿತವಾದರೆ, ಆಚಾರಾಂಗಸ್ಥಲದಿಂದ ಮಹದಂಗಸ್ಥಲದವರೆಗಿನ ಕೊನೆಯ ಆರುಸ್ಥಲಗಳಲ್ಲಿನ ವಚನಗಳಲ್ಲಿ ಈ ಕೆಳಗಿನ ಅಂಕಿತಗಳಿವೆ. ಸದ್ಗುರು ಚನ್ನವೃಷಭೇಂದ್ರಲಿಂಗ, ಚೆನ್ನ ಶುದ್ಧಸಿದ್ಧ ಪ್ರಸಿದ್ಧ ಪ್ರದಾಯಕ ಲಿಂಗ, ಪರಮಾಚಾರಪ್ರಿಯ ಚನ್ನಬಸವಲಿಂಗ, ಚೆನ್ನಕಾಯಮನಭಾವಪ್ರಿಯ ಮಹಾಲಿಂಗ, ಕ್ರಿಯಾಜ್ಞಾನಭಾವಮೋಹಿ ನಿಜಲಿಂಗ, ಚೆನ್ನ ಭಕ್ತಿ ಜ್ಞಾನ ವೈರಾಗ್ಯ ಮೂರ್ತಿಲಿಂಗ (ಆಚಾರಾಂಗಸ್ಥಲ) ; ಚೆನ್ನ ತನುಮನ ಭಾವ ಪ್ರಸನ್ನಲಿಂಗ, ಚೆಲುವಾಂಗ ಪ್ರಾಣಾತ್ಮಪ್ರಿಯ ಸಿದ್ಧಲಿಂಗ, ಕರ್ತು ಚೆನ್ನ ವೃಷಭೇಂದ್ರಲಿಂಗ, ನಿಜಭಕ್ತಿ ಜ್ಞಾನ ವೈರಾಗ್ಯ ಮೋಹಿ ಘನಲಿಂಗ, ಶುದ್ಧಸಿದ್ಧ ಪ್ರಸಿದ್ಧ ಪ್ರಭು (ಗೌರವಾಂಗ ಸ್ಥಲ) ; ಶುದ್ಧಸಿದ್ಧ ಪ್ರಸಿದ್ಧ ಪ್ರಭುಲಿಂಗ, ಷಡ್ಬ್ರಹ್ಮ ರೂಪ ಚನ್ನಬಸವಲಿಂಗ, ಚೆನ್ನಗುರುಲಿಂಗ ಜಂಗಮ ಪ್ರಭುವೆ (ಶಿವಾಂಗ ಸ್ಥಲ); ಚೆನ್ನ ಬಿಂದುನಾದಕಳೆ ಪ್ರಸನ್ನ ಮೂರ್ತಿಲಿಂಗ (ಚರಾಂಗಸ್ಥಲ) ; ಸದ್ಭಕ್ತಿಪ್ರಿಯ ಪಂಚಾಕ್ಷರಮೂರ್ತಿಲಿಂಗ, ಪಂಚಾಕ್ಷರ ಮೂರ್ತಿಲಿಂಗ, ಶಾಂತ ಐದುವರ್ಣ ಸಂಜ್ಞೆದೇವರು, ಸತ್ತುಚಿತ್ತುಆನಂದನಿತ್ಯಪರಿಪೂರ್ಣಲಿಂಗ (ಶೇಷಾಂಗಸ್ಥಲ) ಮಹಾಘನ ಚೆನ್ನ ವೃಷಭೇಂದ್ರಲಿಂಗ, ಐವರ್ಣಸಂಜ್ಞೆದೇವ, ಚೆನ್ನತ್ರಿವರ್ಣಲಿಂಗ, ನಿಜಾಂತ ಪ್ರಿಯ ಚೆನ್ನಬಸವಲಿಂಗ, ಶಾಂತಚೆನ್ನವೃಷಭೇಂದ್ರಲಿಂಗ, ಮಹಾದಾನಿ ಚೆನ್ನ ವೃಷಭೇಂದ್ರಲಿಂಗ (ಮಹದಂಗಸ್ಥಲ).

ದೇಶಿಕೇಂದ್ರ ಸಂಗನಬಸವಯ್ಯನ 'ಷಟ್‌ಸ್ಥಲ ವಚನಗಳು' ಎಂಬ ಈ ಕೃತಿ ಸೊಲ್ಲಾಪುರ ತಾಲ್ಲೂಕಿನ ಕರಜಗಿ ಗ್ರಾಮದಲ್ಲಿ ದೊರೆತಿದೆ. ಹಸ್ತಪ್ರತಿ ಹೆಚ್ಚು ಸುಸ್ಥಿಯಲ್ಲಿದ್ದು, ಅಕ್ಷರಗಳು ಸ್ಫುಟವಾಗಿವೆ. ಭಾಷೆ ಶುದ್ಧವಾಗಿದೆ. ಪಿಂಡಸ್ಥಲದಿಂದ ಆರಂಭವಾದ ಕೃತಿ ನಿರವಯಸ್ಥಲಕ್ಕೆ ಮುಕ್ತಾಯವಾಗುತ್ತದೆ. ಇಲ್ಲಿಗೆ ೪೫ ಸ್ಥಲಗಳು, ೯೫೦ ವಚನಗಳು ಮುಗಿಯುತ್ತವೆ. ಆಮೇಲೆ ಮತ್ತೆ ಭಕ್ತಸ್ಥಲದ ಉಳಿದ ವಚನಗಳು, ಭಕ್ತಿ ತಾಮಸ ನಿರಸನ ಸ್ಥಲದ ಉಳಿದ ವಚನಗಳು, ಮಾಹೇಶ್ವರ ಸ್ಥಲದ ಉಳಿದ ವಚನಗಳು, ಶರಣಸ್ಥಲದ ಉಳಿದ ವಚನಗಳು, ಐಕ್ಯಸ್ಥಲದ ಉಳಿದ ವಚನಗಳು - ಎಂದು ೨೧೩ ವಚನಗಳು, ತರುವಾಯ 'ಗುರುಭಕ್ತಿ ಸಂಸಾರಿ' ಎಂಬ

ಸ್ಥಲದಿಂದ 'ಮಹದಂಗ ಸ್ಥಲ'ದ ವರೆಗಿನ ಎಂಟು ಸ್ಥಲಗಳ ೧೧೯ ವಚನಗಳು ಬರೆಯಲ್ಪಟ್ಟಿವೆ. ೯೫೦ ವಚನಗಳವರೆಗಿನ ಮೂಲ ಷಟ್‌ಸ್ಥಲ ಕಟ್ಟು ಒಂದು ವ್ಯವಸ್ಥೆಗೆ ಒಳಪಟ್ಟಿರುವುದರಿಂದ ಅದೊಂದು ಸ್ವತಂತ್ರ್ಯ ಕೃತಿಯೆಂದೂ, ಉಳಿದ ೩೩೨ ವಚನಗಳು ನಂತರ ಬರೆದು ಜೋಡಿಸಿದ ಹೆಚ್ಚಿನ ವಚನಗಳೆಂದೂ ಗ್ರಹಿಸುವುದು ಸೂಕ್ತವೆನಿಸುತ್ತದೆ. ಈ ಕೃತಿಯಲ್ಲಿನ ೬೦ ವಚನಗಳನ್ನು ಹಸ್ತಪ್ರತಿಯ ಒಡೆಯರಾದ ಕರಜಗಿ ಗ್ರಾಮದ ಶ್ರೀ ಚೆನ್ನವೀರ ಗಂಗದೆ ಅವರು ಬಸವ ಪಥ ಪತ್ರಿಕೆಯಲ್ಲಿ ಪ್ರಕಟಿಸಿದ್ದಾರೆ. ಈಗ ಇದು ನನ್ನಿಂದ ಪರಿಷ್ಕರಣಗೊಂಡು ಕರ್ನಾಟಕ ಸರಕಾರದ ಸಮಗ್ರ ವಚನ ಸಾಹಿತ್ಯದ ಜನಪ್ರಿಯ ಆವೃತ್ತಿ ಪ್ರಕಟನ ಯೋಜನೆಯ ಅಡಿಯಲ್ಲಿ ಸಿದ್ಧಪಡಿಸಿದ ಏಳನೆಯ ಸಂಕೀರ್ಣವಚನ ಸಂಪುಟದ ಮೂಲಕ ಆಮೂಲಾಗ್ರವಾಗಿ ಬೆಳಕು ಕಾಣುತ್ತಲಿದೆ.



# ಮಯಾಸುರನು ಯಾವದೇಶದವನು ?

**ವಿದ್ವಾನ್ ಎಚ್. ವಿ. ನಾಗರಾಜರಾವ್**

---

ರಾಮಾಯಣ, ಮಹಾಭಾರತ ಮತ್ತು ಪುರಾಣಗಳು ಮಯಾಸುರನ ಬಗೆಗೆ ಅನೇಕ ವಿಷಯಗಳನ್ನು ತಿಳಿಸುತ್ತವೆ. ಅವನು ಮಹಾಪ್ರಾಜ್ಞನೂ ಶ್ರೇಷ್ಠಶಿಲ್ಪಿಯೂ ಆಗಿದ್ದನೆಂಬ ವಿಷಯವನ್ನು ಅವೆಲ್ಲಾ ಏಕಕಂಠದಿಂದ ತಿಳಿಸುತ್ತವೆ. ಮಯಾಸುರನ ಐತಿಹಾಸಿಕತೆ, ವ್ಯಕ್ತಿತ್ವ ಮತ್ತು ಮೂಲ ದೇಶದ ಬಗೆಗೆ ದೃಷ್ಟಿಹರಿಸುವುದು ಈ ಲೇಖನದ ಉದ್ದೇಶವಾಗಿದೆ. ಇದಕ್ಕೆ ಆಧಾರವಾಗಿ ಮೇಲೆ ಹೇಳಿದ ಗ್ರಂಥಗಳಲ್ಲಿ ದೊರೆಯುವ ಮಾಹಿತಿಯನ್ನು ಮೊದಲು ನೋಡಬೇಕು.

## ಅ) ರಾಮಾಯಣ

ವಾಲ್ಮೀಕಿರಾಮಾಯಣದಲ್ಲಿ ಕಿಷ್ಕಿಂಧಾಕಾಂಡದ ಐವತ್ತೊಂದನೆಯ ಸರ್ಗದಲ್ಲಿ ಸ್ವಯಂಪ್ರಭಾ ಎಂಬ ವೃದ್ಧೆಯು ಆಂಜನೇಯಾದಿ ವಾನರರಿಗೆ ಮಯನ ಇತಿಹಾಸವನ್ನು ಸಂಕ್ಷೇಪವಾಗಿ ಹೇಳುತ್ತಾಳೆ[೧]. ಮಯ ಮಾಯಾವಿಯೂ ಮಹಾತೇಜಸ್ವಿಯೂ ಆಗಿದ್ದನು. ಅವನೇ ತನ್ನ ಮಾಯೆಯಿಂದ ಕಾಂಚನಮಯವಾದ ವನವನ್ನು ನಿರ್ಮಿಸಿದನು. ಅವನೇ ಹಿಂದೆ ದಾನವರ ಕುಲದ ವಿಶ್ವಕರ್ಮನಾಗಿದ್ದನು. ಸಹಸ್ರಾರು ವರ್ಷ ತಪಸ್ಸನ್ನು ಮಾಡಿ ಅವನು ಬ್ರಹ್ಮನಿಂದ ಔಶನಸ ವಿದ್ಯೆಯನ್ನು ವರವಾಗಿ ಗಳಿಸಿದನು. 'ಹೇಮಾ' ಎಂಬ ಅಪ್ಸರೆಯಲ್ಲಿ ಮಯನು ಆಸಕ್ತಿ ತೋರಿಸಿದುದನ್ನು ತಾಳಲಾರದೆ ಇಂದ್ರನು ವಜ್ರಾಯುಧದಿಂದ ಅವನಿಗೆ ಹೊಡೆದನು. ಆದರೆ

---

೧. ವಾಲ್ಮೀಕಿ ರಾಮಾಯಣ, ಕಿಷ್ಕಿಂಧಾಕಾಂಡ, ೫೧ನೆಯ ಸರ್ಗ, ಶ್ಲೋಕ ೬-೧೮

ಬ್ರಹ್ಮನು ಈ ಕಾಂಚನಮಯ ವನವನ್ನು ಹೇಮಳಿಗೇ ಕೊಟ್ಟನು. ನಾನು ಅವಳ ಸಖಿ ಸ್ವಯಂಪ್ರಭೆ. ಅವಳ ಪರವಾಗಿ ಈ ವನವನ್ನು ನೋಡಿಕೊಳ್ಳುತ್ತಿದ್ದೇನೆ.'' ಎಂದು ಸ್ವಯಂ ಪ್ರಭೆ ಗುಹೆಯಲ್ಲಿ ಪ್ರವೇಶಿಸಿದ ವಾನರರಿಗೆ ತನ್ನ ವೃತ್ತಾಂತವನ್ನೂ, ಪ್ರಸಂಗವಶಾತ್ ಮಯನ ಇತಿಹಾಸವನ್ನೂ ತಿಳಿಸುತ್ತಾಳೆ.

ಅನಂತರ ಉತ್ತರ ಕಾಂಡದ ಹನ್ನೆರಡನೆಯ ಸರ್ಗದಲ್ಲಿ ಮಯನ ಬಗೆಗೆ ಇನ್ನೂ ಹೆಚ್ಚಿನ ವಿಷಯಗಳಿವೆ.[2]. ಅವುಗಳನ್ನು ಸಂಗ್ರಹವಾಗಿ ಹೀಗೆ ಹೇಳಬಹುದು.

ರಾವಣನು ಒಮ್ಮೆ ಕಾಡಿನಲ್ಲಿ ಸಂಚರಿಸುತ್ತಿದ್ದಾಗ ದಿತಿಯ ಮಗನಾದ ಮಯನನ್ನು ಕಂಡನು. ಮಯನ ಜೊತೆಯಲ್ಲಿ ಅವನ ಮಗಳಾದ ಮಂಡೋದರಿಯೂ ಇದ್ದಳು. ''ನೀವು ಯಾರು'' ಎಂದು ಪ್ರಶ್ನಿಸಿದ ರಾವಣನಿಗೆ ಮಯನು ತನ್ನ ಕಥೆಯನ್ನು ಹೇಳಿದನು. ''ಅಪ್ಸರೆ ಹೇಮಾ ದೇವತೆಗಳಿಂದ ನನಗೆ ವಿವಾಹದಲ್ಲಿ ಪತ್ನಿಯಾಗಿ ಕೊಡಲ್ಪಟ್ಟಳು. ಅವಳಿಗಾಗಿ ನಾನು ಹೇಮಮಯವಾದ ಅರಮನೆಯನ್ನು ನಿರ್ಮಿಸಿದ್ದೆ. ದೇವತೆಗಳ ಕಾರ್ಯಾರ್ಥವಾಗಿ ಹೇಮಾ ಹದಿನಾಲ್ಕು ವರ್ಷ ಸ್ವರ್ಗಕ್ಕೆ ಹೋದಳು. ನಮ್ಮ ಮಗಳಾದ ಮಂಡೋದರಿಯೊಡನೆ ನಾನು ಏಕಾಕಿಯಾಗಿ ಕಷ್ಟದಿಂದ ಕಾಲಕಳೆಯುತ್ತಿದ್ದೇನೆ. ಇವಳಿಗೆ ಯೋಗ್ಯನಾದ ವರನನ್ನು ಹುಡುಕುತ್ತಾ ಇಲ್ಲಿಗೆ ಬಂದಿದ್ದೇನೆ. ಇವಳಲ್ಲದೆ ನನಗೆ ಇಬ್ಬರು ಗಂಡುಮಕ್ಕಳೂ ಇದ್ದಾರೆ. ಮಾಯಾವಿ, ದುಂದುಭಿ ಎಂದು ಅವರ ಹೆಸರು. ಇಷ್ಟು ನನ್ನ ವಿಷಯ. ಇನ್ನು ನಿನ್ನ ವಿಷಯವನ್ನು ಹೇಳು''. ಮಯನ ಮಾತುಗಳನ್ನು ಕೇಳಿದ ರಾವಣನು ತನ್ನ ವಂಶಚರಿತ್ರೆಯನ್ನು ಹೇಳಿದನು. ಸಂತುಷ್ಟನಾದ ಮಯನು ತನ್ನ ಮಗಳಾದ ಮಂಡೋದರಿಯನ್ನು ಅಗ್ನಿಸಾಕ್ಷಿಕವಾಗಿ ರಾವಣನಿಗೆ ಧಾರೆಯೆರೆದು ಕೊಟ್ಟನು. ಅಲ್ಲದೆ ಅದ್ಭುತವಾದ ಶಕ್ತ್ಯಾಯುಧವನ್ನೂ ಅವನಿಗೆ ನೀಡಿದನು. ಈ ಶಕ್ತ್ಯಾಯುಧವನ್ನೇ ಯುದ್ಧದಲ್ಲಿ ರಾವಣನು ಲಕ್ಷ್ಮಣನ ಮೇಲೆ ಪ್ರಯೋಗಿಸಿ ಅವನನ್ನು ಉರುಳಿಸಿದನು.

ಮಯನು ರಾವಣನ ಶ್ವಶುರ (ಮಾವ)ನೆಂದು ಇದರಿಂದ ಸ್ಪಷ್ಟವಾಗುತ್ತದೆ. ಕಿಷ್ಕಿಂಧಾ ಕಾಂಡದಲ್ಲಿ ವಾಲಿಯಿಂದ ಹತರಾಗುವ ಮಾಯಾವಿ ದುಂದುಭಿ ಎಂಬ ರಾಕ್ಷಸರೀರ್ವರು ಮಯನ ಮಕ್ಕಳೋ ಅಲ್ಲವೋ ಎಂಬುದನ್ನು ಅಲ್ಲಿ ಹೇಳಿಲ್ಲ.

## ಆ) ಮಹಾಭಾರತ

ಮಹಾಭಾರತದಲ್ಲಿಯೂ ಮಯಾಸುರನು ಪ್ರಮುಖ ಪಾತ್ರವನ್ನು ಹೊಂದಿದ್ದಾನೆ. ಆದಿಪರ್ವದ ಕೊನೆಯಲ್ಲಿ ಖಾಂಡವ ದಹನದ ಪ್ರಸಂಗದಲ್ಲಿ ಮಯನ ಬಗೆಗೆ ಪ್ರಸ್ತಾವವಿದೆ.[3]

---

೨. ವಾಲ್ಮೀಕಿ ರಾಮಾಯಣ, ಉತ್ತರಕಾಂಡ, ೧೨ನೆಯ ಸರ್ಗ, ಶ್ಲೋಕ ೩-೨೨

೩. ಮಹಾಭಾರತ (ಪೂನಾದಿಂದ ಪ್ರಕಟಗೊಂಡಿರುವ ಪರಿಷ್ಕೃತ ಆವೃತ್ತಿ), ಆದಿಪರ್ವ, ಅಧ್ಯಾಯ ೨೧೯

‘‘ಖಾಂಡವ ವನವನ್ನು ಅಗ್ನಿಯು ದಹಿಸುತ್ತಿದ್ದಾಗ ಒಬ್ಬ ಅಸುರನು ಅಲ್ಲಿಂದ ತಪ್ಪಿಸಿಕೊಂಡು ಹೋಗಲು ಯತ್ನಿಸಿದನು. ಅವನನ್ನು ಸುಡಲು ಬೆಂಕಿ ನುಗ್ಗಿತು. ಎಲ್ಲಿಯೂ ಹೋಗಲು ಬೇರೆ ದಾರಿ ಇಲ್ಲದಂತೆ ಚಕ್ರಪಾಣಿ ಕೃಷ್ಣನೂ ಅಡ್ಡ ನಿಂತಿದ್ದನು. ಪ್ರಾಣಭಯದಿಂದ ತತ್ತರಿಸಿ ಅಸುರನು ಅರ್ಜುನನಿಗೆ ಶರಣಾಗತನಾಗಿ ಜೀವವನ್ನು ಉಳಿಸಬೇಕೆಂದು ಬೇಡಿಕೊಂಡನು. ಅರ್ಜುನನು ಅವನಿಗೆ ಅಭಯ ನೀಡಿದ್ದರಿಂದ ಅಗ್ನಿಯು ಅವನನ್ನು ಸುಡಲಿಲ್ಲ. ಶ್ರೀ ಕೃಷ್ಣನೂ ಅವನನ್ನು ಕೊಲ್ಲಲಿಲ್ಲ.

ಮಹಾಭಾರತದ ಸಭಾಪರ್ವದ ಆದಿಯಲ್ಲಿ ಈ ಕಥೆ ಮುಂದುವರಿದಿದೆ.[೪]

ಮಯನು ಕೃತಜ್ಞತೆಯಿಂದ ಅರ್ಜುನನಿಗೆ ವಂದಿಸಿ ಪ್ರಾಣಗಳನ್ನು ಉಳಿಸಿದ್ದಕ್ಕೆ ಪ್ರತಿಯಾಗಿ ನನ್ನಿಂದ ಯಾವ ಸೇವೆಯನ್ನಾದರೂ ಪಡೆದುಕೊ ಎನ್ನುತ್ತಾನೆ. ಆದರೆ ಅರ್ಜುನ ಪ್ರತ್ಯುಪಕಾರವಾಗಿ ನನಗೆ ಏನೂ ಬೇಡವೆನ್ನುತ್ತಾನೆ. ಮಯನು ಒತ್ತಾಯ ಮಾಡಿದಾಗ ಶ್ರೀಕೃಷ್ಣನು ಅರ್ಜುನನ ಅಣ್ಣ ಧರ್ಮರಾಜನಿಗಾಗಿ ಒಂದು ಶ್ರೇಷ್ಠ ಸಭಾಭವನವನ್ನು ನಿರ್ಮಿಸಿಕೊಡಲು ಮಯನಿಗೆ ಸಲಹೆ ನೀಡುತ್ತಾನೆ. ಸಂತೋಷದಿಂದ ಒಪ್ಪಿಕೊಂಡ ಮಯನು ಸಭಾಭವನಕ್ಕಾಗಿ ಉಚಿತ ಭೂಮಿಯನ್ನಾರಿಸುತ್ತಾನೆ. ಅನಂತರ ಅವನು ಅರ್ಜುನನಿಗೆ ಹೇಳುತ್ತಾನೆ.[೫] ‘‘ಅರ್ಜುನ, ಕೈಲಾಸದ ಉತ್ತರದಲ್ಲಿ, ಬಿಂದುಸರಸ್ಸಿನ ಬಳಿ ನಾನು ಹಿಂದೆ ಅನೇಕ ಉತ್ತಮ ಶಿಲೆಗಳನ್ನೂ, ರತ್ನಗಳನ್ನೂ ಸಂಗ್ರಹಿಸಿದ್ದೆ. ಅವು ರಾಕ್ಷಸರಾಜ ವೃಷಪರ್ವನ ಸಭೆಯಲ್ಲಿವೆ. ನಾನು ಈಗ ಅಲ್ಲಿಗೆ ಹೋಗಿ ಅವುಗಳನ್ನೆಲ್ಲಾ ತಂದು ನಿನ್ನ ಸಭಾಭವನದ ನಿರ್ಮಾಣದಲ್ಲಿ ಉಪಯೋಗಿಸುತ್ತೇನೆ. ಬಿಂದುಸರಸ್ಸಿನಲ್ಲಿರುವ ಮಹಾಗದೆಯನ್ನೂ ತರುತ್ತೇನೆ. ಅದು ಭೀಮನಿಗೆ ಯೋಗ್ಯವಾದ ಆಯುಧವಾಗುತ್ತದೆ. ಅಂತೆಯೇ, ಅಲ್ಲಿರುವ ದೇವದತ್ತವೆಂಬ ದಿವ್ಯ ಶಂಖವನ್ನು ನಿನಗೆ ತಂದೊಪ್ಪಿಸುತ್ತೇನೆ.’’

ಹೀಗೆ ಹೇಳಿ ಮಯನು ಉತ್ತರಾಭಿಮುಖವಾಗಿ ಹೊರಟು ಬಿಂದುಸರಸ್ಸನ್ನು ತಲುಪಿ ಅಲ್ಲಿಂದ ಸಭಾಭವನದ ನಿರ್ಮಾಣಕ್ಕೆ ಆವಶ್ಯಕವಾಗಿದ್ದ ಸಾಮಗ್ರಿಗಳನ್ನೂ ಗದೆ-ಶಂಖಗಳನ್ನೂ ತರುತ್ತಾನೆ. ಗದೆಯನ್ನು ಭೀಮನಿಗೂ, ಶಂಖವನ್ನು ಅರ್ಜುನನಿಗೂ ಕೊಟ್ಟು, ಅದ್ಭುತವಾದ ಸಭಾಭವನವನ್ನು ನಿರ್ಮಿಸುತ್ತಾನೆ. ನಿರ್ಮಾಣಕ್ಕೆ ಹದಿನಾಲ್ಕು ತಿಂಗಳು ಕಾಲ ಬೇಕಾಗುತ್ತದೆ. ಆಶ್ಚರ್ಯಕರವಾಗಿದ್ದ ಮಯನಿರ್ಮಿತ ಸಭೆಯು ಇಂದ್ರಸಭೆಯನ್ನೂ ಮೀರಿಸುವಂತೆ ವೈಭವೋಪೇತವಾಗಿರುತ್ತದೆ.

ಇಷ್ಟು ಮಹಾಭಾರತದಲ್ಲಿ ನಮಗೆ ಮಯನ ಬಗೆಗೆ ದೊರೆಯುವ ಮಾಹಿತಿ.

---

೪. ಮಹಾಭಾರತ (ಪೂನಾದಿಂದ ಪ್ರಕಟಗೊಂಡಿರುವ ಪರಿಷ್ಕೃತ ಆವೃತ್ತಿ), ಸಭಾಪರ್ವ, ಅಧ್ಯಾಯ ೧
೫. ಅದೇ ಅಧ್ಯಾಯ ೩

ಪುರಾಣಗಳಲ್ಲಿಯೂ ಮಯನ ಹೆಸರು ಉಲ್ಲೇಖಿತವಾಗುತ್ತದೆ. ಮಯನನ್ನು ಮತ್ಸ್ಯಪುರಾಣವು ಮಹಾಮಾಯ, ಅಸುರ, ದೈತ್ಯ ಗಣಾಧಿಪ, ತ್ರಿಪುರೇಶ್ವರ, ದಾನವನಾಯಕ ಮುಂತಾದ ವಿಶೇಷಣಗಳಿಂದ ವರ್ಣಿಸುತ್ತದೆ. ವಿಷ್ಣುಧರ್ಮೋತ್ತರ ಪುರಾಣವೂ ಮಯನು ತನ್ನ ಮಗಳು ಮಂಡೋದರಿಯನ್ನು ರಾವಣನಿಗೆ ವಿವಾಹಮಾಡಿಕೊಟ್ಟನೆಂದು ತಿಳಿಸುತ್ತದೆ.

**ಸೂರ್ಯ ಸಿದ್ಧಾಂತ** - ಮಯಾಸುರನ ವಿಚಾರದಲ್ಲಿ ಇವೆಲ್ಲವುಗಳಿಗಿಂತಲೂ ಮುಖ್ಯವಾದ ಗ್ರಂಥವೆಂದರೆ ಸೂರ್ಯಸಿದ್ಧಾಂತ. ಇದು ಅತ್ಯಂತ ವೈಜ್ಞಾನಿಕವಾದ ಗ್ರಂಥ. ಗಣಿತ, ಖಗೋಲ ವಿಜ್ಞಾನ, ಭೂಗೋಳ ವಿಜ್ಞಾನಗಳ ಪರಿಣತರು ಪರಿಶೀಲಿಸಬೇಕಾದ ಶ್ರೇಷ್ಠ ಗ್ರಂಥ ಸ್ವಾರಸ್ಯದ ವಿಷಯವೆಂದರೆ, ಮಯಾಸುರನು ಇದರ ಕರ್ತೃವಾಗಿದ್ದಿರಬೇಕೆಂಬುದು. ಇದು ಗ್ರಂಥದ ಪೀಠಿಕಾ ಶ್ಲೋಕಗಳಿಂದಲೇ ಸ್ಪಷ್ಟವಾಗಿ ತಿಳಿದುಬರುತ್ತದೆ :

*ಅಚಿಂತ್ಯಾವ್ಯಕ್ತರೂಪಾಯ ನಿರ್ಗುಣಾಯ ಗುಣಾತ್ಮನೇ ।*
*ಸಮಸ್ತಜಗದಾಧಾರಮೂರ್ತಯೇ ಬ್ರಹ್ಮಣೇ ನಮಃ ॥*
*ಅಲ್ಪಾವಶಿಷ್ಟೇ ತು ಕೃತೇ ಮಯೋ ನಾಮ ಮಹಾಸುರಃ ।*
*ರಹಸ್ಯಂ ಪರಮಂ ಪುಣ್ಯಂ ಜಿಜ್ಞಾಸುರ್ಜ್ಞಾನಮುತ್ತಮಮ್ ॥*

ಇತ್ಯಾದಿ.

ಮೇಲೆ ಹೇಳಿದ ಅನೇಕ ಉಲ್ಲೇಖಗಳಿಂದ ನಾವು ಕೆಲವು ತೀರ್ಮಾನಗಳನ್ನು ಮಾಡಬಹುದು. ಮಯಾಸುರನೂ ಒಬ್ಬ ಐತಿಹಾಸಿಕ ವ್ಯಕ್ತಿ. ಅಸುರರೆಂದರೂ, ದೈತ್ಯರೆಂದರೂ ದಾನವರೆಂದರೂ, ಅವರೂ ಮಾನವರೇ. ಬೇರೆ ಬೇರೆ ದೇಶದ ಅಥವಾ ಬುಡಕಟ್ಟಿನ ಜನರಿಗೆ ಇದ್ದ ಹೆಸರುಗಳು ಇವು. ಮಯ ಶಿಲ್ಪದಲ್ಲಿಯೂ, ಗಣಿತ ಹಾಗೂ ಜ್ಯೌತಿಷಗಳಲ್ಲಿಯೂ ಶ್ರೇಷ್ಠ ವಿದ್ವಾಂಸನೂ ವಿಜ್ಞಾನಿಯೂ ಆಗಿದ್ದವನು. ಅವನು ಅನೇಕ ದೇಶಗಳಲ್ಲಿ ಸಂಚಾರಮಾಡಿ ಅಲ್ಲಿನ ವಿಷಯವನ್ನು ಅರಿತುಕೊಂಡಿದ್ದವನು. ಲಂಕೆಯಲ್ಲಿದ್ದ ರಾವಣನಿಗೆ ತನ್ನ ಮಗಳನ್ನು ಕೊಟ್ಟು ವಿವಾಹ ಸಂಬಂಧ ಬೆಳೆಸಿದ್ದವನು. ಸೂರ್ಯಸಿದ್ಧಾಂತದ ತತ್ತ್ವಗಳನ್ನು ಜಗತ್ತಿಗೆ ಬೀರಿದ ಮಹಾ ವ್ಯಕ್ತಿ. ಮಯಮತ ಮುಂತಾದ ಗ್ರಂಥಗಳನ್ನು ಅವನೇ ರಚಿಸಿರಬಹುದು ಅಥವಾ ಅವಕ್ಕೂ ಸ್ಫೂರ್ತಿಯಾಗಿರಬಹುದು -. ಇತ್ಯಾದಿ.

ಕೇವಲ ಸಂಸ್ಕೃತ ಗ್ರಂಥಗಳಷ್ಟೇ ಅಲ್ಲ. ಅನೇಕ ಪ್ರಾಚೀನ ತಮಿಳು ಗ್ರಂಥಗಳೂ ಮಯನ ಬಗೆಗೆ ತಿಳಿಸುವುವೆಂದು ವಿದ್ವಾಂಸರ ಅಭಿಪ್ರಾಯ[6]. ಅವನು ಬಹುಭಾಷಾವಿದನೂ ಆಗಿದ್ದಿರಬೇಕು.

---

6. Mayan in Tamil Literature, Leela Ganapathy, Vastu vedic Research Foundation, Madras, 1993.

**ದೇಶ** : ಮಯನು ಯಾವ ದೇಶದವನು ? ಅವನು ಭಾರತ ದೇಶದವನೇ ಇದ್ದಿರಬೇಕು. ಏಕೆಂದರೆ ಬೇರೆದೇಶಗಳ ಇತಿಹಾಸ-ಪುರಾಣ-ಕಾವ್ಯಗಳಲ್ಲಿ ಅವನ ಉಲ್ಲೇಖ ಕಂಡುಬಂದಿಲ್ಲ. ಹಾಗೂ ಅವನು ರಚಿಸಿದುವೆಂದು ಹೇಳಲಾಗುವ ಗ್ರಂಥಗಳು ಭಾರತದ ಭಾಷೆಗಳಾದ ಸಂಸ್ಕೃತ - ತಮಿಳುಗಳಲ್ಲಿ ಮಾತ್ರ ಇವೆ - ಎಂದು ಮೊದಲ ನೋಟಕ್ಕೆ ತೋರುವ ಅಂಶ. ಆದರೆ ಸೂಕ್ಷ್ಮವಾಗಿ ಅವಲೋಕಿಸಿದಾಗ, ಅವನು ಬೇರೆ ದೇಶದಿಂದ ಇಲ್ಲಿಗೆ ಬಂದಿದ್ದಿರಬಹುದು - ಎನಿಸುತ್ತದೆ. ಏಕೆಂದರೆ ಎಲ್ಲ ಗ್ರಂಥಗಳಲ್ಲಿ ಅವನ ಸಂಚಾರಶೀಲತೆಯನ್ನು ಹೇಳಲಾಗಿದೆ. ಈ ಬಗೆಗೆ ವಿದ್ವಾಂಸರೂ ಅನೇಕ ಅಭಿಪ್ರಾಯಗಳನ್ನು ಹೊಂದಿರುವುದು ತಿಳಿದುಬರುತ್ತದೆ. ಪ್ರೊ. ವ್ಯಾನ್ ಬ್ಯೂಟಿನನ್‌ರವರು ಹೇಳಿರುವುದನ್ನು ನೋಡಿ -[೭]

"ಮಯನು ವಿದೇಶೀಯ (ಭಾರತದ ಮೂಲಪ್ರಜೆಯಲ್ಲ), ಆದರೆ ಅವನ ವಿಶ್ವಾಸಾರ್ಹತೆಯನ್ನು ಯಾರೂ ಪ್ರಶ್ನಿಸಿಲ್ಲ. ಅವನೊಬ್ಬ ಅಸುರ, ಆದರೆ ಸ್ವಭಾವತಃ ದುಷ್ಟನಲ್ಲ. ಬದಲಾಗಿ ಉದಾರ ಹಾಗೂ ಕೃತಜ್ಞ. ಯುಧಿಷ್ಠಿರನಿಗೆ ಅಸ್ಪಷ್ಟವಾಗಿ ಪರಿಚಯವಿದ್ದ ಪ್ರಾಚೀನ ದೇವತೆಗಳ ಕಥೆಗಳನ್ನವನು ಹೇಳುತ್ತಾನೆ. ಭಾರತದ ಅತಿ ಪ್ರಾಚೀನ ದೇವತೆಗಳು ಹಿಂದಿನ ಯುಗಗಳಲ್ಲಿ ಪೂಜೆಮಾಡುತ್ತಿದ್ದ ಒಂದು ಸ್ಥಳಕ್ಕೆ ಮಯನು ಭವನ ನಿರ್ಮಾಣದ ವಸ್ತುಸಾಮಗ್ರಿಯನ್ನು ತರಲು ಹೋಗುತ್ತಾನೆ. ಇವೆಲ್ಲವುಗಳಿಂದ ಸಿದ್ಧವಾಗುವ ವಿಚಾರವೆಂದರೆ ಮಯನು 'ಇರಾನ್ ದೇಶದ ವ್ಯಕ್ತಿ."

ಇದನ್ನು ಇತರ ವಿದ್ವಾಂಸರು ಎಷ್ಟರ ಮಟ್ಟಿಗೆ ಒಪ್ಪುವರೋ ತಿಳಿಯದು.

ಡಾ|| ಆರ್. ಆರ್. ಕರ್ಣಿಕ್‌ರವರು ಮಯನು ದಕ್ಷಿಣ ಅಮೇರಿಕಾ ದೇಶದವನಿರಬೇಕೆಂದು ಊಹಿಸಿದ್ದಾರೆ.[೮] ಈಗಲೂ ದಕ್ಷಿಣ ಅಮೆರಿಕೆಯಲ್ಲಿ 'ಮಾಯನ್ ನಾಗರಿಕತೆಯ ಅವಶೇಷಗಳಿರುವುದು ಸರ್ವವಿದಿತವಾದ ಅಂಶ. ಬಹಳ ಹಿಂದೆಯೇ ಸಮುದ್ರಯಾನ ವಿಜ್ಞಾನ

---

7. "Maya is an alien, but his credentials are not called into question. He is an Asura, but not inherently evil, in fact open-handed and grateful. He tells myths of the ancient Gods with whom. _Yudhisthira must have been vaguely acquainted; at least they are not outside the pale for him. He must return to a site in the remote north for his building materials, a site where ancient Indian Gods have been known to worship. if eons ago.

_- A.B. Van Buitenen, The Mahabharata, Volume 2. The University of Chicago Press. Chicago, 1975, p8.

8. Mayasura was from South American Continent, his people were very well conversant with the navigation on the high seas and made frequent journeys around the world. These facts reflect in the text of the Surya siddhanta".

Mayan and Suryasiddtranta by Dr R.R. Karnik, Vastu Vedic Research Foundation. Madras, 1993, P1.

ಹಾಗೂ ಹಡಗು ಕಟ್ಟುವ ಕಲೆ ಚೆನ್ನಾಗಿ ಬೆಳೆದಿದ್ದುದರಿಂದ ಮಯ ಹಾಗೂ ಅವನ ಅನುಯಾಯಿಗಳು ಭೂಮಂಡಲದ ಅನೇಕ ದೇಶಗಳಿಗೆ ಭೇಟಿಕೊಟ್ಟಿದ್ದರು - ಎಂದು ಅವರು ವಾದಿಸಿದ್ದಾರೆ.

ನಿಷ್ಕೃಷ್ಟವಾದ ಪ್ರಮಾಣಗಳು ದೊರೆಯುವವರೆಗೂ ಮಯಾಸುರನ ಮೂಲದೇಶ ಯಾವುದೆಂಬ ಬಗೆಗೆ ನಿರ್ಣಯವನ್ನು ಮಾಡಲು ಸಾಧ್ಯವಿಲ್ಲ. ಆದರೆ ಅವನ ಚಟುವಟಿಕೆಗಳ ಮುಖ್ಯಸ್ಥಾನ ಭರತಖಂಡವೇ ಆಗಿತ್ತೆಂಬುದರ ಬಗೆಗೆ ಸಂಶಯವಿಲ್ಲ.

**ಕಾಲ** - ಅತ್ಯಂತ ಕ್ಲಿಷ್ಟವಾದ ಸಮಸ್ಯೆ ಕಾಲವನ್ನು ಕುರಿತದ್ದು ಕವಿಗಳು ಏನೇ ವರ್ಣಿಸಿದರೂ ಮಾನವರು ಸಾವಿರಾರು ವರ್ಷ ಬದುಕಿ ಉಳಿಯುವ ವಿಷಯ ಅಸಂಭವ. ಮಯನು ಕೃತಯುಗದ ಕೊನೆಯ ಭಾಗದಲ್ಲಿದ್ದನೆಂದು ಸೂರ್ಯಸಿದ್ಧಾಂತವು ಹೇಳುತ್ತದೆ. ಅವನ ಮಗಳು ರಾವಣನನ್ನು ಮದುವೆಯಾದ ಕಾರಣ ಅವನು ತ್ರೇತಾಯುಗದಲ್ಲಿದ್ದ ರಾಮ-ರಾವಣರ ಸಮಕಾಲಿಕನೆಂಬುದು ನಿರ್ವಿವಾದ. ಅರ್ಜುನನ ದಯೆಯಿಂದ ಖಾಂಡವ ದಹನದ ಪ್ರಸಂಗದಲ್ಲಿ ಜೀವಉಳಿಸಿಕೊಂಡು ಧರ್ಮರಾಜನಿಗಾಗಿ ಸಭಾಭವನವನ್ನು ನಿರ್ಮಿಸಿದ ಕಾರಣ ಅವನು ದ್ವಾಪರಯುಗದವನೂ ಹೌದು. ಅವನು ರಚಿಸಿದನೆಂದು ಹೇಳಲಾಗುವ ಮಯಮತ ಮತ್ತು ಕೆಲವು ತಮಿಳು ಗ್ರಂಥಗಳು ಈಚಿನವೆಂದು ಭಾಷೆಯಿಂದಲೇ ಸ್ಪಷ್ಟವಾಗುವುದರಿಂದ ಅವನು ಕಲಿಯುಗದವನೂ ಆಗಿದ್ದನೆನ್ನಬೇಕಾಗುತ್ತದೆ.

ಒಬ್ಬನೇ ಮನುಷ್ಯ ಹೀಗೆ ಸಹಸ್ರಾರು ವರ್ಷಗಳವರೆಗೆ ಅದೂ ಬೇರೆ ಬೇರೆ ಯುಗಗಳಲ್ಲಿ, ಜೀವಿತನಾಗಿರುವುದು ಅಸಂಭವ. ಹಾಗಾದರೆ ಈ ಸಮಸ್ಯೆಗೆ ಉತ್ತರವೇನು ?

ಪ್ರಾಯಶಃ ಮಯನ ವಂಶಕ್ಕೆ ಸೇರಿದ ವ್ಯಕ್ತಿಗಳಿಗೆಲ್ಲಾ ಅವನ ಹೆಸರೇ ಸಂದಿರಬಹುದು. ಗೋತ್ರದ ಹೆಸರನ್ನು ಎಲ್ಲರೂ ಇಟ್ಟುಕೊಳ್ಳುವಂತೆ ಅವರೂ ಇಟ್ಟುಕೊಂಡಿದ್ದು ಅದೇ ಹೆಸರಿನಿಂದ ಪ್ರಖ್ಯಾತರಾಗಿರಬಹುದು. ವಶಿಷ್ಠ, ವಿಶ್ವಾಮಿತ್ರ ಮುಂತಾದವರು ಬೇರೆ ಬೇರೆ ರಾಜರ ಕಾಲದಲ್ಲಿ ಇದ್ದಂತೆ ಪುರಾಣೇತಿಹಾಸಗಳಲ್ಲಿ ಬರುವ ವರ್ಣನೆಗೂ ಇದೇ ಕಾರಣವಿದ್ದಿರಬಹುದು.

ಒಟ್ಟಿನಲ್ಲಿ, ಭಾರತದ ಶಿಲ್ಪ, ವಾಸ್ತುಶಿಲ್ಪ, ಗಣಿತ, ಖಗೋಲ ವಿಜ್ಞಾನ - ಇತ್ಯಾದಿಗಳಲ್ಲಿ ಹೆಚ್ಚಿನ ಸಿದ್ಧಿಯನ್ನು ಪಡೆದಿದ್ದ ಪರಂಪರೆಗೆ ಮಯ ಪ್ರತಿನಿಧಿ ಎನಿಸುತ್ತದೆ. ಸೂರ್ಯಸಿದ್ಧಾಂತದಲ್ಲಿ ಹೇಳಿರುವ ವೈಜ್ಞಾನಿಕ ವಿಚಾರಗಳಿಗೆ ಅವನೇ ಮೂಲ ಪುರುಷನಾದರೆ, ಅವನ ಕೊಡುಗೆ ಸತ್ಯವಾಗಿಯೂ ಅತ್ಯಂತ ಪ್ರಶಂಸನೀಯ.



# ‘ಸಿದ್ಧಾಂತ ಶಿಖಾಮಣಿ’ ಕೃತಿಗೆ ಸಂಬಂಧಿಸಿದಂತೆ ಕನ್ನಡದಲ್ಲಿನ ಕೆಲವು ಮಾಹಿತಿಗಳು

**ಎಸ್. ಶಿವಣ್ಣ** ಎಂ.ಎ.,

---

ರೇಣುಕಾಗಸ್ತ್ಯ ಸಂವಾದರೂಪದಲ್ಲಿರುವ ಸಂಸ್ಕೃತ ಭಾಷೆಯಲ್ಲಿನ ‘ಸಿದ್ಧಾಂತ ಶಿಖಾಮಣಿ’ (ಸಿ. ಶಿ.) ನೂರೊಂದು ಸ್ಥಲದ ನಿರೂಪಣೆಯನ್ನು ಕೇಂದ್ರವಸ್ತುವಾಗುಳ್ಳ ಕೃತಿ. ಇದರ ಮೂಲ ಆಕರ ಶೈವಾಗಮಗಳು ಹಾಗೂ ಪುರಾಣಗಳು. ಶ್ರೀ. ಟಿ. ಎನ್. ಮಲ್ಲಪ್ಪನವರು ‘ಬಸವ ಪಥ, ೧.೩.೧೯೭೯, ಪು.೨೪೯ ರಲ್ಲಿ ‘ಶಿವ ಮಹಾಪುರಾಣ’ ದಲ್ಲಿನ ಅಂತ್ಯಭಾಗವಾದ ‘ವಾಯುವೀಯ ಸಂಹಿತೆ’ ಯಲ್ಲಿನ ಕೆಲವು ಶ್ಲೋಕಗಳು ಸಿ. ಶಿ. ಯಲ್ಲಿ ಉಲ್ಲೇಖವಾಗಿರುವ ಅಂಶವನ್ನು ಲೇಖನದಲ್ಲಿ ಖಚಿತವಾಗಿ ತಿಳಿಸಿದ್ದಾರೆ.

ಸಿ. ಶ. ಗೆ. ಸಂಬಂಧಿಸಿದಂತೆ ಕ್ರಿ.ಶ. ೧೯೦೦ ರವರೆಗೆ ಕನ್ನಡ ಸಂಸ್ಕೃತ ಭಾಷೆಗಳಲ್ಲಿ ಕ್ರಮವಾಗಿ ೫ ಹಾಗೂ ೧ ಟೀ. ಕೆ. ವ್ಯಾಖ್ಯಾನಗಳು ರಚಿತವಾಗಿರುವ ಸಂಗತಿ ತಿಳಿದುಬಂದಿದ್ದು ಅವುಗಳ ವಿವರ ಇಂತಿವೆ.

## ಕನ್ನಡದ ಕೃತಿಗಳು

ಕನ್ನಡದಲ್ಲಿ ಸಿ. ಶಿ. ಗೆ ಮೊದಲ ಬಾರಿಗೆ ಟೀಕೆ ಬರೆದ ಕೀರ್ತಿ ಉಜ್ಜೈನೀಶನದು. ಕವಿಚರಿತೆಕಾರರೆಂಬ ಕೀರ್ತಿಗೆ ಪಾತ್ರರಾದ ರಾವ್‌ಬಹದ್ದೂರ್ ಆರ್. ನರಸಿಂಹಚಾರ್ಯರು

ಉಜ್ಜೈನೀಶ ಮಗ್ಗೆಯ ಮಾಯಿದೇವನ (ಸು.೧೪೩೦) 'ವಿಶೇಷಾರ್ಥ ಪ್ರಕಾಶಿಕೆ' ಗೆ ಟೀಕೆ ಬರೆದಿರುವ ಸಂಗತಿಯನ್ನು ಆಧರಿಸಿ ಈತನ ಕಾಲ ಸು. ೧೫೫೦ ಎಂದಿದ್ದಾರೆ. (ಕ.ಕ.ಚ., ದ್ವಿತೀಯ ಸಂಪುಟ, ೧೯೧೯, ಪು. ೨೫೯) ಶ್ರೀ. ಹೆಚ್. ದೇವೀರಪ್ಪನವರು ಉಜ್ಜೈನೀಶನ ಗುರುವಾಗಿದ್ದ ಗೋರಕೋಡ ಮಲ್ಲಿಕಾರ್ಜುನಾಚಾರ್ಯ ಲಕ್ಕಣ ದಂಡೇಶನ 'ಶಿವ ತತ್ತ್ವಚಿಂತಾಮಣಿ' ಯಲ್ಲಿ ಉಕ್ತನಾಗಿರುವುದನ್ನು ಪ್ರಸ್ತಾಪಿಸಿ ಉಜ್ಜೈನೀಶನ ಕಾಲ ಸು. ೧೪೬೦ ಎಂದಿದ್ದಾರೆ. (ಪ್ರ.ಕ. ೩೦.೪.೧೯೪೯, ಪು. ೧೦೫.೦೬)

ಉಜ್ಜೈನೀಶ ತನ್ನ ಗುರುವಿನ ಬಗೆಗೆ ಕೃತಿಯಲ್ಲಿ ''ಶ್ರೀಮದಭಿನ್ನ ಶಾಂತೇಶ್ವರ ಪ್ರಸಾದ ಪ್ರಾಪ್ತ ಪ್ರಸನ್ನ ಸ್ವಾಂತ ಷಟ್ಸ್ಥಲ ಬ್ರಹ್ಮಜ್ಞಾನ ಶಿವಸಿದ್ಧಾಂತ ಶಿಕ್ಷಾಚಾರ್ಯ, ಶ್ರೀಮದಭಿನ್ನ ಪ್ರಸ್ನನ ಶಾಂತೇಶ್ವರಾಪರಾವತಾರ ಶ್ರೀಮದ್ಗೋರಗೋಡ ಮಲ್ಲಿಕಾರ್ಜುನಾಚಾರ್ಯ ಪ್ರಾಪ್ತ ಪ್ರಸಾದ'' ಎಂದು ತಿಳಿಸಿದ್ದಾರೆ.

ಉಜ್ಜೈನೀಶ ಸಿ. ಶಿ. ಯಲ್ಲದೆ ಮಗ್ಗೆ ಮಾಯಿದೇವನ 'ಅನುಭವ ಸೂತ್ರ' ಹಾಗೂ ವಿಶೇರ್ಥ ಪ್ರಕಾಶಿಕೆಗಳಿಗೆ ಟೀಕೆ ಬರೆದಿದ್ದಾನೆ.

ಉಜ್ಜೈನೀಶನ ಟೀಕೆ ನೇರವಾಗಿ ಶಿ.ಶಿವಾಚಾರ್ಯನ ಕೃತಿಯ ೫ ನೆಯ ಪರಿಚ್ಛೇದವಿಂದ ಆರಂಭವಾಗಿದೆ.

**|| ಶ್ರೀ ರೇಣುಕಾಚಾರ್ಯ ವಾಚ||**

**ಅಥಾಗಸ್ತ್ಯ ವಚಃಶ್ರುತ್ವ...**

**||ಟೀಕೆ||** ಅಥ - ಅನಂತರದಲ್ಲಿ, ಗಣನಾಯಕ - ಗಣೇಶ್ವರ ನಾಹಂಥಾ, ರೇಣುಕ - ರೇಣುಕ ಸಿದ್ದೇಶ್ವರನು, ಕ್ಷಣಂ - ಒಂದು ಕ್ಷಣವು, ಸಮಾಹಿತ - ಸಮಾಧಾನವುಳಾತನಾಗಿ, ಸಾಂಬಂ, ಪಾರ್ವತಿಯರೊಡನೆ ಸಮಾಹಿತವಾದ, ಮಹಾದೇವಂ - ಶಿವನನು, ಧ್ಯಾತ್ತ್ವ - ಧ್ಯಾನವ ಮಾಡಿ,

**ಆಹ - ನಿರೂಪಿಸಿದನು** || ೧೪ || ಕೆ.೨೩೪, ಗರಿ - ೧, ಕ.ಅ.ಕೇಂ.ಬೆಂ.ವಿ.ವಿ.

ಉಜ್ಜೈನೀಶನ ಟೀಕಾಕೃತಿಯ ಸಮಗ್ರ ಓಲೆ. ಪ್ರತಿಗಳು, ಮೈ.ವಿ.ವಿ. 'ಕನ್ನಡ ಅಧ್ಯಯನ ಸಂಸ್ಥೆ', ಬೆ. ವಿ. ವಿ. ಬೆಂಗಳೂರು ಅಧ್ಯಯನ 'ಕನ್ನಡ ಅಧ್ಯಯನ ಕೇಂದ್ರ' ಹಾಗೂ ಚಿತ್ರ ದುರ್ಗ ದ. 'ಬೃಹನ್ಮಠ : ಸಂಗ್ರಹಗಳಲ್ಲಿವೆ.

ಚಿತ್ರದುರ್ಗ ಮಠದ ಸಂಗ್ರಹದಲ್ಲಿನ ಓಲೆ ಕೃತಿ ಕ್ರಮಾಂಕ ೪೯೭/೧ ರಲ್ಲಿನ ಅಂತ್ಯ ಇಂತಿದೆ. 'ಕ್ರೋಧಿ ಸಂವತ್ಸರದ ಮಾಘಮಾಸದ ಕೃಷ್ಣ ಪಕ್ಷದ ಪಂಚಮಿಯ ಬುಧವಾರದಲ್ಲಿಯು ಪಂಚಾಕ್ಷರ ದೇವರು 'ಸಿದ್ಧಾಂತ ಶಿಖಾಮಣಿ ಯಂ ಬರೆದು ಪರಿಸಮಾಪ್ತಿಯನೆಯ್ದಿದರು.'

**ಸೋಸಲೆ ರೇವಣಾಚಾರ್ಯ** : ಈತನ ಕಾಲ ಕ್ರಿ.ಶ. ೧೬೨೩. ಚಿಕ್ಕನಾಯಕನಪುರದ ಮುದಿನಾಯಕನ ಸಮಕಾಲೀನ. ಪಿ.ಶಿ. ಯ. ಆರಂಭದಲ್ಲಿ ತನ್ನ ವಂಶದ ಬಗೆಗೆ ತಿಳಿಸಿದ್ದಾನೆ. ತನ್ನನ್ನು "ಶ್ರೀಮದ್ವೇದವೇದ ಶಿವಶೈವಾಗಮ ಪುಣ್ಯಪುರಾಣ ಪ್ರಭೃತಿ ಪ್ರಭೂತ ಪ್ರಥಿತ ಪ್ರಮಥ ಸಂಗೀತಗೀತ ವಿದ್ಯಾನವಿದ್ಯ ಶ್ರೀವೀರಶೈವ ಷಟ್ಸ್ಥಲ ಶಿವಯೋಗ ಶಿವಾದ್ವೈತ ಸತ್ವದ ಪ್ರತಿಷ್ಠಾಪನಾಚಾರ್ಯವರ್ಯ" ಎಂದು ವಿಶೇಷಿಸಿಕೊಂಡಿದ್ದಾನೆ.

ಸೋಸಲೆ ರೇವಣಾಚಾರ್ಯ 'ಸಿದ್ಧಾರ್ಥ ಸಂಬೋಧಿನಿ' ಹೆಸರಿನಲ್ಲಿ ೨೧ ಪರಿಚ್ಛೇದಗಳಿಗೂ ಟೀಕೆ ಬರೆದಿದ್ದಾನೆ. ಈ ಟೀಕೆಯನ್ನು ಭೋಗಮಲ್ಲೇಶನ ಶಿಷ್ಯನಾದ ಸಿದ್ಧವೃಷೇಶ್ವರನ ಆಜ್ಞಾನುಸಾರ ರಚಿಸಿದ್ದಾನೆ.

ಸೋಸಲೆ ರೇವಣಾಚಾರ್ಯ ಉಭಯ ಭಾಷಾ ನಿಷ್ಣಾತ. ಈತನ ಸಂಸ್ಕೃತದಲ್ಲಿನ 'ರೇಣುಕೀಯ' ಕೃತಿ ಅಲಭ್ಯ. ಕನ್ನಡದಲ್ಲಿ 'ಶಿವಾಧಿಕ್ಯ ಶಿಖಾಮಣಿ', 'ಶ್ರೀರುದ್ರ', 'ಮಹಿಮ್ನ ಸ್ತವ', 'ಶಾರೀರ ಪ್ರಕಾಶಿಕೆ,' 'ಸ್ವಸ್ವರೂಪ ಪ್ರಕಾಶಿಕೆ' ಇ.ಹ ಪ್ರಕಾಶಿಕೆಗಳು ಹಾಗೂ ಪಾಲ್ಕುರಿಕೆ ಸೋಮನಾಥನ (ಕ್ರಿ.ಶ. ೧೩೦೫) 'ಅಷ್ಟೋತ್ತರ ಮಾಲಾ ಗದ್ಯ', 'ಅಕ್ಷರಾಂಕ ಗದ್ಯ' ಇ.ಹ ಗದ್ಯಗಳಿಗೆ ಮತ್ತು ಕನ್ನಡದಲ್ಲಿನ ಪಾ. ಸೋಮನಾಥನ 'ಶರಣ ಬಸವರಗಳೆ' 'ಸದ್ಗುರುರಗಳೆ' ಗಳಿಗೆ ಟೀಕೆಬರೆದಿದ್ದಾನೆ.

ಈತನ ಟೀಕೆಯ ಆದಿ ಹೀಗಿದೆ.

ಅತಃ ಕಲಿಕಾಲ ಪ್ರವೇಶಾನಂತರದಲ್ಲಿ ರೇಣುಕ ಗಣೇಶ್ವರನೆಂದು ಪ್ರಸಿದ್ಧವಾದ ರೇವಣಾಸಿದ್ಧೇಶ್ವರನು ಕುಂಭಸಂಭವನಿಗೆ ಬೋಧಿಸಿದ ವೀರಶೈವ ಶಾಸ್ತ್ರದ ಬೋಧಾನಂತರದಲ್ಲಿ ಆ ರೇವಣಾಸಿದ್ಧೇಶ್ವರನ ದೃಷ್ಟಿಗರ್ಭ ಸಂಭವನಾದ ಸಿದ್ಧರಾಮೇಶ್ವರನ ಸಾಂಪ್ರದಾಯ ಪ್ರಸಿದ್ಧವಾದ ಸಕಲ ನಿಗಮಾಗಮ ಪಾರಂಗತನಾದ ಶಿವಯೋಗೀಶ್ವರ ನಂದಾಚಾರ್ಯನು ಆ ರೇಣುಕಾಗಸ್ತ್ಯ ಸಂವಾದವನು ತಂನ ಶಿಷ್ಯರುಗಳಿಗೆ ಬೋಧಿಸಲೋಸುಗಲಾಗಿ ಸಪ್ತ ಶ್ಲೋಕಂಗಳಿಂದೆ ಸಮಸ್ತ ಸಮಯ ಶಾಸ್ತ್ರಗಳಿಗುತ್ತರವಾದ ನಿಗಮಾಗಮ ವಾಕ್ಯವನು ಗರ್ಭೀಕರಿಸಿ ಇಷ್ಟದೇವತಾ ನಮಸ್ಕಾರಮಂ ಮಾಡುತಿರ್ದಪಂ'. (ಕೆ. ೧೮೯. ೧೧-೧, ಕ.ಅಂ.ಕೇಂ).

ಸೋಸಲೆ ರೇವಣಾರ್ಯನ ಸಿ.ಶಿ.ಯ ಓಲೆ ಪ್ರತಿಗಳು ಕ. ಅ.ಸಂ. (ಮೈ.ವಿ.ವಿ.), ಕ.ಅ.ಕೇಂ. (ಬೆಂ.ವಿ.ವಿ), ಗದುಗಿನ ತೋಂಟದಾರ್ಯಮಠ, ಮತ್ತು ಸಿದ್ಧಗಂಗೆಯ ಸಿದ್ಧಗಂಗೆಯಮಠಗಳಲ್ಲಿವೆ.

ಡಾ|| ಫ.ಗು.ಹಳಕಟ್ಟಿಯವರು ವಿಜಾಪುರದಿಂದ ಮಾಸಪತ್ರಿಕೆಯಾಗಿ ಪ್ರಕಟಿಸುತ್ತಿದ್ದ 'ಶಿವಾನುಭವ' ಸಂಪುಟ ೧೩೩, ೧೯೩೮, ಪುಟ ೧೧೫ ರಲ್ಲಿ ಕೆರೆಗೋಡು ನಂಜಣಾರ್ಯ ಬರೆವ

'ಸಿದ್ಧಾಂತ ಶಿಖಾಮಣಿ ವ್ಯಾಖ್ಯಾನ' ಕೃತಿಯ ಉಲ್ಲೇಖವಿದೆ. ಈ ಟೀಕಾಕೃತಿಯ ಬಗೆಗೆ ಮತ್ತಾವ ಸಂಗತಿಗಳೂ ಬೆಳಕಿಗೆ ಬಂದಿಲ್ಲ.

'ಸುಪ್ರಬೋಧಿನಿ' ಹೆಸರಿನ ಟೀಕೆಯೊಂದು ಅಜ್ಞಾತ ಕೃತಿಕಾರನ ಹೆಸರಿನಲ್ಲಿ ಉಪಲಬ್ಧವಿದೆ. ಇದರ ಎರಡು ಓಲೆ ಪ್ರತಿಗಳು ಲಭಿಸಿದ್ದು ಅವು ಕ. ಅ. ಕೇಂ. (ಬೆಂ.ವಿ.ವಿ.) ಹಾಗೂ ಮೈಸೂರಿನ ಮಹಾರಾಜ ಸಂಸ್ಕೃತ ಪಾಠಶಾಲೆಗಳಲ್ಲಿವೆ. ಮೈಸೂರಿನ ಕ್ರಮಾಂಕ ೧೩೬೨ರ ಅಂತ್ಯದ ಪುಷ್ಪಿಕೆ ಇಂತಿದೆ.

'ಕಾಳುದ್ರಿ ಸಂವತ್ಸರದ ಆಷಾಢ ಶುದ್ಧ ೧ ಪಾಡ್ಯ ಸೋಮವಾರದಲ್ಲು ಆಡಿಕೆ ಪರಗಾಣೆಯ ಮೈಲಾರದ ಮಠದಲ್ಲಿ ಪರಿಸಮಾಪ್ತಿಯಾದ ಸಿದ್ಧಾಂತ ಶಿಖಾಮಣಿ' ಎಂದಿದೆ.

ಈ ಕೃತಿಯ ಆದಿ ಹೀಗಿದೆ.

''ಅಥಾ - ಅಗಸ್ತ್ಯ ಮುನೀಶ್ವರನ ಪ್ರಶ್ನಾನಂತರದಲ್ಲಿ ಗಣನಾಯಕ : ಗಣೇಶ್ವರನಾಗಿದ್ದಂಥ, ರೇಣುಕ - ರೇಣುಕನು, ಅಲಸ್ತ್ಯವ ಚ - ಅಗಸ್ತ್ಯ ಮುನೀಶ್ವರನ ಪ್ರಶ್ನೆಯನು, ಶ್ರುತ್ವಾ - ಕೇಳಿ, ಸಾಂಬ - ಉಮಾಸಹಿತನಾದ, ಮಹಾದೇವಂ - ಪರಮೇಶ್ವರನು, ಕ್ಷಣಂ - ಒಂದುಕ್ಷಣಮಾತ್ರದ ಪರಿಯಂತನಾಗಿ, ಧ್ಯಾತ್ವಾ - ಧ್ಯಾನವ ಮಾಡಿ, ಸಮಾಹಿತ - ಏಕಾಗ್ರಚಿತ್ತನಾಗಿ, ಆಹ - ಉತ್ತರಹೇಳುತಿದ್ದಾನು. ಬ್ರೂಂವ್ಯಕ್ತ್ಯಾಯಾಂ ವಾಚಿತಿ ಧಾತುಃ - ಅತಿ ರಹಸ್ಯವಾದ ವೀರಶೈವ ಸಿದ್ಧಾಂತ ಗ್ರಂಥವನ್ನು ಕೇಳಲೋಸ್ಕರ ಅಗಸ್ತ್ಯ ಮುನೀಶ್ವರನ ಚಿತ್ತಕ್ಕೆ ಸಂತೋಷವನೆಯ್ದಿಸುತಿರ್ದಪಂ.''

ಈ ಮೇಲಿನ ಟೀಕಾಕೃತಿಗಳಲ್ಲದೆ ವಚನ ವಾಙ್ಮಯ ಭಂಡಾರ (ಧಾರವಾಡ)ದಲ್ಲಿ ೧೦ ಸಟೀಕಾ ಓಲೆ ಪ್ರತಿಗಳಿವೆ. ಅವುಗಳ ಟೀಕಾಕಾರರ ಬಗೆಗೆ ಪರಿಶೀಲಿಸಬೇಕಾಗಿದೆ. ಅವುಗಳ ಕ್ರಮಾಂಕವಿಂತಿದೆ. ೯೪, ೧೯೦, ೭೦೨, ೧೨೧೧, ೧೫೦೭, ೧೫೬೦, ೨೩೪೧, ೨೩೭೩, ೨೩೭೭, ೨೪೬೮.

ಕನ್ನಡದಲ್ಲಿನ ಈ ಮುಂದಿನ ಕೃತಿಗಳು ಸಿ.ಶಿ.ಯನ್ನು ಹೆಸರಿಸಿವೆ. ೧೫೯೩ : ಮಲ್ಲಿಕಾರ್ಜುನನ 'ಇಮ್ಮಡಿ ಚಿಕ್ಕ ಭೂಪಾಲನ ಸಾಂಗತ್ಯ' ೧೬೨೫ : ಶಿವಸಿದ್ಧರಾಮನ 'ವೀರಶೈವ ಶಿಖಾರತ್ನ' ೧೭೨೦: ಇಮ್ಮಡಿ ಗುರುಸಿದ್ಧರ 'ಹಾಲಾಸ್ಯ ಪುರಾಣ' ೧೭೩೮ (ರನಂತರದ) : ಚೆನ್ನವೀರನ 'ಮುದ್ವೀರತಾರಾವಳಿ'.

ಈ ಕೆಳಕಂಡ ವಚನ ಸಂಕಲನ ಕೃತಿಗಳು ಸಿ.ಶಿ.ಯ ಶ್ಲೋಕಗಳನ್ನು ಉಲ್ಲೇಖಿಸಿವೆ.

೧೫೫೪ : ಪ್ರಭುದೇಶಿಕನ 'ಮೋಕ್ಷದರ್ಶನ ಮಹಾಸಂಗ್ರಹ'

೧೭೦೦ : ಶಾಂತ ದೇವನ 'ಷಟ್ಪ್ರಕಾರ ಸಂಗ್ರಹ'

೧೭೫೦ : ಜಾಳಿಗೆಕಂತೆ ಸಿದ್ಧಲಿಂಗ ಶಿವಯೋಗಿಯ 'ಶಿವಯೋಗ ಚಿಂತಾಮಣಿ'

ಇಪ್ಪತ್ತನೆಯ ಶತಮಾನದಲ್ಲಿ ಸಿ. ಶಿ. ಗೆ. ಸಂಬಂಧಿಸಿದಂತೆ ಈ ಕೆಳಕಂಡ ಕೃತಿಗಳು ಪ್ರಕಟವಾಗಿವೆ.

'ಕರ್ನಾಟಕ ವೀರ ಶೈವ ಸಿದ್ಧಂತವು' - ಎಸ್. ಶಂಕರರಾವ್ ಮತ್ತು ಮಠದ ಹಳ್ಳಿಯ್ಯ. (?) (ಕನ್ನಡ ಗ್ರಂಥ ಸೂಚಿ, ದ್ವಿತೀಯ ಸಂಪುಟ, ಕ್ರಮಾಂಕ ೩೧೬೧)

೧೯೦೨ : ವೀರಶೈವ ಸಿದ್ಧಾಂತ ಶಿಖಾಮಣಿ ಎಂಬೀ ಗ್ರಂಥವು ಬಸವಾರ್ಯ ಹಳ್ಳದ ರಾಸ್ತಾಪುರ ಮಠ (ಕ. ಗ್ರಂ.ಸೂ. II ೫೧೦೭)

೧೯೦೪ : 'ಏಕೋತ್ತರ ಶತಸ್ಥಲ ಸಾರ ಸಂಗ್ರಹ (ಗ) ಬಿ. ಚಂದ್ರಶೇಖರ ಶಾಸ್ತ್ರಿ.

೧೯೧೪ : 'ವೀರಶೈವ ಧರ್ಮ ನಿರ್ಣಯ ಸಿದ್ಧಾಂತ ಶಿಖಾಮಣಿ', 'ತಾತ್ಪರ್ಯ ದೀಪಿಕೆ' ಟಿಪ್ಪಣಿ ಸಹಿತ. ಎಸ್. ಆರ್. ಕರಿಬಸವ ಶಾಸ್ತ್ರಿ. (ಮರಿತೋಂಟದಾರ್ಯರ ಸಂಸ್ಕೃತ ಟೀಕಾಧಾರಿತ)

ಇದೇ ಕೃತಿಯನ್ನು ೧೯೯೨ ರಲ್ಲಿ ಪ್ರೊ.ಸಂ.ಶಿ. ಭೂಸನೂರ ಮಠ ಹಾಗೂ ಪ್ರೊ. ಬಿ.ಎಸ್. ಘಿವಾರಿಯವರು ಸಂಪಾದಿಸಿ ಶಿವಯೋಗ ಮಂದಿರದ ಮೂಲಕ ಪ್ರಕಟಿಸಿದ್ದಾರೆ.

೧೯೩೨ : 'ಷಟ್‌ಸ್ಥಲ ಚಂದ್ರಿಕೆ' ಎಂಬ ವೀರಶೈವ ಆಚಾರ ವಿಚಾರಗಳು' (ಪೂರ್ವ ಭಾಗ)

ಸಿ. ಸಂಗಪ್ಪ [(ಸಂ) 'ವೀರಶೈವ' ಮಾಸಪತ್ರಿಕೆ, ಬೆಂಗಳೂರು] ಇವರಲ್ಲಿ ಭಕ್ತ, ಮಾಹೇಶ್ವರ, ಪ್ರಾಣಲಿಂಗಿ ಸ್ಥಲಗಳ ವಿವರಗಳಿವೆ.

೧೯೩೬ : ಸಿದ್ಧಾಂತ ಶಿಖಾಮಣಿ ('ಭಾವ ಪ್ರಕಾಶಿಕಾ ವ್ಯಾಖ್ಯಾನ' ಸಹಿತ)

ಪಂ.ಕಾಶೀನಾಥ ಶಾಸ್ತ್ರಿಗಳು, ಮೈಸೂರು. ಈ ಕೃತಿಯ ನಾಲ್ಕನೆಯ ಮುದ್ರಣ ೧೯೬೪ರಲ್ಲಿ ಆಗಿದೆ. ಇದರ ಮೂಲವನ್ನು ಶಾಸ್ತ್ರಿಗಳು ಕೈಬಿಡಾಡಿಸಿರುವ ಸಂಗತಿಯನ್ನು 'ಸದ್ಧರ್ಮದೀಪಿಕೆ' ಯ ಸಂಪಾದಕರಾಗಿದ್ದ ಶ್ರೀ ಚೆನ್ನ ಮಲ್ಲಿಕಾರ್ಜುನ ಮಾಸ್ತರರು ಆಧಾರ ಪೂರ್ವಕವಾಗಿ ಖಚಿತ ಪಡಿಸಿದ್ದಾರೆ.

೧೯೪೯ ( ?) : ಶ್ರೀ ರೇಣುಕಗೀತಾ (ಸ್ವರ ಪ್ರಸ್ತಾರ) ಪಂ. ಜಗದೀಶ ಶಾಸ್ತ್ರಿಗಳು ಸಾಲ್ವಾರ. ಇವರು ಸಿ. ಶಿ.ಯ ೧೪೩ ಶ್ಲೋಕಗಳಿಗೆ ಸ್ವರ ಪ್ರಸ್ತಾರ ಸಂಯೋಜಿಸಿದ್ದಾರೆ.

೧೯೫೦ : 'ಮಣಿ ಮುಕುರ' ಜ.ಚ.ನಿ ರಗಳೆ ರೂಪದಲ್ಲಿದೆ.

೧೯೫೧ : 'ಮಣಿಕಾಂತಿ' (ಜ.ಚ.ನಿ.) ಗದ್ಯದಲ್ಲಿದೆ.

೧೯೫೯-೬೧ : 'ಸಿದ್ಧಾಂತ ಶಿಖಾಮಣಿ' 'ತತ್ತ್ವ ಪ್ರದೀಪಿಕೆ' ಹೆಸರಿನ ಕನ್ನಡ ಅರ್ಥಸಹಿತ ಎಂ.ಎಲ್. ಸಾಗಣ್ಣ (ಸಂ. 'ಆತ್ಮವಿಚಾರ' ಮಾಸಪತ್ರಿಕೆ) ಮರಿತೋಂಟದಾರ್ಯನ ಕೃತಿಯ ಆಧಾರಿತ.

೧೯೬೩ ಮಣಿ ವಚನ (ಜ.ಚ.ನಿ.) ವಚನಗಳಲ್ಲಿದೆ.

೧೯೬೫ : ರೇಣುಕ ಗೀತ ಸಾರ ಸಂಗ್ರಹ ಪಂ. ಮಹಾದೇವಯ್ಯ ಪಂ. ಸಿದ್ಧೇಶ್ವರಯ್ಯ ಈ ಕೃತಿ ೧೯೮೧ರಲ್ಲಿ ಪುನರ್ಮುದ್ರಿತವಾಗಿದೆ.

೧೯೬೬ : 'ಸಿದ್ಧಾಂತ ಶಿಖಾಮಣಿ' (ವ್ಯಾಖ್ಯಾನ ಸಹಿತ) ಮಲ್ಲಿಕಾರ್ಜುನ ಸ್ವಾಮಿ, ಬಿಜಾಪುರ ೧೯೭೯ ರಲ್ಲಿ ಎರಡನೆಯ ಮುದ್ರಣವಾಗಿದೆ.

೧೯೮೭ : ರೇಣುಕ ಗೀತೆ, (ಜ.ಚ.ನಿ.) ಬೆಂಗಳೂರು ಸಿ.ಶಿ.ಗೆ. ಸಂಬಂಧಿಸಿದಂತೆ ಕೆಲವು ವಿಮರ್ಶಾ ಕೃತಿಗಳಿದ್ದು ಅವುಗಳನ್ನು ಮುಂದೆ ಹೆಸರಿಸಿದೆ. ೧೯೬೬ : ಸಿದ್ಧಾಂತ ಶಿಖಾಮಣಿ ಸತ್ಯಾರ್ಥ ಪ್ರಕಾಶ, ವಾಗೀಶ ಪಂಡಿತಾರಾಧ್ಯ, ಬಳ್ಳಾರಿ.

೧೯೬೦-೭೦ : 'ಜೀವನ ಸಿದ್ಧಾಂತ'ದ ಆರು ಸಂಪುಟಗಳು. ಜ.ಚ.ನಿ.

೧೯೭೨ ( ? ) : ಸಿದ್ಧಾಂತ ಶಿಖಾಮಣಿ - ಒಂದು ಸಮೀಕ್ಷೆ. ಷಡಕ್ಷರಯ್ಯ ಪಲ್ಲಾಪುರ ಮಠ.

೧೯೮೬-೧೯೯೦ : ಸಿದ್ಧಾಂತ ಶಿಖಾಮಣಿ ಪ್ರವಚನ ಪ್ರಭೆ - ಚಂದ್ರಶೇಖರ ಶಿವಾಚಾರ್ಯ (ಕಿರಣ (೧-೭) .

೧೯೮೯ : ರೇಣುಕ ಗೀತೆಯ ಕಾವ್ಯ ಶಾಸ್ತ್ರ ಮೀಮಾಂಸೆ - ಜ.ಚ.ನಿ.

೧೯೮೬ : ಸಿದ್ಧಾಂತ ಶಿಖಾಮಣಿ (ಮೂರು ಉಪನ್ಯಾಸಗಳು) ಡಾ|| ಎಂ. ಶಿವಕುಮಾರಸ್ವಾಮಿ, ಧಾರವಾಡ.

೧೯೯೩ : ಶ್ರೀ ಸಿದ್ಧಾಂತ ಶಿಖಾಮಣಿ (ರೇಣುಕ ಗೀತೆ), ಟಿ. ಬಿ. ಬಸವರಾಜಯ್ಯ, ಬೆಂಗಳೂರು.

ಈ ಪ್ರಬಂಧವನ್ನು ತುಮಕೂರಿನಲ್ಲಿ ನಡೆದ ರಂಭಾಪುರಿ ಜಗದ್ಗುರುಗಳ ನವರಾತ್ರಿ ದರ್ಬಾರಿನ ಸಂದರ್ಭದಲ್ಲಿ ಅವರ ಸಮ್ಮುಖದಲ್ಲಿ ಓದಲಾಗಿದೆ.

■

# ತೌಲನಿಕ ಭಾಷೆಗಳ ಪುನರಚನಾತ್ಮಕ ತತ್ತ್ವಗಳು :

ಡಾ|| ಎ. ಶಿವಾನಂದ

---

ಪ್ರಪಂಚದ ಅಸಂಖ್ಯಾತ ಭಾಷೆಗಳು ಅವು ಐತಿಹಾಸಿಕ ಮೂಲದ ಹಾಗೂ ಗ್ರಾಂಥಿಕ ಬೆಳವಣಿಗೆ ಹೊಂದಿರದ ಭಾಷೆಗಳೇ ಇರಲಿ, ಅಥವಾ ಯಾವುದೇ ಗ್ರಂಥಸ್ಥ ಸಾಮಗ್ರಿಯನ್ನು ಹೊಂದಿರದ ವ್ಯವಹಾರಿಕ ರೂಪದ ಭಾಷೆಗಳೇ ಇರಲಿ. ಇವಕ್ಕೆಲ್ಲ ಅವುಗಳದೇ ಆದ ಒಂದು ಪರಿವಾರವಿದ್ದು ಈ ಪರಿವಾರಕ್ಕೆಲ್ಲ ಒಂದೇ ಮೂಲಭಾಷೆ ಅಥವ ಪ್ರಾದಿಯ ಭಾಷೆ (Proto language) ಒಂದಿದ್ದು ಆ ಮೂಲಭಾಷೆಯಿಂದ ಕಾಲಕ್ರಮದಲ್ಲಿ ಶಾಖೆ-ಉಪಶಾಖೆಗಳಾಗಿ, ಒಂದೊಂದು ಉಪಶಾಖೆಗಳೂ ಕೂಡ ಮುಂದೆ ಭಿನ್ನಗೊಂಡು ಸ್ವತಂತ್ರಭಾಷೆಗಳಾಗಿ ಮಾರ್ಪಟ್ಟಿರುವುದನ್ನು ಕಾಣುತ್ತೇವೆ. ಇಡೀ ವಿಶ್ವದಲ್ಲಿ ಪ್ರಮುಖವಾಗಿರುವ ಇಂತಹ 'ಪಾರಿವಾರಿಕ ಭಾಷೆ'ಗಳನ್ನು ಅವುಗಳ ಸರಾಸರಿ ಜನಸಂಖ್ಯೆ ಆಧಾರದಿಂದ ಪಕ್ಕದ ಪುಟದಲ್ಲಿನ




೧. ಇಂಡೋ-ಯೂರೋಪಿಯನ್
೨. ಸಿನೋ-ಟಿಬೇಟಿಯನ್
೩. ಯುರಲ್ - ಆಲ್ಟಿಕ್
೪. ಜಪಾನೀಜ್ - ಕೋರಿಯನ್
೫. ಆಫ್ರಿಕನ್ - ನಿಗ್ರೋ
೬. ಸೆಮಿಟೋ - ಹೆಮಿಟಿಕ್
೭. ದ್ರಾವಿಡಿಯನ್
೮. ಮಲಯೋ - ಪೋಲಿನೇಶಿಯನ್
೯. ಅಮೇರಿಕನ್ - ಇಂಡಿಯನ್
೧೦ - ಇತರ (ಅಂದಮಾನೀಜ್ ಬಾಸ್ಕಮುಂ)

ವರ್ತುಗಳ ಆಕೃತಿಯಲ್ಲಿ ಕಾಣಿಸಬಹುದಾಗಿದೆ. ಭಾಷೆಗಳ ಒಂದೊಂದು ಕುಟುಂಬವನ್ನು ಪುನಾರಚನೆ ನೆರವಾಗುವ ಸಾಮಾನ್ಯ ತತ್ತ್ವಗಳನ್ನು ೧೯ನೆಯ ಶತಮಾನದಿಂದ ಬೆಳೆದುಬಂದ 'ತೌಲನಿಕ ಭಾಷಾವಿಜ್ಞಾನವು ಪ್ರತಿಪಾದಿಸುತ್ತದೆ. ಗ್ಲೀಸನ್, ಇದರ ಬಗೆಗೆ ವಿವರಿಸಿರುವುದು ಇಂತಿದೆ.

Comperative linguistics dealing with the relationship between language of common origin.[೧] ಈ ಬಗೆಗಿನ ವಿಚಾರ ಪ್ರಣಾಲಿಗೆ ನಾಂದಿಯಾದುದು ಸರ್ ವಿಲಿಯಂ ಜೋನ್ಸ್‌ನ ಪ್ರಸಿದ್ಧ ಹೇಳಿಕೆ-ಈಸ್ಟ್ ಇಂಡಿಯಾ ಪ್ರಭುತ್ವದ ಕಾಲದಲ್ಲಿ ಕಲ್ಕತ್ತದ ಮುಖ್ಯ ನ್ಯಾಯಾಧೀಶನಾಗಿದ್ದ ಜೋನ್ಸ್, ತನ್ನ ಆಳವಾದ ಭಾಷಾಧ್ಯಯನದಿಂದ ೧೭೮೬ರಲ್ಲಿ ನೀಡಿದ ಈ ಹೇಳಿಕೆ ತೌಲನಿಕ ಭಾಷಾವಿದ್ವಾಂಸರಿಗೆ ಒಂದು ಹೊಸ ಮಾರ್ಗವನ್ನೇ ಕಲ್ಪಿಸಿತು.

The Sanscrit language whatever be its antiquity it is of a wonderful structure more perfect than the Greek more copious than the Latin'

ಸಂಸ್ಕೃತ ಭಾಷೆಯ ಮಹತ್ವವೊಂದನ್ನಲ್ಲದೆ ಮೇಲಿನ ಈ ಹೇಳಿಕೆ ಗ್ರೀಕ್-ಲ್ಯಾಟಿನ್, ಸಂಸ್ಕೃತ-ಕೆಲ್ಟಿಕ್ ಮತ್ತು ಜರ್ಮನಿಕ್ ಭಾಷೆಗಳಿಗೆಲ್ಲಕ್ಕೂ ಒಂದೇ ವಂಶಸಂಬಂಧವಿದ್ದು ಇವೆಲ್ಲವೂ ಅದರಿಂದಲೇ ಬೇಕಾದುವೆಂಬುದಕ್ಕೆ ಸಮರ್ಥನೆಯನ್ನೊದಗಿಸಿತು. ಇದನ್ನೇ ನಾವಿಂದು 'ಇಂಡೋ-ಯುರೋಪಿಯನ್'ಎನ್ನುವದು. ಭಾರತೀಯ ಭಾಷೆಗಳ ಕೌಟುಂಬಿಕ ಸಂಬಂಧವನ್ನು ನಾಲ್ಕು ಜಾನಾಂಗಿಕ ಆಧಾರದ ಮೇಲೆ ಗುರುತಿಸಲಾಗುತ್ತದೆ. 'ಇಂಡೋ-ಆರ್ಯನ್, ದ್ರಾವಿಡ, ಆಸ್ಟ್ರಿಕ್- ಮುಂಡ ಹಾಗೂ ಸಿನೋ-ಟಿಬೇಟಿಯನ್ ಉತ್ತರದ ಬಹುಮಟ್ಟಿನ ಭಾಷೆಗಳಿಗೆ ಆರ್ಯ ಭಾಷಾಕುಟುಂಬ ಎಂದರೆ ಸಂಸ್ಕೃತ ಮೂಲವಾಗಿದೆ. ದಕ್ಷಿಣ ಭಾಷೆಗಳು ಅಲ್ಲದೆ ದಕ್ಷಿಣ-ಮಧ್ಯ-ಮಧ್ಯ, ಪೂರ್ವೋತ್ತರ ಹಾಗೂ ವಾಯುವ್ಯ ಈ ದಿಶೆಗಳಲ್ಲಿ ಹಂಚಿಹೋಗುವ ಆರ್ಯೇತರ ಭಾಷೆಗಳ ಕುಟುಂಬ 'ದ್ರಾವಿಡ' ನೆಲೆಗಟ್ಟಿನದಾಗಿದೆ. ಸಂತಾಲ, ಕೋಲ್, ಭಿಲ್, ಮುಂಡ ಈ ಭಾಷೆಗಳು ಆಸ್ಟ್ರಿಕ್ ವರ್ಗದ ಭಾಷೆಗಳಾಗಿವೆ.[೨]

ಆರಂಭದಲ್ಲಿ ಒಂದೇ ಆಗಿದ್ದ ಭಾಷೆ ಭಿನ್ನವಾಗುವುದಕ್ಕೆ ಆ ಭಾಷೆಯನ್ನಾಡುವ ಜನಾಂಗವು ಪ್ರಾಕೃತಿಕವಾದ ಗುಡ್ಡ, ಬೆಟ್ಟಗಳಿಂದ ಸಂಬಂಧ ಕಡಿದುಕೊಳ್ಳುವದು, ಈ ಭೌಗೋಳಿಕವಲ್ಲದೆ ಅನ್ಯಆಕ್ರಮಣ, ಸ್ಥಾನಾಂತರೀಕರಣ, ಇವೇ ಮುಂತಾದ ರಾಜಕೀಯ, ಸಮಾಜಿಕ, ಸಾಂಸ್ಕೃತಿಕ ಪರಿಸ್ಥಿತಿಗಳು ಇವನ್ನು ಒಂದೊಂದು ದೇಶ, ಕಾಲ, ಪರಿಸರ, ಪ್ರಭುವಾದಿಗಳಿಂದ ವಿಂಗಡಿಸಲು ಕಾರಣವಾಗುತ್ತವೆ. ಹೀಗೆ ಪುನರ್-ವಿಂಗಡಣೆಗೊಂಡ ಭಾಷೆಗಳನ್ನು ಅವುಗಳ ರಚನೆಯ

---

೧. Gleason H.A. An Introduction to Descriptive linguistics ತೌಲನಿಕ ಭಾಷಾ ವಿಧಾನಗಳ ವಿವರಗಳಿಗೆ ಇತರೆಡೆ: Hockett (Chap.57) Sturtvent chap.XV

೨.ಭಾರತದ ಭಾಷೆಗಳ ಹಂಚಿಕೆ- ವರ್ಗೀಕರಣಗಳಿಗೆ; Distribution of languages in Indian states and union Territories-ciil mysore (1985).

ಆಧಾರವಲ್ಲಿ (Structure of language) ಪ್ರಸರ್ ಸಂಘಟಿಸಿ ಅವೆಲ್ಲಕ್ಕೂ ಮೂಲವಾದ ಭಾಷೆಯೊಂದನ್ನು ಉಪಲಬ್ಧ ಸಾಮಗ್ರಿಗಳಿಂದ ಪರಿಶೋಧಿಸುವ ಕಾರ್ಯವನ್ನು ತೌಲನಿಕ ಭಾಷಾವಿಜ್ಞಾನವು ಮಾಡುತ್ತದೆ. ಭಾಷಾಪುನಾರಚನೆಯೆಂದರೆ ಈ ದೃಷ್ಟಿಯಿಂದ ಒಂದೇ ಕುಟುಂಬಕ್ಕೆ ಸೇರಿದ ಸೋದರ ಇಲ್ಲದೆ ಸೋದರಿ ಭಾಷೆಗಳಲ್ಲಿನ ಧ್ವನಿಮಾ ಸಮುಂಮ್ನಾಯ, ಸಂಧಿಪ್ರಕ್ರಿಯೆ, ಪದರೂಪ, ಪ್ರತ್ಯಯೀಕರಣ ಪ್ರಕ್ರಿಯೆ, ಅರ್ಥಸಾದೃಶ್ಯ, ವಾಕ್ಯರಚನೆ ಇವೆಲ್ಲ ಸ್ತರಗಳಲ್ಲಿನ ಸಾಮಗ್ರಿಯನ್ನು ಸಂಗ್ರಹಿಸಿ ಸಂಕಲಿಸಿ, ಅವುಗಳಲ್ಲಿನ ಸಂವಾದಿ ರೂಪಗಳ ನೆರವಿನಲ್ಲಿ ಇವೆಲ್ಲಕ್ಕೂ ಮೂಲವಾದ ಕುಟುಂಬದ ಏಕೈಕ ಭಾಷಾಸ್ವರೂಪವನ್ನು ಗೊತ್ತುಪಡಿಸುವುದೇ ಆಗಿದೆ. ಇಂತಹ ತೌಲನಿಕ ಪ್ರಣಾಲಿಯಿಂದ ಪುನಾರಚನೆಗೆ ತಂದುಕೊಂಡ ಭಾಷೆಯೇ ಆ ಕುಟುಂಬದ ಪಿತೃಭಾಷೆ, ಅಥವಾ ಪೂರ್ವಭಾಷೆ (Parent language) ಈ ಪಿತೃಭಾಷೆಯಿಂದ ಕವಲೊಡೆದು ಸ್ವತಂತ್ರವಾಗಿ ಮಾರ್ಪಟ್ಟ ಭಾಷೆಗಳು ಪುತ್ರಿಕಾಭಾಷೆಗಳು (Daughter languages) ಈ ಪುತ್ರಿಕಾ ಭಾಷೆಗಳು ಪಾರಸ್ಪರಿಕ ಸಂಬಂಧದಿಂದಾಗಿ ಸೋದರಿ ಭಾಷೆಗಳು (sister language) ಹೀಗೆ ಇವುಗಳ ಕಳ್ಳು-ಬಳ್ಳಿ ಸಂಬಂಧವನ್ನು ಸ್ಥಾಪಿಸಬಹುದಾಗಿದೆ.[೩]

ಭಾಷಾ ಪುನಾರಚನೆ ಎರಡು ಸ್ತರಗಳಲ್ಲಿ ಸಾಧ್ಯ ೧.ಆಂತರಿಕ ೨.ಬಾಹ್ಯ. ಒಂದೇ ಭಾಷೆ ಮತ್ತು ಅಲ್ಲಿರುವ ಉಪಭಾಷೆ, ಪ್ರಾದೇಶಿಕ ಪ್ರಭೇದಗಳನ್ನೂ ಏಕಕಾಲಿಕವಾಗಿಯಾಗಲಿ ಅಥವಾ ಕಾಲಕ್ರಮಿಕ ಘಟ್ಟದಲ್ಲಾಗಲಿ (Synchronical or dichronical level) ತೌಲನಿಕವಾಗಿ ಅಲ್ಲಿ ಕಂಡುಬರುವ ಸಾದೃಶ್ಯ ವೈದೃಶ್ಯಾದಿಗಳನ್ನು ವಿಶ್ಲೇಷಿಸುವುದು ಆಂತರಿಕ ಪುನಾರಚನೆ. ನಿದರ್ಶನಕ್ಕೆ ಪೂರ್ವಹಳಗನ್ನಡ, ಹೊಸಗನ್ನಡ, ನಡುಗನ್ನಡ, ಆಧುನಿಕ ಕನ್ನಡದ ವ್ಯತ್ಯಾಸಗಳನ್ನು ಕುರಿತು ವಿವೇಚಿಸುವುದು ಆಂತರಿಕ ಪುನಾರಚನೆಯಾಗುತ್ತದೆ. ಇಂತಹ ಅವಸ್ಥೆಗಳನ್ನು ತಮಿಳಿನಲ್ಲಿ ಸಂಗಂ ಪೂರ್ವಕಾಲ, ಸಂಗಂ ಉತ್ತರಕಾಲ ಹಾಗೂ ಆಧುನಿಕ ಕಾಲವೆಂದಾಗಿಯೂ ತೆಲುಗಿನಲ್ಲಿ ನನ್ನಯ ಯುಗ, ತಿಕ್ಕನಯುಗ, ಶ್ರೀನಾಥಯುಗವೆಂದಾಗಿಯೂ ಗುರುತಿಸಲಾಗಿದೆ. ಒಂದೇ ಮೂಲದಿಂದ ಬೇರಾದ ಜ್ಞಾತಿಭಾಷೆಗಳ ಪಾರಸ್ಪರಿಕ ಸಂಬಂಧಗಳನ್ನು ತೌಲನಿಕವಾಗಿ ವಿವೇಚಿಸುವುದು ಬಾಹ್ಯ ಪುನಾರಚನೆ, ನಿದರ್ಶನಕ್ಕೆ; ಸಂಸ್ಕೃತ, ಗ್ರೀಕ್, ಲ್ಯಾಟಿನ್ ಭಾಷೆಗಳ ಪೂರ್ವದ ಅವಸ್ಥೆಯಾದ ಇಂಡೋ-ಯುರೋಪಿಯನ್, ಆರ್ಯಭಾಷೆಗಳ ಮೂಲದ ಭಾಷೆ 'ಇಂಡೋ-ಆರ್ಯನ್, ದಕ್ಷಿಣದ ತಮಿಳು, ಮಲೆಯಾಳಂ, ಕನ್ನಡ-ತೆಲುಗು ಮುಂತಾದ ಭಾಷೆಗಳ ಮೂಲಕುಟುಂಬವಾದ 'ಪೂರ್ವದ್ರಾವಿಡ' ರಚನೆಯನ್ನು ಪರಿಗಣಿಸುವುದು ಬಾಹ್ಯಪುನಾರಚನೆ. ಇವುಗಳ ವಿವೇಚನೆಯಲ್ಲಿ ಆನುವಂಶಿಕ ಪದ್ಧತಿ, (Genetic method) ಕ್ಷೇತ್ರೀಯ ಪದ್ಧತಿ (Areal method)ಗಳಿಗಿಂತ ತೌಲನಿಕವಾದ ಪ್ರರೂಪ ಅಥವಾ ವರ್ಗೀಕರಣ ಪದ್ಧತಿ (Taxonomy or typological method) ಹೆಚ್ಚು ಮಹತ್ವದ್ದಾಗಿದೆ. ಇಲ್ಲಿ ಮುಖ್ಯವಾಗಿ ಪುನಾರಚನಾ ಸಾಮಗ್ರಿ ಕುರಿತು ವಿವರಿಸಲಾಗಿದೆ.

---

೩. ತೌಲನಿಕ ಭಾಷಾಪ್ರಣಾಲಿಕೆಗಳು ಇಂದಿನ ಆಧುನಿಕ ಭಾಷಾ ವಿಜ್ಞಾನದಲ್ಲಿ ಬೆಳೆದು ಬಂದುದರಿಂದ ಹಿಂದಿನವರ ಭಾಷಾಮೂಲ ಹೇಳಿಕೆಗಳು ಕೇವಲ ದೈವೀವಾದ (Dvine origin) ಮಾತ್ರ ಎನ್ನಿಸುತ್ತವಲ್ಲದೆ ಅವು ವೈಜ್ಞಾನಿಕ, ವಾಸ್ತವಿಕ ಹೇಳಿಕೆಗಳೆನ್ನಿಸಲಾರವು. ಹಿಬ್ರೂ, ಅರೇಬಿಕ್, ಸಂಸ್ಕೃತಭಾಷೆಗಳಲ್ಲಿ ಇಂತಹ ನಂಬುಗೆಗಳಿವೆ.

## ಜ್ಞಾತಿ ರೂಪಗಳು (Cognates)

ಒಂದು ಭಾಷಾಕುಟುಂಬದ ಮೂಲಸಾಮಗ್ರಿಯನ್ನು ಅನುವಂಶಿಕ ಸಂಬಂಧವಿರುವ ಭಾಷೆಗಳಲ್ಲಿನ ಪ್ರಾಥಮಿಕ ಪದಕೋಶ (Basic Vocabulary)ದಿಂದ ಸಂಗ್ರಹಿಸಬಹುದಾಗಿದೆ. ಗ್ರಾಂಥಿಕವಾಗಿ ಸಮೃದ್ಧವಿರುವ ಭಾಷೆಗಳ ನಿಘಂಟು ಅಥವಾ ಶಬ್ದಕೋಶಗಳಲ್ಲಿ(Lexicons) ಅನ್ಯಭಾಷಿಕ ಎರವಲು ಪದಗಳು ಬಂದು ಸೇರಿಕೊಳ್ಳುವುದರಿಂದ ಅಂತಹ ನಿಘಂಟುಗಳಿಗಿಂತ ಪ್ರಾಥಮಿಕ ಪದಕೋಶವೇ ಭಾಷಾಕುಟುಂಬದ ಮೂಲವನ್ನು ತಿಳಿಯಲು ಹೆಚ್ಚು ವಿಶ್ವಸನೀಯವೆನ್ನಿಸುತ್ತದೆ. ಏಕೆಂದರೆ ಯಾವುದೇ ಭಾಷೆಯಲ್ಲಿನ ಆರಂಭಿಕ ಅತ್ಯಗತ್ಯದ ಶಬ್ದಗಳನ್ನು ಸಾಮಾನ್ಯವಾಗಿ ಎರವಲು ರೂಪದಲ್ಲಿ ಪಡೆಯಲಾಗುವುದಿಲ್ಲ. ಆದುದರಿಂದ ಕೋಶದ ಪದಗಳಲ್ಲಿ ವಿಭಿನ್ನ ಪ್ರಕಾರದ ಶಬ್ದಗಳಿವೆ. ೧. ಆಕಸ್ಮಿಕ ಶಬ್ದಗಳು (Accidental words) ೨. ಅನ್ಯದೇಶ್ಯ ಅಥವಾ ಸ್ವೀಕರಣ (Borrrowings) ೩. ಜ್ಞಾತಿಪದಗಳು (Cognates) ಆದುದರಿಂದ ತೌಲನಿಕ ಭಾಷಾವಿಜ್ಞಾನಿ ಇವುಗಳ ಆಯ್ಕೆಯಲ್ಲಿ ಎಚ್ಚರವಹಿಸಬೇಕಾಗಿರುತ್ತದೆ. ಉದಾ: ಜರ್ಮನ್ Nass ಹಾಗೂ Zuni ಭಾಷೆಯ ಶಬ್ದ Nas ಇವೆರಡಕ್ಕೂ ಉಚ್ಚಾರ ಹಾಗೂ ಅರ್ಥದೃಷ್ಟಿಯಿಂದ ಸಮೀಪವಾಗಿದೆ- ಎಂದರೆ ದ್ರಾವಿಡ Wet. ಹಾಗಿದ್ದರೂ ಇಲ್ಲಿನ ಧ್ವನಿ ಅರ್ಥ (Sound and meaning)ಗಳ ಸಂಬಂಧ ಕೇವಲ ಆಕಸ್ಮಿಕ. ಇಂತಹ ಪರಸ್ಪರ ಸಂಬಂಧವಿಲ್ಲದ ಭಾಷೆಗಳಲ್ಲಿನ ಆಕಸ್ಮಿಕ ಪದಗಳು ಇನ್ನೂ ಹಲವಾರು ಕಾಣಿಸಬಹುದಾದರೂ ಅಂಥವುಗಳ ಸಂಖ್ಯೆ ಕಡಿಮೆ. ನಿದರ್ಶನಕ್ಕೆ :

ಆಕಸ್ಮಿಕ ಸಂಬಂಧದ ಶಬ್ದಗಳು bad - bad [Eng-Persian], Donna-onna 'woman' [Italian-japanese], Khoroshiti - yoroshii 'good' [Russian-japanese]

ಭಾಷೆಗಳು - ಭಿನ್ನ ಭಿನ್ನ ಕುಟುಂಬಕ್ಕೆ ಸೇರಿರುವುದರಿಂದ ಇಲ್ಲಿನ ಪದಗಳು ಎಷ್ಟೇ ನಿಕಟವಾಗಿದ್ದರೂ ಅವುಗಳ ಸಂಬಂಧ ಕೇವಲ ಆಕಸ್ಮಿಕವೇ ಆಗಿದೆ. ಇದೇ ಹೇಳಿಕೆ 'ಅನ್ಯ ಸ್ವೀಕರಣ' ಪದಗಳಿಗೂ ಅನ್ವಯಿಸುತ್ತದೆ. ಸಂಸ್ಕೃತವು ಎಷ್ಟೇ ಪ್ರಭಾವವನ್ನು ದೇಶಭಾಷೆಗಳ ಮೇಲೆ ಪಡಿಮೂಡಿಸಿದ್ದರೂ ಅಸಂಖ್ಯಾತ ಶಬ್ದಗಳನ್ನು ದ್ರಾವಿಡದಿಂದಲೂ ಎರವಲು ಪಡೆದಿದೆ.[೪] ಇಂತಹ ಸಂದರ್ಭದಲ್ಲಿ ಸ್ವಭಾಷಿಕ- ಹಾಗೂ ಅನ್ಯಭಾಷಿಕ ಶಬ್ದಕೋಶವೊಂದನ್ನಷ್ಟೇ ಅಲ್ಲದೆ ಆಯಾ ಭಾಷೆಯ ಧ್ವನಿ ವ್ಯವಸ್ಥೆ, ಉಚ್ಚಾರವ್ಯವಸ್ಥೆಗಳ ಅಂತರವನ್ನೂ ಸಹ ಸೂಕ್ಷ್ಮವಾಗಿ ತಿಳಿದಿರಬೇಕಾಗುತ್ತದೆ. ಸಾಮಾನ್ಯವಾಗಿ ಸಂಸ್ಕೃತದಲ್ಲಿ ಮೂರ್ಧನ್ಯ ಧ್ವನಿಗಳನ್ನು ದ್ರಾವಿಡದಿಂದ ಸ್ವೀಕರಿಸಿರುವುದರಿಂದ ಅದರಿಂದ ಸಂಯೋಜನೆಗೊಂಡ ಶಬ್ದಗಳು ದ್ರಾವಿಡ ಮೂಲದ್ದಾಗಿವೆಯೆಂದು ಸುಲಭವಾಗಿ ಹೇಳಬಹುದು.[೫] ಇವೆರಡಕ್ಕಿಂತ ಭಿನ್ನವಾಗಿ ನಿಲ್ಲುವ ಪದಗಳೇ ಜ್ಞಾತಿಪದಗಳೆನ್ನಿಸುತ್ತವೆ. ಒಂದೇ ಕುಟುಂಬದ ಭಾಷೆಯಿಂದ ನಿಷ್ಪನ್ನಗೊಂಡು ಅದೇ

---

೪. ಥಾಮಸ್ ಬರೋ ಅವರು ಸುಮಾರು ೭೫೦ ಪದಗಳನ್ನು ದ್ರಾವಿಡದಿಂದ ಸಂಸ್ಕೃತವು ಸ್ವೀಕರಿಸಿರುವುದಾಗಿ ತರ್ಕಿಸಿದ್ದಾರೆ. Dravidian Studies Vii ಕಿಟೆಲ್ ನಿಘಂಟಿನಲ್ಲಿ ಇಂತಹ ಪದಗಳ ನಿಷ್ಪತ್ತಿಯಲ್ಲಿ ಅನುಸರಿಸಬೇಕಾದ ನಿಯಮಗಳ ಬಗೆಗೆ ಹೇಳಲಾಗಿದೆ. (ಕಿ.ಕೋ. ಭಾಗ I)

೫. ಉದಾ- ಕುಟುಂಬ, ಕುಟೀರ, ಪಳ್ಳಿ, ಪಂಡಿತ, ಪುಳಿಂದ, ಅಂಗಣ, ಕಂಕಣ, ಗೋಣಿ, ತೋರಣ ಮುಂ.

ವರ್ಗದ ಭಾಷೆಗಳಲ್ಲಿ ಒಂದನ್ನೊಂದು ಹೋಲುವ ಹಾಗೂ ಅರ್ಥಸಾದೃಶ್ಯವಿರುವ ಅಸುರು ಪದಗಳೇ ಜ್ಞಾತಿಪದಗಳು. ಇಂತಹ ಪದಗಳನ್ನು ಒಂದೊಂದು ಭಾಷಾ ಕುಟುಂಬದ ಆರಂಭಿಕ ಪದಕೋಶದಿಂದ ನಾವು ತಿಳಿಯಬಹುದಾಗಿದೆ.

ನಿದರ್ಶನಕ್ಕೆ ಸಂಖ್ಯಾವಾಚಕ ಶಬ್ದಗಳು ಇಂಡೋ-ಯುರೋಪಿಯನ್ ಹಾಗೂ ದ್ರಾವಿ ಭಾಷಾಕುಟುಂಬದಲ್ಲಿ ಹೇಗೆ ಪರಸ್ಪರ ಸಂಬಂಧವುಳ್ಳವುಗಳಾಗಿವೆಯೆಂಬುದನ್ನು ನೋಡಬಹುದು.

**I ಇಂಡೋ ಯುರೋಪಿಯನ್ ಕುಟುಂಬ**

| ಸಂಸ್ಕೃತ | ಗ್ರೀಕ್ | ಲ್ಯಾಟಿನ್ | ಗೋಥಿಕ್ ಇಂಡೋ | ಪೂರ್ವ ಇಂ ಯುರೋಪಿ |
|---|---|---|---|---|
| - | ಒಯಿನೇ | ಊನುಸ್ | ಅಮುಸ್ನ | ಒಯಿನೊಸ್ |
| ದ್ವಾ | ದ್ಯೋ | ದುವೋ | ತ್ವಾ | ದುವೋದ್ವೋ |
| ತ್ರಯಸ್ | ತ್ರಿಯಸ್ | ತ್ರೇಸ್, | ತ್ರೇಯಿಸ್ | ತ್ರೇಯಸ್ |
| ಚತ್ವರ್ | ತತರೆಸ್ | ಕ್ವತ್ತು ವೊರ್ | ಫಿದ್ವೊರ್ | ಕ್ವೇತ್ವೋರಸ್ |
| ಪಂಚ | ಪೆಂತೆ | ಕ್ವಿಂಕ್ವೆ | ಫಿಮ್ಫ | ಪಂಕ್ವೆ |
| ಷಟ್ | ಹೆಕ್ಸ | ಸೆಕ್ಸ್ | ಸ್ವಹ್ಸ್ | ಸೆಕ್ಸ್ |
| ಸಪ್ತ | ಹೆಪ್ತಿ | ಸೆಪ್ತಮ್ | ಸಿಬುಮ್ | ಸಪ್ತಮ್ |
| ಅಷ್ಟ | ಅಕ್ಟೋ | ಅಕ್ಟೋ | ಅಹತ್ | ಒಕ್ಟೊವ್ |
| ನವ | ಎನ್ನಯ | ನೊವೆಮ್ | ನಿಯುನ್ | ನೆವ್ನ |
| ದಶ | ದೆಕ್ | ದೆಚೆಯ್ | ತೈಹುನ್ | ದೆಕ್ಮ |

**II ದ್ರಾವಿಡ ಭಾಷಾಕುಟುಂಬ**

| ತಮಿಳು | ಮಲೆಯಾಳಂ | ಕನ್ನಡ | ತೆಲುಗು | * ಪೂರ್ವ-ದ್ರಾವಿಡ |
|---|---|---|---|---|
| ಒನ್ರು | ಒದ್ । ಒರ್ | ಒಂದು | ಒಕಟಿ | ಒರ್ |
| ಇರಣ್ಡು | ಇರಣ್ಡು । ಇರ್ | ಎರಡು | ರೆಂಡು | ಇರ್ |
| ಮೂನ್ರು | ಮೂನ್ನು | ಮೂರು. | ಮೂಡು | ಮೂ |
| ನಾಲು । ನಾಣು | ನಾಲ್ । ನಾಙ್ಗ | ನಾಲ್ಕು | ನಾಲುಗು | ನಾಲ್ |
| ಅಂಜಿ | ಅಂಜ | ಐದು | ಅಯ್ದು | ಅಯ್ |
| ಆರ್ | ಓರು | ಆರು | ಆರು | ಆರು |
| ಏಳ | ಏಳ | ಏಳು | ಏಡು | ಏಳ್ |
| ಎಟ್ಟ್ | ಎಟ್ಟು | ಎಂಟು | ಎನಿಮಿದಿ | ಎಣ್ |
| ಒಂಬದು | ಒಂಬದು | ಒಂಬತ್ತು | ತೊಮ್ಮಿದಿ | ಒನ್ ಪತ್ತು |
| ಪತ್ತು | ಪತ್ತು | ಹತ್ತು | ಪದಿ | ಪತ್ |

ಇಂತಹದೇ ಜ್ಞಾತಿಪದಗಳ ಸಂಬಂಧವನ್ನೂ ಆಯಾಭಾಷೆಗಳಲ್ಲಿನ ಪ್ರಾಥಮಿಕ ಶಬ್ದಗಳಾದ ಶಾರೀರಿಕ ಭಾಗಗಳು, ವರ್ಣವಾಚಕಗಳು, ಅಲ್ಲದೆಯೆ ಸರ್ವನಾಮ, ಗುಣವಚನ, ವಿಶೇಷಣ ಭಾವಸೂಚಕಾವ್ಯಯ, ಅನುಕರಣಶಬ್ದ ಮುಂತಾದವುಗಳೊಂದಿಗೆ ತೌಲನಿಕವಾಗಿ ವಿವೇಚಿಸಬಹುದು.

## ಧ್ವನಿ - ಅರ್ಥಸಾಮ್ಯತ್ವ (Sound - meaning Similarities)

ಇಲ್ಲಿ ಗಮನಿಸಬೇಕಾವ ಅಂಶವೆಂದರೆ ಶಬ್ದಗಳು ರೂಪಸಾಮ್ಯತೆ ಹೊಂದಿರುವುದರ ಜೊತೆಗೆ ಅರ್ಥವಲ್ಲಿ ಸಾದೃಶ್ಯ ಸಂಬಂಧ ಕಲ್ಪಿಸಿದವುಗಳಾಗಿರಬೇಕು. ಏಕೆಂದರೆ ಎಷ್ಟೋ ವೇಳೆ ಸಮರೂಪಕ ಪದಗಳೊಂದಿಗೆ (Homonymical words) ಇವು ಸಂಧಿಗ್ಧತೆಗೆ ಅವಕಾಶ ಕಲ್ಪಿಸಲೂ ಬಹುದು. ನಿದರ್ಶನಕ್ಕೆ / / e ee ea ಈ ಸ್ವರಗಳನ್ನು ಹೊಂದಿದ ಕೆಲವು ಶಬ್ದಗಳು mede, meed ಇಲ್ಲದೆ mead ಇವೆಲ್ಲವನ್ನು ಧ್ವನ್ಯಾಲೇಖ್ಯದಲ್ಲಿ /mid/ ಎಂದೇ ಬರೆಯಬಹುದು. ಆದರೆ ಇವುಗಳ ಪರಸ್ಪರ ಅರ್ಥ ಮಾತ್ರ ಭಿನ್ನ. ಆದುದರಿಂದ ಭಾಷಾ ಕೌಟುಂಬಿಕ ಪುನಾರಚನೆಯಲ್ಲಿ ಇವು ಸಹಾಯಕವೆನ್ನಿಸುವುದಿಲ್ಲ. ಈ ದೃಷ್ಟಿಯಿಂದ ಧ್ವನಿ - ಅರ್ಥ ಸಾಮ್ಯವಿರುವ ಶಬ್ದಗಳನ್ನೇ ಪುನಾರಚನೆಯಲ್ಲಿ ಆಯ್ಕೆ ಮಾಡಿಕೊಳ್ಳಬೇಕಾಗುತ್ತದೆ. ಇಂತಹ ನಿಶ್ಚಿತ ರೂಪಗಳನ್ನು ಕೆಳಗೆ ಕೊಟ್ಟಿವೆ. ಯುಗನ್ <[ಯುಗಯ್ (ಸಂ). ಜುಗೂಮ್ (ಗ್ರೀ) ಇಯುಗಂ) ಲ್ಯಾ) ಜುಕ್ (ಗಾಥಿಕ್) ಇವೆಲ್ಲವುಗಳಿಗೆ ಇಂಡೋ-ಯುರೋಪಿಯನ್‌ದ ಪೂರ್ವರೂಪ ಯುಗನ್] ನೂಱ್ < [ ನೂಱು (ತ) (ಮ). ನೂಱು - ನೂರು (ದಕ್ಷಿಣ, (DED 3090) ಮಧ್ಯ ದ್ರಾವಿಡದ ಬಹುತೇಕ ಭಾಷೆಗಳಲ್ಲಿ ನೂಡು ತುಳುವಿನಲ್ಲಿ ಧ್ವನಿ ವ್ಯಾಸಗೊಂಡ ರೂಪ. ಸಂಸ್ಕೃತದಲ್ಲಿ 'ಅಸ್ತಿ' ಇವೆರಡರಲ್ಲಿ ಧ್ವನಿವ್ಯತ್ಯಾಸ ಕಂಡರೂ ಬಹುಮಟ್ಟಿಗೆ ರೂಪ ಮತ್ತು ಅರ್ಥಸಾಮ್ಯವಿರುವ ಜ್ಞಾತಿವಾಕ್ಯಗಳೇ ಆಗಿದ್ದು ಅವು ಒಂದೇ ಭಾಷಾ ಕುಟುಂಬದಿಂದ ನಿಷ್ಪನ್ನಗೊಂಡಿರುವುದು ಖಚಿತ.

## ಅನುರೂಪಕತೆ ಅಥವಾ ಪರಸ್ಪರ ಸಂವಾದಿ ತತ್ತ್ವ (Correspondences)

'ಅನುರೂಪ' ಪದಕ್ಕೆ 'ಸಂವಾದಿ' ಪ್ರತಿರೂಪಿ ಸಾದೃಶ್ಯರೂಪಿ ಇಲ್ಲವೆ ಪ್ರತ್ಯಾನತ ಮುಂತಾಗಿ ಪರ್ಯಾಯ ಪರಿಭಾಷೆಗಳಿದ್ದರೂ ಇಲ್ಲಿ ಅನುರೂಪ ಇಲ್ಲವೆ ಸಂವಾದಿ ಎಂಬಿವು ಹೆಚ್ಚು ಪ್ರಚಲಿತ ರೂಪಗಳಾಗಿವೆ. ಇವನ್ನು ಸಹ ಭಾಷಿಕ ರಚನೆಯ ಸ್ತರಗಳಾದ ಧ್ವನಿಮಾ, ಸಂಧಿ, ಆಕೃತಿಮಾ ಪದಕೋಶ ಇಲ್ಲವೆ ವಾಕ್ಯ ಯಾವುದೇ ಮಟ್ಟದಲ್ಲಿ ಅನ್ವಯಿಸಿಕೊಳ್ಳಬಹುದು. ಧ್ವನಿಮಾ ಮಟ್ಟದಲ್ಲಿ ಅನುರೂಪ ಧ್ವನಿಗಳನ್ನು ವಿವೇಚಿಸುವಾಗ ಅವುಗಳಲ್ಲಿನ ಭೇದಗಳನ್ನು ನಾವು ತಿಳಿದಿರಬೇಕು. ಇಲ್ಲಿ ಮುಖ್ಯವಾಗಿ ಎರಡು ಪ್ರಕಾರಗಳಿವೆ. ೧. ಆವೃತ್ತಿಯ ಅನುರೂಪ ಧ್ವನಿ (Recarring correspondence) ೨. ನಿಯಂತ್ರಿತ ಅನುರೂಪ ಧ್ವನಿ (Regulated correspondences) ನಿದರ್ಶನಕ್ಕೆ: ಪ್ರಾಚೀನ ಐಸ್‌ಲ್ಯಾಂಡ್, ಪ್ರಾಚೀನ ಸ್ಯಾಕ್ಸನ್, ಪ್ರಾಚೀನ ಉನ್ನತ ಜರ್ಮನ್ (High German) ಮತ್ತು ಗಾಥಿಕ್‌ಗಳಲ್ಲಿ 'fish' ಪದವಿದೆ. ಇಲ್ಲಿನ ಪದಾದಿ f/ ಧ್ವನಿಗೆ ಆ ಪರಿಸರದಲ್ಲಿ ಇನ್ನಾವುದೇ ಉಪಧ್ವನಿಗಳಿಲ್ಲ. ಅಂತಹ ಏಕೈಕ ಪರಿಸರದಲ್ಲಿ ನಿಯುಕ್ತವಾಗಿ ಬರುವ ಧ್ವನ್ಯಾವೃತ್ತಿಯನ್ನು f-f-f-f-f-/ ಎಂದಾಗಿ ಸೂಚಿಸಬಹುದು. ಆದರೆ ಇದಕ್ಕೆ ವ್ಯತಿರಿಕ್ತವಾಗಿ ನಿಯಂತ್ರಿತ ರೂಪದಲ್ಲಿ ಅನುರೂಪವಾಗಿ ಬರುವ ಧ್ವನಿಗಳನ್ನು ದ್ರಾವಿಡ ಭಾಷಾ ಕುಟುಂಬದಿಂದ

ಉದಾಹರಿಸಬಹುದು. : ಇಲೈ (ತಮಿಳು - ಮಲೆಯಾಳಂ) ಎಲೆ (ಕನ್ನಡ-ತೆಲುಗು) ಕುಡೈ (ತಮಿಳು - ಮಲೆಯಾಳಂ ಕೊಡೆ (ಕನ್ನಡ ಗೊಡಗು ತೆಲುಗು).

ಮೇಲಿನ ಪದಗಳಲ್ಲಿ ದಕ್ಷಿಣ ದ್ರಾವಿಡ ಭಾಷೆಗಳಲ್ಲಿನ ತಮಿಳು - ಮಲೆಯಾಳಂಗಳಲ್ಲಿನ ಪದಾದಿ ಇ ಮತ್ತು ಉ ಸ್ವರಗಳು ಕ್ರಮಶಃ ಕನ್ನಡ-ತೆಲುಗಿನಲ್ಲಿ ಎ-ಒ ಸ್ವರಗಳಾಗಿ ಪರಿವರ್ತನೆಗೊಳ್ಳುತ್ತವೆ. ಇಲ್ಲಿನ ಅನುರೂಪಕ ಧ್ವನಿವ್ಯತ್ಯಾಸಕ್ಕೆ ಅವುಗಳದೇ ಆದ ಒಂದು ನಿಯಮವಿದೆ. ಅದು ಇ, ಉ [ಅ > ಎ, ಒ ಎಂದಾಗಿ ಸಾಮಾನ್ಯವಾಗಿ ಹೇಳಲಾಗುತ್ತದೆ.[೬] ಎಂದರೆ ಇ ಉ ಉನ್ನತ ಸ್ವರಗಳುಳ್ಳ ಶಬ್ದಗಳಲ್ಲಿ ಮುಂದೆ ಅವನತ ಅಥವಾ ತದ್ವಿತ ಸ್ವರ ಅ ಬಂದರೆ ಈ ಮೇಲಿನಂತೆ ಧ್ವನಿವ್ಯತ್ಯಾಸ ನಡೆಯುತ್ತದೆ. ಇದು ದಕ್ಷಿಣ ದ್ರಾವಿಡ ಭಾಷೆಗಳಲ್ಲಿ ಕಾಣಿಸುವ ನಿಯಂತ್ರಿತ ಧ್ವನಿ ಸಂವಾದಿ ರೂಪಗಳ ಒಂದು ಸಾಮಾನ್ಯ ಲಕ್ಷಣವಾಗಿದೆ. ಪರಸ್ಪರ ಜ್ಞಾತಿ ಭಾಷೆಗಳಲ್ಲಿನ ಈ ಬಗೆಯ ಧ್ವನಿವ್ಯತ್ಯಾಸವು ಅನಂತರದ ವ್ಯತ್ಯಾಸದ ಘಟ್ಟದಲ್ಲಿ ಕಾಣಿಸಿಕೊಂಡುದರಿಂದ ಇಂತಹ ಪದಗಳ ನಿಶ್ಚಿತ ಧ್ವನಿರೂಪಗಳನ್ನೂ ಪುನಾರಚಿತ ಪೂರ್ವ-ದ್ರಾವಿಡ ಧ್ವನಿಮಾ ಸಾಮಗ್ರಿಯ ಮೇಲಿಂದಲೇ ನಾವು ತಿಳಿಯಬೇಕಾಗುತ್ತದೆ. ಇಲ್ಲಿ ಎಲ್ ಹಾಗೂ ಕುಡ್‌ಗಳು ಈ ವ್ಯತ್ಯಸ್ತ ಜ್ಞಾತಿಶಬ್ದಗಳ ಪ್ರಾಗ್ರೂಪಗಳೆನ್ನಿಸುತ್ತವೆ. ಇತ್ತೀಚೆಗೆ 'ಭಾಷಾಕ್ಷೇತ್ರೀಯ ಪರಿಕಲ್ಪನೆ' (Linguistic Area Hypothesis) ಎಂಬ ಎಮಿನೊ ಮುಂತಾದ ಭಾಷಾವಿದ್ವಾಂಸರಿಂದ ಬೆಳೆದು ಬಂದಿದೆ. ಈ ಹಿನ್ನೆಲೆಯಲ್ಲಿ ಸಂಭವಿಸಬಹುದಾದ ಅನುರೂಪಕ ಗಳನ್ನು ಮತ್ತೆರಡು ಪ್ರಭೇದಗಳಲ್ಲಿ ಗುರುತಿಸಲಾಗಿದೆ. ಅವನ್ನು ಕ್ರಮವಾಗಿ ಆನುವಂಶಿಕ ಅನುರೂಪಗಳು ಹಾಗೂ ೧. ಪ್ರಸರಣಾತ್ಮಕ ಅನುರೂಪಗಳೆಂದು ಕರೆಯಲಾಗಿದೆ. ಇವೆರಡೂ ಒಂದೇ ಭಾಷಾ ಕುಟುಂಬದ ಜ್ಞಾತಿಶಬ್ದಗಳೇ ಆಗಿದ್ದರೂ ಹೆಚ್ಚಿನ ಧ್ವನಿ ಸಾಮೀಪ್ಯ ವುಳ್ಳವುಗಳನ್ನು ಆನುವಂಶಿಕವೆಂದೂ ಅವು ಭೌಗೋಳಿಕ ದೂರದ ವ್ಯತ್ಯಾಸಗಳನ್ನು ಹೊಂದಿದ ರೂಪಗಳಾಗಿದ್ದಲ್ಲಿ ಪ್ರಸರಣಾತ್ಮಕವೆಂದೂ ತಿಳಿಯಲಾಗಿದೆ. ಇವೆರಡಕ್ಕೆ ಕಮೀಲ್ ಜ್ವೆಲೆಬಿಲ್ 'ಇರುಳ' ಎಂಬ ದ್ರಾವಿಡ ಭಾಷೆಯಿಂದ ಸಾಮಗ್ರಿಯನ್ನೊದಗಿಸಿರುವ ಬಗೆ ಇಂತಿದೆ.[೭]

ಇರುಳ ಭಾಷೆಯ ಆನುವಂಶಿಕ ಅನುರೂಪಗಳು ಪ್ರಾ.ದ್ರಾ x ಮಕ x ಮಕನ್ - ಮನ ಉಚ್ಚಾರಣಾವ್ಯತ್ಯಯ ರೂಪಗಳು ಮನೆ, ಮಂನೂ, ಮುನೆ (Genetic correspondece) ಮಗ ಮಗೆ - ಪ್ರಸರಣಾತ್ಮಕ (diffusim correspondences). ಇದೇ ಹಿನ್ನಲೆಯಲ್ಲಿ ಕನ್ನಡದ ಪ್ ಹ್ ಧ್ವನಿವ್ಯತ್ಯಯ ಕುರಿತು ನಾವಿಲ್ಲಿ ಪುನಾ ವಿಚಾರಿಸಬಹುದು. ಬಹುತೇಕ ದ್ರಾವಿಡ ಭಾಷೆಗಳಲ್ಲಿ ಪದಾದಿಯಲ್ಲಿ ಪ್ ಯುಕ್ತ ಧ್ವನಿ ಉಳಿದುಕೊಂಡಿದೆ. ಆದರೆ ಕನ್ನಡದಲ್ಲಿ ಮಾತ್ರ

---

೬. ಈ ಧ್ವನಿವ್ಯತ್ಯಾಸಗಳ ವಿಶೇಷ ಅಧ್ಯಯನಗಳಿಗೆ ನೋಡಿ : Dr. Bh. Krishna murti, Telugu Verbal Bases, T.N. Sri 8th AIOC, Vol. p.769. M.B. Emeneau (೧೯೭೦) Kamil Zvelebil (1970) etc.

೭. Kamil Zvelebil : Dravidain linguistics (೧೯೯೦) ಈ ಬಗೆಯ ದ್ವೈಕಲ್ಪಿತ ಸಾದೃಶ್ಯಗಳನ್ನು ದ್ರಾವಿಡಭಾಷಾಸಂದರ್ಭದಲ್ಲಿ ಮೊದಲಿಗೆ ವಿವೇಚಿಸಿದವರು ಎಂ.ಬಿ. ಎಮಿನೊ ಅವರು.

ಅದು ನಡುಗನ್ನಡ ಕಾಲದಿಂದೀಚೆಗೆ 'ಹ್ 'ಕಾರವಾಗಿ ಮಾರ್ಪಟ್ಟಿದೆ. ಇದರ ಐತಿಹಾಸಿಕ ಬೆಳವಣಿಗೆ ಏನೇ ಇದ್ದರೂ ಇಲ್ಲಿನ ಪ್ ಹ್ ಪರಿವರ್ತನೆಗೆ ಆನುವಂಶಿಕ ಅನುರೂಪ ಸಂಬಂಧ ವನ್ನು ಹೇಳುವುದು ಸಾಧ್ಯವಾಗಲಾರದು. ಮೇಲಾಗಿ 'ಪ್ - ಹ್'ಗಳಲ್ಲಿ ಉಚ್ಚಾರಣ ಸ್ಥಾನ-ಸಾಮಿಪ್ಯಗಳೂ ಇಲ್ಲ. ಕಾರಣ ಈ ಪರಿವರ್ತನೆ ಭಾಷಾಕ್ಷೇತ್ರೀಯ ಪರಿಸರದಲ್ಲಿ ಕಂಡುಬರುವ ಪ್ರಸರಣಾತ್ಮಕ ಸಂವಾದಿ ಧ್ವನಿ ಬೆಳವಣಿಗೆಯೆಂದು ಹೇಳುವುದು ಅನಿವಾರ್ಯವಾಗಿ ತೋರುತ್ತದೆ. ಕನ್ನಡದ ಈ ಹ ಕಾರೋಚ್ಚಾರಣೆ ಇನ್ನಿತರ ನೆರೆ-ಹೊರೆಯ ಭಾಷೆಗಳ ಮೇಲೂ ಸಹ ಪ್ರಭಾವ ಬೀರಿದೆ. ತೆಲುಗು-ಕನ್ನಡ ದ್ವಿಭಾಷಿಕ ಪ್ರದೇಶಗಳಲ್ಲಿ ಕೆಲವು ತೆಲುಗು ಪದಗಳು ಹ ಕರಗೊಂಡಿವೆ. ಉದಾ: ಹಂಗು, ಹಿತಮು, ಹಡಸಮು. ಇತ್ತೀಚೆಗೆ ಭಾಷಾವಿದ್ವಾಂಸರಿಂದ 'ಹಾಲುಕುಱುಂಬ'ಒಂದು ಸ್ವತಂತ್ರ ದ್ರಾವಿಡ ಭಾಷೆಯೆಂದು ತರ್ಕಿಸಲಾಗಿದೆ. ಇದು ತಮಿಳು ಪ್ರಭಾವಿತ ಪರಿಸರದಲ್ಲಿ ಪಾಲು ಕುಟುಂಬವಾಗಿದ್ದರೆ ಕನ್ನಡ ಪ್ರಭಾವವಿರುವಲ್ಲಿ 'ಆಲು ಕುರುಂಬ'ವಾಗಿದೆ. ಇಲ್ಲಿನ ಪ್ ಹ್ ವ್ಯತ್ಯಯೀಕರಣ ಆಧಾರದ ಮೇಲಿಂದ ಪಾಲು ಇಲ್ಲವೆ ಆಲು ಕುರುಂಬವು ಕನ್ನಡಕ್ಕೆ ಹತ್ತಿರವಾಗಿರುವ ಭಾಷೆಯಾಗಿ ನಿಲ್ಲುತ್ತದೆ.[೮].

ಇಂತಹ ಸಂವಾದಿ ಧ್ವನಿಗಳಲ್ಲಿ ಕಾಲ-ದೇಶದ ಅಂತರ ಹೆಚ್ಚಿದಂತೆ ಕೆಲವೊಮ್ಮೆ ಪರಸ್ಪರ ಗ್ರಾಹತ್ವದ (mutual Intelligibility) ಅಂಶ ಒಂದು ಸಮಸ್ಯೆಯೇ ಆಗುತ್ತದೆ. ಕೆಲವು ಭಾಷಾ ಕುಟುಂಬಗಳಲ್ಲಿ ಪ್ರಕೃತಿಸ್ವರಗಳಲ್ಲಾಗುವ ಅಂತರಿಕ ವ್ಯತ್ಯಯಗಳನ್ನು ಕುರಿತು ಆಲೋಚಿಸುವುದು ಸಹ ಇಲ್ಲಿ ಮುಖ್ಯವಾಗುತ್ತದೆ. ಅಂತಹ ಸಂದರ್ಭದಲ್ಲಿ ಪ್ರಕೃತಿ ಸ್ವರದ ಹ್ರಸ್ವ-ದೀರ್ಘ ಪ್ರಮಾಣ (Vowel length)ವನ್ನು ನಾವು ತಿಳಿದು ಅವುಗಳಲ್ಲಿನ ಮೂಲ ಪ್ರಕೃತಿಸ್ವರ ಯಾವುದೆಂಬುದರ ಮೇಲಿಂದ ಅಂತಹ ಘಟಕಗಳನ್ನು ಪುನರಚಿಸಿ ಕೊಳ್ಳಬೇಕಾಗುತ್ತದೆ. ಇಲ್ಲಿ ಕೆಲವೊಂದಕ್ಕೆ ಉದಾಹರಿಸಿದೆ.

**ಇಂಡೋ-ಯುರೋಪಿಯನ್ ವರ್ಗ** :ಉದಾ-ಗ್ರೀಕ್-ತಿಥೇಸಿ ಸಂಸ್ಕೃತ 'ದಧಾತಿ'ಇಲ್ಲಿ ಏ-ಆ ಧ್ವನಿಗಳು ಒಂದೇ ಜ್ಞಾತಿ ಭಾಷೆ ಗಳಲ್ಲಿನ ಅನುರೂಪಕ ಸ್ವರಗಳಾಗಿವೆ. ಇವೆರಡರಲ್ಲಿ xಏ ಎಂಬುದು ಪುನರ್ರಚಿತ ಧ್ವನಿಯಾಗಿದೆ.

**ದ್ರಾವಿಡ ವರ್ಗ** : ಉದಾ : 'ವರು' ಬರುವುದು ವರ್ (ತಮಿಳು) ಬರು (ಕನ್ನಡ) ಪೊರ್ (ತೊದ) ವೆರ್ (ಪರ್ಜಿ). ಇಲ್ಲಿನ ಪರಸ್ಪರ ಸಂವಾದಿಸ್ವರ ವ್ಯತ್ಯಯಗಳೆಲ್ಲಕ್ಕೂ ಮೂಲದ ಪುನಾರಚಿತ ಧ್ವನಿ ಪೂ.ದ್ರಾ ದಲ್ಲಿ ಹೀಗಿದೆ :

X ಅ X ಏ X ಆ X ಓ

ಹೀಗೆ ಪುನಾರಚಿತ ಧ್ವನಿ ಇಲ್ಲವೆ ಇನ್ನಾವುದೇ ಭಾಷಾ ಘಟಕಗಳನ್ನು ನಿರ್ಧರಿಸುವಾಗ ಜ್ಞಾತಿ ಭಾಷೆಗಳಲ್ಲಿನ ಆ ವೃತ್ತೀಯ ಪ್ರಮಾಣ ಬಾಹುಲ್ಯ (Frequency) ವನ್ನು ನಾವು ಆಧಾರವಾಗಿ

೮. ಈ ಭಾಷೆಯ ಹೆಚ್ಚಿನ ಅಧ್ಯಯನವನ್ನೂ ಜರ್ಮನ್ ದೇಶದ D.B. kapp ಕೈಕೊಂಡಿದ್ದಾರೆ. ನೋಡಿ Alu Kurumbaru Nayan (In German 1982) and Palu Kurumba Riddles (BSOAS 41 (1978).

ಪರಿಗಣಿಸಬೇಕು. ದ್ರಾವಿಡಭಾಷಾ ಕುಟುಂಬದಲ್ಲಿನ ಪ್ರಕೃತಿ ಸ್ವರ ಸಂವಾದಿ ತತ್ತ್ವಗಳ ಬಗೆಗೆ ಕೆಲವು ವಿದ್ವಾಂಸರು ಈಗಾಗಲೆ ವಿವೇಚಿಸಿದ್ದಾರೆ.[೬]

**ನವಪ್ರವರ್ತನೆ ಅಥವಾ ನವೀಕರಣ ಪ್ರಕ್ರಿಯೆ** : (Innovation Process) : ತೌಲನಿಕ ಭಾಷಾ ಪುನಾರಚನೆಯ ಇನ್ನೊಂದು ಮಹತ್ವದ ಪ್ರಕ್ರಿಯೆಯನ್ನು ನೇರ ಪ್ರವರ್ತನೆ ಅಥವಾ ನವೀಕರಣದಲ್ಲಿ ಗುರುತಿಸಲಾಗುತ್ತದೆ. ಒಂದು ಭಾಷಾಕುಟುಂಬದಲ್ಲಿ ಕೆಲವು ಶಬ್ದಗಳು ಯಾವುದೇ ವ್ಯತ್ಯಾಸವಿಲ್ಲದೆ ಮೂಲರೂಪದಲ್ಲೇ ಉಳಿದಿರಬಹುದು. ಆದರೆ ಭಾಷಾ ಪರಿವರ್ತನೆ ಒಂದು ಸಹಜ ತತ್ತ್ವವಾಗಿರುವುದರಿಂದ ಒಂದು ಭಾಷಾಕುಟುಂಬದ ಜ್ಞಾತಿ ಭಾಷೆ ಅವುಗಳ ಶಾಖೆ - ಉಪಶಾಖೆಯ ಭಾಷೆಗಳಲ್ಲಿ ಇವು ಅನೇಕ ಬಗೆಯಾಗಿ ಬದಲಾವಣೆಗೊಂಡಿರುತ್ತವೆ. ಇಲ್ಲಿ ನವಪ್ರವರ್ತನೆ ಹೇಗೆ ಪ್ರಭಾವಬೀರಬಹುದೆಂಬುದಕ್ಕೆ ವಿವರಿಸಿದೆ: ನವೀಕರಣ ಪ್ರಕ್ರಿಯೆ ಮುಖ್ಯವಾಗಿ ಎರಡು ಮೂರು ಪ್ರಭೇದಗಳಲ್ಲಿ ಕಾಣಿಸಬಹುದು. ೧. ಸಮಾಂಶಿಕ ನವೀಕರಣ (Shared Innovation) ೨. ಸಂವಾದಿ ನವೀಕರಣ (Parallel Innovation) ೩. ಸ್ವತಂತ್ರ ನವೀಕರಣ (Independent Innovation) ೪. ಸಾಮಾನ್ಯ ನವೀಕರಣ (Common Innovation).

**೧. ಸಮಾಂಶಿಕ ನವಪ್ರವರ್ತನೆ** : ಉದಾ: ನೀವು (ಕನ್ನಡ) ನೀಮ್ ನೀರ್ ನೀಂಗಳ್ (ತಮಿಳು) ನೀಮ್(ಕುರ್ಖ) ನಿಮು ಮೀರು (ತೆಲುಗು), ನೀನು ಮೀಂಬು (ಕುವಿ) ನಿಮ್ಮೆಟ್ ,ಮಿಮ್ಮೆಟ್ (ಗೊಂಡಿ). ಇಲ್ಲಿ ದಕ್ಷಿಣ ದ್ರಾವಿಡದಲ್ಲಿನ ತಮಿಳು, ಕನ್ನಡ ಹಾಗೂ ಉತ್ತರ ದ್ರಾವಿಡದ ಕುರ್ಖ ಭಾಷೆಗಳಲ್ಲಿ ಯಾವ ಧ್ವನಿ ಪ್ರವರ್ತನೆಯಿಲ್ಲ. ಆದರೆ ಮಧ್ಯದ್ರಾವಿಡ (ದ-ಮ.ದಾ) ಭಾಷೆಗಳಾದ ಗೊಂಡಿ ಕುವಿ ಹಾಗೂ ತೆಲುಗಿನಲ್ಲಿ 'ನ್-ಮ್'ಗಳಲ್ಲಿ ವ್ಯತ್ಯಾಸವಿದೆ. ಇಲ್ಲಿ ಒಂದು ರೀತಿಯ ಸಮಾಂಶಿಕ ನವಪ್ರವರ್ತನೆ ಪ್ರಕ್ರಿಯೆ ಧ್ವನಿವ್ಯತ್ಯಾಸಗಳಲ್ಲಿ ಕಾಣಿಸಿದೆ. ಜ್ಞಾತಿಭಾಷೆಗಳಲ್ಲೇ ಸಮಾನ ಹಂಚಿಕೆಯುಳ್ಳಂತೆ ಆಯಾ ಶಾಖೆಗಳಲ್ಲಿ ನಡೆಯುವುದರಿಂದಾಗಿ ಇದನ್ನೂ ಸಮಾಂಶಿಕವೆಂದಿದೆ. ಇಂತಹ ಸಂದರ್ಭದಲ್ಲಿ * ನೀನ್ ಅಥವಾ * ನೀಮ್ ಇವು ಪುನಾರಚಿತ ಪ್ರಾ.ದ್ರಾ. ರೂಪಗಳಾಗಿ ನಿಲ್ಲುತ್ತವೆ: ಇದಕ್ಕೆ ಧ್ವನಿಮಾ ಸ್ತರದಲ್ಲಿನ ಇನ್ನೊಂದು ನಿದರ್ಶನವನ್ನು ಹೀಗೆ ತೋರಿಸಬಹುದು.




೬. ನೋಡಿ : Krishnamurti Bh. TVB, Pon Kodanda raman and Emeneau M.B. Shortening of Basic vowels (DCP - ೧೯೭೦).

ಇಲ್ಲಿ ಕ-ಚ- ತಾಲವ್ಯೀಕರಣವು ಕೆಲವು ಧ್ವನಿಮಾ ನಿಯಂತ್ರಿತ ತತ್ತ್ವದ ಅನ್ವಯ ದಕ್ಷಿಣ ದ್ರಾವಿಡ ಭಾಷೆಗಳಲ್ಲಿ ಸಮಾನವಾಗಿ ನಡೆದಿದೆ. ಇದು ಉತ್ತರ ದ್ರಾವಿಡ ಇಲ್ಲವೆ ಮಧ್ಯ ದ್ರಾವಿಡ ಭಾಷಾ ಗುಂಪಿಗೆ ಅನ್ವಯವಾಗದಿರಬಹುದು. ಇಲ್ಲಿನ ಮತ್ತು ಚ್ ಗಳಲ್ಲಿ ಕ್ ಪುನಾರಚಿತ ಧ್ವನಿ. ಪೂರ್ವದ್ರಾವಿಡ ಧ್ವನಿಮಾವ್ಯವಸ್ಥೆಯಲ್ಲಿ ಪದಾದಿ ಘೋಷ ಧ್ವನಿಗಳು (Initial Voiced Sounds) ಇಲ್ಲದಿರುವುದೂ ಸಹ ಇವಕ್ಕೆ ಪ್ರಮಾಣವಾಗಿ ನಿಲ್ಲುತ್ತವೆ.

೨. **ಸಂವಾದಿ ನವಪ್ರವರ್ತನೆ** : ಸಂವಾದಿ ಪರಿವರ್ತನೆಗೆ ಇಲ್ಲಿ ಕೆಲವೊಂದು ಶಬ್ದಗಳಲ್ಲಿ ಕಾಣಿಸುವ ಬದಲಾವಣೆಗಳನ್ನು ಗಮನಿಸಬಹುದು. ನ್ಯೂಇಂಗ್ಲೆಂಡಿನ ಕೆಲವು ಪ್ರದೇಶಗಳಲ್ಲಿ 'Bucket' ಪದ ಬಳಕೆಯಲ್ಲಿದ್ದರೆ ಹಡ್ಸನ್ ಕಣಿವೆ ಮತ್ತು ನ್ಯೂಯಾರ್ಕ್ ಕಡೆ ಇದನ್ನೇ 'Pail' ಎನ್ನಲಾಗುತ್ತದೆ. ಇವು ಭೌಗೋಲಿಕ ಪ್ರಸರಣದಿಂದಾಗಿ ಘಟಿಸಿರಬಹುದಾದ ಸಂವಾದಿ ಪರಿವರ್ತನ ರೂಪಗಳಾಗಿವೆ.[೧೦] ಕನ್ನಡದಲ್ಲಿ ನಿಕಟ ಸಂಪರ್ಕವಿರುವ ಉಪಭಾಷೆಗಳಲ್ಲೇ ಈ ಬಗೆಯ ಸಂವಾದಿರೂಪಗಳು ಸಾಕಷ್ಟಿವೆ.[೧೧] ಉದಾ: ಕಲಬುರ್ಗಿ ಕನ್ನಡದಲ್ಲಿ 'ಮುಂಜಾನೆ' ಶಬ್ದವು ಬಿಜಾಪುರ ಕನ್ನಡದಲ್ಲಿ 'ಪರ್‍ಯಾಗ'. ನಂತರ ಬನ್ನಿ ಎಂಬ ಶಿಷ್ಟವಾಕ್ಯವು ಬೀದರ ಕಲಬುರ್ಗಿ ರಾಯಚೂರು ಉಪಭಾಷೆಗಳಲ್ಲಿ ಹಿಂದಿನಿಂದ ಅಥವಾ ಹಿಂದುಗಡೆ ಬರ್ರಿ ಎಂದಾಗುತ್ತವೆ. ಕೇವಲ ಭೌಗೋಲಿಕ ಇಲ್ಲವೆ ಉಪಭಾಷಾತ್ಮಕ ಪ್ರಸಾರದಿಂದ ಮಾತ್ರವಲ್ಲದೆ ಇಂತಹ ಸಂವಾದಿ ಪರಿವರ್ತನೆ ಸಾಮಾಜಿಕ ಭಾಷಾವ್ಯತ್ಯಾಸ ಹಾಗೂ ವೃತ್ತಿಪರ ಸಮುದಾಯಿಕ ಭಾಷೆಗಳ ಮಟ್ಟದಲ್ಲಿಯೂ ನಡೆಯಬಹುದಾಗಿದೆ. ಕನ್ನಡದ ಸಾಮಾಜಿಕ ಭಾಷಾ ಶೈಲಿಗಳ ವ್ಯಾಸಂಗದಲ್ಲಿ ವಿಲ್ಯಂಬ್ರೈಟ್, ವಿಲ್ಯಂ ಮೆಕಾರ್ಮೆಕ್, ಡಾ|| ಆರ್.ಸಿ. ಹಿರೇಮಠ, ಎ.ಕೆ. ರಾಮಾನುಜನ್, ಡಾ|| ವಿ. ಶಿವಾನಂದ ಮುಂತಾದವರು ಇಂತಹ ಸಂವಾದಿ ಪರಿವರ್ತನೆಗಳಿಗೆ ಉದಾಹರಿಸಿದ್ದಾರೆ. ಕಲಬುರ್ಗಿ ಕನ್ನಡದ ಲಿಂಗಾಯಿತರ ಭಾಷೆಯಲ್ಲಿ ಹಾನ-ಹಾಳ ಎಂಬಿವು ಅದೇ ಜಿಲ್ಲೆಯ ಬ್ರಾಹ್ಮಣರ ಭಾಷೆಯಲ್ಲಿ ಬಹುಮಟ್ಟಿಗೆ ಇದ್ದಾನ, ಇದ್ದಾಳ ಎಂದಾಗಿ ಶಿಷ್ಟರೂಪದಲ್ಲಿಯೇ ಬಳಕೆಗೊಳ್ಳುತ್ತವೆ. ಇದಕ್ಕೆ ಜಾತೀಯಶ್ರೇಣಿ ಮಾತ್ರವಲ್ಲದೆ ಶಿಕ್ಷಣ, ಆರ್ಥಿಕ ಹಿನ್ನಲೆ, ಅಂತಸ್ತು ಮುಂತಾದವುಗಳೂ ಸಹ ಕಾರಣವಾಗಿರುವುದನ್ನಿಲ್ಲಿ ಮರೆಯಲಾಗದು.

೩. **ಸ್ವತಂತ್ರ ನವೀಕರಣ** : ಯಾವುದೊಂದೂ ವ್ಯತ್ಯಾಸವಿಲ್ಲದೆ ಮೂಲದಲ್ಲಿದ್ದ ಪದವೇ ಅನಂತರದ ಭಾಷೆಗಳಲ್ಲಿ ಜ್ಞಾತಿಪದವಾಗಿ ಬಳಕೆಯಲ್ಲಿದ್ದರೆ ಅಂತಹದನ್ನೂ ಸ್ವತಂತ್ರ ನವೀಕರಣವೆನ್ನಲಾಗುತ್ತದೆ. ಉದಾಹರಣೆಗೆ ಅರಬರಿಂದ ಆವಿಷ್ಕರಣಗೊಂಡ ಆಲ್ಜಿಬ್ರಾ ಪದದಲ್ಲಿ ಯಾವುದೇ ಬಗೆಯ ಪರಿವರ್ತನೆಯಿಲ್ಲದೆ ಅದು ಸ್ವತಂತ್ರವಾಗೇ ಉಳಿದಿದೆ. ಮೂಲ

---

೧೦. ವಿಶೇಷಕ್ಕೆ Hans Kurath - 'A word Geography of Eastern united states'.

೧೧. ತೆಲುಗಿನಲ್ಲಿ ಕೃಷಿವೃತ್ತಿ ಪದಗಳಲ್ಲಿನ ಸಂವಾದಿ ಪದಗಳ ನವೀಕರಣ ಕುರಿತು ಡಾ|| ಭದ್ರಿರಾಜು ಕೃಷ್ಣಮೂರ್ತಿ ಹಾಗೂ ಕನ್ನಡದಲ್ಲಿ ಡಾ|| ವಿ. ಶಿವಾನಂದ ಈಗಾಗಲೆ ತಮ್ಮ ಅಧ್ಯಯನಗಳಲ್ಲಿ ವಿವೇಚಿಸಿದ್ದಾರೆ. Mandalika vritti pada khoshanu (ed Bh. Krishnamurthi) ಕಲಬುರ್ಗಿ ಜಿಲ್ಲೆಯ ಕೃಷಿ ವೃತ್ತಿಪದಗಳ ಭಾಷಿಕ-ಸಾಂಸ್ಕೃತಿಕ ಅಧ್ಯಯನ - ಡಾ|| ವಿ. ಶಿವಾನಂದ (1980)

ದ್ರಾವಿಡವಲ್ಲಿನ 'ನೀರ್ ಖಲ್'ಇವು ಸಂಸ್ಕೃತದಲ್ಲಿ ಸೇರಿಕೊಂಡಿದ್ದರೂ ದ್ರಾವಿಡದ ಎಲ್ಲ ಭಾಷಾ ಗುಂಪಿನಲ್ಲೂ ಮೂಲದ ರೂಪವನ್ನೂ ಉಳಿಸಿಕೊಂಡಿರುವ ಸ್ವತಂತ್ರ ನವೀಕರ ಪದಗಳಾಗಿವೆ.

**೪. ಸಾಮಾನ್ಯ ನವೀಕರಣ:** ಒಂದು ಭಾಷಾ ಕುಟುಂಬವು ಮೊದಲಿಗೆ ಅವಿಭಕ್ತವಾಗಿದ್ದ ಅನಂತರ ವಿಭಜನೆಗೊಂಡು ಬೇರೆ ಬೇರೆ ಗುಂಪು-ವರ್ಗ-ಉಪವರ್ಗಗಳಲ್ಲಿ ಹಂಚಿಹೋದಾ ಅಲ್ಲಿನ ಧ್ವನಿಮಾ, ಇಲ್ಲವೆ ಆ ಕೃತಿಮಾತ್ಮಕ ರೂಪಗಳು ಇವೆಲ್ಲ ಗುಂಪಿನಲ್ಲಿ ಸಮಾನವಾಗಿ ತೋರಿದರೆ ಅಂತಹ ರೂಪಗಳನ್ನೂ ಸಾಮಾನ್ಯ ನವೀಕರಣಗಳೆನ್ನಲಾಗುತ್ತದೆ. ಉದಾಹರಣೆ: ವೇರ್ - ಬೇರ್ ಇಲ್ಲಿನ ವ ಬ ವ್ಯತ್ಯಾಸಕ್ಕಿಂತ ಮುಖ್ಯವಾಗಿ ದ್ರಾವಿಡದ ಎಲ್ಲ ಗುಂಪಿ ಭಾಷೆಗಳಲ್ಲಿ ಅಂತರ್ ಸ್ವರಾತ್ಮಕ ಮಟ್ಟದಲ್ಲಿ ವ್-ಪ-ರ್ ಪ ಧ್ವನಿ ಹಾಗೇ ಉಳಿದಿರುವುದರಿಂ ಇಲ್ಲಿನ ನವೀಕರಣವು ಸಾಮಾನ್ಯ ಮಟ್ಟದಾಗುತ್ತದೆ. ಇವನ್ನೇ ನಾವಿಲ್ಲಿ ಪೂರ್ವ ಸ್ಥಿರೀಕರ ಇಲ್ಲವೆ ಪೂರ್ವಾಧಾರಿತ ರೂಪಗಳು (retention) ಎಂದು ಕರೆಯುತ್ತೇವೆ. ಕಂಠ್ಯಸ್ಪರ್ಶಧ್ವ ಕ್ ಕನ್ನಡದಲ್ಲಿರುವಂತೆ ಇದೇ ಧ್ವನಿಯು ಬಹುದೂರದ ಅತಿ ಪ್ರಾಚೀನ ಕಾಲದಲ್ಲೇ ಪೂರ್ವ ದ್ರಾವಿಡದಿಂದ ಪ್ರತ್ಯೇಕಗೊಂಡ ಉತ್ತರ ದ್ರಾವಿಡ ಭಾಷೆಗಳಲ್ಲಿ ಈಗಲೂ ಉಳಿದುಕೊಂಡಿದೆ ಉದಾ : ಕಿವಿ (ಕನ್ನಡ) ಖೆಬ್ದಾ (ಕುರ್ಖ್) ಕೆಲ್ವ (ಮಾಲ್ತೊ) ಖಿವ್ (ಬ್ರಾಹುಇ) ಆದರ ಕನ್ನಡಕ್ಕೆ ಭೌಗೋಲಿಕ ಸಾಮೀಪ್ಯವಿರುವ ತಮಿಳು, ಮಲೆಯಾಳಂ, ತೆಲುಗು ಭಾಷೆಗಳಲ್ಲಿ ಅದು ಸೆವಿ ಇಲ್ಲವೆ ಚೆವಿ ಎಂದು ತಾಲವ್ಯೀಕರಣಗೊಂಡಿದೆ. ಇಲ್ಲಿ ಪೂರ್ವ ದ್ರಾವಿಡದಲ್ಲಿ ಪುನಾರಚಿತ ಧ್ವನಿ ಕ್ ವಿ ನಾ ಚ್ ಗಳಲ್ಲ. ಈ ದೃಷ್ಟಿಯಿಂದ ತೌಲನಿಕ ಭಾಷಾ ಪುನಾರಚಿತ ಸಾಮಗ್ರಿಯಲ್ಲಿ ನವೀಕರಣ ಪ್ರಕ್ರಿಯೆ ಹೆಚ್ಚಿನ ಸಹಾಯಕ ಸಾಮಗ್ರಿಯಾಗಿ ನಿಲ್ಲುತ್ತದೆ. ಇದರಿಂದ ಜ್ಞಾತಿ ಭಾಷೆಗಳಲ್ಲಿನ ವ್ಯತ್ಯಾಸಗಳು ಯಾವ ಯಾವ ಬಗೆಯಲ್ಲಿ ನಡೆದಿರುವುದನ್ನೂ ಹಾಗೂ ಅವುಗಳ ಪ್ರಸರಣ (diffusion) ಮತ್ತು ಅವು ಕ್ರಮಿಸಿರುವ ಮಾರ್ಗ ಅಲ್ಲದೆ ಆ ಮಾರ್ಗಗಳಲ್ಲಿ ಕಾಣಿಸಿಕೊಳ್ಳುವ ಸೀಮಾರೇಖೆ (Isoglosses)ಗಳನ್ನು ನಾವು ನಕ್ಷೆಯಲ್ಲಿ ತರಬಹುದು.

ಒಟ್ಟಾರೆ ತೌಲನಿಕ ಭಾಷಾಧ್ಯಯನದಲ್ಲಿನ ಈ ಕೆಲವು ಪುನಾರಚನಾತ್ಮಕ ತತ್ತ್ವಗಳ ಮೇಲಿಂದ ನಾವು ಹೇಗೆ ಒಂದು ಭಾಷಾ ಕುಟುಂಬ ಇನ್ನೊಂದು ಭಾಷಾ ಕುಟುಂಬದಿಂದ ಭಿನ್ನ ಹಾಗೂ ಸ್ವತಂತ್ರವೆಂಬುದನ್ನೂ ತಿಳಿಯಬಹುದು. ಒಂದೇ ಕುಟುಂಬಕ್ಕೆ ಸೇರಿದ ಜ್ಞಾತಿ ಭಾಷೆಗಳ ತೌಲನಿಕ ಭಾಷಾ ಚರಿತ್ರೆಯನ್ನು ಇಲ್ಲವೆ ಅವುಗಳ ತೌಲನಿಕ ವ್ಯಾಕರಣಗಳನ್ನೂ ಜೊತೆಗೆ ನಿಷ್ಪತ್ತಿಪದ ಕೋಶವನ್ನು ಸಹ ರಚಿಸಲು ಇಲ್ಲಿನ ಸಾಮಗ್ರಿಯ ನೆರವು ಪಡೆಯಬಹುದು. ರಾಬರ್ಟ್ ಕಾಲ್ಡ್‌ವೆಲ್, ಟಿ. ಬರೋ‌ಎಮಿನೊರಂತಹ ವಿದ್ವಾಂಸರು ತೌಲನಿಕ ದ್ರಾವಿಡದ ಅಧ್ಯಯನ ಕ್ಷೇತ್ರದಲ್ಲಿ ಈ ಪ್ರಣಾಲಿಕೆಗಳ ಮೇಲಿಂದ ರಚಿಸಿರುವ ಕೃತಿಗಳು ಮೇರು ಕೃತಿಗಳಾಗಿ ಉಳಿದಿರುವುದು ಇಲ್ಲೇ ಉಲ್ಲೇಖನಾರ್ಹವಾಗಿದೆ.



# ಅಮರವಾಣಿ

ವಿದ್ವಾನ್ ಎನ್. ರಂಗನಾಥಶರ್ಮಾ

---

ಸಂಸ್ಕೃತ ಭಾಷೆಯನ್ನು ಅಮರವಾಣೀ, ಗೀರ್ವಾಣವಾಣಿ, ಗೈರ್ವಾಣೀ ದೇವಭಾಷೆ, ಗೀರ್ವಾಣ ಭಾಷೆ-ಎಂದು ಕರೆಯುತ್ತಾರೆ. ಈ ರೀತಿಯಲ್ಲಿ ಭಾಷೆಯೊಂದಕ್ಕೆ ದೇವಸಂಬಂಧ ವನ್ನು ಹೇಳುತ್ತಿರುವುದು ಸಂಸ್ಕೃತ ಭಾಷೆಗೆ ಮಾತ್ರ ಲೋಕದಲ್ಲಿದೆಯೆಂದು ಕಂಡುಬರುತ್ತದೆ. ದೇವಭಾಷೆಯೆಂಬ ಈ ವ್ಯವಹಾರವು ಅಂಧವಿಶ್ವಾಸವೋ ಅಭಿಮಾನಾತಿರೇಕವೋ ಅಥವಾ ಯಥಾರ್ಥವೋ ಆಗಿರಬೇಕು. ಅದನ್ನು ವಿಚಾರಮಾಡುವುದು ಈ ಪ್ರಬಂಧದ ಉದ್ದೇಶ.

ಭಾಷೆಯ ಉತ್ಪತ್ತಿಯ ವಿಷಯದಲ್ಲಿ ಸಾಮಾನ್ಯವಾಗಿ ಲೋಕಪ್ರತೀತಿ ಈ ರೀತಿ ಇರುತ್ತದೆ. ಆದಿಯಲ್ಲಿ ಮಾನವನು ಹುಟ್ಟಿದಾಗ ಮಾತು ಬರುತ್ತಿರಲಿಲ್ಲ. ಆಡಲು ಯಾವ ಭಾಷೆಯೂ ಇರಲಿಲ್ಲ. ವ್ಯವಹಾರಕ್ಕೋಸ್ಕರ ಕ್ರಮಿಕವಾಗಿ ಒಂದೊಂದು ಶಬ್ದವನ್ನು ಸೃಷ್ಟಿಸಿಕೊಂಡು ಬಳಸುತ್ತ ಹೋದನು. ಬಹುಶಃ ಮೊದಲು ನಾಮಪದಗಳ ನಿರ್ಮಾಣವಾಗಿರಬೇಕು. ಅನಂತರ ಕ್ರಿಯಾಪದ, ಅವ್ಯಯ, ವಿಭಕ್ತಿ, ಸರ್ವನಾಮ-ಮೊದಲಾದ ಶಬ್ದಗಳ ನಿರ್ಮಾಣವು ಆವಶ್ಯಕತೆಗೆ ಅನುಗುಣವಾಗಿ ಸಾಗುತ್ತ ಬಂದಿತು. ಆಮೇಲೆ ಲಿಪಿ ಹುಟ್ಟಿರಬೇಕು. ಈ ಪ್ರಕ್ರಿಯೆ ಬೇಗನೆ ಸಾಗಿದ್ದಲ್ಲ. ಲಕ್ಷಾಂತರ ವರ್ಷಗಳೇ ಕಳೆದಿವೆ. ಜಗತ್ತಿನ ಬೇರೆ ಬೇರೆ ಪ್ರದೇಶಗಳಲ್ಲಿ ಜನರ ಗುಂಪು ವಿಭಿನ್ನ ರೀತಿಯಿಂದ ಶಬ್ದಗಳನ್ನು ನಿರ್ಮಿಸಿಕೊಂಡದ್ದರಿಂದ ನಾನಾ ಭಾಷೆಗಳಾದವು. ಜನರಲ್ಲಿ

ಅನ್ಯೋನ್ಯಸಂಪರ್ಕವು ಬಂದಂತೆ ಬೇರೆಬೇರೆಭಾಷೆಯ ಶಬ್ದಗಳು ಅನ್ಯಭಾಷೆಗಳಲ್ಲಿ ಬೆರೆತಿರುವುದುಂಟು. ಹೀಗೆ ಪ್ರತಿಯೊಂದು ಭಾಷೆಯ ನಿರ್ಮಾಣವೂ ಆಗಿದೆ. ಭಾಷೆಯು ಮನುಷ್ಯ ಸೃಷ್ಟಿಯೇ ಹೊರತು ದೇವಸೃಷ್ಟಿಯಲ್ಲ. ಭಾಷಾಶಾಸ್ತ್ರಜ್ಞರು ಈ ಲೋಕಪ್ರತೀತಿ ಯನ್ನು ಆಳವಾಗಿ ವಿಚಾರಮಾಡಿದ್ದಾರೆ. ಅವರಲ್ಲಿ ಅನೇಕ ಮತಭೇದಗಳಿದ್ದರೂ ಭಾಷೆಯ ಉತ್ಪತ್ತಿಯ ವಿಚಾರದಲ್ಲಿ 'ಸಮನ್ವಿತ ವಿಕಾಸವಾದ' (Evolution Theory) ಎಂಬುದೇ ಬಹುಸಂಮತ ಸಿದ್ಧಾಂತವಾಗಿ ನಿಂತಿದೆ.

ತುಲನಾತ್ಮಕವಾದ ಭಾಷೆಗಳ ಅಧ್ಯಯನಕ್ಕಾಗಿ ಭಾಷಾಶಾಸ್ತ್ರಜ್ಞರು ಗ್ರಿಮ್ ನಿಯಮ, ಗ್ರಾಸ್‌ಮನ್‌ನಿಯಮ, ವರ್ನರ್ ನಿಯಮ- ಮುಂತಾದ ನಿಯಮಗಳನ್ನು ರಚಿಸಿಕೊಂಡು ಶಬ್ದಗಳು ಹೇಗೆ ಪರಿವರ್ತನೆಗೊಂಡು ಭಾಷಾಂತರದಲ್ಲಿ ಸೇರಿಕೊಳ್ಳುತ್ತವೆಯೆಂಬುದನ್ನು ಪರೀಕ್ಷಿಸಿದ್ದಾರೆ. ಶಬ್ದಗಳ ಸಮಾನತೆ, ಭಾಷಾರಚನೆಯ ಸಮಾನತೆ-ಮುಂತಾದ ಮುಖ್ಯ ಆಧಾರಗಳನ್ನವಲಂಬಿಸಿ ಇಂಡೋಯುರೋಪಿಯನ್, ಸೆಮೆಟಿಕ್, ಕಕೇಶಿಯನ್, ದ್ರವಿಡಿಯನ್ -ಮಂತಾದ ಭಾಷಾಕುಟುಂಬಗಳನ್ನು ವರ್ಗೀಕರಿಸಿದ್ದಾರೆ. ಈ ಕುಟುಂಬಗಳ ಸಂಖ್ಯೆ ೪೦ಕ್ಕೂ ಹೆಚ್ಚಾಗಿದೆಯೆಂದು ಹೇಳುತ್ತಾರೆ. ಒಂದೊಂದು ಕುಟುಂಬಕ್ಕೆ ಒಂದೊಂದು ಮೂಲಭಾಷೆ ಇತ್ತೆಂಬುದೇ ಈ ವರ್ಗೀಕರಣದ ಸಾರಾಂಶ. ಜಗತ್ತಿನಲ್ಲಿ ಸ್ವತಂತ್ರವಾಗಿ ಹುಟ್ಟಿ ಬೆಳೆದ ಮೂಲ ಭಾಷೆಗಳು ಕೆಲವು ಮಾತ್ರ. ಅವುಗಳೇ ದೇಶಭೇದ, ಕಾಲಭೇದ, ರಾಜಕೀಯ ಪರಿಸ್ಥಿತಿ, ಅನ್ಯಜನ ಸಂಪರ್ಕ-ಮುಂತಾದ ಕಾರಣಗಳಿಂದ ಅನಂತಭಾಷೆಗಳಾಗಿ ಮಾರ್ಪಟ್ಟವು ಎಂದು ತಾತ್ಪರ್ಯ.

ಪ್ರಕೃತ ವಿಚಾರಮಾಡಬೇಕಾದದ್ದು ಸಂಸ್ಕೃತ ಭಾಷೆಗೆ ಸಂಬಂಧಿಸಿದ ವಿಷಯ. ಸಂಸ್ಕೃತ ಭಾಷೆಯು ಈ ಭಾಷಾ ಶಾಸ್ತ್ರಜ್ಞರ ಪ್ರಕಾರ ಇಂಡೋಯುರೋಪಿಯನ್ ಎಂಬ ಭಾಷಾ ಕುಟುಂಬಕ್ಕೆ ಸೇರುತ್ತದೆ. ಈ ಕುಟುಂಬದಲ್ಲಿಯೂ ಸಹ ಇಂಡೋಇರಾನಿಯನ್ ಎಂಬ ಇನ್ನೊಂದು ಒಳಭೇದವಿದೆ. ಸಂಸ್ಕೃತವೂ ಸೇರಿದಂತೆ ಈ ಕುಟುಂಬವರ್ಗದ ಎಲ್ಲ ಭಾಷೆಗಳಿಗೂ ಮೂಲಭೂತವಾದ ಇನ್ನೊಂದು ಭಾಷೆ ಇತ್ತು. ಅದನ್ನು ಇಂಡೋಯುರೋಪಿಯನ್ ಮೂಲಭಾಷೆ ಎನ್ನುತ್ತಾರೆ. ಅದು ಈಗ ಎಲ್ಲಿಯೂ ಬಳಕೆಯಲ್ಲಿಲ್ಲ. ಸಂಸ್ಕೃತವು ಈ ಭಾಷಾವರ್ಗದಲ್ಲಿ ಪ್ರಾಚೀನತಮವಾದದ್ದು. ಆದರೆ ಅದಕ್ಕೆ ಮಾತೃಸ್ಥಾನವಿಲ್ಲ. ಏನಿದ್ದರೂ ಹಿರಿಯ ಅಕ್ಕನ ಸ್ಥಾನ. ಇದಿಷ್ಟು ನಮಗೆ ಹಿನ್ನಲೆಯಲ್ಲಿ ಬೇಕಾದ ವಿಚಾರ. ವಿಚಾರವು ತಾರ್ಕಿಕ ಬುದ್ಧಿಯಿಂದ ನಡೆಯುತ್ತದೆ. ಮನುಷ್ಯನ ತಾರ್ಕಿಕ ಬುದ್ಧಿಯು ಒಂದಾನೊಂದು ಶ್ರದ್ಧೆಯನ್ನು ವಿಶ್ಲೇಷಿಸಿ ಪರೀಕ್ಷಿಸಿ ತನ್ನ ಒಂದು ನಿರ್ಣಯವನ್ನು ಮಂಡಿಸುತ್ತದೆ. ಈ ನಿರ್ಣಯವೇ ಕಾಲಾಂತರದಲ್ಲಿ ಶ್ರದ್ಧೆಯಾಗಿ ಪರಿಣಮಿಸುತ್ತದೆ. ಹೊಸವಿಚಾರಕ್ಕೆ ಒಳಪಡಿಸದ ಶ್ರದ್ಧೆಯ ವಿಶ್ವಾಸ ನಂಬಿಕೆ. ಈ ನಂಬಿಕೆಯು ತರ್ಕದಿಂದಲೇ ಮೂಡಿಬಂದದ್ದು. ಅದಕ್ಕೆ ಸ್ವಕೀಯ ಅನುಭವವೂ ಸೇರಿರಬಹುದು. ಯಾವಾಗ ನೂತನ

ವಿಚಾರಗಳಿಂದ ಈ ಶ್ರದ್ಧಾಸ್ತಂಭವು ಅಲ್ಲಾಡಿಹೋಗುತ್ತದೆಯೋ ಆಗ ಅದನ್ನು ಅಂಧಶ್ರದ್ಧೆ-ಕುರುಡು ನಂಬಿಕೆ ಎಂದು ಕರೆಯಲಾರಂಭಿಸುತ್ತಾರೆ. ಆದರೆ ಅಲ್ಲಾಡಿದ ಶ್ರದ್ಧಾಸ್ತಂಭವನ್ನೂ ಇನ್ನೊಂದು ತಾರ್ಕಿಕ ಬುದ್ಧಿಯು ಬಿಗಿಗೊಳಿಸಿ ಸ್ವಸ್ಥಾನದಲ್ಲಿ ಪ್ರತಿಷ್ಠಾಪನೆ ಮಾಡಬಹುದು. ಅಂಧಶ್ರದ್ಧೆಯೆಂದು ಯಾವುದನ್ನು ನಾವು ಹೆಸರಿಸುತ್ತೇವೋ ಅದು ಸ್ವತಃ ಹುಟ್ಟಿಕೊಂಡದ್ದಲ್ಲ. ಅದರ ಹಿಂದೆ ತರ್ಕಬುದ್ಧಿ ಕೆಲಸಮಾಡಿಯೇ ಇರುತ್ತದೆ. ಆ ತರ್ಕವು ಅಪೂರ್ಣವಾಗಿರಬಹುದು ಅಥವಾ ದೋಷಗ್ರಸ್ತವಾಗಿರಬಹುದು. ಅಂಧಶ್ರದ್ಧೆಯನ್ನು ಖಂಡಿಸಿ ನಿರಾಕರಿಸುವುದರಿಂದ ಪುರಸ್ಕಾರಗೊಂಡ ಹೊಸನಿರ್ಣಯವು ಕಾಲಾಂತರದಲ್ಲಿ ತನ್ನ ಮೌಲ್ಯವನ್ನು ಕಳೆದುಕೊಂಡು ಅಂಧಶ್ರದ್ಧೆಯೇ ಆಗಿ ಪರಿಣಮಿಸಿದರೆ ಅಚ್ಚರಿಯಿಲ್ಲ.

ಸಂಸ್ಕೃತ ಭಾಷೆ ಅತ್ಯಂತ ಪ್ರಾಚೀನವಾದ ಭಾಷೆ. ವೇದಗಳಿಗಿಂತಲೂ ಹಳೆಯದಾದ ಯಾವ ಸಾಹಿತ್ಯವು ಜಗತ್ತಿನಲ್ಲಿ ದೊರಕಿಲ್ಲ-ಎಂಬ ವಿಷಯವಾಗಿ ಯಾವ ವಿದ್ವಾಂಸರಲ್ಲಿಯೂ ವಿವಾದವಿಲ್ಲ. ಈ ಭಾಷೆಯು ಪುಷ್ಕಳವಾದ ಶಬ್ದಸಂಪತ್ತಿನಿಂದಲೂ ಅನ್ಯಭಾಷೆಗಳಲ್ಲೆಲ್ಲಿಯೂ ಕಾಣಸಿಗದ ಪ್ರಕ್ರಿಯಾವಿಶೇಷ ಸಾಧ್ಯಶಬ್ದರೂಪಗಳಿಂಥಲೂ ಕೂಡಿ ಕೌತುಕಾಸ್ಪದವೆನಿಸಿದೆ. ಮನುಷ್ಯ, ಮೃಗ, ಪಶು, ಪಕ್ಷಿ, ಕ್ರಿಮಿ, ಕೀಟಾದಿಗಳಿಂದ ಸಹಿತವಾಗಿ ಸ್ಥಾವರ ಜಂಗಮಾತ್ಮಕವಾದ ಜಗತ್ತಿನ ಅರ್ಥಪ್ರಪಂಚವು ಎಷ್ಟು ದೊಡ್ಡದೂ ಎಷ್ಟು ವಿಸ್ಮಯಜನಕವೋ ಅಷ್ಟೇ ದೊಡ್ಡದೂ ವಿಸ್ಮಯ ಜನಕವೂ ಆದದ್ದು ಸಂಸ್ಕೃತದ ಶಬ್ದ ಪ್ರಪಂಚ. ಇದನ್ನು ಯಾರು ನಿರ್ಮಿಸಿರಬಹುದು-ಎಂಬುದೀಗ ಪರಿಶೀಲನೀಯ. ಜಗತ್ತಿನ ಸೃಷ್ಟಿ ಹೇಗಾಯಿತು, ಏಕೆ ಆಯಿತು ?- ಎಂದು ನಿರ್ಧರಿಸುವುದು ಹೇಗೆ ಮಾನವಬುದ್ಧಿಗೆ ಅಶಕ್ಯವೋ ಹಾಗೆಯೇ ಸಂಸ್ಕೃತಭಾಷೆಯ ಉದ್ಗಮದ ನಿರ್ಧಾರಣೆ.

ಪಾಶ್ಚಾತ್ಯ ಭಾಷಾಶಾಸ್ತ್ರಜ್ಞರು ಸಂಸ್ಕೃತಕ್ಕೆ ಮೂಲವಾದ 'ಇಂಡೋಯುರೋಪಿಯನ್' ಎಂಬ ಇನ್ನೊಂದು ಭಾಷೆ ಇತ್ತೆಂದು ಕಲ್ಪಿಸಿದ್ದಾರೆ. ಅದಕ್ಕಾಗಿ ಅವರು ತೋರಿಸುವ ಕಾರಣಗಳು ಪೂರ್ವಗ್ರಹದೂಷಿತಗಳು. ಕೆಲವಂತೂ ನಿರಾಧಾರವೂ ಹಾಸ್ಯಸ್ಪದವೂ ಆದವುಗಳೆಂದು ಡಾ|| ಎಸ್.ಆರ್. ವರ್ಹಾಡಪಾಂಡೆ ಎಂಬ ಘನವಿದ್ವಾಂಸರು 'Aryan Invasion - A Myth' ಎಂಬ ಪ್ರೌಢಗ್ರಂಥದಲ್ಲಿ ವಿವರವಾಗಿ ತೋರಿಸಿಕೊಟ್ಟಿದ್ದಾರೆ. ಆರ್ಯರೆಂಬವರು ಭಾರತದೊಳಗೆ ವಲಸೆ ಬಂದರು ಅಥವಾ ಆಕ್ರಮಿಸಿದರು ಎಂಬ ವಾದವನ್ನು ಇನ್ನೂ ಹಲವಾರು ಸಂಶೋಧಕರು ಬುಡಮಟ್ಟವಾಗಿ ಖಂಡಿಸಿದ್ದಾರೆ. ಹೀಗೆ ಆರ್ಯರು ಭಾರತಕ್ಕೆ ಬಂದರೆಂಬ ವಾದವೇ ನಿರ್ಮೂಲವಾದಾಗ ಅವರು ಮೊದಲು ಆಡುತ್ತಿದ್ದರೆಂದು ಕಲ್ಪಿಸಿರುವ 'ಇಂಡೋಯುರೋಪಿಯನ್' ಎಂಬ ಭಾಷೆ ಕನಸಿನ ಗಂಟಾಗಿ ನಿಲ್ಲುತ್ತದೆ.

ಮೊದಲು ಭಾಷಾಶಾಸ್ತ್ರದಲ್ಲಿ ವಿಶೇಷವಾಗಿ ಪರಿಶೋಧನೆಯನ್ನು ಮಾಡಿದವರು ಜರ್ಮನ್ ವಿದ್ವಾಂಸರು. ಅನಂತರ ಇನ್ನಿತರ ಪಾಶ್ಚಾತ್ಯವಿದ್ವಾಂಸರೂ ಈ ಶಾಸ್ತ್ರದಲ್ಲಿ

ಗಣನೀಯವಾದ ಶೋಧನೆಗಳನ್ನು ಮಾಡಿದ್ದಾರೆ. ಈ ವಿದ್ವಾಂಸರ ಗಾಢವಾದ ಅಧ್ಯಯನವನ್ನೂ ಪರಿಶ್ರಮವನ್ನೂ ಪಾಂಡಿತ್ಯವನ್ನೂ ಅಲ್ಲಗಳೆಯುವುದು ಸರ್ವಥಾ ನಮ್ಮ ಉದ್ದೇಶವಲ್ಲ. ಅವರ ಸಾಧನೆ ಪ್ರಶಂಸನೀಯವಾದದ್ದು. ಅವರಿಗೆ ಸಂಸ್ಕೃತಭಾಷೆಯ ಪ್ರಥಮ ಪರಿಚಯವಾದಾಗ ಯುರೋಪಿನ ಭಾಷೆಗಳ ಶಬ್ದಗಳಿಗೂ ಸಂಸ್ಕೃತ ಶಬ್ದಗಳಿಗೂ ನಿಕಟವಾದ ಸಾದೃಶ್ಯವಿರುವುದೂ ತಮ್ಮ ಭಾಷಾಶಬ್ದಗಳಿಗೆ ಮೂಲವಾಗಿರುವ ನೂರಾರು ಸಂಸ್ಕೃತ ಶಬ್ದಗಳು ಲಭ್ಯವಾಗಿರುವುದೂ ಗೋಚರಿಸಿದಾಗ, ಈ ಪಂಡಿತರಿಗೆ ಹೇಳಲಾರದ ಅಚ್ಚರಿಯಾಯಿತು. ತಮ್ಮ ಭಾಷೆಗಳಿಗಿಂತ ವೈದಿಕ ಸಂಸ್ಕೃತವು ತುಂಬ ಪ್ರಾಚೀನವಾದದ್ದೆಂಬುದನ್ನು ಅಲ್ಲಗಳೆಯಲು ಶಕ್ಯವಾಗದೇ ಹೋದ್ದರಿಂದ ವಿಷಾದವೂ ಆಯಿತು! ಏಕೆಂದರೆ, ಅವರ ದೃಷ್ಟಿಯಲ್ಲಿ 'ಅನಾಗರಿಕರೂ ಅಸಭ್ಯರ' ಮೂರ್ತಿಪೂಜಕರೂ, ಆದ ಭಾರತೀಯರ ಭಾಷೆ ತಮ್ಮ ಭಾಷೆಗಳಿಗೆ ಮೂಲವೆಂಬುದನ್ನು ಭಾರತದ ಶಾಸ್ತ್ರ, ಕಲೆ-ಮೊದಲಾದವುಗಳಿಂದ ತಮ್ಮ ಚಿಂತನಗಳು ಪ್ರಭಾವಿತವಾಗಿವೆ ಎಂಬುದನ್ನೂ ಒಪ್ಪಿಕೊಳ್ಳಲು ಅಹಂಭಾವದಿಂದ ತುಂಬಿದ ಅವರ ಹೃದಯಾಂತರಾಳವು ಒಪ್ಪಿಕೊಳ್ಳಲಿಲ್ಲ. ಈ ಸಂಗತಿಗಳೆಲ್ಲವೂ ಮಾಕ್ಸಮುಲ್ಲರ್ ಪಂಡಿತನು ತನ್ನ ಪತ್ನಿಗೆ ಬರೆದ ಪತ್ರದಿಂದಲೂ ವೇಬರ್, ಕಾಲ್ಡ್‌ವೆಲ್ ಮೊದಲಾದವರ ಹೇಳಿಕೆಗಳಿಂದಲೂ ಸ್ಫುಟವಾಗಿದೆ. ಅದನ್ನೆಲ್ಲ ವಿಸ್ತರಿಸುವುದಕ್ಕೆ ಇದು ಸ್ಥಳವಲ್ಲ. ಒಟ್ಟಿನಲ್ಲಿ ಇವರು ಸಂಸ್ಕೃತಕ್ಕೂ ಮೂಲವಾದ 'ಇಂಡೋ ಯುರೋಪಿಯನ್' ಎಂಬ ಒಂದು ಭಾಷೆ ಇತ್ತೆಂದು ಕಲ್ಪಿಸಿ, ಈ ಭಾಷೆಯನ್ನಾಡುತ್ತಿದ್ದ ಆರ್ಯರೆಂಬವರ ಒಂದು ತಂಡ ಭಾರತಕ್ಕೆ ಹೋಯಿತೆಂದೂ ಇನ್ನೊಂದು ತಂಡ ಪರ್ಷಿಯಾ, ಯುರೋಪ್‌ಗಳನ್ನು ಪ್ರವೇಶಿಸಿತೆಂದೂ ಕಲ್ಪಿಸಿದ್ದಾರೆ. ಈ ವಾದವು ಹುರುಳಿಲ್ಲದ್ದೆಂದು ಆಧುನಿಕರಾದ ಕೆಲವು ಪಾಶ್ಚಾತ್ಯ ವಿದ್ವಾಂಸರೂ ಭಾರತೀಯ ವಿದ್ವಾಂಸರೂ ಪುರಾವೆಗಳಿಂದ ಸಮರ್ಥಿಸಿದ್ದಾರೆ. ಇಷ್ಟಾದರೂ ಈ ವಾದ ಇನ್ನೂ ನಮ್ಮಲ್ಲಿ ಜೀವಂತವಾಗಿ ಉಳಿದಿದೆಯೆಂಬುದು ಶೋಚನೀಯ. ಅಂತೂ ಅಸೂಯೆ, ದುರಭಿಮಾನಗಳಿಂದ ಚೋದಿತವಾದ ವಾದವು ಸತ್ಯಾನ್ವೇಷಣೆಯ ಮಾರ್ಗವಲ್ಲ. ಅವರು ಕಲ್ಪಿಸಿದ 'ಇಂಡೋಯುರೋಪಿಯನ್' ಎಂಬ ಭಾಷೆ ಇತ್ತೆಂಬುದಕ್ಕೆ ಯಾವ ಆಧಾರವೂ ಇಲ್ಲ. ಅದರ ಯಾವುದೇ ಒಂದು ವಾಕ್ಯವೂ ಉಪಲಬ್ಧವಿಲ್ಲ. ಅವರು ಊಹೆಯಿಂದ ಹುಟ್ಟಿಹಾಕಿದ ಒಂದೇ ಒಂದು ಶಬ್ದವೂ ಯಾವ ಭಾಷೆಯಲ್ಲಿಯೂ ಉಳಿದುಕೊಂಡಿಲ್ಲ. ಭಾಷಾಶಾಸ್ತ್ರದವರ ಈ ಕಲ್ಪನಾವೈಖರಿಯನ್ನು ಅನೇಕ ವಿದ್ವಾಂಸರು ಖಂಡಿಸಿಯೇ ಇದ್ದಾರೆ. ಕೌತುಕಾಸ್ಪದವಾದ ಈ ಊಹಾಶಿಶು 'ಇಂಡೋಯುರೋಪಿಯನ್' ಶಬ್ದಗಳು ಹೇಗಿರುತ್ತವೆಯೆಂಬುದಕ್ಕೆ ಕೆಲವೇ ನಿದರ್ಶನಗಳನ್ನು ಇಲ್ಲಿ ಕೊಡಬಹುದು.

| ಮೂಲಭಾಷೆ ಇಂಡೋಯುರೋಪಿಯನ್ | - | ಸಂಸ್ಕೃತ |
|---|---|---|
| 1. ಕ್ವೇ | | ಚ |
| ಕುಕಿಸ್ | | ಶುಚಿಃ |
| ಕ್ವೊತೆರೊಸ್ | | ಕತರಃ |
| ಡೆಕ್ಮೆ | | ದಶ |
| ಕೈಟೋಮ್ | | ಶತಮ್ |

ಈ ಕಲ್ಪಿತಭಾಷೆಯಿಂದ ಸಂಸ್ಕೃತಭಾಷಾವರ್ಗದಲ್ಲಿಯೂ ಯೂರೋಪ್ ಭಾಷಾವರ್ಗದಲ್ಲಿಯೂ ಹೇಗೆ ವರ್ಣವ್ಯತ್ಯಯವಾಗುತ್ತದೆಯೆಂಬುದನ್ನು ತೋರಿಸುವುದಕ್ಕಾಗಿ ಅತ್ಯಂತಪರಿಶ್ರಮದಿಂದ ಅಸಂಖ್ಯಾತನಿಯಮಗಳನ್ನು ಕಲ್ಪಿಸಿಕೊಂಡಿದ್ದಾರೆ. ಇವೆಲ್ಲವೂ ಉತ್ಸರ್ಗಾಪವಾದಗಳಿಂದ ಕೂಡಿದ್ದು ಮತ್ತೆ ಬಹುಸ್ಥಳಗಳಲ್ಲಿ ವ್ಯಭಿಚರಿತವಾಗುತ್ತವೆ. ಅವರು ತಮ್ಮ ಹಠವನ್ನು ಬಿಟ್ಟು ಸಂಸ್ಕೃತದಿಂದಲೇ ಆ ಭಾಷೆಗಳೆಲ್ಲವೂ ಹುಟ್ಟಿವೆಯೆಂದು ಒಪ್ಪಿಕೊಂಡಿದ್ದರೆ, ಅವರ ಪರಿಶ್ರಮ ತುಂಬ ಕಡಿಮೆಯಾಗುತ್ತಿತ್ತು.

## ಭಾಷೆಯ ಉದ್ಗಮ

ಆದಿಮಾನವನು ಭಾಷೆಯನ್ನು ಹೇಗೆ ನಿರ್ಮಿಸಿಕೊಂಡನೆಂಬುದನ್ನು ಭಾಷಾಶಾಸ್ತ್ರಜ್ಞರೂ ಸಹ ಉತ್ತರಿಸಲಾರದೆ ಹೋಗಿದ್ದಾರೆ. ತಮ್ಮ ಕೆಲವು ಧ್ಯೇಯೋದ್ದೇಶಗಳನ್ನು ಸಾಧಿಸಿಕೊಳ್ಳುವುದಕ್ಕಾಗಿ ಜನರು ಸಂಘ ಸಂಸ್ಥೆಗಳನ್ನು ನಿರ್ಮಿಸಿಕೊಳ್ಳುವಂತೆ, ವ್ಯವಹಾರ ಪ್ರಯೋಜನಕ್ಕಾಗಿ ಭಾಷೆಯನ್ನು ನಿರ್ಮಿಸಿಕೊಂಡರೇ ? ಭಾಷೆಯೇ ಬರದಿದ್ದ ಕಾಲದಲ್ಲಿ ಪಶುಗಳಂತೆ ವರ್ತಿಸುತ್ತಿದ್ದ ಮೂಕರಿಗೆ ಭಾಷೆಯ ಕಲ್ಪನೆ ಬರುವುದಾದರೂ ಹೇಗೆ ?ಒಂದೆಡೆ ಅವರು ಗುಂಪಾಗಿ ಸೇರುವುದು ಹೇಗೆ ? ಸೇರಿಸತಕ್ಕವರು ಯಾರು ? ಇದೆಲ್ಲವೂ ಅಸಂಭಾವಿತವೇ ಸರಿ. ಲೋಕದಲ್ಲಿರುವ ಅಸಂಖ್ಯಾತ ಭಾಷೆಗಳಿಗೆ ಮೂಲಭಾಷೆಗಳೆಂದು ವರ್ಗೀಕರಿಸಿ, ಕೆಲವೇ ಭಾಷೆಗಳನ್ನು ಆದಿಭಾಷೆಗಳೆಂದು ವಿಂಗಡಿಸಬಹುದು. ಆದರೆ ಅವುಗಳು ಹುಟ್ಟಿದ್ದು ಹೇಗೆಂಬುದನ್ನು ಯಾರೂ ನಿರ್ಧರಿಸಲಾರದೆ ಹೋಗಿದ್ದಾರೆ. ಅನಿವಾರ್ಯವಾದ ಆದಿಸಂಕೇತಗಳಾಗಿ ಕೆಲವೇ ಶಬ್ದಗಳು ಹುಟ್ಟಿ ಅನಂತರ ಉಳಿದ ಶಬ್ದಗಳು ಕ್ರಮವಾಗಿ ಹುಟ್ಟುತ್ತಾ ಹೋಗಿರಬೇಕೆಂದು ತರ್ಕಿಸಬೇಕಾಗಿದೆ. ನಾಮಪದ, ಕ್ರಿಯಾಪದ, ಅವ್ಯಯಗಳಲ್ಲಿ ಯಾವುದೋ ಒಂದು ಮೊದಲು ಹುಟ್ಟಿರಬಹುದು ಅಥವಾ ಜೊತೆಜೊತೆಯಾಗಿ ಹುಟ್ಟುತ್ತಾ ಹೋಗಿರಬಹುದೆಂದು ಸಾಮಾನ್ಯರೀತಿಯಲ್ಲಿ ಊಹಿಸಬೇಕಾಗಿದೆ. ಈ ಊಹೆಯು ಅನೇಕವಾದಗಳಿಗೆ ಎಡೆಕೊಟ್ಟಿದೆ. ಹಿಂದೆ ಹೇಳಿದಂತೆ ಸಮನ್ವಿತ ವಿಕಾಸವಾದವು. (Evolution Theory) ಬಹುಜನರ ಅಂಗೀಕಾರವನ್ನು ಪಡೆದಿದೆ. ಅನ್ಯೋನ್ಯಸಂಪರ್ಕವು ಇಲ್ಲದಿದ್ದ ಅತಿ

ಪ್ರಾಚೀನ ಕಾಲದಲ್ಲಿ ಬಹುದೂರದೇಶಗಳಲ್ಲಿ, ದ್ವೀಪಾಂತರಗಳಲ್ಲಿ, ಖಂಡಾಂತರಗಳಲ್ಲಿ, ಅರಣ್ಯಪ್ರಾಯವಾದ ದೇಶಗಳಲ್ಲಿ ನೆಲೆಸಿದ್ದ ಮಾನವರಲ್ಲಿ ಭಾಷೆಯ ಕಲ್ಪನೆ ಮೂಡಿದ್ದು ಸಹ ಅದ್ಭುತವಾಗಿಯೇ ಕಾಣಿಸುತ್ತದೆ. ಎಷ್ಟೆಷ್ಟು ಆಲೋಚಿಸಿದರೂ ಸಹ ನೆಲೆಗಾಣದೆ ಬುದ್ಧಿಯು ಮಂಕಾಗಿ ಹೋಗುವುದರಿಂದ, ಬೇರೆ ದಾರಿ ತೋರದೆ, ಮನಃಶಾಂತಿಗಾಗಿ ವಿಕಾಸವಾದಕ್ಕೆ ಶರಣಾಗಬೇಕಾಯಿತು. ವಿಶ್ವದ ಉತ್ಪತ್ತಿಗೆ ಡಾರ್ವಿನ್ ಮಹಾಶಯನು ಒಂದು ಕ್ರಮವನ್ನು ನಿರೂಪಿಸಿದ್ದಾನೆ. ಸಾಲುಮೆಟ್ಟಿಲುಗಳಿರುವುದರಿಂದ ಮೆಲ್ಲಗೆ ಏರುತ್ತಾ ಹೋಗಿ ಮಹಡಿಯನ್ನು ಮುಟ್ಟಬಹುದು. ಜಗತ್ತಿನ ಸ್ಥಾವರ ಜಂಗಮಗಳ ಪರಿಸ್ಥಿತಿ ಏಕರೀತಿಯ ಕ್ರಮ ನಿರೂಪಣೆಗೆ ಒಳಪಡುತ್ತದೆ. ಭಾಷೆಯ ಹುಟ್ಟುವಿಕಾಸಗಳು ಏಕರೂಪತೆಗೆ ಒಳಪಡುವುದೇ ಇಲ್ಲ. ಸಾಲುಮೆಟ್ಟಿಲುಗಳನ್ನು ಕಲ್ಪಿಸುವುದು ಸಾಧ್ಯವಾಗದೇ ಹೋಗಿದೆ. ಅರ್ಥಪ್ರಪಂಚಕ್ಕಿಂತ ಶಬ್ದಪ್ರಪಂಚವೇ ತುಂಬ ತೊಡಕಿನದಾಗಿದೆ.

ವಾಸ್ತವವಾಗಿ ವಿಕಾಸವಾದವು ಸಾಂಖ್ಯಸಿದ್ಧಾಂತವಾದ ಜಡಪ್ರಕೃತಿವಾದದ ವೈಜ್ಞಾನಿಕ ವಿವರಣೆಯಾಗಿದೆ. ಇವೆರಡು ಸಿದ್ಧಾಂತಗಳಲ್ಲಿ ಮೌಲಿಕವಾದ ಭೇದವಿಲ್ಲ. ಜಡದಿಂದ ಎಂದಿಗೂ ಚೇತನವು ಜನಿಸುವುದಿಲ್ಲವೆಂದು ಸಾಂಖ್ಯರು ಚೇತನರಾದ ಜೀವರನ್ನು ಪ್ರಕೃತಿಗೆ ಅತಿರಿಕ್ತರನ್ನಾಗಿ ಸ್ವೀಕರಿಸಿದರು. ಸರ್ವನಿಯಾಮಕವಾದ ಒಂದು ಮಹಾಚೈತನ್ಯವಿಲ್ಲದೆ ಜಡಪ್ರಕೃತಿಯು ಎಂದಿಗೂ ನಿಯಮಬದ್ಧವಾಗಿ ಕೆಲಸಮಾಡುವುದಿಲ್ಲವೆಂದು ವಿಜ್ಞಾನಭಿಕ್ಷು ಈಶ್ವರನನ್ನು ಅಂಗೀಕರಿಸಿ, ಸೇಶ್ವರಸಾಂಖ್ಯ ಸಿದ್ಧಾಂತವನ್ನು ಸ್ಥಾಪಿಸಿದನು. ಈಶ್ವರನ ಅಸ್ತಿತ್ವವು ಮೌಢ್ಯದಿಂದ ಬಂದ ನಂಬಿಕೆಯಲ್ಲ. ತೀವ್ರವಾದ ತರ್ಕದಿಂದಲೇ ಭಾರತೀಯ ದಾರ್ಶನಿಕರು ಈಶ್ವರನ ಅಸ್ತಿತ್ವವನ್ನು ಒಪ್ಪಿದ್ದಾರೆ.

ಮಾನವನ ತಾರ್ಕಿಕಬುದ್ಧಿ ಯಾವುದಕ್ಕೂ ಜಗ್ಗುವುದಿಲ್ಲ. ಆತ್ಮಪ್ರತ್ಯಯವಿಲ್ಲದಿದ್ದರೂ ತನ್ನ ವಾದವನ್ನು ಬಿಟ್ಟುಗೊಡದೆ ಮುಂದುವರಿಸುತ್ತಲೇ ಹೋಗುತ್ತದೆ. ಮಾನವ ಪ್ರಕೃತಿಯು ತನ್ನ ಸ್ವಭಾವ ಬಲದಿಂದ ಲಕ್ಷಲಕ್ಷ ವರ್ಷಗಳಲ್ಲಿ ನಾನಾ ಭಾಷೆಗಳನ್ನು ರೂಪಿಸಿಕೊಂಡಿದೆಯೆಂಬ ನಿಲುವನ್ನು ಅದು ಬಿಟ್ಟುಕೊಡುವುದಿಲ್ಲ. 'ಸತಮ್ ಭಾಷಾಕುಟುಂಬಕ್ಕೆ ಸೇರಿದ ಸಂಸ್ಕೃತದ 'ಶ್ವನ್ ಶಬ್ದವು (ನಾಯಿ), 'ಕೆಂಟುಂ'. ಕುಟುಂಬದ ಗ್ರೀಕ್‌ನಲ್ಲಿ 'ಕ್ಯುಓನ್ ಆಯಿತೆಂದು ಭಾಷಾಶಾಸ್ತ್ರಿಗಳು ಹೇಳುತ್ತಾರೆ. ಇವೆರಡು ಕುಟುಂಬಗಳಿಗೂ ಭಿನ್ನವಾದ ದ್ರಾವಿಡ ಭಾಷೆ ಕನ್ನಡದಲ್ಲಿರುವ 'ಕುನ್ನಿ' ಎಂಬುದಕ್ಕೂ 'ಕ್ಯುಓನ್ ಎಂಬ ಗ್ರೀಕ್‌ಪದಕ್ಕೂ ಹೇಗೆ ಸಾದೃಶ್ಯವೆಂದು ಕೇಳಿದರೆ, ಕನ್ನಡಿಗರಿಗೂ ಗ್ರೀಕರಿಗೂ ಸಂಪರ್ಕವಿತ್ತೆಂದು ಉತ್ತರಿಸಲಾದೀತು. ಇಂಗ್ಲಿಷಿನ 'ಕಿಲ್'ಗೂ ಕನ್ನಡದ 'ಕೊಲ್'ಎಂಬುದಕ್ಕೂ ಸಾದೃಶ್ಯ ಹೇಗೆಂದು ಕೇಳಿದರೆ, ಅದು ಕಾಕತಾಳೀಯವೆಂದು ಉತ್ತರಿಸಲು ಅಡ್ಡಿ ಏನಿದೆ? ಒಟ್ಟಿನಲ್ಲಿ ಭಾಷೆಯ ಉದ್ಗಮ ಹೇಗಾಯಿತೆಂಬುದನ್ನು ಸಮರ್ಪಕವಾಗಿ ವಿವರಿಸಲಾರದೆ, ತಮ್ಮ ಸಾಮರ್ಥ್ಯವನ್ನು ಪ್ರಕಾರಾಂತರದಿಂದ ಒಪ್ಪಿಕೊಂಡಿದ್ದಾರೆ.

## ಭಾಷೆಯ ಸ್ವರೂಪ

'ಭಾಷಣಾದ್ ಭಾಷಾ'. ಬಾಯಿಯಿಂದ ಉಚ್ಚರಿಸಲ್ಪಡುವ ಅರ್ಥವತ್ತಾದ ಶಬ್ದಸಮೂಹವೇ ಭಾಷೆ. ಶಬ್ದವು ವರ್ಣಾತ್ಮಕ, ಧ್ವನ್ಯಾತ್ಮಕ ಎಂದು ಎರಡು ವಿಧ. ಅಆ, ಇಈ, ಕ,ಚ,ಟ,ತ,ಪ - ಮುಂತಾದ ವರ್ಣಗಳಿಂದ ಕೂಡಿದ್ದು ವರ್ಣಾತ್ಮಕ. ಘಂಟಾನಾದ, ತಾಳಧ್ವನಿ, ಪಶುಪಕ್ಷಿಗಳ ಕೂಗು ಮೊದಲಾದದ್ದು ಧ್ವನ್ಯಾತ್ಮಕ. ಮನುಷ್ಯರಾಡುವ ಭಾಷೆ ವರ್ಣಾತ್ಮಕವಾದದ್ದು. ವರ್ಣಗಳನ್ನು ಉಚ್ಚರಿಸುವ ಶಕ್ತಿ ಮನುಷ್ಯನಿಗೆ ಮಾತ್ರ ಇದೆ. ಗಿಣಿ, ಮೈನಾ-ಮುಂತಾದವು ಕೆಲವೇ ವರ್ಣಗಳನ್ನು ಅನುಕರಿಸಬಲ್ಲವು. ಸ್ವತಃ ತಾವಾಗಿ ವರ್ಣಗಳನ್ನು ಉಚ್ಚರಿಸುವುದಿಲ್ಲ. ಆದಿಮಾನವನು ತನಗೆ ವರ್ಣೋಚ್ಚರಣಶಕ್ತಿ ಇದೆಯೆಂಬುದನ್ನು ಹೇಗೆ ತಿಳಿದುಕೊಂಡ ?ಎಲ್ಲ ವರ್ಣಗಳನ್ನೂ ಉಚ್ಚರಿಸಿಲು ಹೇಗೆ ಸಮರ್ಥನಾದ ?ಎಂಬ ತೊಡಕಿನ ಪ್ರಶ್ನೆಗಳಿಗೆ ಉತ್ತರ ಸುಲಭವಲ್ಲ. ಏಕೆಂದರೆ, ಬಾಯಿಯಲ್ಲಿ ವರ್ಣೋಚ್ಚಾರಣೆಗೆ ಬೇಕಾದ ಉಪಾಂಗಗಳು ಸುಪುಷ್ಟವಾಗಿದ್ದರೂ ಹುಟ್ಟುಕಿವುಡನು ಅಕ್ಷರಗಳನ್ನು ಉಚ್ಚರಿಸಲಾರನೆಂಬುದು ಸ್ಪಷ್ಟವಿದೆ. ನಾವು ಉಚ್ಚರಿಸುವ ವಿಧಾನ ಅವನ ಕಣ್ಣಿಗೆ ಕಾಣುತ್ತದೆ, ಸ್ವತಃ ಉಚ್ಚರಿಸಲು ಬರುವುದಿಲ್ಲವೆಂದಮೇಲೆ ಕಿವಿಯ ಸಹಾಯವಿಲ್ಲದೆ ವರ್ಣಸ್ವರೂಪದ ಗ್ರಹಣ ಶಕ್ಯವಲ್ಲವೆಂದು ಏರ್ಪಡುತ್ತದೆ. ಒಬ್ಬನು ಮಾತಾಡುವುದನ್ನು ಕೇಳಿಯೇ ಮನುಷ್ಯನು ಮಾತಾಡುವುದನ್ನು ಕಲಿಯುತ್ತಾನೆ. ಮಾತಾಡುವುದನ್ನು ಕೇಳಿದ ಮೇಲೆ ವರ್ಣೋಚ್ಚಾರಣೆ, ವರ್ಣೋಚ್ಚಾರಣೆಯನ್ನು ನಡೆಸಿದ ಮೇಲೆ ಮಾತಾಡುವುದು - ಎಂಬ ಅನ್ಯೋನ್ಯಾಶ್ರಯದೋಷವು ಗಂಟುಬೀಳುತ್ತದೆ. ಈ ತೊಡಕಿನ ಪ್ರಶ್ನೆ ವಿಕಾಸವಾದಿಗಳಿಗೆ ಒಂದು ಸವಾಲಾಗಿ ನಿಲ್ಲುತ್ತದೆ. ಈ ಪ್ರಶ್ನೆಯನ್ನು ವಿಕಾಸವಾದಿಗಳು ಹೇಗೆ ಬಿಡಿಸುತ್ತಾರೆಂಬುದು ಕೌತುಕದ ವಿಷಯ.

ಬಾಯಿಗೆ ಶಬ್ದೋಚ್ಚಾರಣ ಶಕ್ತಿ, ಕಿವಿಗೆ ಶಬ್ದಗ್ರಹಣ ಶಕ್ತಿ - ಇವೆರಡು ಮಾನವನಿಗೆ ದೈವಕಲ್ಪಿತ ವರಗಳು. ಕಿವಿಗೆ ಶಬ್ದಗ್ರಹಣಶಕ್ತಿ ಇಲ್ಲದೇ ಹೋಗಿದ್ದರೆ, ಶಬ್ದೋಚ್ಚಾರಣೆಯು ನಿಷ್ಫಲವಾಗುತ್ತಿತ್ತು. ಬಾಯಿಗೆ ಶಬ್ದೋಚ್ಚಾರ ಶಕ್ತಿಯಿಲ್ಲದೆ ಹೋಗಿದ್ದರೆ ಈ ಜಗತ್ತು ಅಜ್ಞಾನದ ಕತ್ತಲೆಯಿಂದ ಮುಚ್ಚಿಹೋಗುತ್ತಿತ್ತು. ಮಾನವನಿಗೂ ಮೃಗಕ್ಕೂ ಭೇದವೇನೂ ಉಳಿಯುತ್ತಿರಲಿಲ್ಲ. ದಂಡಿ ಹೇಳುತ್ತಾನೆ -

*ಇದಮಂಧಂತಮಃ ಕೃತ್ಸ್ನಂ ಜಾಯೇತ ಭುವನತ್ರಯಂ।।*
*ಯದಿ ಶಬ್ದಾಹ್ವಯಂ ಜ್ಯೋತಿರಾಸಂಸಾರಂ ನ ದೀಪ್ಯತೇ ।।*

"ಶಬ್ದವೆಂಬ ಜ್ಯೋತಿಯು ಈ ಸಂಸಾರದಲ್ಲಿ ಸದಾ ಬೆಳಗದೇ ಹೋಗಿದ್ದರೆ, ಮೂರು ಲೋಕಗಳೂ ಅಜ್ಞಾನದ ಕಗ್ಗತ್ತಲಿನಲ್ಲಿ ಮುಳುಗಿಹೋಗುತ್ತಿದ್ದವು". ಜ್ಞಾನದ ವೃದ್ಧಿ, ಪ್ರಸಾರ,

ಪ್ರಕಾಶಗಳೆಲ್ಲವೂ ಶಬ್ದಕ್ಕೆ ಅಧೀನವಾದವುಗಳು. ಶಬ್ದವು ಜ್ಞಾನವಾಹಕವಾದಿ ಜ್ಯೋತಿಯೇ ಆಗಿದೆ.

ಹಸಿವು ಬಾಯಾರಿಕೆಗಳನ್ನು ಕೊಟ್ಟವನು ಅನ್ನ, ನೀರುಗಳನ್ನೂ ಉಸಿರಾಟದ ಕೆಲಸಕ್ಕೆ ಹಚ್ಚಿದವನು ಗಾಳಿಯನ್ನೂ ಒದಗಿಸಲೇಬೇಕು. ಹಾಗೆಯೇ ಶಬ್ದೋಚ್ಚಾರಣ ಶಕ್ತಿಯನ್ನಿತ್ತವನು ಶಬ್ದೋಚ್ಚಾರಣ ವಿಧಾನವನ್ನು ತೋರಿಸಬೇಕು. ಶ್ರವಣಶಕ್ತಿಯನ್ನಿತ್ತವನು ಶ್ರವಣದ ಪ್ರಯೋಜನವನ್ನು ತೋರಿಸಿಕೊಡಬೇಕು. ಮುಂದೆ ಇದೆಲ್ಲವನ್ನೂ ಬೆಳೆಸುವುದು, ಉಳಿಸುವುದು, ಅಳಿಸುವುದು ಮಾನವನಿಗೆ ಸೇರಿದ್ದು.

## ಸಂಸ್ಕೃತ ಭಾಷೆ

ಸಂಸ್ಕೃತಭಾಷೆಯ ಮೂಲಗ್ರಂಥವಾದ ವೇದದಿಂದ ನಾವು ವಿಚಾರಮಾಡಬೇಕಾದ್ದಿದೆ. ಸಂಹಿತೆ, ಬ್ರಾಹ್ಮಣ, ಆರಣ್ಯಕ, ಉಪನಿಷತ್ತುಗಳ ಆಂತರಿಕ ಭೇದಗಳಿಂದ ಕೂಡಿದ ನಾಲ್ಕು ವೇದಗಳೆಂದರೆ ಅತ್ಯಂತ ವಿಸ್ತಾರವಾದ ಗ್ರಂಥರಾಶಿಯಾಗುತ್ತದೆ. ಇವನ್ನು ರಚಿಸಿದವರು ಯಾರೆಂಬುದು ಯಾರಿಗೂ ಗೊತ್ತಿಲ್ಲ. ಇವುಗಳ ದ್ರಷ್ಟಾರರ ಹೆಸರುಗಳು ದೊರಕುತ್ತವೆ. ದ್ರಷ್ಟಾರನೆಂದರೆ ಕಂಡವನೆಂದು ಅರ್ಥ. ಯಾವ ಋಷಿಯು ತನ್ನ ತಪೋಬಲದಿಂದ ಸಮಾಧಿಸ್ಥಿತಿಯಲ್ಲಿ ವೇದವನ್ನು ಸಾಕ್ಷಾತ್ಕರಿಸಿಕೊಂಡನೋ ಆತನು ಆಯಾ ವೇದಮಂತ್ರದ ದ್ರಷ್ಟಾರ. ಋಷಿಗಳು ವೇದಗಳ ಕರ್ತಾರೆಂದು ಭಾರತೀಯ ದರ್ಶನಕಾರರು ಒಪ್ಪುವುದಿಲ್ಲ. ಆದ್ದರಿಂದಲೇ ವೇದವು ಅಪೌರುಷೇಯವೆನ್ನುತ್ತಾರೆ. ಪುರುಷನಿರ್ಮಿತವಲ್ಲದ್ದು ಅಪೌರುಷೇಯ. ಈ ಶಬ್ದಕ್ಕೆ ಎರಡು ರೀತಿಯಲ್ಲಿ ಅರ್ಥವನ್ನು ಹೇಳಲಾಗಿದೆ.

೧. ಮೀಮಾಂಸಕರೂ ಸಾಂಖ್ಯರೂ ವೇದವು ಅನಾದಿಯೆಂದು ಹೇಳುತ್ತಾರೆ. ಯಾವ ವ್ಯಕ್ತಿಯೂ ನಿರ್ಮಿಸಿಲ್ಲವಾದ್ದರಿಂದ ಅದು ಅಪೌರುಷೇಯ.

೨. ತಾರ್ಕಿಕರು ವೇದವನ್ನು ಈಶ್ವರನು ನಿರ್ಮಿಸಿದ್ದೆನ್ನುತ್ತಾರೆ. ಅಪೌರುಷೇಯವೆಂದರೆ ಮನುಷ್ಯ ನಿರ್ಮಿತವಲ್ಲವೆಂದರ್ಥ. ಪುರುಷನೆಂದರೆ ಮನುಷ್ಯ. ವೇದಾಂತಿಗಳಲ್ಲಿ ಕೆಲವರಿಗೆ ಮೊದಲನೆಯ ಅರ್ಥವೂ ಕೆಲವರಿಗೆ ಎರಡನೆಯ ಅರ್ಥವೂ ಸಂಮತ. ಮನುಷ್ಯನಿಂದ ವೇದವು ರಚಿತವಾಗಿಲ್ಲ ಎಂಬುದು ಸರ್ವಸಂಮತ. ಇದೇನೂ ಪರಂಪರೆಯಿಂದ ಬಂದ ಒಂದು ನಂಬಿಕೆ ಮಾತ್ರ ಎನ್ನುವಂತಿಲ್ಲ. ತಾರ್ಕಿಕರು ಈ ನಂಬಿಕೆಯ ಸ್ತಂಭವನ್ನು ಅಲ್ಲಾಡಿಸಿ ಸೋತು, ವೇದವು ಈಶ್ವರ ಪ್ರಣೀತವೆಂದು ಒಪ್ಪಿಕೊಂಡರು. ವಿದ್ವನ್ಮಣಿಗಳೆನಿಸಿದ ಮೀಮಾಂಸಕರೂ ವಾದಿಸುವುದರಲ್ಲಿ ಗಟ್ಟಿಗರಾದ್ದರಿಂದ 'ಪ್ರಧಾನಮಲ್ಲ'ರೆಂದು ವಿಖ್ಯಾತರಾದ ಸಾಂಖ್ಯರೂ ವೇದವು ಅನಾದಿಯೆಂದು ನಿರ್ವಾಹವಿಲ್ಲದೆ ಅಂಗೀಕರಿಸಿದರು.

ವೇದದಲ್ಲಿಯೇ ಬರುವ ಈ ಮಾತುಗಳನ್ನು ಗಮನಿಸಬೇಕು :

೧. ಪ್ರಸಿದ್ಧವಾದ ಪುರುಷಸೂಕ್ತವು ಪುರುಷನಿಂದ (ಈಶ್ವರನಿಂದ) ಈ ಸಮಸ್ತ ವಿಶ್ವವೂ ಹುಟ್ಟಿದೆಯೆಂದು ವಿವರಿಸುತ್ತ, ಋಕ್‌ಸಾಮಯಜುರ್ವೇದಗಳು ಈಶ್ವರನಿಂದ ಹುಟ್ಟಿದವೆಂದು ಹೇಳುತ್ತದೆ - ಋಚಃ ಸಾಮಾನಿ ಜಜ್ಞಿರೇ, ಛಂದಾಂಸಿಜಜ್ಞಿರೇ ತಸ್ಮಾತ್। ಯಜುಸ್ತಸ್ಮಾದಜಾಯತ.

೨. ಕಾಲಾದೃಚಃ ಸಮಭವನ್ । ಯಜುಃಕಾಲಾದಜಾಯತ- ಋಕ್ಕುಗಳು ಕಾಲದಿಂದ ಹುಟ್ಟಿದವು. ಯಜುರ್ವೇದವು ಕಾಲದಿಂದ ಹುಟ್ಟಿತು (ಅಥರ್ವವೇದ). ಇಲ್ಲಿ ಕಾಲವೆಂದರೆ ಪರಮೇಶ್ವರ.

೩. ಪ್ರಜಾಪತಿಯು ತಪಸ್ಸುಮಾಡಿ ಅಗ್ನಿ, ವಾಯು, ಸೂರ್ಯರಿಂದ ತ್ರಿವೇದಗಳನ್ನು ಪ್ರಾದುರ್ಭಾವಗೊಳಿಸಿದನು - ಅಗ್ನೇರ್ ಋಗ್ವೇದೋ ವಾಯೋರ್ಯಜುರ್ವೇದಃ ಸೂರ್ಯಾತ್‌ಸಾಮವೇದಃ (ಶತಪಥಬ್ರಾಹ್ಮಣ)

೪. ಅಸ್ಯಮಹತೋ ಭೂತಸ್ಯ ನಿಃಶ್ವಸಿತಮೇತದ್ಯದೃಗ್ವೇದೋ ಯಜುರ್ವೇದಃ ಸಾಮವೇದೋಽಥರ್ವಾಂಗೀರಸಃ ನಾಲ್ಕುವೇದಗಳೂ ಈ ಮಹಾಭೂತದ (ಈಶ್ವರನ) ಉಸಿರು (ಬೃಹದಾರಣ್ಯಕ). ಉಸಿರಿನಂತೆ ಅನಾಯಾಸವಾಗಿ ಈಶ್ವರನ ಮುಖದಿಂದ ಹೊರಬಂದವೆಂದು ಅಭಿಪ್ರಾಯ.

ಸಮಸ್ತ ಸ್ಮೃತಿ, ಪುರಾಣ, ಇತಿಹಾಸ, ಕಾವ್ಯಗಳೂ ಸಹ ವೇದವು ಅನಾದಿ, ಅಪೌರುಷೇಯ- ಎಂಬ ವಿಷಯದಲ್ಲಿ ಏಕಾಭಿಪ್ರಾಯವನ್ನು ತಳೆದಿವೆ. ಸಾಂಖ್ಯಮೀಮಾಂಸಕರಿಗೆ ದೇವರನ್ನೇ ಅಲ್ಲಗಳೆಯಲು ಸಾಧ್ಯವಾಯಿತು. ವೇದವನ್ನು ಅಲ್ಲಗಳೆಯಲು ಸಾಧ್ಯವಾಗಲಿಲ್ಲ. ವೇದವು ಈಶ್ವರಪ್ರೋಕ್ತವಾದ್ದರಿಂದ ದೇವವಾಣಿಯಾಯಿತು. ಆದ್ದರಿಂದಲೇ ಸಂಸ್ಕೃತಭಾಷೆಯೂ ದೇವಭಾಷೆ ಎನಿಸಿತು.

## ವೈದಿಕಭಾಷೆ ಮನುಷ್ಯ ನಿರ್ಮಿತವಲ್ಲ

ವೈದಿಕಭಾಷೆಯೇ ಕಾಲಕ್ರಮದಿಂದ ವ್ಯವಹಾರದಲ್ಲಿ ಸಂಸ್ಕೃತ ಭಾಷೆ ಎನಿಸಿತೆಂಬುದನ್ನು ಮುಂದೆ ತೋರಿಸಿಕೊಡಲಾಗುತ್ತದೆ. ಮನುಷ್ಯನ ಪ್ರವೃತ್ತಿ ಸಹಜವಾಗಿ ಸುಖದ ಕಡೆಗೆ ಇರುತ್ತದೆ. ಒಂದು ಕಾರ್ಯವು ಸುಲಭವಾಗಿ ಸಿದ್ಧಿಸುತ್ತಿರುವಾಗ ಬಳಸುಮಾರ್ಗದಿಂದ ಕಷ್ಟವನ್ನೆದುರಿಸಲು ಅವನು ಎಂದಿಗೂ ತೊಡಗುವುದಿಲ್ಲ. ಮನೆಯ ನಲ್ಲಿಯಲ್ಲಿ ಪುಷ್ಕಳವಾಗಿ ನೀರು ಬರುತ್ತಿರುವಾಗ ದೂರದ ಕೆರೆಯಿಂದ ನೀರನ್ನು ಹೊತ್ತು ತರಲು ಯಾವ ದಡ್ಡನೂ ಯತ್ನಿಸುವುದಿಲ್ಲ. ಯಂತ್ರಗಳ ನಿರ್ಮಾಣವೆಲ್ಲವೂ ಮಾನವನ ಸೌಲಭ್ಯಕ್ಕಾಗಿಯೇ ಇದೆ.

ಮಾನವನು ವಿಶಾಲವಾದ ಒಂದು ಭಾಷೆಯನ್ನು ನಿರ್ಮಿಸಿಕೊಳ್ಳಲಾರನೆಂಬುದು ಅಂಗೀಕೃತವಾದ ಪ್ರಮೇಯ. ಒಂದುವೇಳೆ ಭಾಷೆಯನ್ನು ತಾನೇ ನಿರ್ಮಿಸಿಕೊಂಡನೆಂದು 'ತುಷ್ಯತು ದುರ್ಜನ' ನ್ಯಾಯದಿಂದ ಒಪ್ಪಿದರೂ, ಸಹಜವೂ ಸರಳವೂ ಆದ ಸುಲಭಮಾರ್ಗವನ್ನೇ ಅವಲಂಬಿಸುತ್ತಾನೆಂಬುದು ನಿಷ್ಪ್ರತ್ಯೂಹವಾದ ಪ್ರಮೇಯ. ಭಾಷೆಯು ಸುಲಭವೂ ಸರಳವೂ ಆಗಿರಬೇಕಾದರೆ ಕೆಳಗೆ ಕಂಡ ಕೆಲವು ಅಂಶಗಳನ್ನು ಗಮನಿಸಬೇಕಾಗುತ್ತದೆ.

೧. ಭಾಷೆಯಲ್ಲಿ ಮಹಾಪ್ರಾಣ, ಶ,ಷ, ವಿಸರ್ಗ ಮೊದಲಾದವಿರಬಾರದು. ಸಮಾನ ವ್ಯಂಜನಗಳಿರುವ ಸಂಯುಕ್ತಾಕ್ಷರವಿರಬಹುದು. ಭಿನ್ನವ್ಯಂಜನಗಳಿರುವ ಸಂಯುಕ್ತಾಕ್ಷರಗಳಿರಬಾರದು. ಉದಾ: ಅಕ್ಕ, ಅಮ್ಮ, ಅಪ್ಪಗಳಿರಬಹುದು. ಕಲ್ಮ, ಧರ್ಮ, ಕರ್ಮ, ಪ್ರತ್ಯಕ್ಷಗಳಿರಬಾರದು. ಅಚ್ಚಗನ್ನಡದಲ್ಲಿ ಮಹಾಪ್ರಾಣಗಳಾಗಲಿ ಶ, ಷ ಗಳಾಗಲಿ ಇಲ್ಲ.

೨. ಶಬ್ದಗಳಿಗೆ ಲಿಂಗಭೇದಗಳಿರಬಾರದು. ಇದ್ದರೂ ಲೋಕಾನುಸಾರಿಯಾಗಿ ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕಲಿಂಗಗಳಿರಬೇಕೇ ಹೊರತು ಸಂಸ್ಕೃತದಲ್ಲಿರುವಂತೆ ಅಲ್ಲ.

೩. ಏಕವಚನ, ಬಹುವಚನಗಳೆರಡೇ ಸಾಕು. ದ್ವಿವಚನ ಬೇಕಾಗಿಲ್ಲ. ವಾಸ್ತವವಾಗಿ ಬಹುವಚನವೂ ಬೇಕಾಗುವುದಿಲ್ಲ. 'ಹುಡುಗರು' ಎಂಬುದಕ್ಕೆ ಬದಲಾಗಿ 'ಅನೇಕ ಹುಡುಗನು' 'ಬಹಳ ಹುಡುಗನು' ಎಂದರೂ ಸಾಗುತ್ತದೆ.

೪. ಪದಗಳ ಜೋಡಣೆಯಾದಾಗ ಸಂಧಿಕಾರ್ಯವಿರಬಾರದು. ಸಮಾಸವು ಅತ್ಯಂತ ವಿರಳವಾಗಿ ಕೆಲವುಕಡೆ ಮಾತ್ರ ಬೇಕಾದೀತು. ಸಮಾಸಾಂತ ಪ್ರತ್ಯಯ ಅನಾವಶ್ಯಕ.

೫. ಒಂದು ವಸ್ತುವನ್ನು ಬೋಧಿಸಲು ಒಂದೇ ಶಬ್ದ ಸಾಕಾಗುತ್ತದೆ. ವಿರಳ ಪ್ರಸಂಗದಲ್ಲಿ ಎರಡು, ಮೂರು ಪರ್ಯಾಯಪದಗಳು ಹುಟ್ಟಿಕೊಳ್ಳುವುದು ಸಹಜ. ಪರ್ಯಾಯ ಪದಗಳ ರಾಶಿ ಸಹಜವಲ್ಲ.

೬. ನಾಮಪದಗಳಲ್ಲಿಯೂ ಕ್ರಿಯಾಪದಗಳಲ್ಲಿಯೂ ಏಕರೂಪವಾದ ಪ್ರತ್ಯಯಗಳಿರಬೇಕು ಇತ್ಯಾದಿ. ಇದೇ ರೀತಿ ಇನ್ನೂ ಕೆಲವನ್ನು ಗೊತ್ತುಮಾಡಬಹುದು. ಈ ರೀತಿಯಲ್ಲಿ ಒಂದು ಭಾಷೆ ಇದ್ದರೆ, ಅದು ಸಹಜವೆಂದೂ ಮನುಷ್ಯನು ತನ್ನ ವ್ಯವಹಾರಕ್ಕಾಗಿ ಕಲ್ಪಿಸಿಕೊಂಡಿದ್ದಾನೆಂದೂ ಹೇಳಲು ಶಕ್ಯ. ಸಂಸ್ಕೃತ ಭಾಷೆಯಾದರೋ ಈ ಎಲ್ಲ ನಿಯಮಗಳನ್ನೂ ಬಾಧಿಸಿ ತಾನೇ ತಾನಾಗಿ ವಿರಾಜಿಸುತ್ತಿದೆ. ವೈದಿಕ ಭಾಷೆಯಾದರೋ ಮಾಲಿಗಳು ಪ್ರಯತ್ನಪೂರ್ವಕವಾಗಿ ಬೆಳೆಸಿದ ಹೂವಿನ ಗಿಡಗಳಿಂದ ತುಂಬಿದ ಉದ್ಯಾನವನವಲ್ಲ. ಅದು ಸ್ವತಂತ್ರವಾಗಿ ಹಬ್ಬಿರುವ ತರುಲತೆಗಳಿಂದ ಗಹನವಾದ ಮಹಾರಣ್ಯ. ಮಹಾರಣ್ಯವನ್ನು ಮನುಷ್ಯನು ಬೆಳೆಸಬಲ್ಲನೇ ?

೧. ಖ, ಠ, ಥ, ಫ - ಮುಂತಾದ ಮಹಾಪ್ರಾಣಗಳನ್ನು ಉಚ್ಚರಿಸುವುದು ಸುಲಭವಲ್ಲ. ಆದರೊಡನೆ ಇನ್ನೊಂದು ವ್ಯಂಜನವೂ ಸೇರಿ ಸಂಯುಕ್ತಾಕ್ಷರವಾದರೆ ಕ್ಲೇಶ ಇನ್ನೂ ಅಧಿಕವಾಗುತ್ತದೆ. ಮೂರ್ಖ, ನಿಷ್ಠುರ, ರಿಕ್ಥ, ಅರ್ಘ್ಯ - ಮುಂತಾದ ಕಠಿಣೋಚ್ಚಾರಣೆಯ ಶಬ್ದಗಳನ್ನು ಮನುಷ್ಯನು ಏಕೆ ನಿರ್ಮಿಸಿಕೊಳ್ಳಬೇಕು ? ಶ್ಲಕ್ಷ್ಣ, ಕಾರ್ತ್ಸ್ನ್ಯ, ಉಷ್ಣ, ನಿರ್ಘೃಣ - ಮುಂತಾದ ಒತ್ತಕ್ಷರದ ಶಬ್ದಗಳು ಸಹಜವಾಗಿ ಹುಟ್ಟಿಕೊಳ್ಳುತ್ತವೆಯೇ ? ಇವು ಸಾಲದೆಂದು ಜಿಹ್ವಾಮೂಲೀಯ, ಉಪಧ್ಮಾನೀಯ - ಎಂಬ ಯಾವ ಭಾಷೆಯಲ್ಲಿಯೂ ಕಾಣಬರದ ಕ್ಲಿಷ್ಟೋಚ್ಚಾರಣೆಯ ವರ್ಣಗಳು ಯಥೇಚ್ಛವಾಗಿ ಸಂಸ್ಕೃತ ಭಾಷೆಯಲ್ಲಿವೆ. ಶ,ಷ,ಸ -ಗಳ ಉಚ್ಚಾರಣೆ ಎಲ್ಲರಿಗೂ ಶಕ್ಯವಲ್ಲ. ಉಚ್ಚಾರಣೆ ಸ್ವಲ್ಪವ್ಯತ್ಯಾಸವಾದರೆ ಶಬ್ದಾರ್ಥವೇ ಬೇರೆಯಾಗಿ ಬಿಡುತ್ತದೆ. ಉದಾ: ಶಕೃತ್-ಸಕೃತ್, ಸಕಲ-ಶಕಲ ಅಲ್ಲದೆ ವೇದದಲ್ಲಿ ಯಮ ಮುಂತಾದ ವಿಶಿಷ್ಟೋಚ್ಚಾರಣೆಯುಳ್ಳ ವರ್ಣಗಳಿವೆ. ಯಕಾರ ವಕಾರಗಳನ್ನು ಕೆಲವು ಕಡೆ ಲಘುತರವಾಗಿ ಉಚ್ಚರಿಸಬೇಕೆಂಬ ವಿಧಿ ಇದೆ. ಆದಿಮಾನವ ಇಂತಹ ಅಕ್ಷರಗಳನ್ನು ಕಲ್ಪಿಸಿಕೊಳ್ಳುವುದು ಸಹಜವೆ ?

೨. ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕಲಿಂಗಗಳು ಲೋಕಾನುಸಾರಿಯಾಗಿರಬೇಕಾದದ್ದು ಸಹಜ. ಇವನು ಗಂಡಸು, ಇವಳು ಹೆಂಗಸು - ಎಂದು ಸೂಚಿಸುವುದಕ್ಕಾಗಿ ಅಂತಹ ಪ್ರಯೋಗ ಬಂದಿರುತ್ತದೆ. ಸಂಸ್ಕೃತದಲ್ಲಾದರೋ ಶಬ್ದಗಳ ಲಿಂಗವು ಲೋಕಾತೀತವಾದದ್ದು. ಶಾಖಾ, ಶಿಲಾ, ಲತಾ, ಸಭಾ - ಮೊದಲಾದವು ಸ್ತ್ರೀಲಿಂಗ. ವೃಕ್ಷ, ಪಾಷಾಣ, ಆಕಾಶ, ಮೊದಲಾದವು ಪುಲ್ಲಿಂಗ. ಮಿತ್ರ(ಸ್ನೇಹಿತ), ಕಲತ್ರ (ಹೆಂಡತಿ)-ನಪುಂಸಕಲಿಂಗ ದಾರ (ಹೆಂಡತಿ) ಪುಲ್ಲಿಂಗ ! ಕೆಲವು ಶಬ್ದಗಳು ಎರಡು ಲಿಂಗಗಳಲ್ಲಿರುತ್ತವೆ. ಕೆಲವು ಮೂರು ಲಿಂಗಗಳಲ್ಲಿರುತ್ತವೆ. ಲಿಂಗಾನುಸಾರವಾಗಿ ಶಬ್ದರೂಪವು ಭಿನ್ನವಾಗುತ್ತದೆ. ಯಾವ ಕಾರಣದಿಂದ ಈ ರೀತಿಯಲ್ಲಿ ವಿಲಕ್ಷಣವಾದ ಲಿಂಗಕಲ್ಪನೆಯನ್ನು ಮಾಡಿಕೊಂಡಿದ್ದಾರೆ ? ಸತ್ತ್ವಗುಣ, ರಜೋಗುಣ, ತಮೋಗುಣಗಳ ಭೇದದಿಂದ ಈ ರೀತಿ ಲಿಂಗಭೇದಗಳಾಗುತ್ತವೆಯೆಂದು ಮಹಾಭಾಷ್ಯಕಾರ ಪತಂಜಲಿ ಹೇಳಿದ್ದಾನೆ. ಪದಾರ್ಥಗಳಲ್ಲಿರುವ ಈ ತ್ರಿಗುಣಗಳನ್ನು ಕಂಡುಹಿಡಿದು ಮನುಷ್ಯನು ಈ ಲಿಂಗಭೇದವನ್ನು ಕಲ್ಪಿಸಿಕೊಳ್ಳಲು ಶಕ್ಯವೆ ? ಮಾತಾಡುವಾಗ ವಸ್ತುಗಳ ಗುಣಪ್ರದರ್ಶನವಾದರೂ ಏಕೆ ಬೇಕಾಗುತ್ತದೆ ? ಹಾಗಲ್ಲದಿದ್ದರೆ ಯಾವ ಕಾರಣದಿಂದ ಲಿಂಗಭೇದದ ಹೊರೆಯನ್ನು ಆದಿಮಾನವ ತನ್ನ ಭಾಷೆಯಲ್ಲಿ ತುರುಕಿಸಿಕೊಂಡನು ?

೩. ವೈದಿಕಭಾಷೆಯಲ್ಲಿ ದ್ವಿವಚನ ಬೇರೆ ಇದೆ. ಇದರ ಆವಶ್ಯಕತೆ ಏನಿತ್ತು ? ನಾಮಪದದಲ್ಲಿಯೂ ರೂಪಭೇದ, ಕ್ರಿಯಾಪದದಲ್ಲಿಯೂ ರೂಪಭೇದ. ಭಾಷೆಯ

ಜಟಿಲತೆ ಇದರಿಂದ ಹೆಚ್ಚುತ್ತದೆ. ಉಭ ಎಂದರೆ ಎರಡು ಎಂದರ್ಥ. ಇದು ದ್ವಿವಚನದಲ್ಲಿರುವುದು ಸಹಜ. ಉಭಯ ಎಂದರೂ ಅದೇ ಅರ್ಥ. ಅದಕ್ಕೆ ದ್ವಿವಚನವೇ ಇಲ್ಲ! ದಾರಾಃ, ಆಪಃ - ಮುಂತಾದವು ನಿತ್ಯಬಹುವಚನಗಳು. ಸಂಖ್ಯೆ ಒಂದಾದರೂ ಬಹುವಚನವೇ. ಇದಕ್ಕೆಲ್ಲ ಕಾರಣವೇನು ?

೪. ಸಂಸ್ಕೃತದಲ್ಲಿರುವಷ್ಟು ಸಂಧಿಕಾರ್ಯಗಳಾಗಲಿ ಸಂಧಿಕಾರ್ಯದ ಜಟಿಲತೆಗಳಾಗಲಿ ಇನ್ನು ಯಾವ ಭಾಷೆಯಲ್ಲಿಯೂ ಇಲ್ಲ. ಸ್ವರಸಂಧಿ, ವಿಸರ್ಗಸಂಧಿ, ವ್ಯಂಜನಸಂಧಿ, ಸ್ವಾದಿಸಂಧಿ, ಪ್ರಕೃತಿಭಾವಸಂಧಿ - ಎಂಬ ಭೇದಗಳು ಜಟಿಲವಾದವು. ಸಮಾಸ, ಸಮಾಸಾಂತ, ಸಮಾಸಾಶ್ರಯ ವಿಧಿಗಳು ಅತಿಕ್ಲಿಷ್ಟವಾದವು. ಸಂಧಿಕಾರ್ಯವು ಉಚ್ಚಾರಣ ಕಾಲದಲ್ಲಿ ಸಹಜವಾಗಿ ಸಂಭವಿಸಬಹುದಾದದ್ದು ಎಂದು ಒಪ್ಪಿಕೊಂಡರೂ ಒಳಭೇದವು ಸುಲಭ ಗ್ರಾಹ್ಯವೂ ಅಲ್ಲ, ಸಹಜವೂ ಅಲ್ಲ ಸಮಾಸಾಂತವಿಧಿಯ ವಿಷಯದಲ್ಲಿ ಭಾಷಾಶಾಸ್ತ್ರವು ಏನನ್ನೂ ಹೇಳಲಾರದೆ ಮೌನವಹಿಸಿದೆ. 'ರಾಜನ್' ನ ಕಾರಾಂತವಾದರೆ, ತತ್ಪುರುಷ ಕರ್ಮಧಾರಯಗಳಲ್ಲಿ ಅಕಾರಾಂತವಾಗಿ ಬಿಡುತ್ತದೆ. ಅಕಾರಾಂತವಾದ ಧರ್ಮಶಬ್ದ ಬಹುವ್ರೀಹಿಯಲ್ಲಿ ನ ಕಾರಾಂತವಾಗುತ್ತದೆ. ಈ ಬಗೆಯ ಸಮಾಸಾಂತ ಪ್ರತ್ಯಯಗಳು ಸಾಮಾನ್ಯರಿಗೆ ದುರವಗಾಹವಾದವು. ಅಲ್ಲದೆ ಸಮಾಸದಲ್ಲಿ ಪೂರ್ವಪದಕ್ಕೆ ಹ್ರಸ್ವಬರುವುದು, ಸುಡಾಗಮ, ಮುಮಾಗಮ - ಮೊದಲಾದ ತೊಡಕುಗಳು ವಿಪುಲವಾಗಿವೆ. ಇಂತಹ ತೊಡಕಿನ ಹಗ್ಗದಿಂದ ಮನುಷ್ಯನು ತನ್ನ ಕೈಕಾಲುಗಳನ್ನು ಬಿಗಿದುಕೊಳ್ಳುವುದು ಯಾವ ಉದ್ದೇಶದಿಂದ ? ತಾನು ನಿರ್ಮಿಸಿದ ಭಾಷೆಯಲ್ಲಿ ಯಾಕಾಗಿ ಈ ಸಮಸ್ಯೆಗಳನ್ನು ತಂದುಹಾಕಿಕೊಂಡಿದ್ದಾನೆ ?

೫. ನಾಮಪದಗಳಲ್ಲಿ ವಿಭಕ್ತಿಪ್ರತ್ಯಯಗಳು ಎಲ್ಲ ಶಬ್ದಗಳಲ್ಲಿಯೂ ಏಕರೂಪವಾಗಿರಬೇಕಾದದ್ದು ಸಹಜ. ಈ ಪ್ರತ್ಯಯಗಳಿರುವುದೇ ಕರ್ತೃ, ಕರ್ಮ, ಕರಣ - ಮುಂತಾದ ಅರ್ಥವಿಶೇಷವನ್ನು ತೋರಿಸುವುದಕ್ಕಾಗಿ. ಸಂಸ್ಕೃತದಲ್ಲಾದರೋ ಇದು ಅತಿ ವಿಚಿತ್ರ. ಶಬ್ದದ ಲಿಂಗಭೇದದಿಂದ ಪ್ರತ್ಯಯಗಳು ಬಹಳ ಕಡೆ ರೂಪಾಂತರಗೊಳ್ಳುತ್ತವೆ. ಶಬ್ದವು ಅಜಂತವಾದರೊಂದು ವಿಧ, ಹಲಂತವಾದರೊಂದು ವಿಧ. 'ಹರಿ'ಶಬ್ದದ ರೂಪ 'ಪತಿ'ಶಬ್ದಕ್ಕಿಲ್ಲ. 'ಪತಿ'ಶಬ್ದದ ರೂಪ 'ಭೂಪತಿ' ಶಬ್ದಕ್ಕಿಲ್ಲ. ಇನ್ನು ಸರ್ವನಾಮದ ವಿಭಕ್ತಿ ಪ್ರತ್ಯಯಗಳೇ ಬೇರೆ ವಿಧ. ಕೆಲವು ಶಬ್ದಗಳಿಗೆ ಸರ್ವನಾಮದ ಪ್ರತ್ಯಯಗಳು ವಿಕಲ್ಪವಾಗಿ ಬರುತ್ತವೆ. ಯುಷ್ಮತ್, ಅಸ್ಮತ್ ಶಬ್ದಗಳಲ್ಲಿ ಯಾವ ವಿಭಕ್ತಿ ಪ್ರತ್ಯಯವನ್ನೂ ಗುರುತಿಸಲಿಕ್ಕೇ ಸಾಧ್ಯವಿಲ್ಲದಷ್ಟು ಬದಲಾವಣೆಯಾಗಿರುತ್ತದೆ.

ಇನ್ನು ಕ್ರಿಯಾಪದಗಳ ವಿಷಯವಂತೂ ಊಹೆಗೆ ಮೀರುವಷ್ಟು ಆಶ್ಚರ್ಯಕರ. ಮೂರು ವಚನಗಳಿರುವುದು ಸರಿಯಷ್ಟೆ. ಮುಂದಿನ ಅದ್ಭುತವನ್ನು ಕೇಳಿ.

ಮೂರು ಪುರುಷಗಳಿರುವುದರಿಂದ ಒಂಬತ್ತು ಪ್ರತ್ಯಯಗಳಾದವು. ಇವುಗಳಲ್ಲಿ ಪರಸ್ಮೈಪದ ಆತ್ಮನೇಪದ ಎಂಬ ಎರಡು ಭೇದವಿರುವುದರಿಂದ ಹದಿನೆಂಟು ಪ್ರತ್ಯಯಗಳಾಗುತ್ತವೆ. ಧಾತುಗಳಲ್ಲಿ ಕೆಲವು ಪರಸ್ಮೈಪದಿಗಳು. ಕೆಲವು ಆತ್ಮನೇ ಪದಿಗಳು. ಕೆಲವು ಉಭಯಪದಿಗಳು. ಧಾತುಗಳ ಈ ಭೇದವನ್ನು ತಿಳಿದುಕೊಂಡು ಆಯಾ ಪ್ರತ್ಯಯಗಳನ್ನು ಸೇರಿಸಬೇಕಾಗುತ್ತದೆ. ಇಷ್ಟಲ್ಲದೇ ಧಾತುಗಳನ್ನು ಹತ್ತು ಗಣಗಳನ್ನಾಗಿ ವಿಂಗಡಿಸಲಾಗಿದೆ. ಗಣದ ಪ್ರಕಾರ ಧಾತುಗಳಿಗೆ ಬರುವ ವಿಕರಣ ಪ್ರತ್ಯಯಗಳು ಬೇರೆ ಬೇರೆಯಾಗಿ ಮತ್ತೆ ಹತ್ತು ಪ್ರಕಾರದ ರೂಪಗಳುಂಟು. ಇಷ್ಟು ಸಾಲದೋ ಎಂಬಂತೆ ಕೆಲವು 'ಧಾತು'ಗಳಿಗೆ 'ಇಟ್ ಎಂಬ ಆಗಮ ಬರುತ್ತದೆ. ಇವೇ 'ಸೇಟ್' ಧಾತುಗಳು. ಕೆಲವಕ್ಕೆ ಬರುವುದಿಲ್ಲ, ಇವು 'ಅನಿಟ್' ಧಾತುಗಳು. ಇನ್ನು ಕೆಲವಕ್ಕೆ ವಿಕಲ್ಪ. ಇವು 'ವೇಟ್' ಧಾತುಗಳು. ಸೇಟ್ ಆದದ್ದು ಕೆಲವು ಕಡೆ ಅನಿಟ್ ಆಗುತ್ತದೆ. ಅನಿಟ್ ಆದದ್ದು ಕೆಲವು ಕಡೆ ಸೇಟ್ ಆಗುತ್ತದೆ.

ಈ ನಡುವೆ ಕೆಲವು ಉಪಸರ್ಗಗಳಿದ್ದಾಗ ಪರಸ್ಮೈಪದಿ ಧಾತುಗಳು ಆತ್ಮನೇಪದಿಗಳಾಗುತ್ತವೆ. ಉಪಸರ್ಗಗಳಿಲ್ಲದಿದ್ದರೂ ಅರ್ಥಭೇದದಿಂದ ಆತ್ಮನೇಪದಿಗಳಾಗಿ ಬಿಡುತ್ತವೆ. ಹೀಗೆಯೇ ಆತ್ಮನೇಪದಿಗಳು ಪರಸ್ಮೈಪದಿಗಳಾಗುತ್ತವೆ.

ಇಷ್ಟಕ್ಕೆ ಮುಗಿಯಲಿಲ್ಲ. ಭೂತಕಾಲವನ್ನು ಸೂಚಿಸಲು ಮೂರುಪ್ರಕಾರದ ಪ್ರತ್ಯಯಗಳುಂಟು. ಒಂದು ಪ್ರಕಾರಕ್ಕೆ ಒಂಬತ್ತು ಪ್ರತ್ಯಯಗಳು ಎಲ್ಲ ಸಂದರ್ಭಗಳಲ್ಲಿಯೂ ಇದ್ದೇ ಇರುತ್ತವೆಯಷ್ಟೆ. ಭವಿಷ್ಯತ್ಕಾಕಾಲಕ್ಕೆ ಎರಡು ಪ್ರಕಾರದ ಪ್ರತ್ಯಯಗಳು. ವಿಧಿ, ಆಜ್ಞೆ, ಆಶೀರ್ವಾದಗಳಿಗೆ ಒಂದೊಂದು. ವರ್ತಮಾನಕಾಲಕ್ಕೆ ಒಂದು. 'ಕ್ರಿಯಾತಿಪತ್ತಿ' ಎಂಬ ಇನ್ನೊಂದು ಅರ್ಥದಲ್ಲಿ ಒಂದು. ಹೀಗೆ ಹತ್ತುಪ್ರಕಾರದ ಪ್ರತ್ಯಯಗಳುಂಟು. ಮತ್ತೆ ಇವುಗಳಲ್ಲಿ ಆತ್ಮನೇಪದ, ಪರಸ್ಮೈಪದ ಎಂಬ ವಿಭಾಗವಿದ್ದು ಪ್ರತ್ಯಯಗಳು ದ್ವಿಗುಣಗೊಳ್ಳುತ್ತವೆ. ವೇದದಲ್ಲಿ 'ಲೇಟ್' ಎಂಬ ಹನ್ನೊಂದನೇ ಪ್ರಕಾರವಿದೆ. ಅಲ್ಲಿಗೆ ಕ್ರಿಯಾಪದಗಳಲ್ಲಿ ನಮಗೆ ಕಾಣಸಿಗುವ ಪ್ರತ್ಯಯಗಳು ಓಟದ ಪ್ರಕಾರವಿದೆ. ಅಲ್ಲಿಗೆ ಕ್ರಿಯಾಪದಗಳಲ್ಲಿ ನಮಗೆ ಕಾಣಸಿಗುವ ಪ್ರತ್ಯಯಗಳು ಒಟ್ಟು (೧೧x೯) ತೊಂಬತೊಂಬತ್ತು. ಇವುಗಳು ಪರವಾದಾಗ ಧಾತುಗಳ ಗಣಭೇದದಿಂದಲೂ ಸೇಟ್, ಅನಿಟ್ ಇತ್ಯಾದಿ ವಿಭಾಗದಿಂದಲೂ ಬೇರೆ ಬೇರೆ ಆದೇಶಾದಿ ಗಳಿಂದಲೂ ಒಂದೊಂದು ಧಾತು ಎಷ್ಟು ರೂಪಗಳನ್ನು ಪಡೆದೀತೆಂಬುದನ್ನು ಊಹಿಸಿ ಕೊಳ್ಳಬೇಕು. ಇಷ್ಟೇ ಅಲ್ಲದೆ ಈ ಧಾತುಗಳಿಗೆ ಸನ್, ಯಙ್, ಯಙ್‌ಲುಕ್ - ಎಂಬ ಪ್ರತ್ಯಯಗಳು ಬೇರೆ ಬೇರೆ ಅರ್ಥದಲ್ಲಿ ಬರುತ್ತವೆ. ಆಗ ಈ ಕ್ರಿಯಾರೂಪಗಳು ಎರಡರಷ್ಟು, ಮೂರರಷ್ಟು ಹೆಚ್ಚುತ್ತವೆ. ಈ 'ತಲೆಶಿರೋಭಾರ'ವನ್ನು ಮನುಷ್ಯನು ಏತಕ್ಕಾಗಿ ತಾನೇ ನಿರ್ಮಿಸಿ ತಲೆಯ ಮೇಲೆ ಹೊತ್ತುಕೊಂಡಿದ್ದಾನೆ ? ಒಂದು ಭಾಷೆಯು ಈ ರೀತಿಯಲ್ಲಿ ವಿಕಾಸಹೊಂದುತ್ತದೆಯೆ ? ಇದು ಸಹಜವೇ ? ಭಾಷಾಶಾಸ್ತ್ರಿಗಳು ಛಲದಿಂದ ಕಲ್ಪಿಸಿರುವ 'ಇಂಡೋ ಯುರೋಪಿಯನ್' ಭಾಷೆಯಲ್ಲಿ ಈ ಬಗೆಯ ಕ್ರಿಯಾರೂಪಗಳಿದ್ದವೇನು ? ಇವು

ಸಂಸ್ಕೃತದಲ್ಲಿ ಹೇಗೆ ಹುಟ್ಟಿದವು, ಐರೋಪ್ಯ ಭಾಷೆಗಳಲ್ಲಿ ಏಕೆ ನಷ್ಟವಾದವೆಂಬುದನ್ನು ಹೇಳಬಲ್ಲರೇನು ?

6) ಮನುಷ್ಯನು ತನ್ನ ವ್ಯವಹಾರಕ್ಕಾಗಿ ಭಾಷೆಯನ್ನು ನಿರ್ಮಿಸಿಕೊಳ್ಳುವಾಗ ಒಂದು ಅರ್ಥವನ್ನು ಸೂಚಿಸಲು ಒಂದು ಪದವನ್ನು ನಿರ್ಮಿಸಿಕೊಳ್ಳುವುದು ಸಹಜ. ದೇಶ, ಕಾಲ ಭೇದಗಳಿಂದ ನಾಲ್ಕೈದು ಪರ್ಯಾಯ ಪದಗಳು ಹುಟ್ಟುಕೊಳ್ಳಬಹುದು. ನೀರು, ಬೆಂಕಿ, ಮೋಡ ಮುಂತಾದವನ್ನು ಬೋಧಿಸಲು ಎಷ್ಟು ಪದಗಳು ಬೇಕಾಗುತ್ತವೆ. ವೇದದಲ್ಲಿ ಒಂದೇ ಅರ್ಥವನ್ನು ಹೇಳಲು ನೂರಾರು ಪರ್ಯಾಯ ಪದಗಳಿರುವುದುಂಟು. ಯಾಸ್ಕನ ನಿರುಕ್ತಭಾಷ್ಯದಲ್ಲಿಯೇ ವೈದಿಕ ನಿಘಂಟುಗಳಲ್ಲಿ ಸಂಗ್ರಹಿಸಲಾದ ಪರ್ಯಾಯಪದಗಳನ್ನು ಹೇಳಲಾಗಿದೆ. ಉದಾಹರಣೆಗೆ ಕೆಲವು ಮಾತ್ರ -

1. ಉದಕನಾಮಾನ್ಯುತ್ತರಾಣ್ಯೇಕಶತಮ್ ॥
ಮುಂದೆ ಹೇಳುವ ನೂರೊಂದು ಶಬ್ದಗಳು ನೀರಿನ ಹೆಸರುಗಳು.

೨. ಮೇಘನಾಮಾನ್ಯುತ್ತರಾಣಿ ತ್ರಿಂಶತ್॥
ಮುಂದೆ ಹೇಳವ ಮೂವತ್ತು ಶಬ್ದಗಳು ಮೋಡದ ಹೆಸರುಗಳು

೩. ವಾಙ್ನಾಮಾನ್ಯುತ್ತರಾಣಿ ಸಪ್ತಪಂಚಾಶತ್ ॥
ಮುಂದಿನ ಐವತ್ತು ಶಬ್ದಗಳು ವಾಕ್ಕಿನ ( ಮಾತಿನ)ವಾಚಕಗಳು

೪. ಅಶ್ವನಾಮಾನ್ಯತ್ತರಾಣಿ ಷಡ್ವಿಂಶತಿಃ ॥
ಮುಂದಿನ ಇಪ್ಪತ್ತಾರುಪದಗಳು ಕುದುರೆಯ ಹೆಸರುಗಳು

೫. ಮನುಷ್ಯನಾಮಾನ್ಯತ್ತರಾಣಿ ಪಂಚವಿಂಶತಿಃ॥
ಮುಂದಿನ ಇಪ್ಪತ್ತೈದುಶಬ್ಧಗಳು ಮನುಷ್ಯನ ಹೆಸರುಗಳು.

ನೀರನ್ನು ಹೇಳಲು ನೂರೊಂದು ಪರ್ಯಾಯಪದಗಳು ಬೇಕೆ ? ಮೋಡವನ್ನು ತಿಳಿಸಲು ಮೂವತ್ತು ಪವಗಳು ಬೇಕೆ ? ಜಗತ್ತಿನ ಯಾವ ಭಾಷೆಯಲ್ಲಿ ಇಷ್ಟು ಪರ್ಯಾಯ ಪದಗಳಿರುತ್ತವೆ ? ಇದು ಮನುಷ್ಯನ ಸ್ವಾಭಾವಿಕ ನಿರ್ಮಾಣವಲ್ಲವೆಂಬುದು ಯಾರಿಗಾದರೂ ಹೊಳೆಯತ್ತದೆ. ಇದೇ ರೀತಿಯಲ್ಲಿ ಪ್ರತಿಯೊಂದು ಪದಾರ್ಥಕ್ಕೂ ಕಣ್ಣು ಕೈಕಾಲುಗಳಿಗೂ ಪಶುಪಕ್ಷಿಗಳಿಗೂ ಮರಬಳ್ಳಿಗಳಿಗೂ ಕ್ರಿಮಿಕೀಟಗಳಿಗೂ ಅನೇಕ ಪರ್ಯಾಯ ಪದಗಳು ಇದ್ದೇಇರುತ್ತವೆ . ಈ ವೈಲಕ್ಷಣ್ಯವನ್ನು ಗಮನಿಸಲೇಬೇಕು.

೫. ಸಂಸ್ಕತದಲ್ಲಿ ಸುಮಾರು ಎರಡುಸಾವಿರ ಧಾತುಗಳಿವೆ. ವಿಶ್ವದ ಯಾವ ಭಾಷೆಯಲ್ಲೂ ಇಷ್ಟು ಧಾತುಗಳಿಲ್ಲ.

೬. ವೇದದಲ್ಲಿ ಉದಾತ್ತ, ಅನುದಾತ್ತ, ಸ್ವರಿತ -ಎಂಬ ಮೂರುಸ್ವರಗಳಿರುವುದು ಸರ್ವರಿಗೂ ತಿಳಿದ ವಿಷಯ. ಮೂರು ಸ್ವರಗಳು ಮಾತ್ರವಲ್ಲ, ಇವುಗಳಲ್ಲಿ ಇನ್ನೂ ಒಳಭೇದಗಳಿವೆ. ವೇದವನ್ನು ಮನಷ್ಯನು ರಚಿಸಿದನೆಂದು ಹೇಳತಕ್ಕವರು, ವ್ಯವಹಾರದಲ್ಲಿದ್ದ ಭಾಷೆಯಿಂದ ರಚಿಸಿದ್ದಾನೆಂದು ಒಪ್ಪಿಕೊಳ್ಳಲೇಬೇಕು. ಈ ಸ್ವರಭೇದಗಳು ಜನರಾಡುವ ಭಾಷೆಯಲ್ಲಿತ್ತೆಂದು ಯಾರಾದರೂ ಹೇಳಲಾದೀತೆ. ? ಈ ಸ್ವರಗಳೇನೂ ಸ್ವೇಚ್ಛೆಯಿಂದ ಬಳಸಿದವುಗಳಲ್ಲ. ವ್ಯವಸ್ಥಿತವಾಗಿ ನಿಯಮಗಳಿಗೆ ಒಳಪಟ್ಟು ಈ ಸ್ವರಗಳು ಬರುತ್ತವೆ. ನಾಮಪದ, ಅವ್ಯಯ, ಕ್ರಿಯಾಪದ, ವಿಭಿನ್ನ ಕೃದಾದಿಪ್ರತ್ಯಯಗಳು, ಸಮಾಸ ಭೇದಗಳು ಇವುಗಳನ್ನನುಸರಿಸಿ ಉದಾತ್ತಾದಿಸ್ವರಗಳು ಬೇರೆ ಬೇರೆಯಾಗುತ್ತವೆ. ಆದಿಮಾನವನಿಂದ ಈ ಸ್ವರಗಳ ನಿರ್ಮಾಣ ಶಕ್ಯವೇ ? ವಿದ್ಯಾಹೀನನೂ ವ್ಯಾಕರಣಜ್ಞಾನವೇ ಇಲ್ಲದವನೂ ಆದ ಮನುಷ್ಯನು ತನ್ನ ಭಾಷೆಗೆ ಈ ಸ್ವರಗಳನ್ನು ಹೇಗೆ ರಚಿಸಿಕೊಂಡ ? ಯಾವ ಪ್ರಯೋಜನಕ್ಕಾಗಿ ರಚಿಸಿಕೊಂಡಿದ್ದಾನೆ ? ಯಾವ ಭಾಷೆಯಲ್ಲೂ ಇಲ್ಲದ, ಹೊರಲಾರದ ಕಲ್ಲನ್ನು ಏಕೆ ತಲೆಯ ಮೇಲೆ ಹೊತ್ತುಕೊಂಡಿದ್ದನು ?ಸ್ವರವು ಭಾಷೆಗೆ ಸ್ವಾಭಾವಿಕವಲ್ಲ, ಅದರಿಂದ ಪ್ರಯೋಜನವೂ ಇಲ್ಲವಾದ್ದರಿಂದಲೇ ಮುಂದೆ ಸಂಸ್ಕೃತ ಭಾಷೆಯಲ್ಲಿ ಈ ಸ್ವರವು ತಾನಾಗಿ ಬಿಟ್ಟುಹೋಯಿತು. ಮೂಲ ಇಂಡೋಜರ್ಮನ್ ಎಂಬ ಕಲ್ಪಿತ ಭಾಷೆಯಲ್ಲಿ ಸ್ವರಪ್ರಕ್ರಿಯೆ ಇತ್ತೇನು ?ಏತಕ್ಕಾಗಿ ಇತ್ತು ?ಏಕೆ ಬಿಟ್ಟು ಹೋಯಿತು ?

ಸಾಮವೇದದಲ್ಲಂತೂ ಸ್ವರಪ್ರಕ್ರಿಯೆ ಅತ್ಯಂತ ಕ್ಲಿಷ್ಟವಾದದ್ದು. ಗೀತಿಗಳೆಂಬ ಸಾಮಭೇದಗಳಿಂದ ಈ ವೇದವನ್ನು ಪಠಿಸಬೇಕಾಗುತ್ತದೆ. ಗುರೂಪದೇಶವಿಲ್ಲದೆ ಒಂದೇ ಒಂದು ಸಾಮವನ್ನೂ ಮನುಷ್ಯನು ಹೇಳಲಾರ. ಈ ಸಾಮವಿಧಾನವು ಭಾಷೆಯಲ್ಲಿ ಯಾವ ಸೌಭಾಗ್ಯಕ್ಕಾಗಿ ?

೭. ಸಂಸ್ಕೃತ ಭಾಷೆಯಲ್ಲಿರುವಷ್ಟು ಶಬ್ದರಾಶಿಗಳು ವಿಶ್ವದ ಯಾವ ಭಾಷೆಯಲ್ಲೂ ಇಲ್ಲ. ಶಬ್ದಕೋಶಗಳಲ್ಲಿ ಹೇಳಿರುವುದು ಉಪಲಕ್ಷಣ ಮಾತ್ರ. ಎಲ್ಲ ಶಬ್ದಗಳನ್ನೂ ಯಾವ ಕೋಶಕಾರನೂ ಬರೆಯಲಾರ. ಮಹಾಭಾಷ್ಯದಲ್ಲಿ ಪತಂಜಲಿ ಹೇಳುತ್ತಾನೆ. "ಬೃಹಸ್ಪತಿಯು ದೇವೇಂದ್ರನಿಗೆ ಒಂದೊಂದೇ ಶಬ್ದಸ್ವರೂಪವನ್ನೂ ಉಚ್ಚರಿಸಿ ತೋರಿಸುತ್ತಾ ಹೋದನು. ಒಂದು ಸಾವಿರ ದಿವ್ಯವರ್ಷಗಳು ಕಳೆದರೂ ಈ ಶಬ್ದಪಾರಾಯಣವು ಮುಗಿಯಲಿಲ್ಲ". ಒಂದು ಭಾಷೆಯಲ್ಲಿ ಇಷ್ಟು ಶಬ್ದಗಳು ಏಕೆ ಬೇಕಾಗುತ್ತವೆ ?

**ಈ ಪ್ರಶ್ನೆಗಳಿಗೆ ಸಮರ್ಪಕವಾದ ಉತ್ತರಗಳನ್ನು ನೀಡುವವರೆಗೆ, ಸಂಸ್ಕೃತಭಾಷೆ ಮನುಷ್ಯನಿರ್ಮಿತ ಭಾಷೆಯಲ್ಲವೆಂಬ ನಿಲುವು ನಿಚ್ಚಳವಾಗಿ ನಿಂತಿರುತ್ತದೆ. ಯಾವಾಗ ಮನುಷ್ಯ ನಿರ್ಮಿತವಲ್ಲವೋ ಆಗ ಅದು ಅನಾದಿಯೆಂದೂ ಈಶ್ವರನು**

**ಬಳಸುತ್ತಿದ್ದ ಭಾಷೆಯೆಂದೂ ಒಪ್ಪಬೇಕು. ಅನಾದಿಯಾದ್ದರಿಂದ 'ಅಮರವಾಣಿ'ಯೆಂದೂ ಈಶ್ವರನ ಭಾಷೆಯಾದ್ದರಿಂದ ದೇವಭಾಷೆಯೆಂದೂ ಸ್ವತಃ ಸಿದ್ಧವಾಗುತ್ತದೆ. ದೇವರನ್ನು ಒಪ್ಪುತಕ್ಕವರು ಅವನು ಸರ್ವಜ್ಞನೆಂದು ಸರ್ವಶಕ್ತನೆಂದೂ ಶಾಶ್ವತನೆಂದೂ ಹೇಳುತ್ತಾರೆ. ಅವನೇನು ಮೂಕನಲ್ಲವಷ್ಟೆ? ಹಾಗಿದ್ದರೆ ಯಾವ ಭಾಷೆಯನ್ನಾಡುತ್ತಿದ್ದ? ಜಗತ್ತನ್ನು ಸೃಷ್ಟಿಸುವಾಗ ಯಾವ ಭಾಷೆಯಲ್ಲಿ ಚಿಂತಿಸುತ್ತಿದ್ದ? ಭಾಷೆಯಿಲ್ಲದೆ ಚಿಂತನೆ ಇಲ್ಲ. ಚಿಂತನೆ ಇಲ್ಲದೆ ಸೃಷ್ಟಿಯಿಲ್ಲ.**

*ಅನುವಿದ್ಧಮಿವ ಜ್ಞಾನಂ ಸರ್ವಂ ಶಬ್ದೇನ ಭಾಸತೇ*

"ಸಮಸ್ತಜ್ಞಾನವೂ ಶಬ್ದದಿಂದ ಸಂಯುಕ್ತವಾಗಿದೆಯೋ ಎಂಬಂತೆ ಶಬ್ದಸಹಿತವಾಗಿಯೇ ಇರುತ್ತದೆ" ಎಂದು ಸಿದ್ಧಾಂತ. "ವಾಗೇವ ವಿಶ್ವಾ ಭುವನಾನಿ ಜಜ್ಞೇ (ವಾಗ್ದೇವತೆಯೇ ಸಮಸ್ತ ಜಗತ್ತುಗಳನ್ನೂ ಸೃಷ್ಟಿಸಿತು) ಎಂದು ಶ್ರುತಿಯು ಹೇಳುತ್ತದೆ. ಅಷ್ಟೇ ಏಕೆ? "ನಾಮ್ನೈವೇದಂ ರೂಪತ್ವೇನ ವವೃತೇ" (ಕೇವಲ ನಾಮವೇ ರೂಪಾತ್ಮಕವಾದ ಜಗತ್ತಾಯಿತು)ಎನ್ನುತ್ತದೆ ಶ್ರುತಿ. ಇಂತಹ ಪ್ರಮಾಣಗಳನ್ನು ವಿಪುಲವಾಗಿ ಉದಾಹರಿಸಬಹುದು. ಆದ್ದರಿಂದಲೇ ಶಬ್ದಾರ್ಥಗಳಿಗಿರುವ ಸಂಬಂಧವು ನಿತ್ಯವೆಂದು ಶಾಸ್ತ್ರಕಾರರ ಸಿದ್ಧಾಂತವಿದೆ. ವೈದಿಕಶಬ್ದವು ಮಾನವನಿರ್ಮಿತವಾದರೆ ಶಬ್ದಾರ್ಥಗಳ ಸಂಬಂಧವು ನಿತ್ಯವಾಗುವುದೇ ಇಲ್ಲ. ವೈದಿಕ ಶಬ್ದಗಳನ್ನು ಲಕ್ಷಿಸಿ ಸಂಬಂಧವು ನಿತ್ಯವೆಂದು ಹೇಳಿದ್ದಾರೆ. ಅಸಾಧುಶಬ್ದವನ್ನೋ ಆಧುನಿಕ ಸಂಕೇತವಾದ ರೇಡಿಯೋ, ಪ್ಲಾಸ್ಟಿಕ್ ಮುಂತಾದ ಶಬ್ದವನ್ನೋ ಇಟ್ಟುಕೊಂಡರೆ ಸಂಬಂಧವು ನಿತ್ಯವಾಗುವುದೇ ಇಲ್ಲವೆಂಬುದು ಸ್ಪಷ್ಟವಾಗಿದೆ.

ಶಬ್ದಗಳೆಂದರೆ ವೈದಿಕ ಸಂಸ್ಕೃತ ಶಬ್ದಗಳೆಂದೇ ನಮ್ಮ ಪ್ರಾಚೀನ ಋಷಿಗಳು ತಿಳಿದಿದ್ದರು. ಸುಪ್ರಸಿದ್ಧವಾದ ಪಾಣಿನಿ ವ್ಯಾಕರಣವು ಯಾವ ಭಾಷಾಶಬ್ದಗಳಿಗೆ ಸಂಬಂಧಿಸಿದ್ದು? ಪಾಣಿನಿ ಏನನ್ನೂ ಹೇಳಿಲ್ಲ. ಪತಂಜಲಿಯು "ಈ ವ್ಯಾಕರಣವು ವೈದಿಕ ಮತ್ತು ಲೌಕಿಕಶಬ್ದಗಳಿಗೆ ಸಂಬಂಧಿಸಿದ್ದು" ಎಂದು ಹೇಳುತ್ತಾನೆ. ಲೌಕಿಕವೆಂದರೆ ಲೋಕದಲ್ಲಿ ಬಳಕೆಯಲ್ಲಿದ್ದ ಸಂಸ್ಕೃತ ಶಬ್ದವೇ ಎಂಬುದು ಸ್ಫುಟವಾಗಿದೆ.

ಜಗತ್ತಿಗೆ ಕಾರಣನಾದ 'ಪುರುಷ'ನಿಂದ ವೇದಗಳು ಜನಿಸಿದವೆಂದು ಪುರುಷಸೂಕ್ತ ಹೇಳುತ್ತದೆ. ಕಾಲದಿಂದ ನಾಲ್ಕುವೇದಗಳೆಂದು ಅಥರ್ವವೇದವು ಹೇಳುತ್ತದೆ. ಕಾಲವೆಂದರೆ ಇಲ್ಲಿ ಈಶ್ವರ. ವಿಷ್ಣುಪುರಾಣ, ಭಾಗವತ, ಮನುಸ್ಮೃತಿ ಮೊದಲಾದ ಸಕಲ ಪ್ರಾಚೀನ ಗ್ರಂಥಗಳಲ್ಲಿಯೂ ವೇದಶಬ್ದಗಳಿಂದಲೇ ಈಶ್ವರನು ನಾಮರೂಪಾತ್ಮಕವಾದ ಪ್ರಪಂಚವನ್ನು ನಿರ್ಮಿಸಿ ವಸ್ತುಗಳಿಗೆ ನಾಮಕರಣ ಮಾಡಿದ್ದಾನೆಂದು ಹೇಳಿದ್ದಾರೆ.

## ಸಂಸ್ಕೃತ ಭಾಷೆ

ಸಂಸ್ಕೃತವೆಂದು ನಾವು ವ್ಯವಹರಿಸುವ ಭಾಷೆವೇದಭಾಷೆಗಿಂತ ಭಿನ್ನವಾದ್ದಲ್ಲ. ವೈದಿಕ ಭಾಷೆಯೇ ಕಾಲಕ್ರಮದಲ್ಲಿ ಲೌಕಿಕವೆಂಬ ಹೆಸರನ್ನು ಪಡೆಯಿತು. ಇದನ್ನು ಸಂಸ್ಕೃತ ಭಾಷೆಯೆಂದು ಪ್ರಾಚೀನ ಗ್ರಂಥಗಳಲ್ಲೆಲ್ಲಿಯೂ ವ್ಯವಹರಿಸಿಲ್ಲ. ಸಂಸ್ಕೃತವೆಂಬ ವ್ಯವಹಾರ ಅನಂತರ ಬಂದದ್ದು. ಸಂಸ್ಕಾರವನ್ನು ಪಡೆದದ್ದು ಸಂಸ್ಕೃತ. ವಾಲ್ಮೀಕಿರಾಮಾಯಣದಲ್ಲಿ ಸಂಸ್ಕೃತವನ್ನು 'ಸಂಸ್ಕಾರಕ್ರಮಸಂಪನ್ನ'ವೆಂದು ಹೇಳಿದ್ದಾರೆ (ಕಿಷ್ಕಿ ೩-೩೨, ಸುಂ.೩೦-೧೮)ಯಾವುದಕ್ಕೆ ಸಂಸ್ಕಾರ? ಸಂಸ್ಕಾರಕರ್ತನು ಯಾರು? ಸಂಸ್ಕಾರವೆಂದರೆ ಯಾವುದು? ಎಂಬ ಪ್ರಶ್ನೆಗಳನ್ನು ಉತ್ತರಿಸಬೇಕಾಗುತ್ತದೆ. ವೈದಿಕ ಭಾಷೆ ಮೂಲಪ್ರಕೃತಿ, ಅದಕ್ಕೆ ಸಂಸ್ಕಾರ. ವೈಯಾಕರಣರಾದ ಪಾಣಿನಿ ಮೊದಲಾದವರು ಸಂಸ್ಕಾರ ಕರ್ತರು. ವೇದಗಳಿಂದ ಪೃಥಕ್ಕರಿಸಿ ಪ್ರಕೃತಿಪ್ರತ್ಯಯಾದಿ ವಿಭಾಗದ ಮಾರ್ಗಸೂಚಿಯಾಗಿ ತೋರಿಸಿಕೊಡುವುದೇ ಸಂಸ್ಕಾರ. ಶಬ್ದರೂಪವು ಕೆಡದೆ ಶುದ್ಧವಾಗಿ ಒಂದೇ ರೀತಿಯಲ್ಲಿ ಉಳಿದುಕೊಳ್ಳುವಂತೆ ಮಾಡುವುದು ವ್ಯಾಕರಣಶಾಸ್ತ್ರದ ಉದ್ದೇಶ. ಮಹಾಸಾಗರದಂತಿದ್ದ ವೇದದ ಶಬ್ದಗಳನ್ನು ವ್ಯವಹಾರದಲ್ಲಿ ಬಳಸುವಾಗ ನಾನಾಕಾರಣಗಳ ಮೂಲಕ ವಿಕಾರವನ್ನು ಪಡೆಯುತ್ತವೆ. ಹೀಗೆ ವಿಕಾರಗೊಳ್ಳುತ್ತ ಹೋದರೆ ಮುಂದಿನವರಿಗೆ ಮೂಲಭಾಷೆಯ ಸ್ವರೂಪವೇ ತಿಳಿಯದೆ ಹೋದೀತು. ಆಗ ವೇದದ ಮತ್ತು ಸಂಸ್ಕೃತದ ಗ್ರಂಥಗಳ ಅರ್ಥವೇ ಮುಂದಿನವರಿಗೆ ಆಗದೆ ಹೋದೀತೆಂದು ವ್ಯಾಕರಣದ ರಚನೆಯಾಯಿತು. ಯಾವ ವೈದಿಕ ಶಬ್ದಗಳನ್ನೂ ಶಿಷ್ಟಜನರು ಲೋಕದಲ್ಲಿ ಬಳಸುತ್ತಿದ್ದರೋ ಅವುತ ಲೌಕಿಕ ಶಬ್ದಗಳೆನಿಸಿದವು. ಯಾವುದನ್ನು ಬಳಸುತ್ತಿರಲಿಲ್ಲವೋ ಅವು ವೈದಿಕ ಶಬ್ದಗಳೆನಿಸಿದವು. ಈ ವಿಭಾಗದ ವ್ಯವಸ್ಥೆ ಪೂರ್ಣವಾಗದೆ ಇದ್ದಾಗ ನಡುವೆ ಕೆಲವು ವೈದಿಕ ಶಬ್ದಗಳನ್ನೂ ಲೋಕದಲ್ಲಿ ಋಷಿಜನರು ಬಳಸುತ್ತಿದ್ದರು. ಇವರ ಪ್ರಯೋಗವೇ ಆರ್ಷಪ್ರಯೋಗವೆನಿಸಿಕೊಂಡಿದೆ.

ಈ ಸಂಸ್ಕೃತ ಭಾಷೆಯಿಂದ ವ್ಯವಹರಿಸುವುದು ಅಷ್ಟು ಸುಲಭವೇನಾಗಿರಲಿಲ್ಲ. ಉಚ್ಚಾರಣ ದೋಷ, ದೇಶಕಾಲಭೇದ, ಸಾಧುಶಬ್ದಗಳ ಜ್ಞಾನವಿಲ್ಲದಿರುವುದು, ಉಚ್ಚಾರಣದಲ್ಲಿ ಸೌಲಭ್ಯವನ್ನು ಬಯಸುವುದು, ಅನಾದರ ಮುಂತಾದ ಕಾರಣಗಳಿಂದ ಭಾಷೆಯು ರೂಪಾಂತರಗೊಳ್ಳುತ್ತ, ವಿಪುಲ ಸಂಖ್ಯೆಯಲ್ಲಿ ಬೆಳೆಯುತ್ತ ಹೋಗುವುದು ಸ್ವಾಭಾವಿಕ. ಹೀಗೆ ಸಂಸ್ಕೃತ ಭಾಷೆಯಿಂದಲೇ ಉಳಿದ ಎಲ್ಲ ಭಾಷೆಗಳೂ ಹುಟ್ಟಿವೆ ಎಂಬುದು ನಮ್ಮ ನಿಲುವು. ಈ ನಿಲುವಿಗೆ ಕಾರಣಗಳನ್ನು ಸಂಕ್ಷೇಪವಾಗಿ ಈ ರೀತಿ ಕ್ರೋಡೀಕರಿಸಬಹುದು.

೧. ವಿಶ್ವದಲ್ಲಿಯೇ ಅತ್ಯಂತ ಪ್ರಾಚೀನವಾದದ್ದು ವೇದ ಸಾಹಿತ್ಯ. ಇದೇ ಸಂಸ್ಕೃತ ಭಾಷೆಗೆ ಆಕರವಾಗಿದೆ.

೨. ಸಂಸ್ಕೃತ ಭಾಷೆಯ ಶಬ್ದಗಳು ಅದಕ್ಕೆ ಸಮೀಪದಲ್ಲಿರುವ ಪ್ರಾಕೃತ ಭಾಷೆಗಳಲ್ಲಿಯೂ ಪರ್ಷಿಯನ್‌ಭಾಷೆಗಳಲ್ಲಿಯೂ ವಿಕೃತವಾಗಿ ಪ್ರಯುಕ್ತವಾಗಿವೆಯೆಂಬುದು ಸರ್ವವೇದ್ಯ.

೩. ಐರೋಪ್ಯ ಭಾಷೆಗಳಿಗೂ ಸಂಸ್ಕೃತಕ್ಕೂ ಸಾದೃಶ್ಯವಿರುವುದನ್ನು ಭಾಷಾಶಾಸ್ತ್ರಿಗಳೇ ಒಪ್ಪಿಕೊಂಡಿದ್ದಾರೆ.

೪. ದ್ರಾವಿಡ ಭಾಷೆಗಳಿಗೂ ಸಂಸ್ಕೃತಕ್ಕೂ ತುಂಬ ಸಾದೃಶ್ಯವುಂಟು. ಅಚ್ಚಗನ್ನಡವೆಂದು ಜನರು ಭಾವಿಸಿರುವ ಗಡಣ, ಕುಟ್ಟು, ಕಾಡು, ಹಿಸುಕು - ಮುಂತಾದ ಶಬ್ದಗಳು ಸಂಸ್ಕೃತಜನ್ಯವಾಗಿವೆ. ಈ ಲೇಖನದಲ್ಲಿ ವಿಸ್ತಾರ ಭಯದಿಂದ ವಿವರಿಸಿಲ್ಲ.

೫. ಅರಾಬಿಕ್, ಗ್ರೀಕ್, ರಷಿಯನ್, ಚೀನೀ - ಮುಂತಾದ ಭಾಷೆಯ ಶಬ್ದಗಳಿಗೂ ಸಂಸ್ಕೃತ ಶಬ್ದಗಳಿಗೂ ಸಾದೃಶ್ಯವು ಬಹಳ ಕಡೆಗಳಲ್ಲಿ ಕಂಡುಬರುತ್ತದೆ.

ವೇದವು ಮನುಷ್ಯರಚಿತವಲ್ಲವೆಂಬುವಕ್ಕೆ ಕೆಲವು ಕಾರಣಗಳನ್ನು ಹಿಂದೆ ತೋರಿಸಿದೆ. ಇನ್ನೂ ಕೆಲವು ಕಾರಣಗಳನ್ನು ತೋರಿಸಿಕೊಡುವುದೇನೂ ಕಷ್ಟವಲ್ಲ. ಲೇಖನವು ವಿಸ್ತಾರವಾಗುವುದೆಂಬ ಭೀತಿಯೇ ಕೈಯನ್ನು ಹಿಡಿಯುತ್ತಿದೆ.

ಮನುಷ್ಯನು ಎಂದಿಗೂ ಸ್ವತಃ ಭಾಷೆಯನ್ನು ನಿರ್ಮಿಸಿಕೊಳ್ಳಲಾರ. ಎಲ್ಲ ಅಕ್ಷರಗಳ ಉಚ್ಚಾರಣೆಯನ್ನು ಕಿವಿಯಿಂದ ಕೇಳದೆ ಕಲಿಯಲಾರ. ಅನಂತರ ತನ್ನ ವ್ಯವಹಾರಕ್ಕಾಗಿ ಕೆಲವು ಸ್ವತಂತ್ರ ಶಬ್ದಗಳನ್ನು ನಿರ್ಮಿಸಿಕೊಂಡಿರಬಹುದು. ಅಂತಹ ನಿರ್ಮಾಣವನ್ನು ನಿರಾಕರಿಸಲಾಗುವುದಿಲ್ಲ. ಮಣ್ಣು, ಕಬ್ಬಿಣ, ತಾಮ್ರ - ಮುಂತಾದ ಮೂಲದ್ರವ್ಯಗಳಿಂದ ಅಸಂಖ್ಯಾತ ವಸ್ತುಗಳನ್ನು ನಿರ್ಮಿಸಲು ಸಾಧ್ಯ. ಆದರೆ ಮಣ್ಣು ಮೊದಲಾದ ಮೂಲಭೂತ ವಸ್ತುಗಳನ್ನು ಮಾತ್ರ ಮನುಷ್ಯನು ನಿರ್ಮಿಸಲಾರ. ವ್ಯಾಕರಣ ಮಹಾಭಾಷ್ಯಕರನಾದ ಪತಂಜಲಿಯು ''ಈ ಸಂಸ್ಕೃತಭಾಷೆಯಲ್ಲಿರುವ ಶಬ್ದಗಳನ್ನು ಎಣಿಸಿ ಮುಗಿಸಲು ಸಾಧ್ಯವಿಲ್ಲ''ವೆನ್ನುತ್ತಾನೆ. ''ಸಪ್ತದ್ವೀಪಯುಕ್ತವಾದ ಭೂಮಂಡಲದಲ್ಲೆಲ್ಲ ಸಂಸ್ಕೃತಭಾಷೆ ವ್ಯಾಪಿಸಿದೆ'' ಎನ್ನುತ್ತಾನೆ. ಆದ್ದರಿಂದಲೇ ಮಹಾವೈಯಾಕರಣನಾದ ಭರ್ತೃಹರಿಯು ವಾಕ್ಯಪದೀಯದಲ್ಲಿ -

> ದೈವೀ ವಾಗ್ ವ್ಯವಕೀರ್ಣೇಯಮಶಕ್ತೈರಭಿಧಾತೃಭಿಃ ।
> ಅನಿತ್ಯದರ್ಶಿನಾಂ ತ್ವಸ್ಮಿನ್ ವಾದೇ ಬುದ್ಧಿವಿಪರ್ಯಯಃ ॥ ಎನ್ನುತ್ತಾನೆ.

''ಮಾತಾಡತಕ್ಕವರು ಅಸಮರ್ಥರಾದ್ದರಿಂದ (ಸಂಸ್ಕೃತವೆಂಬ) ಈ ದೈವೀವಾಕ್ ಅಪಭ್ರಂಶರೂಪವನ್ನು ತಳೆದಿದೆ. 'ಈ ಭಾಷೆ ಹೊಸದಾಗಿ ಹುಟ್ಟಿದ್ದು, ಅನಿತ್ಯ' ಎಂದು ಹೇಳತಕ್ಕವರ ವಾದದಲ್ಲಿ ಬುದ್ಧಿಭ್ರಮಣೆ ಇದೆ''.

ಮಹಾಕವಿ ದಂಡಿಯೂ ಸಹ ''ಸಂಸ್ಕೃತಂ ನಾಮ ದೈವೀ ವಾಕ್'' ಎಂದು ಕಾವ್ಯಪ್ರಕಾಶದಲ್ಲಿ ಹೇಳಿದ್ದಾನೆ. ಸಂಸ್ಕೃತ ಭಾಷೆ ದೇವ ಭಾಷೆ; ಇದು ಅಮರವಾಣಿ.

# ಮಹಾದೇವಿಯಕ್ಕನ ವಚನಗಳ ಶಬ್ದಕಲ್ಪ

ಡಾ|| ಸಂಗಮೇಶ ಸವದತ್ತಿಮಠ

---

ಸೀಮೆಯಿಲ್ಲದ ನಿಸ್ಸೀಮಂಗೊಲಿದ, ಆದಿ ಅನಾದಿಯಿಲ್ಲದ ಅಂತರಂಗ-ಬಹಿರಂಗ ಎಲ್ಲವೂ ಒಂದೇ ಜ್ಞಾನಪ್ರಭೆಯಾಗಿ ನಿಂದ ಬಟ್ಟಬಯಲಿನ ಶರಣೆ ಮಹಾದೇವಿಯಕ್ಕ ಪರಮಾರ್ಥ ಲೋಕದ ಅದ್ಭುತದ ವ್ಯಕ್ತಿಗಳಲೊಬ್ಬಳು. ಆಧ್ಯಾತ್ಮದ ಉನ್ನತ ಶಿಖರಗಳಲ್ಲೊಬ್ಬಳು. ಅಲ್ಲಮ ಪ್ರಭುವಾದಿಯಾಗಿ ಹಲವು ಪ್ರಮುಖ ಶರಣರಿಂದ ಮುಕ್ತ ಕಂಠದ ಹೊಗಳಿಕೆಗೆ ಪಾತ್ರಳಾದ ಏಕೈಕ ಶಿವಶರಣೆ-ಮಹಾದೇವಿಯಕ್ಕ. ಐಹಿಕ ಸುಖವನ್ನು ಯಃಕಶ್ಚಿತ್ ಎಂದು ಭಾವಿಸಿ ಅದನ್ನು ಧಡಾರನೆ ಒದ್ದು ತನುವಿನೊಳಗಿದ್ದು ತನುವ ಗೆದ್ದು ಮನದೊಳಗಿದ್ದು ಮನವ ಗೆದ್ದು ವಿಷಯದೊಳಗಿದ್ದು ವಿಷಯಗಳನ್ನು ಗೆದ್ದು ಅಂಗಸಂಗವ ತೊರೆದು ಭವವ ಗೆದ್ದು ಚೆನ್ನಮಲ್ಲಿಕಾರ್ಜುನನ ಹೃದಯ ಕಮಲವನ್ನು ತಾನೆ ಬಗಿದು ಅರಳಿಸಿ ಅದರಲ್ಲಿ ಹೊಕ್ಕು ನಿರವಯಲಾದ ಮಹಾದೇವಿಯಕ್ಕನ ಸ್ಥಾನ ಶಿವಶರಣರಲ್ಲಿ ಅತ್ಯಂತ ಮಹತ್ವಪೂರ್ಣವೆನಿಸಿದೆ. ಹೆಣ್ಣುಕುಲದ ಹೆಮ್ಮೆಯಾದ ಅಕ್ಕ ಈ ನಾಡಿನಲ್ಲಿ ಬದುಕಿ ಬಾಳಿದ್ದಳೆಂಬುದೇ ಒಂದು ಅದ್ಭುತವೆನಿಸುತ್ತದೆ. ಅರಿವಿನ ಆಗರ, ಶಿವಾನುಭಾವ ಸಂಪನ್ನೆ, ಕೆಚ್ಚಿನ ಖಣಿ, ಭಕ್ತಿಯ ಭಾವುಕಿ ಯೋಗದ ಮೇರುವಾದ ಅಕ್ಕ, ಬಸವಾದಿ ಪ್ರಮಥರೆಲ್ಲರನ್ನೂ ಬೆರಗುಗೊಳಿಸಿದ ಬೆಡಗಿ.

ಮಹಾದೇವಿಯಕ್ಕನ ಅನಾದೃಶ್ಯ ಭೂಮ ವ್ಯಕ್ತಿತ್ವ ಯಾರನ್ನೂ ಮಂತ್ರ ಮುಗ್ಧರನ್ನಾಗಿಸುವಂಥದು. ಅವಳ ಆಧ್ಯಾತ್ಮದ ನಿಲವಿನ ಪರಿಯೇ ಬೇರೆ. ಅವಳ ಭಕ್ತಿಯೋಗದ ಪಾರಮ್ಯ ಒಂದೆಡೆ ನಮ್ಮ ಕಣ್ಣು ಕುಕ್ಕಿಸಿದರೆ, ಇನ್ನೊಂದೆಡೆ ಅವಳ ಜೀವನಾನುಭವದಿಂದ ಮೂಡಿ ಬಂದ ವಚನಗಳ ಸಾಹಿತ್ಯಿಕ ಚೆಲುವು ನಮ್ಮನ್ನು ಆಕರ್ಷಿಸುತ್ತದೆ. ಇಡೀ ಪ್ರಪಂಚದ ಸಾಹಿತ್ಯದ ದೃಷ್ಟಿಯಿಂದ ಕನ್ನಡದ ವಚನ ಸಾಹಿತ್ಯ ಮನುಷ್ಯನ ಜೀವನಾನುಭವಗಳ ಉಪಮಾತೀತ ಅಭಿವ್ಯಕ್ತಿಯೆನಿಸುವುದರಿಂದ ಅದು ಪ್ರಪಂಚದ ವಿಶಿಷ್ಟ ಸಾಹಿತ್ಯವೆನಿಸಿದೆ. ಇಡೀ ವಚನ ಸಾಹಿತ್ಯದಲ್ಲಿ ಸಾಹಿತ್ಯಾನುಭೂತಿಯ ದೃಷ್ಟಿಯಿಂದ ಸಾಮಾಜಿಕ ಹಿನ್ನೆಲೆಯ ಆತ್ಮಿಕ ಅನುಭಾವದಭಿವ್ಯಕ್ತಿ ಹೆಚ್ಚು ಸ್ಫುಟವಾಗಿ ಮೂಡಿಬಂದಿರುವುದು ಅಕ್ಕಮಹಾದೇವಿಯ ವಚನಗಳಲ್ಲೇ. ಲೋಕ ಹಾಗೂ ಲೋಕೋತ್ತರ ಅನುಭವಗಳ ಸಂಕೀರ್ಣ ಅನುಭವ ಅನುಭಾವಗಳನ್ನು ಅವಳೊಬ್ಬ ಹೆಣ್ಣಾಗಿ ಅಭಿವ್ಯಕ್ತಿಸಿರುವ ರೀತಿಯ ಅರ್ಥಪೂರ್ಣತೆ ಹೆಚ್ಚು ಮಹತ್ವದ್ದೆನಿಸುತ್ತವೆ. ಅವಳ ಅನನ್ಯ ಭಕ್ತಿರತಿಭಾವ ಅಮೂರ್ತವಾದ ಮಲ್ಲಿಕಾರ್ಜುನನಲ್ಲಿ ಕೇಂದ್ರೀಕೃತವಾಗಿರುವುದರಿಂದ ಅವಳ ಭಾವ, ಜ್ಞಾನ, ಕ್ರೀಗಳೆಲ್ಲವೂ ನಿರ್ದಿಷ್ಟವೆನಿಸಿವೆ. ಅವಳ ಆಧ್ಯಾತ್ಮಧೀಶಕ್ತಿಯ ಹಲವು ಮುಖಗಳು ಅವಳ ಅಭಿವ್ಯಕ್ತಿಯ ಶಬ್ದಕಲ್ಪದಲ್ಲಿ ಮೂರ್ತಗೊಂಡಿವೆ. ಅವಳ ವಚನಗಳು ಮೂರನೆಯ ವ್ಯಕ್ತಿಯ ಬಗೆಗೆ ಎರಡನೆಯ ವ್ಯಕ್ತಿಗೆ ಹೇಳುವ ಕೇವಲ ತಾತ್ತ್ವಿಕ ಬೋಧನೆಗಳಂತಿರದೆ ಎಲ್ಲಕ್ಕೂ ತಾನೇ ಪ್ರಶ್ನೋತ್ತರವಾಗುತ್ತ ನವೀನ ಶಬ್ದಕಲ್ಪದಲ್ಲಿ ನಿರೂಪಿಸಿರುವ ಬಿಡಿ ಸಾಹಿತ್ಯ ಮುತ್ತುಗಳಾಗಿವೆ. ಅವಳ ವಚನಗಳ ಶಬ್ದಕಲ್ಪಗಳನ್ನು ಲಕ್ಷಗೊಟ್ಟು ನೋಡಿದಲ್ಲಿ, ಅವಳ ಪ್ರತಿಭೆ, ಪಾಂಡಿತ್ಯ, ಲೋಕಾನುಭವ, ಶಿವಾನುಭವ ಎಲ್ಲವೂ ಸುಲಭವಾಗಿ ಗಮನಕ್ಕೆ ಬರುತ್ತವೆ.

ಅವಳ ಶಬ್ದಕಲ್ಪವನ್ನು ಇಲ್ಲಿ ಮುಖ್ಯವಾಗಿ ಧ್ವನಿ, ರೂಪ, ಅರ್ಥ ಹಾಗೂ ಶೈಲಿ ಈ ಅಂಶಗಳ ಹಿನ್ನೆಲೆಯಲ್ಲಿ ಇಲ್ಲಿ ಪರಿಶೀಲನೆಗೆತ್ತಿಕೊಳ್ಳಲಾಗಿದೆ.

**ಧ್ವನಿ** : ಭಾಷೆಯ ಮೂಲ ಸಾಮಗ್ರಿ ಧ್ವನಿ. ಧ್ವನಿಗಳನ್ನು ಆಯಾ ಭಾಷಿಕರು ತಮತಮಗನುಕೂಲವಾದ ರೀತಿಯಲ್ಲಿ ವೈವಿಧ್ಯಪೂರ್ಣವಾಗಿ ಬಳಸಿಕೊಳ್ಳುವರು. ಇಂತಹ ಮಹತ್ವದ ಧ್ವನಿ ಘಟಕಗಳಿಂದ ಶಬ್ದದ ರೂಪ ನಿರ್ಮಾಣವಾಗುವುದು. ಆ ಶಬ್ದಗಳ ವೈವಿಧ್ಯಕ್ಕೂ ಈ ಘಟಕಗಳೇ ಮೂಲಕಾರಣ. ಧ್ವನಿ ವ್ಯತ್ಯಾಸ, ಶಬ್ದಗಳ ರೂಪ ಹಾಗೂ ಶಬ್ದಗಳ ಅರ್ಥ ಬದಲಾವಣೆಗೆ ಕಾರಣವಾಗಬಹುದು ಅಥವಾ ಬದಲಾವಣೆಯನ್ನುಂಟು ಮಾಡದೆಯೆ ಧ್ವನಿಗಳನ್ನು ವಿಶಿಷ್ಟರೀತಿಯಲ್ಲಿ ಬಳಸಬಹುದು. ಮಹಾದೇವಿಯಕ್ಕ ಧ್ವನಿಗಳನ್ನು ರೂಢಿಗನುಗುಣವಾಗಿಯೇ ಸಾಮಾನ್ಯವಾಗಿ ಬಳಸಿದರೂ ಅವುಗಳನ್ನು ಬಳಸುವ ಅವಳ ಕೌಶಲ ಹಿರಿದು.*

---

* ಭಾಷೆಯಲ್ಲಿ ಮಹತ್ವದ ಸಾಮ್ಯಧ್ವನಿಗಳ ಗುಂಪಿನ ಪ್ರತಿನಿಧಿಧ್ವನಿಯನ್ನು ಸ್ಥೂಲವಾಗಿ ವರ್ಣ ಎಂದಿಟ್ಟುಕೊಂಡು 'ವರ್ಣ' ಪದವನ್ನು ಇಲ್ಲಿ ಬಳಸಲಾಗಿದೆ.

ಮಹಾದೇವಿಯಕ್ಕ ತನ್ನ ವಚನಗಳಲ್ಲಿ ಬಳಸಿರುವ ವರ್ಣಗಳಲ್ಲಿ ಅಚ್ಚಗನ್ನಡ ಧ್ವನಿಗಳಂತೂ ಸರಿಯೆ. ಜೊತೆಗೆ ಸಂಸ್ಕೃತ ವರ್ಣಗಳನ್ನು ಧಾರಾಳವಾಗಿ ಬಳಸಿದ್ದಾಳೆ. ನೇರ ಸಂಸ್ಕೃತದಿಂದ ಸ್ವೀಕೃತ ಶಬ್ದಗಳಲ್ಲಿ ಸಂಸ್ಕೃತದಲ್ಲಿದ್ದಂತೆಯೆ ವರ್ಣಗಳ ಬಳಕೆಯುಂಟು. ಕೆಲವೆಡೆ ಸಂಸ್ಕೃತ ಪದಗಳನ್ನು ತದ್ಭವ ಮಾಡಿಕೊಂಡು ಕನ್ನಡ ವರ್ಣಗಳನ್ನೂ ಬಳಸಿದ್ದಾಳೆ:

ಮಹಾದೇವಿಯಕ್ಕ ಶಕಟರೇಫ (ಱ) ವರ್ಣವನ್ನು ಸ್ಪಷ್ಟವಾಗಿ ತಪ್ಪಿಲ್ಲದೆ ಬಳಸಿದ್ದಾಳೆ.

ಉದಾ: ಒಳಗನಱಿದು ಹೊಱಗೆ ಮಱೆದವರ ನೀ ಎನಗೆ ತೋಱಯ್ಯ ಆದರೆ 'ೞ' ವನ್ನವಳು ಎಲ್ಲಿಯೂ ಬಳಸಿಲ್ಲ.

ಸಬಿಂದುಕ ಶಬ್ದಗಳು ಅಲ್ಲಲ್ಲಿ ದೊರೆಯುತ್ತವೆ. ಉದಾ: ಬೇಂಟೆ, ಕೆಲಂಬರು ಇತ್ಯಾದಿ.

ಇನ್ನುಳಿದಂತೆ ಮಹಾದೇವಿಯಕ್ಕನ ವಚನಗಳ ಭಾಷೆ ಅಚ್ಚನಡುಗನ್ನಡ ಶಿಷ್ಟ ಭಾಷೆಯಾಗಿದ್ದರಿಂದ ಆ ನಡುಗನ್ನಡದ ಎಲ್ಲ ಲಕ್ಷಣಗಳೆಲ್ಲವನ್ನೂ ಒಳಗೊಂಡ ಕಾರಣ ನಡುಗನ್ನಡ ವರ್ಣಗಳೆಲ್ಲವೂ ಅಕ್ಕನ ಭಾಷೆಯಲ್ಲಿ ಬಳಕೆಗೊಂಡಿವೆ. ವ್ಯಂಜನಾಂತ ಶಬ್ದಗಳು ಸ್ವರಾಂತವಾಗುವಿಕೆ ನಡುಗನ್ನಡದ ಒಂದು ವಿಶೇಷ ಅಂಶ. ಅಂತೆಯೆ ಅಕ್ಕನ ವಚನಗಳಲ್ಲಿ ವ್ಯಂಜನಾಂತ ಶಬ್ದಗಳು ದೊರೆಯುವುದಿಲ್ಲ. ಆದರೆ ರೇಫೆಯುಕ್ತ ಸಂಯುಕ್ತ ಪದ ಒಂದೆರಡರಲ್ಲಿ ಮಾತ್ರ ವ್ಯಂಜನಾಂತ ಬಳಕೆಯಾಗಿರುವುದುಂಟು. ಉದಾ: ಕೂಡಿರ್ದ. ಈ ಬಳಕೆ ನಿಯತವಲ್ಲವೆಂಬುದನ್ನು ಕೂರುಮ(ಕೂರ್ಮ) ಪದದಲ್ಲಿರುವ ಸ್ವರಾಂತ ಬಳಕೆ ತೋರಿಸಿಕೊಟ್ಟಿದೆ.

ಪ್ರಾಯಃ ಸಮಾವೇಶಿಕ ಅಸಮಾವೇಶಿಕ ಅರ್ಥಭೇದವನ್ನುಂಟುಮಾಡದ ರೀತಿಯಲ್ಲಿ ಉತ್ತಮ ಪುರುಷ ಏಕವಚನ ಸರ್ವನಾಮಗಳಲ್ಲಿನ 'ನ' ವರ್ಣಲೋಪವಾಗಿರುವುದನ್ನು ಗಮನಿಸಬಹುದು. ನನಗೆ >ಎನಗೆ, ನನ್ನ >ಎನ್ನ, ನಾನು >ಆನು, ತದ್ಭವೀಕರಣಗೊಂಡಾಗ, ನಡುಗನ್ನಡ ಭಾಷಾರಚನೆಗೆ ಅನುಗುಣವಾಗಿ ಶಬ್ದಗಳು ಬಳಕೆಗೊಂಡಿವೆ. ಉದಾ : ಅದುಭುತ (ಅದ್ಭುತ) ಆತುಮ (ಆತ್ಮ)

**ರೂಪ ಹಾಗೂ ಅರ್ಥ :**

ಅರ್ಥವನ್ನು ಅಥವಾ ಅರ್ಥಗಳನ್ನು ನೀಡುವಂತೆ ಕ್ರಮಬದ್ಧವಾಗಿರಿಸಿದ ಧ್ವನಿ ಅಥವಾ ಧ್ವನಿಮೊತ್ತವು 'ಶಬ್ದ' ಎನಿಸುತ್ತದೆ. ಶಬ್ದದ ಮೂಲಘಟಕ ಆಕೃತಿ ಅಥವಾ ರೂಪ ಎನಿಸಿದರೆ ಒಂದು ಅಥವಾ ಹಲವು ಮೂಲ ಘಟಕಗಳ ಮೊತ್ತ ಶಬ್ದ ಎನಿಸುತ್ತದೆ. ಉದಾಹರಣೆಗೆ ಜಲದ ಎಂಬುದೊಂದು ಶಬ್ದ. ಈ ಶಬ್ದದಲ್ಲಿ 'ಜಲ' ಹಾಗೂ 'ಅ' ಎಂಬೆರೆಡು ಮೂಲಘಟಕಗಳು. 'ಜಲ'ಘಟಕದಲ್ಲಿ ಜ್, ಅ, ಲ್ ಅ ಎಂಬ ನಾಲ್ಕು ಧ್ವನಿಘಟಕಗಳಿದ್ದರೆ, 'ಅ'ದಲ್ಲಿ ಒಂದೇ ಧ್ವನಿ

ಘಟಕವಿದೆ. 'ಅ' ಎಂಬುದು ಪ್ರತ್ಯಯ (ಬದ್ಧ)ಘಟಕ; ಜಲ ಎಂಬುದು ಸ್ವತಂತ್ರ ನಾಮ ಘಟಕ. ಇವೆರಡು ಸಂಧಿಗೊಂಡಾಗ ಮಧ್ಯ 'ದ' ಎಂಬ ಧ್ವನಿ ಆಗಮವಾಗಿದೆ. ಇವೆಲ್ಲವೂ ಒಟ್ಟಾಗಿ ಸೇರಿ ಒಂದು ಶಬ್ದ ರೂಪುಗೊಂಡಿದೆ. 'ಜಲದ' ಎಂಬ ರೂಪಕ್ಕೆ ನೀರಿನ ಎಂಬ ಅರ್ಥವಿದೆ. ಹೀಗೆ ಒಂದು ರೂಪ, ಅದಕ್ಕೆ ಕನಿಷ್ಠಪಕ್ಷ ಒಂದು ಅರ್ಥ ಅಂಟಿಕೊಂಡಿರುತ್ತದೆ. ಇಂಥ ಶಬ್ದಗಳು ರೂಪ, ಅರ್ಥಗಳ ಬೆಳವಣಿಗೆ ಇಲ್ಲವೆ ವ್ಯತ್ಯಾಸಗಳನ್ನು ಹೊಂದಬಹುದು. ಅನ್ಯಭಾಷೆಯಿಂದ ಅನೇಕ ಶಬ್ದಗಳು ಸ್ವೀಕೃತವಾಗಬಹುದು. ಹೀಗೆಯೆ ಶಬ್ದ ಬಳಕೆ ವಾಕ್ಯರಚನೆಗೆ ಕಾರಣವಾಗುತ್ತ ಅಲ್ಪಾರ್ಥದಿಂದ ಪೂರ್ಣಾರ್ಥದೆಡೆಗೆ ಸಾಗುತ್ತದೆ. ಮಹಾದೇವಿಯಕ್ಕನ ಶಬ್ದಕಲ್ಪದ ಕೌಶಲವನ್ನು ಈ ವಿಭಾಗದಲ್ಲಿ ಸ್ಪಷ್ಟವಾಗಿ ಗುರುತಿಸಬಹುದು.

ಅಚ್ಚಗನ್ನಡ ಮೂಲಶಬ್ದಗಳು ಅಕ್ಕಮಹಾದೇವಿಯ ವಚನಗಳಲ್ಲಿ ವಿಪುಲವಾಗಿ ಬಳಕೆಗೊಂಡಿವೆ.

ಮಡಿಕೆ, ಕುಡಿಕೆ, ತಡಿಕೆ, ಹಡಿಕೆ, ಅಂದುಗೆ, ಹಾವುಗೆ, ಜಳವಟ್ಟಿಗೆ, ಅಲಗು, ಅಗುಸೆ, ಅರತ, ಆಳು, ಉಲುಹು, ಮರಹು, ಊಣೆ, ಒಚ್ಚತ, ಓಗರ, ಕಳವೆ, ಕಿತ, ಕಿಱು, ಕೆಳದಿ, ಕೊಟ್ಟಣ, ಗರುವ, ಗಸಣಿ, ಚುಳುಕು, ನೊಸಲು, ಪೈಸರ, ಬಚ್ಚಣೆ, ಬಟ್ಟ, ಬೀಸರ, ಮನಕತ, ಮೇಳಾಪ, ವಾರುವ, ಸಿತಗ, ಸುಂಕಿಗ, ಸೋನೆ, ಹಂದೆ, ಹದುಳಿಗ, ಹೊರೆ, ಹೊಳಲು. ಇಂತಹ ನೂರಾರು, ಸಹಸ್ರಾರು ಶಬ್ದಗಳನ್ನು ಗುರುತಿಸಬಹುದು. ಅಕ್ಕಮಹಾದೇವಿ ಬಳಸಿರುವ ಅಚ್ಚಗನ್ನಡ ಶಬ್ದಗಳನ್ನು ಗಮನಿಸಿದರೆ ಪ್ರಾದೇಶಿಕ ವಿಶಿಷ್ಟ ಉಪಭಾಷಾ ಶಬ್ದಗಳಿಗಿಂತ ಶಿಷ್ಟಶಬ್ದಗಳ ವಿಪುಲತೆ ಎದ್ದು ಕಾಣುತ್ತದೆ.

ಮಹಾದೇವಿಯಕ್ಕ ಸಾಕಷ್ಟು ಓದಿಕೊಂಡವಳೆಂಬುದಕ್ಕೆ ಅವಳು ಬಳಸಿರುವ ಸಂಸ್ಕೃತ ಪದಗಳು ಹಾಗೂ ಕ್ಲಿಷ್ಟ ಕನ್ನಡ ಪದಗಳೇ ಸಾಕ್ಷಿಯಾಗಿವೆ. ಸಂಸ್ಕೃತದ ನೇರ ಶಬ್ದಗಳಂತೂ ಸರಿಯೆ ಅವುಗಳನ್ನು ತದ್ಭವೀಕರಣಗೊಳಿಸಿಕೊಂಡೂ ಬಳಸುತ್ತಾಳೆ.

ಶ್ವಾನ, ವಿಶ್ರಾಮ, ರೋಮ, ಅಷ್ಟಾಷಷ್ಟಿ, ಕ್ಷುಧೆ, ಕ್ಷೀರ, ಭೃತ್ಯ, ಕರ್ತೃ, ಪಾಷಾಣ, ತಚ್ಛಿಷ್ಯ, ಮಸ್ತಕ, ಕರ್ಣ, ಶುನಕ, ಶೂಕರ, ಕುಕ್ಕುಟ, ಮಾರ್ಜಾಲ, ಅಕ್ಷಯ, ಶೈತ್ಯ, ಸುಜ್ಞಾನ, ಸತ್ಕ್ರಿಯಾ, ಗರ್ಭ, ಸ್ಥಾಪ್ಯ, ಧೂಮ್ರ, ಘನ - ಇಂಥ ನೂರಾರು ಸಂಸ್ಕೃತ ಶಬ್ದಗಳು ಬಿಡಿಬಿಡಿಯಾಗಿ ವಿಪುಲವಾಗಿ ಬಳಕೆಗೊಂಡಿವೆ. ವೈಚಾರಿಕ ಗಂಭೀರತೆಯನ್ನು ಸೂಚಿಸುವಲ್ಲಿ ಇಂಥ ಸಂಸ್ಕೃತಪದ ಮಿಶ್ರಣ ಅಕ್ಕಮಹಾದೇವಿಗೆ ಅನಿವಾರ್ಯವೆನಿಸಿರಬಹುದು. ಇಲ್ಲೊಂದು ವಚನವನ್ನು ಗಮನಿಸಿ-

*ಅಯ್ಯಾ ಸದಾಚಾರ ಸದ್ಭಕ್ತಿ ಸತ್ಕ್ರಿಯಾ ಸಮ್ಯಕ್ ಜ್ಞಾನ ಸದ್ವರ್ತನೆ*
*ಸಗುಣ ನಿರ್ಗುಣ ನಿಜಗುಣ ಸಚ್ಚರಿತ್ರ ಸದ್ಭಾವ*

ಅಕ್ರೋಧ ಸತ್ಯವಚನ ಶಮೆದಮೆ ಭವಿಭಕ್ತಭೇದ
ಸತ್ಪಾತ್ರ ದ್ರವ್ಯಾರ್ಪಣ ಗೌರವಬುದ್ಧಿ ಲಿಂಗಲೀಯ ಜಂಗಮಾನುಭಾವ
ದಶವಿಧಪಾದೋದಕ, ಏಕಾದಶ ಪ್ರಸಾದ ಷೋಡಶಭಕ್ತಿ ನಿರ್ವಾಹ
ತ್ರಿವಿಧ ಷಡ್ವಿಧ ನವವಿಧ ಲಿಂಗಾರ್ಚನೆ
ತ್ರಿವಿಧ ಷಡ್ವಿಧ ನವವಿಧ ಜಪ
ತ್ರಿವಿಧ ಷಡ್ವಿಧ ನವವಿಧ ಲಿಂಗಾರ್ಪಣ

ಚಿದ್ವಿಭೂತಿ, ಸ್ನಾನ, ಧೂಳನ, ಧಾರಣ, ಸರ್ವಾಂಗದಲ್ಲಿ ಚಿದ್ರುದ್ರಾಕ್ಷಿ ಧಾರಣ
ತಾ ಮಾಡುವ ಸತ್ಯಕಾಯಕ ತಾ ಬೇಡುವ ಸದ್ಭಕ್ತಿ ಭಿಕ್ಷ, ತಾಕೊಟ್ಟುಕೊಂಬಭೇದ
ತಾನಾಚರಿಸುವ ಸತ್ಯ ನಡೆ ನುಡಿ, ತಾ ನಿಂದ ನಿರ್ವಾಣ ಪದ
ಇಂತೀ ಬತ್ತೀಸ ನೆಲೆಕಲೆಗಳ ಸದ್ಗುರು ಮುಖದಿಂದ
ಬಸವ ಮೊದಲಾದ ಸಮಸ್ತ ಗಣಂಗಳೆಲ್ಲಾ ಪ್ರಮಥ
ನಿರಾಭಾರಿ ವೀರಶೈವ ಸನ್ಮಾರ್ಗವಿಡಿದಾಚರಿಸಿದರು ನೋಡಾ
ಇಂತು ಪ್ರಮಥಗಣವಾಚರಿಸಿದ
ಸತ್ಯ ಸನ್ಮಾರ್ಗವಱಿಯದ ಮೂಢ ಅಧಮರನೆಂತು
ಶಿವಶಕ್ತಿ ಶಿವಭಕ್ತ ಶಿವಜಂಗಮವೆಂಬೆನಯ್ಯ ಚೆನ್ನಮಲ್ಲಿಕಾರ್ಜುನಾ (೧೭೬)

ಈ ವಚನದಲ್ಲಿ ಒಟ್ಟು ೯೨ ಶಬ್ದಗಳಿದ್ದು ಅದರಲ್ಲಿ ೭೨ ಶಬ್ದಗಳು ಸಂಸ್ಕೃತದಲ್ಲಿವೆ. ಸಂಸ್ಕೃತ ಶಬ್ದಗಳ ಆಯ್ಕೆಯಲ್ಲಿ ಮಹಾದೇವಿಯಕ್ಕ ಅನುಸರಿಸಿರುವ ರೀತಿ ಎಂದರೆ ನೇರ ಸಂಸ್ಕೃತ ಶಬ್ದಗಳನ್ನು ಇದ್ದುದಿದ್ದಂತೆ ತೆಗೆದುಕೊಳ್ಳುವುದೇ ವಿಶೇಷ. ತದ್ಭವ ಮಾಡಿಕೊಳ್ಳುವ ಬಗೆ ತೀರ ಕಡಿಮೆಯೆಂದೇ ಹೇಳಬೇಕು. ಆತುಮ (ಆತ್ಮ), ಕೂರುಮ (ಕೂರ್ಮ) ರೂಹು(ರೂಪ), ಹರವಸ (ಪರವಶ), ಸಜ್ಜೆ (ಶಯ್ಯಾ), ಸವಣ(ಶ್ರವಣ), ಅದುಭುತ (ಅದ್ಭುತ) ಜಕ್ಕವಕ್ಕಿ (ಚಕ್ರವಾಕ) ಮುಂತಾದ ಕೆಲವು ತದ್ಭವ ಶಬ್ದಗಳು ದೊರೆಯುತ್ತವೆ.

ಸಂಸ್ಕೃತ ಹಾಗೂ ಸಂಸ್ಕೃದಿಂದ ತದ್ಭವಮಾಡಿಕೊಂಡ ಶಬ್ದಗಳಲ್ಲದೆ ಆಡುನುಡಿಯ ಶಬ್ದಗಳನ್ನೂ ಮಹಾದೇವಿಯಕ್ಕ ಸಹಜವಾಗಿ ಬಳಸುತ್ತಾಳೆ. ಕಾಣಿಕೆ, ಹಿಡಿಯಿರೇ, ಕೊಲ್ಲುಕಾಯಿ, ಅಪ್ಪಾಬೊಪ್ಪಾ, ಅವ್ವಾ ನೀ ಮರುಳವ್ವೆ, ಆಗು ಮಾಡು, ಹೂಣಿಹೊಗು, ಈಡಾಡು - ಇಂಥ ಅನೇಕ ದೇಸಿಶಬ್ದಗಳು ಅಕ್ಕನ ವಚನಗಳಲ್ಲಿ ಹೆಣೆದುಕೊಂಡಿರುವುದರಿಂದ ಅವಳ ವಚನಗಳ ಭಾಷಾ ಸೌಷ್ಟವ ಆಕರ್ಷಕವೆನಿಸುತ್ತದೆ. ಅಚ್ಚಗನ್ನಡ ಶಬ್ದಗಳನ್ನು ತೆರಪಿಲ್ಲದೆ ಪ್ರಾಸಬದ್ಧವಾಗಿ ಜೋಡಿಸಿ ಸರಪಳಿ ಮಾಡಿ ಭಾವವಿಸ್ತರಣೆಗೆ ಚೆಲುವು ತಂದುಕೊಡುವುದೂ ಅಕ್ಕನ ಶಬ್ದಕಲ್ಪದ ಗಮನಾರ್ಹ ಅಂಶವಾಗಿದೆ.

ಸಜ್ಜನೆಯಾಗಿ ಮಜ್ಜನಕ್ಕೆರವೆ, ಅಱಲುಗೊಂಡ ಕೆಱಗೆ ತೊಱೆ ಬಂದು ಹಾಯ್ದಂತಾಯಿತು.

*ಅಮೇಧ್ಯದ ಮಡಿಕೆ, ಮೂತ್ರದ ಕುಡಿಕೆ, ಎಲುವಿನ ತಡಿಕೆ, ಕೀವಿನ ಹಡಿಕೆ*
*(ಮಡಿಕೆ-ಗಡಿಗೆ, ಕುಡಿಕೆ-ಕುಳ್ಳಿ, ತಡಿಕೆ-ಹಂದರ, ಹಡಿಕೆ-ಹೂಜಿ)*
*ಹಿತವಿದೆ ಮತವಿದೆ ಗತಿಯಿದೆ; ಪಾತಾಳವಿತ್ತಿತ್ತ ಪಾದಂಗಳತ್ತತ್ತ;*
*ಇನ್ನೇವೆನಿನ್ನೇವೆ; ಬಂದೆ ಬಂದೆ, ಉಂಡೆ ಉಂಡೆ; ಸಾಕ್ಷಿ ಸುತ್ತುತ್ತು. ಪತ್ರ*
*ಬೆಂದುತ್ತು ; ಲೆಕ್ಕ ತುಂಬಿತ್ತು; ಒಳಗನಱುದು ಹೊಱಗೆ ಮಱು ದೆವರ ನೀ*
*ಎನಗೆ ತೋಱಯ್ಯ; ಒಳಗಣ ಗಂಡನಯ್ಯ ಹೊರಗಣ ಮಿಂಡನಯ್ಯ*

ಮಹಾದೇವಿಯಕ್ಕನ ಈ ಬಗೆಯ ಶಬ್ದಕಲ್ಪ ಅವಳ ವಚನಗಳಿಗೆ ಕಾವ್ಯಸೌಂದರ್ಯವನ್ನುಂಟು ಮಾಡಿದೆ. ಇದರಿಂದಾಗಿ ಅವಳ ಬಿಡಿವಚನಗಳು ಬಿಡಿಭಾವಗೀತೆಗಳಂತೆ ಶೋಭಿಸುತ್ತವೆ.

೧೨ನೆಯ ಶತಮಾನ ಭಾಷಾದೃಷ್ಟಿಯಿಂದ ನಡುಗನ್ನಡದ ಕಾಲ. ಆದ್ದರಿಂದ ಅಕ್ಕ ಸಹಜವಾಗಿ ತನ್ನ ವಚನಗಳಲ್ಲಿ ನಡುಗನ್ನಡವನ್ನೇ ಬಳಸಿಕೊಂಡಿದ್ದಾಳೆ. ಆದರೂ ಕ್ವಚಿತ್ತಾಗಿ ಅಲ್ಲಲ್ಲಿ ಹಳಗನ್ನಡ ಶಬ್ದಗಳೂ ಇಣಿಕಿ ಹಾಕಿವೆ-

ಇಪ್ಪೆ (ಇರುಂಪೆ), ಕೆಲಂಬರು, ಬೇಂಟೆ, ಚೋಹ, ಜಳವಟ್ಟಿಗೆ, ಜೋಳವಾಳಿ, ಕೆಯ್, ಐದು, ಕಿತ, ಪೈಸರ, ಬೆಸಗೈ, ಬೇಟ, ಇತ್ಯಾದಿ.

ಅಕ್ಕನ ಶಬ್ದಬಳಕೆಯ ರೀತಿ ಒಮ್ಮೊಮ್ಮೆ ವಿಶಿಷ್ಟವಾಗಿ, ನವೀನವಾಗಿ ತೋರುವುದೂ ಉಂಟು.

ಉದಾ; *ಸಾಕ್ಷಿ ಸುತ್ತುತ್ತು, ಪತ್ರ ಬೆಂದುತ್ತು,*
*ಅಂಗಶೀತಕ್ಕೆ ಬೀಸಾಟ ಅಱ ಪೆಗಳುಂಟು*
*ಅಂತು (ಅಂತ್ಯ), ಗುಂಪ (ಆಳ), ಹೊಳಲಸುಂಕಿಗ(City tax payer)*
*ಹಂಗುಗಿತಿ, ಎಲೆಗವ್ವಾ.*

ವಿಭಕ್ತ್ಯರ್ಥ ಪದಗಳನ್ನು ಬಳಸುವಲ್ಲಿ ಅಕ್ಕ ಶಿಷ್ಟವಲ್ಲದ ವಿಧಾನವನ್ನಳವಡಿಸಿದ್ದಾಳೆ. ಪ್ರಾಯಃ ಆ ಕಾಲದ ಆಡುನುಡಿಯ ಪ್ರಭಾವವೇ ಇದಕ್ಕೆ ಕಾರಣವಾಗಿರಬಹುದು.

*ಧನದ ಮೇಲೆ ಬಂದವರೆಲ್ಲ ಅನುಸರಿಗಳಲ್ಲದೆ-*

ಇಲ್ಲಿ 'ಮೇಲೆ' ಶಬ್ದ ಉದ್ದೇಶಿತ ಅರ್ಥದಲ್ಲಿ ಬಳಕೆಯಾಗಿದ್ದರೆ ಅದೇ 'ಮೇಲೆ' ಶಬ್ದ ಚತುರ್ಥಿ ಅರ್ಥದಲ್ಲಿ ಬಳಕೆಯಾಗಿರುವುದೂ ಉಂಟು:

*ಮನದ ಮೇಲೆ ಬಂದು ನಿಂದು ಜಱಿದು*

ಈ 'ಮೇಲೆ' ಎಂಬ ಶಬ್ದವನ್ನು ಇನ್ನೂ ವಿಶಿಷ್ಟಾರ್ಥದಲ್ಲಿ ಅಕ್ಕ ಬಳಸುತ್ತಾಳೆ.

*ಮಧ್ಯಾಹ್ನದಿಂದ ಮೇಲೆ ಹಿರಿಯರಿಲ್ಲ*
*ಅಸ್ತಮಾನದಿಂದ ಮೇಲೆ ಜಿತೇಂದ್ರಿಯರಿಲ್ಲ.*

ಇಲ್ಲಿ 'ಮೇಲೆ' ಎಂಬುದು ಸ್ಥೂಲಾರ್ಥದಲ್ಲಿ 'ಆಚೆ' ಇರಬಹುದಾದರೂ ಅದಕ್ಕಿಂತ ಭಿನ್ನಾರ್ಥ ಇಲ್ಲಿದೆ.

ದ್ವಿತಿಯಾ ವಿಭಕ್ತಿಯನ್ನು ಪ್ರಥಮೆಯ ರೂಪದಲ್ಲಿ ಬಳಸಿರುವುದನ್ನು ನೋಡಿ-

*ಮೋಹವುಳ್ಳಲ್ಲಿ ಕರುಳುವ ಕಡಿಯಯ್ಯಾ*
*ಮೋಹವುಳ್ಳಲ್ಲಿ ಬೆರಳುವ ಕಡಿಯಯ್ಯಾ*
*ಪಂಚೇಂದ್ರಿಯ ಸಪ್ತಧಾತು ಅಷ್ಟಮದ ಕೊಂದುಕೂಗಿತ್ತಲ್ಲಾ.*

ದ್ವಿತಿಯಾ ವಿಭಕ್ತಿಯನ್ನು ಉವ+(ಅ)ನ್ನು । ನು ರೂಪದಿಂದ ಬಳಸಿದ್ದೂ ಉಂಟು; ಕಾಣಲಾರೆನಯ್ಯ ನಿಮ್ಮುವನು.

ಮಹಾದೇವಿಯಕ್ಕ ಮಾನವೇತರ ಲಿಂಗ ಶಬ್ದಗಳನ್ನು ಮಾನವಲಿಂಗ ಶಬ್ದಗಳನ್ನಾಗಿಸಿದ್ದು ಒಂದು ವಿಶೇಷ.

*ನಿತ್ಯವೆನ್ನಮನೆಗೆ ನಡೆದು ಬಂದಿತ್ತಿಂದು*
*ಮುಕ್ತಿ ಎನ್ನಮನೆಗೆ ನಡೆದು ಬಂದಿತ್ತಿಂದು*
*ಅಳಿಸಂಕುಳವೇ ಮಾಮರವೆ ಬೆಳದಿಂಗಳೆ ... ಕರೆದು ತೋಱಿರೆ.*
*ಹಸಿವೇ ನೀನು ನಿಲ್ಲು ನಿಲ್ಲು*
*ಅರ್ಥ ಸಂನ್ಯಾಸಿಯಾದಡೇನಯ್ಯಾ......*
*ರುಚಿ ಸಂನ್ಯಾಸಿಯಾದಡೇನಯ್ಯಾ.......*

ಆಜ್ಞಾರ್ಥ ವಿಧ್ಯರ್ಥ ಪ್ರಶ್ನಾರ್ಥ ಸಂಬೋಧನೆ ಶಬ್ದಗಳನ್ನು ಅಕ್ಕನ ಸಂಗ್ರಹದಲ್ಲಿ ನೋಡಿ-

ನಚ್ಚುಗೆ, ಸಲುಗುಗೆ, ಸೋಲುಗೆ, ಆಳಲುಗೆ, ಬಳಲುಗೆ, ಕರಗುಗೆ.. ಹಸಿವೆ ನೀನು ನಿಲ್ಲು. ಕೇಳಿರೆ, ಮಾಣಿಸಾ, ಕೆಡದಿರೆ ಕೆಡದಿರೆ, ಮೃಡನಡಿಯ ಹಿಡಿಯಿರೆ, ಶಿವಧೋ ಕಾಯಯ್ಯಾ ಬಿಡಿಸಾ ಮೃಥರ್ಮ, ಗೆಲಬಾರದು, ಅಱಿಯಬಾರದು, ಇನ್ನೇವೆನಿನ್ನೇವೆ, ಅಕ್ಕ ಕೇಳಾ ಅಕ್ಕಯ್ಯಾ, ಎಲೆಗವ್ವಾ.

ಅಕ್ಕನ ಶಬ್ದಕಲ್ಪದಿಂದಾದ ಪಡೆನುಡಿಗಳು ಉಪಮೆಗಳು, ರೂಪಕಗಳು ಇತ್ಯಾದಿ ಅವಳ ಭಾಷೆಯ ಸೊಗಡಿನಲ್ಲಿ ಅಡಗಿದ ಅಣಿಮುತ್ತುಗಳು-

ಬಿಲ್ಲಬೆಳವಲಕಾಯಿ ಒಂದಾಗಿ ಹಿಡಿಯಬಹುದೆ.
ಶೃಂಗಾರವೆಂಬ ಹಂಬಿಗೆ ಹಲ್ಲತೆಱದಡೇನುಂಟು
ಕೂವಿನ ರೂಹುನರಗಿಳಿಯನೋದಿಸುವಂತೆ
ಪರಿಮಳವಕೊಂಡು ಲಂಬಿಸುವ ತುಂಬಿ
ಚಿನ್ನದೊಳಗಣ ಬಣ್ಣ,
ಎಮ್ಮೆಗೊಂದು ಚಿಂತೆ ಸಮ್ಮಗಾಱಗೊಂದು ಚಿಂತೆ
ತೆರಣಿಯ ಹುಳು ತನ್ನ ಸ್ನೇಹದಿಂದ ಮನೆಯ ಮಾಡಿ ತನ್ನ ನೂಲು ತನ್ನನೆ
-ಸುತ್ತಿ ಸಾವಂತೆ ; ಲೋಕದ ಚೇಷ್ಟೆಗೆ ರವಿಬೀಜವಾದಂತೆ ಕರಣಂಗಳ ಚೇಷ್ಟೆಗೆ
ಮನವೆ ಬೀಜ. ಬಲ್ಲಿದ ಹಗೆಯವ ತೆಗೆವನ್ನಬರ ಬಡವರ ಹರಣ
ಹಾಱ ಹೋಗಿತ್ತು. ಅಕ್ಕಿ ಇಲ್ಲದ ತುಪ್ಪೂಕ್ಕೆ ಅಗ್ಗವಣಿಯನೆಱವೆ
ಚಿನ್ನದ ಕತ್ತಿಯಲ್ಲಿ ತಲೆಹೊಯ್ದಡೆ ಸಾಯದಿರ್ಪರೆ
ಉಸುರಿನ ಪರಿಮಳವಿರಲು ಕುಸುರಿನ ಹಂಗೇಕೆ
ಹಾವಿನ ಹಲ್ಲ ಕಳೆದು ಹಾವನಾಡಿಸಬಲ್ಲಡೆ ಹಾವಿನ ಸಂಗವೆ ಲೇಸು
ಗೂಗೆ ಕಣ್ಣ ಕಾಣಲಱಿಯದೆ ರವಿಯ ಬಯ್ದುದು

ಚಂದನವ ಕಡಿದು ಕೊಱದು ತೇದಡೆ ದನೊಂದೆನೆಂದು ಕಂಪ ಬಿಟ್ಟಿತ್ತೇ
ಚಿತ್ತದ ಸತಿಯ ಶೃಂಗಾರವೇತಕ್ಕೆ ಪ್ರಯೋಜನ

ಹಣ್ಣ ಮೆದ್ದ ಬಳಿಕ ಆ ಮರನನಾರು ತ ಱದಿಡೇನು
ಚಂದ್ರಕಾಂತದ ಶಿಲೆಗೆ ಬಂದು ಗಜ ಹೋಱುವಂತೆ
ಆವ ವಿದ್ಯೆಯ ಕಲಿತಡೇನು? ಸಾವ ವಿದ್ಯೆ ಬೆನ್ನಬಿಡದು

ಹಾಲ ಹಿಡಿದು ಬೆಣ್ಣೆಯನಱಸಲುಂಟೇ ?
ಉಣಲೆಂದು ಬಂದ ಸುಖ ಉಂಡಲ್ಲದೆ ಹಱಯದು

ಮೊಲೆ ಮುಡಿ ಇದ್ದಡೇನು ಮೂಗಿಲ್ಲದವಳಿಂಗೆ
ಕಂದನಲ್ಲಿ ಕುಂದನಱಸುವರೆ
ತುಂಬಿದುದು ತುಳುಕದು ನೋಡಾ
ಗಿರಿಯಲ್ಲಲ್ಲದೆ ಹುಲ್ಲು ಮೊರಡಿಯಲ್ಲಾಡುವುದೆ ನವಿಲು?

*ಬಂಜೆ ತಾಯಿಯ ಬೇನೆಯ ನಱ ಬಲ್ಲಳೆ*
*ಬೊಬ್ಬುಲಿಯನೇಱ ದ ಮರ್ಕಟನಂತೆ*
*ಕಟ್ಟಿದ ಕೆಱ ೦ ಗೆ ಕೋಡಿ ಮಾಣದು*

ಇಂಥ ಹಲವು ಉದಾಹರಣೆಗಳು ವಚನಗಳನ್ನು ಸಾಹಿತ್ಯ ಮೌಲ್ಯಕ್ಕೇರಿಸಿವೆ. ಹೀಗೆಯೇ ಮಹಾದೇವಿಯಕ್ಕನ ಶಬ್ದಕಲ್ಪದ ಅದ್ಭುತ ಜಗತ್ತು ನಮ್ಮ ಮನಸೂರೆಗೊಳ್ಳುತ್ತದೆ. ಅಂತೆಯೆ ಹನ್ನೆರಡನೆಯ ಶತಮಾನದಲ್ಲಿ ಮಹಾತ್ಮ ಬಸವಣ್ಣ ಅಕ್ಕನನ್ನು ಮನಸಾರೆ ಹೊಗಳಿ ಅವಳ ಶಬ್ದಕಲ್ಪಕ್ಕೆ ಮುಗ್ಧನಾಗಿದ್ದಾನೆ-

*ಹೆಂಗೂಸಿನಂಗವ ನೋಡಿರೆ ಪುರಾತನರು*
*ಬಾಲತನದಂಗವ ನೋಡಿರೆ ಪುರಾತನರು*
*ಬ್ರಹ್ಮವನಾಚರಿಸಿ ತನ್ನ ಮಱ ೦ ದಿಪ್ಪುದ ನೋಡಿರೆ ಲಿಂಗವಂತರು*
*ತನ್ನಲ್ಲಿ ತಾನು ನಿಶ್ಚಯವಾಗಿ ಭಾಷೆ ಬೇಸರವೋಗದೆ ಇಪ್ಪ ಇರವು*
*ಕೂಡಲ ಸಂಗಮದೇವರಲ್ಲಿ ನಮ್ಮ ಮಹಾದೇವಿಯಕ್ಕಂಗಾಯಿತ್ತು.*

ಇಲ್ಲಿ ಬಸವಣ್ಣ ಮಹಾದೇವಿಯಕ್ಕನ ವ್ಯಕ್ತಿತ್ವವನ್ನು ಅವಳ ''ಬೀಸರವೋಗದ ಭಾಷೆ'' ಯ ಮೂಲಕ ಗುರುತಿಸಿದ್ದು ಅವಳ ಶಬ್ದಕಲ್ಪದ ಕೌಶಲಕ್ಕೆ ಬರೆದ ಭಾಷೆಯಾಗಿದೆ.



# ಗುಲಬರ್ಗಾ ತಾಲೂಕಿನ ಸ್ಥಳನಾಮಗಳು : ಭಾಷಿಕ, ಸಾಂಸ್ಕೃತಿಕ ಅಧ್ಯಯನ

ಡಾ|| ವ್ಹಿ. ಜಿ. ಪೂಜಾರ

---

ಗುಲಬರ್ಗಾ ನಗರ ಜಿಲ್ಲಾಸ್ಥಳವೂ, ವಿಭಾಗ ಸ್ಥಳವೂ ಆಗಿದ್ದು, ಭಾಷಿಕ ಹಾಗೂ ಸಾಂಸ್ಕೃತಿಕ ದೃಷ್ಟಿಯಿಂದ ಕರ್ನಾಟಕದಲ್ಲಿ ತನ್ನದೇ ಆದ ವೈಶಿಷ್ಟ್ಯವನ್ನು ಹೊಂದಿದೆ. ಸಾಹಿತ್ಯಿಕ ದೃಷ್ಟಿಯಿಂದಲೂ ಇದು ಕ್ರಿ.ಶ. ೯ ನೆಯ ಶತಮಾನದಿಂದ ತುಂಬ ಮಹತ್ವ ಪಡೆಯುತ್ತ ಬಂದಿದೆ. ರಾಷ್ಟ್ರಕೂಟ ನೃಪತುಂಗ ದೊರೆ ಈ ಜಿಲ್ಲೆಯ ಮಳಖೇಡದಲ್ಲಿದ್ದು, ಸಾಹಿತ್ಯ ಸಂವರ್ಧನೆಗೆ ಶ್ರಮಿಸಿದುದು ಎಲ್ಲರಿಗೂ ತಿಳಿದ ವಿಷಯವೇ. ಕ್ರಿ.ಶ.೧೪ನೆಯ ಶತಮಾನದಿಂದೀಚೆ ಈ ಭಾಗವು ಮುಸ್ಲಿಂ ರಾಜರ ಆಡಳಿತಕ್ಕೊಳಪಟ್ಟಿತು. ಇದರ ಪರಿಣಾಮವಾಗಿ ಆ ಸಂಸ್ಕೃತಿಯ ಪ್ರಭಾವ ಈ ಭಾಗದ ಮೇಲಾಯಿತು. ಉರ್ದುಭಾಷೆಯ ಪ್ರಭಾವವಂತೂ ಈ ಭಾಗದ ಮೇಲೆ ಅತ್ಯಂತ ಗಾಢವಾಗಿ ಆಯಿತು. ಅಚ್ಚಗನ್ನಡ ಭಾಗವಾದ ಇದು ನಿಜಾಮನ ಆಡಳಿತಕ್ಕೊಳಪಟ್ಟಾಗಲಂತೂ ಉರ್ದುವನ್ನೇ ತನ್ನ ಆಡಳಿತ ಭಾಷೆಯನ್ನಾಗಿ ಸ್ವೀಕರಿಸಿತ್ತು. ಇಂದಿಗೂ ಇಲ್ಲಿನ ಜನ ದೈನಂದಿನ ಮಾತುಗಳಲ್ಲಿ, ''ಕಿಲಾ, ಸವಾರಿ, ಜಲಸಾ, ದೋಬಿ, ರಜಾಯಿ, ದುಕಾನ್, ಖಾರಿಜ್, ಹಿಕಮತ್, ನಜರ್, ಕಿರಾಯ್, ತೇಜ, ಬತಾಯಿ, ಖರಾಬ್, ದುನಿಯಾದ್, ಗುಂಜಾಯಿಸ್, ಮುಷ್ಕಿಲ್, ಮಜಬೂರ್, ಷಿಕಾಯತ್''[೧]

---

೧. ಸವದತ್ತಿಮಠ, ಸಂಗಮೇಶ : ''ಕನ್ನಡ ಭಾಷಾ ಪ್ರಭೇದಗಳ ನಿರ್ಮಾಣ ಕಾರಣಗಳು'', ''ಕರ್ನಾಟಕ ಭಾರತಿ', ಸಂ-೯, ಸಂ: ೧೨, ಪುಟ ೪೮

ಮುಂತಾದ ಉರ್ದುಪದಗಳನ್ನು ಹೇರಳವಾಗಿ ಬಳಸುವುದುಂಟು. ಇದಕ್ಕೆ "ಕಾರಣವೆಂದರೆ ಸುಮಾರು ೬೦೦ ವರ್ಷಗಳ ಸುದೀರ್ಘ ಅವಧಿಯ ಮುಸ್ಲಿಂ ಅರಸರ ಆಳ್ವಿಕೆ".೨ ಉರ್ದುವಿನ ಇಂಥ ಅನೇಕ ಶಬ್ದಗಳು ನಮಗೆ ಅರಿವಿಲ್ಲದಂತೆ ನಮ್ಮ ಭಾಷಾಕೋಶದಲ್ಲಿ ಸೇರಿಹೋಗಿವೆ. ಇದು ಸಹಜ ಮತ್ತು ಇದು ಜೀವಂತವಾದ ಎಲ್ಲ ಭಾಷೆಗಳಲ್ಲೂ ನಡೆಯುವ ಪ್ರಕ್ರಿಯೆಯಾಗಿದೆ. ಉರ್ದುವಿನ ಪ್ರಭಾವ ಕೇವಲ ಈ ಭಾಗದ ಜನತೆಯ ದೈನಂದಿನ ಮಾತುಗಳಲ್ಲಿ, ವಿವಿಧ ಧಾರ್ಮಿಕ ಆಚರಣೆಗಳಲ್ಲಿ ಅಷ್ಟೇ ಆಗದೆ ಈ ಭಾಗದ ಸ್ಥಳನಾಮಗಳ ಮೇಲೂ ಆದುದನ್ನು ಗುರುತಿಸಬಹುದು. ಇಲ್ಲಿನ ಕೆಲವು ಊರುಗಳ ಹೆಸರುಗಳಂತೂ ಮುಸ್ಲಿಂ ರಾಜರ, ರಾಣಿಯರ ಹಾಗೂ ಮಂತ್ರಿಗಳ ಹೆಸರುಗಳನ್ನು ಹೊಂದಿ ಇಂದಿಗೂ ಪ್ರಚಲಿತದಲ್ಲಿರುವುದನ್ನು ಕಾಣುವೆವು. ಈ ಭಾಗದ ಭಾಷೆಯ ಬಗೆಗೆ ನಡೆದಷ್ಟು ಅಧ್ಯಯನ ಸ್ಥಳನಾಮಗಳ ಮೇಲೆ ನಡೆದಿಲ್ಲ. ಇದನ್ನು ಗಮನಿಸಿ.

ಗುಲಬರ್ಗಾ ತಾಲೂಕಿನ ಸ್ಥಳನಾಮಗಳನ್ನು ಭಾಷಿಕ ಹಾಗೂ ಸಾಂಸ್ಕೃತಿಕ ದೃಷ್ಟಿಯಿಂದ ನೋಡುವ, ಅಧ್ಯಯನ ಮಾಡುವ ಪ್ರಯತ್ನವನ್ನಿಲ್ಲಿ ಮಾಡಲಾಗಿದೆ.

ಗುಲಬರ್ಗಾ ತಾಲೂಕಿನ ಸ್ಥಳನಾಮಗಳನ್ನು ನೋಡುವುದಕ್ಕಿಂತ ಮೊದಲು ಸ್ಥಳನಾಮ ಎಂದರೇನು ? ಈ ಅಧ್ಯಯನದ ಕ್ರಮ ಹಾಗೂ ಮಹತ್ವ ಈ ಅಂಶಗಳನ್ನಿಲ್ಲಿ ಸ್ವಲ್ಪದರಲ್ಲಿ ನೋಡಬಹುದು. "ಸ್ಥಳನಾಮ" ವೆಂದರೆ ಊರ ಹೆಸರುಗಳು. ಗ್ರೀಕ್ ಭಾಷೆಯಲ್ಲಿ "ಟೋಪೋಸ" ಎಂದರೆ ಸ್ಥಳಗಳು. "ನೋಮೋಸ" ಎಂದರೆ ಹೆಸರುಗಳು. ಆದ್ದರಿಂದ ಸ್ಥಳಗಳ ಹೆಸರುಗಳನ್ನು ಅಧ್ಯಯನ ಮಾಡುವ ವಿಜ್ಞಾನಕ್ಕೆ "ಟೋಪೋನೋಮಿ" ಎಂದು ಕರೆಯಲಾಗಿದೆ. "ಟೋಪೋಸ್" ಮೂಲತಃ ಭೂವಿವರವನ್ನು ಸೂಚಿಸುವ ಅರ್ಥ ಹೊಂದಿದ್ದರೂ, ಇಲ್ಲಿ ಪಾರಿಭಾಷಿಕವಾಗಿ ಪ್ರಾಕೃತಿಕ ಮತ್ತು ಸಾಂಸ್ಕೃತಿಕ ವೈಲಕ್ಷಣಗಳೆರಡನ್ನೂ ಇದು ಒಳಗೊಂಡಿದೆ. ಭಾರತದಲ್ಲಿ ಇಂಥ ಭೌಗೋಲಿಕ ನಾಮ ಅಥವಾ ದೇಶನಾಮಗಳಿಗೆ ಪ್ರಾದೇಶಿಕ ಭಾಷೆಗಳಲ್ಲಿ ಗ್ರಾಮನಾಮ (ಹಿಂದುಸ್ತಾನಿ) ಊರ್ಲಪೇರ್ಲು (ತೆಲುಗು), ಇಡಪ್ಪೆಯ ರಾಯವು (ತಮಿಳು) ಊರ ಹೆಸರು (ಕನ್ನಡ) ಮುಂತಾದ ಪರ್ಯಾಯಪದಗಳನ್ನು ಬಳಸಲಾಗಿದೆ. ಊರು, ಗ್ರಾಮ, ದೇಶ ಮುಂತಾದ ಪದಗಳಿಗೆ ಪಾರಂಪರಿಕವಾದ ಸೀಮಿತ ಅರ್ಥಗಳಿರುವುದರಿಂದ ಉಳಿದ ಸಾಮುದಾಯಿಕ ಮಾನವ ನೆಲೆಗಳ ಅರ್ಥವನ್ನು ಅವು ಒಳಗೊಳ್ಳುವುವು. ಆದುದರಿಂದ ಇಲ್ಲಿ ಹೊಸದಾಗಿ ಬಳಕೆಗೆ ಬಂದಿರುವ ಸ್ಥಳನಾಮವೆಂಬ ಪದವನ್ನು ಹೆಚ್ಚು ಸಮರ್ಪಕವೆಂದು ಬಳಸಬಹುದು. ಸ್ಥಳನಾಮಗಳು ಮಾನವರ ಸಣ್ಣ ನೆಲೆಯಿಂದ ಆರಂಭಿಸಿ ಅತಿದೊಡ್ಡ ಮಾನವ ವಸಾಹತು ನೆಲೆಗಳ ಅರ್ಥವನ್ನು ಹೊಂದಿವೆ.

ಸ್ಥಳನಾಮಗಳನ್ನು ಎರಡು ರೀತಿಯಲ್ಲಿ ಅರ್ಥಯಿಸಬಹುದಾಗಿದೆ. ಒಂದು, ಭೌಗೋಳಿಕ ವೈಲಕ್ಷಣವನ್ನು ಸೂಚಿಸುವ ಸಾಮಾನ್ಯಾರ್ಥ. ಈ ಬಗೆಯ ಹೆಸರುಗಳು ಹೆಚ್ಚಾಗಿ ರೂಢ

೨. ಸವದತ್ತಿ ಮಠ, ಸಂಗಮೇಶ ಅದೇ ಪುಟ - ೪೭

ನಾಮಗಳ ಸ್ವರೂಪದಲ್ಲಿ ಮಾತ್ರ ಉಳಿಯುತ್ತವೆ. ಎರಡು, ಸಾಂಸ್ಕೃತಿಕ ವೈಶಿಷ್ಟ್ಯವನ್ನು ಸೂಚಿಸುವ ವಿಶೇಷಾರ್ಥ. ಆಯಾ ಜನಸಮುದಾಯವು ನೆಲೆನಿಂತ ಒಂದೊಂದು ಸ್ಥಳದ ವಿಸ್ತೀರ್ಣ, ಅಲ್ಲಿನ ಜನಸಂಖ್ಯೆ ಮುಂತಾದ ಆಧಾರಗಳ ಮೇಲಿಂದ ಅದನ್ನು ಒಂದು ಹಳ್ಳಿ, ಊರು, ಗ್ರಾಮ, ನಗರ, ಖೇಡ, ಪುರ, ಪಟ್ಟಣ ಎಂದು ಮುಂತಾಗಿ ಕರೆಯಲಾಗುತ್ತದೆ ಇದರೊಂದಿಗೆ ಆಯಾ ಸ್ಥಳಕ್ಕೆ ಪ್ರಾಪ್ತವಾದ ಒಂದು ರೀತಿಯ ವಿಶಿಷ್ಟ ಘಟಕಗಳು ಬರುತ್ತವೆ. ಇಂಥ ನಿರ್ದಿಷ್ಟ ಹೆಸರುಗಳುಳ್ಳ ಪದಗಳೇ ಸ್ಥಳನಾಮಗಳು. ನಿರ್ದಿಷ್ಟ ಮತ್ತು ವಾರ್ಗಿಕ ಎಂಬೆರಡು ಘಟಕಗಳು ಕೂಡಿ ಸಾಮಾನ್ಯವಾಗಿ ಸ್ಥಳನಾಮಗಳು ಸಿದ್ಧಗೊಳ್ಳುತ್ತವೆ. ಎರಡಕ್ಕಿಂತ ಹೆಚ್ಚು ಘಟಕಗಳು ಇರಬಹುದು ಮತ್ತು ಒಂದೇ ಘಟಕವೂ ಕೂಡ ಅದರಲ್ಲಿರಬಹುದು.

ಸ್ಥಳನಾಮಾಧ್ಯಯನಕ್ಕೆ ದೇಶ ವಿದೇಶಗಳಲ್ಲಿ ಹೆಚ್ಚಿನ ಪ್ರಾಶಸ್ತ್ಯ ದೊರಕಿದೆ. ಭಾರತದಲ್ಲೂ ತಕ್ಕಮಟ್ಟಿಗೆ ಈ ಅಧ್ಯಯನ ನಡೆದಿದೆ. ಕನ್ನಡದಲ್ಲೂ ಈ ವಿಷಯ ಕುರಿತ ಅಧ್ಯಯನವನ್ನು ಡಾ|| ದೇ. ಜವರೇಗೌಡ, ಶಂಬಾ ಜೋಶಿ, ಡಾ|| ಸಂಗಮೇಶ ಸವದತ್ತಿಮಠ, ಡಾ|| ಆರ್.ಸಿ. ಹಿರೇಮಠ, ಡಾ|| ಎಂ. ಚಿದಾನಂದಮೂರ್ತಿ, ಡಾ|| ಎಂ.ಎಂ. ಕಲಬುರ್ಗಿ, ಡಾ|| ಆರ್ವೈ. ಮಣಿಪಾಲ, ವಿ. ಗೋಪಾಲಕೃಷ್ಣ, ಡಾ|| ಚೆನ್ನಕ್ಕ ಎಲಿಗಾರ ಮುಂತಾದವರು ನಡೆಸಿದ್ದಾರೆ. ಆದರೆ ಕನ್ನಡದಲ್ಲಿ ಇನ್ನೂ ಇದು "ಸ್ಥಳನಾಮವಿಜ್ಞಾನ" ವೆಂಬ ಪ್ರತ್ಯೇಕ ಅಧ್ಯಯನ ಶಾಖೆಯನ್ನೇನೂ ಹೊಂದಿಲ್ಲ, ಹೊಂದಬೇಕಾಗಿದೆ. ಈ ಅಧ್ಯಯನ ನಿಜಕ್ಕೂ ಮಹತ್ವಪೂರ್ಣವಾದುದು. ಸ್ಥಳನಾಮದ ಹಿಂದೆ ಆ ಊರಿನ ಇತಿಹಾಸವೇ ಅಡಗಿರಬಹುದು. ಪ್ರತಿಯೊಂದು ಊರ ಹೆಸರಿನ ಹಿಂದೆ ಸಾಮಾನ್ಯವಾಗಿ ಒಂದು ವಿಧದ ವಿಶೇಷತೆ ಇರುತ್ತದೆ. ಜನತೆಯ ಜೀವನ ವಿಧಾನ, ಅವರ ಸಂಸ್ಕೃತಿ ಅದರಲ್ಲಿ ಅಡಗಿರುತ್ತದೆ. "ಒಂದು ಊರಿಗೆ, ಅಲ್ಲಿ ನಡೆದ ಸಾಮಾಜಿಕ, ಧಾರ್ಮಿಕ ಅಥವಾ ರಾಜಕೀಯ ಇತ್ಯಾದಿ ವಿಶೇಷ ಘಟನೆಯ ನೆನಪಿಗಾಗಿ ಹೆಸರು ಇಟ್ಟಿರಲು ಸಾಧ್ಯವಿದೆ"[೩]

ಊರುಗಳಿಗೆ ಆಯಾ ಹೆಸರುಗಳು ಬರಬೇಕಾದರೆ ಏನಾದರೂ ಐತಿಹ್ಯಗಳು, ದಂತಕಥೆಗಳು ಪುರಾಣ ಕಥೆಗಳು ಕಾರಣವಾಗಬಹುದು. ಅಲ್ಲಿನ ಮಣ್ಣು, ಕಲ್ಲು, ಪೈರು, ಗುಡ್ಡ, ಹೊಳೆ, ಹಳ್ಳ, ತೊರೆ ಮುಂತಾದ ನೈಸರ್ಗಿಕ ಹಿನ್ನಲೆಯನ್ನೂ ಅವು ಹೊಂದಿರಬಹುದು. ಹಾಗೂ ಯಾರಾದರೂ ರಾಜ, ರಾಣಿ, ಮಂತ್ರಿ, ಧಾರ್ಮಿಕ ಮಹಾಪುರುಷ, ಸಾಧು ಸತ್ಪುರುಷರು ಅಲ್ಲಿ ಆಗಿಹೋಗಿದ್ದರೆ ಅವರ ಪ್ರಭಾವವಾಗಿದ್ದರೆ ದೇವರ ಜಾತ್ರೆ, ಉತ್ಸವ ವಿಶೇಷವಾಗಿ ನಡೆಯುತ್ತಿದ್ದರೆ ಸಾಮಾನ್ಯವಾಗಿ ಇವೆಲ್ಲ ಆಯಾ ಊರುಗಳಿಗೆ ಆಯಾ ಹೆಸರುಗಳು ಬರಲು ಕಾರಣವಾಗುತ್ತವೆ. ಊರುಗಳಿಗೆ ಹೆಸರುಗಳು ಬರಲು ಇಂಥವೇ ಕಾರಣಗಳಿರುತ್ತವೆಯೆಂದು ಖಚಿತವಾಗಿ ಬೊಟ್ಟುಮಾಡಿ ಹೇಳಲಿಕ್ಕೆ ಬರದು. ಆದರೂ ಕೆಲವಾದರೂ ಊರುಗಳಿಗೆ ಹೆಸರು ಬರಲು ಇರುವ ಕಾರಣಗಳನ್ನು ಗುರುತು

೩. ಸವದತ್ತಿಮಠ. ಸಂಗಮೇಶ : ಜನಪದ ಭಾಷಾ ಸಮೀಕ್ಷೆ, ಪುಟ-೬೫ (ಊರ ಹೆಸರುಗಳು).

ಮಾಡಬಹುದು. ಆಯಾ ಊರುಗಳಿಗೆ ಆಯಾ ಹೆಸರುಗಳು ಹೇಗೆ ಬಂದುವು ಎಂಬುದನ್ನು ಅಧ್ಯಯನ ಮಾಡಿದರೆ ಅದೊಂದು ರೀತಿಯಲ್ಲಿ ಆ ಊರಿನ ಹಿನ್ನೆಲೆಯನ್ನು, ಸಂಸ್ಕೃತಿಯನ್ನು ತಿಳಿದುಕೊಂಡಂತಾಗುತ್ತದೆ. ಭಾಷಾದೃಷ್ಟಿಯಿಂದ ಅಧ್ಯಯನ ಮಾಡಿದಾಗಲಂತೂ ಆ ಊರ ಹೆಸರಿನ ಮೇಲೆ ಹೊಸಬೆಳಕು ಚೆಲ್ಲಿದಂತಾಗುತ್ತದೆ.

ಗುಲಬರ್ಗಾ ತಾಲೂಕಿನಲ್ಲಿ ಬರುವ ಒಟ್ಟು ಊರುಗಳು ೧೬೦. ಅವುಗಳಲ್ಲಿ ಕೆಲವು ಊರುಗಳ ಹೆಸರುಗಳನ್ನು ಅಂದರೆ ಸ್ಥಳನಾಮಗಳನ್ನು ಇಲ್ಲಿ ಭಾಷಿಕ ಹಾಗೂ ಸಾಂಸ್ಕೃತಿಕ ಅಧ್ಯಯನಕ್ಕೆ ಈ ರೀತಿ ಅಳವಡಿಸಿರುವೆ.

**ಭಾಷಿಕ ಅಧ್ಯಯನ :**

ಭಾಷಾ ವಿಜ್ಞಾನಿಗಳು ಊರಹೆಸರುಗಳನ್ನು ನಿರ್ದಿಷ್ಟ ಮತ್ತು ವಾರ್ಗಿಕ ಎಂಬೆರಡು ಘಟಕಗಳಲ್ಲಿ ವಿಭಜಿಸಿ ಅಧ್ಯಯನ ಮಾಡುವುದುಂಟು. ಹಿಂದೆ ಹೇಳಿದಂತೆ ಕೆಲ ಊರ ಹೆಸರುಗಳು ಎರಡಕ್ಕಿಂತ ಹೆಚ್ಚು ಘಟಕಗಳನ್ನು ಹೊಂದಿರಲೂಬಹುದು. ಅವು ವಿಶಿಷ್ಟದ ಹಿಂದೆ (ಪ್ರಿಫಿಕ್ಸ್) ವಿಶೇಷಣ ಅಥವಾ ಯಾವುದೋ ವಿಷಯ ಸೂಚಕ ಪದಗಳಾಗಿ ಸೇರಿ ಕೊಂಡಿರುತ್ತವೆ. ಹೀಗೆ ಸೇರಿಕೊಂಡಂಥವುಗಳನ್ನೂ ನಿರ್ದಿಷ್ಟವೆಂದೇ ಪರಿಗಣಿಸುವುದುಂಟು. ಇಂಥ ಕ್ರಮವನ್ನೇ ಇಲ್ಲಿ ಅನುಸರಿಸಲಾಗಿದೆ. ನಿರ್ದಿಷ್ಟವೆಂದರೆ ವಿಶಿಷ್ಟ (ಸ್ಪೆಸಿಫಿಕ್) ಎಂದರ್ಥ. ಅಂದರೆ ಯಾವುದಾದರೂ ವಿಷಯವನ್ನು ಒಳಗೊಂಡಂಥದು ವಾರ್ಗಿಕ (ಜನರಿಕ) ಎಂದರೆ ಊರುಗಳ ಹೆಸರುಗಳ ಉತ್ತರಾರ್ಧಘಟಕ. ಇದರಲ್ಲಿ ವಿಷಯ ಪ್ರಸ್ತಾಪವಿರದು. ಉದಾ: ಊರು, ಹಳ್ಳಿ, ಪುರ, ಗ್ರಾಮ, ಖೇಡ, ನಗರ, ಕೆಯ್, ಗಾ, ಗೆ, ಗಿ, ಆಬಾದ, ಕಲ್ಲ, ಮೂಡ, ಹಾಳ, ವಾಡ, ಕೆರೆ, ಮಡಿ ಪಟ್ಟಣ, ಕುಂದ, ಕೋಟೆ ಈ ಮುಂತಾದ ಘಟಕಗಳಲ್ಲಿ ಒಂದನ್ನೊಳಗೊಂಡು ಕೊನೆಗೊಳ್ಳುವಂಥವು. ನಿರ್ದಿಷ್ಟ ಮತ್ತು ವಾರ್ಗಿಕ ಇವೆರಡು ಪ್ರತ್ಯೇಕ ಆಕೃತಿಮಾಗಳೇ. ಈ ಆಕೃತಿಮಾಗಳು ಕೊಡುವಾಗ ಅಲ್ಲಿ ಧ್ವನಿವ್ಯತ್ಯಾಸವೂ ಆಗುತ್ತದೆ. ನಿಘಂಟುವಿಜ್ಞಾನ (ಲೆಕ್ಸಿಕೊಗ್ರಾಫಿ) ಕ್ಕೂ ಈ ರೀತಿಯ ಸ್ಥಳನಾಮಾಧ್ಯಯನ ಮಹತ್ವದ ಕೊಡುಗೆಯಾಗುತ್ತದೆ. ಭಾಷಿಕ ದೃಷ್ಟಿಯಿಂದ ಗುಲಬರ್ಗಾ ತಾಲೂಕಿನಲ್ಲಿ ಬರುವ ಕೆಲವು ಊರುಗಳನ್ನು ಈ ಘಟಕಗಳನ್ವಯ ವಿಂಗಡಿಸಿದುದನ್ನು ಹಾಗೂ ಅವು ರೂಪ ಹಾಗೂ ಧ್ವನಿ ವ್ಯತ್ಯಾಸ ಪಡೆದುದನ್ನು ಇಲ್ಲಿ ಕೆಲವು ಉದಾಹರಣೆಗಳನ್ನು ನೋಡುವುದರ ಮೂಲಕ ತಿಳಿಯಬಹುದಾಗಿದೆ.

೧) **ಊರು** : ಇದು ಅಚ್ಚ ದ್ರಾವಿಡ ಪದ. ಊರುಗಳಿಂದ ಕೊನೆಗೊಳ್ಳುವ ಸ್ಥಳಗಳು ಗಾತ್ರದಲ್ಲಿ ಚಿಕ್ಕವು. ಅಂಥ ವಿಶೇಷತೆಯನ್ನೇನೂ ಒಳಗೊಂಡಿರುವುದಿಲ್ಲ. ಇಲ್ಲಿ ನಿರ್ದಿಷ್ಟ ಮತ್ತು ವಾರ್ಗಿಕ ಘಟಕ (ಆಕೃತಿಮಾ)ಗಳು ಸೇರುವಾಗ ಸ್ವರೈಕ್ಯ (ಅಸಿಮಿಲೇಶನ್) ಹೊಂದುವುದನ್ನು

ಗುರುತಿಸಬಹುದು.

ನಾಗ + ಊರು = ನಾಗೂರು

ಜೋಗಿ + ಊರು = ಜೋಗೂರು

ಪರಿಸೆ(ಪ > ಹ) + ಊರು =ಹರಸೂರು

ಸಣ್ಣ + ಊರು = ಸಣ್ಣೂರು.

೨) **ಪುರ** : ಪುರದಿಂದ ಕೊನೆಗೊಳ್ಳುವ ಸ್ಥಳಗಳು ಊರಿಗಿಂತ ಗಾತ್ರದಲ್ಲಿ ದೊಡ್ಡವು. ಸಾಮಾನ್ಯವಾಗಿ ಇವುಗಳ ಮಧ್ಯೆ ದೇವಾಲಯವಿರುತ್ತದೆ.

ಕಮಲ + ಪುರ = ಕಮಲಾಪುರ

ಹೀರಾ + ಪುರ = ಹೀರಾಪುರ

ರಾಜ + ಪುರ = ರಾಜಾಪುರ

ಸುಲ್ತಾನ +ಪುರ = ಸುಲ್ತಾನಪುರ

**2) ಹಳ್ಳಿ** : ಹಳ್ಳಿಯಿಂದ ಕೊನೆಗೊಳ್ಳುವ ಸ್ಥಳಗಳು ಊರಿನಂತೆ ಗಾತ್ರದಲ್ಲಿ ಚಿಕ್ಕದಾಗಿರುತ್ತವೆ.

ನಾಗನ + ಹಳ್ಳಿ = ನಾಗನಹಳ್ಳಿ

ಸೋಮನಾಥ + ಹಳ್ಳಿ = ಸೋಮನಾಥಹಳ್ಳಿ

ಭೀಮ + ಹಳ್ಳಿ = ಭೀಮಳ್ಳಿ

ನಡುವಿನ + ಹಳ್ಳಿ = ನಡನಳ್ಳಿ, ನಡ್ನಳ್ಳಿ

ಇಲ್ಲಿ ಭೀಮಳ್ಳಿ ಹಾಗೂ ನಡ್ನಳ್ಳಿ ಜನತೆಯ ಸೌಲಭ್ಯಾಕಾಂಕ್ಷೆಗೆ ಒಳಗಾಗಿ ಈ ರೂಪ ಪಡೆದಿವೆ.

೪) **ಗ್ರಾಮ** : ಗಾ, ಗೆ, ಗಿ : ಗ್ರಾಮ ಪದ ಸಂಸ್ಕೃತದ್ದು, ಇದು ಊರುಗಳ ಕೊನೆಗೆ ಬರುವಂಥದು. ''ಈ ಗ್ರಾಮ ಗಾವ್ ಆಗುತ್ತದೆ. ಇಲ್ಲಿಯ ಅರ್ಧಸ್ವರವಾದ ವ್ ಆಡುಮಾತಿನಲ್ಲಿ ಉದುರಿ ಹೋಗುತ್ತದೆ. ಆಗ ಉಳಿಯುವ ಗಾ > ಗೆ ಆಗುವುದು. ಗೆ > ಗಿ ಆಗುವುದು, ಭಾಷೆಯಲ್ಲಿ ಜರುಗುವ ಸಹಜ ಕ್ರಿಯೆಯಾಗಿದೆ''.[೪] ಹೀಗೆ ರೂಪುಗೊಂಡ ಕೆಲ ಊರುಗಳನ್ನಿಲ್ಲಿ ನೋಡಬಹುದು.

ಅಂಕಲ + ಗ್ರಾಮ = ಅಂಕಲಗಾವ್ > ಅಂಕಲಗಾ > ಅಂಕಲಗಿ

ಯಳವಂತ + ಗ್ರಾಮ- ಯಳವಂತಗಾವ್ > ಯಳವಂತಗಾ > ಯಳವಂತಗೆ

ಭೂಸಣ + ಗ್ರಾಮ = ಭೂಸಣಗಾವ್ > ಭೂಸಣಗಾ > ಭೂಸಣಗಿ

---

೪. ಕಲಬುರ್ಗಿ ಎಂ.ಎಂ.:'ಕೆ - ಗೆ ಕಿ-ಗಿ' ಎಂಬ ಲೇಖನ.
(ಸಂಶೋಧನ ವ್ಯಾಸಂಗ, ಸಂಪುಟ-1, ಸಂಚಿಕೆ-6, ಪುಟ-2 ಸಂ-ಡಾ. ಸಂಗಮೇಶ ಸವದತ್ತಿಮಠ).

ಕವಲ + ಗ್ರಾಮ ಕವಲಗಾವ್ > ಕವಲಗಾ > ಕವಲಗಿ
ಸಾವಳ + ಗ್ರಾಮ = ಸಾವಳಗಾವ್ > ಸಾವಳಗಾ > ಸಾವಳಗಿ
ಕಿರಣ + ಗ್ರಾಮ = ಕಿರಣಗಾವ್ > ಕೀರಣಗಾ > ಕೀರಣಗಿ

ಹೀಗೆ ಊರ ಹೆಸರಿನ ಕೊನೆಗೆ ಬರುವ ಗ್ರಾಮ ಗಾವ್ ಆದುದನ್ನು ; ಗಾ > ಗೆ ಹಾಗೂ ಗೆ > ಗಿ ಆದುದನ್ನು ನೋಡಿದೆವು.

**5) ಕೆಯ್ - ಕೆ (ಗೆ) ಕಿ (ಗಿ)** : ಕೆಲವು ಊರುಗಳ ಕೊನೆಗೆ ಬರುವ 'ಕೆಯ್'-ರೂಪ ಕೆ (ಗೆ) > ಕಿ (ಗಿ) ಆಗುವುದನ್ನು ನೋಡಬಹುದು. ಈ ಪದದಿಂದ ಕೊನೆಗೊಳ್ಳುವ ಊರುಗಳು ಸಾಮಾನ್ಯವಾಗಿ ಬಯಲು ಪ್ರದೇಶದಲ್ಲಿರುತ್ತವೆ. 'ಕೆಯ್' ಎಂದರೆ ಕೃಷಿಪ್ರದೇಶ, ಬಯಲು ಭೂಮಿ. ಎಂದರ್ಥ' ಗಾ, ಗೆ, ಗಿ, ಈ ಅಕ್ಷರಗಳ ಮೂಲರೂಪ 'ಕೆಯ್' ಆಗಿದೆ.[೫] ಕೆಯ್ ಇದು ದ್ರಾವಿಡ ಪದ. ಇವರ ಸವೆದ ರೂಪಗಳೇ ಗಾ, ಗೆ, ಗಿ ಗಳಾಗಿವೆ. ಜನಸಾಮಾನ್ಯರು, ಗ್ರಾಮೀಣರು ಊರಹೆಸರುಗಳನ್ನು ಉಚ್ಚರಿಸುವಾಗ ಕೊನೆಗೆ ಬರುವ 'ಯ್' ವನ್ನು ಲೋಪ ಮಾಡುತ್ತಾರೆ. ಅಲ್ಲಿ 'ಕೆ' ಮಾತ್ರ ಉಳಿಯುತ್ತದೆ. ಅದು ಜನತೆಯ ಬಾಯಲ್ಲಿ 'ಗೆ' ಆಗಿ, 'ಗಿ' ಆಗಿ ಮಾರ್ಪಡುತ್ತದೆ. ಗುಲಬರ್ಗಾ ತಾಲೂಕಿನ ಹಲವು ಊರುಗಳು 'ಕೆಯ್' ದಿಂದ ಕೊನೆಗೊಳ್ಳುವವು. ಅಂಥ ಕೆಲವು ಊರುಗಳನ್ನಿಲ್ಲಿ ನೋಡಬಹುದು.

ಹಾಗರಗುಂಡ + ಕೆಯ್ = ಹಾಗರಗುಂಡ ಕೆ (ಗೆ) ಹಾಗರಗುಂಡಕಿ (ಗಿ) > ಹಾಗರಗುಂಡಗಿ.
ಸರಡ + ಕೆಯ್ = ಸರಡಕೆ(ಗೆ) > ಸರಡಕಿ(ಗಿ) >ಸರಡಗಿ
ಜೀವಣ + ಕೆಯ್ = ಜೀವಣಕೆ (ಗೆ) >ಜೀವಣಕಿ (ಗಿ) >ಜೀವಣಗಿ
ಕಲಂಬರ + ಕೆಯ್ = ಕಲಂಬರಕೆ(ಗೆ) >ಕಲಂಬರಕಿ(ಗಿ) >ಕಲಂಬರಗಿ > ಕಲಬರಗಿ > ಕಲಬುರಗಿ.

ಇಲ್ಲಿ ಸಬಿಂದುಕ ಅಬಿಂದುಕವಾಗಿದೆ ಮತ್ತು 'ಅರ್ಧಸ್ವರವಾಗಿರುವ 'ಯ್' ಉದುರುವುದು; ಆಗ ಉಳಿಯುವ ಕೆ (ಗೆ) >ಕಿ (ಗಿ) ಆಗುವುದು. ಆಡುಮಾತಿನಲ್ಲಿ ಸಹಜ."[೬]

೬) **ಅಬಾದ** : ಇದು ಪರ್ಶಿಯನ್ ಪದ. ಉರ್ದುವಿನ ಪ್ರಭಾವದಿಂದ ಕನ್ನಡಕ್ಕೆ ಬಂದಂಥದು. ಅಬಾದ ಎಂದರೆ ಜನರು ವಾಸಿಸಲು ಯೋಗ್ಯವಾದ ಸ್ಥಳ ಎಂದರ್ಥ.

ಫರಹತ್ + ಅಬಾದ = ಫರಹತಾಬಾದ

ಫಿರೋಜ + ಅಬಾದ = ಫಿರೋಜಾಬಾದ.

೫) ಕಲಬುರ್ಗಿ ಎಂ.ಎಂ. : ಕನ್ನಡನಾಮವಿಜ್ಞಾನ, ಪುಟ ೭೨
೬) ಕಲಬುರ್ಗಿ ಎಂ.ಎಂ. : ಕೆ-ಗೆ, ಕಿ-ಗಿ, ಎಂಬ ಲೇಖನ.
(ಸಂಶೋಧನ ವ್ಯಾಸಂಗ, ಸಂ-೧, ಸಂಚಿಕೆ-೬, ಪುಟ-೨ ಸಂ. ಡಾ|| ಸಂಗಮೇಶ ಸವದತ್ತಿಮಠ)

**7) ಕಲ್ಲ** : ಕಲ್ಲಿದಿಂದ ಕೊನೆಗೊಳ್ಳುವ ಊರುಗಳು ಹೆಸರಿಡುವ ಮೊದಲನೇ ಘಟ್ಟವನ್ನು ಅಂದರೆ ಬಹು ಪ್ರಾಚೀನತೆಯನ್ನು ಸೂಚಿಸುತ್ತವೆ. ಸೃಷ್ಟಿ ಘಟ್ಟದಲ್ಲಿಯೇ ಅಲ್ಲಿಯ ನೈಸರ್ಗಿಕ ಸ್ಥಿತಿಯನ್ನೇ ಗ್ರಾಮಕ್ಕೆ ನಾಮವೆಂದು ಇಡಲಾಗಿತ್ತು. ಆಗ ಅನ್ವರ್ಥಕ ನಾಮಪದ್ಧತಿಯೇ ಬಳಕೆಯಲ್ಲಿದ್ದಿತು.

ತಡ + ಕಲ್ಲ = ತಡಕಲ್ಲ

ತೊಂಡ + ಕಲ್ಲ = ತೊಂಡಕಲ್ಲ

**೮) ಹಾಳ** : ಇದು 'ಪ್ರೊಳಲು'ದಿಂದ ಬಂದಿದೆ. ಪ್ರೊಳಲು ಎಂದರೆ ಪಟ್ಟಣ. ಕಾಲಾಂತರದಲ್ಲಿ ಪ > ಹ ವ್ಯತ್ಯಾಸವಾಗಿ ಹೊಳಲು ಆಗಿದೆ. 'ಹೊಳಲು' ಬರಬರುತ್ತ ಜನತೆಯ ಸೌಲಭ್ಯಾಕಾಂಕ್ಷೆ ಹಾಗೂ ಪರಿಹಾರಾತ್ಮಕ ದೀರ್ಘಕರಣಕ್ಕೊಳಗಾಗಿ 'ಹಾಳ' ವಾದಂತಿದೆ.

ಭೀಮನ + ಪ್ರೊಳಲು (ಪ > ಹ) ಭೀಮನ ಹೊಳಲು > ಭೀಮನೊಳಲು - ಭೀಮನಾಳ.
ಬಸವನ + ಪ್ರೊಳಲು (ಪ > ಹ) = ಬಸವನ ಹೊಳಲು > ಬಸವನೊಳಲು > ಬಸವನಾಳ.

**೯) ವಾಡ, ವಾಡಿ** : ವಾಡ ಎಂದರೆ ಜನವಸತಿ ಸ್ಥಳ, ವಾಡಿ ಎಂದರೆ ಬಿಡಾರ, ವಾಸಸ್ಥಳವೆಂಬರ್ಥಗಳಿವೆ. ವಾಡ, ವಾಡಿ ವಾರ್ಗಿಕವನ್ನುಳ್ಳ ಊರುಗಳು ಈ ತಾಲೂಕಿನಲ್ಲಿ ಕಡಿಮೆ. ಅಂಥ ಕೆಲವು ಹೀಗಿವೆ :

ಬೋಳ + ವಾಡ = ಬೋಳವಾಡ
ಪಟ + ವಾಡ = ಪಟವಾಡ
ಗೊಬ್ಬರ + ವಾಡಿ = ಗೊಬ್ಬರವಾಡಿ
ಹೊಸದು + ವಾಡಿ = ಹೊಸವಾಡಿ

**೧೦) ಕೆರೆ** : ಕೆರೆ ಸಮೀಪದಲ್ಲಿ ಇರುವ ಊರುಗಳು ಸಾಮಾನ್ಯವಾಗಿ ಕೆರೆ, ಗೆರೆ, ಗೇರಾ, ವಾರ್ಗಿಕಗಳನ್ನು ಹೊಂದುವುದುಂಟು. ಇವಕ್ಕೆ ಜಲಘಟಿ ಸ್ಥಳನಾಮಗಳೆಂದು ಕರೆಯುವರು. ತಾವರೆಯ + ಕೆರೆ = ತಾವರಗೆರೆ (ಕೆ > ಗೆ) ತಾವರಗೇರಿ (ರೆ > ರಿ) ತಾವರಗೇರಾ (ರಿ > ರಾ).

ಜನರ ಬಾಯಲ್ಲಿ ಈ ಊರ ಹೆಸರಿನ ಕೊನೆಗಿರುವ ರೆ > ರಿ ಅಥವಾ ರಾ ಆಗಿ 'ಗೆ' ದ ಮುಂದೆ ದೀರ್ಘಬಂದು ತಾವರಗೇರಿ, ತಾವರಗೇರಾ, ಆದುದೂ ಉಂಟು. 'ಕೆರೆ ನಿರ್ಮಾಣಗೊಂಡ ಪ್ರಯುಕ್ತ ಗ್ರಾಮಕ್ಕೆ ಆ ಹೆಸರು ಬಂದಂತೆ ಗ್ರಾಮ ನಿರ್ಮಾಣಗೊಂಡ ಕೆಲಕಾಲದ ಮೇಲೆ ಕೆರೆ ನಿರ್ಮಿಸಲ್ಪಟ್ಟಿದ್ದರೂ ಕೆರೆಯ ಪ್ರಸಿದ್ಧಿಯಿಂದ ಮೂಲ ಗ್ರಾಮ ನಾಮ ಮಾಯವಾಗಿ ಕೆರೆ ಆದೂ, ಇವರ ಪರ್ಯಾಯ ವಾರ್ಗಿಕವಾಗಿದ್ದುದು ಉಂಟು'.[2]

೨. ಎಲಿಗಾರ ಚೆನ್ನಕ್ಕ : "ಕೆರೆ ಗ್ರಾಮ ನಾಮ ವಿವೇಚನೆ" ಲೇಖನ (ಸಾಧನೆ ಸಂಪುಟ-೧೪, ಸಂಚಿಕೆ-೩).

**೧೧) ಕುಂದ, ಕೋಟೆ :** ಕುಂದವೆಂದರೆ ಬೆಟ್ಟ, ಗುಡ್ಡ, ದಿನ್ನೆ ಮುಂತಾದ ಎತ್ತರವಾದ ಪ್ರದೇಶಗಳ ಹತ್ತಿರವಿರುವ ಊರುಗಳು ತಮ್ಮ ಹೆಸರುಗಳ ಉತ್ತರಾರ್ಧದಲ್ಲಿ 'ಕುಂದ' 'ಗುಂದ' ಎಂಬ ವಾರ್ಗಿಕವನ್ನು ಸಾಮಾನ್ಯವಾಗಿ ಹೊಂದಿರುತ್ತವೆ. ಈ ತಾಲೂಕಿನಲ್ಲಿ ಬೆಟ್ಟ ಗುಡ್ಡಗಳು ಕಡಿಮೆ. ಕೋಟೆಗಳೂ ಕಡಿಮೆ. ಬಯಲು ಪ್ರದೇಶವೇ ಇಲ್ಲಿ ಹೆಚ್ಚು. ಅಂತೆಯೇ ಕುಂದ ಹಾಗೂ ಕೋಟೆ ವಾರ್ಗಿಕವನ್ನುಳ್ಳ ಊರುಗಳು ಇಲ್ಲಿ ಕಡಿಮೆ. ಅಂಥ ಕೆಲವನ್ನಿಲ್ಲಿ ನೋಡಬಹುದು.

ಪೊಳಲು + ಕುಂದ = ಪೊಳಕುಂದ (ಪ > ಹ) > ಹೊಳಕುಂದ

ಮೇಳ + ಕುಂದ = ಮೇಳಕುಂದ > ಮೇಳಕುಂದಾ.

ಕುರಿ + ಕೋಟೆ = ಕುರಿಕೋಟೆ > ಕುರಿಕೋಟಾ.

ಬೆಳೆ + ಕೋಟೆ = ಬೆಲಕೋಟೆ > ಬೆಳೆಕೋಟಾ.

**೧೨) ಖೇಡ :** ಖೇಡ, ಖರ್ವಡಗಳ ಪ್ರಸ್ತಾಪ ವಡ್ಡಾರಾಧನೆಯಲ್ಲಿ ಬರುತ್ತದೆ. ಸುತ್ತಲೂ ಎತ್ತರವಾದ ಪ್ರಾಕಾರದ ಗೋಡೆಗಳುಳ್ಳ ಗ್ರಾಮವೇ ಖೇಡ. ಈ ಗೋಡೆ ಕೋಟೆಯನ್ನು ಹೋಲುತ್ತದೆ. ನೈಸರ್ಗಿಕ ಬೆಟ್ಟಗಳಿಂದ ಸುತ್ತುವರಿದ ಗ್ರಾಮ 'ಕರ್ವಡ'. ಈ ತಾಲೂಕಿನಲ್ಲಿ ಖೇಡವನ್ನು ವಾರ್ಗಿಕವಾಗಿ ಉಳ್ಳ ಊರುಗಳು ಇವೆ. ಆದರೆ ಖರ್ವಡವನ್ನು ವಾರ್ಗಿಕವಾಗಿ ಉಳ್ಳ ಊರುಗಳಿಲ್ಲ. ಇವೆರಡೂ ನಗರಗಳಂತೆ ದೊಡ್ಡವೂ ಅಲ್ಲ ಮತ್ತು ಅತ್ಯಂತ ಸಣ್ಣ ಊರೂಗಳೂ ಅಲ್ಲ. ನಡು ಮಧ್ಯದ ಊರುಗಳು.

ನೀಲ + ಖೇಡ = ನೀಲಖೇಡ.

ಗಣಜಲ + ಖೇಡ = ಗಣಜಲಖೇಡ.

ಈ ತಾಲೂಕಿನಲ್ಲಿ 'ಖೇಡ' ಎಂಬ ಊರು ಇದೆ. ಇದು ನಿರ್ದಿಷ್ಟ ಘಟಕವನ್ನು ಹೊಂದದೆ ಕೇವಲ ವಾರ್ಗಿಕ ಘಟಕವೊಂದನ್ನೆ ಹೊಂದಿ ನಿಂತಿರುವುದನ್ನು ಕಾಣಬಹುದು.

**೧೩) ಮೂರು ಆಕೃತಿಮಾಗಳುಳ್ಳ ಸ್ಥಳನಾಮಗಳು :** ಈವರೆಗೆ ನಿರ್ದಿಷ್ಟ ಮತ್ತು ವಾರ್ಗಿಕವೆಂಬೆರಡು ಘಟಕಗಳನ್ನು ಒಳಗೊಂಡ ಊರಹೆಸರುಗಳನ್ನು ನೋಡಿದೆವು. ಇನ್ನು ಎರಡು ನಿರ್ದಿಷ್ಟ ಒಂದು ವಾರ್ಗಿಕ ಘಟಕಗಳನ್ನೊಳಗೊಂಡ ಅಂದರೆ ಒಂದು ನಿರ್ದಿಷ್ಟ ಘಟಕದ ಆದಿಯಲ್ಲಿ ಇನ್ನೊಂದು ನಿರ್ದಿಷ್ಟ ಪದ(ಪ್ರಿಫಿಕ್ಸ್)ವನ್ನು ಒಳಗೊಂಡಂಥ ಕೆಲಊರುಗಳನ್ನಿಲ್ಲಿ ಉದಾಹರಿಸಬಹುದು.

ಹಿರಿಯ + ಜಂಬ + ಗ್ರಾಮ = ಹಿರೇಜಂಬಗಾವ > ಹಿರೇಜಂಬಗಾ

ಪೇಟ + ಫಿರೋಜ + ಆಬಾದ = ಪೇಟ ಫಿರೋಜಾಬಾದ.

ಕಲ್ಲ + ಹಂಗರ + ಗ್ರಾಮ = ಕಲ್ಲಹಂಗರಗಾವ > ಕಲ್ಲಹಂಗರಗಾ.
ಕೆರೆ + ಬೋಸ + ಗ್ರಾಮ = ಕೆರೆಬೋಸಗಾವ >ಕೆರೆಬೋಸಗಾ.
ಹಾಳ + ಸುಲ್ತಾನ + ಪುರ = ಹಾಳ ಸುಲ್ತಾನಪುರ.

**14) ತಾಂಡಾ** : ನಿರ್ದಿಷ್ಟ ಮತ್ತು ಧಾರ್ಮಿಕ ಘಟಕಗಳನ್ನು ಹೊಂದಿದ ಊರುಗಳ ಮುಂದೆ 'ತಾಂಡಾ' ಪದ ಸೇರಿಕೊಂಡ ಊರುಗಳೂ ಈ ತಾಲೂಕಿನಲ್ಲಿವೆ. 'ತಾಂಡಾ' ಲಂಬಾಣಿ ಜನರು ವಾಸಿಸುವ ಸ್ಥಳ. "ಊರುಗಳಿಂದ ಪ್ರತ್ಯೇಕವಾಗಿಯೇ ನೆಲೆಸಿರುವ ಲಂಬಾಣಿಗರ ತಾಂಡಾಕ್ಕೆ ಸಮೀಪದ ಊರುಗಳ ಹೆಸರೇ ಅವುಗಳಿಗೆ ಇರುತ್ತವೆ".[೧] "ಇವುಗಳು (ತಾಂಡಾ) ಸ್ವತಂತ್ರವಾಗಿ ನೆಲೆಯಾಗಿದ್ದರೂ ಆಯಾ ಊರಿನ ಮಜರ್ (ಹ್ಯಾಮ್ಲೆಟ)ಹಳ್ಳಿಗಳಾಗಿಯೇ ಪರಿಗಣಿಸಲ್ಪಡುತ್ತವೆ".[೨] ಅಂಥ ಕೆಲ ತಾಂಡಾಗಳನ್ನಿಲ್ಲಿ ಉದಾಹರಿಸಬಹುದು.

ಕುಸನೂರು + ತಾಂಡಾ = ಕುಸನೂರತಾಂಡಾ
ಕವ್ವಳ್ಳಿ + ತಾಂಡಾ = ಕವ್ವಳ್ಳಿತಾಂಡಾ.
ಸರಡಗಿ +ತಾಂಡಾ = ಸರಡಗಿತಾಂಡಾ.
ಖಣದಾಳ +ತಾಂಡಾ = ಖಣದಾಳತಾಂಡಾ.

ಈ ತಾಲೂಕಿನಲ್ಲಿ ಕೆಲವು ತಾಂಡಾಗಳು ವ್ಯಕ್ತಿಗಳ ಹೆಸರನ್ನು ಹೊಂದಿ ಪ್ರಚಲಿತವಲ್ಲಿರುವುದು ವಿಶೇಷವಾಗಿದೆ. ಚವ್ಹಾಣ ತಾಂಡಾ, ಹರುನಾಯಕ ತಾಂಡಾ, ಬಾಪುನಾಯಕ ತಾಂಡಾ, ಜೋಕಲಾ ತಾಂಡಾ ಮುಂತಾದವು. ವ್ಯಕ್ತಿ ಹೆಸರಿನ ತಾಂಡಾಗಳಿದ್ದಂತೆ ಈ ತಾಲೂಕಿನಲ್ಲಿ 'ಶ್ರೀನಿವಾಸ ಸರಡಗಿ' 'ವೆಂಕಟ ಬೆನ್ನೂರ' ಎಂಬ ವ್ಯಕ್ತಿ ಹೆಸರನ್ನುಳ್ಳ ಊರುಗಳೂ ಇರುವುದನ್ನು ಕಾಣಬಹುದು.

**ಸಾಂಸ್ಕೃತಿಕ ಅಧ್ಯಯನ :**

ಸಂಸ್ಕೃತಿ ಜನತೆಯ ಜೀವನ ವಿಧಾನವೇ ಆಗಿದ್ದು, ಅವರವರ ಸಂಸ್ಕಾರಗಳಿಂದ ಹುಟ್ಟಿಕೊಂಡಂಥದು. ಬಾಹ್ಯದಲ್ಲಿ ಕಾಣುವಂಥದ್ದಲ್ಲ, ಇದು ಅಂತರಂಗಕ್ಕೆ ಸಂಬಂಧಪಟ್ಟ ವಿಶೇಷ ಗುಣ. ಇದನ್ನು ಪ್ರತಿಯೊಬ್ಬರೂ ಕಷ್ಟಪಟ್ಟು ಗಳಿಸಿಕೊಳ್ಳಬೇಕೇ ವಿನಾ ಇನ್ನೊಬ್ಬರಿಂದ ಪಡೆದುಕೊಳ್ಳಲಾಗದು. ಸಂಸ್ಕೃತಿ ಮಾನವನಲ್ಲಿರುವಂತೆ ಆತ ಊರುಗಳಿಗೆ ಹೆಸರಿಡುವಾಗಲೂ ಇದನ್ನು ಪ್ರದರ್ಶಿಸಿದ್ದಾನೆ. ಅದನ್ನಿಂದು ಗುರುತಿಸುವ ಅಗತ್ಯವಿದೆ. 'ಒಂದು ಕಾಲಕ್ಕೆ ತನ್ನ ಮೇಲೆ ಗಾಢವಾದ ಪರಿಣಾಮವನ್ನುಂಟುಮಾಡಿದ ವಸ್ತು, ವ್ಯಕ್ತಿ, ಘಟನೆಗಳನ್ನು ಧರ್ಮ, ಸಂಸ್ಕೃತಿಯ ಹಿನ್ನೆಲೆಯಲ್ಲಿ ತಾನು ವಾಸಿಸುವ ಸ್ಥಳಗಳಿಗೆ ಹೆಸರಿಸಿ ಮಾನವನು ತನ್ನ ಉತ್ಕಟ

---

೧. ಖಂಡೋಬಾ ಪಿ.ಕೆ : ಕರ್ನಾಟಕದ ಲಂಬಾಣಿಗಳು : ಒಂದು ಸಾಂಸ್ಕೃತಿಕ ಅಧ್ಯಯನ ಪುಟ-೨೧.
೨. ಖಂಡೋಬಾ ಪಿ. ಕೆ : ಕರ್ನಾಟಕದ ಲಂಬಾಣಿಗಳು : ಒಂದು ಸಾಂಸ್ಕೃತಿಕ ಅಧ್ಯಯನ ಪುಟ-೨೧.

ಭಾವನೆಗಳನ್ನು ವ್ಯಕ್ತಪಡಿಸಿದ್ದಾನೆ'.[೧] ಈ ಮಾತು ಗುಲಬರ್ಗಾ ತಾಲೂಕಿನ ಸ್ಥಳನಾಮಗಳಿಗೂ ಅನ್ವಯಿಸುವಂಥದಾಗಿದೆ. ಗುಲಬರ್ಗಾ ತಾಲೂಕಿನ ಸ್ಥಳನಾಮಗಳ ಮೇಲೆ ಉರ್ದುಭಾಷೆ, ಸಂಸ್ಕೃತಿಯ ಪ್ರಭಾವ ದಟ್ಟವಾಗಿ ಆಗಿದೆ. ಜೊತೆಗೆ ಆ ಜನಾಂಗದ ಸಂಸ್ಕೃತಿಯ ಪರಿಣಾಮ ಹಿಂದೂಗಳ ಮೇಲಾದುದನ್ನು ಗುರುತಿಸಬಹುದು. ಈ ತಾಲೂಕಿನ ಹಲವಾರು ಹಿಂದೂ ದೇವಾಲಯಗಳು, ಮಠಗಳು, ಮುಸ್ಲಿಂ ಮಸೀದಿಯಾಕಾರದ ಗುಂಬಜಗಳನ್ನು ಹೊಂದಿರುವುದನ್ನು ಕಾಣುವೆವು. ಮುಸ್ಲಿಂರ ಈದ್‌ಮಿಲಾದ್, ರಮಜಾನ್ ಮುಂತಾದ ಹಬ್ಬಗಳಲ್ಲಿ ವಿಶೇಷವಾಗಿ ಹಳ್ಳಿಗಾಡಿನ ಹಿಂದೂಜನ ಸಂಭ್ರಮದಿಂದ ಪಾಲ್ಗೊಳ್ಳುವುದುಂಟು. ಹಿಂದೂ ದೇವಾಲಯಗಳಿಗೆ ಹೋಗುವಂತೆ ಮಸೀದಿ ದರ್ಗಾಗಳಿಗೆ ಹೋಗಿ ತಮ್ಮ ಭಕ್ತಿ ಕಾಣಿಕೆ ಸಲ್ಲಿಸುವುದುಂಟು. ಭಾವೈಕ್ಯತೆಯ ಈ ಗುಣ ಹಿಂದೂಗಳಿಗೆ ರಕ್ತಗತವಾದುದು. ಇದು ಬಹುಮಟ್ಟಿಗೆ ನಿಜವಾದರೂ ಅನೇಕ ಸಂದರ್ಭಗಳಲ್ಲಿ ಮುಸ್ಲಿಂ ರಾಜರ ಆಡಳಿತ ಆದೇಶ ಪ್ರಭಾವ ಒತ್ತಡ ಕಾರಣವಾಗಿಯೂ ಹಿಂದೂಜನ ನಡೆದುಕೊಂಡರೆನ್ನುವುದನ್ನು ಅಲ್ಲಗಳೆಯಲಿಕ್ಕಾಗದು. ಅಧಿಕಾರ ಯಾರ ಬಳಿ ಇರುತ್ತೋ ಸಾಮಾನ್ಯ ಜನ ಅವರಂತೆ ನಡೆದುಕೊಳ್ಳುವುದು ಸಹಜ. ಮುಸ್ಲಿಂರ ಆಳ್ವಿಕೆಯ ಅವಧಿಯಲ್ಲಿ ಈ ಭಾಗದ ಜನ ಅವರ ಧರ್ಮ, ಸಂಸ್ಕೃತಿಯನ್ನು ಬಹಳಷ್ಟು ತಮ್ಮ ದೈನಂದಿನ ಬದುಕಿನಲ್ಲಿ ಅಳವಡಿಸಿಕೊಂಡುದುಂಟು. ಇಷ್ಟೇ ಅಲ್ಲದೇ ಈ ತಾಲೂಕಿನ ಎಷ್ಟೋ ಊರುಗಳಿಗೆ ಇರುವ ಹೆಸರುಗಳು ಉರ್ದುಮಯವಾಗಿವೆ. ವಿಶೇಷವಾಗಿ ಈ ತಾಲ್ಲೂಕಿನ ಕೆಲವು ಊರುಗಳ ಹೆಸರುಗಳು ಮುಸ್ಲಿಂ ರಾಜ, ರಾಣಿಯರ ಮಂತ್ರಿಗಳ ಹೆಸರು ಹೊಂದಿರುವುದನ್ನು ಈಗಲೂ ಕಾಣಬಹುದು. ಇದಕ್ಕೆ ಹೀರಾಪೂರ, ಫರಹತಾಬಾದ, ಫಿರೋಜಾಬಾದ ಮುಂತಾದವನ್ನು ಹೆಸರಿಸಬಹುದು. ಹಿಂದೂ ಮುಸ್ಲಿಂರು ಹಿಂದೆ ಸ್ನೇಹಸೌಹಾರ್ದದಿಂದ ಬಾಳುತ್ತಿದ್ದರು. ಅದಕ್ಕೆ ಭಾವೈಕ್ಯತೆಯ ದ್ಯೋತಕವಾಗಿ ಈ ರೀತಿ ಊರುಗಳಿಗೆ ಹೆಸರು ಬಂದಿವೆಯೆಂದು ಕೆಲವರು ಅನ್ನುವುದುಂಟು. ಇದು ಸಂಪೂರ್ಣ ಸರಿಯಲ್ಲ. ಸ್ನೇಹ ಸೌಹಾರ್ದಕ್ಕಿಂತ ಅವರ ಸಂಸ್ಕೃತಿಯನ್ನು ಬಲವಂತವಾಗಿ ಹಿಂದೂಗಳ ಮೇಲೆ ಹೇರಿದ್ದುದರ ಕಾರಣ ಈ ತಾಲೂಕಿನ ಅನೇಕ ಸ್ಥಳನಾಮಗಳು ಉರ್ದುಮಯವಾಗಿವೆಯೆಂದು ಹೇಳುವುದೇ ಹೆಚ್ಚು ಸೂಕ್ತವೆನಿಸುತ್ತದೆ. ಇದಕ್ಕೆ ಕೆಲವು ಉದಾಹರಣೆಗಳನ್ನಿಲ್ಲಿ ನೋಡಬಹುದು.

೧). **ಫಿರೋಜಾಬಾದ** : ಈ ಊರು ಹಿಂದೆ ಫಿರೋಜಖಾನ ಆಡಳಿತಕ್ಕೆ ಒಳಪಟ್ಟುದುದರಿಂದ ಇದಕ್ಕೆ ಆತನ ಹೆಸರೇ ಬಂದಿದೆ. ಹಿಂದೆ ಪ್ರಭಾವಿ ವ್ಯಕ್ತಿಗಳ, ಧಾರ್ಮಿಕ ಮಹಾಪುರುಷರ ಸ್ಮರಣೆಗಾಗಿ ಅವರ ಹೆಸರೇ ಊರುಗಳಿಗೆ, ಹೊಳೆಗಳಿಗೆ ಬಂದುದುಂಟು.[೨]

---

೧. ಸವದತ್ತಿ ಮಠ ಸಂಗಮೇಶ : ಜನಪದಭಾಷಾ ಸಮೀಕ್ಷೆ, ಪುಟ-೬೨.

೨. ಗುಲಬರ್ಗಾ ಜಿಲ್ಲೆಯ ತಾಲೂಕು ಸ್ಥಳವಾದ 'ಅಫಜಲಪೂರ' ಅಫಜಲಖಾನನೆಂಬ ಮಂತ್ರಿಯ ಹೆಸರನ್ನು ಹೊತ್ತು ನಿಂತುದನ್ನಿಲ್ಲಿ ಸ್ಮರಿಸಬಹುದು. ಬಿಜಾಪುರ ಜಿಲ್ಲೆಯ ಕೂಡಲಸಂಗಮದೆದುರು ಹರಿವ ನದಿ ಬಸವಣ್ಣನ ಸ್ಮರಣಾರ್ಥ ಈಗ 'ಬಸವಸಾಗರ'ವೆಂದು ಪ್ರಚಲಿತವಾಗಿದೆ.

೨) **ಸುಲ್ತಾನಪೂರ** : ಬಹಮನಿ ಅರಸರಲ್ಲಿ ಪ್ರಮುಖವಾದ ಆದಿಲ್‌ಶಾಹಿಯ ಪತ್ನಿಯಲ್ಲೊಬ್ಬಳಾದ ಸುಲ್ತಾನಬಿಯ ಸ್ಮರಣಾರ್ಥವಾಗಿ ಆಕೆಯ ಹೆಸರನ್ನು ತಳೆದುನಿಂತುದೇ ಸುಲ್ತಾನಪುರ.

೩) **ಹೀರಾಪುರ** : ಸುಲ್ತಾನಪುರವು ಸುಲ್ತಾನಬಿಯ ಹೆಸರನ್ನು ತಳೆದುನಿಂತಂತೆ ಆದಿಲ್‌ಶಾಹಿಯ ಇನ್ನೊಬ್ಬಪತ್ನಿ ಹೀರಾಬಿಯ ಸ್ಮರಣಾರ್ಥ ರೂಪಪಡೆದ ಊರು ಹೀರಾಪುರ.[೧]

೪) **ಗುಲಬರ್ಗಾ** : ಗುಲಬರ್ಗಾ ಎಂದೇ ಈಗ ಹೆಚ್ಚಾಗಿ ಈ ಊರು ಕರೆಯಲ್ಪಡುತ್ತಿದ್ದರೂ ಇದರ ಮೂಲ ಹೆಸರು ಕಲಬುರ್ಗಿ, ಕಲಬುರ್ಗಿ. ''ಕ್ರಿ.ಶ. ೧೦೯೪ರ ಹುಣಸೀ ಹಡಗಲಿ ಶಾಸನದಲ್ಲಿ ಇದರ ಹೆಸರು 'ಕಲಬುರಗೆ' ಎಂದು ನಿರ್ದೇಶಿತವಾಗಿದೆ''.[೨] ಅನಂತರ ಕ್ರಿ.ಶ.೧೪೫೯ರ ಶಿರವಾಳದ ಒಂದು ಶಿಲಾಶಾಸನದಲ್ಲಿ 'ಶ್ರೀಮತು ಕಲಬುರಗಿ ನಾಡೊಳಗೆ' ಎಂಬ ನಿರ್ದೇಶನವಿದೆ.[೩]

ಕಲಂಬುರಗೆಯ ವಿಗ್ರಹ ರೂಪ ಕಲ್ಲುಂಬ್ಬರಿಗೆ. ಎಂದರೆ ಕಲ್ಲುಬಂಡೆಗಳ ಹಾಸುಗಳಿಂದ ಕೂಡಿದ ಊರು. ಇಲ್ಲಿನ ಭೂಮಿಯ ಒಳಭಾಗದಲ್ಲಿ ಕಲ್ಲುಗಳ ಥರ ಥರದ ಹಾಸು ಇದ್ದುದನ್ನು ಕಾಣಬಹುದು. 'ಬುರಗ' ಎಂದರೆ ಕಲ್ಲುಗಳು ಒಂದಕ್ಕೊಂದು ಅಂಟಿಕೊಂಡುದು, ಅಂದರೆ ಕಲ್ಲಿನ ಕಣಿವೆ ಎಂದರ್ಥ. ಕಲ್ಲಿನ ಕಣಿವೆಗಳು ಇಲ್ಲಿರುವುದರಿಂದ ಈ ಊರಿಗೆ ಕಲಬುರ್ಗಿ ಎಂಬ ಹೆಸರು ಬಂದಂತಿದೆ. ಆದರೆ ಡಾ|| ಎಂ.ಎಂ. ಕಲಬುರ್ಗಿಯವರು ಬೇರೆ ರೀತಿಯಲ್ಲಿ ಈ ಊರ ಹೆಸರನ್ನು ವಿಗ್ರಹಿಸಿ ಅರ್ಥೈಸಿದ್ದಾರೆ. ಅದು ಹೀಗಿದೆ. ಕಲಂಬರ + ಕೆಯ್ = ಕಲಂಬರಕೆ (ಗೆ) > ಕಲಂಬರಗೆ > ಕಲಂಬರಗಿ > ಕಲಬುರಗಿ. ಹಿಂದೆ ಕಲಂಬರು ಎಂಬ ಹೆಸರಿನ ಜನಾಂಗ ವಾಸಿಸುವ ಸ್ಥಳ ಇದಾಗಿತ್ತು. ಆದಕ್ಕೆ ಈ ಊರಿಗೆ ಕಲಬುರಗಿ ಎಂಬ ಹೆಸರು ಬಂದಿದೆ ಎನ್ನುತ್ತಾರೆ. ಕಲ್ಲುಗಳ ಕಣಿವೆ, ಕಲಂಬರು ವಾಸಿಸುವ ಕೃಷಿ ಪ್ರದೇಶ ಎಂಬೆರಡು ರೀತಿಯಲ್ಲಿ ಈ ಊರನ್ನು ಅರ್ಥೈಸಲಾಗಿದೆ. ಇದರ ಬಗ್ಗೆ ಇನ್ನೂ ಸಂಶೋಧನೆ ನಡೆಯಬೇಕಾಗಿದೆ. ಅರ್ಥದ ಬಗ್ಗೆ ಇನ್ನೂ ಖಚಿತ ನಿರ್ಧಾರವಾಗಬೇಕಿದ್ದರೂ ಇದರ ಹೆಸರು ಮಾತ್ರ ಕಲಬುರಗಿ ಎಂದೇ ಖ್ಯಾತಿ ಪಡೆದಿತ್ತು. 'ಗುಲಬರ್ಗಾ ' ಕ್ಕಿಂತ ಪ್ರಾಚೀನ ಹೆಸರಾದ ಕಲಬುರ್ಗಿ ಎಂದೇ ಇದಕ್ಕೆ ಕರೆಯುವುದು ಅರ್ಥಪೂರ್ಣವಾದುದು ಮತ್ತು ಸಮರ್ಪಕವಾದುದು.[೪]

---

೧. ಸುಲ್ತಾನಪುರ, ಹೀರಾಪುರ: ಈ ಊರುಗಳು ಆದಿಲ್‌ಶಾಹಿಯ ಪತ್ನಿಯರ ಹೆಸರು ಹೊತ್ತು ನಿಂತಂತೆ ಈ ಜಿಲ್ಲೆಯ ಸುರಪುರ ನಾಯಕ ದೊರೆಗಳ ಉಪಪತ್ನಿಯರಾದ ರಂಗಮ್ಮ, ವೆಂಕಮ್ಮ, ರುಕ್ಕಮ್ಮ, ಹಸನಮ್ಮ ಇವರ ಸ್ಮರಣಾರ್ಥ ರಂಗಂಪೇಟೆ, ವೆಂಕಟಾಪುರ, ರುಕ್ಕುಂಪೇಟೆ ಹಾಗೂ ಹಸನಾಪುರ ಎಂಬ ಹೆಸರು ಹೊಂದಿ ಈಗಲೂ ಇರುವುದನ್ನು ಇಲ್ಲಿ ಸ್ಮರಿಸಬಹುದು.

೨. ಶಿವಾನಂದ ವಿ. 'ಕಲಬುರ್ಗಿ ಜಿಲ್ಲೆಯ ಶಿಲಾಶಾಸನಗಳು' ಪುಟ-೨.

೩. ಶಿವಾನಂದ ವಿ. 'ಕಲಬುರ್ಗಿ ಜಿಲ್ಲೆಯ ಶಿಲಾಶಾಸನಗಳು' ಪುಟ-೩.

೪. ಕಲಬುರ್ಗಿ ಎಂ.ಎಂ. : ಕೆ-ಗೆ, ಕೆ-ಗಿ, ಎಂಬ ಲೇಖನ (ಸಂಶೋಧನಾವ್ಯಾಸಂಗ, ಸಂ-೧, ಸಂಚಿಕೆ-೬, ಸಂ-ಡಾ|| ಸಂಗಮೇಶ ಸವದತ್ತಿಮಠ).

ಈ ಹೆಸರು ನೈಜಾಂ ಅರಸನ ಕಾಲಕ್ಕೆ ಪಾರಸೀಕರಣಗೊಂಡು ಮುಸ್ಲಿಂರ ಆಡಳಿತ ಹಾಗೂ ಪ್ರಭಾವಕ್ಕೊಳಗಾಗಿ ಗುಲಬರ್ಗಾ ಎಂದಾಯ್ತು. "It is also said that Kalaburgi known later as Kalaburgh came to be pronounced as Gulbarga when it was under the Muslim rule" ೧

'ಗುಲಬರ್ಗಾ' ಹೆಸರನ್ನು ಈ ರೀತಿ ಅರ್ಥಯಿಸಲಾಗುತ್ತದೆ. 'ಗುಲ್' ಎಂದರೆ ಹೂ. ಬುರ್ಗ ಎಂದರೆ ಎಲೆ ತೋಟ ಎಂದರ್ಥ. ಹೂದೋಟಗಳ ನಗರ ಎಂಬರ್ಥ ಹೊರಡುವುದು. ವಾಸ್ತವವಾಗಿ ನೋಡಿದಾಗ ಈ ಅರ್ಥ ಈ ಊರಿಗೆ ಅಷ್ಟಾಗಿ ಅನ್ವಯಿಸದು. ಏನೇ ಆಗಲಿ ಮುಸ್ಲಿಂರ ಆಡಳಿತ, ಸಂಸ್ಕೃತಿ, ಪ್ರಭಾವ ಕಾರಣವಾಗಿ ಮೂಲದಲ್ಲಿದ್ದ ಕಲಬುರ್ಗಿ ಸ್ಥಳನಾಮವು 'ಗುಲಬರ್ಗಾ' ಎಂದು ಮಾರ್ಪಾಟಾಗಿದೆ. ಹೀಗಾದರೂ ಜನ ಈಗ ಗುಲಬರ್ಗಾ, ಕಲಬುರ್ಗಿ ಎರಡೂ ಹೆಸರುಗಳಿಂದ ಇದನ್ನು ಕರೆಯುತ್ತಾರೆ. ಸಾಮಾನ್ಯವಾಗಿ ಹಳ್ಳಿಗರು ಇವಕ್ಕೆ ಕಲಬುರ್ಗಿ ಎಂದೇ ಹೆಚ್ಚಾಗಿ ಕರೆಯುತ್ತಾರೆ. ಪಟ್ಟಣಿಗರು, ಸುಶಿಕ್ಷಿತರು ಇದಕ್ಕೆ ಗುಲಬರ್ಗಾ ಎಂದು ಅನ್ನುವುದುಂಟು. ಇದರಂತೆಯೇ ಈ ತಾಲೂಕಿನ ಇನ್ನೂ ಅನೇಕ ಊರುಗಳು ಹೆಸರಿನ ಬಗ್ಗೆ ಸಾಂಸ್ಕೃತಿಕ ಹಿನ್ನೆಲೆಯನ್ನು ಹೊಂದಿರುವದನ್ನರಿಯಬಹುದು.

**೫. ಮಹಾಗಾಂವ್** : 'ಗಾಂವ್' ಸಂಸ್ಕೃತದ ಗ್ರಾಮದಿಂದ ಬಂದಂಥ ವಾರ್ಗಿಕ. ಹೆಸರೇ ಸೂಚಿಸುವಂತೆ ಇದು ದೊಡ್ಡಊರು. ದೊಡ್ಡಊರು ಎಂದು ಒಂದರ್ಥದಲ್ಲಿ ಕೆಲವರು ಇದನ್ನು ಅರ್ಥಯಿಸಿದರೆ, ಇನ್ನೂ ಕೆಲವರು ಇದು ಮಹಾದೇವಿಯಕ್ಕ ಜನಿಸಿದ ಸ್ಥಳವಾದುದರಿಂದ ಇದಕ್ಕೆ ಆ ಹೆಸರು ಪ್ರಾಪ್ತವಾಗಿದೆಯೆಂದು ಅಭಿಪ್ರಾಯಪಡುತ್ತಾರೆ. ಇದಿನ್ನೂ ಸಂಶೋಧನೆಯಾಗಬೇಕಾದ ಸಂಗತಿ. ಈ ಊರಿನಲ್ಲಿ ಹಾಗೂ ಬೆಣ್ಣೆತೂರಾದ ದಡದಲ್ಲಿ ಮಹಾದೇವಿಯಕ್ಕನ ಗುಡಿಗಳಿವೆ. ಈ ಮಂದಿರಗಳು ಒಂದು ವಿಧದಲ್ಲಿ ಮಹದೇವಿಯಕ್ಕ ಇಲ್ಲಿಯೇ ಜನಿಸಿದಳೆಂಬ ಪ್ರತೀತಿಗೆ, ಐತಿಹ್ಯಕ್ಕೆ ಕಾರಣವಾಗಿವೆ. ಗುಡಿಗಳಿದ್ದ ಮಾತ್ರಕ್ಕೆ ಆಕೆ ಇಲ್ಲಿಯೇ ಜನಿಸಿದಳೆಂದು ಹೇಳಲಿಕ್ಕೆ ಬರದು. ಆದರೂ, ಜನ ನಂಬಿಕೊಂಡು ಬಂದಿರುತ್ತಾರೆ. ಸತ್ಯ ಇನ್ನೂ ಹೊರಬರಬೇಕಿದೆ.

ಧಾರ್ಮಿಕ ವ್ಯಕ್ತಿಗಳ ಹೆಸರನ್ನು ಭೌಗೋಳಿಕ, ಐತಿಹಾಸಿಕ, ಪ್ರಾಕೃತಿಕ ವಸ್ತುಗಳ ಹೆಸರನ್ನು ಹಾಗೂ ಜಾತ್ರೆ, ಉತ್ಸವ, ಹಬ್ಬಗಳ ಸ್ಮರಣೆಗಾಗಿ ವಿಶೇಷ ಹೆಸರನ್ನು ಹಲವಾರು ಊರುಗಳು ಪಡೆದಿರುವುದುಂಟು. ಅವು ಆಯಾ ಹೆಸರುಗಳನ್ನು ಹೊಂದಿದ ಹಿನ್ನೆಲೆಯನ್ನು ಸಾಂಸ್ಕೃತಿಕವಾಗಿ ಅಧ್ಯಯನ ಮಾಡಿದರೆ, ಆ ಕಾಲದ ಜನರ ರೀತಿ ನೀತಿ, ಜೀವನ ವಿಧಾನ, ಉಡುಗೆ-ತೊಡಿಗೆ, ಆಚಾರ-ವಿಚಾರ ಇವೆಲ್ಲ ಬೆಳಕಿಗೆ ಬರುವುವು. ತನ್ಮೂಲಕ ಒಂದು ನಾಡಿನ ಸಾಂಸ್ಕೃತಿಕ ಸಂಪತ್ತನ್ನು ಹೊರ ಹಾಕಿದಂತೆ ಆಗುತ್ತದೆ. ಈ ದಿಸೆಯಲ್ಲಿ ಗುಲಬರ್ಗಾ ತಾಲೂಕಿನ

೧. ಬಿ.ಎನ್. ಶ್ರೀಸತ್ಯನ್ :ಗುಲಬರ್ಗಾ ಡಿಸ್ಟ್ರಿಕ್ಟ ಗಜೆಟಿಯರ್, ಪೇಜ-೧

ಊರುಗಳ ಸಾಂಸ್ಕೃತಿಕ ಅಧ್ಯಯನವನ್ನು ಇನ್ನೂ ಆಳವಾಗಿ ಮಾಡುವ ಅವಶ್ಯಕತೆಯಿದೆ. ಅಧ್ಯಯನಕ್ಕೆ ಒಳಪಡಿಸಬಹುದಾದ ಕೆಲವು ಊರುಗಳನ್ನಿಲ್ಲಿ ಹೆಸರಿಸಬಹುದು.

೧) **ಜೋಗೂರು** : (ಯೋಗಿ > ಜೋಗಿ) ಯೋಗಿಯ ಹೆಸರನ್ನು ಬಹುಶಃ ತಳೆದು ನಿಂತ ಊರು ಇದಾದಂತಿದೆ.

೨) **ಹರಸೂರು** : (ಪರಿಸ್ > ಪರಿಸೆ) ಪರಿಸೆ ಎಂದರೆ ಜಾತ್ರೆ. ಜಾತ್ರೆಯ ಸ್ಮರಣಾರ್ಥ ಆ ಹೆಸರನ್ನೇ ತಳೆದಂತಿದೆ.

೩) **ಕಾಳಗನೂರು** : (ಕಾಳಗ = ಯುದ್ಧ) ಯುದ್ಧ ಇಲ್ಲಿ ನಡೆದುದರಿಂದ ಈ ಊರಿಗೆ ಈ ಹೆಸರು ಬಂದಿರಬಹುದೇ ?

೪) **ಹೊನ್ನಳ್ಳಿ** : (ಹೊನ್ನ = ಬಂಗಾರ) ಬಂಗಾರದ ಹೆಸರನ್ನು ಹೊತ್ತು ನಿಂತ ಊರು ಅಂದರೆ ಸಂಪದ್ಭರಿತ ಊರು ಇದಾಗಿರಬೇಕು.

೫) **ಖಣದಾಳ** : ಖಾಯಂ + ವಳ = ಖಣದಾಳ. ಇದು ಮೊದಲು ಸೈನಿಕರಿಗೆ ನೆಲೆ ಒದಗಿಸಿದ ತಾಣವಾಗಿರಬೇಕು. ಮುಂದೆ ಸೈನಿಕರು ಇಲ್ಲಿ ಖಾಯಂ ಆಗಿ ನೆಲೆಸಿದುದರಿಂದ ಈ ಊರಿಗೆ ಖಣದಾಳ (ಖಾಯಂದಳ) ಎಂಬ ಹೆಸರು ಬಂದಿರುವಂತಿದೆ.

6) **ಪೇಟ ಫಿರೋಜಾಬಾದ** : ಫಿರೋಜಷಾನ ಆಡಳಿತಕ್ಕೆ ಒಳಪಟ್ಟಿದುದರಿಂದ 'ಫಿರೋಜಾಬಾದ' ಎಂಬ ಹೆಸರು ಬಂದಿದೆಯೆಂಬುದನ್ನು ಈ ಹಿಂದೆ ನೋಡಲಾಗಿದೆ. ಇದು 'ಪೇಟ ಫಿರೋಜಾಬಾದ' ಎಂದಿದೆ. 'ಪೇಟ ಪೇಟಾ' ಎಂದರೆ ದೊಡ್ಡ ಊರುಗಳು. ಈ ಊರುಗಳಲ್ಲಿ ಹಿಂದೆ ಕಂದಾಯ ವಸೂಲಿ ಕಛೇರಿ, ಭೂಮಿ, ಮನೆ, ಮುಂತಾದ ಆಸ್ತಿಗಳನ್ನು ನೋಂದಣಿ ಮಾಡುವ ಕಛೇರಿ ಮುಂತಾದ ಸರಕಾರಿ ಕಛೇರಿಗಳು ಇರುತ್ತಿದ್ದವು. ಹಳ್ಳಿಯ ಜನ ತಾಲೂಕಿಗೆ ಹೋಗದೆ ಇಲ್ಲಿಯೇ ತಮ್ಮ ಕಛೇರಿ ಕೆಲಸಗಳನ್ನು ಮುಗಿಸಿಕೊಳ್ಳುತ್ತಿದ್ದರು. ತಾಲೂಕಿಗಿಂತ ಇವು ಚಿಕ್ಕವು. ಕೆಲವು ಪೇಟಾಗಳು ಅನಂತರ ತಾಲೂಕುಗಳಾಗಿ ಮಾರ್ಪಟ್ಟವು. ಕೆಲವು ಹಾಗೆಯೇ ಉಳಿದವು, ಪೇಟ ಫಿರೋಜಾಬಾದ ಇಂಥದು.

**ಉಪಸಂಹಾರ :**

ಸ್ಥಳನಾಮಗಳೆಂದರೆ ಕೇವಲ ಊರ ಹೆಸರುಗಳಲ್ಲ. ಅವು ಆಯಾ ಪ್ರದೇಶಗಳ ಭೌಗೋಲಿಕ, ಐತಿಹಾಸಿಕ ಹಾಗೂ ಸಾಮಾಜಿಕ ವಿಷಯಗಳನ್ನೊಳಗೊಂಡಂಥ ಜೀವಂತ ಪಳಿಯುಳಿಕೆಗಳು, ಸಾಂಸ್ಕೃತಿಕ ಘಟಕಗಳು ಎಂಬುದನ್ನಿಲ್ಲಿ ನೋಡಿದೆವು. ತಂದೆ ತಾಯಿಗಳು ತಮ್ಮ ಮಕ್ಕಳಿಗೆ ಹೆಸರನ್ನಿಡುವಾಗ ಅವರ ಮನೋವೃತ್ತಿ ವ್ಯಕ್ತಗೊಂಡಂತೆ ಒಂದು ಊರಿಗೆ ಒಂದು ಹೆಸರು ಪ್ರಾಪ್ತವಾಗಬೇಕಾದರೆ ಅಲ್ಲಿನ ಮೂಲನಿವಾಸಿಗಳ ಯಾಥಾರ್ಥ ಬಿಂಬ

ಗ್ರಹಣವಾಗುವಂತಿರುತ್ತದೆ. ಒಂದು ಜನಾಂಗದ ಏಳುಬೀಳು, ಕಷ್ಟಸುಖ, ಪ್ರಾಕೃತಿಕ, ಸಾಂಸ್ಕೃತಿಕ ಕಾರಣಗಳು ಊರ ಹೆಸರು ಬರಲು ಪ್ರೇರಕವಾಗಿರುತ್ತವೆ. ಅಲ್ಲದೆ ದಾನಿಗಳ, ವೀರರ, ತ್ಯಾಗಿಗಳ, ರಾಜ-ರಾಣಿ-ಮಂತ್ರಿಗಳ, ಮಹಾಪುರುಷರ ಸ್ಮರಣೆಗಾಗಿಯೂ ಕೆಲವು ಊರ ಹೆಸರುಗಳು ಬಂದಿರುವುದನ್ನಿಲ್ಲಿ ನೋಡಿದೆವು. ಚರಿತ್ರೆಯ ದೃಷ್ಟಿಯಿಂದ ಅಧ್ಯಯನ ಮಾಡುವವರಿಗಂತೂ ಇವು ತುಂಬಿದ ಗಣಿಗಳೇ ಆಗಿವೆ. ಚರಿತ್ರೆ ಮೌನ ತಾಳಿದಲ್ಲಿ ಸ್ಥಳನಾಮಗಳು ಮಾತನಾಡುತ್ತವೆ ಎಂಬ ಮಾತು ಗುಲಬರ್ಗಾ ತಾಲೂಕಿನ ಅನೇಕ ಸ್ಥಳನಾಮಗಳಿಗೆ ಅಕ್ಷರಶಃ ಅನ್ವಯಿಸುವುದು. ಈ ತಾಲೂಕಿನ ಹಲವಾರು ಸ್ಥಳನಾಮಗಳು ಐತಿಹಾಸಿಕ ಘಟನೆಗಳನ್ನು, ಸಾಂಸ್ಕೃತಿಕ ವಿವರಗಳನ್ನು, ಧಾರ್ಮಿಕ ಪುರುಷರನ್ನು ದಾಖಲೆಯ ರೂಪದಲ್ಲಿ ಉಳಿಸಿಕೊಂಡು ಬಂದಿವೆ. ಆದ್ದರಿಂದ ಇವು ಸಾಂಸ್ಕೃತಿಕ ಅಧ್ಯಯನಕ್ಕಂತೂ ಅಮೂಲ್ಯ ಆಕರಗಳಾಗಬಲ್ಲುವು. ಇವುಗಳಂತೆ ಮನೆತನದ ಅಡ್ಡಹೆಸರುಗಳನ್ನು ಅಧ್ಯಯನ ಮಾಡುವುದೂ ಅಗತ್ಯವಿದೆ. ''ಅಡ್ಡ ಹೆಸರುಗಳಲ್ಲಿ ಕನ್ನಡದ ಸಂಸ್ಕೃತಿ ಅಡಗಿದೆ''.[೧] ಸ್ಥಳನಾಮ ಹಾಗೂ ಮನೆತನದ ಅಡ್ಡ ಹೆಸರುಗಳ ಅಧ್ಯಯನವಿಂದು ಸಾಂಸ್ಕೃತಿಕ ದೃಷ್ಟಿಯಿಂದ ಆಗಬೇಕಾಗಿದೆ. ಗುಲಬರ್ಗಾ ತಾಲೂಕಿನ ಸ್ಥಳನಾಮಗಳನ್ನು ಭಾಷಿಕ ಹಾಗೂ ಸಾಂಸ್ಕೃತಿಕ ಅಧ್ಯಯನಕ್ಕೆ ಒಳಪಡಿಸಿದುದರ ಪರಿಣಾಮಗಳನ್ನು ಈ ಕೆಳಗಿನ ವೈಶಿಷ್ಟ್ಯಗಳನ್ನು ಗುರುತಿಸಲಾಗಿದೆ.

೧) ಮುಸ್ಲಿಂ ಅರಸರ ಆಡಳಿತ,. ಪ್ರಭಾವ, ಸಂಸ್ಕೃತಿ ಹಿಂದೂಗಳ ಮೇಲೆ ಆದುದರ ಪರಿಣಾಮವಾಗಿ ಈ ತಾಲೂಕಿನ ಹಲವು ಸ್ಥಳನಾಮಗಳು ಉರ್ದುಮಯವಾಗಿವೆ.

೨) ದಕ್ಷಿಣ ಕರ್ನಾಟಕದ ಊರಹೆಸರುಗಳಿಗಿಂತ ಗುಲಬರ್ಗಾ ತಾಲೂಕಿನ ಊರ ಹೆಸರುಗಳು ಸಾಂಸ್ಕೃತಿಕ ದೃಷ್ಟಿಯಿಂದ ಭಿನ್ನವಾಗಿವೆ.

೩) ಈ ತಾಲೂಕಿನ ಬಹುತೇಕ ಊರ ಹೆಸರುಗಳು ಗುಲಬರ್ಗಾ ಕನ್ನಡವು ಒಂದು ಪ್ರತ್ಯೇಕವಾದ ಉಪಭಾಷೆಯೆಂಬುದನ್ನು ಎತ್ತಿ ತೋರಿಸುವಂತಿವೆ.

೪) ಇಲ್ಲಿ 'ದುರ್ಗ'ದಿಂದ ಕೊನೆಗೊಳ್ಳುವ ಊರುಗಳಿಲ್ಲ. 'ದುರ್ಗ' ಎಂದರೆ ಕೋಟೆಕೊತ್ತಲಗಳ ಮಧ್ಯೆ ಇರುವ ಊರುಗಳು ಈ ತಾಲೂಕಿನಲ್ಲಿ ಇಲ್ಲವೆಂಬುದನ್ನು ಗಮನಿಸಬೇಕು.

೫) ಈ ತಾಲೂಕಿನಲ್ಲಿ ತಗ್ಗು ದಿನ್ನೆ, ಗುಡ್ಡಗಾಡು ಪ್ರದೇಶ ಇಲ್ಲವೆನ್ನುವಷ್ಟು ಕಡಿಮೆ ಬಯಲು ಪ್ರದೇಶವೇ ಹೆಚ್ಚಾಗಿದೆ. ಇದನ್ನು ಇಲ್ಲಿನ ಊರಹೆಸರುಗಳು ಸೂಚಿಸುತ್ತವೆ. ವಿಶಾಲವಾದ, ಸಮತಲವಾದ ಬಯಲುಪ್ರದೇಶ, ಕೃಷಿಪ್ರದೇಶದಲ್ಲಿ ಊರುಗಳಿರುವುದು ಇಲ್ಲಿನ ವೈಶಿಷ್ಟ್ಯವಾಗಿದೆ.

---

೧. ಸವದತ್ತಿಮಠ ಸಂಗಮೇಶ : ಮನೆತನದ ಅಡ್ಡಹೆಸರುಗಳು, ಜನಪದ ಭಾಷಾ ಸಮೀಕ್ಷೆ, ಪುಟ-೭೭.

## ಗ್ರಂಥ ಋಣ

೧. Survey of Indian place Names - A case study: Prof. G.N. Reddy

೨. Studies in Indian place Names (Volumes 1 to 11) The Place Names Society of India, Mysore

೩. Gulbarga District Gazetter : B.N. Srisatyan.

೪. ಕನ್ನಡ ನಾಮವಿಜ್ಞಾನ : ಡಾ|| ಎಂ.ಎಂ. ಕಲಬುರ್ಗಿ.

೫. ವಾಗರ್ಥ : ಡಾ|| ಎಂ. ಚಿದಾನಂದ ಮೂರ್ತಿ.

೬. ಎಡೆಗಳು ಹೇಳುವ ಕನ್ನಡ ಕಥೆ : ಶಂ.ಬಾ. ಜೋಶಿ.

೭. ಜನಪದ ಭಾಷಾ ಸಮೀಕ್ಷೆ : ಡಾ|| ಸಂಗಮೇಶ ಸವದತ್ತಿ ಮಠ.

೮. ಕಲಬುರ್ಗಿ ಕನ್ನಡ : ಡಾ|| ಸಂಗಮೇಶ ಸವದತ್ತಿ ಮಠ.

೯. ಸ್ಥಳನಾಮ ಅಧ್ಯಯನಗಳು : ವಿ. ಗೋಪಾಲಕೃಷ್ಣ.

೧೦. ತುಳುನಾಡಿನ ಸ್ಥಳನಾಮಗಳು : ಡಾ|| ಆರ್.ಕೆ. ಮಣಿಪಾಲ.

೧೧. ಹೆಸರಿನಲ್ಲೇನಿದೆ : ಡಾ|| ಆರ್.ಕೆ. ಮಣಿಪಾಲ.

೧೨. ಕರ್ನಾಟಕದ ಲಂಬಾಣಿಗಳು : ಒಂದು ಸಾಂಸ್ಕೃತಿಕ ಅಧ್ಯಯನ : ಡಾ|| ಪಿ.ಕೆ. ಖಂಡೋಬಾ.

## ಪತ್ರಿಕೆಗಳು

೧. ಕರ್ನಾಟಕ ಭಾರತಿ, ಸಂಪುಟ-೯, ಸಂಚಿಕೆ ೧-೨, ಕ.ವಿ.ವಿ. ಧಾರವಾಡ.

೨. ಸಾಧನೆ : ಸಂಪುಟ -೧೪, ಸಂಚಿಕೆ-೩, ಬೆಂ.ವಿ.ವಿ. ಬೆಂಗಳೂರು.

೩. ಸಂಶೋಧನ ವ್ಯಾಸಂಗ, ಸಂಪುಟ-೧, ಸಂಚಿಕೆ-೬, ಕಲಬುರ್ಗಿ, ಸಂ- ಡಾ|| ಸಂಗಮೇಶ ಸವದತ್ತಿಮಠ.

# ಶರಣರ ಪಾರಿಭಾಷಿಕ ಶಬ್ದಗಳು

ಎನ್. ಬಸವಾರಾಧ್ಯ

---

ಭರತಖಂಡ ವಿವಿಧ ಧರ್ಮಗಳ ತವರೂರು. ಈ ದೇಶದಲ್ಲಿ ಅನಾದಿ ಕಾಲದಿಂದಲೂ ಭಿನ್ನ ಭಿನ್ನ ಧರ್ಮಗಳ ಉಚ್ಛ್ರಾಯ ಮತ್ತು ಅವನತಿಗಳನ್ನು ಚರಿತ್ರೆಯಲ್ಲಿ ಕಾಣಬಹುದಾಗಿದೆ. ಕರ್ನಾಟಕದಲ್ಲಿ ಶೈವ ಬೌದ್ಧ ಜೈನ ವೈದಿಕ ಧರ್ಮಗಳು ಪ್ರಬಲವಾಗಿದ್ದು ವಿಪುಲ ಸಾಹಿತ್ಯ ಸೃಷ್ಟಿಗೆ ಅವಕಾಶ ಮಾಡಿಕೊಟ್ಟಿವೆ. ಅಸಂಖ್ಯಾತ ಧಾರ್ಮಿಕ ಗ್ರಂಥಗಳು ಸೃಷ್ಟಿಯಾಗಿವೆ. ಆಯಾ ಕಾಲದ ರಾಜರ ಪ್ರಭಾವದಿಂದಲೂ ಪ್ರೋತ್ಸಾಹದಿಂದಲೂ ಈ ಧರ್ಮಗಳು ವ್ಯಾಪಕವಾಗಿ ನಾಡಿನಾದ್ಯಂತ ಪ್ರಚಲಿತವಾದುವು. ಆಯಾ ಧರ್ಮವನ್ನು ಅವಲಂಬಿಸಿದ ಜನ ತಮ್ಮ ಶ್ರದ್ಧೆಯನ್ನೂ ನಿಷ್ಠೆಯನ್ನೂ ಆ ಧರ್ಮಕ್ಕೆ ಮೀಸಲಾಗಿರಿಸಿ ಉದ್ಗ್ರಂಥಗಳನ್ನು ರಚಿಸಿದ್ದಾರೆ.

ಕನ್ನಡ ನಾಡಿನಲ್ಲಿ ಹನ್ನೆರಡನೆಯ ಶತಮಾನದಲ್ಲಿ ವೀರಶೈವ ಧರ್ಮ ಪ್ರವರ್ಧಮಾನಕ್ಕೆ ಬಂದಿತು. ಧರ್ಮವೀರನೂ ಸಮಾಜ ಸುಧಾರಕನೂ ಆದ ಬಸವಣ್ಣ ಈ ಧರ್ಮ ವ್ಯಾಪಕವೂ ಸಾರ್ವತ್ರಿಕವೂ ಸುಲಭವೂ ಆಗುವಂತೆ ಮಾಡಿ ನೂತನ ಕ್ಷಿತಿಜವನ್ನು ತೆರೆದನು. ಈ ಸುಧಾರಿಸಿದ ಧರ್ಮದಲ್ಲಿ 'ವಿಪ್ರ ಮೊದಲು ಅಂತ್ಯಜ ಕಡೆಯಾಗಿ' ಸರ್ವರಿಗೂ ಪ್ರವೇಶವಿತ್ತು. ಜಟಿಲ ಧಾರ್ಮಿಕ ನಿಯಮಗಳನ್ನು ಸಡಿಲಗೊಳಿಸಿದುದರಿಂದ ವೀರಶೈವ ಧರ್ಮ ಸರ್ವಾದರಣೀಯವಾಯಿತು. ದೇಶದ ನಾನಾಭಾಗಗಳಿಂದ ಧರ್ಮಪಿಪಾಸುಗಳನ್ನು

ಆಕರ್ಷಿಸಿತು. ಹೀಗೆ ನಾನಾ ಜಾತಿಯ ಜನ ಈ ಧರ್ಮವನ್ನು ಅನುಸರಿಸಿ ವಚನಗಳನ್ನು ರಚಿಸಿದರು. ಅವರವರ ಕಾಯಕದ ಪಾರಿಭಾಷಿಕ ಶಬ್ದಗಳೆಲ್ಲಾ ಗ್ರಂಥಸ್ಥವಾದುವು. ಕಾಯಕಕ್ಕೆ ಮಿಗಿಲಾಗಿ ಮಹತ್ವವನ್ನು ಕೊಟ್ಟಿದ್ದ ಬಸವಣ್ಣನವರು ವೀರಶೈವ ಧರ್ಮವನ್ನು ಅನುಸರಿಸಿದವರು ತಮ್ಮ ತಮ್ಮ ಕಾಯಕಗಳಲ್ಲೇ ಮುಂದುವರಿದು ಸಾಧನೆಯನ್ನು ಕೈಗೊಳ್ಳುವಂತೆ ಬೋಧಿಸಿದರು. ಅಂಬಿಗರ ಚೌಡಯ್ಯ, ಮೇದರ ಕೇತಯ್ಯ, ಮಾದಾರ ಧೂಳಯ್ಯ, ಹೆಂಡದ ಮಾರಯ್ಯ ಮೊದಲಾದ ವಿವಿಧ ವೃತ್ತಿಯ ಜನ ತಮ್ಮ ವಚನಗಳಲ್ಲಿ ಈ ವೃತ್ತಿಗಳಿಗೆ ಸಂಬಂಧಿಸಿದ ಶಬ್ದ ಸಂಪತ್ತನ್ನು ಉಳಿಸಿಕೊಟ್ಟಿದ್ದಾರೆ, ಬೆಳೆಸಿಕೊಟ್ಟಿದ್ದಾರೆ. ಈ ವಚನಗಳಿಂದ ಸಾಹಿತ್ಯಕ್ಕೂ ವಿಶೇಷವಾಗಿ ಕೋಶವಿಜ್ಞಾನಕ್ಕೂ ತುಂಬ ಪ್ರಯೋಜನವಾಗಿದೆ. ಸ್ತ್ರೀಯರೂ ಸಹ ವಚನಗಳನ್ನು ರಚಿಸಿ ಕನ್ನಡದ ಶಬ್ದಭಂಡಾರವನ್ನು ತುಂಬಿದ್ದಾರೆ.

ಪ್ರತಿಯೊಂದು ಧರ್ಮಕ್ಕೂ ತನ್ನದೇ ಆದ ಆಚರಣಾವಿಧಿ ಇರುತ್ತದೆ. ಆಯಾ ಧರ್ಮಗಳಲ್ಲಿನ ಶಬ್ದಗಳಿಗೆ ಇತರ ಧಾರ್ಮಿಕ ಶಬ್ದಗಳಿಗಿಂತ ವಿಶಿಷ್ಟಾರ್ಥವಿರುತ್ತದೆ. ಈ ಶಬ್ದಗಳ ಅರ್ಥಗಳನ್ನು ಅರಿಯಬೇಕಾದರೆ ಆ ಧರ್ಮವನ್ನು ಅರಿತುಕೊಳ್ಳುವುದು ಅನಿವಾರ್ಯ. ಹೀಗಾಗಿ ಕೋಶದಲ್ಲಿ ಈ ಎಲ್ಲ ಪಾರಿಭಾಷಿಕ ಶಬ್ದಗಳ ಅರ್ಥವನ್ನೂ ನಿರೂಪಿಸುವುದು ದುಸ್ತರವಾದುದು. ಎಲ್ಲ ಧರ್ಮಗಳಿಗೂ ಸಮಾನವಾದ ಅರ್ಥವಿರುವ ಶಬ್ದಗಳ ವಿಷಯದಲ್ಲಿ ಈ ಸಮಸ್ಯೆ ಉದ್ಭವಿಸುವುದಿಲ್ಲ. ಆದರೆ ಆಯಾ ಧರ್ಮದ ಪ್ರಕ್ರಿಯೆಗಳನ್ನು ವಿವರಿಸುವ ಶಬ್ದಗಳಿಗೆ ಪ್ರತ್ಯೇಕ ಪಾರಿಭಾಷಿಕ ನಿಘಂಟು ಅತ್ಯಾವಶ್ಯಕ.

ಜೈನ ವೀರಶೈವ ವೈದಿಕ ಸಾಹಿತ್ಯಕ್ಕೆ ಸಂಬಂಧಪಟ್ಟ ಧಾರ್ಮಿಕ ಮತ್ತು ದಾರ್ಶನಿಕ ಶಬ್ದಗಳ ಜೊತೆಗೆ ಸಂಗೀತ ನೃತ್ಯ ಶಿಲ್ಪ ಮೊದಲಾದ ವಿವಿಧ ಕಲೆಗಳಿಗೆ ಸಂಬಂಧಿಸಿದ ಪಾರಿಭಾಷಿಕ ಶಬ್ದಗಳೂ, ವ್ಯಾಕರಣ ಛಂದಸ್ಸು ಅಲಂಕಾರ ತರ್ಕ ವೈದ್ಯ ಜ್ಯೋತಿಷ್ಯ ಕಾಮಶಾಸ್ತ್ರ ಗಣಿತ ಮುಂತಾದ ಶಾಸ್ತ್ರಗಳಿಗೆ ಸಂಬಂಧಿಸಿದ ಶಬ್ದಗಳೂ ಇತರ ವೈಜ್ಞಾನಿಕ ಪಾರಿಭಾಷಿಕ ಶಬ್ದಗಳೂ ನಿಘಂಟಿನಲ್ಲಿ ಸೇರ್ಪಡೆಯಾಗಬೇಕಾಗುತ್ತದೆ. ಸಾಮಾನ್ಯ ಸಾಧಾರಣ ನಿಘಂಟುಗಳಲ್ಲಿ ಈ ಪಾರಿಭಾಷಿಕ ಶಬ್ದಗಳ ಸಮಗ್ರ ಅರ್ಥವನ್ನು ವಿವರಿಸುವುದು ಸಾಧ್ಯವಾಗುವುದಿಲ್ಲ. ಆದುದರಿಂದ ಈ ಒಂದೊಂದು ಧರ್ಮಕ್ಕೂ ವೃತ್ತಿಗೂ ಸಂಬಂಧಿಸಿದ ಕೋಶಗಳ ಅಗತ್ಯ ಬಹಳಷ್ಟಿದೆ.

ವೀರಶೈವ ಧರ್ಮ ತುಂಬ ಪ್ರಾಚೀನವಾದುದು. ಇದರಲ್ಲಿ ಶಾಸ್ತ್ರಗ್ರಂಥಗಳೂ ಧರ್ಮ ಗ್ರಂಥಗಳೂ ಸಾಹಿತ್ಯ ಗ್ರಂಥಗಳೂ ಕಂಡುಬರುತ್ತವೆ. ಈ ಎಲ್ಲ ಪ್ರಕಾರಗಳಲ್ಲಿ ಕಂಡುಬರುವ ಪಾರಿಭಾಷಿಕ ಶಬ್ದಗಳನ್ನು ಆಕರಗಳೊಡನೆ ಸಂಗ್ರಹಿಸಿ ವಿವರವಾಗಿ ನಿರೂಪಿಸುವ ನಿಘಂಟು ಸದ್ಯದಲ್ಲಿ ಯಾವುದೂ ಕಂಡುಬರುತ್ತಿಲ್ಲ. ರಾವ್‌ಬಹದ್ದೂರ್ ಪಿ.ಜಿ. ಹಳಕಟ್ಟಿಯವರು ಅತ್ಯಂತ

ಪರಿಶ್ರಮದಿಂದ ಸಿದ್ಧಪಡಿಸಿರುವ 'ಶಿವಾನುಭವ ಶಬ್ದಕೋಶ' ಉಪಯುಕ್ತವಾದರೂ ಮೂಲ ಆಕರಗಳ ಅಭಾವದಿಂದ ಈ ಕೋಶದಲ್ಲಿ ನಿರೂಪಿಸಿರುವ ಅರ್ಥಗಳನ್ನು ಮೂಲ ಗ್ರಂಥಗಳಿಂದ ತಾಳೆ ನೋಡುವುದು ಸಾಧ್ಯವಿಲ್ಲವಾಗಿದೆ. ಆದುದರಿಂದ ಈ ನಿಘಂಟನ್ನು ಈ ಮೇಲಿನ ದೃಷ್ಟಿಯಿಂದ ನವೀಕರಿಸಿದರೆ ತುಂಬ ಪ್ರಯೋಜನವಾಗುವುದರಲ್ಲಿ ಸಂದೇಹವೇ ಇಲ್ಲ.

ಪ್ರಕೃತ ವೀರಶೈವ ಧರ್ಮಕ್ಕೆ ಸಂಬಂಧಿಸಿದ ಸಾಹಿತ್ಯದಲ್ಲಿ ಬಳಕೆಯಾಗಿರುವ ಇತರ ಧರ್ಮಗಳಿಗಿಂತ ಭಿನ್ನವಾದ ಅರ್ಥವನ್ನುಳ್ಳ ಕೆಲವು ಶಬ್ದಗಳನ್ನು ಅವಲೋಕಿಸೋಣ.

**ಗುರು ಲಿಂಗ ಜಂಗಮ** : ಈ ಮೂರು ಶಬ್ದಗಳಿಗೆ ವೀರಶೈರ ಧರ್ಮದಲ್ಲಿ ತುಂಬ ವ್ಯಾಪಕವಾದ ಅರ್ಥವಿದೆ. ರೂಢಿಯಲ್ಲಿ 'ಗುರು' ಶಬ್ದಕ್ಕೆ ಬೋಧಿಸುವವನು, ಉಪದೇಶಿಸುವವನು ಎಂದಿದೆ. ಭಕ್ತನಿಗೆ ದೀಕ್ಷೆಯನ್ನು ಮಾಡಿ ಲಿಂಗಾಂಗಿ ಧರ್ಮದ ಉಪದೇಶವನ್ನು ಮಾಡುವವನು ಗುರು. ಗುರುವನ್ನು ಸಾಕ್ಷಾತ್ ಈಶ್ವರನೆಂದು ಭಾವಿಸಬೇಕು.

*ಆವವಂ ಗುರುವಾತನೇ ಶಿವಂ ಬಳಿಕ ಕರ್ತಾವವಂ ಶಿವನಾತನೇ*
*ಗುರುವೆನುತ್ತಲಾ ॥*
*ವಾವ ಪರಿಯಿಂ ನುಡಿದು ನೆನೆದು ನಿಶ್ಚೈಸಿ ಭಕ್ತಿಯ ಮುಕ್ತಿಯೊದವ ಕೊಡವ ॥*
*ಯೋಗುರುಸ್ಸಶಿವಃಪ್ರೋಕ್ತೋಯಶ್ಶಿವಸ್ಸಗುರುಸ್ಮೃತಃ*
*ಭಕ್ತಿ ಮುಕ್ತಿ ಪ್ರದಾತಾಯ ತಸ್ಮೈಶ್ರೀ ಗುರುವೇನಮ ॥*
*ಅಖಂಡಮಂಡಲಾಕಾರಂ ವ್ಯಾಪ್ತಂ ಯೇನ ಚರಾಂ ಚರಂ*
*ಜಗದ್ವಂದಿತ ಪಾದಾಯ ತಸ್ಮೈಶ್ರೀ ಗುರವೇ ನಮಃ*

(ವೀರಶೈವಾಮೃತ ಮಹಾಪುರಾಣ ೧-೧-೧೦) ಗುರು ಶಾಸ್ತ್ರಾಗಮಗಳನ್ನು ಬಲ್ಲವ ನಾಗಿರಬೇಕು. ಇಲ್ಲದಿದ್ದರೆ ಗುರುಶಿಷ್ಯರಿಬ್ಬರೂ ಭ್ರಷ್ಟರಾಗುತ್ತಾರೆ. ಇದನ್ನೇ ಪ್ರಭುದೇವರು :

*ಉಪಚಾರದ ಗುರುವಿಂಗೆ ಉಪಚಾರದ ಶಿಷ್ಯ*
*ಉಪಚಾರದ ಲಿಂಗ ಉಪಚಾರದ ಜಂಗಮ*
*ಉಪಚಾರದ ಪ್ರಸಾದವ ಕೊಂಡ ಗುರುವಿಂಗೆ*
*ಭವದ ಲೆಂಕನಾಗಿ ಅಂಧಕನ ಕೈಯ ಅಂಧಕ ಹಿಡಿದಂತೆ*
*ಇವರಿಬ್ಬರೂ ಹೊಲಬುಗೆಟ್ಟರು ಕಾಣಾ ಗುಹೇಶ್ವರ*

ಎಂದು ಹೇಳಿದ್ದಾರೆ. ಈ ಗುರುಗಳಲ್ಲಿ ದೀಕ್ಷಾಗುರು, ಶಿಕ್ಷಾಗುರು, ಮೋಕ್ಷಗುರು ಎಂದು ಮೂರು ಪ್ರಭೇದಗಳಿವೆ. ಅಂಗಕ್ಕೆ ಲಿಂಗವನ್ನು ಅನುಗೊಳಿಸಿದವನು ಎಂದರೆ ದೀಕ್ಷೆಯನ್ನು ಕೊಟ್ಟವನು ದೀಕ್ಷಾಗುರು. ಮನಕ್ಕೆ ಜ್ಞಾನವನ್ನು ಅರುಹಿದವನು ಶಿಕ್ಷಾಗುರು, ಅಂಗಾಂಗ ಸಾಮರಸ್ಯದ ಗುಟ್ಟನ್ನು ತಿಳಿಸಿ ಮೋಕ್ಷಮಾರ್ಗವನ್ನು ತೋರುವವನು ಮೋಕ್ಷಾಗುರು.

ಅದ್ದರಿಂದಲೇ ಸರ್ವಜ್ಞ 'ಗುರುವಿನಿಂದಲೆ ಇಹವು ಗುರುವಿನಿಂದಲೆ ಪರವು' ಎಂದು ಹೇಳಿದ್ದಾನೆ. ತನುವ ಕೊಟ್ಟು ಗುರುವನೊಲಿಸಬೇಕು ಎಂದು ವಚನಕಾರರು ಹೇಳಿದ್ದಾರೆ.

ಮಹಾದೇವಿಯಕ್ಕ ಗುರುವಿನ ಮಹತ್ವವನ್ನು ಹೀಗೆ ಬಣ್ಣಿಸಿದ್ದಾಳೆ:

*ಗುರುವಿನ ಕರುಣದಿಂದ ಲಿಂಗವ ಕಂಡೆ, ಜಂಗಮವ ಕಂಡೆ*
*ಗುರುವಿನ ಕರುಣದಿಂದ ಪಾದೋದಕವ ಕಂಡೆ, ಪ್ರಸಾದವ ಕಂಡೆ*
*ಗುರುವಿನ ಕರುಣದಿಂದ ಸಜ್ಜನ ಸದ್ಭಕ್ತರ ಸದ್ಗೋಷ್ಠಿಯ ಕಂಡೆ*
*ಚೆನ್ನಮಲ್ಲಿಕಾರ್ಜುನಯ್ಯ*
*ನಾ ಹುಟ್ಟಲೊಡನೆ ಶ್ರೀಗುರು ವಿಭೂತಿಯ ಪಟ್ಟವ ಕಟ್ಟಿ*
*ಲಿಂಗಸ್ವಾಯತನ ಮಾಡಿದನಾಗಿ ಧನ್ಯಳಾದೆನು.*

ವಿರಕ್ತ ತೋಂಟದಾರ್ಯರು 'ಮನೋವಿಜಯ'ದ ಚಂದ್ರಿಕೆಯಲ್ಲಿ ನಾಲ್ಕು ತೆರದ ಸದ್ಗುರು ಸೇವೆಯೆಂತೆಂದೊಡೆ - ಗುರುವಿಗನುಕೂಲವೃತ್ತಿಯೆ ಆಪ್ತನೆನಿಪ್ಪುದು. ಗುರುಪಾದ ಪ್ರಕ್ಷಾಳನಾಧಿಕವೆ ಅಂಗವೆನಿಪ್ಪುದು. ಗುರುವಿನ ಗೃಹಕ್ಷೇತ್ರಾದಿ ರಕ್ಷಣವೆ ಸ್ಥಾನವೆನಿಪ್ಪುದು. ಶ್ರೀಗುರು ಸಾಕ್ಷಾತ್ಪರಶಿವನೆಂಬ ವಿಶ್ವಾಸವೆ ಸದ್ಭಾವವೆನಿಸುವುದು ಎಂದಿದ್ದಾರೆ (೨-೨೧ ಟೀಕು) ಆದ್ದರಿಂದ ಗುರು ಮುನಿದರೆ ಹರನೂ ಕಾಯಲಾರ.

**ಲಿಂಗ:** ದೀಕ್ಷಾ ಕಾಲದಲ್ಲಿ ಗುರು ಶಿಷ್ಯನಿಗೆ ಮಂತ್ರೋಪದೇಶಪೂರ್ವಕವಾಗಿ ಬಾಹ್ಯಾಚರಣೆಗಾಗಿ ಕೊಡುವ ಲಾಂಛನ. ಲಿಂಗವೆಂದರೆ ಸಚ್ಚಿದಾನಂದ ಸ್ವರೂಪನಾದ ಪರಮೇಶ್ವರ. ಅಚೇತನ ವಸ್ತುಗಳಿಂದ ಮಾಡಿದುದು ಲಿಂಗವಲ್ಲ. "ಆಕಾಶದೋಪಾದಿಯಿಂದ ಲಾಪೂರ್ಣಂ ನಿರಾಕಾರನೈ ದೇಹಪಾದಂಗಳಿಲ್ಲದನ ಲಾ ಕೇಳ್ವದೆನಗೆ ಪೋದಪೆನು ಬಂದಪೆನೆಂಬುದುಂ ಹಸಿವು ನೀರಡಿಕೆಯಾ ಆಕರಣೆಯಿಲ್ಲನಂತರದಲ್ಲಿ ಶಿವನಖಿಳ ಲೋಕದೊಳ್ ಬೆಳಗುವ ನಿಜಪ್ರಕಾಶಾಂಗನೈ ಶ್ರೀ ಕೇವಲಂ ಲಿಂಗಂ"; "ಲಿಂಗವೇ ಶಂಭುವೆಂದರಿ"; "ಆಕಾಶವೇ ಲಿಂಗವೆಂಬರೈ".

*ಶಿವೋಽಸ್ತಿ ಸಚ್ಚಿದಾನಂದಃ ಪರಿಪೂರ್ಣೋ ನಿರಂಜನಃ ।*
*ಅಕಾರಣಮಕಾರ್ಯಂಚ ಮನೋ ವಾಚಾಮಗೋಚರಂ ॥*
*ಪರಂ ಗೂಢಂ ಶರೀರಸ್ಥಂ ಲಿಂಗಕ್ಷೇತ್ರಮನಾದಿವತ್ ।*
*ಯಥಾದಿವ್ಯೈಶ್ವರ್ಯಂ ತೇಜಸ್ತಲ್ಲಿಂಗಂ ಪಂಚಸಂಜ್ಞಿತಂ ॥*

(ವೀರಶೈವಾಮೃತ ಮಹಾಪುರಾಣ ೧.೩.೧೪,೨೩). 'ನಿರ್ವಾಚ್ಯಪದ ಸರ್ವತೋರ್ಕ ಗಾಸ್ಪದಮಪ್ಪುದಾಗಿ ಘನಲಿಂಗವೆಂದು ಉದಿಸಿತ್ತು ನಾಮಂ" ವೇದಂಗಳಂತೆ ಪೇಳ್ವುದರಿಂದ ಅನಿರ್ವಾಚ್ಯ ಸ್ವರೂಪವಾದ ಬ್ರಹ್ಮಂ ಸಕಲ ಪ್ರಪಂಚಕ್ಕಧಿಷ್ಠಾನವಾಗಿ :

*ಲೀಯತೇ ಗಮ್ಯತೇ ಯತ್ರಯೇನ ಸರ್ವಂ ಚರಾಚರಂ*
*ತದೇ ತಲ್ಲಿಂಗಮಿತ್ಯುಕ್ತಂ ಲಿಂಗಶಬ್ದಾರ್ಥವೇದಿಭಿಃ*

ಎಂದು ಪೇಳಲ್ಪಡೆದ ಯೋಗಯುಕ್ತಮಾದಾಲಿಂಗ ಶಬ್ದದಿಂ ಪ್ರತಿಪಾದಮಾದ ಪರಶಿವತತ್ವಮಸೆದುದು (ಮನೋವಿಜಯ ೩-೩, ಟೀಕು). ಲಿಂಗದಲ್ಲಿ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗ ಎಂದು ಮೂರು ತೆರ. ಇವುಗಳ ಆಚರಣಾ ಕ್ರಮವನ್ನು "ತನುಶುದ್ಧನಾಗಿ ಇಷ್ಟಲಿಂಗವ ಪೂಜಿಸಬೇಕು; ಮನಶುದ್ಧನಾಗಿ ಪ್ರಾಣಲಿಂಗವ ಧ್ಯಾನಿಸಬೇಕು; ಭಾವಶುದ್ಧನಾಗಿ ಭಾವಲಿಂಗವ ಭಾವಿಸಬೇಕು" ಎಂದು ಚನ್ನಬಸವಣ್ಣನವರ ವಚನಗಳಲ್ಲಿ (೧೪೮) ಹೇಳಿದೆ. "ವಚನಕಾರರು ಈ ಲಿಂಗವಿಕಾಸದ ಬಗ್ಗೆ ತಮ್ಮ ವಿಚಾರಗಳನ್ನು ಷಟ್‌ಸ್ಥಲಕ್ಕೆ ಅನುಸರಿಸಿ ಹೇಳುತ್ತಾರೆ. ಆದ್ದರಿಂದ ಲಿಂಗದಲ್ಲಿ ಅವರು ಆರು ವಿಭಾಗಗಳನ್ನು ಮಾಡುತ್ತಾರೆ. ಅವು ಯಾವುವೆಂದರೆ - (೧) ಆಚಾರ ಲಿಂಗ,(೨) ಗುರುಲಿಂಗ, (೩) ಶಿವಲಿಂಗ, (೪) ಜಂಗಮಲಿಂಗ, (೫) ಪ್ರಸಾದ ಲಿಂಗ, (೬) ಮಹಾಲಿಂಗ" (ಶಿವಾನುಭವಕೋಶ, ಪು-೧೦).

ಮನವ ಕೊಟ್ಟು ಲಿಂಗವನೊಲಿಸಬೇಕು ಎಂದು ವಚನಕಾರರು ಹೇಳಿದ್ದಾರೆ. ಈ ಆರು ಲಿಂಗಗಳಲ್ಲಿಯೂ ಒಂದೊಂದರಲ್ಲಿಯೂ ತ್ರಿವಿಧಗಳನ್ನು ಚೆನ್ನಬಸವಣ್ಣನವರು ಈ ವಚನದಲ್ಲಿ ವಿವರಿಸಿದ್ದಾರೆ.

(೧) ಆಚಾರಲಿಂಗ ತ್ರಿವಿಧ : ಸದಾಚಾರ, ನಿಯತಾಚಾರ, ಗಣಾಚಾರ. ಎಲ್ಲ ಜನವಹುದೆಂಬುದೆ ಸದಾಚಾರ. ಹಿಡಿದ ವ್ರತನಿಯಮದ ಬಿಡದಿಹುದೆ ನಿಯತಾಚಾರ. ಶಿವನಿಂದೆಯ ಕೇಳದಿಹುದೆ ಗಣಾಚಾರ.

(೨) ಗುರುಲಿಂಗ ತ್ರಿವಿಧ : ದೀಕ್ಷೆ, ಶಿಕ್ಷೆ, ಸ್ವಾನುಭಾವ. ದೀಕ್ಷೆಯೆಂದಡೆ ಗುರು, ಶಿಕ್ಷೆಯೆಂದಡೆ ಜಂಗಮ. ಸ್ವಾನುಭಾವವೆಂದಡೆ ತನ್ನತಾನರಿವುದು.

(೩) ಶಿವಲಿಂಗ ತ್ರಿವಿಧ : ಇಷ್ಟಲಿಂಗ, ಪ್ರಾಣಲಿಂಗ, ತೃಪ್ತಿಲಿಂಗ. ಶ್ರೀಗುರು ಕರಸ್ಥಲದಲ್ಲಿ ಅನುಗ್ರಹವ ಮಾಡಿ ಕೊಟ್ಟುದೀಗ ಇಷ್ಟಲಿಂಗ. ತನುಗುಣನಾಸ್ತಿಯಾದುದೆ ಪ್ರಾಣಲಿಂಗ. ಜಾಗ್ರತ್ ಸ್ವಪ್ನ ಸುಷುಪ್ತಿಯಲ್ಲಿ ಲಿಂಗವಲ್ಲದೆ ಪೆಱತೊಂದನಳಿಯದಿಪ್ಪುದೆ ತೃಪ್ತಿಲಿಂಗ.

(೪) ಜಂಗಮಲಿಂಗ ತ್ರಿವಿಧ: ಸ್ವಯ, ಚರ, ಪರ. ಸ್ವಯವೆಂದಡೆ ತಾನು. ಚರವೆಂದಡೆ ಲಾಂಛನ ಮುಂತಾಗಿ ಚರಿಸುವುದು. ಪರವೆಂದಡೆ ಅಳಿವು ಮುಂತಾಗಿ ಚರಿಸುವುದು.

(೫) ಪ್ರಸಾದಲಿಂಗ ತ್ರಿವಿಧ : ಶುದ್ಧ, ಸಿದ್ಧ, ಪ್ರಸಿದ್ಧ. ಶುದ್ಧವೆಂದಡೆ ಗುರುಮುಖದಿಂದ ಮಲತ್ರಯವ ಕಳೆದುಳಿದ ಶೇಷ. ಸಿದ್ಧವೆಂದಡೆ ಲಿಂಗಮುಖದಿಂದ ಕರಣಮಥನಂಗಳ

ಕಳೆದುಳಿದ ಶೇಷ. ಪ್ರಸಿದ್ಧವೆಂದಡೆ ಜಂಗಮ ಮುಖದಿಂದ ಸರ್ವಚೈತನ್ಯಾತ್ಮಕ ತಾನೆಯಾಗಿ ಖಂಡಿತವಳಿದುಳಿದ ಶೇಷ.

(೬) ಮಹಾಲಿಂಗ ತ್ರಿವಿಧ : ಪಿಂಡಜ, ಅಂಡಜ, ಬಿಂದುಜ. ಪಿಂಡಜವೆಂದಡೆ ಘಟಾಕಾಶ; ಅಂಡಜವೆಂದಡೆ ಬ್ರಹ್ಮಾಂಡ; ಬಿಂದುಜವೆಂದಡೆ ಮಹಾಕಾಶ. ಇಂತು ಲಿಂಗಸ್ಥಲ ಆರಕ್ಕಂ ಹದಿನೆಂಟು ಸ್ಥಲವಾಯಿತ್ತು (ಚನ್ನಬಸವಣ್ಣನವರ ವಚನಗಳು ೧೧೧.)

**ಜಂಗಮ** : ''ಭಕ್ತನನ್ನು ಭವಸಾಗರದಿಂದ ದಾಟಿಸುವ, ಗಮ್ಯಸ್ಥಾನಕ್ಕೆ ಕೊಂಡೊಯ್ಯುವ ಮಹಾತ್ಮನೇ ಜಂಗಮ'' (ವಚನ ಧರ್ಮಸಾರ, ಪುಟ ೧೨೩); ಜಂಗಮನು ಅಂಗವಿಕಾರಗಳನ್ನು ದೂರಮಾಡಿ, ಷಟ್‌ಸ್ಥಲಾಚರಣೆಯುಳ್ಳವನಾಗಿ ಶಿವತತ್ತ್ವವನ್ನೊಳ ಗೊಂಡು ಆಚರಿಸುತ್ತಾನೆ. ಅವನು ಭಾವದಲ್ಲಿ ಲಿಂಗಪರಿಪೂರ್ಣನು, ಲಿಂಗಚೈತನ್ಯನು, ಅನುಭಾವಿಯು, ಆನಂದ ಸ್ವರೂಪನು ಆಗಿರುತ್ತಾನೆ. ಜಂಗಮವು ಮೂರು ವಿಧ ಶರೀರಗಳ ಮೇಲೆಯೂ ಪರಿಣಾಮ ಮಾಡುತ್ತಾನೆ. ಅನುಕ್ರಮವಾಗಿ ಕ್ರಿಯಾ ಜಂಗಮ, ಜ್ಞಾನ ಜಂಗಮ, ಮಹಾಜ್ಞಾನ ಜಂಗಮ ಎಂಬ ಹೆಸರುಗಳು ಉಂಟಾಗುತ್ತವೆ. (ಶಿವಾನುಭವ ಶಬ್ದಕೋಶ, ೧೦೨); ಆ ಶಿವನೆ ಜಂಗಮಾಕಾರದೊಳು ಪುಟ್ಟಿದನು. ಪಂಚಮುದ್ರಾದಿ ಭೂಷಣವನಾಂತು ಪಿಂಗದೀ ಲೋಕಕ್ಕೆ ಕರ್ತನಾಗುತ್ತಲಾ ಜಂಗಮಂ ಮೆರೆವನೆಂಬುದು ತಥ್ಯ; ಆವನೊರ್ವಂ ಸರ್ವಲೋಕಾಪಕಾರಕ್ಕೆ ದೇವಾದಿದೇವ ಪರಮೇಶ್ವರಂ ಚರಿಸುತ್ತಲೋವಿ ನಿಂದಿರುತಿರ್ಪ ನಾತನೇ ಜಂಗಮ (ವೀರಶೈವಾಮೃತ ಮಹಾಪುರಾಣ ೧-೩-೨೬,೨೭); ವೀರಾಗಮದಲ್ಲಿ ಜಂಗಮದ ಲಕ್ಷಣವನ್ನು ಹೀಗೆ ಹೇಳಿದೆ:

*ಜಕಾರಾಜ್ಜನಿತಾ ಪೃಥ್ವೀ ಗಕಾರಾಕಾಶಮುದ್ಭವಂ*
*ಮಕಾರಾನ್ಮರ್ತ್ಯಲೋಕಶ್ಚ ಜಂಗಮೋ ಜಗದೀಶ್ವರಃ ॥ ೧೪ ॥*
*ಸತ್ವರೂಪಂ ಜಕಾರಂಚ ಚಿತ್ಸ್ವರೂಪಂ ಗಕಾರಕಂ*
*ಆನಂದತ್ವಂ ಮಕಾರಂಚ ನಿತ್ಯಮಾನೇನ ಜಂಗಮಂ ॥ ೧೭ ॥*
*ಜಕಾರಂ ಜನನಂ ನಾಸ್ತಿ ಗಕಾರಂ ಗಮನಂ ನಹಿ*
*ಮಕಾರಂ ಮರಣಂ ನಾಸ್ತಿ ತಸ್ಯ ಜಂಗಮ ಲಕ್ಷಣಂ ॥ ೧೮ ॥*

ಅಲ್ಲಮಪ್ರಭುದೇವರು ಜಂಗಮದ ಲಕ್ಷಣವನ್ನೂ ಜಂಗಮರಿಗೆ ಕೊಟ್ಟಿರುವ ಮಹತ್ತ್ವ ಸ್ಥಾನವನ್ನೂ ಈ ವಚನಗಳಲ್ಲಿ ನೋಡಬಹುದು. ''ಜಂಗಮಕ್ಕೆ ಲಕ್ಷಣವಾವುದೆಂದರೆ ಲಿಂಗರೂಪಾಗಿ ಪಾದಾರ್ಚನೆಯ ಮಾಡಿಸಿಕೊಳ್ಳಬೇಕು. ಭಕ್ತನಿಗೆ ಲಕ್ಷಣವಾವುದೆಂದರೆ ಭೃತ್ಯನಾಗಿ ಪಾದಾರ್ಚನೆಯ ಮಾಡಬೇಕು. ಜಂಗಮವು ಲಿಂಗರೂಪವಹ ವಿವರವೆಂತೆಂದಡೆ ಮಾಡಿಸಲ್ಲಿ ನಾನು ಲಿಂಗರೂಪೆಂದಡೆ ಹರಿಯದು; ತನುಮನಧನತ್ರಯಗಳಂ ಹಿಡಿಯದೆ ಮಾಡಿಸಿಕೊಂಬುದೀಗ ಜಂಗಮಕ್ಕೆ ಲಕ್ಷಣವು'' (ಅಲ್ಲಮನ ವಚನ ಚಂದ್ರಿಕೆ ೭೨೭);.

ಎನ್ನ ನೇತ್ರದಾಹಾರವನು ಜಂಗಮಕ್ಕೆ ನೋಡಿಸಿದಲ್ಲದೆ ನಾನು ನೋಡಿದೆನಾದಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಎನ್ನ ಶ್ರೋತ್ರದಾಹಾರವನು ಜಂಗಮಕ್ಕೆ ಕೇಳಿಸಿದಲ್ಲದೆ ನಾನು ಕೇಳಿದೆನಾದಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಎನ್ನ ಘ್ರಾಣದಾಹಾರವನು ಜಂಗಮಕ್ಕೆ ವಾಸಿಸಿದಲ್ಲದೆ ನಾನು ವಾಸಿಸಿದೆನಾದಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಎನ್ನ ಜಿಹ್ವೆಯಾಹಾರವನು ಜಂಗಮಕ್ಕೆ ಊಡಿಸಿದಲ್ಲದೆ ನಾನು ಭುಂಜಿಸಿದೆನಾದಡೆ, ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಎನ್ನ ಸ್ಪರ್ಶದಾಹಾರವನು ಜಂಗಮಕ್ಕೆ ಮುಟ್ಟಿಸಿದಲ್ಲದೆ ನಾನು ಮುಟ್ಟಿದೆನಾದಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಎನ್ನಂಗದಾಹಾರ ಮಜ್ಜನವನು ಜಂಗಮಕ್ಕೆ ಮಾಡಿಸಿದಲ್ಲದೆ ನಾನು ಮಜ್ಜನವ ಮಾಡಿದೆನಾದಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಎನ್ನಂಗದಾಹಾರ ವಸ್ತ್ರ ಕಪ್ಪಡವನು ಜಂಗಮಕ್ಕೆ ಹೊದಿಸಿದಲ್ಲದೆ ನಾನು ಹೊದ್ದೆನಾದರೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಎನ್ನಂಗದಾಹಾರ ಸ್ತ್ರೀಯನು ಜಂಗಮಕ್ಕೆ ಸಂಯೋಗವ ಮಾಡಿಸಿದಲ್ಲದೆ ನಾನು ಸ್ತ್ರೀಯ ಸಂಯೋಗವ ಮಾಡಿದೆನಾದರೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಎನ್ನಂಗದಾಹಾರ ಮಂಚ ಸುಪ್ಪತ್ತಿಗೆಯ ಜಂಗಮಕ್ಕೆ ಕೊಡದೆ ನಾನು ಮಂಚ ಸುಪ್ಪತ್ತಿಗೆಯ ಮೇಲೆ ಮಲಗಿದಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಎನ್ನಂಗದಾಹಾರ ಗದ್ದುಗೆಯನ್ನು ಜಂಗಮಕ್ಕೆ ಕೊಡದೆ ನಾನು ಕುಳಿತೆನಾದಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಎನ್ನಂಗದಾಹಾರ ಗೃಹವನು ಜಂಗಮಕ್ಕೆ ಕೊಡದೆ ನಾನು ಆನೆ ಕುದುರೆ ದಂಡಿಗೆಯನೇರಿದೆನಾದಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಎನ್ನಂಗದಾಹಾರ ಸತ್ತಿಗೆ ಚಾಮರಂಗಳನು ಜಂಗಮಕ್ಕೆ ಕೊಡದೆ ನಾನೇ ಉಪಚರಿಸಿಕೊಂಡಡೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ. ಎನ್ನಂಗದಾಹಾರ ಚರಣರಕ್ಷೆಯನು ಜಂಗಮಕ್ಕೆ ಮೆಟ್ಟಿಸದೆ ನಾನು ಮೆಟ್ಟಿದೆನಾದಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಎನ್ನಂಗದಾಹಾರ ದೇಹವನೊತ್ತಿಸಿಕೊಂಬಲ್ಲಿ ಜಂಗಮಕ್ಕೊತ್ತಿಸದೆ ನಾನು ಒತ್ತಿಸಿಕೊಂಡೆನಾದಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಇಂತೀ ಹದಿನಾರು ತೆರನ ಭಕ್ತಿಯನು ಜಂಗಮಕ್ಕೆ ಮಾಡುವಲ್ಲಿ ಅವರೊಳಗೆ ಒಂದನಾದರೂ ನಾನು ವಂಚಿಸಿ ಭೋಗಿಸಿದೆನಾದಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಇಂತೀ ಪ್ರಕಾರದಲ್ಲಿ ಜಂಗಮ ಲಿಂಗವನರ್ಚಿಸಿ, ಪೂಜಿಸಿ ಪಾದೋದಕ ಪ್ರಸಾದವ ಕೊಂಬ ಸದ್ಭಕ್ತಂಗೆ ಗುರುವುಂಟು, ಲಿಂಗವುಂಟು, ಜಂಗಮವುಂಟು, ಪಾದೋದಕವುಂಟು, ಪ್ರಸಾದವುಂಟು, ಆಚಾರವುಂಟು, ಸದ್ಭಕ್ತಿಯುಂಟು. ಈ ಕ್ರಮದಲ್ಲಿ ಜಂಗಮಕರ್ಚಿಸದೆ ಪೂಜಿಸದೆ ತನ್ನ ಸಂಸಾರದೊಡನೆ ಒಡಲ ಹೊರೆವವಂಗೆ ಗುರುವಿಲ್ಲ, ಲಿಂಗವಿಲ್ಲ, ಜಂಗಮವಿಲ್ಲ, ಪಾದೋದಕವಿಲ್ಲ, ಪ್ರಸಾದವಿಲ್ಲ, ಅವನು ಅವಿಚಾರಿ, ಅವನು ಅಶ್ರೇಷ್ಠ, ಅವನು [illegible], ಅವನು ಭವಿ, ಅವನು ರೋಗಿ, ಅವನು ದರ್ಪಕ ಮತ್ತು ಅವನು ಪಂಚಮಹಾಪಾತಕನಯ್ಯ ಗುಹೇಶ್ವರ (ಅಲ್ಲಮನ ವಚನ ಚಂದ್ರಿಕೆ, ೭೩೦)

ಜಂಗಮವೆ ಲಿಂಗವೆನಗೆ ಜಂಗಮವೆ ಪ್ರಾಣವೆನಗೆ
ಕೂಡಲ ಸಂಗಮದೇವಯ್ಯಾ ಎನಗೆಯೂ ನಿನಗೆಯೂ
ಜಂಗಮ ಪ್ರಸಾದವೇ ಪ್ರಾಣ (ಬಸವಣ್ಣನವರ ವಚನಗಳು, 839)
ಜಂಗಮವೆನ್ನ ಪ್ರಾಣ ಜಂಗಮವೆನ್ನ ಜೀವ
ಜಂಗಮವೆನ್ನ ಪುಣ್ಯದ ಫಲ ಜಂಗಮವೆನ್ನ ನಿಧಿ ನಿಧಾನ
ಜಂಗಮವೆನ್ನ ಹರುಷದ ಮೇರೆ ಚನ್ನಮಲ್ಲಿಕಾರ್ಜುನಾ
ಜಂಗಮದ ತಿಂಥಿಣಿಯಲ್ಲಿ ಓಲಾಡುವೆನು (ಮಹಾದೇವಿಯಕ್ಕನ ವಚನಗಳು) ೧೬೮

**ಅಚ್ಚಪ್ರಸಾದಿ** : ಅಚ್ಚಪ್ರಸಾದಿಯು ಗುರುವು ಬೋಧಿಸಿದಂಥ ಆಚರಣೆಯ ಮರ್ಮವನ್ನು ತಿಳಿದು ವ್ರತಾಚರಣೆಗೆ ಏನೂ ತಪ್ಪುತಡೆಗಳಿಲ್ಲದ ಹಾಗೆ ಆಚರಿಸುತ್ತಾನೆ. (ಶಿವಾನುಭವ ಶಬ್ದಕೋಶ. ೧೧೪) ಆಧಿಯಿಲ್ಲದಿದ್ದಡೆ ಲಿಂಗಪ್ರಸಾದಿಯೆಂಬೆ, ವ್ಯಾಧಿಯಿಲ್ಲದಿದ್ದಡೆ ಜಂಗಮ ಪ್ರಸಾದಿಯೆಂಬೆ; ಲೌಕಿಕವ ಸೋಂಕದಿದ್ದಡೆ ಸಮಯಪ್ರಸಾದಿಯೆಂಬೆ. ಇಂತೀ ತ್ರಿವಿಧ ಪ್ರಸಾದ ಸಂಬಂಧಿಯಾದಾತನ ಅಚ್ಚಪ್ರಸಾದಿಯೆಂಬೆನು ಕಾಣಾ ಗುಹೇಶ್ವರ (ಅಲ್ಲಮನ ವಚನ ಚಂದ್ರಿಕೆ ೧೬೭); ಅಚ್ಚಪ್ರಸಾದಿ, ನಿಚ್ಚಪ್ರಸಾದಿ, ಸಮಯ ಪ್ರಸಾದಿಗಳ ವಿವರ : ಗುರು ಮೊದಲು ಆಚರಿಸುವಂತಹ ಮರ್ಮವನು ತಿಳಿದು ಶಿವಸಂಸ್ಕಾರವನ್ನು ಹೊಂದಿ ನಡೆ ಎಂದು ಅತಿಮೋಹನದಿಂದ ಸಮಸ್ತಮರ್ಮವನು ತಿಳುಹಿ ಹಿಡಿದ ವ್ರತಾಚರಣೆಗೆ ಸಂದು ಇಲ್ಲದ ಹಾಗೆ ಅಪಮೃತ್ಯು ಬಂದು ಸೋಂಕದ ಹಾಗೆ ಪ್ರಮಥ ಕೃಪಾಕಟಾಕ್ಷದಿಂದ ನಡೆದು ಹೋಗುವವರು; ಅವರೇ ಅಚ್ಚ ಪ್ರಸಾದಿಗಳು (ಚೆನ್ನಬಸವಣ್ಣನವರ ವಚನಗಳು, ೭೬೪)

**ಅಮಳೈಕ್ಯ, ಅಮಳೋಕ್ಯ** : ಶಬ್ದಗಳು ವೀರಶೈವ ಸಾಹಿತ್ಯದಲ್ಲಿ ಸಾಕಷ್ಟು ಪ್ರಚಲಿತವಾಗಿದೆ. ಇದಕ್ಕೆ ಮೂರು ಅರ್ಥಗಳಿವೆ : (೧) ಇಷ್ಟಲಿಂಗವನ್ನು ಧರಿಸುವ ಆರು ಸ್ಥಳಗಳಲ್ಲಿ ಇದು ಒಂದು; "ಕಕ್ಷದಲಿ ವಿಧಿಯು ಧರಿಸಿಹನು ಕರಪೀಠದೊಳು ಪಕ್ಷಿವಾಹನನು ಪಿಡಿದಿಹನು ಸದಾಶಿವಂ ಧರಿಸಿಕೊಂಡಿಪ್ಪನಮಳೈಕ್ಯದಲ್ಲಿ" (ಪ್ರೌಢರಾಯನ ಕಾವ್ಯ, ೮-೩). "ಕಂಕುಳೆಂಬುದು ಕವುಚಿನ ತವರು ಮನೆ. ಕರಸ್ಥಲವೆಂಬುದು ಕೈಕೆಟ್ಟ ಹುಣ್ಣು. ಅಮಳೋಕ್ಯವೆಂಬುದು ಬಾಯ ಬಗದಳ. ಅಂಗಸೋಂಕೆಂಬುದು ಪಾಪದ ತವರ್ಮನೆ. ಉತ್ತಮಾಂಗವೆಂಬುದು ನೆತ್ತಿಯ ಮೃತ್ಯು. ಕಂಠವೆಂಬುದು ಗಂಟಲಗಾಣ. ಮತ್ತೆ ಗುಹೇಶ್ವರನ ಮಾತು ನಿನಗೇಕೆಲವ್ವೋ" (ಅಲ್ಲಮನ ವಚನ ಚಂದ್ರಿಕೆ ೪೭೪); ಅಮಳೋಕ್ಯದಲ್ಲಿ ಲಿಂಗವ ಧರಿಸಿದ ಮತ್ತೆ ತುತ್ತಿನ ನಿಶ್ಚಯದ ಚಿಟ್ಟಿರಬೇಕು (ಮೋಳಿಗೆ ಮಾರಯ್ಯನ ವಚನಗಳು, ೫೫೨) (೨) ದವಡೆಯಲ್ಲಿ ಲಿಂಗವನು ಧರಿಸುವವನು; ಲಿಂಗವಮಳೈಕ್ಯರುಂ ಲಿಂಗ ಜೀವಾಹಿತರು ನೆನೆದು ಲಿಂಗವ ಬರಿಸಿಯೇ ಲಿಂಗಪೂಜೆಯ ಮಾಡಿ (ಶಿವತತ್ತ್ವ ಚಿಂತಾಮಣಿ,

೩೧-೨೪). (೩) ಬಾಯಲ್ಲಿ ಲಿಂಗವನ್ನಿಟ್ಟುಕೊಂಡಿರುವ ಸ್ಥಿತಿ ಸುರುಚಿರದ ಶೀಲವಂತಯ್ಯಗಳ ಅರಮನೆಗೆ ಚರಮೂರ್ತಿಯಮಳೋಕ್ಯದಿಂ ಬಂದು ಲಿಂಗಮಂ ಕರಕೆ ತಾರೆನೆ (ಗುರುರಾಜ ಚಾರಿತ್ರ್ಯ, ೮-೯೨)

**ಪಾದೋದಕ** : ಅಷ್ಟಾವರಣಗಳಲ್ಲಿ ಒಂದು. ಇದು ಬಹು ಮುಖ್ಯವಾದುದು. ಲೌಕಿಕಾರ್ಥದಲ್ಲಿ ಪಾದೋದಕವೆಂದರೆ ಕಾಲುತೊಳೆದ ನೀರು. ಜಂಗಮರ ಪಾದ ತೊಳೆದ ನೀರು. ಆದರೆ ಇದರ ಮಹತ್ವವನ್ನೂ, ಪಾದೋದಕವನ್ನು ಕೊಳ್ಳುವ ವಿಧಾನವನ್ನೂ ಚೆನ್ನಬಸವಣ್ಣನವರು ಸುದೀರ್ಘವಾಗಿ, ವಿವರವಾಗಿ ಹೇಳಿದ್ದಾರೆ: ಗುರುಪಾದೋದಕ, ಜಂಗಮ ಪಾದೋದಕ, ದೀಕ್ಷಾಪಾದೋದಕ, ಶಿಕ್ಷಾಪಾದೋದಕ, ಜ್ಞಾನಪಾದೋದಕ ಎಂಬ ಬಗೆಗಳಿವೆ. ಕರುಣಜಲವೇ ಗುರು ಪಾದೋದಕ. ವಿನಯಜಲವೇ ಲಿಂಗಪಾದೋದಕ. ಸಮತಾಜಲವೇ ಜಂಗಮ ಪಾದೋದಕ. ಗುರುಪಾದೋದಕದಿಂದ ಸಂಚಿತಕರ್ಮನಾಸ್ತಿ. ಲಿಂಗಪಾದೋದಕದಿಂದ ಪ್ರಾರಬ್ಧಕರ್ಮನಾಸ್ತಿ. ಜಂಗಮ ಪಾದೋದಕದಿಂದ ಆಗಾಮಿಕರ್ಮನಾಸ್ತಿ. ಇಂತೀ ತ್ರಿವಿಧೋದಕದಲ್ಲಿ ತ್ರಿವಿಧ ಕರ್ಮನಾಸ್ತಿ (ಚೆನ್ನಬಸವಣ್ಣನವರ ವಚನಗಳು, ೧೬೬)

*ಲಿಂಗೋದಕ, ಪಾದೋದಕ, ಪ್ರಸಾದೋದಕವೆಂದು ತ್ರಿವಿಧ.*
*ಲಿಂಗೋದಕವೆಂಬುದು ಶಿವಸಂಸ್ಕಾರದಿಂದಾದುದು*
*ಪಾದೋದಕವೆಂಬುದು ಲಿಂಗಕ್ಕೆ ಮಜ್ಜನಕ್ಕೆರೆದುದು*
*ಪ್ರಸಾದೋದಕವೆಂಬುದು ಲಿಂಗವಾರೋಗಿಸಿದ ಬಳಿಕ ಸಿತಾಳಂಗೊಟ್ಟುದು*
*ಲಿಂಗೋದಕದಲ್ಲಿ ಲಿಂಗಕ್ಕೆ ಪಾಕಪ್ರಯತ್ನ, ಮಜ್ಜನಕ್ಕೆಳೆವುದು*
*ಪಾದೋದಕದಲ್ಲಿ ಮುಖಪ್ರಕ್ಷಾಳನವ ಮಾಡುವುದು ಶಿರಸ್ಸಿನ ಮೇಲೆ*
*ತಳಿದುಕೊಂಬುದು ಪ್ರಸಾದೋದಕವನಾರೋಗಿಸುವುದು*

*(ಚೆನ್ನಬಸವಣ್ಣನವರ ವಚನಗಳು ೧೭೧)*

ಜ್ಞಾನಪಾದೋದಕವಲ್ಲಿ ಮೂರು ಸಂಬಂಧವಾಗುವುವು. ಅದೆಂತೆಂದಡೆ: ಮಹಾಂತನ ಪಾದವನು ಪಡೆದುಕೊಂಬಂತಹ ಭಕ್ತನು ಆ ಮಹೇಶ್ವರನ ಉನ್ನತಾಸನದಲ್ಲಿ ಮೂರ್ತಗೊಳಿಸಿ ಪಾದಪ್ರಕ್ಷಾಲನೆಯ ಮಾಡಿದನಂತರದಲ್ಲಿ ದೀಕ್ಷಾಪಾದೋದಕವ ಮಾಡಿ ಶುಭ್ರವಸ್ತ್ರದಿಂದ ದ್ರವವ ತೆಗೆದು, ಅಷ್ಟವಿಧಾರ್ಚನೆಯಿಂದ ಲಿಂಗಪೂಜೆಯ ಮಾಡಿಸಿ ಮರಳಿ ತಾನು :

*ಚೈತನ್ಯಂ ಶಾಶ್ವತಂ ಶಾಂತಂ ವ್ಯೋಮಾತೀತಂ ನಿರಂಜನಂ।*
*ನಾದಬಿಂದು ಕಲಾತೀತಂ ತಸ್ಮೈ ಶ್ರೀಗುರವೇ ನಮಃ ॥*

ಎಂದು ಅಷ್ಟಾಂಗಯುಕ್ತನಾಗಿ ವಂದನಂಗೈದು ಪಾದಪೂಜೆಗೆ ಅಪ್ಪಣೆಯ ತೆಗೆದುಕೊಂಡು ಅವರ ಸಮ್ಮುಖದಲ್ಲಿ ಗದ್ದುಗೆಯ ಹಾಕಿಕೊಂಡು, ಅದರ ಮೇಲೆ ಮೂರ್ತವ ಮಾಡಿಕೊಂಡು

ತನ್ನ ಲಿಂಗವ ನಿರೀಕ್ಷಿಸಿ, ವಾಮಹಸ್ತದಲ್ಲಿ ನಿರಂಜನ ಪ್ರಣವವ ನಿಲಿಸಿ, ಪೂಜೆಯ ಮಾಡಿ, ಆ ಮೇಲೆ ಜಂಗಮದ ಪಾದವ ಹಿಡಿದು ಪೂಜೆಯ ಮಾಡಿ ಆ ಪೂಜೆಯನಿಳುಹಿ, ಅದೇ ಉದಕದ ಪಾತ್ರೆಯಲ್ಲಿ ಶಿಕ್ಷಾಪಾದೋದಕವ ಮಾಡಿ, ಪಾದದ್ರವವ ತೆಗೆದು ಐದಂಗುಲಿಗಳಲ್ಲಿ ಪಂಚಾಕ್ಷರವ ಲೇಖನವ ಮಾಡಿ, ಮಧ್ಯದಲ್ಲಿ ಮೂಲಪ್ರಣವವ ಬರೆದು, ಅಷ್ಟವಿಧಾರ್ಚನೆ ಷೋಡಶೋಪಚಾರದಿಂದ ಪೂಜೆಯ ಮಾಡಬೇಕಾದಡೆ, ಶಿವಧರ್ಮೋತ್ತರೇ :

*ಲಿಂಗಾರ್ಪಿತ ಪ್ರಸಾದಂಚ ನ ದದ್ಯಾಚ್ಚರಲಿಂಗಕೇ ।*
*ಚರಾರ್ಪಿತ ಪ್ರಸಾದಂಚ ದದ್ಯಾಲ್ಲಿಂಗಾಯ ವೈಶುಭಂ ॥*

ಶಿವರಹಸ್ಯೇ :

*ಅನಾದಿ ಜಂಗಮಶ್ಚೈವ ಆದಿಲಿಂಗಸ್ಥಲಂ ಭವೇತ್ ।*
*ಅನಾದಿ ಜಂಗಮಾಯೈವಂ ಇಷ್ಟೋಚ್ಛಿಷ್ಟಂತು ಕಿಲ್ಬಿಷಂ ॥*

ಎಂಬುದಾಗಿ ಲಿಂಗಕ್ಕೆ ತೋರಿ ಪಾದವ ಪೂಜಿಸಲಾಗದು. ಅದೆಂತೆಂದಡೆ : ಗುರುವಿಗೂ ಲಿಂಗಕ್ಕೂ ಚೈತನ್ಯಸ್ವರೂಪ ಜಂಗಮವಾದ ಕಾರಣ ಆ ಜಂಗಮದ ಪ್ರಸಾದವ ಲಿಂಗಕ್ಕೆ ತೋರಬೇಕಲ್ಲದೆ ಲಿಂಗಪ್ರಸಾದವ ಪಾದಕ್ಕೆ ತೋರಲಾಗದು; ಅದೇನು ಕಾರಣವೆಂದಡೆ : ಗುರುಲಿಂಗ ಜಂಗಮಕ್ಕೆ ಅನಾದಿ ಜಂಗಮವೇ ಚೈತನ್ಯ ಸ್ವರೂಪವಾದ ಕಾರಣ ಆ ಜಂಗಮವೇ ಮುಖ್ಯಸ್ವರೂಪ. ಇಂತಪ್ಪ ಜಂಗಮಪಾದವೇ ಪರಬ್ರಹ್ಮಕ್ಕೆ ಆಧಾರವಾಗಿಪ್ಪುದು. ಆವ ಪಾದವ ಬಿಟ್ಟು ಪರವ ಕಂಡುದಿಲ್ಲವೆಂದು ಶ್ರುತಿಗಳು ಪೊಗಳುತಿರ್ದ ಕಾರಣ, ಇಂತಪ್ಪ ಚರಮೂರ್ತಿಯ ಪಾದವನ್ನು ಅಷ್ಟವಿಧಾರ್ಚನೆ ಷೋಡಶೋಪಚಾರದಿಂದ ಅರ್ಚಿಸಿದಂತಹುದೆ ಲಿಂಗಪೂಜೆ. ಆ ಮೇಲೆ ಆ ಮೂರ್ತಿಯ ಹಿಮ್ಮಡ ಸೋಕುವಂತೆ ಹಸ್ತವ ಮಡಗಿ, ಲಲಾಟವ ಮುಟ್ಟಿ ನಮಸ್ಕರಿಸಿ, ಆ ಪೂಜೆಯನಿಳುಹಿ, ಆ ಶಿಕ್ಷಾಪಾದೋದಕವನು ಬಲದಂಗುಷ್ಠದ ಮೇಲೆ ಷಡಕ್ಷರ ಮಂತ್ರವ ಆರುವೇಳೆ ಸ್ಮರಿಸುತ್ತ ನೀಡಿ ಅಲ್ಲಿ ಇಷ್ಟಲಿಂಗವೆಂದು ಭಾವಿಸಿ, ಎಡದಂಗುಷ್ಠದ ಮೇಲೆ ಪಂಚಾಕ್ಷರೀ ಮಂತ್ರವ ಐದು ವೇಳೆ ಸ್ಮರಿಸುತ್ತ ನೀಡಿ, ಅಲ್ಲಿ ಪ್ರಾಣಲಿಂಗವೆಂದು ಭಾವಿಸಿ, ಮಧ್ಯದಲ್ಲಿ ಓಂ ಬಸವಾಯ ನಮಃ ಎಂದು ವೇಳೆ ಒಂದು ಪುಷ್ಪವ ಧರಿಸಿ, ಸ್ಮರಿಸುತ್ತ ನೀಡಿ, ಅಲ್ಲಿ ಭಾವಲಿಂಗವೆಂದು ಭಾವಿಸಿ, ನೀಡಿದ ಉದಕವೇ ಬಟ್ಟಲಲಿ ನಿಂದು ಮಹಾಪಾದವೆಂದೆನಿಸುವುದು. ಆ ಮಹಾಪಾದದಲ್ಲಿ ದ್ರವವ ತೆಗೆದು ಮತ್ತೆ ಪೂಜಿಸಬೇಕಾದಡೆ, ಬಹುಪುಷ್ಪವ ಧರಿಸದೆ ಒಂದೇ ಪುಷ್ಪವ ಧರಿಸಬೇಕು. ಅದೇನು ಕಾರಣವೆಂದಡೆ : ಹೃದಯ ಚಕ್ರದಲ್ಲಿ ಸುಗಂಧವಾದ ನಿರಂಜನ ಜಂಗಮಕ್ಕೆ ಏಕದಳವನ್ನುಳ್ಳ ಒಂದೇ ಪುಷ್ಪವು ಮುಖ್ಯವಾದ ಕಾರಣ, ಏಕ ಕುಸುಮವನೆ ಧರಿಸಿ ಪೂಜೆಯ ಮಾಡಿ ನಮಸ್ಕರಿಸುವುದೇ ಜಂಗಮ ಪೂಜೆ. ಆ ಪೂಜೆಯ ತೆಗೆದ ಶಿಷ್ಯನು ಶರಣಾರ್ಥಿ ಸ್ವಾಮೀ ಎಂದು ಬಟ್ಟಲವನೆತ್ತಿ ಕೊಟ್ಟಲ್ಲಿ, ಕರ್ತೃವಾದ ಜಂಗಮವು ಆ ಬಟ್ಟಲಲ್ಲಿರ್ದ ತೀರ್ಥವನು ತಮ್ಮ

ಪಂಚಾಂಗುಲಿಗಳೆ ಪಂಚಪ್ರಣವವೆಂದು ಭಾವಿಸಿ, ಮೂಲಮಂತ್ರದಿಂದ ಮೂರು ವೇಳೆ ಪ್ರದಕ್ಷಿಣವ ಮಾಡಿ ನಮಸ್ಕರಿಸಿ, ಲಿಂಗದ ಪುಸ್ತಕದ ಮೇಲೆ ಮೂರು ವೇಳೆ ಚತುರಂಗಲ ಪ್ರಮಾಣಿನಲ್ಲಿ ಲಿಂಗವ ಮುಟ್ಟದೆ ನೀಡಿ, ಆ ಪಂಚಾಂಗುಲಿಗಳ ತಮ್ಮ ಜಿಹ್ವೆಯಲ್ಲಿ ಸ್ವೀಕರಿಸುವಲ್ಲಿ ಗುರುಪಾದೋದಕವೆನಿಸುವುದು; ಅದೇ ದೀಕ್ಷಾಪಾದೋದಕ. ತಾವು ಲಿಂಗವನೆತ್ತಿ ಸಲಿಸಿದುದೇ ಲಿಂಗಪಾದೋದಕವೆನಿಸುವುದು; ಅದೇ ಶಿಕ್ಷಾಪಾದೋದಕ, ಬಟ್ಟಲನೆತ್ತಿ ಸಲ್ಲಿಸಿದಲ್ಲಿ ಜಂಗಮ ಪಾದೋದಕವೆನಿಸುವುದು ; ಅದೇ ಜ್ಞಾನಪಾದೋದಕ. ಈ ರೀತಿಯಲ್ಲಿ ಮಾಹೇಶ್ವರನು ಸಲಿಸಿದ ಬಳಿಕ ಶರಣಾರ್ಥಿ ಎಂದು ಶಿಷ್ಯೋತ್ತಮನು ಎದ್ದು;

*ಲಲಾಟಂ ಚ ಭುಜದ್ವಂದ್ವಂ ಪಾಣಿಯುಗ್ಮಮುರಸ್ತದಾ |*
*ಅಂಗುಷ್ಠಯುಗಲಂ ಪ್ರೋಕ್ತಂ ಪ್ರಣಾಮೋಷ್ಟಾಂಗಮುಚ್ಯತೇ ||*

ಎಂದು ಚೃತ್ಯೋಪಚಾರಗಳಿಂದ ಪ್ರಣತಿಂಗೈದು ಅಪ್ಪಣೆಯ ಪಡೆದುಕೊಂಡು ಬಂದು, ಆ ಜಂಗಮದ ಮರ್ಯಾದೆಯಲ್ಲಿಯೆ ತಾನು ಸ್ವೀಕರಿಸುವುದು. ಇದೇ ರೀತಿಯಲ್ಲಿ ಗುರುಶಿಷ್ಯರಿರ್ವರು ಸಮರಸಭಾವದಿಂದ ಸೇವನೆ ಮಾಡಿದಲ್ಲಿ ಆ ಶಿಷ್ಯೋತ್ತಮನೇ ನಿಜಶಿಷ್ಯನಾದ ಕಾರಣ, ಗುರುವೇ ಶಿಷ್ಯ, ಶಿಷ್ಯನೇ ಗುರು. ಈ ಎರಡರ ಮರ್ಮವು ಆದ ಬಗೆ ಹೇಗೆಂದಡೆ : ಆ ಶಿಷ್ಯನು ಪಡೆದುಕೊಂಡ ಪಾದೋದಕವ ಈ ಗುರುಭಕ್ತಿ ಮುಖದಿಂದ ತೆಗೆದುಕೊಂಡಲ್ಲಿ ಗುರುವೇ ಶಿಷ್ಯನಾಗಿಪ್ಪನು. ಆ ಗುರು ಸೇವನೆಯ ಮಾಡಿ ಉಳಿದ ಉದಕವ ಶಿಷ್ಯ ಭಕ್ತಭಾವದಿಂದ ಸೇವನೆ ಮಾಡಿದಲ್ಲಿಗೆ ತಚ್ಛಿಷ್ಯನಾದನು. ಈ ಮರ್ಮವ ತಿಳಿದು ಗುರುಶಿಷ್ಯರೀರ್ವರು ಸಲಿಸಿದ ಬಳಿಕ ಕೆಲವು ಭಕ್ತಮಾಹೇಶ್ವರರು ಸಲ್ಲಿಸುವುದು. ಇನ್ನು ನಿಚ್ಚಪ್ರಸಾದಿಗಳಿಗೆ, ಸಮಯ ಪ್ರಸಾದಿಗಳಿಗೆ ಆಯಾಯ ತತ್ಕಾಲದಲ್ಲಿ ತ್ರಿವಿಧೋದಕ ವಾಗಿಪ್ಪುದು; ಇದೇ ಆಚರಣೆ. ಇದನರಿಯದಾಚರಿಸುವವರಿಗೆ ನಿಮ್ಮ ನಿಲವರಿಯಬಾರದು ಕಾಣಾ, ಕೂಡಲ ಚೆನ್ನಸಂಗಮದೇವಾ (ಚೆನ್ನಬಸವಣ್ಣನವರ ವಚನಗಳು ೧೭೫); ಪಾದೋದಕ: ಗುರುಲಿಂಗ ಜಂಗಮಗಳು ತನ್ನಲ್ಲಿ ಒಳಕೊಳ್ಳುವ ರೀತಿಯನ್ನು ಅರುಹಿಸಿಕೊಡುವ ಕ್ರಿಯೆಯು ಇದಾಗಿದೆ. ಇದು ಸಂಪೂರ್ಣ ಭಾವನಾಮಯವಾದ ವಿಧಿಯು. ಇಂಥ ಈ ಪಾದೋದಕವು ಕೇವಲ ನೀರು ಅಲ್ಲ. ಅದು ಚಿತ್‌ಸ್ವರೂಪ ವಾಗಿರುತ್ತದೆಂದು ತಿಳಿಯಬೇಕು. ಇದನ್ನು ಭಾವನಾಪ್ರಧಾನವಾಗಿ ಮತ್ತು ಅದರ ಮರ್ಮವನ್ನು ತಿಳಿದು ಆಚರಿಸಿದ್ದಾದರೆ ಅದು ಭಕ್ತ ಜಂಗಮರ ಸರ್ವಾಂಗವನ್ನು ಭೇದಿಸುತ್ತದೆ. ಈ ಪಾದೋದಕದ ಮೂಲಕ ಭಕ್ತನು ಗುರುಲಿಂಗಜಂಗಮಗಳನ್ನು ಹೊಂದಿ ಸರ್ವಾಂಗಲಿಂಗಿಯಾಗುತ್ತಾನೆ : ದಶವಿಧ ಪಾದೋದಕಗಳು : ಇವು ಗುರುಪಾದೋದಕ, ಲಿಂಗಪಾದೋದಕ, ಜಂಗಮ ಪಾದೋದಕ, ಸ್ಪರ್ಶನೋದಕ, ಅವಧಾನೋದಕ, ಆಪ್ಯಾಯನೋದಕ, ಹಸ್ತೋದಕ, ಪರಿಣಾಮೋದಕ, ನಿರ್ನಾಮೋದಕ, ಸತ್ಯೋದಕ ಎಂದು ಹತ್ತು ಇರುತ್ತದೆ. (ಶಿವಾನುಭವ ಶಬ್ದಕೋಶ, ಪುಟ ೧೦೮, ೧೧೧).

ಶರಣರ ಪಾರಿಭಾಷಿಕ ಶಬ್ದಗಳಲ್ಲಿ ಕೆಲವನ್ನು ವಚನಕಾರರ ಮತ್ತು ಇತರ ವೀರಶೈ ಕಾವ್ಯಗಳಿಂದ ಸಾಧಾರಣವಾಗಿ ನಿರೂಪಿಸಲಾಯಿತು. ಈ ಪಾರಿಭಾಷಿಕ ಶಬ್ದಗಳಿಗಿರು ಸೂಕ್ಷ್ಮಾತಿಸೂಕ್ಷ್ಮ ಅರ್ಥವನ್ನೂ, ಅವುಗಳ ಆಚರಣ ವಿಧಾನವನ್ನೂ ಅವಲೋಕಿಸಿದ್ದಾಯಿತು ಇದೇ ರೀತಿ ಎಲ್ಲ ಪಾರಿಭಾಷಿಕ ಶಬ್ದಗಳನ್ನೂ ಸಂಗ್ರಹಿಸಿ ಅವುಗಳಿಗಿರುವ ಸಮಗ್ರವಾ ಅರ್ಥಗಳೆಲ್ಲವನ್ನೂ ವಿವರವಾಗಿ ನಿರೂಪಿಸುವ ಒಂದು ಪಾರಿಭಾಷಿಕ ಕೋಶದ ಅಗತ ಬಹಳವಾಗಿದೆ.

# ಶಿವಾಗಮಗಳಲ್ಲಿ ವೀರಶೈವ ತತ್ತ್ವದರ್ಶನ

**ಷಣ್ಮುಖಯ್ಯ ಅಕ್ಕೂರಮಠ**

---

ವೀರಶೈವ ಧರ್ಮವು, ಶೈವಮಹಾವೃಕ್ಷದ ಶಾಖೆಯಾಗಿದೆ. ಶೈವಧರ್ಮದ ವಿವಿಧ ಹಂತಗಳಲ್ಲಿ ವೀರಶೈವವೇ ಅದರ ಕೊನೆಯ ವಿಕಾಸದ ಹಂತವೂ ಹೌದು. ಶೈವಧರ್ಮದಲ್ಲಿ ಅನಾದಿ ಶೈವ, ಆದಿ ಶೈವ, ಅನುಶೈವ, ಯೋಗಶೈವ, ಜ್ಞಾನಶೈವ, ವೀರಶೈವವೆಂದು ಶೈವಧರ್ಮದ ಸಪ್ತಪ್ರಭೇದಗಳನ್ನು ಪಾರಮೇಶ್ವರ ಆಗಮವು ಹೇಳುತ್ತದೆ. ಸಾಮಾನ್ಯ, ಮಿಶ್ರ, ಶುದ್ಧ-ವೀರ ಎಂದೂ ಅವುಗಳನ್ನು ನಾಲ್ಕು ವಿಧವಾಗಿಯೂ ವಿಂಗಡಿಸುವುದುಂಟು. ಅಲ್ಲದೆ ಪಾಶುಪತ-ಕಾಪಾಲಿಕ-ಕಾಳಾಮುಖ-ಭೈರವ ಮೊದಲಾದ ಶೈವಪ್ರಭೇದಗಳ ತತ್ವಪ್ರಚಾರಕ್ಕಾಗಿ ಮಠಗಳೂ ಇದ್ದವು. ಭೈರವ, ಕಾಪಾಲಿಕ, ಪಂಥಗಳು ವಾಮಾಚಾರದ ಪಂಥಗಳಾಗಿದ್ದವು.

ಶೈವಧರ್ಮದ ಅನೇಕ ಪ್ರಾಚೀನ ಪ್ರಭೇದಗಳನ್ನು ಹಿಮ್ಮೆಟ್ಟಿಸಿ ಉದಾತ್ತತತ್ತ್ವಗಳಿಂದ ವೀರಶೈವಧರ್ಮ ತಲೆಎತ್ತಿ ನಿಂತಿತು. ಶೈವಧರ್ಮ ಬೇರಾಗಿ ಅದರ ವಿಕಸಿತ ಪುಷ್ಪವೇ ವೀರಶೈವವಾಯಿತು. ಶೈವವೀರ-ಶೈವಧರ್ಮದ ತಲಕಾವೇರಿ ವೀರಶೈವ ಧರ್ಮಗಂಗೆಯ, ಗಂಗೋತ್ರಿ ಶೈವಧರ್ಮ. ವೀರಶೈವದ ವಿಸ್ತಾರವಾದ, ಉದಾತ್ತವಾದ ಸಾಹಿತ್ಯ ತತ್ತ್ವ-ಸಿದ್ಧಾಂತ ಯೋಗ ವೈಶಿಷ್ಟ್ಯಗಳಿಂದ ಶೈವ ಧರ್ಮದ ಪ್ರಭೆ ತಾನಾಗಿಯೇ ಕಡಿಮೆಯಾದಂತಾಯಿತು.

೧೨ನೆಯ ಶತಮಾನದ ಹೊತ್ತಿಗೆ ಶೈವಧರ್ಮದ ಶಾಖೆಗಳು ಮುರಿದು ಬಿದ್ದವು. ಶೈವ ಸ್ವೈರಿಗಾದ. ಪಾಶುಪತ ಪಥವನರಿಯ, ಕಾಳಾಮುಖಿ ಕಂಗೆಟ್ಟ, ಮಹಾವ್ರತ ಮದವೇರಿದ. ಸನ್ಯಾಸಿ ಪಾಷಂಡಿಯಾದ ಕೌಳಮರುಳಾಗಿ ಹೋದ. ಹೀಗೆಂದು ಚನ್ನಬಸವಣ್ಣನವರ ವಚನ ಹೇಳುತ್ತದೆ. ಇದು ಶೈವಧರ್ಮದ ಅದರ ಶಾಖೆಗಳ ಚರಮಾವಸ್ಥೆಯನ್ನು ಬಣ್ಣಿಸುವ ಚಾರಿತ್ರಿಕ ದಾಖಲೆಯೂ ಹೌದು. ಶೈವ ಸಿದ್ಧಾಂತ ತತ್ತ್ವಪ್ರತಿಪಾದನೆಗಳಿಗೆ ಶಿವಾಗಮಗಳೇ ಆಧಾರ, ನೆಲೆ ಹಿನ್ನೆಲೆ. ಶೈವಧರ್ಮದ ಪ್ರಭೇದವಾದ ವೀರಶೈವಧರ್ಮಕ್ಕೂ ಶಿವಾಗಮಗಳೇ ಮೂಲಾಧಾರವೆಂದು ಬೇರೆ ಹೇಳಬೇಕಾಗಿಲ್ಲ. ವೀರಶೈವರ ವೇದಗಳ ಜ್ಞಾನಕಾಂಡವನ್ನು ಹಾಗೂ ಆಗಮಗಳನ್ನು ತಮ್ಮ ತತ್ತ್ವಸಿದ್ಧಾಂತ ದರ್ಶನಗಳ ಪ್ರತಿಪಾದನೆಗೆ ಆಶ್ರಯಿಸುತ್ತಾರೆ. ಆದ್ದರಿಂದ ಶಾಸ್ತ್ರಪರಿಭಾಷೆಯಲ್ಲಿ ವೀರಶೈವರನ್ನು ತಾಂತ್ರಿಕ ವೈದಿಕರೆಂದು ಕರೆಯುತ್ತಾರೆ. ಪಾಶುಪತವೆ ವೀರಶೈವವೆಂದು ಭಾವಿಸಿ ಮಾಧವ ತನ್ನ ಸರ್ವದರ್ಶನ ಸಂಗ್ರಹದಲ್ಲಿ ವೀರಶೈವರನ್ನು ಪಾಶುಪತರೆಂದು ಕರೆಯುತ್ತಾನೆ. ಶ್ರೀಪತಿ ಪಂಡಿತ ಹಾಗೂ ಲಕ್ಕಣದಂಡೇಶರ ಅಭಿಪ್ರಾಯವು ಇದೇ ಆಗಿದೆ. 'ವೀರಶೈವ' ಶಬ್ದ, ಆಗಮದಷ್ಟೆ ಪ್ರಾಚೀನವಾಗಿದೆ. ಅದರ ಪ್ರಥಮ ಪ್ರಯೋಗವೂ ಅಲ್ಲೇ. ಇದು ಅನ್ವರ್ಥಕ ಹಾಗೂ ಯಾಥಾರ್ಥವಾದ ನಾಮವಾಗಿದೆ.

ವಿಶಬ್ದ ನೋಚ್ಯತೇ ವಿದ್ಯಾ ಶಿವ ಜೀವೈಕ್ಯ ಬೋಧಿನೀ ತಸ್ಯಾಂ ರಮಂತೆ ಯೇ ಶೈವಾಃ ವೀರಶೈವಾಸ್ತುತೇಮತಾ

ಎಂದು ಸಾರುವ ಪಾರಮೇಶ್ವರಾಗಮದ ಮಾತನ್ನೇ ಸಿದ್ಧಾಂತಶಿಖಾಮಣಿ ಪುನರುಚ್ಚರಿಸುತ್ತದೆ. ಶಿವಾಗಮಗಳಲ್ಲಿ ಶೈವಧರ್ಮ, ವೀರಶೈವದತ್ತ ಸಾಗಿರುವುದು ಕಂಡುಬರುತ್ತದೆ. ವೀರಶೈವ ಸಿದ್ಧಾಂತ ತತ್ತ್ವಗಳು ಆಗಮಗಳ ಉತ್ತರಭಾಗದಲ್ಲೇ ಹೆಚ್ಚಾಗಿ ದೊರೆಯುತ್ತದೆ.

ವೀರಶೈವ ಮತಂ ಸದ್ಯೋಃಭೋಗ ಮೊಕ್ಷೈಕ ಸಾಧನಂ ಸರ್ವೋತ್ತಮಂ ಮಮಮತಂ ಯತಃಸರ್ವೋತ್ತಸ್ಮ್ಯಹಂ"

ಹೀಗೆ ವೀರಶೈವ ಹೆಗ್ಗಳಿಕೆ ಆಗಮದಲ್ಲೇ ಸ್ಪಷ್ಟವಾಗಿ ಕಾಣುತ್ತದೆ. "ಶಿವಾಗಮಗಳ ಕ್ರಿಯಾಪಾದ, ಚರ್ಯಾಪಾದ, ಯೋಗಪಾದ, ಜ್ಞಾನಪಾದಗಳನ್ನವಲೋಕಿಸಿದರೆ ವೀರಶೈವ ಶೈವಮಹಾವೃಕ್ಷದ ಮತ್ತೊಂದು ಮಹತ್ವದ ಶಾಖೆಯಾಗಿ ಪಲ್ಲವಿಸುತ್ತಿರುವ ಲಕ್ಷಣಗಳನ್ನು ಕಾಣಬಹುದೆಂದು ಡಾ|| ಆರ್. ಸಿ. ಹಿರೇಮಠ ಅವರು ಅಭಿಪ್ರಾಯ ಪಡುತ್ತಾರೆ ಶಿವಾಗಮಗಳಲ್ಲಿ ಗುರುಲಿಂಗ ಜಂಗಮ, ಷಟ್‌ಸ್ಥಲ ಜಾತಿಭೇದ ನಿರ್ಮೂಲನ ಪಂಚಸೂತಕ, ನಿವಾರಣೆಗಳ ವಿಚಾರ ಕಂಡುಬಂದರೂ ಸಿದ್ಧಾಂತ ಮಾರ್ಗದ ತತ್ತ್ವನಿರೂಪಣೆಯ ವ್ಯವಸ್ಥಿತ ರೂಪ, ಸ್ವರೂಪ, ಸಮ್ಯಕ್ ರೀತಿಯಲ್ಲಿ ನಮಗೆ ಕಂಡುಬರುವುದಿಲ್ಲ.

ವಾತುಲ-ವೀರ-ಚಂದ್ರಜ್ಞಾನ-ಕಿರಣ ಪಾರಮೇಶ್ವರ-ಸ್ವಯಂಭುವ ಸುಪ್ರಭೇದ ಆಗಮಗಳು ವೀರಶೈವ ತತ್ತ್ವಪ್ರತಿಪಾದನೆಯ ದೃಷ್ಟಿಯಿಂದ ತೀರಾ ಮಹತ್ವವಾದವು. ಉಳಿದ ಶಿವಾಗಮಗಳಲ್ಲೂ ವೀರಶೈವ ತತ್ತ್ವ ಅಲ್ಲಲ್ಲಿ ಮಿಂಚಿನಂತೆ ಸಂಚರಿಸುವುದು ಕಂಡುಬರುತ್ತದೆ.

ವೀರಶೈವ ಧರ್ಮದ ನೆಲೆ-ಹಿನ್ನೆಲೆ ಆಗಮಗಳಲ್ಲಿ ವೀರಶೈವಧರ್ಮ ಗಂಗೆ ಶಿವಾಗಮಗಳಲ್ಲಿ ಸೆಲೆಯೊಡೆದು ಭಾಷ್ಯಗಳಲ್ಲಿ ಹರಿದು, ಸಿದ್ಧಾಂತಶಿಖಾಮಣಿಯಲ್ಲಿ ಸುವ್ಯವಸ್ಥಿತವಾಗಿ ಪ್ರವಹಿಸಿ, ವಚನಶಾಸ್ತ್ರದಲ್ಲಿ ತನ್ನ ಪಾತ್ರವನ್ನು ವಿಸ್ತರಿಸಿಕೊಳ್ಳುತ್ತದೆ.

ಶಿವಾಗಮಗಳ ಉತ್ತರಭಾಗಗಳನ್ನು ವೀರಶೈವ ಆಗಮಗಳೆಂದೇ ಅನೇಕರು ಕರೆದಿದ್ದಾರೆ. ಶತಕತ್ರಯ ಪ್ರಭುಲಿಂಗಲೀಲೆ-ವಶಗ್ರಂಥಿಗಳಲ್ಲಿ 'ವೀರಶೈವಾಗಮ' ಶಬ್ದದ ಬಳಕೆ ಕಂಡುಬರುತ್ತದೆ.

ಶಿವಾಗಮಗಳಲ್ಲಿ ಗರ್ಭಾದಾನದಿಂದ, ಅಂತ್ಯಸಂಸ್ಕಾರದವರೆಗೂ, ಸಂಸ್ಕಾರಗಳು ಹೇಳಲ್ಪಟ್ಟಿವೆ. ಲಿಂಗಪೂಜಾ ವಿಧಿಯು ಆರಂಭವಾದುದು ಶಿವಾಗಮಗಳಲ್ಲಿ. ಸ್ಥಾವರಲಿಂಗ ಜಂಗಮ ಲಿಂಗಗಳ ಕಲ್ಪನೆಯೂ ಅಲ್ಲಿದೆ.

ಪ್ರಥಮ ಆಗಮವೆನಿಸಿದ ಕಾಮಿಕದಲ್ಲಿ ವೀರಶೈವ ಕ್ರಮದ ಉಲ್ಲೇಖ ಕಂಡುಬರುತ್ತದೆ.

*ಬಿಂದು ಶಕ್ತಿಃ ಶಿವೋನಾದಃ ಶಿವಲಿಂಗಂಚ ಈಧೃತೆ ವೀರಶೈವ ಕ್ರಮಃ ಪ್ರೋಕ್ತಃ*
*ಪ್ರಾಯಶ್ಚಿತ್ತ ವಿವರ್ಜಿತ ಯದ್ದತ್ತಂಗುರುಣಾಲಿಂಗಂ ಅವಧಾನೇನ ಧಾರಯೇತ್*
*ಪ್ರಮಾದಾತ್ ಪತಿತೇ ಲಿಂಗೇ ಪ್ರಣಾನಪಿ ಪರಿತ್ಯಜೇತ್.*

ಇಷ್ಟಲಿಂಗದ ನಿಷ್ಠೆಯ ಪ್ರಸ್ತಾಪ ಬರುವುದು ಗಮನಾರ್ಹವಾಗಿದೆ.

''ಸೂಕ್ಷ್ಮಾಗಮದಲ್ಲಿ ಪ್ರಾಣಲಿಂಗದ ವಿಷಯ ಹೀಗಿದೆ.

*ಲಿಂಗಾಪಾಯಾದಿ ದೋಷೇಷು ವ್ರತಚರ್ಯಾದಿಲೋಪನೆ ಪ್ರಾಣಾನ್ ಧತ್ತೇ*
*ಪ್ರಾಣಲಿಂಗೇಸೋಯದೇ ತಮಸಿ ಮಜ್ಜತಿ*

ಪುನಃ ಯೋಗಜಾಗಮದಲ್ಲಿ ಇಷ್ಟಲಿಂಗದ ಪ್ರಸ್ತಾಪ ಕಂಡುಬರುತ್ತದೆ.

*ಇಷ್ಟಲಿಂಗಂ ವಿಭಿನ್ನ ಚೇತ್ ಭೂಯೋ ಭೋಕ್ತಂ ಮದಿಚ್ಛತಿ*
*ತೀರ್ಥಪಾನಂ ಸುರಾಪಾನಂ ಅನ್ನ ಗೋಮಾಂಸ ಭಕ್ಷಣಂ*

ಇಷ್ಟಲಿಂಗ ಭಿನ್ನವಾದರೆ ಪ್ರಸಾದಸೇವನೆ ನಿಷಿದ್ಧ. ಒಂದು ವೇಳೆ ಪ್ರಸಾದ ಸೇವಿಸಿದರೆ ತೀರ್ಥಪಾನ ಸುರಾಪಾನವಾಗುತ್ತದೆ. ಅನ್ನವು ಗೋಮಾಂಸವಾಗುತ್ತದೆ ಎಂದು ಎಚ್ಚರಿಸುತ್ತಾರೆ.

ಕಿರಣಾಗಮವು 'ಇಷ್ಟಲಿಂಗ ವೈಕಲ್ಯೇ ಪ್ರಾಣತ್ಯಾಗಂ ಸಮಾಚರೇತ್', ಎಂದು ಕಠೋರ ಶಾಸನ ವಿಧಿಸುತ್ತದೆ. ಪಾರಮೇಶ್ವರ ಆಗಮ ಷಟಸ್ಥಲಜ್ಞಾನಕ್ಕೆ ಅಧಿಕಾರಿಯ ಲಕ್ಷಣವನ್ನು ವಿವರಿಸುತ್ತದೆ.

*ಶಿವಭಕ್ತಿ ವಿಹೀನಾಯ ದುರಾಚಾರ ರತಾಯಚ*
*ನಾಸ್ತಿಕಾಯ ದುಷ್ಟಾಯನ ವಕ್ತವ್ಯಃ ಷಟ್‌ಸ್ಥಲ ಕ್ರಮಃ*

ಅದೇ ಪಾರಮೇಶ್ವರ ತಂತ್ರವು ಸ್ಥಲಪದದ ನಿರ್ವಚನವನ್ನು ಹೀಗೆ ಮಾಡುತ್ತದೆ.

*ಅಹಮೇವ ಜಗತ್ ಸ್ರಷ್ಟಾ ಪುನರ್ಮಯ್ಯೇವ ಲೀಯತೇ/*
*ಅಹಮೇವ ಸ್ಥಲಂ ವಿದ್ಧಿ ಷಡ್ವಿಧಂ ಮಮರೂಪಕಂ*

ಪಾರಮೇಶ್ವರ ಆಗಮದಲ್ಲಿ ಷಟ್‌ಸ್ಥಲ ತತ್ತ್ವಗಳನ್ನು ಆರು ಸ್ಥಲಗಳ ಲಕ್ಷಣವನ್ನು ನಾವು ನೋಡಬಹುದು. ಸುಮಾರು 21 ಶ್ಲೋಕಗಳಲ್ಲಿ ಷಟ್‌ಸ್ಥಲ ವಿವರಣೆ ಬರುತ್ತದೆ.

1. ಭಕ್ತಸ್ಥಲ-ಪೃಥ್ವೀತತ್ತ್ವ ತರತಮ ಭಾವದಿಂದ ಗುರುಲಿಂಗ ಜಂಗಮ ಪೂಜೆಗೈಯುವವನು ಆತ ಭಕ್ತ.
2. ಮಹೇಶ್ವರ ಸ್ಥಲ : ಜಲತತ್ತ್ವ ಗುರೂಕ್ತ ಮಾರ್ಗದಿಂದ ಲಿಂಗಪೂಜಾ ನಿರತನಾಗಿ ಜಂಗಮವನ್ನು ಅರ್ಚಿಸುವನು ಆತ ಮಹೇಶ್ವರ.
3. ಪ್ರಸಾದಿ ಸ್ಥಲ : ಅಗ್ನಿತತ್ತ್ವ ಜಂಗಮಾರ್ಚನೆಯಿಲ್ಲದೆ ಪ್ರಸಾದ ಸೇವನೆ ಮಾಡದವನು ಆತ ಪ್ರಸಾದಿ.
4. ಪ್ರಾಣಲಿಂಗ ಸ್ಥಲ : ವಾಯುತತ್ತ್ವ ಲಿಂಗವನ್ನು ತನ್ನ ಪ್ರಾಣದಂತೆ ಭಾವಿಸುವನು.
5. ಶರಣಸ್ಥಲ : ವ್ಯೋಮತತ್ವ ಏಕಾಂಗಿಯಾಗಿ ಶಿವಯೋಗ ಸಾಧನೆ ಧ್ಯಾನಮಗ್ನ.
6. ಐಕ್ಯಸ್ಥಲ : ಸಾಕ್ಷಿತತ್ತ್ವ ಲಿಂಗವೇ ತಾನಾಗಿ ಅಹಂಭಾವರಹಿತ ಆತ ಐಕ್ಯ.

*ಸರ್ವಜ್ಞತಾ ತೃಪ್ತಿರನಾದಿಬೋಧಃ*
*ಸ್ವತಂತ್ರಾ ನಿತ್ಯಮಲುಪ್ತ ಶಕ್ತಿಃ*
*ಅನಂತ ಶಕ್ತಿಶ್ಚ ವಿಭೋವಿನ ಭಿಜ್ಞಾ*
*ಷಡಾಹ್ವ ಲಿಂಗನ್ಯಾಥ ಷಟ್‌ಸ್ಥಲಾನಿ.*

ಇಲ್ಲಿ ಶಿವನ ಸರ್ವಜ್ಞತವೇ ಭಕ್ತ. ಆತನ ತೃಪ್ತಿಯೇ ಮಹೇಶ್ವರ. ನಿರಂಕುಶವಾದ ಬೋಧನೆಯೇ ಪ್ರಸಾದಿ. ಸ್ವಾತಂತ್ರವೇ ಪ್ರಾಣಲಿಂಗ. ಅಲುಪ್ತಶಕ್ತಿಯೇ ಶರಣ. ಅನಂತ

ಶಕ್ತಿಯೇ ಐಕ್ಯ ಎಂದು ಹೇಳಲಾಗಿದೆ. ಷಟ್‌ಸ್ಥಲದ ಸಾಧನ-ಸಾಧ್ಯವನ್ನು ಕುರಿತು ಪಾರಮೇಶ್ವರಾಗಮದ ಅಭಿಪ್ರಾಯ ಇಂತಿದೆ.

ಭಕ್ತಾಧಿಸಮ್ಯಗ್‌ಜ್ಞಾನಂತಮುತ್ತೋತ್ತರಮುತ್ತಮಂ ಸಾಧನಂ ಪೂರ್ವಾಪೂರ್ವಂ ಸ್ಯಾತ್ ಸಾಧ್ಯಂ ಸ್ಯಾದುತ್ತರೋತ್ತರಂ [ಪಾ. ತತ್ರಪ. ೬-೨-೨]

ಷಟ್‌ಸ್ಥಲಕ್ಕೆ ಯೋಗ್ಯನಾಗಲು ಭಕ್ತನು ಮೊದಲು ಮಲತ್ರಯಗಳ ಬಂಧನದಿಂದ ಬಿಡುಗಡೆ ಹೊಂದಬೇಕಾಗುತ್ತದೆ. ಅದು ಸದ್ಗುರುವಿನಿಂದಲೇ ಸಾಧ್ಯ.

ಗುರುವಿನ ಸಲ್ಲಕ್ಷಣ ಹಾಗೂ ಶಿಷ್ಯನ ಲಕ್ಷಣಗಳನ್ನು ಸೂಕ್ಷ್ಮವಾಗಿ ವರ್ಣಿಸಲಾಗಿದೆ. ದೀಕ್ಷಾತಂತ್ರದ ವಿಷಯ ಹಾಗೂ ಪ್ರಾಣಲಿಂಗ-ಇಷ್ಟಲಿಂಗ ಸಮಾರಾಧನೆಯ ವಿವರಣೆಯೂ ಇಲ್ಲಿ ಬರುತ್ತದೆ.

ಗುರುವು ಹಸ್ತ ಮಸ್ತಕ ಸಂಯೋಗದಿಂದ ದೀಕ್ಷೆಯನ್ನೆಸಗುತ್ತಾನೆ.

*ಜ್ಞಾನಾದಿ ಗುಣಸಂಪನ್ನಂ ಅಥತಂ ದೀಕ್ಷಯೇತ್ ಶಿವೇ*
*ಹಸ್ತಮಸ್ತಕ ಸಂಯೋಗಾಚರೇಚ್ಚ ಶಿವಂ ಸ್ಮರನ್* [ಪಾರಮೇಶ್ವರ ಪ ೨-೨೫]

ಷಟ್‌ಸ್ಥಲ ತತ್ತ್ವದ ವಿವರಣೆಗಳನ್ನು ಪಾರಮೇಶ್ವರಾಗಮ ಹಾಗೂ ವಾತುಲಾಗಮದಲ್ಲಿ ಕಾಣಬಹುದು. ಪಾರಮೇಶ್ವರಾಗಮದ ಹಾಗೂ ವಾತುಲಾಗಮದಲ್ಲಿ ಶಿವಶಕ್ತಿ ಅವರ ಅವಿನಾಭಾವ ಸಂಬಂಧ ಪಂಚಸಾದಾಖ್ಯಗಳು ಪಂಚಭೂತಗಳೂ ಇತ್ಯಾದಿ ವಿಚಾರಗಳೂ ವ್ಯಕ್ತವಾಗಿರುವುದು ಕಂಡುಬರುತ್ತದೆ.

ಪಾರಮೇಶ್ವರಾಗಮವು [ಪಟಲ ೨-೩೪-೩೮] ಸಪ್ತಶೈವಗಳ ಸಮ್ಯಕ್ ಲಕ್ಷಣವನ್ನು ವಿವರಿಸುತ್ತದೆ.

*ಅನಾದಿಶೈವಾ ನಿಷ್ಠಸ್ಯ ಕರ್ಮೈವ ಪರಮಾಗತಿಃ*
*ಆದಿಶೈವಾ ಮತಸ್ಥಸ್ಯ ಸ್ಮರಣಂ ಸತತಂ ವಿಧಿಃ*
*ಅನುಶೈವಾ ಮತಸ್ಥಸ್ಯ ಮನನಂ ಮುಖ್ಯ ಸಾಧನಂ*
*ಮಹಾಶೈವಾ ಮತಸ್ಥಸ್ಯ ನಿಶ್ಚಯಃ ಪರಮಾಗತಿಃ*
*ಯೋಗಶೈವಾ ಮತಸ್ಥಸ್ಯ ಯೋಗಶ್ಚಾಷ್ಟಾಂಗ ಲಕ್ಷಣಂ*
*ಜ್ಞಾನಶೈವಾಮತಸ್ಥಸ್ಯ ಜ್ಞಾನಾನಾಂಭಾವನಾಖಿಲಾ*
*ವೀರಶೈವಮತಸ್ಥಸ್ಯ ಜ್ಞಾನಯೋಗೋಹಿ ಸಾಧನಂ*

ಶೈವಾಗಮಗಳಲ್ಲಿ ವೀರಶೈವವೇ ಮಾತ್ರವಲ್ಲ ಸಪ್ತ ಶೈವಗಳ ಉಲ್ಲೇಖವೂ ಕಂಡುಬರುತ್ತದೆ. ಜ್ಞಾನಯೋಗವೇ ವೀರಶೈವದ ಅಂತಿಮ ಗುರಿ ಎಂದು ಈ ಆಗಮದ ಅಭಿಪ್ರಾಯ.

ಷಟ್‌ಸ್ಥಲ ಜ್ಞಾನಸಂಪನ್ನಃ ಷಡಂಗಾಂಗ ಸಮಾಧಿಮಾನ್
ತೀರ್ಥ ಯಾತ್ರಾಧಿಕಂ ತೇಷಾಂ ನಾಸ್ತಿ ಜಾನ್ಯತ್ರ ಪಾರ್ವತೀ

ಕೈಲಾಸಾದಿ ಪದಾಕಾಂಕ್ಷಾಂ ತ್ಯಜೇತ್ ಲಿಂಗಾಂಗ ಯೋಗ ಭಾಕ್
ನತಿಥಿ ನಚ ನಕ್ಷತ್ರಂ ನಯೋಗಃ ಕರಣಾಧಿಕಂ
ಸಾಮುದ್ರಿಕಂ ಚ ಭಕ್ತಾನಾಂ ಲಿಂಗಾಂಗಸಂಗಿ ನಾಂ

ವೀರಶೈವನಿಗೆ ತೀರ್ಥಯಾತ್ರೆಗಳ ಅವಶ್ಯಕತೆಯಿಲ್ಲ ತಿಥಿ ನಕ್ಷತ್ರ ಯೋಗಗಳಹಂಗೂ ಇಲ್ಲವೆಂದೂ ವೈಚಾರಿಕ ಸತ್ಯವನ್ನು ಸ್ಪಷ್ಟಪಡಿಸುತ್ತದೆ.

ಸ್ವೀಕರೋತಿ ಯದಾ ಲಿಂಗಂ ಗುರುಣಾದೀಕ್ಷಯಾ
ತದಾ ಪ್ರಭೃತಿ ಲಿಂಗೈಕ್ಯಮದಿನಾ ಭಾವಯೋಗತಃ [ವಾತುಲತಂತ್ರ]

ದೀಕ್ಷೆಯ ಮೂಲಕ ಗುರುವಿನಿಂದ ಅನುಗ್ರಹಿತನಾದ ವೀರಶೈವನು ತನ್ನ ಇಷ್ಟಲಿಂಗವನ್ನು ಲಿಂಗೈಕ್ಯನಾಗುವ ಪರ್ಯಂತವೂ ಅವಿನಾಭಾವದಿಂದ ಪೂಜಿಸಬೇಕೆಂದು ಈ ಆಗಮದ ಅಭಿಪ್ರಾಯ. ಇಷ್ಟಲಿಂಗವು ಮೋಕ್ಷೈಕಫಲ ಸಾಧಕವೆಂದು ಸೂಕ್ಷ್ಮಾಗಮದ ಘೋಷಣೆ

ಧ್ಯಾನ ಯಜ್ಞ ಪರೋದೇವಿ ಮೋಕ್ಷೈಕ-ಫಲಸಾಧಕಃ
ಅಷ್ಟೈಶ್ವರ್ಯ ಪ್ರದಾ ಪೂಜಾಯೋಗಾದ್ಯಂ ಸ್ವರ್ಗಸಾಧನಂ // [ಸೂಕ್ಷ್ಮಾಗಮ]

ಇಷ್ಟಲಿಂಗವನ್ನು ದೇಹದಿಂದ ಎಂದೂ ಅಗಲಿಸಬಾರದೆಂದೂ ಹಾಗಾದಲ್ಲಿ ಪ್ರಾಣವನ್ನೇ ಬಿಡಬೇಕೆಂದು ಸಾಧಕರನ್ನು ಎಚ್ಚರಿಸುತ್ತದೆ - ಸೂಕ್ಷ್ಮಾಗಮ.

ಪ್ರಮಾಧಾತ್ ಪತಿತೇ ಲಿಂಗೇ ಭಿನ್ನೇ ಚೋರಾಧಿ ಭಿರ್ಹೃತೇ
ಪೀಠಾದುತ್ಕ್ರಮತೇ ವಾಪಿ ಸಹ ಪ್ರಾಣಾನ್ಪರಿತ್ಯಜೇತ್ //

[ಸೂಕ್ಷ್ಮಾಗಮ]

ಇಷ್ಟಲಿಂಗವನ್ನು ಸಾಧಕನು ದಿನಕ್ಕೆ ಎಷ್ಟುಬಾರಿ ಪೂಜಿಸಬೇಕೆಂದು ಪಾರಮೇಶ್ವರಾಗಮ ಈ ರೀತಿ ನಿರೂಪಿಸುತ್ತದೆ.

ತ್ರಿಕಾಲಮರ್ಚಯೇಲ್ಲಿಂಗಂ ಶಿವಪಂಚಾಕ್ಷರಂ ಜಪನ್
ಕೀರ್ತಯನ್ ಶಿವನಾಮಾನಿಶಿವೋಹಮಿತಿ ಭಾವಯನ್ ಪಾರಮೇಶ್ವರ

ಶಿವಪಂಚಾಕ್ಷರಿ ಮಂತ್ರದೊಂದಿಗೆ ತ್ರಿಕಾಲದಲ್ಲಿ ಲಿಂಗವನ್ನು ಅರ್ಚಿಸಬೇಕೆಂದು ಈ ಆಗಮದ ಅಭಿಪ್ರಾಯ.
ವೀರಶೈವನಾರು ?ಎನ್ನುವುದಕ್ಕೆ ಸೂಕ್ಷ್ಮಾಗಮದ ಉತ್ತರ ಹೀಗಿದೆ.

*ಏವಂಯಃ ಕುರುತೇಭಕ್ತ್ಯಾ ಪ್ರಾಣಲಿಂಗಾರ್ಚನಂ ಸದಾ*
*ವೀರಶೈವಾಃ ಸ ವಿಜ್ಞೇಯಃ ಸರ್ವ-ಶೈವೋತ್ತಮೋತ್ತಮಃ*
*ಏವಂ ಸಮರಸಾ ಭಾವಾತ್ ಷಟ್‌ಸ್ಥಲ ಯೋಗತಃ।*
*ಯಃ ಪೂಜಯತಿ ಮಾಂದೇವಿ ವೀರಶೈವಸ್ಸ ಉಚ್ಚತೇ*

ವೀರಶೈವನ ಲಕ್ಷಣವನ್ನು ಕುರಿತು ಪಾರಮೇಶ್ವರಾಗಮದ ಅಭಿಪ್ರಾಯ ಇಂತಿದೆ.

*ಯಸ್ಯಭಸ್ಮ ಲಲಾಟೇಸ್ತಿ ಕಂಠೇ ಲಿಂಗಂ ಮದಾತ್ಮಕಂ*
*ರುದ್ರಾಕ್ಷ ಧಾರಣಂ ದೇವೋ ಸೋಹಂ ದೇವಿ ನ ಸಂಶಯಃ"*

ವೀರಶೈವ ಮತದ ಶ್ರೇಷ್ಠತೆಯನ್ನು ಪಾರಮೇಶ್ವರಾಗಮ ಹೀಗೆ ಸಾರುತ್ತದೆ.

*ನ ವೀರಶೈವ - ಸದೃಶ್ಯಂ ಮತಮಸ್ತಿ ಜಗತ್ರಯೇ*
*ಸರ್ವಯೋಗಪ್ರದಂ ಪುಣ್ಯಂ ಶಿವಾಸಾಯುಜ್ಯದಾಯಕಂ*

ವೀರಶೈವರು ನಿಷ್ಠೆಯಿಂದ ಇಷ್ಟಲಿಂಗವನ್ನು ಪೂಜಿಸಿ ಶಿವಯೋಗದ ಬಲದಿಂದ ಶಿವಸಾಯುಜ್ಯವನ್ನು ಪಡೆಯಲು ವೀರಶೈವ ಧರ್ಮವೇ ಶ್ರೇಷ್ಠವೆಂದು ಅವರ ಅರ್ಥ. ಉಳಿದಮತಗಳು ಕನಿಷ್ಠವೆಂದು ಇವರರ್ಥವಲ್ಲ. ನಿಷ್ಠಾವಂತ ವೀರಶೈವನಿಗೆ ಮಾತ್ರ ಹೇಳಿದ ಸಂದೇಶ. ಕೇವಲ ಲಿಂಗಧಾರಿಗಳಿಗಲ್ಲ।

ವೀರಶೈವರಿಗೆ ಶಕ್ತಿವಿಶಿಷ್ಟ ಅದ್ವೈತವೆಂಬ ಸಿದ್ಧಾಂತವಿದೆ. ಷಟ್‌ಸ್ಥಲವೆಂಬ ದರ್ಶನವಿದೆ. ದೀಕ್ಷೆಯೆಂಬ ಸಂಸ್ಕಾರವಿದೆ. ಯೋಗವೆಂಬ ಶಿವಯೋಗವಿದೆ. ಸಾಧಕನ ಧಾರ್ಮಿಕ ಲಕ್ಷಣಗಳಾಗಿ ಅಷ್ಟಾವರಣಗಳಿವೆ. ಸಮಾಜದೊಂದಿಗೆ ಜೊತೆಗೂಡಿ ಬಾಳಲು ಸಾಮಾಜಿಕ ನೀತಿ ತತ್ತ್ವ ಅಥವಾ ವೀರಶೈವ ಧರ್ಮದ ಸಾಮಾಜಿಕ ನಡವಳಿಕೆಯನ್ನು ನಿರೂಪಿಸುವ ಸ್ಮೃತಿಗಳೇ ಪಂಚಾಚಾರಗಳು.

ಈ ಎಲ್ಲ ಲಕ್ಷಣಗಳಿಂದ ಜಾಗತಿಕ ಧರ್ಮಗಳಲ್ಲಿ ವೀರಶೈವಕ್ಕೆ ಒಂದು ವಿಶಿಷ್ಟ ಸ್ಥಾನವಿದೆ. ಯಾವುದೇ ಧರ್ಮಕ್ಕಾದರೂ ಒಂದು ಸಿದ್ಧಾಂತ ದರ್ಶನ ಸಾಹಿತ್ಯ, ಯೋಗ, ಅನುಸಂಧಾನಮಾರ್ಗ, ಸಂಸ್ಕಾರಗಳು, ಆಚಾರ ಸಂಹಿತೆಗಳು ಇರಲೇಬೇಕು. ಇಲ್ಲವಾದರೆ ಅದು ಧರ್ಮವೆನಿಸಿಕೊಳ್ಳುವುದಿಲ್ಲ.

ಜಗತ್ತು "ಶಿವ-ಶಕ್ತ್ಯಾತ್ಮಕ" ವೆಂದೂ ಕಾಮಿಕಾಗಮವು ನಿರೂಪಿಸುತ್ತದೆ.

*ಬಿಂದು ನಾದಾತ್ಮಕಂ ಸರ್ವಂ ಜಗಸ್ಥಾವರ ಜಂಗಮಃ*
*ಬಿಂದು ಶಕ್ತಿಃ ಶಿವೋನಾದಃ ಶಿವಶಕ್ತ್ಯಾತ್ಮಕಂ ಜಗತ್*

ಗುರುಲಿಂಗ ಜಂಗಮದ ವಿಚಾರವನ್ನು ಆಗಮ ಈ ರೀತಿ ಸಾರುತ್ತದೆ.

*ಏಕಮೂರ್ತಿಸ್ತ್ರಯೋ ಭಾಗಃ ಗುರುರ್ಲಿಂಗತು ಜಂಗಮಃ*
*ಜಂಗಮಶ್ಚಗುರುರ್ಲಿಂಗಂ ತ್ರಿವಿಧಂ ಲಿಂಗಮುಚ್ಯತೇ*

ವೀರಶೈವರು ಅತಿವರ್ಣಾಶ್ರಮಿಗಳು. ಅವರಿಗೆ ಹಿಂದೂ ಸಂಪ್ರದಾಯದಂತೆ ವರ್ಣಾಶ್ರಮಗಳಿಲ್ಲ. ಅವರಲ್ಲಿ ಜಾತಿಭೇದವಿಲ್ಲ. ಈ ತತ್ತ್ವವನ್ನು ಪಾರಮೇಶ್ವರಾಗಮ (ಪ-೧೪) ಸುಂದರವಾಗಿ ನಿರೂಪಿಸುತ್ತದೆ.

*ಬ್ರಾಹ್ಮಣಾ ಕ್ಷತ್ರಿಯಾಃ ವೈಶ್ಯಾಃ, ಶೂದ್ರಾಯೇಚಾನ್ಯ ಜಾತಯಃ*
*ಲಿಂಗಧಾರಣ ಮಾತ್ರೇಣ ಶಿವ ಏವ ನಸಂಶಯಃ*
*ಮತ್ತು ಅದೇ ಆಗಮವು ಮುಂದುವರೆದು ಹೀಗೆ ಹೇಳುತ್ತದೆ.*
*ಶಿವ-ಸಂಸ್ಕಾರ-ಯುಕ್ತೇಷು ಜಾತಿ-ಭೇದೋನವಿದ್ಯತೇ*
*ಕಾಷ್ಠೇಷು ವಹ್ನಿ-ಧಗ್ಧೇಷು ಯಥಾ ರೂಪಂನ ವಿದ್ಯತೇ*

ಶಿವಸಂಸ್ಕಾರ ಸಂಪನ್ನನಾದರೆ ವ್ಯಕ್ತಿಯು ತನ್ನ ಪೂರ್ವಜಾತಿಯನ್ನು ಕಳೆದುಕೊಳ್ಳುತ್ತಾನೆ. ಹೇಗೆಂದರೆ ಅಗ್ನಿಗೆ ಬಿದ್ದು ದಹಿಸಿದ ಸೌದೆಯಂತೆ।

*ನ ಸ್ತ್ರೀ- ಭೇದೋ ನಪುಂ-ಭೇದೋಜಾತಿ- ವರ್ಣಾಶ್ರಮಾಧಿಕಂ*
*ಸರ್ವಾತೀತಮಿದಂ ವಿದ್ಧಿ ವೀರಶೈವ ಮತಂ ಮಮ*

ವೀರಶೈವ ಸ್ತ್ರೀಪುರುಷರಿಗೆ ಧಾರ್ಮಿಕರಂಗದಲ್ಲಿ ಸಮಾನತೆ ಇದೆ. ಅಷ್ಟೇ ಅಲ್ಲ, ಸಾಮಾಜಿಕ ರಂಗದಲ್ಲೂ ಸಮಾನ ಗೌರವಕ್ಕೆ ಪಾತ್ರರು, ಎನ್ನುವ ವಿಚಾರಪೂರ್ಣ ಉದಾರ ತತ್ತ್ವ ಪ್ರತಿಪಾದನೆಯನ್ನು ಶಿವಾಗಮಗಳಲ್ಲಿ ನಾವು ಕಾಣುತ್ತೇವೆ. ಹೀಗೆಯೇ ಶಿವಾಗಮಗಳಲ್ಲಿ ಉಕ್ತವಾಗಿರುವ ಶ್ಲೋಕಗಳನ್ನು ಉದಾಹರಿಸಿ ವೀರಶೈವ ಧರ್ಮ ತತ್ವಗಳನ್ನು ಇನ್ನೂ ವಿವರವಾಗಿ ನಿರೂಪಿಸಲು ಬರುತ್ತದೆ. ಆದರೆ ಈ ಪ್ರಬಂಧದ ವ್ಯಾಪ್ತಿಗೆ ಇಷ್ಟು ಸಾಕು.

## ಶೈವ ವೀರಶೈವದೆಡೆಗೆ

ಅಂಗದ ಲಿಂಗ ಅಂಗೈ ಮೇಲೆ, ದೇವಾಲಯದ ಲಿಂಗ ದೇಹದ ಮೇಲೆ ಬಂದುದು ಶೈವ ಧರ್ಮದ ವಿಕಾಸದಲ್ಲಿ ವಿಸ್ಮಯಕಾರಿ ಇತಿಹಾಸವಾಗಿದೆ. ಅದು ಶೈವದಿಂದ ವೀರಶೈವದೆಡೆಗೆ

ಸಾಗುವ ರೋಮಾಂಚಕಾರಿ ಅಧ್ಯಾಯ. ಶೈವದರ್ಶನದ ಇತಿಹಾಸದಲ್ಲಿ, ಶಿವಾಗಮಗಳಲ್ಲಿ, ಬ್ರಹ್ಮ-ವಿಷ್ಣು-ಶಿವಾತ್ಮಕಸ್ಥಾವರ ಲಿಂಗ ಜಂಗಮ ಲಿಂಗಗಳೆಂದು ಮೂರು ವಿಧ ಕಂಡುಬರುತ್ತದೆ.

*ದೇಹೋ ದೇವಾಲಯಃ ಪ್ರೋಕ್ತಃ ಜೀವೋದೇವೋ ಸನಾತನಃ*
*ತ್ಯಜೇದ್ ಜ್ಞಾನ-ನಿರ್ಮಾಲ್ಯಂ ಸೋಹಂ ಭಾವೇನ ಪೂಜಯೇತ್*

ಎಂದು ಆಗಮವು ಜೀವವೇ ದೇವನು, ದೇಹವೇ ದೇವಾಲಯ ಸಾರುತ್ತದೆ.

ಶಿವಾಗಮಗಳಲ್ಲಿ ಸ್ಥಾವರ ಹಾಗೂ ಜಂಗಮ ಪೂಜೆಯ ಕಲ್ಪನೆ ಇರುವಂತೆ ಸ್ವಾರ್ಥ ಪೂಜೆ ಪರಾರ್ಥ ಪೂಜೆಯೆಂಬ ಪ್ರಭೇದವೂ ಕಂಡುಬರುತ್ತದೆ.

ಶಿವಾಗಮಗಳಲ್ಲಿ ದೇವಾಲಯಗಳ ನಿರ್ಮಾಣ-ಮೂರ್ತಿಪೂಜೆ ವಿವರಣೆ ಬರುತ್ತದೆ. ಅಲ್ಲಿ ದೇವಾಲಯಗಳು ಸಾಂಸ್ಕೃತಿಕ ಕೇಂದ್ರಗಳು. ಅವುಗಳ ಗುರಿ ಸಮಾಜ ಕಲ್ಯಾಣ ಮೂರ್ತಿ ಪೂಜೆ, ದೈವೀಶಕ್ತಿಯ ಪ್ರಚಾರವೆಂಬ ಭಾವನೆ ಅಲ್ಲಿದೆ. ಸ್ಥಾವರಲಿಂಗಪೂಜೆ ದೈವೀಶಕ್ತಿ ಪ್ರಚಾರಕ್ಕಷ್ಟೆ ಸಾಧನೆಯಾಗುತ್ತದೆ. ಆದ್ದರಿಂದ ಆತ್ಮೋದ್ಧಾರ ಸಾಧ್ಯವಾಗುವುದಿಲ್ಲ. ಸ್ಥಾವರಲಿಂಗಪೂಜೆ ಜಾತ್ರೆಯಲ್ಲಿ ಮಾಡುವ ಪೂಜೆ. ಅದರಿಂದ ಮನಸ್ಸಿನ ಏಕಾಗ್ರತೆಯಾಗಲಿ, ಸಿದ್ಧಿಯಾಗಲಿ, ಆತ್ಮೋದ್ಧಾರವಾಗಲಿ ಸಾಧ್ಯವಿಲ್ಲವೆಂದು ತಿಳಿದು, ಆತ್ಮನ ಕುರುಹಾಗಿ ಅನಿಷ್ಟ ನಿವಾರಕವಾಗಿ ಪ್ರತಿಯೊಬ್ಬ ವ್ಯಕ್ತಿಯೂ ಅವನವನ ಇಷ್ಟಾನುಸಾರವಾಗಿ ಪೂಜಿಸಲು ಅಂಗಳವ ಲಿಂಗ ಅಂಗೈಮೇಲೆ ಇಷ್ಟಲಿಂಗವಾಗಿ ಬರುತ್ತದೆ. ಇದನ್ನು ಆಗಮಕಾರರು ''ಜಂಗಮಲಿಂಗ'' ಎನ್ನುತ್ತಾರೆ. ಇದು ವೀರಶೈವ ಧರ್ಮದ ವಿಕಾಸದ ಚರಿತ್ರೆಯು ಹೌದು. ಕಾಲಕ್ರಮೇಣ ಶಿವದೇವಾಲಯಗಳು ವೀರಶೈವ ಮಠಗಳಾಗಿರುವುದು ಕಂಡುಬರುತ್ತದೆ. ''ಸ್ಥಾವರಕ್ಕೆ ಅಳಿವುಂಟು ಜಂಗಮಕ್ಕಿಲ್ಲ'' ಎನ್ನುವ ತತ್ತ್ವ ಬಲಗೊಂಡು ಆ ಮಠಗಳಲ್ಲಿ ಚೈತನ್ಯ ಸ್ವರೂಪರೂ ಜ್ಞಾನಿಗಳೂ ಆದ ಜಂಗಮರು ಅಧಿಪತಿಗಳಾದರು.

ಈಗಲೂ ವೀರಶೈವ ಸಂಪ್ರದಾಯದ ದೇವಾಲಯಗಳಲ್ಲಿ ಸ್ಥಾವರಲಿಂಗಕ್ಕೆ ಕ್ರಿಯಾಮೂರ್ತಿ ಜಂಗಮನ ಪಾದೋದಕದ ಅಭಿಷೇಕವಾಗುತ್ತದೆ. ಅಷ್ಟೇ ಅಲ್ಲ ಜಂಗಮದ ಪಾದೋದಕ ಇಷ್ಟಲಿಂಗದ ಮೇಲೂ ಎರೆಯುವ ಪರಿಪಾಠವುಂಟು. ಇದು ಆಗಮಗಳ ಕಾಲದಿಂದ ಬಂದ ವಿಕಾಸದ ಕ್ರಮ.

ಗುರುಲಿಂಗ ಜಂಗಮರು ಸಮಾನರು. ಲಿಂಗ ಆತ್ಮನ ಕುರುಹು. ಜಂಗಮ ಚೈತನ್ಯದ ಅರಿವು. ಗುರುವೇ ಜ್ಞಾನದ ಕುರುಹು. ಇವುಗಳ ಸಾಮರಸ್ಯದ ಸಂಕೇತವೇ ಇದು. ಅಲ್ಲಿ ಶ್ರದ್ಧೆ-ಭಾವನೆ ಮುಖ್ಯವಲ್ಲದೆ ತರ್ಕವಲ್ಲ. ಇಷ್ಟಲಿಂಗದ ಮೇಲೆ ಪಾದೋದಕವನ್ನು ಎರೆಯುವ ಕ್ರಮವನ್ನು ವೆಂಕಟಾಧ್ವರಿ ತನ್ನ ವಿಶ್ವಗುಣಾದರ್ಶ ಚಂಪೂಕಾವ್ಯದಲ್ಲಿ ಟೀಕಿಸಿದ್ದಾನೆ. ವೀರಶೈವ ಧರ್ಮ

ಸಂಪ್ರದಾಯಗಳ ಉದಾತ್ತತತ್ತ್ವಗಳ ಅರಿವಿಲ್ಲದೆ ಟೀಕಿಸುವ ಶೈವವಿರೋಧಿ ವೈಷ್ಣವ ಕವಿಯಮಾತುಗಳನ್ನು ಪರಿಗಣಿಸಬೇಕಿಲ್ಲ. ಸ್ಥಾವರಕ್ಕಿಂತ ಜಂಗಮವೇ ಮೇಲು. ಇಷ್ಟಲಿಂಗವ ಸ್ಥಾವರ ದೋಷ ಕಳೆಯಲು ಜಂಗಮನ ಪಾದೋದಕ ಎರೆಯುವ ಪದ್ಧತಿ ಪ್ರಾಚೀನ ಕಾಲದಿಂದ ನಡೆದುಬಂದ ಸಂಪ್ರದಾಯ.

ಇಷ್ಟಲಿಂಗದ ವಿಚಾರ ಆಗಮದಲ್ಲಿ ಬಂದಿದ್ದರೂ ಅದನ್ನು ಧಾರಣೆ ಮಾಡುವ ಪದ್ಧತಿ ಎಂದಿನಿಂದ ಎನ್ನುವುದು ಸಂದೇಹದ ವಿಚಾರವಾಗಿದ್ದು ಆದಿದೇವತೆಗಳೂ ಗೌತಮಾದಿಮುನಿಗಳೂ ಲಿಂಗಧಾರಿಗಳಾಗಿದ್ದರೆಂದು "ಸಿದ್ಧಾಂತ ಶಿಖಾಮಣಿ" ಹೇಳುತ್ತದೆ. ಅಂದರೆ ಈ ಪದ್ಧತಿ ಪ್ರಾಚೀನವೆನ್ನುವುದರಲ್ಲಿ ಸಂದೇಹವಿಲ್ಲ. ಲಿಂಗವನ್ನು ಮಸ್ತಕಕ್ಕೆ.... ಕಂಠಕ್ಕೆ ಕಟ್ಟುವ ಪದ್ಧತಿಯ ಬಗ್ಗೆ ಅನೇಕ ಪ್ರಾಚೀನ ಉಲ್ಲೇಖಗಳು ದೊರೆಯುತ್ತವೆ.

ವೀರಶೈವರು ತಮ್ಮ ಇಷ್ಟಲಿಂಗದಲ್ಲಿ, ನಿಜನಿಷ್ಠಾವುಳ್ಳವರಾಗಿದ್ದರೂ, ಸ್ಥಾವರ ಮೂರ್ತಿಗಳ ಬಗ್ಗೆ ಅವರು ಉದಾರ ಭಾವನೆವುಳ್ಳವರಾಗಿದ್ದಾರೆ. ಸದ್ಗುಣಿಯೊಬ್ಬಳು ತನ್ನ ಪತಿಯ ಮೇಲೆ ನಿಷ್ಠೆ ಪ್ರೀತಿ ವಿಶ್ವಾಸಗಳನ್ನು ಅಧಿಕವಾಗಿರಿಸಿಕೊಂಡಿದ್ದರೂ, ತನ್ನ ಬಂಧುಗಳ ಬಗೆಗೆ ಎಂದೂ ಅಗೌರವವನ್ನು ತೋರಿಸುವುದಿಲ್ಲ. ಅಂತೆಯೇ ಇಷ್ಟಲಿಂಗದಲ್ಲಿ ನಿಷ್ಠೆಸ್ಥಾವರಲಿಂಗಗಳಲ್ಲಿ ಸಹಾನುಭೂತಿ ವೀರಶೈವರಿಗಿದೆ.

"ತೇ ವೀರಶೈವಾಃ ಲೋಕಾನಾಂ ನಿತ್ಯಂ ಕ್ಷೇಮಾಭಿಲಾಷಿಣಃ" ಎನ್ನುತ್ತದೆ ಕ್ರಿಯಾಸಾರ. ವೀರಶೈವರು ಇಸ್ಲಾಂ ಸೂಫಿ ಪಂಥದವರಂತೆ ಸತಿ-ಪತಿ ಭಕ್ತಿನ್ಯಾಯ ಉಳ್ಳವರಾಗಿದ್ದಾರೆ. 'ಲಿಂಗಪತಿ-ಶರಣಸತಿ' ಎನ್ನುವುದೇ ಅವರ ತತ್ತ್ವ

ಶರಣರೂ ಸಹ ಸ್ಥಾವರಲಿಂಗಗಳ ಹೆಸರುಗಳನ್ನು ತಮ್ಮ ವಚನಗಳಿಗೆ ಅಂಕಿತವಾಗಿ ಇರಿಸಿದ್ದಾರೆ. ವೀರಶೈವರು ದ್ವಾದಶ ಜ್ಯೋತಿರ್ಲಿಂಗಗಳಲ್ಲೂ ಭಕ್ತಿಯುಳ್ಳವರಾಗಿದ್ದಾರೆ. 'ಶಿವನಂತದೀಯ ಶರಣವ್ರಜಮುಂ' ಎನ್ನುವ ಮಹಾಕವಿ ಹರೀಶ್ವರನ ವಾಣಿಯಂತೆ ಶಿವನಷ್ಟೇ ಶಿವಭಕ್ತರೂ ವೀರಶೈವರಿಗೆ ಪೂಜ್ಯ. ಶಿವಶರಣರ ಗದ್ದುಗೆಗಳೇ ಹೆಚ್ಚಾಗಿ ವೀರಶೈವ ಶಿವಾಲಯಗಳಾಗಿವೆ. ಉದಾ : ಕೊಟ್ಟೂರು, ಯಡೆಯೂರು, ಕಲ್ಬುರ್ಗಿ, ಸೊನ್ನಲಾಪುರ; ಸಿದ್ಧರಾಮೇಶ್ವರ, ಗುಬ್ಬಿ, ಉಳವಿ ಇತ್ಯಾದಿ. "ಶಿವಸ್ಥಾನಾನಿ ತೀರ್ಥಾನಿ ವಿಶಿಷ್ಟಾನಿ ಶಿವಾರ್ಚಕಃ" ಎಂಬ ಮಾತು ಸಿದ್ಧಾಂತ ಶಿಖಾಮಣಿಯಲ್ಲಿ ಉಕ್ತವಾಗಿದೆ. ಶರಣರ ಪಾದ ಧೂಳಿಯಿಂದ ಪವಿತ್ರವಾದ ನೆಲವೇ ಸುಕ್ಷೇತ್ರವೆನ್ನುತ್ತಾರೆ. ಮಗ್ಗೆಯ ಮಾಯಿದೇವರು. ಜಂಗಮವಿರುವ ಮಠಗಳೇ ಶಿವನ ವಾಸಕ್ಷೇತ್ರಗಳು. ವೀರಶೈವರಿಗೆ ಅವೆ ತೀರ್ಥಯಾತ್ರೆಗಳು. ವೀರಶೈವರಲ್ಲಿ ಪಂಚಾಚಾರ್ಯರನ್ನು ಲಿಂಗೋದ್ಭವರೆನ್ನುವ ನಂಬಿಕೆ ಇದೆ. ಅಷ್ಟೇ ಅಲ್ಲ ಈ ರೀತಿಯ ಲಿಂಗೋದ್ಭವ ಮೂರ್ತಿಗಳನ್ನು ನಾವು ಕಾಣುತ್ತೇವೆ. ಇದರ ಅರ್ಥ ಬಹುಶಃ ಸ್ಥಾವರ ಕೆಳಗಿದ್ದು ಅಲ್ಲಿ ಜಂಗಮದ ಉದಯವಾಯಿತು. ಸ್ಥಾವರದ ಗರ್ಭ ಸೀಳಿ ಜಂಗಮ ಉಳಿಯುವ

ತಾತ್ತ್ವಿಕ ಸಂಕೇತವೆನಿಸುವುದು. ಸ್ಥಾವರ ಕತ್ತಲೆಯು ಕಳೆದು ವೀರಶೈವ ಪ್ರಭಾತಕಾಲದ ಜಂಗಮ ಅರುಣ ಉದಯದ ಸಂಕೇತವೆಂದರೂ ಸರಿಯೆ. ಶೈವ ವೀರಶೈವವಾದ ತಾತ್ತ್ವಿಕ ಸಂಕೇತವೇ ಲಿಂಗೋದ್ಭವರೆನ್ನುವ ಅರ್ಥವಿರಬೇಕೆಂದೆನಿಸುತ್ತದೆ.

ಹೀಗೆ ಈ ಎಲ್ಲ ವಿಚಾರಗಳನ್ನು ಪರಿಶೀಲಿಸಿದಾಗ ಶೈವಧರ್ಮದಿಂದ ವೀರಶೈವ ಸಂಸ್ಕೃತಿ ಅರಳಬೇಕಾದರೆ, ಸಹಸ್ರಾರು ವರ್ಷಗಳ ಕಾಲ ಸಂದಿರಬೇಕು. ಶೈವಸರೋವರದಲ್ಲಿ ವೀರಶೈವವೂ ಒಂದು ಕಮಲಪುಷ್ಪ. ಆದರೂ ಶೈವಧರ್ಮದ ಸಂಪೂರ್ಣ ಪ್ರಭಾವದಿಂದ ಇಂದಿಗೂ ವೀರಶೈವರೂ ಮುಕ್ತರಾಗಿಲ್ಲ. ವೀರಶೈವರಿಗೆ ಆಗಮಗಳೇ ಮೂಲಾಧಾರ. ಹಾಗೂ ಪ್ರಮಾಣ ಗ್ರಂಥಗಳಾಗಿವೆ. ಕಾರಣ ಶೈವಸಿದ್ಧಾಂತಗಳ ಆಕರಗಳೇ ಶಿವಾಗಮಗಳು. ಶೈವ ಧರ್ಮದ ಕೊನೆಯೇ ವೀರಶೈವ. ಶೈವಧರ್ಮದ ವೃಕ್ಷದಲ್ಲಿ ತುತ್ತ ತುದಿಯ ಒಂದು ಶಾಖೆಯಾಗಿ ಅಲ್ಲಿ ವೀರಶೈವ ತತ್ತ್ವಗಳು ಪಲ್ಲವಿಸುವುದನ್ನು ಕಾಣಬೇಕಾದರೆ ಶಿವಾಗಮಗಳಿಗೆ ಶರಣು ಹೋಗಲೇಬೇಕು. ಶೈವಸಂತತಿ ವೀರಶೈವ ತನ್ನ ವಂಶವೃಕ್ಷದ ಮೂಲಬೇರು ಆಗಮಗಳಲ್ಲಿರುವುದರಿಂದ (ವೀರಶೈವ ತತ್ತ್ವಗಳಿಗೂ) ಶಿವಾಗಮಗಳೇ ಆಧಾರವೆನ್ನುವ ಮಾತು ಸುಸ್ಪಷ್ಟವಾಗಿದೆ.

ಇನ್ನು ಆಗಮಗಳ ಕಾಲ ಪ್ರಾಚೀನವಲ್ಲವೆಂದು ಕೆಲವು ವಿದ್ವಾಂಸರ ಅಭಿಪ್ರಾಯ. ಅದೂ ಸರಿ ಇರಬಹುದು. ವ್ಯಾಸರು ಬರೆದರೆಂದು ಹೇಳುವ ಬ್ರಹ್ಮಸೂತ್ರಗಳ ಭಾಷೆಗೂ ಮಹಾಭಾರತದ ಭಾಷೆಗೂ, ಪುರಾಣಗಳ ಭಾಷೆಗೂ ಸಾಕಷ್ಟು ವ್ಯತ್ಯಾಸ ಇರುವಾಗ, ವಿದ್ವಾಂಸರು ಬೇರೇ ಬೇರೆ ಕಾಲದಲ್ಲಿ ಪುರಾಣಗಳನ್ನು ಬರೆದು ವ್ಯಾಸರ ತಲೆಗೆ ಕಟ್ಟಿರುವಂತೆ ಹಾಗೂ ಅವರ ಹೆಸರಿನಲ್ಲಿ ಆ ಗ್ರಂಥಗಳ ಚಲಾವಣೆ ನಡೆದಿರುವಂತೆ ಇಲ್ಲೂ ಅಂಥ ಕೆಲಸ ನಡೆದಿರಲು ಸಾಧ್ಯ. ಆದರೂ ಶಿವಾಗಮಗಳಲ್ಲಿ ಕೆಲವು ಪ್ರಾಚೀನವೆನ್ನುವುದರಲ್ಲಿ ಸಂದೇಹವಿಲ್ಲ. ಆಗಮಗಳ ಸಂಶೋಧನೆ ಪರಿಷ್ಕರಣ ಸಂಪಾದನೆಯ ಕಾರ್ಯ ಪ್ರಾಮಾಣಿಕ ವಿದ್ವಾಂಸರಿಂದ ನಡೆಯಬೇಕಾಗಿದೆ. ಇಂಥ ಕಾರ್ಯ ಪಾಂಡಿಚೇರಿಯಲ್ಲಿ ನಡೆಯುತ್ತಿದೆ ಎಂದು ಕೇಳಿದ್ದೇನೆ. ಆದರೂ ಉಪಲಬ್ಧವಿರುವ ಕೆಲವು ಆಗಮಗಳನ್ನು ಪರಿಶೀಲಿಸಿದಾಗ ವೀರಶೈವ ಧರ್ಮದ ಬಗೆಗೆ ಕೆಲವು ಅಂಶಗಳು ಸ್ಪಷ್ಟವಾಗಿ ಕಂಡುಬರುತ್ತದೆ. ಶಿವಾಗಮಗಳಲ್ಲಿ ಕೆಲವು ಪೂಜೆಯ ಪ್ರತಿಪಾದನೆಗಾಗಿವೆ. ಕೆಲವು ಭಸ್ಮ-ರುದ್ರಾಕ್ಷಿ ಶಿವಲಿಂಗ ಧಾರಣದ ವಿಷಯ ಹೇಳುತ್ತವೆ. ಮತ್ತೆ ಕೆಲವು ದೇವಾಲಯಗಳ ಉತ್ಸವ ಪ್ರತಿಷ್ಠೆಯ ವಿಚಾರ ತಿಳಿಸುತ್ತದೆ.

**ಶೈವಸಿದ್ಧಾಂತದ ಪ್ರತಿಪಾದಕ ಗ್ರಂಥಗಳು ಶಿವಾಗಮಗಳು.**

ವೀರಶೈವ ಸಿದ್ಧಾಂತವು-ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತ-ಅಷ್ಟಾವರಣ, ಪಂಚಾಚಾರ, ಮೂವತ್ತಾರು ತತ್ತ್ವಗಳು ಷಟ್‌ಸ್ಥಲಗಳ ವಿಚಾರ - ಪತಿ - ಪಶುಪಾಶವೆಂಬ (ತ್ರಿಕಸಿದ್ಧಾಂತ)

ಮಲತ್ರಯ ವಿಚಾರ-ದೀಕ್ಷೆ ಈ ಎಲ್ಲ ವಿಚಾರಗಳನ್ನು ವೀರಶೈವವು ಶೈವದಿಂದ ಬಳುವಳಿಯಾಗಿ ಪಡೆದಿದೆ. ಆದ್ದರಿಂದಲೇ ವೀರಶೈವ ಧರ್ಮದ ಆದರ ಸಿದ್ಧಾಂತದ ಹೆಸರೂ ಈ ದೃಷ್ಟಿಯಿಂದಾಗಿ ಶಿವಾದ್ವೈತವೇ ಆಗಿದೆ.

ಎಲ್ಲವೂ ಶೈವಸಿದ್ಧಾಂತವಾದರೆ, ವೀರಶೈವ ಧರ್ಮ ಸಿದ್ಧಾಂತತತ್ತ್ವಗಳ ಸ್ವತಂತ್ರತೆ ಹಾಗೂ ವೈಶಿಷ್ಟ್ಯವೆಲ್ಲಿ ? ಎನ್ನುವ ಪ್ರಶ್ನೆ ಸಹಜವಾಗಿ ಉದ್ಭವಿಸುತ್ತದೆ. ಶಿವಾಗಮಗಳ ಶೈವ ಸಿದ್ಧಾಂತವಲ್ಲಿ ವೀರಶೈವತತ್ತ್ವಗಳು ಅಲ್ಲಲ್ಲಿ ಕಂಡುಬಂದರೂ ಪ್ರತ್ಯೇಕ ವ್ಯವಸ್ಥಿತ ರೂಪವಲ್ಲಿ ಕಂಡುಬರುವುದಿಲ್ಲ. ಷಟ್‌ಸ್ಥಲದ ವಿಚಾರವಾಗಲೀ, ಅಷ್ಟಾವರಣಗಳ ಕ್ರಮವಾಗಲೀ, ಪಂಚಾಚಾರಗಳ ಆಚಾರಸಂಹಿತೆಯಾಗಲೀ ಕ್ರಮಬದ್ಧವಾಗಿಲ್ಲ. ಅಷ್ಟೇ ಅಲ್ಲ. ವೀರಶೈವ ಸಿದ್ಧಾಂತದ ಏಕೋತ್ತರಶತಸ್ಥಲದ ವಿವರಣೆ ಅಲ್ಲಿಲ್ಲ. ಮೂಲ ತತ್ತ್ವಗಳನ್ನೆಲ್ಲ ಬಳಸಿಕೊಂಡು ವ್ಯವಸ್ಥಿತ ಕ್ರಮದಲ್ಲಿ ಭಾಷ್ಯಗಳೂ, ಸಿದ್ಧಾಂತ ಗ್ರಂಥಗಳೂ, ವಚನ ಶಾಸ್ತ್ರವೂ ವೀರಶೈವ ದರ್ಶನ ತತ್ತ್ವಗಳ ಸಮ್ಯಕ್ ವಿವರಣೆ ರೂಪಗೊಂಡವು. ವೀರಶೈವ ಸಾಧಕನು ಪಂಚಾಚಾರ ಶೀಲನಾಗಿ, ಅಷ್ಟಾವರಣಗಳಿಂದ ಆವೃತನಾಗಿ, ಷಟ್ಸ್ಥಲಸೋಪಾನವನ್ನೇರಿ ಏಕೋತ್ತರ ಶತಸ್ಥಲಗಳನ್ನು ಸಾಧಿಸುತ್ತ ಜೀವ ಶಿವೈಕ್ಯನಾಗುವ ಲಿಂಗಾಂಗ ಸಾಮರಸ್ಯ ಯೋಜನೆಯೇ ಮುಕ್ತಿ ಎಂಬುದು ವೀರಶೈವ ಸಿದ್ಧಾಂತದ ನಿರ್ಣಯ. ಹೀಗೆ ಶಿವಾಗಮಗಳಲ್ಲಿ ವೀರಶೈವ ಧರ್ಮ ತತ್ತ್ವಗಳನ್ನು ಗುರುತಿಸಲು ಶಿವಾಗಮ ಅಭ್ಯಾಸಿಗಳಿಗೆ ಈ ಲೇಖನ ತೋರುಬೆರಳು ಮಾತ್ರವಾಗಿದೆ.

■

# ಕನ್ನಡ ಸಾಹಿತ್ಯದ ಸೊಬಗು

**ಟಿ. ಆರ್. ಮಹಾದೇವಯ್ಯ**

---

'ಕನ್ನಡವೆನೆ ಕುಣಿದಾಡುವುದೆನ್ನೆದೆ, ಕನ್ನಡವೆನೆ ಕಿವಿ ನಿಮಿರುವುದು' ಎಂಬ ಕವಿವಾಣಿಯಂತೆ ಕನ್ನಡ ಭಾಷೆ ಕನ್ನಡಿಗರ ಉಸಿರು, ಕಣ್ಣು. ಇದು ದಕ್ಷಿಣದ ದ್ರಾವಿಡ ಭಾಷಾ ವರ್ಗಕ್ಕೆ ಸೇರಿದೆ. ತಮಿಳು, ಕನ್ನಡ, ತೆಲುಗು, ಮಲಯಾಳಂ ಮತ್ತು ತುಳು - ಇವು ಸೇರಿ ಪಂಚದ್ರಾವಿಡವೆನ್ನಿಸಿಕೊಂಡಿವೆ. ಯಾವಾಗಲೂ ಭಾಷೆ ಮುಂದು, ಬರಹ ಹಿಂದು ; ಆನಂತರ ಸಾಹಿತ್ಯ. ಕನ್ನಡ ಭಾಷೆ ಬಹಳ ಪ್ರಾಚೀನವಾದುದು. ಅದಕ್ಕೆ ಎರಡು ಸಹಸ್ರ ವರ್ಷಗಳ ಇತಿಹಾಸವಿದೆ. ಕ್ರಿ. ಶ. 5ನೆಯ ಶತಮಾನದಿಂದಲೇ ನಮಗೆ ಲಿಖಿತ ಆಧಾರಗಳು ಸಿಕ್ಕುತ್ತವೆ. ನಮಗೆ ದೊರಕಿರುವ ಮೊದಲ ಶಾಸನದಲ್ಲೇ ಸಂಸ್ಕೃತಮಯವಾದ ಪ್ರಬುದ್ಧ ಕನ್ನಡ ಭಾಷೆ ಬಳಕೆಯಾಗಿರುವುದು ಕಂಡುಬರುತ್ತದೆ.

ಭಾಷೆಯ ಬೆಳವಣಿಗೆಯಲ್ಲಿ ಹಳಗನ್ನಡಕ್ಕಿಂತಲೂ ಹಿಂದಿನ, ಪೂರ್ವದ ಹಳಗನ್ನಡವೆಂಬ ಪ್ರಭೇದವಿದ್ದುದು ಗೋಚರವಾಗುತ್ತದೆ. ಪ್ರಾಚೀನ ಶಾಸನಗಳಲ್ಲಿ ಇಂಥ ಕನ್ನಡ ಭಾಷೆ ಬಳಕೆಯಾಗಿದೆ. ಹತ್ತನೆಯ ಶತಮಾನ ಹಳಗನ್ನಡ ಕಾಲ. ಮುಂದೆ ಹನ್ನೆರಡನೆಯ ಶತಮಾನದಿಂದ ಹಳಗನ್ನಡದ ಕ್ಲಿಷ್ಟತೆ ಸರಳವಾಗುತ್ತಾ ನಡುಗನ್ನಡವಾಯಿತು. ಸಂಸ್ಕೃತ ಭಾಷೆಯ ಪ್ರಾಬಲ್ಯ ಕುಗ್ಗಿ ದೇಶೀಯತೆ ಮೆರೆಯಿತು. ಹತ್ತೊಂಬತ್ತನೆಯ ಶತಮಾನದಿಂದ

ಈಚಿನದು ಹೊಸಗನ್ನಡವೆನಿಸಿತು. ಪಾಶ್ಚಾತ್ಯ ಭಾಷಾಸಾಹಿತ್ಯಗಳ ಸಂಪರ್ಕದಿಂದಾಗಿ ಭಾಷೆ ಹೊಸತನವನ್ನು ಪಡೆಯಿತು. ಅಂಥ ಭಾಷೆಯಿಂದ ಅನೇಕ ಹೊಸ ಸಾಹಿತ್ಯ ಪ್ರಕಾರಗಳು ಮೂಡಿಬಂದವು.

ಕನ್ನಡ ಭಾಷೆ ಬರಿಯ ಸಾಹಿತ್ಯಾಭಿವ್ಯಕ್ತಿಯ ಸಾಧನವಾಗಿಲ್ಲ. ಆದು ಅನೇಕ ಶಾಸ್ತ್ರಗಳ ಸಮರ್ಥವಾದ ಅಭಿವ್ಯಕ್ತಿ ಮಾಧ್ಯಮವಾಗಿದೆ. ಛಂದಸ್ಸು, ಗಣಿತ, ಜ್ಯೋತಿಷ್ಯ, ಸಂಗೀತ, ನೃತ್ಯ, ಸೂಪಶಾಸ್ತ್ರ, ಕಾಮಶಾಸ್ತ್ರ ಮೊದಲಾದ ವಿಷಯಗಳನ್ನು ಕುರಿತ ಕೃತಿಗಳು ಕನ್ನಡದಲ್ಲಿ ಸಾಕಷ್ಟು ಬಂದಿವೆ. ಈಚೆಗೆ ಅನೇಕ ಆಧುನಿಕ ಶಾಸ್ತ್ರಗಳು, ತಾಂತ್ರಿಕ ಹಾಗೂ ವೈಜ್ಞಾನಿಕ ಕೃತಿಗಳು ಕನ್ನಡ ಭಾಷೆಯಲ್ಲಿ ಮೂಡಿಬಂದಿವೆ.

ನಮ್ಮ ಕವಿಗಳಲ್ಲಿ ಅನೇಕರು ವಿದ್ವಾಂಸರಾಗಿದ್ದರು, ಅಪ್ರತಿಮ ಪ್ರತಿಭಾಶಾಲಿಗಳಾಗಿದ್ದರು. ಅವರು ಬರಿಯ ಕಲ್ಪನಾ ವಿಲಾಸಿಗಳಾಗಿರಲಿಲ್ಲ, ವಾಸ್ತವವಾಗಿ ಒಳ್ಳೆಯ ಉಜ್ವಲ ಬದುಕನ್ನು ನಡೆಸಿದವರಿದ್ದರು. ಬದುಕಿನ ಸಾರಾಸಾರಗಳನ್ನು ಅರಿತ ರಸಿಕರಿದ್ದರು. ಭೋಗ-ತ್ಯಾಗಗಳ ಸಮರಸವನ್ನು ಸಾಧಿಸಿದವರಾಗಿದ್ದರು. ಒಟ್ಟಾರೆ ಶುಚಿಯಾದ ಆರೋಗ್ಯಪೂರ್ಣ ಜೀವನ ನಡೆಸಿದವರು. ತಾವು ರಚಿಸಿದ ಕಾವ್ಯಗಳಲ್ಲಿ ಅದನ್ನೇ ಎತ್ತಿ ಹಿಡಿದರು. ಇದಲ್ಲದೆ ಯುಗಧರ್ಮದ ಪ್ರಭಾವವೂ ಅವರ ಮೇಲೆ ಸಾಕಷ್ಟು ಪರಿಣಾಮ ಬೀರಿತ್ತು. ನಾಡಿನ ನಾಡಿಯಾದ ಕವಿ ತನ್ನ ಕಾಲದ ಜನರ ಆಸೆ ಆದರ್ಶಗಳಿಗೆ ತನ್ನ ಕಾವ್ಯದಲ್ಲಿ ಮಾತಿನ ರೂಪವನ್ನು ಕೊಟ್ಟಿರುವುದೂ ಉಂಟು. ನಮ್ಮ ಕವಿಗಳ ಆಶಯವನ್ನೇ 'ಕವಿರಾಜಮಾರ್ಗ'ಕಾರ ಹೀಗೆ ನುಡಿದ : 'ಪಾಪಮಿದು ಪುಣ್ಯಮಿದು ಹಿತ ರೂಪಮಿದಹಿತ ಪ್ರಕಾರಮಿದು ದುಃ ಖೋಪಾತ್ತಮಿದು' ಎಂದು ಮಹಾಕವಿಗಳು ತಮ್ಮ ಕಾವ್ಯಗಳಲ್ಲಿ ನಮಗೆ ತಿಳಿಸಿಕೊಡುತ್ತಾರೆ.

ಸಾಹಿತ್ಯದ ಉದ್ದೇಶ ಕೇವಲ ಮನರಂಜನೆಯಲ್ಲ. ಕಥೆ ಹೇಳಿ ಬೇಸರ ನೀಗುವುದೂ ಅಲ್ಲ. ಸಾಹಿತ್ಯವು ಜ್ಞಾನೋದಯವನ್ನುಂಟುಮಾಡಬೇಕು ; ಬದುಕನ್ನು ಸಂಪನ್ನಗೊಳಿಸಬೇಕು ; ಉದಾತ್ತತೆಯನ್ನು ಪ್ರೇರಿಸಬೇಕು. ಮಾನವ ಸಮಾಜದಲ್ಲಿ ತಲೆತಲಾಂತರಗಳಿಂದ ನಾನಾ ಬಗೆಯ ಆಚಾರವಿಚಾರಗಳು, ನೀತಿನಡವಳಿಗಳು ಇವೆ. ಅಜ್ಞಾನದಿಂದಲೋ ಅವಿವೇಕದಿಂದಲೋ ಅವುಗಳೊಂದಿಗೆ ಅಸಂಬದ್ಧತೆಗಳು, ಅಸಂಗತಗಳು, ಆಡಂಬರ-ಆಷಾಢಭೂತಿತನಗಳೂ ಸೇರಿ ಅವನ್ನು ಅರ್ಥಹೀನಗೊಳಿಸುತ್ತಿವೆ. ಅವನ್ನು ಕಾಲಕಾಲಕ್ಕೆ ವಿಚಾರದ ಬೆಳಕಿನಲ್ಲಿ ಒರೆಹಚ್ಚಿ ವಿವೇಕದಿಂದ ಪರಿಶೀಲಿಸಿ ಅವುಗಳ ಪ್ರಸ್ತುತತೆಯನ್ನು ಖಾತ್ರಿಪಡಿಸಿಕೊಳ್ಳಬೇಕಾಗುತ್ತದೆ. ಸಾಹಿತ್ಯ ಇದನ್ನು ಆಗುಮಾಡಬೇಕು. ನಮ್ಮ ಕವಿಗಳು ಶಬ್ದಾರ್ಥ ಕಲೆಯನ್ನು ಈ ಘನೋದ್ದೇಶಕ್ಕಾಗಿ ಸಮರ್ಥವಾಗಿ ದುಡಿಸಿಕೊಂಡಿದ್ದಾರೆ. ಸಾಹಿತ್ಯದ ಸವಿಯೊಡನೆ ಜೀವನದರ್ಶನದ ಕಹಿಗುಳಿಗೆಯನ್ನು ನುಂಗಿಸಿ ಜನತೆಯ, ಆ ಮೂಲಕ ಸಮಾಜದ ಜಾಡ್ಯವನ್ನು ನೀಗಲು ಯತ್ನಿಸಿದ್ದಾರೆ.

ನಮ್ಮ ಅನೇಕ ಕವಿಗಳು ವಿಕಸನಶೀಲ ಬದುಕಿನ ಸೂಕ್ಷ್ಮತೆಗಳನ್ನು ಅರ್ಥಮಾಡಿಕೊಂಡು, ತಾನು ಬದುಕಿರುವ ಕಾಲ ಮತ್ತು ಸಮಾಜದ ಹಿನ್ನೆಲೆಯಲ್ಲಿ ಅವುಗಳನ್ನಿಟ್ಟು ತೂಗಿ ನೋಡಿ ಕೃತಿರಚನೆಮಾಡಿರುವುದಿದೆ. ಹಿಂದಿನದನ್ನು ನೆನಪಿಸುವುದು ಇಂದಿನದನ್ನು ಬಿಂಬಿಸುವುದು ಹಾಗೂ ಮುಂದಿನದನ್ನು ರೂಢಿಸುವುದು ಸಾಹಿತ್ಯದ ಉದ್ದೇಶ ತಾನೇ ? ಹೀಗಾಗಿ ಅನೇಕ ಕನ್ನಡ ಕಾವ್ಯಗಳು ಕಾಲ ದೇಶ ಭಾಷಾದಿ ಸಂಕುಚಿತ ಎಲ್ಲೆಯನ್ನು ಇಕ್ಕಿ ಮೆಟ್ಟಿ ಜಾಗತಿಕ ಮೌಲ್ಯವನ್ನು ಪಡೆದಿವೆ.

ಕಾವ್ಯೋದ್ದೇಶದ ಬಗ್ಗೆ ನಮ್ಮ ಕವಿಗಳಲ್ಲಿ ಕೆಲವರು ತಳೆದ ನಿಲವು ಬೆರಗುಗೊಳಿಸುವಂಥದ್ದು. ರಾಜರನ್ನು ಹೊಗಳುವುದು, ಪಂಡಿತಮಂಡಳಿಯನ್ನು ಮೆಚ್ಚಿಸುವುದು, ಬಿರುದು ಬಾವಲಿಗಳನ್ನು ಗಿಟ್ಟಿಸುವುದು - ಇವೇ ಕವಿಯ ಗುರಿಯಾಗಬಾರದು ಎನ್ನುತ್ತಾರೆ ಅವರು. ಕಾವ್ಯಶಕ್ತಿ ಭಗವಂತನ ದೇಣಿಗೆ. ದೈವಾಯತ್ತವಾದ ಈ ಅಪೂರ್ವ ಶಕ್ತಿಯನ್ನು ಭಗವದಾರಾಧನೆಗೇ ಬಳಸಬೇಕೆಂದವರಿದ್ದಾರೆ; 'ಜನ ಬದುಕಲೆಂದು' ಕೃತಿರಚನೆ ಮಾಡಬೇಕೆಂದವರಿದ್ದಾರೆ. ಅರಮನೆ, ಗುರುಮನೆಗಳಲ್ಲಿ ಬಂದಿಯಾಗಿದ್ದ ಸಾಹಿತ್ಯವನ್ನು ಜನಮುಖವಾಗಿಸಿದವರಿದ್ದಾರೆ. ಕೇವಲ ಕೆಲವರ ಸ್ವತ್ತಾಗಿದ್ದ, ತುತ್ತಾಗಿದ್ದ ಸಾಹಿತ್ಯಸಂಪದವನ್ನು ಹಲವರದಾಗಿಸುವ ಪ್ರಯತ್ನ ಅವರದು. ದಿನಬಳಕೆಯ ಜನವಾಣಿಯನ್ನೇ ಕಾವ್ಯಭಾಷೆಯಾಗಿ ಬಳಸಿ ಶ್ರೀಸಾಮಾನ್ಯರ ಬಗ್ಗೆ ಕಾಳಜಿ ತೋರಿ ಕ್ರಾಂತಿಯನ್ನೆಸಗಿದ ನಿದರ್ಶನಗಳು ಕನ್ನಡ ಸಾಹಿತ್ಯ ಲೋಕದಲ್ಲಿ ಉಂಟು. ನಮ್ಮಲ್ಲಿ ಸಾಹಿತ್ಯದೊಡನೆ ಸಂಗೀತವನ್ನು ಮೇಳವಿಸಿ ಜನರಿಗೆ ಇನ್ನಷ್ಟು ಪ್ರಭಾವಪೂರ್ಣವಾಗಿ ಸಾಹಿತ್ಯದ ಸವಿಗಾಣಿಸಿದ ಹಾಡುಗಬ್ಬಕಾರರಿದ್ದಾರೆ. ಸಂಸ್ಕೃತದ ಕ್ಲಿಷ್ಟ ಕಾವ್ಯಮಾರ್ಗವನ್ನುಳಿದು ದೇಶೀಯ ಛಂದಸ್ಸುಗಳಾದ ಷಟ್ಪದಿ, ರಗಳೆ, ತ್ರಿಪದಿ, ಸಾಂಗತ್ಯಗಳನ್ನು ಬಳಸಿ ಕನ್ನಡತನವನ್ನು ಮೆರೆದ ನಿದರ್ಶನಗಳೂ ಇವೆ. ಹೀಗಾಗಿ ಕನ್ನಡಸಾಹಿತ್ಯ ನಿಂತ ನೀರಾಗದೆ ಬದಲಾದ ಕಾಲಕ್ಕೆ, ಪರಿಸ್ಥಿತಿಗೆ ತಕ್ಕಂತೆ ವಸ್ತು ಮತ್ತು ಮಾಧ್ಯಮಗಳಲ್ಲಿ ಬದಲಾವಣೆಗಳನ್ನು ಪಡೆದುಕೊಂಡು ಹೊಸತನವನ್ನು ಮೈಗೂಡಿಸಿಕೊಂಡು ನಿತ್ಯನೂತನ ಪ್ರವಾಹವಾಗಿ ಸಾಗಿರುವುದು ಕಂಡುಬರುತ್ತದೆ. ಇಂಥ ಸಾಹಿತ್ಯವಾಹಿನಿಯ ಸೊಬಗನ್ನು ಪುಟ್ಟ ಲೇಖನವೊಂದರಲ್ಲಿ ಸೆರೆಹಿಡಿಯುವುದು ಕಷ್ಟ. ಕನ್ನಡ ಸಾಹಿತ್ಯದ ಒಂದೆರಡು ಪ್ರಕಾರಗಳು, ಒಬ್ಬಿಬ್ಬರು ಕವಿಗಳನ್ನು ನಿದರ್ಶನವಾಗಿ ತೆಗೆದುಕೊಂಡು ನಮ್ಮ ಸಾಹಿತ್ಯದ ಸೊಬಗಿನ 'ಕ್ಷಣದರ್ಶನ' ಮಾಡಿಸುವ ಪ್ರಯತ್ನ ಮಾಡಲಾಗಿದೆ.

**ಶಾಸನ ಸಾಹಿತ್ಯ** : ಕನ್ನಡದಲ್ಲಿ ನಮಗೆ ಲಭ್ಯವಾಗಿರುವ ಪ್ರಾಚೀನ ಶಾಸನ ಹಲ್ಮಿಡಿ (ಕ್ರಿ.ಶ. 450). ಕಲ್ಲಿನಲ್ಲಿ ಕೆತ್ತಿದ, ಲೋಹದ ತಗಡುಗಳ ಮೇಲೆ ಕಂಡರಿಸಿದ ಸಾವಿರಾರು ಶಾಸನಗಳು ನಮಗೆ ದೊರಕಿವೆ. ಶಾಸನಗಳ ಉದ್ದೇಶವನ್ನು ಅನುಲಕ್ಷಿಸಿ ಅವನ್ನು ಮಾಸ್ತಿಕಲ್ಲು, ವೀರಗಲ್ಲು, ದಾನಶಾಸನ ಎಂದು ಮುಂತಾಗಿ ವಿಭಾಗಿಸಬಹುದು. 'ಸಂಸ್ಕೃತಿಯ ನಿಶಾನೆಗಳು' ಎಂಬ ಅಗ್ಗಳಿಕೆ

ಪಡೆದ ಶಾಸನಗಳು ಐತಿಹಾಸಿಕ ದಾಖಲೆಗಳು. ಅವುಗಳಲ್ಲಿ ಅಂಕಿ-ಅಂಶಗಳಿಗೆ ಪ್ರಾಶಸ್ತ್ಯ. ಸ್ವಾರಸ್ಯದ ಮಾತೆಂದರೆ ಅಂಥ ಕೆಲವು ಶಾಸನಗಳು ಸುಂದರ ಕಾವ್ಯಗಳಾಗಿವೆ. ಕಗ್ಗಲ್ಲಿನಲ್ಲಿ ಮಧುರ ಕಾವ್ಯಲತೆಯನ್ನು ಕೊನರಿಸಿದ ಕೀರ್ತಿ ಅವಕ್ಕಿದೆ. ಈ ದೃಷ್ಟಿಯಿಂದ 5 ನೆಯ ಶತಮಾನದ ಕಪ್ಪೆ ಅರಭಟ್ಟನ ಬಾದಾಮಿ ಶಾಸನ ಮಹತ್ವದ್ದಾಗಿದೆ :

*ಸಾಧುಗೆ ಸಾಧು ಮಾಧುರ್ಯ್ಯಂಗೆ ಮಾಧುರ್ಯ್ಯಂ*
*ಬಾಧಿಪ್ಪ ಕಲಿಗೆ ಕಲಿಯುಗ ವಿಪರೀತನ್*
*ಮಾಧವನೀತನ್ ಪೆರನಲ್ಲ ॥*

ಕನ್ನಡ ಸಾಹಿತ್ಯದ ಸಂದರ್ಭವನ್ನು ಕುರಿತು ಹೇಳುವಾಗ ಒಬ್ಬನನ್ನು ಹೊಗಳಿ ವೈಭವೀಕರಿಸಿದ ಶಾಸನವಾಗಲೀ, ಕಾವ್ಯವಾಗಲೀ ಅಷ್ಟಕ್ಕೇ ಸೀಮಿತವಾಗಿದೆಯೆನ್ನುವಂತಿಲ್ಲ. ಅದು ಆ ಕಾಲದ ಸಮಾಜದ ಬೆಲೆಕಟ್ಟುವ ರೀತಿಯನ್ನು ತೋರಿಸುತ್ತದೆ. ಆಗಿನ ಜನ ಬಯಸುವ ಮಾನವೀಯ ಗುಣಗಳು ಎಂಥವು ? ಅವು ನಾಯಕನಲ್ಲಿ ಅವಶ್ಯವಾಗಿ ಇರಬೇಕು. ಆದರಿಂದಾಗಿ ಆತ ದೇವರ ಮಟ್ಟಕ್ಕೆ ಏರುತ್ತಾನೆ. ಆತ ಸಾಕ್ಷಾತ್ ಮಾಧವನೇ, ಬೇರೆಯಲ್ಲ ಎಂಬ ವಿಶ್ವಾಸ ಇಲ್ಲಿ ಧ್ವನಿತವಾಗಿದೆ. ಕ್ರಿ. ಶ. ೭೦೦ ಶ್ರವಣಬೆಳಗೊಳದ ೮೮ ನೇ ಶಾಸನವಂತೂ ಕಾವ್ಯಗುಣದಲ್ಲಿ ಮೇಲ್ಮಟ್ಟದ್ದು. ಜೈನಯತಿಯೊಬ್ಬನ ಪರಮವೈರಾಗ್ಯದ ನಿಲವನ್ನು ಅದು ಚಿತ್ರಿಸುತ್ತದೆ. ಅದೊಂದು ಕಲ್ಲಿನಲ್ಲಿ ಮೂಡಿದ ಉದಾತ್ತ ಭಾವನೆಯ ಉತ್ಕೃಷ್ಟ ಕಾವ್ಯ :

*ಸುರಚಾಪಂಬೋಲೆ ವಿದ್ಯುಲ್ಲತೆಗಳ ತೆರವೋಲ್ ಮಂಜುವೋಲ್ ತೋರಿ ಬೇಗಂ*
*ಪಿರಿಗುಂ ಶ್ರೀರೂಪ ಲೀಲಾಧನ ವಿಭವ ಮಹಾರಾಶಿಗಳ್ ನಿಲ್ಲವಾರ್ಗಂ*
*ಪರಮಾರ್ಥಂ ಮೆಚ್ಚೆನಾನೀ ಧರಣಿಯುಳಿರಮಾನೆಂದು ಸಂನ್ಯಸನಂಗೆ*
*ಯ್ದುರುಸತ್ವನ್ ನಂದಿಸೇನಪ್ರವರ ಮುನಿವರನ್ ದೇವಲೋಕಕ್ಕೆ ಸಂದಾನ್ ॥*

(ಕಾಮನಬಿಲ್ಲು, ಮಿಂಚು, ಮಂಜಿನ ಹನಿಗಳು ತೋರಿ ಕಾಣೆಯಾಗುವಂತೆ ಸಂಪತ್ತು ಐಶ್ವರ್ಯ ಚೆಲುವು ವೈಭವಗಳು ಯಾರಲ್ಲಿಯೂ ಶಾಶ್ವತವಾಗಿ ನಿಲ್ಲವು. ಇದು ನಿಶ್ಚಯ. ಆದ್ದರಿಂದ ನಾನು ಈ ನೆಲದ ಮೇಲಣ ಬದುಕನ್ನು ಮೆಚ್ಚುವುದಿಲ್ಲ ಎಂದು ಸಂನ್ಯಾಸ ಸ್ವೀಕರಿಸಿದ ಮಹಾಸತ್ತ್ವಯುತನಾದ ನಂದಿಸೇನನೆಂಬ ಮುನಿಶ್ರೇಷ್ಠನು ದೇವಲೋಕಕ್ಕೆ ಹೋದನು.)

ಮುಂದೆ ಕ್ರಿ.ಶ. ೧೦೫೭ರ ದೇಕಬ್ಬೆ ಶಾಸನ (ಮಾಸ್ತಿಕಲ್ಲು)ವಂತೂ ಅಮರ ಕಾವ್ಯವೇ ಆಗಿದೆ. ಹೀಗೆ ಶಾಸನ ಸಾಹಿತ್ಯವೂ ಸಹ ರಸಸ್ಯಂದಿಯಾದ ಸೊಬಗಿನಿಂದ ಕೂಡಿದೆ.

**ಪಂಪ** : ಕಾಲದ ದೃಷ್ಟಿಯಿಂದ ಮಾತ್ರವಲ್ಲ, ಸತ್ವದ ದೃಷ್ಟಿಯಿಂದಲೂ ಕನ್ನಡದ ಆದಿಕವಿಯೆನಿಸಿದವನು ಪಂಪ. ಹತ್ತನೆಯ ಶತಮಾನದ ಕಾಲಖಂಡವನ್ನು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ 'ಪಂಪಯುಗ'ವೆಂದು ಕರೆಯಲಾಗಿದೆ. ಪಂಪನ ಕಾಲದಲ್ಲಿ ಕಾವ್ಯನಿರ್ಮಾಣಕ್ಕೆ

ಮುಕ್ತವಾತಾವರಣವಿರಲಿಲ್ಲ. ಕಾವ್ಯದ ವಸ್ತು, ಕಾವ್ಯ ಪ್ರಕಾರಗಳ ಆಯ್ಕೆಯಲ್ಲೂ ಆತನಿಗೆ ಸ್ವಾತಂತ್ರ್ಯವಿರಲಿಲ್ಲ. ಕವಿಯು ಸಿದ್ಧವಾದ ಸಾಂಪ್ರದಾಯಿಕ ಚೌಕಟ್ಟಿನೊಳಗೆ ಕೆಲಸಮಾಡಬೇಕಿತ್ತು. ಉದಾಹರಣೆಗೆ ಕಾವ್ಯದ ವಸ್ತು ರಾಮಾಯಣ, ಮಹಾಭಾರತಗಳೇ ಆಗಬೇಕಿತ್ತು. ಆ ವಸ್ತುವನ್ನು ಚಂಪೂರೂಪದಲ್ಲೇ ಕಾವ್ಯ ಕಟ್ಟಿ ಹೇಳಬೇಕಿತ್ತು. ಕಾವ್ಯಬಂಧ ಸುಪ್ರೌಢವಾಗಿದ್ದು ಅದರಲ್ಲಿ ಹದಿನೆಂಟು ಬಗೆಯ ವರ್ಣನೆಗಳು (ಅಷ್ಟಾದಶ ವರ್ಣನೆ) ಇರಲೇಬೇಕಿತ್ತು. ರಾಜಾಸ್ಥಾನದ ಪಂಡಿತ ಮಂಡಳಿಯ ಆದರ ಗಳಿಸಿದರೆ ಮಾತ್ರ ಅದಕ್ಕೆ ಮನ್ನಣೆ !

ಇಂಥ ಇಕ್ಕಟ್ಟು, ಇತಿಮಿತಿಗಳ ನಡುವೆ ಕಾವ್ಯಕ್ರಿಯೆ ನಡೆಸಿದರೂ ಪಂಪನದು ನಿರ್ದಿಷ್ಟಧೋರಣೆ. ಅವನ ಉದ್ದೇಶ ಪೋಷಕನ ( ರಾಜ ಅರಿಕೇಸರಿ) ಮನಸ್ಸಂತೋಷ ಮತ್ತು ಪಂಡಿತರ ತೃಪ್ತಿ. ಆದರೆ ಅವನ ಅಪೂರ್ವ ಪ್ರತಿಭಾಸಂಪನ್ನತೆ ಮತ್ತು ವಿಶಿಷ್ಟ ಅಭಿವ್ಯಕ್ತಿ ಸಾಮರ್ಥ್ಯದಿಂದಾಗಿ ನೂರ್ಕಾಲ ಬಾಳುವ, 'ನಿಚ್ಚ ಪೊಸತು' ಎನಿಸುವ ಎರಡು ಮಹಾಕಾವ್ಯಗಳನ್ನು ಆತ ನೀಡಿದ್ದಾನೆ. ಒಂದು ಮಹಾಭಾರತದ ವಸ್ತುವುಳ್ಳ 'ವಿಕ್ರಮಾರ್ಜುನ ವಿಜಯ', ಇನ್ನೊಂದು ಆದಿತೀರ್ಥಂಕರನ ಜೀವನ ಸಾಧನೆ ಕುರಿತ 'ಆದಿ ಪುರಾಣ'. 'ಬೆಳಗುವೆನಿಲ್ಲಿ ಲೌಕಿಕಮಂ ಅಲ್ಲಿ ಜಿನಾಗಮಮಂ' ಎಂದು ಕವಿಯೇ ಹೇಳಿರುವಂತೆ ಅವುಗಳಲ್ಲಿ ಕ್ರಮವಾಗಿ ಲೌಕಿಕ ಮತ್ತು ಪಾರಮಾರ್ಥಿಕ ವಿಚಾರಗಳನ್ನು ನಿರೂಪಿಸಿದ್ದಾನೆ.

ಪಂಪ ಬದುಕಿದ್ದುದು ಒಂದು ವೀರಯುಗದಲ್ಲಿ. ಅದು ಕ್ಷಾತ್ರತೇಜ ಮಿನುಗುತ್ತಿದ್ದ ಕಾಲ. ಪಂಪನೇ ಸ್ವತಃ ಕಲಿ ಹಾಗೂ ಕವಿ. ಖಡ್ಗ ಹಿಡಿದಾಗ ಕದನ, ಕಂಠ ಹಿಡಿದಾಗ ಕಾವ್ಯ ! 'ಪಂಪ ಭಾರತ' ಎಂದೇ ಪ್ರಖ್ಯಾತವಾಗಿರುವ ಆತನ 'ವಿಕ್ರಮಾರ್ಜುನ ವಿಜಯ'ದಲ್ಲಿ ಪಂಪನು ವ್ಯಾಸಭಾರತವನ್ನು ಅನುಸರಿಸಿದ್ದರೂ ಅದರಲ್ಲಿ ತನ್ನ ಆಶ್ರಯದಾತ ಚಾಲುಕ್ಯದೊರೆ ಅರಿಕೇಸರಿಯ ಕಥೆಯನ್ನು ಬೆರಸಿ ಕಾವ್ಯ ರಚಿಸಿದ್ದಾನೆ. ಅರ್ಜುನನನ್ನು ನಾಯಕನನ್ನಾಗಿ ಮಾಡಿದ್ದರಿಂದ ಕೆಲವು ಮಾರ್ಪಾಟುಗಳು ಅನಿವಾರ್ಯವಾದವು. ಮೂಲಕಥೆಯ ಚಿನ್ನವನ್ನು ಶೋಧಿಸಿ ತನ್ನ ಸೃಜನಶೀಲ ಕಲಾತ್ಮಕತೆಯಿಂದ ಎರಕಹೊಯ್ದು ಒಪ್ಪವಿಟ್ಟು ಹೊಸ ಪುತ್ಥಳಿಯನ್ನು ಪಂಪ ತಯಾರಿಸಿದ್ದಾನೆ. ಅವನ ಕಾವ್ಯ ಜನಮನವನ್ನು ಸೂರೆಗೊಂಡಿತು. ಇದಕ್ಕೆ ಕಾರಣ ಅವನ ಅನನ್ಯವಾದ ಕಾವ್ಯರಚನಾಶಕ್ತಿ. ಸಾವಿರ ಮಾತುಗಳಲ್ಲಿ, ನೂರು ಸಾಲುಗಳಲ್ಲಿ, ಹತ್ತು ಪದ್ಯಗಳಲ್ಲಿ ಹೇಳುವ ಕಥಾ ವಿಷಯವನ್ನೆಲ್ಲಾ ಪಂಪ ಕೆಲವೇ ಮಾತುಗಳಲ್ಲಿ, ನಾಲ್ಕು ಪಂಕ್ತಿಗಳಲ್ಲಿ, ಒಂದು ಪದ್ಯದಲ್ಲಿ ಕಟ್ಟಿಕೊಟ್ಟಿದ್ದಾನೆ. ಕೆಲವೇ ರೇಖೆಗಳಲ್ಲಿ ಒಂದು ಜೀವಂತ ಚಿತ್ರ ಕೊಡುವ ಅದ್ಭುತ ಕಲಾವಿದನಂತೆ ಪಂಪ ಕಾಣುತ್ತಾನೆ.

ಭಾರತದ ಕಥೆಯ ಹಿನ್ನೆಲೆಯಲ್ಲಿ ಪಂಪನು ಜೀವನದ ಹತ್ತು ಹಲವು ಮುಖಗಳು, ಲೌಕಿಕ ವಿಚಾರಗಳು, ಸಂಘರ್ಷಗಳು, ಮಾನಸಿಕ ತೊಳಲಾಟಗಳು, ಜೀವನದ ಮೌಲ್ಯಗಳು,

ಮೊದಲಾದುವನ್ನು ಪ್ರಸ್ತಾಪಿಸಿದ್ದಾನೆ. ಮಾನವನ ಪ್ರೀತಿ, ವಿಶ್ವಾಸ, ಅನುಕಂಪೆ, ಸಹಾನುಭೂತಿ, ಗೌರವ, ಸ್ನೇಹಭಾವ, ಮಾತ್ಸರ್ಯ, ಮದ ಮೊದಲಾದ ಭಾವಗಳು ಕಾವ್ಯದಲ್ಲಿ ಮೂಡಿವೆ. ಅಲ್ಲಿನ ಜೂಜಿನ ಪ್ರಸಂಗ, ಭೀಮ ಪ್ರತಿಜ್ಞೆ, ಭೀಷ್ಮರ ಸೇನಾ ಪಟ್ಟದ ಸನ್ನಿವೇಶ, ದುಶಾಸನನ ವಧೆ, ಕರ್ಣಾರ್ಜುನ ಕಾಳಗ, ಗದಾಯುದ್ಧ ಪ್ರಸಂಗಗಳು ಅಪೂರ್ವ ಕಾವ್ಯಗುಣದಿಂದ ಕೂಡಿ ಜನಮನದ ಮೇಲೆ ಅಳಿಸಲಾಗದ ಪ್ರಭಾವ ಬೀರುವಂತಿವೆ.

''ಮಾನವ ಜಾತಿ ಒಂದೆ ವಲಂ'' - ಇದು ಪಂಪನ ಧ್ಯೇಯ ವಾಕ್ಯ. ಆತನದು ವಿಶ್ವವ್ಯಾಪಕ ದೃಷ್ಟಿ. ಜಾತಿ ಮತ ಧರ್ಮಗಳ ಹೆಸರಿನಲ್ಲಿ, ಒಂದಾದ ಮಾನವಕುಲ ಹೇಗೆ ಒಡೆದು ಭಾಗಗಳಾಗಿದೆ ಎಂಬುದನ್ನು ಆತ ಬಲ್ಲ. ತನ್ನ ಕಾವ್ಯದಲ್ಲಿ ಪಂಪ ಜಾತಿ ಪ್ರಶ್ನೆಯನ್ನು ಎತ್ತಿದ್ದಾನೆ. ಮೇಲು ಕೀಳೆಂಬ ವಾದ-ವಿವಾದವೂ ಬಂದಿದೆ. ಆದರೆ ಅಲ್ಲಿ 'ಗುಣಂ ಕುಲಂ ಛಲಂ ಕುಲಂ, ಅಣ್ಮು ಕುಲಂ, ಅಭಿಮಾನಮೊಂದೆ ಕುಲಂ' ಎಂಬ ವಿವೇಕವನ್ನು ಎತ್ತಿ ಹಿಡಿದಿರುವುದು ಕಂಡುಬರುತ್ತವೆ. ಅದರಂತೆ ಮೂಢನಂಬಿಕೆ ಹಾಗೂ ಅಂಧಶ್ರದ್ಧೆಗಳ ಬಗ್ಗೆಯೂ ಟೀಕೆ ಬಂದಿದೆ.

'ಆದಿಪುರಾಣ' ಪಂಪನ ಇನ್ನೊಂದು ಮಹತ್ಕೃತಿ. ಇದು ಧಾರ್ಮಿಕ ಕಾವ್ಯ. ಧರ್ಮ ಪ್ರಚಾರಕ್ಕೆ ಸಾಹಿತ್ಯವನ್ನು ಒಂದು ಮಾಧ್ಯಮವಾಗಿ ಬಳಸುವ ಪರಿಪಾಠ ಬಹಳ ಹಿಂದಿನದು. ಅಹಿಂಸೆ, ಜೀವದಯೆ, ನಿಷ್ಕಪಟ ಜೀವನ ಮೊದಲಾದ ಮೌಲ್ಯಗಳಿಗೆ ಜೈನಕವಿಗಳ ಕೊಡುಗೆ ಅಪಾರವಾದುದು. ಆದಿತೀರ್ಥಂಕರನ ಜೀವನ ಚರಿತ್ರೆಯ ಹಿನ್ನೆಲೆಯಲ್ಲಿ ಪಂಪಕವಿ ಜೀವನು ದೇವನಾಗಲು ಸಾಗುವ ನಿರಂತರ ಯಾತ್ರೆಯನ್ನು ನಮ್ಮ ಕಣ್ಣೆದುರು ನಿಲ್ಲಿಸಿದ್ದಾನೆ. ಜನ್ಮಜನ್ಮಾಂತರದ ಕಥೆಗಳ ಮೂಲಕ ಜೀವನ ವಿಕಾಸಗತಿಯನ್ನು ಚಿತ್ರಿಸಿರುವ ರೀತಿ ವಿನೂತನವಾಗಿದೆ. ಒಂದು ಕಡೆ ಜೀವನನ್ನು ಕರ್ಮದ ಆವರಣಗಳು ಆವರಿಸುವುದು ; ಇನ್ನೊಂದು ಕಡೆ ಆ ಆವರಣಗಳು ಕಳಚುತ್ತಾ ಕರ್ಮನಿರ್ಜರೆಯಾಗುವ ಚಿತ್ರ ಕಾವ್ಯದಲ್ಲಿ ರೋಚಕವಾಗಿ ಚಿತ್ರಿತವಾಗಿದೆ. ಪಾಪದ ಪರಿಣಾಮವಾಗಿ ದೊರಕುವ ನರಕದ ಘೋರಚಿತ್ರ ಎಂಥವರ ಎದೆಯನ್ನೂ ನಡುಗಿಸುತ್ತದೆ. ವೈರಾಗ್ಯ ಪ್ರತಿಪಾದನೆಯೂ ಸಹ ಹೃದ್ಯವಾಗಿ ಬಂದಿದೆ. ಧರ್ಮ ಮತ್ತು ಕಾವ್ಯಧರ್ಮಗಳೆರಡನ್ನೂ ಈ ಕಾವ್ಯದಲ್ಲಿ ಕವಿ ಸಾಧಿಸಿರುವುದೊಂದು ಹೆಚ್ಚುಗಾರಿಕೆ. ಆದಿಪುರಾಣವನ್ನು ರಚಿಸುವಲ್ಲಿ ಪಂಪ ಧರ್ಮಶ್ರದ್ಧೆಯನ್ನು ತೋರಿದ್ದಾನೆಯೇ ಹೊರತು ಅಂಧಾಭಿಮಾನವನ್ನಲ್ಲ. ಜೈನಧರ್ಮದ ಮಾನವೀಯ ಮೌಲ್ಯಗಳ ಕಡೆಗೆ ಆತ ಒತ್ತುಕೊಟ್ಟಿದ್ದಾನೆ. ಹೀಗಾಗಿ ಆತ ಚಿತ್ರಿಸಿರುವ ಪಾತ್ರಗಳು ಮಾನವ ಗುಣ-ದೋಷಗಳ ಪ್ರತೀಕವಾಗಿ ನಮ್ಮ ಮುಂದೆ ನಿಲ್ಲುತ್ತವೆ. ಆದರೆ ಅವುಗಳ ಅಂತಿಮ ಗುರಿಯ ಉದಾತ್ತತೆಯಿಂದಾಗಿ ನಮ್ಮ ಮನ ತುಂಬಿನಿಲ್ಲುತ್ತವೆ.

ಪಂಪ ತನ್ನ ಸಮಗ್ರ ಜೀವನಾನುಭವ, ಅಸಾಧಾರಣ ಪ್ರತಿಭಾ ಶಕ್ತಿ, ಸಮನ್ವಯ ಬುದ್ಧಿಗಳಿಂದ ಎರಡು ಮಹಾಕಾವ್ಯಗಳನ್ನು ನೀಡುವುದರ ಮೂಲಕ ಕಾವ್ಯಮಾರ್ಗದಲ್ಲಿ ಒಂದು ಸಂಪ್ರದಾಯವನ್ನೇ ಹಾಕಿದಂತಾಗಿ ಮುಂದೆ ರನ್ನ, ಪೊನ್ನ ಮೊದಲಾದ ಕವಿಗಳನೇಕರು

ಅವನನ್ನು ಅನುಸರಿಸಿದ್ದುಂಟು. 'ಪಸರಿಪ ಕನ್ನಡಕ್ಕೆ ಒರ್ವನೆ ಸತ್ಕವಿ ಪಂಪನಾವಗಂ' ಎಂಬ ನಾಗರಾಜಕವಿಯ ಮಾತು ನಿಜವೆನಿಸುತ್ತದೆ.

**ವಚನ ಸಾಹಿತ್ಯ** : 'ಕನ್ನಡ ಸಾಹಿತ್ಯದ ಜೀವರತ್ನಗಳು, ಕನ್ನಡ ನುಡಿಯ ಚೆಲುವುಗಳು. ಕನ್ನಡದ ಉಪನಿಷತ್ತುಗಳೆಂಬ' ಅಗ್ಗಳಿಕೆಯುಳ್ಳ ವಚನಗಳು ಮೂಡಿದ್ದು ಶಿವಶರಣರ ಹೃದಯದಿಂದ. ಇದು ಹನ್ನೆರಡನೆಯ ಶತಮಾನದ ಆವಿಷ್ಕಾರ. ಸಮಾಜವಲ್ಲಿ ಎಲ್ಲ ಸೌಲಭ್ಯಗಳೂ ಮೇಲುವರ್ಗದವರಿಗೆ ದೊರಕಿ ಕೆಳವರ್ಗದವರು ಅವರ ತುಳಿತಕ್ಕೆ ಒಳಗಾಗಿದ್ದ ಕಾಲವದು. ಪರಿಸ್ಥಿತಿಯ ಒತ್ತಡದಿಂದ ಮೂಲೆಗುಂಪಾಗಿದ್ದ ದೀನ ದಲಿತರಲ್ಲಿ ಮನೆ ಮಾಡಿದ್ದ ಕೀಳರಿಮೆಯನ್ನು ನೀಗಿ ಅವರಲ್ಲಿ ಆತ್ಮವಿಶ್ವಾಸ ಮೂಡಿಸಿ ಸರಿಸಮಾನರಂತೆ ನಡೆಸಿಕೊಂಡರು ಶರಣರು. ತಮ್ಮ ವಂಶದ, ಪದವಿಯ, ಸ್ಥಾನಮಾನದ ಹುಸಿಗೌರವವನ್ನು, ಬಿಗುಮಾನವನ್ನು ದೂರವಿಟ್ಟು ಶ್ರೀಸಾಮಾನ್ಯರೊಡನೆ ತಮ್ಮನ್ನು ಸಮೀಕರಿಸಿಕೊಂಡ ಅವರು ದಲಿತೋದ್ಧರಣ ಕಾರ್ಯವಲ್ಲಿ ತೊಡಗಿದರು. ಸರ್ವಸಮಾನತೆಯ ಸಮಾಜ ರಚನೆ ಅವರ ಮಹೋದ್ದೇಶವಾಗಿತ್ತು. ವೃತ್ತಿಯಲ್ಲಿ ಮೇಲು-ಕೀಳೆಂಬ ಭಾವವಿಲ್ಲದೆ ದುಡಿಮೆಗೆ ಹೆಚ್ಚಿನ ಪ್ರಾಮುಖ್ಯತೆ ನೀಡಿವರು. ಸತ್ಯಶುದ್ಧ ದುಡಿಮೆ 'ಕಾಯಕ'ವೆನಿಸಿಕೊಳ್ಳುತ್ತದೆ ಎಂದು ವೃತ್ತಿಗೌರವವನ್ನು ಎತ್ತಿ ಹಿಡಿದರು. ಪರಿಣಾಮವಾಗಿ ಒಂದು ಆರೋಗ್ಯಕರ ಕ್ರಿಯಾಶೀಲ ಸಮಾಜ ನಿರ್ಮಾಣವಾಯಿತು.

ಹೀಗೆ ಜನಪರವಾದ ದೃಷ್ಟಿಯಿಂದ ಮಾನವ ಹಿತಸಾಧನೆಯಲ್ಲಿ ತೊಡಗಿದ್ದ ಶಿವಶರಣರು ತಮ್ಮ ಘನೋದ್ದೇಶಗಳ ಬಗ್ಗೆ ಜನರಿಗೆ ತಿಳಿವಳಿಕೆ ನೀಡಲು ಸಾಹಿತ್ಯವನ್ನು ಒಂದು ಮಾಧ್ಯಮವಾಗಿ ಬಳಸಿದರು. ಜೊತೆಗೆ ರಾಜಾಶ್ರಯದಲ್ಲೆ ಬೆಳೆಯುತ್ತಾ, ಕೇವಲ ಕೆಲವರ ರಂಜನೆಗಾಗಿ ಸಂಸ್ಕೃತಮಯ ಪ್ರೌಢಭಾಷೆಯಲ್ಲಿದ್ದ ಸಾಹಿತ್ಯವು ಜನಸಾಮಾನ್ಯರಿಂದ ದೂರ ಉಳಿದಿತ್ತು. ನಿತ್ಯಬಳಸುವ ಆಡುಮಾತಿನಲ್ಲಿ, ಸಾಮಾನ್ಯರ ಅನುಭವಕ್ಕೆ ನಿಲುಕುವ ದೃಷ್ಟಾಂತಗಳಿಂದ ವಿಚಾರಗಳನ್ನು ಸರಳವಾಗಿ ಹೇಳಿದಾಗಲೇ ಅವರಿಗೆ ಅದು ಮುಟ್ಟುವುದು, ತಟ್ಟುವುದು ಎಂಬುದನ್ನು ಶರಣರು ಅರಿತಿದ್ದರು. ಹೀಗಾಗಿ 'ವಚನ' ವೆಂಬ ಪದ್ಯಗಂಧಿಯಾದ ಗದ್ಯಪ್ರಕಾರವೊಂದು ಮೂಡಿಬಂತು. ಅದು ಹುಟ್ಟಿದ್ದು ಪ್ರಚಾರಕ್ಕಾಗಿ. ಕ್ರಮೇಣ ಸಮಷ್ಟಿ ಚೇತನವನ್ನು ಮೇಲೆತ್ತುವ ಉದಾತ್ತ ಧ್ಯೇಯ ಅದರದಾಯಿತು. ಜನಸಾಮಾನ್ಯರಿಗೆ ಧರ್ಮದ ಬಗ್ಗೆ ತಿಳುವಳಿಕೆ ನೀಡಲು, ಬದುಕುವ ರೀತಿ-ನೀತಿಯನ್ನು ಕಲಿಸಲು ಬಳಸುವ ಭಾಷಾಮಾಧ್ಯಮ ಅವರಿಗೆ ಅರ್ಥವಾಗುವಂಥದ್ದಿರಬೇಕು, ಮೆಚ್ಚಿಗೆಯಾಗುವಂಥದ್ದಿರಬೇಕು ಎಂಬ ಕಾಳಜಿಯಿಂದಾಗಿಯೇ ಶಿವಶರಣರು ದೇಶೀಯತೆಯ ಕಡೆ ಒಲಿದರು. ಕನ್ನಡದ ಸ್ವಯಾರ್ಜಿತ ಸ್ವತ್ತಾದ ವಚನಸಾಹಿತ್ಯವನ್ನು ಸೃಷ್ಟಿಸಿದರು. ಹೊಸ ಆಚಾರ, ಹೊಸ ವಿಚಾರಗಳನ್ನು ತುಂಬಿಕೊಂಡ ವಚನಗಳು ಹೊಸಭಾಷೆ, ಹೊಸಸಂವೇದನೆಗಳಿಂದ ಹೊಮ್ಮಿ ಬಂದವು.

ವಚನಗಳ ಮೂಲಕ ಹರಿದು ಬಂದ ಶರಣರ ಸಂದೇಶ ಎಷ್ಟರಮಟ್ಟಿಗೆ ಜನಮನವನ್ನು ಮುಟ್ಟಿತು ಎಂದರೆ ಅವರು ಅವನ್ನು ಅರ್ಥಮಾಡಿ ಅರಗಿಸಿಕೊಂಡರು. ಅಷ್ಟೇ ಅಲ್ಲ, ತಾವೂ ಅಭಿವ್ಯಕ್ತಿಶಕ್ತಿಯನ್ನು ಪಡೆದುಕೊಂಡರು. ಅನೇಕ ಜನ ತಮ್ಮ ತಮ್ಮ ಅನುಭವದ ನೆಲೆಯಲ್ಲಿ ನಿಂತು ತಮ್ಮ ವೃತ್ತಿಪರವಾದ ಭಾಷೆ ಹಾಗೂ ರೂಪಕಗಳೊಡನೆ ವಚನರಚನೆ ಮಾಡುವಷ್ಟು ಪ್ರಭಾವಿತರಾದರು. ಇದರಿಂದಾಗಿ ಕನ್ನಡ ಭಾಷೆಯ ಅಭಿವ್ಯಕ್ತಿ ಸತ್ತ್ವ ಸಾವಿರ ಪಾಲು ವಿಸ್ತಾರಗೊಂಡಿತು. ಬಸವಣ್ಣ, ಅಲ್ಲಮ, ಚನ್ನಬಸವಣ್ಣ, ಸಿದ್ಧರಾಮ, ಅಕ್ಕಮಹಾದೇವಿ ಮೊದಲಾದ ಮೇಲುವರ್ಗದ ವಚನಕಾರರಿರಲಿ, ಅಂಬಿಗರ ಚೌಡಯ್ಯ, ಮಾದಾರ ಧೂಳಯ್ಯ, ಬಹುರೂಪಿ ಚೌಡಯ್ಯ, ಕಾಳವ್ವೆ, ಕೊಟ್ಟಣದ ಸೋಮವ್ವೆ, ಆಯ್ದಕ್ಕಿ ಲಕ್ಕಮ್ಮ, ಕದಿರ ರೆಮ್ಮವ್ವೆ ಮೊದಲಾದ ದಲಿತ ವರ್ಗದವರು ವಚನ ಬರೆದರು. ೩೫೦ಕ್ಕೂ ಹೆಚ್ಚಿನ ಗಂಡಸರು, 30ಕ್ಕೂ ಹೆಚ್ಚು ಹೆಂಗಸರು ಕಲ್ಯಾಣದಲ್ಲಿ, ಅನುಭವ ಮಂಟಪದ ಆಶ್ರಯದಲ್ಲಿದ್ದು ಇಂಥ ಸೃಜನಶೀಲ ಸಾಹಿತ್ಯ ರಚನೆಯಲ್ಲಿ ತೊಡಗಿದ್ದರೆಂದರೆ ಆಶ್ಚರ್ಯವಾಗದಿರದು. ಒಂದೇ ಕಾಲದಲ್ಲಿ ಇಷ್ಟೊಂದು ಜನ, ಅದರಲ್ಲೂ ಶ್ರೀಸಾಮಾನ್ಯರು ಸಾಹಿತ್ಯ ಸೃಷ್ಟಿಮಾಡಿದ ನಿದರ್ಶನ ಜಾಗತಿಕ ಇತಿಹಾಸದಲ್ಲೇ ವಿರಳ !

ತನ್ನ ಪ್ರಜಾಸತ್ತಾತ್ಮಕ ನಿಲವಿನಿಂದಾಗಿ, ಸಕಲ ಜೀವಾವಳಿಗೆ ಲೇಸ ಬಯಸುವ ಘನ ಉದ್ದೇಶದಿಂದಾಗಿ ವಚನ ಸಾಹಿತ್ಯದಿಂದ ಕನ್ನಡನುಡಿಗೆ ಹೊಸಮೌಲ್ಯ ಕೂಡಿಬಂತು. ಜನವಾಣಿಯು ದೇವವಾಣಿಯ ಮಟ್ಟಕ್ಕೇರಿತು. ವಚನ ಸಾಹಿತ್ಯವು ಜಗತ್ಕಲ್ಯಾಣಕ್ಕೆ ಹಾತೊರೆದ ಮಾನವ ಹಿತೈಷಿಗಳ ಮಹತ್ಸಾಧನೆಯ ಮೈಲಿಗಲ್ಲು ಎನಿಸಿತು. ಸಾಹಿತ್ಯ ಬದುಕಿಗೆ ಸಮೀಪವಾದುದು ಮತ್ತೊಂದು ವಿಶೇಷ. ತನ್ನ ವಿಶಿಷ್ಟ ಲಕ್ಷಣಗಳಾದ ಸಂಕ್ಷಿಪ್ತತೆ, ಸಹಜತೆ, ಸ್ಫುಟತೆ, ಕಾವ್ಯಸೌಂದರ್ಯ, ಕಾಯಕದ ಸೊಗಡು, ಜಾನಪದ ಬನಿಗಳಿಂದ ವಚನ ಸಾಹಿತ್ಯ ಸೊಗಸು ಪಡೆಯಿತು. ಕನ್ನಡದ ಈ ಅನುಭಾವ ಸಾಹಿತ್ಯ ವಿಶ್ವವಾಙ್ಮಯಕ್ಕೆ ನೀಡಿದ ವಿಶಿಷ್ಟ ಕಾಣಿಕೆಯಾಯಿತು. ಅಂಥ ವಚನ ಸಾಹಿತ್ಯದ ಆಣಿ ಮುತ್ತುಗಳಿವು :

ಉಣ್ಣೆ ಕೆಚ್ಚಲು ಹತ್ತಿ ಉಂಬುದೇ ನೊರೆವಾಲ ?; ಆಚಾರವೇ ಸ್ವರ್ಗ, ಅನಾಚಾರವೇ ನರಕ; ; ಅರಿತಡೆ ಶರಣ ಮರೆತಡೆ ಮಾನವ, ಆರೇನೆಂದಡೂ ಓರಂತಿಪ್ಪುದೆ ಸಮತೆ ; ಕೊಲುವವನೆ ಮಾದಿಗ, ಹೊಲಸು ತಿಂಬುವನೇ ಹೊಲೆಯ, ಸದುವಿನಯವೇ ಸದಾಶಿವನ ಒಲುಮೆ ; ಸತಿಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ, ಸಾಸಿವೆಯಷ್ಟು ಸುಖಕ್ಕೆ ಸಾಗರದಷ್ಟು ದುಃಖ ನೋಡಾ ಇತ್ಯಾದಿ.

ವಚನಸಾಹಿತ್ಯದ ದೃಷ್ಟಿ-ಧೋರಣೆಯ ಪ್ರಭಾವ ಮುಂದಿನ ಹರಿಹರ, ರಾಘವಾಂಕ ಮೊದಲಾದ ಕವಿಗಳ ಮೇಲೆ ಆಯಿತು. ಕಾವ್ಯದ ವಸ್ತು ಮತ್ತು ಅಭಿವ್ಯಕ್ತಿ ಮಾಧ್ಯಮಗಳಲ್ಲಿ ಕ್ರಾಂತಿಕಾರಕ ಬದಲಾವಣೆಗಳು ಆದವು. ಮಾನವರನ್ನು ಇಂದ್ರ ಚಂದ್ರನೆಂದು ಹೊಗಳಿ ಕಾವ್ಯ

ರಚಿಸದೆ, ಕಾವ್ಯಶಕ್ತಿಯನ್ನು ಅನುಗ್ರಹಿಸಿದ ಭಗವಂತನನ್ನು ಮತ್ತು ಅವನ ಭಕ್ತರನ್ನು ಕೊಂಡಾಡಲು ಕಾವ್ಯ ಬರೆಯಬೇಕೆನ್ನುವ ಪರಿಪಾಠ ಆರಂಭವಾಯಿತು. ಹಳೆಯ ಚಂಪೂ ಸಂಪ್ರದಾಯವನ್ನು ಬಿಟ್ಟು ರಗಳೆ, ಷಟ್ಪದಿ, ತ್ರಿಪದಿ ಮೊದಲಾದ ದೇಶೀಯ ಛಂದಸ್ಸನ್ನು ಬಳಕೆಗೆ ತಂದರು. ಹರಿಹರ ರಗಳೆಗಳ ಮೂಲಕ ವಿವಿಧ ವೃತ್ತಿಯ, ವಿವಿಧ ಆಧ್ಯಾತ್ಮ ನಿಲವಿನ ಅನೇಕ ಪುರಾತನ ಮತ್ತು ನೂತನ ಶಿವಭಕ್ತರ ಪಾವನ ಚರಿತೆಯನ್ನು ನೀಡಿದನು. ಅವುಗಳಲ್ಲಿ ಬಸವರಾಜ ದೇವರ ರಗಳೆ, ನಂಬಿಯಣ್ಣನ ರಗಳೆ ಮೊದಲಾದುವು ಅವನ ಕಾವ್ಯಸಿದ್ಧಿಯ ಪತಾಕೆಗಳೆನಿಸಿವೆ.

ರಾಘವಾಂಕನ ಕಾವ್ಯಗಳೂ ಸಹ ಕನ್ನಡ ಸಾಹಿತ್ಯಲೋಕದಲ್ಲಿ ಹೊಸ ಹಾದಿ ತುಳಿದವು. ಜನ ಬದುಕಲೆಂದು ಕಾವ್ಯ ಹೇಳಬೇಕು ಎಂಬುದು ಆತನ ಧ್ಯೇಯವಾಯಿತು. ಕಾವ್ಯ ಮಾಧ್ಯಮವಾಗಿ ಷಟ್ಪದಿಯನ್ನು ಚೆನ್ನಾಗಿ ಪಳಗಿಸಿದ ಆತ ಹರಿಶ್ಚಂದ್ರ ಕಾವ್ಯ, ಸೋಮನಾಥ ಚಾರಿತ್ರ, ಸಿದ್ಧರಾಮಪುರಾಣದಂತಹ ಅಮೂಲ್ಯ ಕೃತಿಗಳನ್ನು ರಚಿಸಿದ್ದಾನೆ. 'ಹರನೆಂಬುದೆ ಸತ್ಯ, ಸತ್ಯವೆಂಬುದೆ ಹರನು' ಎಂಬ ತತ್ತ್ವದ ಪ್ರತಿಪಾದನೆಯಿಂದ, ಸಂಭಾಷಣಾ ಚತುರತೆ, ನಾಟಕೀಯ ಸನ್ನಿವೇಶಗಳಿಂದಾಗಿ ಅವನ ಮೇರುಕೃತಿ ಹರಿಶ್ಚಂದ್ರ ಕಾವ್ಯ ಇಂದೂ ಕೂಡ ಜನರ ಮೆಚ್ಚುಗೆಗೆ ಪಾತ್ರವಾಗಿದೆ. ಮಾನವ ಜೀವನದ ಗುಣ ಮೌಲ್ಯಗಳನ್ನು ಕಾವ್ಯಗಳ ಮೂಲಕ ಆತ ಬಿತ್ತರಿಸಿರುವ ರೀತಿ ಮನೋಜ್ಞವಾಗಿದೆ. ಕಾವ್ಯಗಳಲ್ಲಿ ಆತ ಸಂದರ್ಭೋಚಿತವಾಗಿ ಒಡಮೂಡಿಸಿರುವ ಮಾನವೀಯ ವಿಶ್ಲೇಷಣೆಗಳು, ಸಾಮಾಜಿಕ ಸಂಗತಿಗಳು ಕಾವ್ಯಗಳನ್ನು ಎತ್ತರಕ್ಕೆ ಒಯ್ದಿವೆ.

**ಕುಮಾರವ್ಯಾಸ** : ಕನ್ನಡಕ್ಕೆ ಏಕಮೇವಾದ್ವಿತೀಯವಾದ ಮೇರುಕೃತಿಯೊಂದನ್ನು ನೀಡಿದ ಮಹಾಕವಿ ಕುಮಾರವ್ಯಾಸ. ಕೋಳಿವಾಡದ ನಾರಣಪ್ಪ ಗದುಗಿನ ವೀರನಾರಾಯಣನ ಸದ್ಭಕ್ತ. ವ್ಯಾಸರ ಮಹಾಭಾರತವನ್ನು ಆಧರಿಸಿ 'ಕರ್ನಾಟ ಭಾರತ ಕಥಾಮಂಜರಿ'ಯನ್ನು ರಚಿಸಿ ಕುಮಾರವ್ಯಾಸನೆನಿಸಿದ. ಜನಪದದಲ್ಲಿ ಬೇರುಬಿಟ್ಟ ಜನಪ್ರಿಯ ಭಾರತದ ಕಥೆಯನ್ನು ತನ್ನ ಕಾವ್ಯದ ವಸ್ತುವಾಗಿ ಸ್ವೀಕರಿಸಿದರೂ ಆತ ಅದನ್ನು ನಿರ್ವಹಿಸಿದ ರೀತಿ ಮಾತ್ರ ಬೇರೆಯೇ. ಅವನ ದೃಷ್ಟಿಯಲ್ಲಿ ಭಾರತದ ಕಥೆ ಕೌರವ-ಪಾಂಡವರ ಸಂಘರ್ಷದ ಕಥಾನಕ ಮಾತ್ರವಲ್ಲ, ಅದು 'ಶ್ರೀಕೃಷ್ಣಚರಿತಾಮೃತ' ಮಹಾಭಾರತದಲ್ಲಿರುವ ಮಾನವ ಜೀವನದ ಜಟಿಲ ಕಥೆಯನ್ನು ಕಲಾಮಯವಾಗಿ ಚಿತ್ರಿಸುತ್ತಲೇ ಅದಕ್ಕೆ ಪ್ರೇರಕವೂ, ತಾರಕವೂ ಆಗಿರುವ ಭಗವತ್ ಶಕ್ತಿಯ ಲೀಲೆಯನ್ನು, ಮಹಿಮೆಯನ್ನು ಬಣ್ಣಿಸಬೇಕೆಂಬ ಸಮನ್ವಯದೃಷ್ಟಿ ಕುಮಾರವ್ಯಾಸನದು.

ಕನ್ನಡ ಕಾವ್ಯಲೋಕದಲ್ಲಿ ಪಂಪನೊಂದು ಶಿಖರವಾದರೆ, ಕುಮಾರವ್ಯಾಸ ಮತ್ತೊಂದು ಶಿಖರ, ಇಬ್ಬರ ನಡುವೆ ೫೦೦ ವರ್ಷಗಳ ಅಂತರ. ಇಬ್ಬರ ಕಾವ್ಯದ ವಸ್ತು ಒಂದೇ ಆದರೂ ಎರಡರ ಆಶಯ ಮತ್ತು ರೂಪಾಂಶಗಳಲ್ಲಿ ಅಜಗಜಾಂತರ. ಪಂಪನದು ಸುಪ್ರೌಢ

ಚಂಪೂಮಾರ್ಗ, ನಾರಣಪ್ಪನದು ಲಲಿತವಾದ ಷಟ್ಪದಿಮಾರ್ಗ. ಪಂಪನದು ಸಂಗ್ರಹ ಗುಣ, ನಾರಾಣಪ್ಪನದು ವಿಸ್ತರಣ ಗುಣ; ಪಂಪನು ಒಂದು ಪದ್ಯದಲ್ಲಿ ಹೇಳಿದ್ದನ್ನು ಕುಮಾರವ್ಯಾಸ ಹತ್ತಾರು ಪದ್ಯಗಳಲ್ಲಿ ಲಂಬಿಸಿದ್ದಾನೆ. ಇದರಿಂದ ಇಬ್ಬರ ಕಾವ್ಯಶಕ್ತಿ ಹಿರಿದು ಕಿರಿದಾಗಲಿಲ್ಲ! ಅದರ ರುಚಿ ಅದಕ್ಕೆ. ಇದರ ರುಚಿ ಇದಕ್ಕೆ. ಒಳ್ಳೆಯ ಸನ್ನಿವೇಶ ಸೃಷ್ಟಿಗೆ, ಉತ್ತಮ ಪಾತ್ರ ಚಿತ್ರಣಕ್ಕೆ ಹೆಸರಾಗಿರುವ ಕುಮಾರವ್ಯಾಸ ತನ್ನ ಕಾವ್ಯದಲ್ಲಿ ಗತಕಾಲದ ಚಿತ್ರಗಳು ಕಣ್ಣಮುಂದೆ ಸಜೀವವಾಗಿ ನಿಲ್ಲುವಂತೆ ಮಾಡಿದ್ದಾನೆ. 'ಕುಮಾರವ್ಯಾಸನು ಹಾಡಿದನೆಂದರೆ ಕಲಿಯುಗ ದ್ವಾಪರ ವಾಗುವುದು, ಭಾರತ ಕಣ್ಣಲಿ ಕುಣಿಯುವುದು' ಎಂಬ ಕುವೆಂಪು ಅವರ ಮಾತು ನಿಜ. ಕವಿಗೆ ಇರುವ ಮಾನವ ಸ್ವಭಾವದ ಆಳವಾದ ಅರಿವು, ಆತನ ವಿಸ್ತಾರವಾದ ಲೋಕಾನುಭವಗಳು ಕಾವ್ಯದ ಪ್ರತಿ ಹಂತದಲ್ಲೂ ನಮ್ಮ ಅನುಭವಕ್ಕೆ ಬರುತ್ತವೆ. ಮಾನವರ ಅಂತರಂಗದ ಒಳ ನೋಟಗಳನ್ನು ಜೀವನ ವ್ಯಾಪಾರದ ವೈಚಿತ್ರ್ಯಗಳನ್ನು ಇವನಷ್ಟು ಸಮರ್ಥವಾಗಿ ಚಿತ್ರಿಸಿರುವ ಕವಿ ಇನ್ನೊಬ್ಬನಿಲ್ಲವೆಂಬ ಮಾತಿನಲ್ಲಿ ಅತಿಶಯೋಕ್ತಿಯೇನೂ ಇಲ್ಲ. ಅವನು ಕಾವ್ಯದಲ್ಲಿ ಕಡೆದು ನಿಲ್ಲಿಸಿರುವ ಉತ್ತರ, ಅಭಿಮನ್ಯು ಮೊದಲಾದ ಪಾತ್ರಗಳಾಗಲೀ, ಪಾಂಡುವಿನ ಶಾಪ ಪ್ರಸಂಗ, ದೂರ್ವಾಸ ಆತಿಥ್ಯ, ಚಿತ್ರರಥ ಪ್ರಸಂಗ, ಕೀಚಕ ವಧೆ ಮೊದಲಾದ ಪ್ರಸಂಗಗಳನ್ನಾಗಲೀ ಯಾರು ತಾನೇ ಮರೆಯಲಾದೀತು ?

ಹಳ್ಳಿಹಳ್ಳಿಗಳಲ್ಲಿ 'ಗದುಗಿನ ಭಾರತ' ವನ್ನು ಕೇಳದ ಜನರಿಲ್ಲ ಎನ್ನುವಷ್ಟು ಪ್ರಚುರತೆ ಅದರದು. ಇದಕ್ಕೆ ಕಾರಣ ಭಿನ್ನ ಅಭಿರುಚಿಯ ಜನರಿಗೆ ಪ್ರಿಯವಾಗುವ ವೈವಿಧ್ಯತೆ ಅದರಲ್ಲುಂಟು. ಕವಿಯೇ ಹೇಳಿರುವಂತೆ ರಾಜರಿಗೆ ವೀರ, ಬ್ರಾಹ್ಮಣರಿಗೆ ವೇದ ಸಾರ, ಪಂಡಿತರಿಗೆ ಅಲಂಕಾರಾದಿ ಕಾವ್ಯ ಮೀಮಾಂಸೆ, ವಿರಹಿಗಳಿಗೆ ಶೃಂಗಾರ, ಯೋಗಿಶ್ರೇಷ್ಠರಿಗೆ ಪರಮ ತತ್ತ್ವವಿಚಾರ - ಹೀಗೆ ಕುಮಾರವ್ಯಾಸ ಭಾರತ ಕಲ್ಪವೃಕ್ಷದಂತೆ ಬೇಡಿದವರಿಗೆ ಇಷ್ಟವಾದುದನ್ನು ನೀಡುತ್ತದೆ. ಜನಮನವನ್ನು ಸೂರೆಗೊಂಡ ಇನ್ನೊಂದು ಕೃತಿಯೆಂದರೆ ಲಕ್ಷ್ಮೀಶನ 'ಜೈಮಿನಿ ಭಾರತ'. ಕುಮಾರವ್ಯಾಸ ತನ್ನ ಕಾವ್ಯದಲ್ಲಿ ನಿತ್ಯ ಸತ್ಯದ ಸಂದೇಶವನ್ನು ಎಷ್ಟು ಕಲಾತ್ಮಕವಾಗಿ ಚಿತ್ರಿಸಿದ್ದಾನೆ ಎಂಬುದಕ್ಕೆ ಒಂದು ಪ್ರಸಂಗವನ್ನು ನೋಡೋಣ.

ಕಾಡಿನಲ್ಲಿ ದೇಸಿಗರಂತೆ ಅಲೆಯುತ್ತಿರುವ ಪಾಂಡವರ ಎದುರು ತನ್ನ ರಾಜವೈಭವವನ್ನು ತೋರಿ ಅವರನ್ನು ನಾಚಿಸಬೇಕೆಂದು ದುರ್ಯೋಧನ ವನಕ್ರೀಡೆಯ ನೆಪದಲ್ಲಿ ಸಕಲ ರಾಜವೈಭವದೊಡನೆ ಪಾಂಡವರಿದ್ದ ಸ್ಥಳಕ್ಕೆ ಸಮೀಪದ ದ್ವೈತವನದಲ್ಲಿ ಬೀಡುಬಿಟ್ಟನು. ವಿಹಾರಕ್ಕೆಂದು ದುರ್ಯೋದನನ ಜನ, ಸೈನಿಕರು ಹದ್ದುಮೀರಿ ನಡೆದುಕೊಂಡರು. ತೋಟ ಹುಡಿಹುಡಿಯಾಯ್ತು. ಅದರ ಒಡೆಯ ಚಿತ್ರಸೇನ ಗಂಧರ್ವ ಸೇನೆಯೊಡನೆ ಬಂದು ಸೊಕ್ಕಿದ ಕೌರವರಿಗೆ ಪಾಠ ಕಲಿಸಿದ. ಸೈನ್ಯವನ್ನು ಸೋಲಿಸಿ ದುರ್ಯೋಧನಾದಿಗಳನ್ನು ಸೆರೆಹಿಡಿದುಕೊಂಡು ಹೋದನು. ಮೂಗುಮೇಲೆ ಮಾಡಿಕೊಂಡು ಮೆರೆಯಬಂದವನ ಮೂಗ

ಕತ್ತರಿಸಿದಂತಾಯಿತು ! ವಾರ್ತೆ ತಿಳಿದ ಧರ್ಮರಾಯ ವಂಶದ ಘನತೆ ಮಸುಳಿಸಿತೆಂದು ನೊಂದುಕೊಂಡನು. ಇಡೀ ಅಂತಃಪುರದ ಸಮೂಹವೇ ಪಾಂಡವರಲ್ಲಿಗೆ ಓಡಿ ಬಂತು. ಭಾನುಮತಿ ಧರ್ಮರಾಯನ ಕಾಲುಗಳ ಮೇಲೆ ಬಿದ್ದು. 'ಕಾಯಬೇಹುದು ಪತಿಯ' ಎಂದು ಬೇಡಿದಳು. ಆಕೆಯನ್ನು ಹಿಡಿದೆತ್ತಿ ಸಂತೈಸಿದ ಧರ್ಮರಾಯ ತನ್ನ ತಮ್ಮಂದಿರತ್ತ ತಿರುಗಿ ದುರ್ಯೋಧನನನ್ನು ಬಿಡಿಸಿಕೊಂಡು ಬರಲು ಹೇಳಿದನು. ಅದಕ್ಕೆ ಭೀಮ 'ಗುಣಹೀನನಲಿ ಗುಣವ ತೋರುವುವೆ ?ಅವನಿಕೆ ತಕ್ಕ ಶಾಸ್ತಿಯಾಗಿದೆ ಬಿಡಿ' ಎಂದನು. ಆಗ ಧರ್ಮರಾಯ 'ಆತ ಅನುಜನಲ್ಲವೆ ?ಕೌರವನ ಅಪರಾಧಶತವನು ನೆನೆವೊಡೆ ಇದು ಹೊತ್ತೆ ?' ಎಂದ ನಂತರ ಒಂದು ವಿವೇಕದ ಮಾತನ್ನು ಹೇಳುವನು, "ಪರರ ಕಲಹಕೆ ನಾವು ನೂರೈವರು: ಅಂತಃಕಲಹಕದು ನೂರ್ವರು ವಿಚಾರಿಸಲು" - ಅಂದರೆ ನಮ್ಮ ನಮ್ಮಲ್ಲಿ ಕಚ್ಚಾಡುವಾಗ ನಾವು ಐದು ಜನ, ಅವರು ನೂರುಜನ. ಬೇರೆಯವರೊಡನೆ ಕಾದಾಡುವಾಗ ನಾವು ನೂರೈದು ಜನ. ಈ ರೀತಿ ಧರ್ಮರಾಯ ಅನುನಯದಿಂದ ಬುದ್ಧಿಹೇಳಿ ತಮ್ಮಂದಿರ ಮನಒಲಿಸಿ ದುರ್ಯೋಧನನನ್ನು ಬಿಡಿಸಿಕೊಂಡು ಬರಲು ಕಳಿಸುವನು. ಪ್ರಸಂಗೋಚಿತವಾಗಿ ಬಂದಿರುವ ಈ ವಿವೇಕದ ಮಾತಿನಲ್ಲಿರುವ ನಿತ್ಯಸತ್ಯವನ್ನು ನಾವು ಮನಗಾಣಬೇಕಾಗಿದೆ.

**ದಾಸ ಸಾಹಿತ್ಯ** : ವಚನ ಸಾಹಿತ್ಯದಂತೆಯೇ ದಾಸ ಸಾಹಿತ್ಯವು - ಹಾಡುಹಬ್ಬವು - ಸಮಾಜ ಮುಖಿಯಾದ ಸಾಹಿತ್ಯ ; ಜನಪರವಾದ ಸಾಹಿತ್ಯ. ಪುರಂದರದಾಸ, ಕನಕದಾಸ ಮೊದಲಾದ ದಾಸವರೇಣ್ಯರು, ಸಾಹಿತ್ಯವನ್ನು ಸಂಗೀತದೊಡನೆ ಬೆರಸಿ ಮತ್ತಷ್ಟು ಸೊಗಸನ್ನು ಒದಗಿಸಿದರು. ಜನಮನವನ್ನು ತಿದ್ದಲು ಹಾಡುಗಳನ್ನು, ಕೀರ್ತನೆಗಳನ್ನು ಸಮರ್ಥ ಮಾಧ್ಯಮವಾಗಿ ಬಳಿಸಿದರು. ಸ್ವಾರ್ಥ, ಮತಾಂಧತೆ, ಆಷಾಢಭೂತಿತನ ಮೊದಲಾದ ಸಾಮಾಜಿಕ ಅನಿಷ್ಟಗಳಿಂದ ಜನರನ್ನು ಮೇಲೆತ್ತುವ, ಅವರಲ್ಲಿ ಸುಜ್ಞಾನ, ಸದ್ಭಕ್ತಿಗಳನ್ನು ಬಿತ್ತುವ, ಸದಾಚಾರಗಳನ್ನು ಕಲಿಸುವ ಮಹಾಮಣಿಹವನ್ನು ಅವರು ಪೂರೈಸಿದರು.

ದಾಸಸಾಹಿತ್ಯವೆಂದರೆ ಇಹ-ಪರಗಳೆರಡನ್ನೂ ಸಾಧಿಸುವುದನ್ನು ಕಲಿಸುವ ಕಾಮಧೇನುವಾಯಿತು. ಈ ಸಾಹಿತ್ಯವು ವ್ಯಕ್ತಗೊಂಡ ಭಾಷೆ ಹಾಗೂ ಮೂಡಿಬಂದ ಮಾಧ್ಯಮಗಳೆರಡರಲ್ಲೂ ಹೊಸತನವಿದೆ. ಕ್ರಾಂತ ದೃಷ್ಟಿಯಿದೆ. ದಾಸರ ಹಾಡುಗಳಲ್ಲಿರುವ ಸಾರವತ್ತಾದ ಮಾತುಗಳು ನಾಣ್ಣುಡಿ-ಜಾಣ್ಣುಡಿಗಳಂತೆ ಜನರಲ್ಲಿ ಬಳಕೆಯಾಗುತ್ತಾ ಇನ್ನೂ ಜೀವಂತವಾಗಿವೆ.

'ಮಾನವಜನ್ಮ ದೊಡ್ಡದು. ಇದ ಹಾನಿ ಮಾಡಲಿಬೇಡಿ ಹುಚ್ಚಪ್ಪಗಳಿರಾ' ಎಂದ ಪುರಂದರದಾಸರು ಮಾನವ ಜೀವನದ ಘನತೆಯನ್ನು ಎತ್ತಿಹಿಡಿದರು. 'ಕಲ್ಲಾಗಿ ಇರಬೇಕು ಕಠಿಣ ಭವತೊರೆಯೊಳಗೆ, ಬಿಲ್ಲಾಗಿ ಇರಬೇಕು ತನ್ನವರೊಳಗೆ, ಬೆಲ್ಲವಾಗಿರಬೇಕು ಬಲ್ಲವರೊಳಗೆ, ಬುದ್ಧಿಯ ತನುಮನವ ತಿದ್ದಿಕೊಳ್ಳುತ್ತಿರಬೇಕು...' ಎಂದು ಹೇಳುತ್ತಾ

ಬದುಕುವ ಕಲೆಯನ್ನೇ ಅವರು ಆತ್ಮೀಯವಾಗಿ ತಿಳಿಸಿಕೊಟ್ಟಿದ್ದಾರೆ. ಅವರು ಹಾಡಿರುವ ನೂರಾರು ಹಾಡುಗಳು ಅವರ ಮಾನವ ಹಿತೈಷಿಯಾದ ಹೃದಯವಂತಿಕೆಯನ್ನು ತೆರೆದುತೋರುತ್ತವೆ.

ಕನಕದಾಸರೂ ಅಷ್ಟೆ. ಕುಲದ ಸಂಕುಚಿತ ಭಾವನೆಯನ್ನು ಹತ್ತುಹಲವಂದದಲ್ಲಿ ಖಂಡಿಸಿ ಮಾನವತೆಯೊಂದೇ ಎಲ್ಲಕ್ಕಿಂತ ದೊಡ್ಡದೆಂದು ಪ್ರತಿಪಾದಿಸಿದ್ದಾರೆ. 'ಕುಲಕುಲವೆಂದು ಬಡಿದಾಡುವಿರಿ. ನಿಮ್ಮ ಕುಲದ ನೆಲೆಯನೇನಾದರೂ ಬಲ್ಲಿರಾ ? ಎಂದು ಪ್ರಶ್ನಿಸಿದ ಅವರು 'ಆತ್ಮಾವ ಕುಲ ?ಜೀವ ಯಾವ ಕುಲ ? ಎಂದು ಕೇಳಿದ್ದಾರೆ. ಕೊನೆಯಲ್ಲಿ ಅವರ ಪ್ರತಿಪಾದನೆ 'ಒಳ್ಳೆಯ ಮನಸ್ಸಿರುವವನೇ ಕುಲಜ' ಎಂದು ! ಕನಕದಾಸರು ನೂರಾರು ಹಾಡುಗಳನ್ನು ರಚಿಸಿರುವುದಲ್ಲದೆ, ನಳಚರಿತೆ, ಮೋಹನ ತರಂಗಿಣಿ, ರಾಮಧಾನ್ಯ ಚರಿತೆಯಂಥ ಕಾವ್ಯಗಳನ್ನೂ ರಚಿಸಿದ್ದಾರೆ. ದಾಸಸಾಹಿತ್ಯ ಸಿಂಧುವಿನಿಂದ ಹೆಕ್ಕಿ ತೆಗೆದ ಬಿಂದುಗಳೊಂದೆರಡನ್ನು ಗಮನಿಸಿ:

'ಸಾಲದೆನಬೇಡ, ಸಾಲಮಾಡಬೇಡ, ನಾಳೆಗೆನಬೇಡ' ಎಂಬ ವಿಜಯದಾಸರಮಾತು, 'ಈಸಬೇಕು ಇದ್ದು ಜೈಸಬೇಕು,' ಎಂದು ಜೀವನ ಪ್ರೀತಿ ತುಂಬುವ ಸ್ವಾಂತನ, 'ಕಾಲನ ದೂತರು ಕಾಲ್ಪಿಡಿದು ಎಳೆವಾಗ ತಾಳು-ತಾಳೆಂದರೆ ತಾಳುವರೆ ? ಧಾಳಿ ಬರುವ ಮುನ್ನ ಧರ್ಮವ ಗಳಿಸಿರೋ' ಎಂಬ ಪುರಂದರದಾಸರ ಮಾತು, 'ಅಜ್ಞಾನಿಗಳ ಅಧಿಕ ಸ್ನೇಹಕ್ಕಿಂತ ಸುಜ್ಞಾನಿಗಳ ಕೂಡ ಜಗಳ ಲೇಸು' ಎಂಬ ಅನುಭವ ವೇದ, 'ಚಿಂತಿಸದಿರು ಕಂಡ್ಯಾ ತಾಳು ಮನವೆ ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ' ಎಂಬ ಆತ್ಮವಿಶ್ವಾಸ ಮೂಡಿಸುವ ಕನಕದಾಸರ ವಾಣಿ,' 'ತಿಳಿಯುವುದೇ ಪುಣ್ಯ, ತಿಳಿಯದುದೆ ಪಾಪ' ಎಂದು ವಿವೇಕ ಕಲಿಸುವ ಜಗನ್ನಾಥದಾಸರ ಮಾತು, ನಾನು ಎಂಬುದ ಬಿಡು. ಹೀನಾಯವಾಗದಿರು ಪರರ ಗುಣಗಳನೆಣಿಸಿ' ಎಂಬ ಅನುನಯದ ಗೋಪಾಲದಾಸರ ಮಾತುಗಳು ಜನತೆಯ ಜೀವನಾಡಿಯನ್ನು ಪರಿಶುದ್ಧಿಗೊಳಿಸಿ ಅವರ ಹೃದಯದಲ್ಲಿ ಹೊಸಚೈತನ್ಯ ತುಂಬುವಂಥವು. ಇಂಥ ಸಾಹಿತ್ಯಲೋಕದಲ್ಲಿ ವಿಹರಿಸುವುದೆಂದರೆ ತಪ್ಪೋವನದಲ್ಲಿ ಸಂಚಾರ ಕೈಗೊಂಡಂತಾಗುತ್ತದೆ ಎಂಬುದು ನಿಜವಲ್ಲವೆ ?

**ಜನಪದ ಸಾಹಿತ್ಯ** : ಜನಪದ ಸಾಹಿತ್ಯ ನಮ್ಮ ಸಾಹಿತ್ಯಸಂಪದದ ತಾಯಿಬೇರು. ಅದರಲ್ಲಿ ಹಳ್ಳಿಯ ಮುಗ್ಧಜನರ ಕಷ್ಟ-ಸುಖಗಳು, ನೋವು-ನಲಿವುಗಳು, ಆಸೆ-ಹಂಬಲಗಳು, ನಂಬಿಕೆ-ವಿಶ್ವಾಸಗಳು ತ್ರಿಪದಿ ಹಾಗೂ ಹಾಡುಗಳ ರೂಪದಲ್ಲಿ ಸಹಜವಾಗಿ ಮೂಡಿವೆ. ಕುಟ್ಟುವಾಗ, ಬೀಸುವಾಗ, ಹೊಲಗದ್ದೆಗಳಲ್ಲಿ ದುಡಿಯುವಾಗ ದಣಿವ ಮರೆಯಲು ಹಾಡುತ್ತಿದ್ದ ಅವರ ಹಾಡುಗಳಲ್ಲಿ ಅವರ ಜೀವನಾನುಭವವೇ ಹರಳುಗಟ್ಟಿರುವುದನ್ನು ಕಾಣಬಹುದು. ಬೀಸುವ ಹಾಡು, ಒನಕೆ ಹಾಡು, ಕೋಲಿನ ಹಾಡು, ಹೋಳಿಯ ಪದ,

ಹಂತಿಹಾಡು, ದುಂದುಭಿ ಹಾಡು, ಗೊಂದಲದ ಹಾಡು, ಲಾವಣಿ, ಸೋಬಾನೆ, ಒಡಪುಗಳು, ಕಥೆಗಳು ಮೊದಲಾದುವು ಜನಪದ ಸಾಹಿತ್ಯದ ಸೊಬಗಿನ ಪ್ರಕಾರಗಳು. ಕವಿರಾಜಮಾರ್ಗಕಾರ ಹೇಳಿರುವಂತೆ ನಮ್ಮ ಗ್ರಾಮೀಣ ಶ್ರೀಸಾಮಾನ್ಯರು 'ಕುರಿತು ಓದದೆಯು' ಕಾವ್ಯಪ್ರಯೋಗ ಪರಿಣತ ಮತಿಗಳು'. ಓದುಬರಹ ಬಾರದ ಮುಗ್ಧರು ಕಟ್ಟಿ ಹಾಡಿದ ಈ ಸಾಹಿತ್ಯ ನಿಸರ್ಗದ ಕೊಡುಗೆಯಂತೆ ಸಹಜ, ಸುಂದರ. ಈ ಸಾಹಿತ್ಯದಲ್ಲಿ ಒಡೆದು ಕಾಣುವ ಉತ್ಸಾಹ, ಜೀವನ ಶ್ರದ್ಧೆ, ಸೋದರ ಭಾವ, ದೈವೀಭಕ್ತಿ ಮೊದಲಾದುವು ಅನನ್ಯವಾದುವು. ಹಬ್ಬ ಹರಿದಿನಗಳಲ್ಲಿ, ಮದುವೆ ಮುಂಜಿಗಳಲ್ಲಿ, ಜಾತ್ರೆ ರಥೋತ್ಸವಗಳಲ್ಲಿ ಅವರು ಹಾಡುವ ಪದಗಳು ಅವರ ಆಚಾರ ವಿಚಾರಗಳ ಪ್ರತೀಕವಾಗಿವೆ. ಈ ಸಾಹಿತ್ಯದಲ್ಲಿ ದೊರೆಯುವ ಹೆಣ್ಣಿನ ವ್ಯಕ್ತಿಚಿತ್ರ, ಗಂಡು-ಹೆಣ್ಣಿನ ಮಧುರ ಬಾಂಧವ್ಯ, ತಾಯಿ-ಮಗುವಿನ ವಾತ್ಸಲ್ಯ ಮೊದಲಾದುವು ಅಮೋಘವಾದುವು. ಇವರಲ್ಲಿ ಮೂಡಿ ಬಂದಿರುವ ಎಲ್ಲಾ ಶಬ್ದಚಿತ್ರಗಳು ಆರೋಗ್ಯಕರ ಮಾನವೀಯ ಸಂಬಂಧವನ್ನು ಎತ್ತಿ ಹಿಡಿಯುವಂಥವು. ಇದು ಮನುವಿನ ಚಿತ್ರ :

*ಅಳುವ ಕಂದನ ತುಟಿಯು ಹವಳದ ಕುಡಿಹಂಗ*
*ಕುಡಿಹುಬ್ಬು ಬೇವಿನೆಸಳ್ಹಂಗ ಕಣ್ನೋಟ*
*ಶಿವನ ಕೈಯಲಗು ಹೊಳದ್ಹಂಗ*

ತಾಯಿ ಧೂಳಾಟ ಆಡುತ್ತಿರುವ ಮಗುವನ್ನು ಕರೆಯುವುದು ಹೀಗೆ :

*ಆಡಿ ಬಾ ನನ ಕಂದ ಅಂಗಾಲ ತೊಳೆದೇನ*
*ತೆಂಗಿನ ಕಾಯ ಎಳನೀರ ತಕ್ಕೊಂಡು*
*ಬಂಗಾರದ ಪಾದ ತೊಳೆದೇನ*

ಬಂಜೆ ಬಾಳಿನ ಬವಣೆಯನ್ನು ಇದಕ್ಕಿಂತ ಪರಿಣಾಮಕಾರಿಯಾಗಿ ಚಿತ್ರಿಸಲು ಸಾಧ್ಯವೇ ?

*ಬಾಲಕರಿಲ್ಲದ ಬಾಲೀದ್ಯಾತರ ಜನುಮ*
*ಬಾಡಿಗೆ ಎತ್ತು ದುಡಿದ್ಹಂಗ ಬಾಳೆಲೆಯ*
*ಹಾಸ್ಯುಂಡು ಬೀಸಿ ಒಗೆದ್ಹಂಗ*

ಅದಕ್ಕಾಗಿಯೇ ಆಕೆ ಹೀಗೆ ಮೊರೆಯಿಡುತ್ತಾಳೆ :

*ಕಂದನ ಕೊಡು ಶಿವನೆ ಬಂದಾನ ಬಿಡಲಾರೆ*
*ಹಂಗೀನ ಬಾನ ಉಣಲಾರೆ ಮರ್ತ್ಯದಾಗ*
*ಬಂಜೆಂಬ ಶಬುದ ಹೊರಲಾರೆ*

ಹೆಣ್ಣಿನ ತವರೂರ ಅಭಿಮಾನ ಹೆಚ್ಚಿನದು. ಅದನ್ನು ವ್ಯಕ್ತ ಮಾಡಿರುವ ರೀತಿ ಇದು :

*ತವರೂರ ದಾರೀಲಿ ಕಲ್ಲಿಲ್ಲ ಮುಳ್ಳಿಲ್ಲ*
*ಸಾಸಿವೆಯಷ್ಟು ಮರಳಿಲ್ಲ ಬಾನಲ್ಲಿ*
*ಬಿಸಿಲೀನ ಬೇಗೆ ಸುಡಲಿಲ್ಲ*

ಗಂಡ ಹೆಂಡಿರ ಸರಸ-ವಿರಸದ ಚಿತ್ರ ಜಾನಪದ ಸಾಹಿತ್ಯದಲ್ಲಿ ಮೂಡಿದಷ್ಟು ಸಹಜವಾಗಿ ಬೇರಾವ ಸಾಹಿತ್ಯಪ್ರಕಾರಗಳಲ್ಲೂ ಬಂದಿಲ್ಲವೆಂದರೆ ಅತಿಶಯೋಕ್ತಿಯೇನೂ ಅಲ್ಲ. ಒಂದು ಉದಾಹರಣೆ :

*ಮಡದಿಯ ಬಡಿದಾನ ಮನದಾಗ ಮರುಗ್ಯಾನ*
*ಒಳಗ್ಹೋಗಿ ಸೆರಗ ಹಿಡಿದಾನ ಕೇಳ್ಯಾನ*
*ನಾ ಹೆಚ್ಚು ನಿನ್ನ ತವರೆಚ್ಚೊ*

ಹೀಗೆ ಜನಪದ ಸಾಹಿತ್ಯ ಬದುಕಿಗೆ ತೀರ ಸಮೀಪವಾಗಿ ಜನಮನದ ಸ್ಪಂದನವನ್ನು ಸ್ವಾಭಾವಿಕವಾಗಿ ದಾಖಲಿಸಿದೆ.

**ಆಧುನಿಕ ಸಾಹಿತ್ಯ** : ಹೊಸಕಾಲದ ಹೊಸಹೊಸ ಸಂವೇದನೆಗಳ ಅಭಿವ್ಯಕ್ತಿಯಾದ ಹೊಸಗನ್ನಡ ಸಾಹಿತ್ಯದ ಎತ್ತರ-ಬಿತ್ತರಗಳು ಆಶ್ಚರ್ಯತರುವಂತಿದೆ. ಪಾಶ್ಚಾತ್ಯಭಾಷಾ ಸಾಹಿತ್ಯಗಳ ಪ್ರಭಾವದಿಂದ ಆಧುನಿಕ ಕನ್ನಡ ಸಾಹಿತ್ಯವು ರೂಪ-ರೀತಿಗಳೆರಡರಲ್ಲೂ ಒಂದು ಕ್ರಾಂತಿಕಾರಕ ಬದಲಾವಣೆಯನ್ನು ಪಡೆದಿದೆ. ಗದ್ಯವು ಪ್ರಮುಖವಾಗಿ ಅಭಿವ್ಯಕ್ತಿ ಮಾಧ್ಯಮ ವಾಯಿತು. ನಾಟಕ, ಕಾದಂಬರಿ, ಸಣ್ಣಕತೆ, ಜೀವನ ಚರಿತ್ರೆ, ಪ್ರಬಂಧ ಇತ್ಯಾದಿ ಪ್ರಕಾರಗಳು ಬಂದವು. ಹೊಸ ದೃಷ್ಟಿ ಕೋನ, ಹೊಸ ಬಗೆಯ ಚಿಂತನೆಗಳು, ಹೊಸರೀತಿಯ ಅಭಿವ್ಯಕ್ತಿಗಳು, ಪ್ರತಿಮಾ ದೃಷ್ಟಾಂತಾದಿಗಳಿಂದ ಕೂಡಿದ ಶೈಲಿಗಳು ಕಾಣಿಸಿಕೊಂಡವು. ಈ ಬದಲಾವಣೆಗಳಲ್ಲಿ ತಂತ್ರ ಹಾಗೂ ಸ್ವರೂಪದಲ್ಲಾದ ಬದಲಾವಣೆ ಒಂದಾದರೆ, ಮತ್ತೊಂದು ಮನಶ್ಶಾಸ್ತ್ರೀಯ ವಾದ ಅನುಭವಗಳನ್ನು ಗ್ರಹಿಸುವ ಹಾಗೂ ರೂಪಿಸುವ ವಿಧಾನದಲ್ಲಿ ಆದ ಬದಲಾವಣೆ. ಆಧುನಿಕ ಸಾಹಿತ್ಯದ ರೂವಾರಿಗಳ ಪಟ್ಟಿದೊಡ್ಡದಾಗಿದೆ. ಅವರಲ್ಲಿ ಆಚಾರ್ಯ ಬಿ.ಎಂ.ಶ್ರೀ., ಡಿ.ವಿ.ಜಿ, ಕುವೆಂಪು, ಮಾಸ್ತಿ, ವಿ.ಸೀ. ಪು.ತಿ.ನ, ಗೋಕಾಕ, ಬೇಂದ್ರೆ, ಗೋಪಾಲಕೃಷ್ಣ ಅಡಿಗ, ಶಿವರಾಮಕಾರಂತ, ಅನಕೃ, ತರಾಸು ಅವರನ್ನಾದರೂ ಹೆಸರಿಸಬೇಕು.

ಆಧುನಿಕ ಲೇಖಕರಿಗೆ ತನ್ನ ಸುತ್ತಣ ಬದುಕಿನ ಯಥಾವತ್ತಾದ ಸಂಗತಿಗಳ ಬಗ್ಗೆ ತನಗೇನನಿಸುತ್ತದೆ ಎನ್ನುವುದನ್ನು ಸಾಹಿತ್ಯದ ಮೂಲಕ ತಿಳಿಸಬೇಕೆಂಬ ತುಡಿತ ಹೆಚ್ಚಾಗಿದೆ. ನಮ್ಮ ಲೇಖಕರ ಗಮನ ಹಿಂದೆ ಏನಾಗಿತ್ತು ಎಂಬುದಕ್ಕಿಂತ ಇವತ್ತೇನಾಗಬೇಕು, ಹಾಗೆಯೆ ನಾಳೆ ಏನಾಗಬೇಕು ಅದರ ಕಡೆ ಹರಿಯುತ್ತಿದೆ. ಆಧುನಿಕ ಸಾಹಿತ್ಯ ತನ್ನ ಸತ್ವಪೂರ್ಣವಾದ ಪ್ರಾಚೀನ ಪರಂಪರೆಯನ್ನು ಮುಂದುವರಿಸಿದೆ. ಆಧುನಿಕ ಜಗತ್ತಿಗೆ ಅಪೂರ್ವವಾದ

ಕೃತಿಗಳನ್ನು ನೀಡಿದೆ. ಭಾರತದಲ್ಲಿ ಅತ್ಯಂತ ಪ್ರತಿಷ್ಠಿತ ಪ್ರಶಸ್ತಿ ಎನಿಸಿದ ಜ್ಞಾನಪೀಠ ಪುರಸ್ಕಾರವು ಆಧುನಿಕ ಕನ್ನಡ ಸಾಹಿತ್ಯದ ಹೆಸರಾಂತ ಐದುಜನ ಸಾಹಿತಿಗಳಿಗೆ ದೊರಕಿದೆ. ಕುವೆಂಪು, ಬೇಂದ್ರೆ, ಮಾಸ್ತಿ, ಶಿವರಾಮ ಕಾರಂತ ಹಾಗೂ ಗೋಕಾಕರೇ ಆ ಯಶೋಭಾಗಿಗಳು.

ಹೀಗೆ ಕನ್ನಡ ಭಾಷೆ ಎರಡು ಸಹಸ್ರವರ್ಷಗಳಿಂದ ಉದ್ದಾಮ ಕವಿ-ಕಲಾವಿದರ, ಜನಪದರ ವಾಣಿಯಾಗಿ ಹರಿದುಬಂದಿದೆ. ಅವರ ಕಷ್ಟ-ಸುಖ, ನೋವು-ನಲಿವುಗಳಿಗೆ ಸ್ಪಂದಿಸಿದೆ. ಅವರ ಸೂಕ್ಷ್ಮಸಂವೇದನೆಗಳನ್ನು, ಉದಾತ್ತ ಚಿಂತನಗಳನ್ನು ದಾಖಲಿಸಿದೆ. ಕಾಲಕ್ಕೆ ತಕ್ಕಂತೆ ಪ್ರಗತಿಶೀಲ ಬದಲಾವಣೆಯನ್ನು ಹೊಂದಿ ಅನ್ಯ ಭಾಷಾ ಸಂಸ್ಕೃತಿಯ ಸತ್ವವನ್ನು ಹೀರಿಕೊಂಡು ಮೈದುಂಬಿ, ಕಳೆಗೊಂಡು ನವನವೋನ್ಮೇಷಶಾಲಿನಿಯಾಗಿ ಸಾಗಿದೆ. ಕನ್ನಡಿಗರ ಧೈರ್ಯ ಸ್ಥೈರ್ಯ, ಸಾಧನೆ, ಸಿದ್ಧಿಗಳ ಶ್ರೀರಕ್ಷೆಯಾಗಿದೆ ನಮ್ಮ ಹೆಮ್ಮೆಯ ಕನ್ನಡ.

ಇಂಥ ಸತ್ವಪೂರ್ಣ ಭಾಷೆಯನ್ನು ಬಳಸಿಕೊಂಡ ನಮ್ಮ ಕವಿಗಳು ರಸಸ್ಯಂದಿಯಾದ ಕಾವ್ಯಗಳನ್ನು ನಿರ್ಮಾಣ ಮಾಡಿದ್ದಾರೆ. ಅವರು ನಮ್ಮ ಸಾಹಿತ್ಯವನ್ನು ವಿಶ್ವ ಸಾಹಿತ್ಯದ ಮಟ್ಟಕ್ಕೆ ಏರಿಸಿದ್ದಾರ. ಇಂಥ ನಮ್ಮ ಸಾಹಿತ್ಯದ ವ್ಯಾಪ್ತಿ-ದೀಪ್ತಿಗಳನ್ನು, ಅದರ ವೈವಿಧ್ಯತೆ ವಿಶೇಷತೆಗಳನ್ನು ಮತ್ತಷ್ಟು ವಿವರವಾಗಿ ತಿಳಿಯಲು ಡಾ|| ರಂ. ಶ್ರೀ. ಮುಗಳಿಯವರ 'ಕನ್ನಡ ಸಾಹಿತ್ಯ ಚರಿತ್ರೆ' ಹಾಗೂ ಪ್ರೊ. ತ. ಸು. ಶಾಮರಾವ್ ಮತ್ತು ಡಾ|| ರಾಜೇಶ್ವರಯ್ಯನವರ 'ಜನಪ್ರಿಯ ಸಾಹಿತ್ಯ ಚರಿತೆ' ಗಳನ್ನೂ ಓದಬಹುದು.



# ಕರ್ನಾಟಕ ಸಂಸ್ಕೃತಿಗೆ ಕೆಳದಿ ಅರಸರ ಕೊಡುಗೆ

**ಕೆಳದಿ ಗುಂಡಾಜೋಯಿಸ್**

---

ಕ್ರಿ.ಶ. ೧೪೯೯ ರಿಂದ ೧೭೬೩ ರವರೆಗೆ ಸುಮಾರು ೨೫೦ ವರ್ಷಗಳಿಗೂ ಹೆಚ್ಚಾಗಿ ದಕ್ಷಿಣ ಭಾರತದ ಚರಿತ್ರೆಯಲ್ಲಿ ವೈಭವದಿಂದ ಬಾಳಿದ ಕೆಳದಿ ರಾಜ್ಯವು ಮಧ್ಯಕಾಲೀನ ಇತಿಹಾಸದಲ್ಲಿ ಪ್ರಮುಖ ಸಂಸ್ಥಾನವಾಗಿದೆ. ವಿಸ್ತೀರ್ಣದಲ್ಲಿ ಹಿಂದಿನ ಮೈಸೂರು ಸಂಸ್ಥಾನ ಹಾಗೂ ಈಗಿನ ಇಂಗ್ಲೆಂಡಿಗಿಂತಲೂ ಹಿರಿದಾಗಿದ್ದ ಕೆಳದಿ ತನ್ನದೇ ಆದ ಸಂರಕ್ಷಣಾ ಪರಂಪರೆಯಲ್ಲಿ ರಾಜ್ಯವಾಳಿತು. ಭಾರತದ ದೇಶೀಯ ಸಂಸ್ಥಾನದ ಇತಿಹಾಸದಲ್ಲಿ ಕೆಳದಿಗೆ ಒಂದು ಮಹತ್ವ ಸ್ಥಾನವಿದೆ. ೧೫೪೫ ರಿಂದ ೧೫೫೮ ರವರೆಗೆ ಆಳಿದ ದೊಡ್ಡ ಸಂಕಣ್ಣನಾಯಕನು ದೆಹಲಿಯಲ್ಲಿ "ಚಾವಲಿಕೆ ಮಂಡ್ಯೆ" ಎಂಬಲ್ಲಿ ಮಠವನ್ನು ಸ್ಥಾಪಿಸಿ ಕಾಶಿಯಲ್ಲಿ ಜಂಗಮಪುರವನ್ನು ನಿರ್ಮಿಸಿ ಶಾಸನವನ್ನಿತ್ತನು. ೧೬೪೫-೧೬೬೦ ರಲ್ಲಿ ದಕ್ಷ ಸೇನಾನಿಯೂ ಹಾಗೂ ಆಡಳಿತ ಪಟುವೂ ಆಗಿದ್ದ ಪ್ರಸಿದ್ಧ ಶಿವಪ್ಪನಾಯಕನು ವಿಜಯನಗರವನ್ನು ಜೀರ್ಣೋದ್ಧರಿಸಿದನು. ತೋದರಮಲ್ ಮತ್ತು ಮಲ್ಲಿಕ್ ಅಂಬರ್‌ನಂತೆ ಈ ನಾಯಕನು ಹಳ್ಳಿಯನ್ನು ಅಭಿವೃದ್ಧಿಪಡಿಸುವಲ್ಲಿ ರೈತರ ಉದ್ಧಾರಕ್ಕೆ ಅವಿಶ್ರಾಂತವಾಗಿ ಹೋರಾಡಿ ಭೂಸುಧಾರಣೆಯನ್ನು ಉತ್ತಮ ರೀತಿಯಲ್ಲಿ ಕೈಗೊಂಡು ರಾಜ್ಯಕ್ಕೆ ರೆವಿನ್ಯೂ ಆದಾಯವನ್ನು, ಸಶಾಸ್ತ್ರೀಯವಾಗಿ

ನಿರ್ವಹಿಸಿ ಜಾರಿಗೆ ತಂದನು. ಈತನು ಏರ್ಪಡಿಸಿದ "ಶಿವಪ್ಪನಾಯಕನ ಸಿಸ್ತು" ಎಂಬುದು ಕರ್ನಾಟಕದಲ್ಲಿ ಗಾದೆ ಮಾತಾಗಿದೆ. ೧೬೬೧-೧೬೬೩ರಲ್ಲಿ ಮರಾಠೆಯ ಶಿವಾಜಿಯ ಮಗ ರಾಜಾರಾಮನನ್ನು ವೀರರಾಣಿ ಕೆಳದಿ ಚೆನ್ನಮ್ಮಾಜಿಯು ದೆಹಲಿಯ ಬಾದಷಹ ಔರಂಗಜೇಬನ ಉಪಟಳಗಳಿಂದ ರಕ್ಷಿಸಿ ಮಹಾರಾಷ್ಟ್ರದ ಅಸ್ತಿತ್ವಕ್ಕೆ ಕಾರಣಳಾದಳು. ಶಿವಾಜಿಯು ೮.೨.೧೬೬೫ ರಲ್ಲಿ ಕೆಳದಿ ರಾಜ್ಯದಲ್ಲಿ ಲೂಟಿ ನಡೆಸಿ ತನ್ನ ಪತಿಗೆ ಕಿರುಕುಳವನ್ನುಂಟು ಮಾಡಿದ್ದರೂ ಅದನ್ನು ಗಮನಕ್ಕೆ ತಾರದೆ ಮಹಾರಾಷ್ಟ್ರಕ್ಕೆ ನೀಡಿದ ಔದಾರ್ಯತೆಯು ಶ್ಲಾಘನೀಯವಾದುದು[೧]. ೧೭೩೯-೧೭೫೫ರಲ್ಲಿ ಆಳಿದ ಇಮ್ಮಡಿ ಸೋಮಶೇಖರನಾಯಕನ ಕಾಲದಲ್ಲಿ ದೆಹಲಿಯ ಮೊಗಲ್ ಷಾಹಿಯನ್ನು ಪುನರುದ್ಧರಿಸಲು ಬಾದಷಹನು ಈ ಅರಸನ ಸಹಾಯವನ್ನು ಯಾಚಿಸಿದ್ದರಿಂದ ತುಮಕೂರಿನ ಸೀರ್ಯದಲ್ಲಿ ತಾಯರಖಾನನನ್ನು, ನೇಮಿಸಿ ಬಾದಷಹನ ಪ್ರಾರ್ಥನೆಯನ್ನು ಮನ್ನಿಸಿದನು.

**ಸುಖೀರಾಜ್ಯ ಕೆಳದಿ.**

ದೇಶವು ಸಾಂಸ್ಕೃತಿಕ ಕ್ಷೇತ್ರದಲ್ಲಿ ಅಭಿವೃದ್ಧಿ ಪಡೆಯಲು ರಾಜಭಂಡಾರವು ಸಂಪದ್ಭರಿತವಾಗಿರಬೇಕಲ್ಲದೆ ಸಾಮಾನ್ಯ ಜನತೆಯೂ ನೆಮ್ಮದಿಯಿಂದ ಬಾಳುವಂತೆ ಇರಬೇಕಾದುದು ಅಗತ್ಯ. ಕೆಳದಿ ರಾಜ್ಯದ ಸಂಪತ್ತು ಹಾಗೂ ಸುಸ್ಥಿತಿಯನ್ನು ಕುರಿತು ಸಮಕಾಲೀನ ಇತಿಹಾಸ ಸಾಮಗ್ರಿಗಳು ಮನಸಾರೆ ಶ್ಲಾಘಿಸಿವೆ. ವಿದೇಶೀಯ ಪ್ರವಾಸಿ ಕಥನಗಳಲ್ಲಿ ಇವು ವಿಪುಲವಾಗಿ ಉಲ್ಲೇಖನಗೊಂಡಿವೆ. ೧೬೨೩ ರಲ್ಲಿ ಇಟಲಿ ಪ್ರವಾಸಿ ಪಿಯತ್ರೋ ಡೆಲ್ಲವಲ್ಲೆಯು ಕೆಳದಿ ರಾಜ್ಯದಲ್ಲಿ ಸಂಚರಿಸಿ ಮಾರ್ಗಗಳನ್ನು -

...... most of the situation is taken up by great and long streets, some of them shadow'd with high and very goodly trees growing in lakes of water of which there are many large ones, besides fields set full of trees like groves, so that it seems to consist of a city, lakes, fields and woods mingled together and makes a very delightful sight -

.... The way between Ikkeri and Saghar is very handsome, plain, broad, and almost always direct, here and there be set with great and thick trees which make a shadow and a delightful verdue,[೨]

೧೭೭೦ ರಲ್ಲಿ ಅಲೆಕ್ಸಾಂಡರ್ ಹ್ಯಾಮಿಲ್ಟನ್‌ನ ಹಾಗೂ ಜಾಕೋಬಸ್ ಕ್ಯಾಂಟರ್ ವಿಶ್ಶಾರನು ಕೆಳದಿಯ ಸಂಪತ್ತು ಹಾಗೂ ಸಾಮಾನ್ಯ ಜನತೆಯ ಸಂರಕ್ಷಣೆಯನ್ನು -

೧. Batavia Dag Register 1665 P.166

೨. ಇದರ ಅವಶೇಷಗಳನ್ನು ಈಗಲೂ ಗುರುತಿಸಬಹುದು.

"The Bednore (Keladi) prince is much more magnificent and powerful than those of Malabar. His kingdom produces many peculiar commodities, such as sandalwood, which is found there in great abundance, as well as rice,". He calls Bednore the granary of all Southern India. He also writes :- The city where the Raja holds his court lies some leagues in land, and is connected with the sea port by a fine road, planted with trees, which the inhabitants are obliged to keep in excellent order. This road is so secure that any stranger might go and sleep there with bags full of money, and nobody would molest or rob him, for if such a thing occurred, the people in the neighbourhood would not only be severely punished, but would be forced to make good the money"

ಎಂಬುದಾಗಿ ತಾವು ಕಣ್ಣಾರೆ ಕಂಡ ಕೆಳದಿ ರಾಜ್ಯದ ಸಾಮಾನ್ಯ ಜನತೆಯ ನೆಮ್ಮದಿಯ ಸುಸ್ಥಿತಿಯನ್ನು ಶ್ಲಾಘಿಸಿ ಪ್ರವಾಸೀ ಕಥನದಲ್ಲಿ ಉಲ್ಲೇಖಿಸಿ ಮುಂದಿನ ಪೀಳಿಗೆಗೆ ಬಿಟ್ಟು ಹೋಗಿದ್ದಾರೆ.[೧]

## ಕೆಳದಿ ಅರಸರ ಧಾರ್ಮಿಕ ನೀತಿ.

ಕೆಳದಿ ಅರಸರ ಧಾರ್ಮಿಕ ನೀತಿಯು ಈಗಿನ ಸರಕಾರಕ್ಕೆ ಕಣ್ತೆರೆಯಿಸುವಂತಹ ಶ್ಲಾಘ್ಯ ಧೋರಣೆಯಾಗಿದೆಯೆನ್ನಬಹುದು. ಈ ಅರಸರು ಸ್ವತಃ ವೀರಶೈವ ಧರ್ಮದವರಾಗಿದ್ದರೂ ಇತರ ಧಾರ್ಮಿಕ ಮತದವರನ್ನು ಗೌರವಿಸಿ ಆ ಮತಗಳ ಅನುಯಾಯಿಗಳಿಗೆ ಬಿಚ್ಚು ಮನಸ್ಸಿನಿಂದ ಆಶ್ರಯ ನೀಡಿ ದಾನಧರ್ಮಗಳನ್ನು ಮಾಡಿದ್ದಾರೆ. ಪೂಜ್ಯ ಶ್ರೀ ಸದ್ಯೋಜಾತ ಶಿವಾಚಾರ್ಯ ಸ್ವಾಮಿಗಳು ನಿರೂಪಿಸಿದಂತೆ ಧರ್ಮಗಳ ವಿಷಯದಲ್ಲಿ ಸಹಿಷ್ಣುತೆಯೇ ಅವರ ಮುಖ್ಯ ಧ್ಯೇಯವಾಗಿತ್ತು.[೨] ಸರ್ವಧರ್ಮ ಸಮನ್ವಯತೆಯಲ್ಲಿ ಈ ದೊರೆಗಳು ಯಶಸ್ಸನ್ನು ಸಾಧಿಸಿದರು. ಅದ್ವೈತ, ದ್ವೈತ, ವಿಶಿಷ್ಟಾದ್ವೈತ, ಶಕ್ತಿವಿಶಿಷ್ಟಾದ್ವೈತ, ಜೈನ, ಇಸ್ಲಾಂ ಹಾಗೂ ಕ್ರೈಸ್ತ ಧರ್ಮಪಂಥೀಯರು ಮತೀಯ ದುರಭಿಮಾನದಿಂದ ಒಬ್ಬರನ್ನೊಬ್ಬರು ದ್ವೇಷಿಸದಂತೆ ರಕ್ಷಿಸಿಕೊಂಡು ಬಂದಿರುವ ಇವರ ಉದಾರ ನೀತಿಯು ಆಧುನಿಕ ಪೀಳಿಗೆಗೆ

---

೧. Hamilton : A New Account I P 158.

೨. 'ಕೆಳದಿ ಐತಿಹಾಸಿಕ ನಿಬಂಧಗಳು' ಪೂಜ್ಯ ಸದ್ಯೋಜಾತ ಶಿವಾಚಾರ್ಯಸ್ವಾಮಿಗಳ ಲೇಖನ 'ಕೆಳದಿ ಅರಸರ ಧಾರ್ಮಿಕ ನೀತಿ' ನೋಡಿರಿ, ಸಂ. ಡಾ|| ಜಿ. ಎಸ್. ದೀಕ್ಷಿತ್, ಕೆಳದಿ ವಸ್ತುಸಂಗ್ರಹಾಲಯ ಮತ್ತು ಸಂಶೋಧನಾ ಕೇಂದ್ರ. ೧೯೯೦.

ಮಾರ್ಗದರ್ಶಿಯಾಗಿದೆ. ಅದ್ವೈತ ಮಠಗಳಲ್ಲಿ ಒಂದಾದ ಶೃಂಗೇರಿಯು ಈ ಅರಸರಿಂದ ವಿಪುಲ ಪ್ರಯೋಜನ ಹೊಂದಿತು. ದ್ವೈತ ಕೇಂದ್ರವಾದ ಉಡುಪಿ ಶ್ರೀ ಕೃಷ್ಣದೇಗುಲದ ಜೀರ್ಣೋದ್ಧಾರವಲ್ಲದೆ ಮೂಡಬಿದರೆ ಜೈನಧಾರ್ಮಿಕ ದೇವಳವೂ[೧] ಇವರ ಪರಿಪೋಷಣೆಯಲ್ಲಿ ಸುರಕ್ಷಿತವಾಗಿ ಅಭಿವೃದ್ಧಿಯನ್ನು ಕಂಡಿತು. ಈ ಅರಸರು ಇಸ್ಲಾಂ ಧರ್ಮ ಪೋಷಣೆಯಲ್ಲಿ ಮಸೀದಿಯನ್ನು ನಿರ್ಮಿಸಿಕೊಟ್ಟಿರುವುದು ಗಮನಾರ್ಹವಾದುದು.[೨] ಅಂತೆಯೇ ವಿಶಾಲ ತಳಹದಿಯಲ್ಲಿ ಕ್ರೈಸ್ತಧರ್ಮವನ್ನು ಪೋಷಿಸಿಕೊಂಡು ಬಂದರು. 1632ರಲ್ಲಿ ವೀರಭದ್ರನಾಯಕನು ಮಲಹಗೋಪದ ತಾವರೆಗೆರೆಗೆ ಹೊಂದಿ ಕಟ್ಟಿಸಿದ ಮಸೀದಿಯ ಧರ್ಮಕ್ಕೆ ಅದೇ ಸೀಮೆಯ ಎಡಹಳ್ಳಿ ಗ್ರಾಮದಲ್ಲಿ ಭೂಮಿಯನ್ನು ಉಂಬಳಿಯಾಗಿತ್ತನು.[೩] ೧೭೨೭ರಲ್ಲಿ ಸೋಮಶೇಖರ ನಾಯಕನು ಮಂಗಳೂರಿನಲ್ಲಿ ಬಂಧಿತನಾಗಿದ್ದ ಕ್ರೈಸ್ತಪಾದ್ರಿಯೊಬ್ಬನನ್ನು ಅಗೋಸ್ತೀನ್ಯನ ಸಹಾಯದಿಂದ ಬಿಡುಗಡೆ ಮಾಡಿಸಿದನು. ಹಾಗೆಯೇ ಆಯಾ ಧರ್ಮದಲ್ಲಿ ನಂಬಿದವರನ್ನು ಮತಾಂತರಗೊಳಿಸದಂತೆ ಬಸಪ್ಪನಾಯಕನು ಕಟ್ಟುಪಾಡೂ ಮಾಡಿಸಿದನು.[೪]

**ಸಾಹಿತ್ಯ**

ಕೆಳದಿ ಅರಸರ ಕಾಲದಲ್ಲಿ ಸಾಹಿತ್ಯಗಳು ಸಮೃದ್ಧಿಯಾಗಿ ಬೆಳೆಯಿತು. ಸಾಮಾರು ೧೫ ಜನ ಸಂಸ್ಕೃತ ವಿದ್ವಾಂಸರು ಹಾಗೂ ಕವಿಗಳಿಂದ ೨೬ ಕೃತಿಗಳೂ, ೧೪ ವಿದ್ವಾಂಸರಿಂದ ೩೫ ಕನ್ನಡ ಕೃತಿಗಳೂ ಆಸ್ಥಾನದಲ್ಲಿ ಬೆಳಕು ಕಂಡವು. ಹಿರಿಯ ವೆಂಕಟಪ್ಪನಾಯಕ ಹಾಗೂ ಬಸಪ್ಪನಾಯಕನು ಸ್ವತಃ ವಿದ್ವಾಂಸರಾಗಿದ್ದರಿಂದ ಸಾಹಿತ್ಯದ ಬೆಳವಣಿಗೆಗೆ ವಿಪುಲ ಪ್ರೋತ್ಸಾಹ ಲಭಿಸಿತು. ೧೫೯೩-೧೬೨೯ರಲ್ಲಿ ಆಳಿದ ಹಿರಿಯ ವೆಂಕಟಪ್ಪನಾಯಕನು ಶಿವಗೀತ ವ್ಯಾಖ್ಯಾ ಮತ್ತು ವೀರಶೈವ ಸುಧಾವಾರಿಧಿ ಗ್ರಂಥಗಳನ್ನು ವಿರಚಿಸಿದನು. ಈತನ ಕಾಲದಲ್ಲಿ ತಿರುಮಲಭಟ್ಟನಿಂದ ಶಿವಾಷ್ಟಪದಿ ಮತ್ತು ಗೀತಗೌರೀವರ ಕೃತಿಗಳೂ ಕಾಶಿಯ ಭಟ್ಟೋಜೀ ದೀಕ್ಷಿತನಿಂದ ತತ್ತ್ವಕೌಸ್ತುಭ ಹಾಗೂ ಸಿದ್ಧಾಂತ ಕೌಮುದಿಯೂ ಬೆಳಕು ಕಂಡುವು.[೫] ಈ

---

೧. 'ರತ್ನಾಕರ' ಸಂಸ್ಮರಣ ಸಂಚಿಕೆಯಲ್ಲಿ "ಕೆಳದಿ ಅರಸರೂ ಮೂಡಬಿದರೆಯೂ" ನನ್ನ ಲೇಖನ, ಭಾಗತಿ ಪುಟ.೧೮, (ದ.ಕ. ಜಿಲ್ಲಾ IV ಕ.ಸಾ. ಸಮ್ಮೇಳನ. ೧೯೮೮.)

೨. ತೀರ್ಥಹಳ್ಳಿ ತಾಲ್ಲೂಕಿನ ಕೌಲೇದುರ್ಗದಲ್ಲಿರುವ ಈ ಮಸೀದಿಯನ್ನು ಪುರಾತತ್ವ ಇಲಾಖೆಯು ರಕ್ಷಿಸುವುದು ಸೂಕ್ತ. ೩. ಮೂಲ ತಾಮ್ರ ಶಾಸನ ಕೆಳದಿ ವಸ್ತುಸಂಗ್ರಹಾಲಯದಲ್ಲಿದೆ.

೪. ಕೆಳದಿ ಅರಸರು ಹಾಗೂ ಪೋರ್ಚುಗೀಸರು, ಪು.೧೩೫ (ಡಾ|| ಬಿ. ಎಸ್. ಶಾಸ್ತ್ರಿ, ಗೋವಾ)

೫. ಈಚೆಗೆ ಕೆಳದಿ ವಸ್ತು ಸಂಗ್ರಹಾಲಯದಲ್ಲಿ ಭಟ್ಟೋಜೀ ದೀಕ್ಷಿತನ ಅಪ್ರಕಟಿತ ಕೃತಿಯೊಂದು ಓಲೆಗರಿ ಹಸ್ತಪ್ರತಿಯಲ್ಲಿ ಲಭಿಸಿದೆ. ನನ್ನ ಮಾರ್ಗದರ್ಶನದಲ್ಲಿ ಪತ್ತೆಯಾದ "ಸ್ಮೃತಿ ದರ್ಪಣ" ಎಂಬ ಈ ಹಸ್ತಪ್ರತಿಯನ್ನು ಕುರಿತು ಅಸಿಸ್ಟೆಂಟ್ ಕ್ಯೂರೇಟರ್ ಶ್ರೀಕಲ್ಲಾಪುರ್‌ರವರು ದಾವಣಗೆರೆಯಲ್ಲಿ ೨೧.೭.೧೯೯೦ರಂದು ಜರುಗಿದ ಕರ್ನಾಟಕ ಇತಿಹಾಸ ಅಕಾಡೆಮಿ ವಿದ್ವತ್ ಸಭೆಯಲ್ಲಿ ಪ್ರಬಂಧವನ್ನು, ಸಾದರಪಡಿಸಿದ್ದು ಅಲ್ಲಿ ಅಪಾರ ಮೆಚ್ಚುಗೆ ಗಳಿಸಿತು. ಇದನ್ನು ಅವರೇ ಸಂಪಾದಿಸಿದ್ದಾರೆ.

ಕಾಲದಲ್ಲಿ ಕನ್ನಡ ಮತ್ತು ಸಂಸ್ಕೃತ ವಿದ್ವಾಂಸರುಗಳ ವಾಕ್ಯಾರ್ಥವು ರಾಜನ ಆಸ್ಥಾನದಲ್ಲಿ ಜರುಗಿ ವಿಶ್ವವಿದ್ಯಾಲಯದೋಪಾದಿಯಲ್ಲಿ ರಾಜಧಾನಿಯು ಕಂಗೊಳಿಸಿತು. ೧೬೨೩ರಲ್ಲಿ ಇಟಲಿ ಪ್ರವಾಸಿ ಪಿಯತ್ರೋ ಡೆಲ್ಲಾವಾಲ್ಲೆ ಅರಸರ ರಾಯಭಾರಿ ವಿಠುಲ ಶೆಣೈಸಿಂದ ತಾನು ಸ್ವದೇಶಕ್ಕೆ ತೆರಳುವ ಸಮಯದಲ್ಲಿ ಓಲೆಗರಿಯಲ್ಲಿ ಕೃತಿಯೊಂದನ್ನು ಬರೆಯಿಸಿ ಇಟಲಿಗೆ ಕೊಂಡೊಯ್ದಿರುವುದಾಗಿ ಪ್ರವಾಸಿ ಕಥನದಿಂದ ವ್ಯಕ್ತಪಡುತ್ತದೆ. ಭದ್ರಮ್ಮಾಜಿ ಇಕ್ಕೇರಿಯಲ್ಲಿ ಗೈಚಮ್ಮನು ಸತೀಸಹಗಮನ ಮಾಡಿದ ಕುರಿತು ರಾಯಭಾರಿಯು ರಚಿಸಿದ ಸೊನೆಟ್ ಒಂದೂ ಇಟಲಿಯಲ್ಲಿರುವುದಾಗಿ ಉಲ್ಲೇಖವಿದೆ.[೧]

ವೀರಶೈವಾಚಾರ ಕೌಸ್ತುಭ, ಮಾನಪ್ರಿಯ, ಹಿರಿಯ ಬಸಪ್ಪನಾಯಕನ ಶಿವತತ್ತ್ವರತ್ನಾಕರ, ಸುಭಾಷಿತ ಸುರದ್ರುಮ,[೨] ಮುಖ್ಯಮಂತ್ರಿಯಾಗಿದ್ದ ನಿರ್ವಾಣಯ್ಯನ ಶಿವಪೂಜಾ ವಿಧಿ[೩] ಕವಿ ಲಿಂಗಣ್ಣನ ಕೆಳದಿ ನೃಪವಿಜಯ, ಶಿವಪೂಜಾ ದರ್ಪಣ, ದಕ್ಷಾಧ್ವರ ವಿಜಯ, ಪಾರ್ವತೀ ಪರಿಣಯ, ಶಿವಕಲ್ಯಾಣ (ಯಕ್ಷಗಾನ),[೪] ಗಣಸಹಸ್ರನಾಮ. ಕೆಳದಿ ಶ್ರೀರಾಮೇಶ್ವರನ ಭಕ್ತಿಗೀತೆಗಳನ್ನೊಳಗೊಂಡ ವೆಂಕಣ್ಣ ಕವಿಯ ಕೀರ್ತನೆಗಳು,[೫] ಮುಂತಾದ ಕೃತಿಗಳು ಬೆಳಕು ಕಂಡಿವೆ. ಪ. ಪ್ರ. ಸೂ. ನಂ. ೨೩೧, ೨೫೧, ೨೪೬, ೨೪೩ (ಬ), ೨೪೭ ನೇ ಲಿಂಗಣ್ಣ ಕವಿಯ ಹಸ್ತಪ್ರತಿಗಳು ಕೆಳದಿ ಸಂಶೋಧನಾಲಯದಲ್ಲಿದ್ದು ಕ್ಯುರೇಟರ್ ಡಾ|| ವೆಂಕಟೇಶ್ ಜೋಯಿಸ್ ಪರಿಷ್ಕರಿಸಿ ಸಂಪಾದಿಸಲಿದ್ದಾರೆ. ಬೆಂಗಳೂರು ವಿಶ್ವವಿದ್ಯಾಲಯದ ಶ್ರೀ ಶಿವಣ್ಣನವರು ಅಲ್ಲಿನ ಹಸ್ತಪ್ರತಿ ಭಂಡಾರದಲ್ಲಿ ಲಭಿಸಿದ ಕೆಳದಿ ಅರಸರ ಕಾಲದ ಕೋರಣ್ಯದ ಶಿವಲಿಂಗಾಂಕಿತ ಅಪ್ರಕಟಿತ ಸ್ವರ ವಚನಗಳನ್ನು ಈಚೆಗೆ ಪ್ರಕಟಿಸಿ ಉಪಕರಿಸಿದ್ದಾರೆ.

**ಕಲೆ.**

ಈ ಅರಸರ ಕಾಲದಲ್ಲಿ ವಾಸ್ತುಶಿಲ್ಪವು ತನ್ನದೇ ಆದ ವಿಶಿಷ್ಟ 'ಕೆಳದಿ ಶೈಲಿ'[೬] ಯಲ್ಲಿ ಬೆಳವಣಿಗೆಯನ್ನು ಹೊಂದಿತು. ಬನವಾಸಿಯ ಕದಂಬರಿಂದ ಆರಂಭಿಸಿ ವಿಜಯನಗರದ

---

೧. ಕ್ಯುರೇಟರ್ ಡಾ|| ವೆಂಕಟೇಶ್ ಜೋಯಿಸ್‌ರ ಸಹಪಾಠಿ ಶ್ರೀ ಸಿ. ಎಸ್. ಅರವಿಂದರವರು ಸಂಶೋಧನಾ ವಿದ್ಯಾರ್ಥಿಯಾಗಿ ಇಟಲಿಗೆ ಹೋಗಿ ಇವುಗಳನ್ನು ಇಟಲಿಯ ತ್ರಿಯೇಸ್ಥೆ ಪುರಾತನ ಭಂಡಾರದಲ್ಲಿ ಸಂಗ್ರಹಿಸಿ ಒದಗಿಸಿರುವುದಕ್ಕೆ ಅವರಿಗೆ ಕೃತಜ್ಞತೆಗಳು. ರಾಯಚೂರಿನಲ್ಲಿ ಜರುಗಿದ ಕರ್ನಾಟಕ ಇತಿಹಾಸ ಅಕಾಡೆಮಿ ವಿದ್ವತ್ ಸಭೆಯಲ್ಲಿ ನಾನು ಇದನ್ನು ಸಾದರಪಡಿಸಿದ್ದೇನೆ.

೨. ಪ್ರಾಚ್ಯವಿದ್ಯಾ ಹಸ್ತಪ್ರತಿಭಂಡಾರ, ಭಂಡಾರಕರ್ ಸಂಶೋಧನಾ ಕೇಂದ್ರ, ಪೂನಾದಲ್ಲಿದೆ.

೩. ಶ್ರೀ ಜಗದ್ಗುರು ಮೂರು ಸಾವಿರ ಮಠ ಹುಬ್ಬಳ್ಳಿಯಲ್ಲಿದ್ದು ನನ್ನ ಸಂಶೋಧನೆಯಲ್ಲಿದೆ.

೪. ವಿಶ್ವವಿದ್ಯಾನಿಲಯದ ಮಹಾಪ್ರಬಂಧಕ್ಕೆ ಸಾದರ ಪಡಿಸಲು ನಾನು ವಿದ್ವಾಂಸರಿಗೆ ಎರವಲಾಗಿ ನೀಡಿದ್ದು ಅವರಿಂದ ಈವರೆಗೂ ನನಗೆ ಹಿಂದಿರುಗಿ ಬಂದಿರುವುದಿಲ್ಲ. ಪ್ರಬಂಧದ ಸಾರವನ್ನೊಳಗೊಂಡ ಓಲೆಯೊಂದು ಮಾತ್ರ ಇದೆ.

೫. ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಪ್ರಕಟವಾಗಿದೆ.

೬. ಕೆಳದಿ ಅರಸರ ಕಾಲದ ವಾಸ್ತು ಮತ್ತು ಮೂರ್ತಿಶಿಲ್ಪ : ಡಾ|| ಅ. ಸುಂದರ ಪು.೩೩ ನೋಡಿರಿ. ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ನಿರ್ದೇಶನಾಲಯ, ಮೈಸೂರು ೧೯೮೬

ಚಕ್ರವರ್ತಿಗಳ ಕಾಲದಲ್ಲಿ ನಿರ್ಮಿಸಿದ ಶಿಲ್ಪಕಲೆಗಳು ಈ ದೊರೆಗಳ ಅಧೀನದಲ್ಲಿದ್ದು ರಕ್ಷಣೆಯನ್ನು ಪಡೆದುವು. ಬೇಲೂರು, ಹಳೆಯಬೀಡು, ಮೂಡಬಿದರೆ, ಶೃಂಗೇರಿ, ಬನವಾಸಿ, ಕೊಲ್ಲೂರು, ಗೋಕರ್ಣ, ಕುಬಟೂರು, ಆನವಟ್ಟಿ, ಹಾನಗಲ್ ಮುಂತಾದ ಪ್ರಸಿದ್ಧ ಕ್ಷೇತ್ರಗಳಲ್ಲಿ ಕಲಾಸೌಂದರ್ಯದ ದೇಗುಲಗಳು ಕೆಳದಿ ಅರಸರ ಪ್ರೋಷಣೆಯಲ್ಲಿ, ಜೀರ್ಣೋದ್ಧರಿಸಲ್ಪಟ್ಟುವು. ಸುಮಾರು ೨೦೦ ಕ್ಕಿಂತಲೂ ಅಧಿಕ ದೇವಾಲಯ ನಿರ್ಮಾಣ ಹಾಗೂ ಜೀರ್ಣೋದ್ಧಾರ, ೧೨೭ ಮಠಗಳು ಹಾಗೂ ೨೭ ಅಗ್ರಹಾರಗಳು ಕೆಳದಿ ಅರಸರು ಸ್ಥಾಪಿಸಿ ರಕ್ಷಿಸಿದ ಕುರಿತು ಮಾಹಿತಿಗಳಿವೆ.[೧]

ಕೆಳದಿ ಶ್ರೀರಾಮೇಶ್ವರ, ವೀರಭದ್ರ, ಪಾರ್ವತಾಂಬಾ, ಇಕ್ಕೇರಿ ಅಘೋರೇಶ್ವರ, ಕೊಲ್ಲೂರು ಮೂಕಾಂಬಾ, ನಗರದ ನೀಲಕಂಠೇಶ್ವರ, ದೇವಗಂಗಾ, ಚಂಪಕ ಸರಸ್ಸು ಮುಂತಾದ ಕಲಾ ಸಾಂಸ್ಕೃತಿಕ ಸಂಪತ್ತುಗಳು ಈ ದೊರೆಗಳ ಸಾಂಸ್ಕೃತಿಕ ಸಾಧನೆಗಳನ್ನು ಬಿತ್ತರಿಸಿವೆ. ಪಾರ್ವತಾಂಬಾ ದೇವಾಲಯದ ಮೇಲ್ಭಾಗದಲ್ಲಿರುವ ಅಪೂರ್ವ ಮರಗೆತ್ತನೆಗಳು, ಕೆಳದಿ ರಾಜ ಲಾಂಛನ ಗಂಡಭೇರುಂಡವು ಭುವನೇಶ್ವರಿಯಲ್ಲಿ ಕಲಾಚತುರತೆಯನ್ನು ಪಡೆದುಕೊಂಡಿದೆ. ಶಿಲ್ಪಕಲೆಯ ಮಹಾದ್ವಾರಗಳು, ವಾಸ್ತುಪುರುಷ, ಇಕ್ಕೇರಿದೇವಾಲಯದ ಬಸವ ಮಂಟಪ, ಅಘೋರೇಶ್ವರ ಸುಂದರ ಮೂರ್ತಿ[೨], ಬೆಳ್ಳಿ ಬಂಗಾರದ ಮುಖವಾಡ ಹಾಗೂ ಆಭರಣಗಳು[೩] ಅಪೂರ್ವವಾದುದು, ವೀರಭದ್ರ ದೇವಾಲಯದಲ್ಲಿರುವ 'ಹಂಸಗಜ ಶಿಲ್ಪ'ವೊಂದು ಕುವೆಂಪು ವಿಶ್ವವಿದ್ಯಾಲಯದ ಲಾಂಛನವಾಗಿದೆ. ಗಂಡಭೇರುಂಡದ ಕಲಾತ್ಮಕ ಸೌಂದರ್ಯವು -

The Gandabherunda ceiling of this temple is a remarkable piece of sculpture. It is conceived in the best classical Indian style and is, perhaps, one of the few examples of its kind in the state. It illustrates in a naive and humorous manner how even animal forms could be used decoratively. It is closely connected with pillar form, decorations of the same kind that may be traced from Ashokan to Vijayanagar times. The design is a exquisitely conceived. Round about the square surface, runs floral border, with alternate lotus and jasmine flowers intertwined one into the other. At each of the four corners is a Simhalalata (or

---

೧. ಅನೇಕ ಅಗ್ರಹಾರಗಳು ಪೂರ್ಣಯ್ಯನ ಅಗ್ರಹಾರಗಳೆಂದು ತಪ್ಪುಗ್ರಹಿಕೆಯಿದೆ.

೨. ಈಗಲೂ ಇಕ್ಕೇರಿ ದೇವಾಲಯದಲ್ಲಿರುವ ಸಾಂಸ್ಕೃತಿಕ ಮೌಲ್ಯವುಳ್ಳ ಈ ಲೋಹದ ಕಲಾ ಪ್ರೌಢಿಮೆಯನ್ನು ೧೬೨೩ರಲ್ಲಿ ಭೇಟಿಯಿತ್ತ ಇಟಲಿ ಪ್ರವಾಸಿ ಡೆಲ್ಲವಲ್ಲೆ ಇದನ್ನು ಕಂಡು ತಲೆದೂಗಿ ಪ್ರವಾಸಿ ಕಥನದಲ್ಲಿ ಉಲ್ಲೇಖಿಸಿದ್ದಾನೆ.

೩. ಈ ಅರಸರು ನೀಡಿದ ದೇವರಿಗೆ ನೀಡಿದ ಬೆಳ್ಳಿ-ಬಂಗಾರದ ಆಭರಣಗಳು ಅಪಾರವಾಗಿದ್ದು ಅವುಗಳಲ್ಲಿ ಹಲವನ್ನು ನಾನು ಸಂಶೋಧಿಸಿದ್ದೇನೆ. (ಕೆಳದಿ ಅರಸರ ಸಾಂಸ್ಕೃತಿಕ ಸಿರಿಸಂಪತ್ತುಗಳು ಲೇಖನ ನೋಡಿರಿ ; ತರಂಗ ೨೨.೧.೧೯೮೯) ಐತಿಹಾಸಿಕ ಸಾಂಸ್ಕೃತಿಕ ಮೌಲ್ಯಗಳಾಗಿರುವ ಇವುಗಳ ರಕ್ಷಣೆಗೆ ಯಾದಿಯೊಂದನ್ನು ಸಿದ್ಧಪಡಿಸಲು ಯೋಜನೆಯೊಂದನ್ನು ನಾನು ಸರಕಾರಕ್ಕೆ ಸಲ್ಲಿಸಿದ್ದೇನೆ.

lion-head) embellished in a strikingly simple and chaste manner, the floriated tongue, in each case, being of a different design, but all the forms being cunningly connected one with the other by means of a budding flower placed between every recurring pair of lions from side to side, within this variegated but harmoniously blending floral head piece, is cut out the Gandabherunda (or double eagle) with two necks and two beaks, but with one body from below the neck and two legs. Its outspread wings and body, and its strong legs are shown in an impressive, but by no means inartistic, manner. In each beak, the eagle holds tight a fierce - looking but lamb-like line, which has standing on it and holding in its closedup claws an elephant ( a tusker). In its jewelled right legs it holds up another elephant (also a tuskar), by whose proboscis hangs an athlete ; likewise in its jewelled left leg it holds another elephant (similarly a tusker), which has its proboscis twisted round its left foreleg. A peculiarity of these creatures, hanging one by the other, is that there is life in them - which is in keeping with the popular Indian belief which regards these animal figures "as real animals standing one upon the other."

ಹೀಗೆ ವರ್ಣಿಸಲ್ಪಟ್ಟಿದೆ. ಕೆಳದಿ ನೃಪವಿಜಯದಲ್ಲಿ ಅರಮನೆಯ ವರ್ಣನೆ

*ಕಂ // ವೇಣುಪುರವರದ ಪಶ್ಚಿಮ*
*ದಾಣದೊಳತಿರಮ್ಯಮಾದ ರಾಜಾಲಯಮಂ*
*ಜಾಣರಿಪ್ಪಮೆನಲ್ ನಿ*
*ರ್ಮಾಣವನಾಗಿಸಿದನಾ ನೃಪಾಲವರೇಣ್ಯಂ*

*ವ// ಮತ್ತಮಾ ರಾಜಾಲಯಮಂ*

*ಕಂ// ದಾಳಿಂಬಂ ನವರಂಗಂ*
*ಪೇಳಲ್ಕಂ ಬಿರಿದುದೆಂಬ (?) ನಾಮಾಂಕಿತದಿಂ*
*ಮೇಳವಿಸಿದ ಚೌಕಿಯ ಸೌ*
*ಧಾಳಿಗಳಿಂ ರಚನೆಗೆಯ್ಸಿದಂ ಸಂತಸದಿಂ*

*ಇನಿತಲ್ಲದೆ ಕೆರೆ ಹಾಳ್ಬರ*
*ಮಿನಿಗರ್ಬು ಸುಪುಷ್ಪವಾಟ ಕೊಳಮುದಶಾಲೀ*
*ವಸವಾಪಿಕೂಪ ತೋಪುಗ*
*ಳನುದಿನಮುಜ್ಜ್ವಲಿಸೆ ರಚನೆಗೆಯ್ಸಿದನನುವಿಂ*

ವ|| ಇಂತು ರಚನೆಗೆಯ್ದಿ ಬಳಿಕ್ಕಾ ಸ್ಥಳಕ್ಕೆ ಚಂದ್ರಶೇಖರಪುರಮೆಂದು ನಾಮಾಂಕಿತಮಂ ಮಾಡಿಯದಕ್ಕೆ ತಕ್ಕ ಕೆಲವು ಸೀಮೆ ಭೂಮಿಗಳಂ ವಿಂಗಡಿಸಿ ಮನಬಂದ ವೇಳೆಯೊಳ್ ತಾನಲ್ಲಿಗೆ ವಿನೋದದಿಂ ವೈಹಾಳಿಯನೆಸಗಿ ವಿಹರಿಸುತ್ತುಂ ಮತ್ತಂ ವೇಣುಪುರದರಮನೆಯಂ ಕಾಜಿನಭವಂತಿ ಹೊಸಭವಂತಿ ಐದಂಕಣದುಪ್ಪರಿಗೆ ವಸಂತಮಹಲ್ ಚಂದ್ರಮಹಲ್ಗಳೆಂಬೀ ಸ್ಥಾನಗಳಿಂ ವಿಸ್ತಾರಂಗೆಯ್ದಿ ಕಟ್ಟಿಸಿ ಪೊಸತಾಗಿ ಗಜತುರಗಶಾಲೆಗಳಂ ಕಟ್ಟಿಸಿ ಮತ್ತಮಾ ವೇಣುಪುರದೊತ್ತಿನೊಳಾ ವೇಣುಪುರಕ್ಕುಪಪುರಮಾಗಿರ್ಪಂತು ಸಾಧಾರಣ ಸಂವತ್ಸರದಲ್ಲಿ ನಾಗಪಟ್ಟಣವೆಂಬ ಪೇಟೆಯಂ ನಿರ್ಮಾಣಂಗೆಯ್ದಿ ಶ್ರೀಮನ್ನೀಲಕಂಠೇಶ್ವರ ಸ್ವಾಮಿಯ ದೇವಸ್ಥಾನದ ರಂಗಮಂಟಪಂ ಮುಂತಾದ ಕೆಲವು ಪ್ರದೇಶಂಗಳಂ ಜೀರ್ಣೋದ್ಧಾರಮಂ ಮಾಡಿಸಿ 'ತಚ್ಛಿಖರಮಂ ಚಾಮೀಕರ ರಸ ಲಾಂಛನ ಲಾಂಛಿತಮಾದ ಲೋಹಪತ್ರ ಪಟ್ಟಿಕೆಗಳ ಕೆಲಸಗತಿಯಿಂ ರಂಜಿಪಂತು ರಚನೆಗೆಯ್ದಿ ಮತ್ತಮದಲ್ಲದೆ ಮುತ್ತಿನ ಸತ್ತಿಗೆ ಕರಿಬೆಗರಿಯ ಪಚ್ಚೆಯ ಸುವರ್ಣದ ಸುರುಗಿ ದಂಡೆ ಚಿನ್ನದ ಶಿಖರ ಮುಂತಾದ ವಿಚಿತ್ರ ನೂತನ ಪದಾರ್ಥಂಗಳಂ ನಿರ್ಮಾಣಂಗೆಯ್ದಿ ಮತ್ತಂ ಭುವನಗಿರಿಯ ದುರ್ಗವರಮನೆಯ ಭವಂತಿಗಳೊಳ್ ಶಾರಾಬ್ದಾರ ನಾಗಪ್ಪನ ಮುಖದಿಂ ಶಿಲಾಸ್ತಭಂಗಳಂ ನಿಲಿಸಿ ಜೀರ್ಣೋದ್ಧಾರಮಂ ಮಾಡಿಸಿ ಗಾಳಿಯುಪ್ಪರಿಗೆಯಂ ಕಟ್ಟಿಸಿ ಇಂತಾ ರಾಜಾಲಯಮಂ ದೃಢತರಮನಾಗಿಸಿ ರಾಜ್ಯಪ್ರತಿಪಾಲನಂಗೆಯ್ಯುತ್ತುಮಿರ್ದನಂತುಮಲ್ಲದೆಯುಂ.....

ಹೀಗೆ ಇಮ್ಮಡಿ ಸೋಮಶೇಖರನಾಯಕನಿಂದ ನಿರ್ಮಿಸಲ್ಪಟ್ಟ ರಾಜಧಾನಿ ಹಾಗೂ ಅರಮನೆಯು ನಯನ ಮನೋಹರವಾಗಿದ್ದು ಚೈನಾದೇಶದ ಇಟ್ಟಿಗೆ ಹಾಗೂ ಬಂಗಾರದ ತಗಡುಗಳಿಂದ ಆವೃತವಾದ ಮಹಾದ್ವಾರಗಳು ಮುತ್ತು ಹವಳಗಳಿಂದ ಶೋಭಿಸಿ ಚಿತ್ರ ವಿಚಿತ್ರ ಕೆತ್ತನೆ ಹಾಗೂ ಸುಂದರ ಕಲಾಕೃತಿಗಳಿಂದ ಕಂಗೊಳಿಸಿದ್ದಿತು. ಸುಂದರ ಹೂದೋಟಗಳಿಂದ ಕೂಡಿದ ಅರಮನೆಯ ವೈಭವವನ್ನು ಕವಿ ಲಿಂಗಣ್ಣನು ಮನೋಜ್ಞವಾಗಿ ಚಿತ್ರಿಸಿದ್ದಾನೆ. ಶಿವಮೊಗ್ಗದಲ್ಲಿರುವ ಕೆಳದಿ ಅರಸರ ಬೇಸಿಗೆ ಅರಮನೆ ಹಾಗೂ ಹಳೇನಗರದಲ್ಲಿ ನೀಲಕಂಠೇಶ್ವರ ದೇವಾಲಯದ ಶಿಖರದ ಬಂಗಾರದ ಲೇಪನ ಹೊರತು ಉಳಿದುದು ಕಾಲಗರ್ಭದಲ್ಲಿ ಅಡಗಿದೆ. ಇದು ನಮ್ಮ ಸಾಂಸ್ಕೃತಿಕ ಪರಂಪರೆಯಲ್ಲಿ ಕನ್ನಡಿಗರ ನಷ್ಟವಲ್ಲವೇ ?[೧]

ಇದೇ ದಿಸೆಯಲ್ಲಿ ಅಪೂರ್ವ ಕಲಾಸೌರಭಗಳಿಂದ ಕೂಡಿದ ಇಕ್ಕೇರಿ ಅಘೋರೇಶ್ವರ ಬೃಹತ್ ಶಿಲಾಮೂರ್ತಿಯೊಂದೂ ಕಣ್ಮರೆಯಾಗಿದ್ದು ಕಲ್ಕತ್ತಾ ಮ್ಯೂಜಿಯಂನಲ್ಲಿದೆಯೆಂದು

---

೧. ಮೈಸೂರಿನ ದಸರಾದಂತೆಯೇ ಕೆಳದಿಯ ದಸರಾ ವೈಭವವೂ ವೈಭವದಿಂದ ನಡೆಯುತ್ತಿತ್ತು. ಇದರ ಕುರುಹೂ ಕಾಣದಿರುವುದು ಕನ್ನಡಿಗರ ದುರ್ದೈವವಲ್ಲವೇ ? ಈ ಅರಸರ ಕಾಲದ ಬೃಹತ್ ಘಂಟೆಯೊಂದು ಆಂಸ್ಟರ್ ಡ್ಯಾಂ (Amster dam)ನಿಂದ ಬಂದಿದ್ದು ಶಿವಮೊಗ್ಗ ವಸ್ತುಸಂಗ್ರಹಾಲಯದಲ್ಲಿರಿಸಬೇಕಾಯಿತು ! ಇದನ್ನು ಕೆಳದಿ ಮ್ಯೂಜಿಯಂಗೆ ತರಿಸಿ ಪ್ರದರ್ಶಿಸಲು ಪ್ರಯತ್ನ ನಡೆಸಿದ್ದೇನೆ. ಭುವನಗಿರಿಯಲ್ಲಿದ್ದ ರಾಣಿಯ ಮಂಚವೊಂದು, ಮೈಸೂರಿನಲ್ಲಿ ಜಗನ್ಮೋಹಿನಿ ಅರಮನೆಯಲ್ಲಿದೆ.

ಹೇಳಲಾಗಿದೆ. ಇದರ ಭಗ್ನ ಶಿಲ್ಪದ ಭಾಗವೊಂದು ಇಕ್ಕೇರಿಯಲ್ಲಿದ್ದು ಈ ಕುರಿತು ನಡೆಸಿದ ನನ್ನ ಅನ್ವೇಷಣಾ ಸಂಶೋಧನೆಯನ್ನು ವಿದ್ವಾಂಸರಾದಿಯಾಗಿ ಪತ್ರಿಕೆಗಳೂ ಶ್ಲಾಘಿಸಿ ವರದಿ ಮಾಡಿವೆ[೧].

## ಜಾನಪದ ಕಲೆ

೧೬೨೩ರಲ್ಲಿ ಇಟಲಿ ಪ್ರವಾಸಿ ಪಿಯತ್ರೋ ಡೆಲ್ಲವಲ್ಲೆಯು ಉಲ್ಲೇಖಿಸಿದ ಜಾನಪದ ಸಂಗತಿಯೊಂದು ಗಮನಾರ್ಹವಾದುದು - ಆತನೇ ಉಲ್ಲೇಖಿಸಿದಂತೆ - (ಕನ್ನಡ ಸಾರಾಂಶ) .... ವೆಂಕಟಪ್ಪನಾಯಕನ ಓಲಗದವರು ಪೋರ್ಜುಗೀತ ರಾಯಭಾರಿಯನ್ನು ಕಾಗದಗಳೊಂದಿಗೆ ಕರೆದುಕೊಂಡು ಹೋಗಲು ಬಂದರು. ಅವರೊಂದಿಗೆ ಒಬ್ಬ ಪಾತರದವರು ಇದ್ದಳು. ಆತನ ಸಮಕ್ಷದಲ್ಲಿ ಅನೇಕ ಪ್ರಕಾರದ ಮಣತ ಕುಣಿತಗಳನ್ನು ಮಾಡಿ ತೋರಿಸಿದಳು. ಡೋಲು ಮತ್ತಿತರ ವಾದ್ಯಗಳು ಬಾರಿಸುತ್ತಿರಲು ಆಕೆ ಒಂದೇ ಕಾಲಿನ ಮೇಲೆ ನಿಂತು ಇನ್ನೊಂದರಿಂದ ದೊಡ್ಡದೊಂದು ಕಬ್ಬಿಣದ ಗಾಲಿಯನ್ನು ತಿರುಗಿಸುತ್ತಾ ಕೆಳಗೆ ಬೀಳದಂತೆ ಕುಣಿಯುತ್ತಿದ್ದಳು. ಅದೇ ವೇಳೆಗೆ ಕೈಯಲ್ಲಿ ಎರಡು ಹಿತ್ತಾಳೆಯ ಚೆಂಡುಗಳನ್ನು ಹಿಡಿದು ಗಾಳಿಯಲ್ಲಿ ಒಂದನ್ನು ಹಾರಿಸಿ, ಇನ್ನೊಂದನ್ನು ಹಿಡಿಯುತ್ತ ಒಮ್ಮೆಯೂ ಬೀಳದಂತೆ ಚಪಲತೆಯಿಂದ ಕುಣಿದು ತೋರಿಸುತ್ತಿದ್ದಳು. ಕೈಕಾಲುಗಳನ್ನು ಒಂದೇ ಸಲ ಹೀಗೆ ಕ್ರಿಯೆಯಲ್ಲಿ ತೊಡಗಿಸುವುದು ಹೆಚ್ಚಿನ ಅದ್ಭುತವೇ ಆಗಿತ್ತು. ಒಂದೇ ಕಾಲಿನ ಆಧಾರದ ಮೇಲೆಯೇ ನಿಂತು ಅನೇಕ ಚಮತ್ಕಾರಗಳನ್ನು ತೋರಿಸುತ್ತಿದ್ದಳು. ಅವಳನ್ನು ಕರೆದುತಂದ ಬೋಳುತಲೆಯ ಉದ್ದನ್ನ ಗಡ್ಡದ ಮುದುಕನೊಬ್ಬನು ಮೊದಲಿನಿಂದ ಕೊನೆಯ ತನಕ ''ಅಬುದ್, ಅಬುದ್, ಅಬುದ್'' ಎಂದು ಕೂಗುತ್ತಲೇ ಇದ್ದ. ಹೀಗೆಂದರೆ ಇವರ ಭಾಷೆಯಲ್ಲಿ ಅಹುದು ಎಂಬ ಅರ್ಥವಾಗುವದು. ಈ ಸಂದರ್ಭದಲ್ಲಿ ಅರ್ಥ - ''ಒಳ್ಳೆಯದು, ಶಾಭಾಷ್'' ಎನ್ನುವಂತಿದೆ[೨].

## ಉಪಸಂಹಾರ

ಭಾರತದ ಸಾಂಸ್ಕೃತಿಕ ಪರಂಪರೆಯಲ್ಲಿ ಕೆಳದಿ ನಾಯಕರ ಕೊಡುಗೆ ಅಪಾರವಾದುದು. ಸುಸಂಸ್ಕೃತ ಪೀಳಿಗೆಯಲ್ಲಿ ಬೆಳೆದುಬಂದ ಈ ದೊರೆಗಳು ಪರರ ಧಾಳಿಗಳಿಂದ ರಾಜ್ಯಕ್ಕೆ ವಿವಿಧ ರೀತಿಗಳಲ್ಲಿ ಆಪತ್ತುಂಟಾಗಿದ್ದರೂ ಅದನ್ನು ಪರಿಗಣಿಸದೆ ಪ್ರಜೆಗಳ ಕ್ಷೇಮಾಭಿವೃದ್ಧಿಯಲ್ಲಿ ಸಾಮಾನ್ಯ ಜನತೆಯನ್ನೂ ಸಂರಕ್ಷಿಸಿದುದು ಮಹತ್ವದ ಸಾಧನೆ. ಉನ್ನತ ಪರಂಪರೆಯನ್ನು ಕಾಯ್ದುಕೊಂಡು ಬಂದಿರುವಲ್ಲಿ ಈ ಅರಸರ ಹಲವಾರು ಸಾಧನೆಗಳನ್ನು ಹೀಗೆ ವಿಶ್ಲೇಷಿಸಬಹುದು.

೧. ಕೆಳದಿ ಅರಸರ ಕಲೆ ಮತ್ತು ವಾಸ್ತುಶಿಲ್ಪ ಕುರಿತು ವಿಶ್ವವಿದ್ಯಾಲಯಕ್ಕೆ ಮಹಾಪ್ರಬಂಧ ಸಾದರಪಡಿಸಲಿರುವ ಮೈಸೂರಿನ ಶ್ರೀಮತಿ ಸುಭದ್ರರವರಿಗೆ ನಾನೇ ಮಾರ್ಗದರ್ಶನ ನೀಡಿದ್ದೇನೆ.

೨. ಈ ಹಾಲದಲ್ಲಿ ಈ ಆಟದ ಕಲ್ಪನೆಯನ್ನೂ ಮಾಡುವಂತಿಲ್ಲ ! ಇಕ್ಕೇರಿಯ ಐತಿಹಾಸಿಕ ಹಿನ್ನೆಲೆ, ಕೆ. ಗುಂ. ಜೋ. ಪು. ೮೯, ೧೯೭೫.

1. ಸ್ವಸಾಮರ್ಥ್ಯಗಳಿಂದ ಗೋವಾ ಆದಿಯಾಗಿ ಅನೇಕ ಪ್ರಾಂತ್ಯಗಳನ್ನು ಸ್ವಾಧೀನಮಾಡಿಕೊಂಡಿದ್ದರೂ, ಅವುಗಳನ್ನು ಕೆಳದಿ ರಾಜ್ಯಕ್ಕೆ ಸೇರಿಸದೆ ವಿಜಯನಗರದ ಚಕ್ರವರ್ತಿಗಳನ್ನು ಗೌರವಿಸಿ, ತ್ಯಾಗ ಮನೋಭಾವಗಳಿಂದ ಆ ಸಾಮ್ರಾಜ್ಯಕ್ಕೆ ಅಳವಡಿಸಿ ಸ್ವಾಮಿನಿಷ್ಠರಾಗಿ ನಡೆದುಕೊಂಡಿರುವುದು[೧].

2. ವಿಜಯನಗರದ ಅವನತಿ ಕಾಲದಲ್ಲಿ ಚಕ್ರವರ್ತಿ ಶ್ರೀರಂಗರಾಯನು ಕೆಳದಿ ರಾಜ್ಯಕ್ಕೆ ರಕ್ಷಣೆಗಾಗಿ ಓಡಿಬಂದಾಗ ಸಾಮ್ರಾಜ್ಯದ ದುರವಸ್ಥೆಗೆ ಮರುಗಿ ಶಿವಪ್ಪನಾಯಕನು ಸಿಂಹಾಸನದಿಂದ ಕೆಳಗಿಳಿದು ಚಕ್ರವರ್ತಿಯನ್ನು ಯಾವ ರೀತಿಯಿಂದಲೂ ಮನನೋಯಿಸದೆ ಆಲಂಗಿಸಿಕೊಂಡು ಸನ್ಮಾನಿಸಿ ಗೌರವದಿಂದ ಸಕ್ಕರೇ ಪಟ್ಟಣದ ಆಧಿಪತ್ಯವನ್ನು ನೀಡಿದುದು.

3. ಪ್ರಖ್ಯಾತನಾದ ಮರಾಠೆಯ ಶಿವಾಜಿಯು ಕೆಳದಿ ರಾಜ್ಯಕ್ಕೆ ಧಾಳಿ ನಡೆಸಿ ಹಿರಿಯ ಸೋಮಶೇಖರ ನಾಯಕನ ಮನ ನೋಯಿಸಿದ್ದರೂ ಅವರ ಪಟ್ಟದ ರಾಣಿ ಚೆನ್ನಮ್ಮಾಜಿಯು ಇದನ್ನು ಗಮನಕ್ಕೆ ತಾರದೆ ಶರಣಾಗತರನ್ನು ರಕ್ಷಿಸುವಲ್ಲಿ ದೆಹಲಿಯ ಔರಂಗಜೇಬನ ಉಪಟಳದಿಂದ ಶಿವಾಜಿಯ ಮಗ ರಾಜಾರಾಮನನ್ನು ರಕ್ಷಿಸಿ ಮಹಾರಾಷ್ಟ್ರವನ್ನು ಉಳಿಸಿದುದು.

4. ದೆಹಲಿಯ ಮೊಗಲ್ ಬಾದಷಹರು ಕೆಳದಿ ರಾಜ್ಯಕ್ಕೆ ಕಿರುಕುಳವುಂಟು ಮಾಡಿದ್ದರೂ ಮೊಗಲ್ ಷಾಹೀ ಅಂತ್ಯಕಾಲದಲ್ಲಿ ಮಹಮ್ಮದ್ ಶಾಹಾನು ನಿಜಾಮನ ಮುಖಾಂತರ ಇಮ್ಮಡಿ ಸೋಮಶೇಖರ ನಾಯಕನನ್ನು ತನ್ನ ಪ್ರಾಂತ್ಯವನ್ನು ರಕ್ಷಿಸಲು ಪ್ರಾರ್ಥಿಸಿಕೊಂಡ ಮೇರೆಗೆ ಹಿಂದಿನ ಕಹಿಘಟನೆಗಳನ್ನು ಮನಸ್ಸಿಗೆ ತಾರದೆ ಅವನ ಪ್ರಾರ್ಥನೆಯನ್ನು ಮನ್ನಿಸಿ ಮೊಗಲರನ್ನು ಜೀರ್ಣೋದ್ಧರಿಸುವಲ್ಲಿ ತುಮಕೂರಿನ ಸಿರಾ ಪ್ರಾಂತಕ್ಕೆ ಮಿರಿಜಾ ಅದ್ದಂಗೆ ಬದಲಾಗಿ ತಯರ್ ಖಾನನನ್ನು ನೇಮಿಸಿ ತನ್ನ ಸುಸಂಸ್ಕೃತ ಪರಂಪರೆಯನ್ನು ವ್ಯಕ್ತ ಪಡಿಸಿದುದು.[೨]

ಈ ಅರಸರು ವೀರಶೈವ ಪಂಥೀಯರಾದರೂ ಮತೀಯ ದುರಭಿಮಾನ ತಾಳದೇ ಉದಾರವಾಗಿ ಆಯಾ ಧರ್ಮಕ್ಕೆ ಪ್ರೋತ್ಸಾಹ ನೀಡಿ ಧರ್ಮಸಹಿಷ್ಣುತೆ ಹಾಗೂ ಸಮನ್ವಯತೆಯ ಪಥದಲ್ಲಿ ಯಶಸ್ವಿಯಾಗಿ ರಾಜ್ಯವನ್ನು ರಕ್ಷಿಸಿದುದು. ಈಗಿನ ಪೀಳಿಗೆಗೆ ಇದು ಮಾರ್ಗಸೂಚಿಯಾಗಿದೆ.

---

೧. ಕೆಳದಿ ನೃಪ ವಿಜಯ, ಪು. ೨೪ ಕ.ಸಾ.ಪ. ನೋಡಿರಿ.

೨. ಕೆಳದಿ ರಾಜ್ಯದಲ್ಲಿ ತುಮಕೂರು ಜಿಲ್ಲೆಯ ಪ್ರದೇಶಗಳು , ಲೇ. ಗುಂ. ಜೋ. ಕ.ಸಾಪ. ೧೯೪೯ ನೋಡಿರಿ.

ಕೇರಳದಲ್ಲಿರುವ ಕಣ್ಣಾನೂರ್ ಜಿಲ್ಲೆಯನ್ನು ಕೆಳದಿ ರಾಜ್ಯದ ಅಧೀನಕ್ಕೆ ಒಳಪಡಿಸಿ ಕನ್ನಡದ ಹಿರಿಮೆಯನ್ನು ಸಾಧಿಸಿರುವುದು. ಮಹಾಜನ್ ವರದಿಯು ಇದನ್ನು ಗಮನಿಸಿದೆಯೇ ?[೧]

ರಾಜ್ಯದಲ್ಲಿ ಉಚಿತವಾಗಿ ಮಕ್ಕಳಿಗೆ ಹಾಲು ಬೆಣ್ಣೆ ದೊರೆಯುವಂತೆ ಏರ್ಪಾಟು; ಬರಗಾಲ ಸಮಯದಲ್ಲಿ ವಿಶೇಷವಾಗಿ ಪ್ರಜೆಗಳಿಂದಲೇ ದಾನ ಧರ್ಮಗಳು ಲಭಿಸುವಂತೆ ಪ್ರೋತ್ಸಾಹ (ಮೊಗಲರ ಧಾಳಿ ಸಮಯದಲ್ಲಿ ಚಿಕ್ಕಜಂಬೂರಿನ ಕಲ್ಲೇಗೌಡರು ತಮ್ಮ ಸ್ವಂತ ವೆಚ್ಚಗಳಿಂದ ಜಾನುವಾರುಗಳಿಗೆ ಮೇವು ಒದಗಿಸಿದುದು - ಎಪಿ.ಕ. ೮. ಶಿಕಾರಿಪುರ) ; ಸಮಾಜಕ್ಕೆ ಹಾಗೂ ದೇಶಕ್ಕೆ ಸೇವೆ ಸಲ್ಲಿಸಿದವರಿಗೆ ಸನ್ಮಾನಿಸಿ ಪ್ರೋತ್ಸಾಹಿಸಿರುವುದು ; ಮೃತರ ಆಸ್ತಿಯನ್ನು ಹಕ್ಕುದಾರರು ಇಲ್ಲದಿದ್ದಲ್ಲಿ ಸಾರ್ವಜನಿಕರಿಗೆ ಅನುಕೂಲವಾಗುವಂತೆ ದೇವಾಲಯ ಕೆರೆ ಕಟ್ಟೆಗಳಿಗೆ ಉಪಯೋಗಕ್ಕೆ ಲಭಿಸುವಂತೆ ಮಾಡಿರುವುದು.... ಇತ್ಯಾದಿ.

ಒಟ್ಟಿನಲ್ಲಿ ಕೆಳದಿಯ ನೆಮ್ಮದಿ ಹಾಗೂ ಸುಸಂಸ್ಕೃತ ನಡವಳಿಕೆಯ ಸ್ಥಿತಿಯನ್ನು ಪೂನಾ ವಿಶ್ವವಿದ್ಯಾಲಯದ ಪ್ರಧ್ಯಾಪಕ ಡಾ|| ಚಿಟ್ನೀಸ್‌ರವರು ಸಾಧಾರದೊಂದಿಗೆ -

Peace and order reigned supreme under the Keladi rulers, Law and Justice were respected in the Keladi State, and the people were on the whole happy and contented under their monarchs. About the security in the Keladi State, Alexander Hamilton has the following remarks to make : "The subjects of this country observe the laws so well, that robbery or murder are hardly heard of among them. And a stranger may pass through the country without being ask where he is going or what business he has.[೨] About the law abiding habits of the people of Mangalore, John Fryer says : "They have well constituted laws, and observe them obediently"[೩] Mr. Stoakes in his survey of Nagar Division remarks about the nature of the people of Bidnur thus : "I have no where in India seen so much honesty and veracity as among the country people of Nagara. The ryots of Nagara have always prided themselves on their nationality.[೪]

ಮಹಾಪ್ರಬಂಧದಲ್ಲಿ ಹೀಗೆ ಅಭಿಪ್ರಾಯಿಸಿದ್ದಾರೆ. ಇಂತಹ ಸುಸಂಸ್ಕೃತ ರಾಜ್ಯವನ್ನು ನೀಡಿದ ಕೆಳದಿ ಅರಸರ ಇತಿಹಾಸವತ್ತ ಈಗಿನ ರಾಜಕೀಯ ಹಾಗೂ ಆಡಳಿತ ಪಟುಗಳು ಕಣ್ಣು ಬಿಟ್ಟು

---

೧. ಕನ್ನಡ ಪ್ರಭ ೧೯೮೯ರ ಭಾನುವಾರ ಸಂಚಿಕೆಯಲ್ಲಿ ನನ್ನ ಲೇಖನ ನೋಡಿ. (ಕನ್ನಡಿಗರ ಹಿರಿಮೆ ಸಾರಿದ ಕೆಳದಿ)

೨. Alexander Hamilton New Account I.P. 158 ( See Ch II)

೩. John Fryer : A New Account P 180

೪. Stoakes, Survey of Nagar Division.

ನೋಡುವರೇ ? ಜನಸಾಮಾನ್ಯರಿಗೂ ಇಂತಹ ಸಂಸ್ಕೃತಿಯ ಪಾಲನೆಯಲ್ಲಿ ನೆಮ್ಮದಿಯಿಂದ ಬಾಳಲು ಕೆಳದಿ ಇತಿಹಾಸವನ್ನು ಮಾರ್ಗಸೂಚಿಯಾಗಿಟ್ಟು ಕೊಳ್ಳುವರೇ ? ಈ ರೀತಿಯ ಉಜ್ವಲ ಸಾಂಸ್ಕೃತಿಕ ಪರಂಪರೆಯ ಮಹಾತ್ಮಾ ಗಾಂಧಿಯ (ಕನಸಿನ !) ರಾಮರಾಜ್ಯದಂತೆ ಕೊಡುಗೆ ಸಲ್ಲಿಸಿದ ಕೆಳದಿ ಅರಸರಂತಹ ದೊರೆಗಳು - ಆಡಳಿತ ಪಟುಗಳು ಉದಯಿಸಿಯಾರೇ ?

## ಕೊನೆಯ ಮಾತು

ಕೆಳದಿ ಇತಿಹಾಸವನ್ನು ಘನೀಕೃತವಾಗಿ ರೂಪಿಸಲು ಮೂಲ ಆಕರಗಳು ಕರ್ನಾಟಕ ಹಾಗೂ ಹೊರನಾಡಿನಲ್ಲಷ್ಟೇ ಅಲ್ಲದೆ ಲಂಡನ್, ಲಿಸ್ಬನ್, ಸ್ಪೆಯಿನ್, ಪೋರ್ಚುಗಲ್, ಇಟಲಿ ಮುಂತಾದ ವಿದೇಶಗಳಲ್ಲಿಯೂ ಅಪಾರವಾಗಿದ್ದು ಚದುರಿಹೋಗಿವೆ. ವಿದ್ವಾಂಸರಲ್ಲಿ ವಿವಿಧ ತೊಡಕುಗಳಿಂದ ಸಂಶೋಧಿಸುವಲ್ಲಿ ಆರ್ಥಿಕಾದಿಯಾಗಿ ಅಪಾರ ಕಷ್ಟನಷ್ಟಗಳಿವೆ. ಶರಾವತಿ-ವಾರಾಹಿ ಯೋಜನೆಗಳಲ್ಲಿಯೂ ಕೆಳದಿ ಇತಿಹಾಸಕ್ಕೆ ಅಪಾರ ನಷ್ಟವುಂಟಾಗಿದ್ದು ಅವಶೇಷಗಳ ಆದಿಯಾಗಿ ಅನೇಕ ಸಾಮಗ್ರಿಗಳು ಮ್ಯೂಜಿಯಂ - ಸರಕಾರದ ಕಡತಗಳಲ್ಲಿ ಅಡಗಿ ಕುಳಿತಿವೆ. ಇವುಗಳೆಲ್ಲವನ್ನೂ ಸಶಾಸ್ತ್ರೀಯವಾಗಿ ಸಂಶೋಧನಾ ತಜ್ಞರ ತಂಡದೊಂದಿಗೆ ಸಮೀಕ್ಷೆ ಹಾಗೂ ಅಧ್ಯಯನ ಕೈಗೊಂಡಲ್ಲಿ ಘನೀಕೃತ ಇತಿಹಾಸವು ಬೆಳಕು ಕಾಣಲು ಸಾಧ್ಯ.

ಪ್ರಕೃತ ಉಪಲಬ್ಧ ಪ್ರಕಟಿತ - ಅಪ್ರಕಟಿತ ಆಕರಗಳನ್ನು ಬಳಸಿಕೊಂಡು ಹೊರನಾಡಿನವರಿಗೆ ಕೆಳದಿ ಇತಿಹಾಸದ ಪ್ರಾಮುಖ್ಯತೆಯನ್ನು ಅರಿಯುವಂತೆ ಇಂಗ್ಲಿಷು, ಹಿಂದಿ ಹಾಗೂ ಇತರ ಭಾರತೀಯ ಭಾಷೆಗಳಲ್ಲಿ ಕೆಳದಿ ಇತಿಹಾಸದ ಬೃಹತ್ ಸಂಪುಟವೊಂದು ಪ್ರಕಟವಾದಲ್ಲಿ ಮುಂದಿನ ಪೀಳಿಗೆಗೆ ಹಾಗೂ ಸಂಶೋಧನೆಗೆ ಮಹೋಪಕಾರ ಮಾಡಿದಂತಾಗುತ್ತದೆ. ಸದ್ಯಕ್ಕೆ ಇಷ್ಟದರೂ ಆಗಲೆಂದು ಪ್ರಾರ್ಥಿಸುತ್ತಾ ನನ್ನ ಉಳಿದ ಜೀವಮಾನದಲ್ಲಿ ಇದನ್ನು ಕಣ್ಣಾರೆ ಕಾಣಲು ಸಾಧ್ಯವೇ ಎಂಬುದು ಕಾಲವೇ ನಿರ್ಧರಿಸಬೇಕಲ್ಲವೇ ?



# ಜಿನಸೇನರ ಪೂರ್ವಪುರಾಣದಲ್ಲಿ 'ಕಾವ್ಯಕಲ್ಪನೆ'ಯ ನೆಲೆಗಳು

ಮಲ್ಲೇಪುರಂ ಜಿ.ವೆಂಕಟೇಶ್

---

ಸಂಸ್ಕೃತ ಸಾಹಿತ್ಯ ಚರಿತ್ರೆಯಲ್ಲಿ ಜೈನರ ಪಾತ್ರ ಸರ್ವವಿದಿತ. ದಕ್ಷಿಣಭಾರತದಲ್ಲಿ ಕ್ರಿ.ಶ. ೮ ಮತ್ತು ೯ನೆಯ ಶತಮಾನಗಳಲ್ಲಿ ಅಪೂರ್ವಕೃತಿಗಳು ರಚನೆಗೊಂಡವು. ಈ ಸಾಲಿನಲ್ಲಿ ಭಗವಜ್ಜಿನಸೇನರ 'ಪೂರ್ವಪುರಾಣ'ಕ್ಕೆ ದೊಡ್ಡ ಸ್ಥಾನವಿದೆ. ವೀರಸೇನರ ಶಿಷ್ಯರಾದ ಜಿನಸೇನರು 'ಪೂರ್ವಪುರಾಣ'ವನ್ನು ಬರೆದು ಪುರಾಣ ಮತ್ತು ಸಾಹಿತ್ಯ ಕಲ್ಪನೆಯ ಎಲ್ಲೆಯನ್ನು ವಿಸ್ತರಿಸಿದ್ದಾರೆ. ಸಂಸ್ಕೃತ ಜೈನಸಾಹಿತ್ಯದಲ್ಲಿ ಇದು 'ತಲೆವಣಿ'ಯಾದ ಕೃತಿ. ಕ್ರಿ.ಶ.೮೧೫ರಿಂದ ೮೭೭ರ ವರೆಗೆ ಜಿನಸೇನರು ಇದ್ದಿರಬೇಕೆಂದು ವಿದ್ವಾಂಸರು ಸ್ಥೂಲವಾಗಿ ಗ್ರಹಿಸಿದ್ದಾರೆ.

ಸಂಸ್ಕೃತ ಅಲಂಕಾರಶಾಸ್ತ್ರದ ಚರಿತ್ರೆಯಲ್ಲಿ ಎಂಟು ಮತ್ತು ಒಂಬತ್ತನೆಯ ಶತಮಾನಗಳು ಬಹಳ ಮುಖ್ಯವಾದವುಗಳು. ದಂಡಿ, ಭಾಮಹ, ವಾಮನರಂತಹ ಆಲಂಕಾರಿಕರು ಬೇರೆ ಬೇರೆ ನೆಲೆಗಳಿಂದ 'ಕಾವ್ಯಕಲ್ಪನೆ'ಯನ್ನು ಕುರಿತು ಆಲೋಚಿಸುತ್ತಿದ್ದ ದಿನಗಳು[೧]. ದೇಶೀಸಾಹಿತ್ಯದ ಸಂದರ್ಭದಲ್ಲಿ ಕಾವ್ಯಾಂತರ್ಗತ ಕಾವ್ಯಮೀಮಾಂಸೆಯ ಚರ್ಚೆ ನಡೆಯುತ್ತಿದ್ದ ಕಾಲವೂ ಆಗಿತ್ತು. ಹೀಗಾಗಿ, 'ಕಾವ್ಯಕಲ್ಪನೆ'ಯ ನೆಲೆಯನ್ನು ಎರಡು ದಿಕ್ಕುಗಳಿಂದ ಪರಿಭಾವಿಸಲು

---

೧. "ದಂಡಿಯು ಸು. ೭೦೦ ಕ್ಕಿಂತ ಈಚಿನವನಾಗಲಾರನೆನ್ನಲು ಅನೇಕ ಬಹುಮುಖ ಸಾಕ್ಷ್ಯಗಳಿವೆ" ಡಾ|| ಕೆ. ಕೃಷ್ಣಮೂರ್ತಿ: 'ಕನ್ನಡ ಕಾವ್ಯಾದರ್ಶ' ಶಾರದಾ ಮಂದಿರ, ಮೈಸೂರು ಪುಟ : ೫, ಮುನ್ನುಡಿ. ೧೯೭೫.

ತೊಡಗಿದ್ದ ಕಾಲ. ಇದನ್ನು ವಿಸ್ತರಿಸಿ ಹೇಳುವುದಾದರೆ: ಒಂದು ಶಾಸ್ತ್ರದ ನಿಲವು ಮತ್ತೊಂದು ಕಾವ್ಯದ ಅಥವಾ ಪುರಾಣ ಕಾವ್ಯದ ನಿಲವು. ಆಲಂಕಾರಿಕರು ಶಾಸ್ತ್ರದ ನೆಲೆಯಲ್ಲಿ ಚರ್ಚಿಸಿದರೆ ಕವಿಗಳು, ಪೌರಾಣಿಕ ಕವಿಗಳು ತಮ್ಮ ಕೃತಿ ಸಂದರ್ಭದ ನೆಲೆಯಲ್ಲಿ ಪ್ರತಿಕ್ರಿಯಿಸುತ್ತಿದ್ದರು. ಸಂಸ್ಕೃತ ಕಾವ್ಯದ ಚರಿತ್ರೆಯನ್ನು ನೋಡಿದರೆ; ಈ ಬಗೆಯ ಅಂದರೆ: ಕೃತಿ ಸಂದರ್ಭದ ಮುಖಾಂತರ ಪ್ರತಿಕ್ರಿಯಿಸಿದ್ದು ಕಡಿಮೆ - ಎಂದೇ ಹೇಳಬೇಕು. ''ಕನ್ನಡ ಕಾವ್ಯಕ್ಕೆ ವಿಶಿಷ್ಟವೆಂಬಂತೆ ತೋರುವ 'ಕಾವ್ಯಾಂತರ್ಗತ ಕಾವ್ಯಚರ್ಚೆ'ಯೊಂದು ಪ್ರಾರಂಭವಾದದ್ದು ಬಹುಶಃ ಜಿನಸೇನಾಚಾರ್ಯರ ಪೂರ್ವಪುರಾಣದಿಂದಲೇ ಎಂದು ಕಾಣುತ್ತದೆ. ಇದು ಸಂಸ್ಕೃತ ಗ್ರಂಥವಾದರೂ, ಅದುವರೆಗಿನ ಸಂಸ್ಕೃತ ಕಾವ್ಯದಲ್ಲಿಲ್ಲದ ಈ ಒಂದು ಪದ್ಧತಿ ಕರ್ನಾಟಕದಲ್ಲಿ ನೃಪತುಂಗನ ಕಾಲದಲ್ಲಿ ಪೂರ್ವಪುರಾಣದ ಪೀಠಿಕಾ ಪ್ರಕರಣದಲ್ಲಿ ಸುಮಾರು ೪೦ ಶ್ಲೋಕಗಳಷ್ಟು ವಿಸ್ತಾರದಲ್ಲಿ ಕಾವ್ಯಲಕ್ಷಣವನ್ನು ಕುರಿತು ಅಂದರೆ : ಕಾವ್ಯದ ವಸ್ತು, ಕಾವ್ಯದ ರೀತಿ, ಉತ್ತಮ ಕಾವ್ಯದ ಲಕ್ಷಣ, ಪ್ರಯೋಜನ, ಅಕವಿ ಹಾಗೂ ಕುಕವಿ ವಿಚಾರಗಳು ನಿರೂಪಿತವಾಗಿವೆ. ಇವನ್ನು ಮೊದಲಿಗೆ ಪಂಪ ತನ್ನ ಎರಡೂ ಕಾವ್ಯಗಳಲ್ಲಿ ಕನ್ನಡದಲ್ಲಿ ರೂಢಿಗೆ ತಂದನು''[೨]. ಒಂದು ವಿಶೇಷ ಸಂಗತಿಯೆಂದರೆ : ಕನ್ನಡ ಕವಿಗಳು 'ಕಾವ್ಯಕಲ್ಪನೆ'ಯ ನೆಲೆಯನ್ನು ತಮ್ಮ ಕೃತಿಸಂದರ್ಭದ ಹಿನ್ನೆಲೆಯಲ್ಲಿಯೇ ವ್ಯಾಖ್ಯಾನಿಸುತ್ತಿದ್ದರು. ಪಂಪನಿಂದ ತೊಡಗಿ ಮುದ್ದಣನ ಕಾಲದವರೆಗೆ ಕಾವ್ಯಕಲ್ಪನೆಯ ನೆಲೆಯನ್ನು ಗುರುತಿಸಬಹುದಾಗಿದೆ.

ಸಂಸ್ಕೃತ ಆಲಂಕಾರಿಕರು, ಈ ಬಗೆಯ ಪ್ರತಿಕ್ರಿಯೆಯನ್ನು, ಚರ್ಚೆಯನ್ನು ಎಷ್ಟರಮಟ್ಟಿಗೆ ಸ್ವೀಕರಿಸಿದರು ? ಆ ನೆಲೆಗಳ ಬಗ್ಗೆ, ಅವರ ಒಟ್ಟು ಅಭಿಪ್ರಾಯ ಏನೆಂಬುದನ್ನು ತಿಳಿಯುವುದು ಸದ್ಯಕ್ಕೆ ಸಾಧ್ಯವಿಲ್ಲ. ಆದರೆ ಜಿನಸೇನಾಚಾರ್ಯರಂಥ ಪುರಾಣಕವಿಗಳು, ತಮ್ಮ ಕಾವ್ಯದ ಆರಂಭದಲ್ಲಿ ಸಾಕಷ್ಟು ವಿವರವಾಗಿಯೇ ಕಾವ್ಯದ ವಿಭಿನ್ನ ನೆಲೆಗಳ ಬಗ್ಗೆ ಪ್ರಸ್ತಾಪಿಸಿದ್ದಾರೆ.[೩] ಅಗ್ನಿಪುರಾಣದಲ್ಲಿ ಪ್ರಸ್ತಾಪಿತವಾಗಿರುವ ಹಾಗೆ, ವಿವರವಾಗಿ ಕಾವ್ಯಮೀಮಾಂಸೆಯ ಚರ್ಚೆ ಇಲ್ಲವಾದರೂ ಕವಿಕಾವ್ಯತತ್ತ್ವಗಳ ಬಗೆಗಿನ ಮಾತುಗಳು ಚರ್ಚೆಗೆ ಗ್ರಾಹ್ಯ. ಸಂಸ್ಕೃತ ಸಾಹಿತ್ಯದ ಒಟ್ಟು ಸಂದರ್ಭವೇ ವಿಚಿತ್ರ. ಒಂದು ಕಡೆ ಕಾವ್ಯಚರ್ಚೆಯ ವ್ಯಾಪಾರ ನಡೆಯುತ್ತಿತ್ತು. ಅವರ ಕಾವ್ಯಚರ್ಚೆ, ಸೃಷ್ಟಿಶೀಲಗೊಳ್ಳುತ್ತಿದ್ದ ಕಾವ್ಯಚರ್ಚೆಯ ಆಪ್ತನೆಲೆಗಳನ್ನು ಹುಡುಕುವ

೨. ಜಿ. ಎಸ್. ಶಿವರುದ್ರಪ್ಪ : ಕನ್ನಡ ಕವಿಗಳ ಕಾವ್ಯಕಲ್ಪನೆ : ಮೈಸೂರು ವಿಶ್ವವಿದ್ಯಾಲಯ, ಮೈಸೂರು ಪುಟ : ೬, ೧೯೮೯.

೩. ಜಿನಸೇನಾಚಾರ್ಯರಿಗಿಂತ ಮುಂಚೆಯೇ 'ಅಗ್ನಿಪುರಾಣ'ದಲ್ಲಿ ಕಾವ್ಯ, ಕವಿ, ರಸ, ಅಲಂಕಾರಗಳ ಕುರಿತ ವ್ಯಾಪಕ ಚರ್ಚೆ ಆಗಿರುವುದನ್ನು ಮರೆಯುವಂತಿಲ್ಲ. ವೈದಿಕಪುರಾಣಗಳ ನೆಲೆಯಲ್ಲಿ 'ಅಗ್ನಿಪುರಾಣ' ಕಾವ್ಯಾಂತರ್ಗತ ಚರ್ಚೆಯ ನೆಲೆಯನ್ನೂ ಶೋಧಿಸಿದರೆ, ಜೈನಪುರಾಣಗಳ ನೆಲೆಯಲ್ಲಿ 'ಪೂರ್ವ ಪುರಾಣ'ದ ಕಾವ್ಯಾಂತರ್ಗತ ಚರ್ಚೆಯ ನೆಲೆಯನ್ನು ಶೋಧಿಸಬೇಕಾಗುತ್ತದೆ. 'ಅಗ್ನಿಪುರಾಣ'ಕ್ಕೆ ಸಂಬಂಧಿಸಿದಂತೆ, ರಂ. ಶ್ರೀ. ಮುಗಳಿಯವರ ಅಧ್ಯಯನ ಸರಿಯಾಗಿ ನಡೆದಿದೆ. 'ಅಗ್ನಿಪುರಾಣ'ದ ಈ ಬಗೆಯ ಚರ್ಚೆಗೆ ನೋಡಿ ರಂ.ಶ್ರೀ. ಮುಗಳಿ 'ಪುನರ್ನವೋದಯ' ಅಗ್ನಿಪುರಾಣದಲ್ಲಿ ಕಾವ್ಯಮೀಮಾಂಸೆ ಪುಟ: ೧೭-೨೮, ರಸಿಕರಂಗ ಪ್ರಕಾಶನ, ಬೆಂಗಳೂರು (೧೯೮೬)

ಪ್ರಮೇಯವಾಗಿ ಇರಲಿಲ್ಲ. ಶಾಸ್ತ್ರದ ನೆಲೆಯಲ್ಲಿ ಏಕಮುಖೀ ಸಂಗತಿಗಳಲ್ಲಿ ಕಾವ್ಯಚರ್ಚೆಯನ್ನು ಬೆಳೆಸುತ್ತಿದ್ದರು. ಸಂಸ್ಕೃತ ಕಾವ್ಯಚರಿತ್ರೆಯ ಸಂದರ್ಭವೂ ಇದಕ್ಕೆ ಪೂರಕವಾಗಿಯೇ ಇತ್ತು. ಸಂಸ್ಕೃತ ಕಾವ್ಯಚರ್ಚೆಯು ಪ್ರಬಲ ಒತ್ತು ನಡೆಯುತ್ತಿದ್ದುದೇ ಏಳು ಮತ್ತು ಎಂಟನೆಯ ಶತಮಾನಗಳಲ್ಲಿ. ಆ ಕಾಲಕ್ಕೆ ಸಂಸ್ಕೃತ ಕಾವ್ಯ-ನಾಟಕಗಳ ಇಳಿಗಾಲ. ಕಾಳಿದಾಸ - ಭಾಸ - ಭವಭೂತಿಗಳು ಕೃತಿರಚನೆ ಮಾಡಿ ಐದಾರು ನೂರು ವರ್ಷಗಳು ಸಂದಿದ್ದವು. ಇಂಥ ಸಂದರ್ಭಗಳಲ್ಲಿ 'ಪುರಾಣಕವಿ'ಗಳು ಕಾವ್ಯಚರ್ಚೆಯನ್ನು ಬೆಳೆಸಲು ತೊಡಗಿದ್ದು ಬಹುಮುಖ್ಯ ವಿಶೇಷವೆಂದೇ ಗ್ರಹಿಸಬಹುದು.

ಕಾವ್ಯತತ್ತ್ವಗಳನ್ನು ಶಾಸ್ತ್ರದ ನೆಲೆಯಲ್ಲಿ ಗ್ರಹಿಸುವುದೇನೋ ಸರಿ. ಆದರೆ, ಸೃಜನಶೀಲಗಳ ಕೃತಿ ಸಂದರ್ಭದಲ್ಲಿ ಪ್ರತಿಕ್ರಿಯಿಸಿದ್ದರೆ ಅದೂ ಮುಖ್ಯವಾಗುತ್ತದೆ. ಕೃತಿಸಂದರ್ಭದಲ್ಲಿ ಹೇಳುವ 'ಕಾವ್ಯಕಲ್ಪನೆ'ಯ ವ್ಯಾಖ್ಯಾನವು ಹಲವು ಮುಖ್ಯ ಸಂಗತಿಗಳತ್ತ ಹೋಗುತ್ತದೆ. ಒಂದು ಸಣ್ಣ ಸಂಗತಿಯೂ ಮುಖ್ಯ ಸಮಸ್ಯೆಗೆ ಪ್ರಚೋದನೆಯಾಗಬಹುದು. ಒಟ್ಟು ಕಾವ್ಯಮೀಮಾಂಸೆಯ ಚರ್ಚಿತ ನೆಲೆಗಳು ಒಂದು ಮುಖ್ಯ ಘಟ್ಟವನ್ನು ಮುಟ್ಟಿವೆ. ಅದೇ ರೀತಿ ಆಯಾ ಪ್ರಸ್ಥಾನಗಳ, ಆಯಾ ಘಟ್ಟಗಳು ನಡೆಸುವ ಸಂದರ್ಭದಲ್ಲಿ ಅವರಿಗೆ ಸಮಕಾಲೀನ ಕವಿಗಳು ನಡೆಸಿದ ಚಿಂತನೆಯನ್ನು ಮುಖಾಮುಖಿಯಾಗಿಸಿ ನೋಡಬೇಕಾದ ಆವಶ್ಯಕತೆಯಿದೆ. ವ್ಯಾಖ್ಯಾನಕಾರರ ಚಿಂತನೆಯ ನೆಲೆಗಳು ಬೇರೆ ಬೇರೆ ಮಟ್ಟದವುಗಳಾದರೂ ಒಟ್ಟು ಕಾವ್ಯತತ್ತ್ವದ ಅಧ್ಯಯನಕ್ಕೆ ಒಂದು ಪುಷ್ಟಿಯನ್ನು ಸಮಗ್ರ ನೆಲೆಯನ್ನು ತಂದುಕೊಡುತ್ತವೆ. ಮಲ್ಲಿನಾಥ ಮೊದಲಾದ ವ್ಯಾಖ್ಯಾನಕಾರರ ಪರಂಪರೆಯನ್ನು ಕಡೆಗಣಿಸುವ ಕಾವ್ಯತತ್ತ್ವದ ಅಧ್ಯಯನ ಅಷ್ಟು ಸಂಗತವಲ್ಲ. ವ್ಯಾಖ್ಯಾನಕಾರರು ಕೇವಲ ಸಿಕ್ಕು ಬಿಡಿಸುವರೆಂಬ ಅಪಪ್ರಥೆ ಅವರ ಮೇಲೆ ಕೂತಿದೆ. ಶಬ್ದಗಳಿಗೆ ಅರ್ಥ, ಸಮಾಸ ಮತ್ತು ಅನ್ವಯಗಳನ್ನು ಮಾತ್ರ ಅವರ ವಿವಕ್ಷೆಗೆ ಒಳಪಟ್ಟಿವೆಯೆಂಬ ರೂಢಮೂಲವಾದ ಅಭಿಪ್ರಾಯ ಅವರನ್ನು ನಿರ್ಲಕ್ಷಿಸಲು ಕಾರಣವಾಗಿವೆ.

ಭಗವಜ್ಜಿನಸೇನರು ತಮ್ಮ ಕವಿ-ಕಾವ್ಯಕುರಿತ ಚರ್ಚೆಯನ್ನು 'ಕಾವ್ಯಾನುಚಿಂತನ'[೪]ವೆಂದು ಕರೆದುಕೊಂಡಿದ್ದಾರೆ. ತನ್ನ ಚಿಂತನೆಯ ನೆಲೆಯನ್ನು ಸಮಸ್ತ ವಾಙ್ಮಯದ ಹಿನ್ನೆಲೆಯಲ್ಲಿ ಮಂಡಿಸುವ ಹಂಬಲ ಅವರಿಗಿದೆ[೫]

---

೪. ಕಾವ್ಯಾನುಚಿಂತನೇಯಸ್ಯ ಎಂಬ ಮಾತು ಗಮನಾರ್ಹ. ನೋಡಿ I-೫೦

೫. ಯದ್ವಚೋದರ್ಪಣೇ ಕೃತ್ಸ್ನಂ ವಾಙ್ಮಯವು ಪ್ರತಿಬಿಂಬಿತಂ ||
ಯದ್ವಚೋದರ್ಪಣೇ ಕೃತ್ಸ್ನಂ ವಾಙ್ಮಯಂ ಪ್ರತಿಬಿಂಬಿತಂ |
ತಾನ್ ಕವೀನ್ ಬಹುಮನ್ಯೇಹಂ ಕಿಮನ್ಯೈಃ ಕವಿಮಾನಿಭಿಃ || I-೪೦

(ಯಾರ ಮಾತೆಂಬ ಕನ್ನಡಿಯಲ್ಲಿ, ಎಲ್ಲ ವಾಙ್ಮಯವು ಪ್ರತಿಬಿಂಬಿಸಿತ್ತೊ ; ಅಂತಹ ಶ್ರೇಷ್ಠ ಕವಿಗಳನ್ನು ನಾನು ಗೌರವಿಸುತ್ತೇನೆ. ತಾವೂ ಕೂಡ ಕವಿಗಳೆಂದು ಹೇಳಿಕೊಂಡು ಅಹಂಕಾರ ಪಡುವ ಕವಿಗಳಿಂದ ಏನು ಪ್ರಯೋಜನ ?)

ಹೀಗಿದ್ದುದರಿಂದಲೆ, ‘ಪೂರ್ವಪುರಾಣ’ದ ಕಾವ್ಯಾಂತರ್ಗತ ಕಾವ್ಯನೆಲೆಯ ಕಲ್ಪನೆಗಳಿಗೆ ಹೊಸ ನೆಲೆಯೊಂದು ತನಗೆ ತಾನೆ ಪ್ರಾಪ್ತವಾಗಿದೆ. ಇದೇ ಸಂದರ್ಭ ಪಂಪನಲ್ಲಿ ಬೇರೆಯದೇ ಆದ ಆಕೃತಿ ವಿಶೇಷವಾಗಿ ಪಡೆದಿದೆ.

ಪಂಪ : *ಮೃದುಪದಗತಿಯಿಂ ರಸಭಾ*
*ವದ ಪೆರ್ಚಿಂ ಪಣ್ಯವನಿತೆ ವೋಲ್ ಕೃತಿ ಸೌಂದ*
*ರ್ಯದ ಚಾತುರ್ಯದ ಕಣಿಯೆನೆ*
*ವಿದಗ್ಧ ಬುಧಜನದ ಮನಮನಲೆಯಲೆ ವೇಡಾ* // *I-೧೭//*

ಕಾವ್ಯವು ‘ಪಣ್ಯ(ಸೂಳೆ) ವನಿತೆಯಂತಿರಬೇಕೆನ್ನುವುದು ಪಂಪನ ಅಭಿಮತ. ಆ ಬಗ್ಗೆ ಪಂಪನಿಗೆ ಎಗ್ಗುಸಿಗ್ಗಿಲ್ಲ.[೬] ಇನ್ನೂ ಮುಂದುವರೆದು ಪಂಪ ಘೋಷಿಸುವ ನೆಲೆ ಈ ಥರದ್ದು.

*ಕವಿತಾ ರಹಸ್ಯಮಂ ಸ*
*ತ್ಕವಿಯಱಿಗುಮನೇಡಮೂಕನೇಡಂ ಜಡನಂ /*
*ಬವನಱಿಗುಮೆ ವಿಟನಱಿಗುಂ*
*ಕುವಿಟಂ ಸ್ತ್ರೀರತರಹಸ್ಯದೊಳಗಱಿದಪನೇ? (I-೨೦)*

ಜಿನಸೇನರು ಪ್ರಥಮತಃ ಪುರಾಣಕವಿ ಪರಂಪರೆಗೆ ಸೇರಿದವರು. ಇದನ್ನು ಒಂದು ಕಡೆ ತಮ್ಮನ್ನು ಗುರುತಿಸಿಕೊಂಡಿದ್ದಾರೆ. ‘‘ತತ್ಪುರಾಣಕವೀನೇವ ಮತ್ವಾ ಹಸ್ತಾವಲಂಬನಂ’ ಎಂಬ ಮಾತಿನಲ್ಲಿ ಈ ಬಗೆಯ ನೆಲೆಯಿರುವುದನ್ನು ನೋಡಬಹುದು. ‘ಪುರಾಣಕವಿ’ ಮತ್ತು ‘ಅಭಿಜಾತಕವಿ’ ಎಂಬ ಎರಡು ಪರಂಪರೆ ಇರುವಂತೆ ಸಂಸ್ಕೃತ ಸಾಹಿತ್ಯ ಓದಿದವರಿಗೆ ತಿಳಿಯುತ್ತದೆ. ಪುರಾಣಕವಿ ಪರಂಪರೆಯ ಸ್ವರೂಪ ಮತ್ತು ಅಭಿಜಾತ ಕವಿ ಪರಂಪರೆಯ ಸ್ವರೂಪಗಳ ಬಗ್ಗೆ ಎರಡು ಮುಖ್ಯ ಅಂಶಗಳನ್ನು ಸೂಚಿಸಬಹುದು.

೧. ಪುರಾಣಕವಿಗೆ, ಏಕಮುಖ ದೃಷ್ಟಿಗಿಂತ ಬಹುಮುಖ ದೃಷ್ಟಿ ಇರುತ್ತದೆ. ಅವನಿಗೆ ನೀತಿಯ ಕಡೆ ಒತ್ತು ಇದೆ. ನೈತಿಕ ಛಲ ಮತ್ತು ಉಪದೇಶ ‘ಪುರಾಣಕಾವ್ಯ’ದ ಪ್ರಮುಖ

---

೬. ಪಂಪನ ಈ ಮಾತಿಗೆ ತುಸು ಸಮೀಪವಾದ ಒಂದು ಶ್ಲೋಕ ‘ಪೂರ್ವಪುರಾಣ’ದಲ್ಲಿದೆ. ತುಸು ವಾಚ್ಯ ಎಂದರೂ ರೂಪಕದ ನೆಲೆಯಲ್ಲಿ ಜೀನಸೇನರು ಕೂಡ ಎಗ್ಗುಸಿಗ್ಗಿಲ್ಲದೆ ಬಳಸುತ್ತಾರೆ.

ಸಂಭೋಕ್ತುಮಕ್ಷಮಾಃ ಕೇಚಿತ್ ಸ್ವರಸಾತ್ ಕೃತಿಕಾಮಿನೀಂ /
ಸಹಾಯಾನ್ಕಾಮಯಂತೇನ್ಯಾನ ಕಲ್ಯಾ ಇವ ಕಾಮುಕಾಃ /-೬೭.

(ಕೆಲವರಿದ್ದಾರೆ, ಸ್ವಸಾಮರ್ಥ್ಯದಿಂದ ಕವಿತೆಯಂಬ ಹೆಣ್ಣನ್ನು ಸಂಭೋಗಮಾಡಲು ಅಸಮರ್ಥರಾಗುತ್ತಾರೆ. ರೋಗಿಗಳಂತೆ ಅಥವಾ ನಪುಂಸಕರಂತೆ ಇವರ ಪಾಡು. ಇಂಥವರು ಬೇರೆಯವರ ಸಹಾಯವನ್ನು ಅಪೇಕ್ಷಿಸುತ್ತಾರೆ). ಈ ಶ್ಲೋಕದೊಂದಿಗೆ ಪಂಪನ ಆದಿಪುರಾಣದ ಮೊದಲಾಶ್ವಾಸದ ಇಪ್ಪತ್ತನೆಯ ಪದ್ಯವನ್ನು ಹೋಲಿಸಿ ನೋಡಬೇಕು. ಜಿನಸೇನರಿಗಿಂತ, ಅರ್ಥಪೂರ್ಣ, ನೆಲೆಯಲ್ಲಿ ಪಂಪ ‘ಕಾವ್ಯ’ದ ಬಗ್ಗೆ ಎತ್ತುವ ಚರ್ಚೆ ‘ಸೂಕ್ತಿಗರ್ಭ’ವೇ ಆಗಿದೆ.

ನೆಲೆಗಳಾಗಿರುತ್ತವೆ. ಕಾವ್ಯ ಏನಿದ್ದರೂ ನೈತಿಕ ಫಲ ಮತ್ತು ಉಪದೇಶದ ನೆರಳಲ್ಲಿ ಸಾಗಬೇಕೆಂಬ ಪರಿಕಲ್ಪನೆ ಕೆಲಸ ಮಾಡಿದೆ.

೨. ಅಭಿಜಾತಕವಿಗೆ, ಕಾವ್ಯಕಲೆಯೇ ಪ್ರಧಾನ. ತನ್ನ ಗಮ್ಯಸ್ಥಾನ ರಸ-ಧ್ವನಿಗಳೇ ಸಮಾಜ ಮತ್ತು ಸಂಸ್ಕೃತಿಯ ಸೂಕ್ಷ್ಮಾಂಶಗಳನ್ನೆಲ್ಲ ತನ್ನ ಕಾವ್ಯದಲ್ಲಿ ಅಭಿವ್ಯಕ್ತಗೊಳಿಸಬಲ್ಲ. ಅವನ ಭಾಷೆ ಸೂಕ್ಷ್ಮತೆ ಹಾಗೂ ಧ್ವನಿಪಾರಮ್ಯದಿಂದ ಮುನ್ನುಗ್ಗುತ್ತಿರುತ್ತದೆ. ಅವನ ಕಾವ್ಯದಲ್ಲಿ ನೈತಿಕ ಫಲ ಇದ್ದರೂ ಅದು ಕಾವ್ಯದ ಒಟ್ಟು ಓಟಕ್ಕೆ ನೆರಳಾಗಿ ಇರುತ್ತದೆ. ಕಾಲದ ನೆರಳನ್ನು ತುಳಿದು ಬೆಳಕನ್ನಾಗಿ ಮಾಡಿಕೊಡಬಲ್ಲ ಕವಿತೆಯ ಕಡೆಗೆ ಅವನ ಒಟ್ಟು 'ಕಾವ್ಯದೃಷ್ಟಿ' ಹರಿಯುತ್ತಿರುತ್ತದೆ.

ಜಿನಸೇನರ 'ಕಾವ್ಯಕಲ್ಪನೆ'ಯ ನೆಲೆಗಳನ್ನು ಚರ್ಚಿಸುವ ಮೊದಲು ಕೆಲವು ಮುಖ್ಯ ಸಂಗತಿಗಳನ್ನು ನೆನಪಿಡಬೇಕು !

೧. ಜಿನಸೇನರು ಇಲ್ಲಿ ಕಾವ್ಯಚರ್ಚೆಯನ್ನು ಮುಂದುವರೆಸುತ್ತಿಲ್ಲ

೨. 'ಕಾವ್ಯಕಲ್ಪನೆ'ಯನ್ನು ತಮ್ಮ ಅಭಿವ್ಯಂಗ್ಯವಾದ 'ಪುರಾಣಕಾವ್ಯ'ದ ನೆಲೆಯಲ್ಲಿ ವ್ಯಾಖ್ಯಾನಿಸಿಕೊಳ್ಳಲು ತೊಡಗಿದ್ದಾರೆ.

೩. 'ಪುರಾಣ ಕಾವ್ಯ' ಮತ್ತು 'ಪುರಾಣ ಕವಿ' ಎಂಬ ಪರಿಭಾಷೆಗಳು ಅಭಿಜಾತ ಕಾವ್ಯಕಲ್ಪನೆಯ ನೆಲೆಗಿಂತ ಭಿನ್ನ.

೪. 'ಕಾವ್ಯಕಲ್ಪನೆ'ಗೆ ಅವರು ತೊಡಗಿರುವುದೇ ಏಕಮುಖ ನೆಲೆಗಳಲ್ಲಿ. ಅವರ ಏಕಮುಖತೆಗೆ ಒಟ್ಟು ಕಾವ್ಯಕಲ್ಪನೆಯ ವಿವಕ್ಷೆ ಆಧಾರವಾಗಿಲ್ಲ.

೫. ಜಿನಸೇನರ ಕಾವ್ಯಕಲ್ಪನೆಯ ಪ್ರಸ್ತಾಪ ಕೇವಲ ಸಾದೃಶ್ಯ ಮೂಲವಾದದ್ದೇ ಹೊರತು; ಅದೇ ಅವರ ಒಟ್ಟು ಚರ್ಚೆಯ ನೆಲೆಯಲ್ಲ.

ಜಿನಸೇನರ ಒಟ್ಟು ವಿವಕ್ಷೆಯಲ್ಲಿ ಕವಿ-ಕಾವ್ಯ ಮತ್ತು ಸಹೃದಯದ ಪರಿಕಲ್ಪನೆಗಳು ಕೆಲಸ ಮಾಡಿವೆ. ಕವಿ ಯಾರು ? ಎಂಬ ಪ್ರಶ್ನೆಗೆ ಅವರಲ್ಲಿ ನೇರ ಉತ್ತರವಿಲ್ಲದಿದ್ದರೂ ಪುರಾಣ ಬರೆಯುವ ಕವಿಗಳ ವಿವಕ್ಷೆ ಇದೆ.

"ಕವಯಃ ಸಿದ್ಧಸೇನಾದ್ಯ ವಯಂ ಚ ಕವಯೋ ಮತಾಃ" ಎಂಬ ಮಾತಿನಲ್ಲಿ "ಸಿದ್ಧಸೇನರೇ ಮೊದಲಾದವರು ಕವಿಗಳಾದರೆ ನಾವೂ ಕೂಡ ಕವಿಗಳೇ" ಎಂಬ ಮಾತಿದೆ. ಸಿದ್ಧಸೇನ ಮೊದಲಾದವರು ಜೈನಪರಂಪರೆಯ ಶಾಸ್ತ್ರಕವಿಗಳೇ. ಈ ಶ್ಲೋಕದ ಉತ್ತರಾರ್ಧದಲ್ಲಿ ಪದ್ಮರಾಗ ಮೊದಲಾದ ರತ್ನಗಳು ಮಣಿಗಳೇ. ಐದು ಬಣ್ಣವನ್ನು ಉಂಟು

ಮಾಡುವ ಮೇಚಕವೆಂಬ ಗಾಜು ಕೂಡ ಮಣಿಯಾಗಿದೆ. ಪದ್ಮರಾಗಾದಿಗಳಂತಿರುವ ಸಿದ್ಧಸೇನ ಮೊದಲಾದ ಕವಿಗಳಿಗೂ ಮೇಚಕವೆಂಬ ಗಾಜಿನಂತಿರುವ ತನಗೂ ಕವಿತೆಯಲ್ಲಿ ಸಾಮ್ಯವಿಲ್ಲ, ಕವಿಯೆಂಬ ಶಬ್ದದಲ್ಲಿ ಮಾತ್ರ ಸಾಮ್ಯವಿದೆ. ಹೀಗಾಗಿ ಯಾವ ಉತ್ಕೃಷ್ಟ ಕವಿಗಳ ವಚನವೆಂಬ ಕನ್ನಡಿಯಲ್ಲಿ ಸಮಸ್ತವಾದ ಶಾಸ್ತ್ರವು ಪ್ರತಿಬಿಂಬಿಸಿದ್ದಿತೋ ಅಂತಹ ಕವಿಗಳನ್ನು ನಾನು ಗೌರವಿಸುತ್ತೇನೆ. ''ಕಿಂ ಅನ್ಯೈಃ ಕವಿಮಾನಿಭಿಃ'' ತಾವೂ ಕವಿಗಳೆಂದು ಅಹಂಕಾರ ಪಡುವ ಬೇರೆ ಕವಿಗಳಿಂದೇನು ? ಎಂಬ ಪ್ರಶ್ನೆ 'ಪುರಾಣಕವಿ' ಎಂಬ ನೆಲೆಯಿಂದ ಮಾತ್ರ ವ್ಯಾಖ್ಯಾನಿಸಿಕೊಳ್ಳಬೇಕಾಗಿದೆ. ಏಕೆಂದರೆ ಮುಂದೆ ನೈಗಮಾದಿನಯಗಳನ್ನೂ ಸ್ಯಾದಸ್ತಿ ಸ್ಯಾನ್ನಾಸ್ತಿತ್ಯಾದಿ ಸಪ್ತಭಂಗೀ ವಿಕಲ್ಪಗಳನ್ನೂ ಉಳ್ಳ ಸಿದ್ಧಸೇನರು ಮಾತ್ರ ಕವಿಗಳೆಂಬ ವಿವಕ್ಷೆ ಜಿನಸೇನರದು. ಇಂಥವರಿಗೆ 'ಸಿದ್ಧಸೇನಕವಿರ್ಜೀಯಾತ್ (I-೪೨) ಎಂದು ಕೊನೆಗೆ ಹೇಳುತ್ತಾರೆ. ಇವರೊಡನೆ ಸಮಂತಭದ್ರಸ್ವಾಮಿ, ಶ್ರೀದತ್ತ, ಯಶೋಭದ್ರ, ಪ್ರಭಾಚಂದ್ರಾಚಾರ್ಯ, ಶಿವಕೋಟಿ ಮುನೀಶ್ವರರು, ಜಟಾಚಾರ್ಯರು, ವೀರಸೇನ ಮೊದಲಾದವರನ್ನು ನೆನೆಯುತ್ತಾರೆ. ಜಿನಸೇನರು ತಮಗಿಂತ ಹಿರಿಯರಾದ ಪರಮ ಆಚಾರ್ಯರನ್ನು ನೆನೆಸುವಾಗ ಕವಿ ಮತ್ತು ಕವಿತೆಯ ಕಲ್ಪನೆಗಳು ಮುಂಚಾಚುತ್ತವೆ. ಜಟಾಚಾರ್ಯರನ್ನು ನೆನೆಸುವಾಗ : ಕಾವ್ಯಾನುಚಿಂತನೇಯಸ್ಯ ಜಟಾಪ್ರಬಲ ವೃತ್ತಯಃ' (I-೫೦) ಕಾವ್ಯದ ಚಿಂತನೆಯಲ್ಲಿ ಯಾರ ಜಟೆಗಳು ಅರ್ಥಗಳನ್ನು ಅನುವಾದ ಮಾಡುತ್ತವೋ ಎಂದು ಹೇಳುತ್ತಾರೆ. ಇನ್ನೂ ಈ ಬಗೆಯ ಕೆಲವು ಮಾತುಗಳನ್ನು ಎತ್ತಿ ಹೇಳಬಹುದು.

ಕವೀನಾಂ ತೀರ್ಥಕೃದ್ದೇವಃ (I - ೫೨)
ಕವಿತ್ವಸ್ಯಪರಾ ಸೀಮಾ (I-೫೪)
ಕವಿವೃಂದಾರಕೋ ಮುನಿಃ (I-೫೫)
ಲೋಕವಿತ್ತ್ವಂ ಕವಿತ್ವಂ ಚ (I - ೫೬)

ಇಲ್ಲಿನ ಮಾತುಗಳಲ್ಲಿ ವಿಶೇಷ ಇಲ್ಲದಿದ್ದರೂ ಕವಿ ಮತ್ತು ಕವಿತೆಗೆ ಸಂಬಂಧಿಸಿದ ಮಾತುಗಳು ತೆಳುನೆಲೆಗಳಲ್ಲಾದರೂ ಹರಿಯುತ್ತಿದೆ. ಶಾಸ್ತ್ರ ಮತ್ತು ಪುರಾಣ ಕವಿಗಳ ಬಗೆಗಿನ ಇಲ್ಲಿನ ಒತ್ತಡ, ಜಿನಸೇನರ ಕವಿತ್ವ ಚಿಂತನೆಯ ಬೇರೆ ಬೇರೆ ಮುಖಗಳನ್ನು ಚಿಂತಿಸುವಂತೆ ಮಾಡುತ್ತವೆ.

*ಸ ಪೂಜ್ಯಃ ಕವಿಭಿರ್ಲೋಕೇ ಕವೀನಾಂ ಪರಮೇಶ್ವರಃ ।*
*ವಾಗರ್ಥ ಸಂಗ್ರಹಂ ಕೃತ್ಸ್ನಂ ಪುರಾಣಂ ಯಃ ಸಮಗ್ರಹೀತ್ ॥ I-೬೦*

[ಕವಿ ಶ್ರೇಷ್ಠರಾದ ಜಯಸೇನ ಗುರುಗಳು ಶಬ್ದಾರ್ಥ ಸಂಗ್ರಹವುಳ್ಳ ಚತುರ್ವಿಂಶತಿ ಪುರಾಣವನ್ನು ಸಂಕ್ಷೇಪವಾಗಿ ರಚಿಸಿದರು. ಲೋಕದಲ್ಲಿ ಕವಿಗಳಿಂದ ಪೂಜಿಸುವುದಕ್ಕೆ ಅವರು

ಮಾತ್ರ ಸಮರ್ಥರು.] ಇಷ್ಟೆಲ್ಲ ಮಾತಿಗೆ 'ಕವಿ' ಪರಿಕಲ್ಪನೆಯನ್ನು ಜಿನಸೇನರು ಅರ್ಥೈಸುತ್ತಿರುವುದು 'ಪುರಾಣಕಾವ್ಯ'ದ ನೆಲೆಯಲ್ಲಿ ಎಂಬ ಅಂಶವನ್ನು ಮರೆತು ನಡೆಯುವಂತಿಲ್ಲ. ಜಗತ್ಪೂಜ್ಯರಾದ ಕವಿಗಳು ಇರುವುದು ಅವರಿಗೆ ಗೊತ್ತು. ಉತ್ತಮಕಾವ್ಯ ಇರುವುದೂ ಕೂಡ ಅವರಿಗೆ ತಿಳಿದಿದೆ.

*ತ ಏವ ಕವಯೋ ಲೋಕೇ ತ ಏವ ವಿಚಕ್ಷಣಾಃ ।*
*ಯೇಷಾಂ ಧರ್ಮಕಥಾಂಗತ್ವಂ ಭಾರತೀ ಪ್ರತಿಪದ್ಯತೇ ॥ I - ೬೨*

ಮಾತು, ಧರ್ಮಕಥೆಗೆ ಅಂಗವಾಗಿರಬೇಕು. ಅಂಥ ಧರ್ಮಕಥೆಯನ್ನು ರಚಿಸುವವರು ಮಾತ್ರ ಕವಿಗಳು. ಅವರೇ ಲೋಕಕವಿಗಳು. ಅವರು ಮಾತ್ರ ವಿದ್ವಾಂಸರು. ಇದಿಷ್ಟು 'ಕವಿ' ಎಂಬ ಪರಿಕಲ್ಪನೆಯನ್ನು ಜಿನಸೇನರು ವ್ಯಾಖ್ಯಾನಿಸಿಕೊಳ್ಳುವ ರೀತಿ.

ಇನ್ನು ಕವಿತೆಯ ಬಗೆಗಿನ ಆಲೋಚನೆಯನ್ನು ಗಮನಿಸೋಣ. ಕವಿತೆಯು ಧರ್ಮಸಂಬಂಧಿಯಾಗಿರಬೇಕೆಂಬುದು ಜಿನಸೇನರ ಅಭಿಮತ. ಕವಿತೆ ಎರಡು ತೆರನಾದ ಫಲವನ್ನು ನೀಡುತ್ತದೆ. ಮೊದಲನೆಯದು ಧರ್ಮಮಾರ್ಗವನ್ನು ನಿರ್ಮಿಸುತ್ತದೆ. ಎರಡನೆಯದು ಪಾಪಾಸ್ರವಕ್ಕೆ ಕಾರಣವಾಗುತ್ತದೆ. ಧಾರ್ಮಿಕ ಕಾವ್ಯ ಮತ್ತು ಲೌಕಿಕ ಕಾವ್ಯ ಎಂದು ಜಿನಸೇನರು ಬಾಯಿಬಿಟ್ಟು ಹೇಳದೆ ಇದ್ದರೂ ಅವರ ಮನಸ್ಸಿನಲ್ಲಿರುವ 'ವಿವಕ್ಷೆ' ಅದೇ ತೆರನಾದದ್ದು.[೨]

''ಧರ್ಮಾನು ಸಂಬಧಿನೀಯಾಸ್ಯಾತ್ಕವಿತಾ ಸೈವಶಸ್ಯತೇ I-೬೩. ಇದಕ್ಕೆ ಪೂರಕವಾಗಿ ಮುಂದಿನ ಶ್ಲೋಕದಲ್ಲಿ ''ಕೆಲವು ಮಿಥ್ಯಾದೃಷ್ಟಿಗಳು ಕವಿಗಳಿಗಿಂಪಾದ ಕಾವ್ಯವನ್ನು ರಚಿಸುತ್ತಾರೆ. ಅಧರ್ಮವನ್ನುಂಟುಮಾಡುವುದರಿಂದ ಸತ್ಪುರುಷರನ್ನು ಸಂತೋಷಪಡಿಸುವುದಕ್ಕೆ ಸಮರ್ಥವಾದುದಲ್ಲ'' ಅನ್ನುವ ಮಾತಿನಲ್ಲಿಯೂ 'ಲೌಕಿಕ ಕಾವ್ಯ'ದ ರಚನೆಯ ಬಗ್ಗೆ ಜಿನಸೇನರಿಗೆ 'ಅಸಹನೆ' ಇದೆ. 'ಲೌಕಿಕ ಕಾವ್ಯ' ಶೃಂಗಾರವೇ ಮೊದಲಾದ ನವರಸಗಳಿಂದ ಕೂಡಿ, ಹದಿನೆಂಟು ವರ್ಣನೆಗಳು, ಉಚಿತ ಅಲಂಕಾರಗಳಿಂದ ಗುಣಗಳಿಂದ ಕೂಡಿರಬೇಕೆಂಬ ಆಲಂಕಾರಿಕರ ಮಾತಿಗೆ 'ಧಾರ್ಮಿಕ ಕಾವ್ಯ'ದ ನೆಲೆಯಲ್ಲಿ ಪ್ರತಿರೋಧವನ್ನು ಸೂಚಿಸುತ್ತಿದ್ದಾರೆ. ಇದಕ್ಕಾಗಿಯೇ ''ಕಾವ್ಯಂ ಗ್ರಂಥಂತಿ ಶ್ರುತಿಪೇಶಲಂ'' I - ೬೪

''ಕವಿಗಳಿಗಿಂಪಾದ ಕಾವ್ಯ ರಚಿಸುತ್ತಾರೆ'' ಎಂಬ ಮಾತು ನೇರವಾಗಿ 'ಧಾರ್ಮಿಕ ಕಾವ್ಯ' ಅಲ್ಲದುದರ ಬಗ್ಗೆ ಜಿನಸೇನರು ನಡೆಸುತ್ತಿರುವ ಆಲೋಚನೆ. ತಮ್ಮ ಕಾಲದವರೆಗೆ ನಡೆದು

---

೨. ಪಂಪ ತನ್ನ 'ವಿಕ್ರಮಾರ್ಜುನ ವಿಜಯಂ' ಕಾವ್ಯ ರಚಿಸುವ ಸಂದರ್ಭದಲ್ಲಿ ಹೇಳುವ 'ಬೆಳಗುವೆನಿಲ್ಲಿ ಲೌಕಿಕಮಂ ಅಲ್ಲಿ ಜಿನಾಗಮಮಂ' (IV-೬೦) ಎಂಬ ಮಾತನ್ನು ಈ ಸಂದರ್ಭದಲ್ಲಿ ನೆನಪು ಮಾಡಿಕೊಳ್ಳಬಹುದು. ಪಂಪನ ಈ ಮಾತಿಗೆ ಪರ್ಯಾಯವಾಗಿಯಾದರೂ ಜಿನಸೇನರ ಪ್ರಭಾವ ಇರುವುದನ್ನು ಮರೆಯುವಂತಿಲ್ಲ.

ಬಂದ 'ಕಾವ್ಯರಚನೆ'ಯ ಹಿಂದಿರುವ ಸ್ವರೂಪವನ್ನು ಕುರಿತು ಹೇಳುತ್ತ ವ್ಯಾಪಾರಿಗಳು ಮಾರಾಟಕ್ಕೆ ಸಾಮಾನುಗಳನ್ನು ತಂದು ಅದಕ್ಕೆ ಸದೃಶವಾದ ಬೇರೆ ಪದಾರ್ಥಗಳನ್ನು ಸೇರಿಸಿ ರೂಪಾಂತರ ಮಾಡಿ ಮಾರುವಂತೆ ಕೆಲವು ಕವಿಗಳು ಬೇರೆಯವರ ಕವಿತೆಯ ಅರ್ಥಗಳನ್ನು ಶಬ್ದಗಳನ್ನೂ ಬದಲಾಯಿಸಿ ಕಾವ್ಯಾರ್ಥಗಳನ್ನು ಪ್ರಸಿದ್ಧಪಡಿಸುತ್ತಾರೆಂದು ತಕರಾರು ಹೂಡುತ್ತಾರೆ. ನಿಜವಾದ ಕವಿ ತನ್ನವರೆಗಿನ ಭಾಷಿಕ ಸಾಮರ್ಥ್ಯವನ್ನು ಉಪಯೋಗಿಸಿಕೊಂಡು ಕಾವ್ಯರಚನೆಯನ್ನೂ ತನ್ನ ಪ್ರತಿಭಾ ಬಲದಿಂದ ನಿರ್ಮಾಣ ಮಾಡುತ್ತಾನೆ. ಅದು ಇಲ್ಲದಿದ್ದವನು ಪೇಲವ ಕೃತಿರಚನೆ ಮಾಡುತ್ತಾನೆ. ಬೇರೆಯವರ ಕವಿತೆಯ ಅರ್ಥ ಶಬ್ದಗಳನ್ನು ಬದಲಾಯಿಸಿಕೊಂಡು ಕಾವ್ಯದ ಅರ್ಥಗಳನ್ನು ವ್ಯಂಜಿಸುತ್ತಾನೆ. ಇಂಥ ಕವಿತೆ ಸೃಷ್ಟಿಶಕ್ತಿಯ ಪ್ರಶ್ನೆಯನ್ನು ಪರ್ಯಾಯವಾಗಿ ಬೇಡುತ್ತದೆ. ಅರ್ಥಗಾಂಭೀರ್ಯವಿಲ್ಲದ ಸುಂದರವಾದ ಶಬ್ದರಚನೆಯ ಬಗ್ಗೆ ಜಿನಸೇನರು ಎತ್ತುವ ಪ್ರಶ್ನೆಯೂ ಗಮನಾರ್ಹ[೮]. ಅಂಥ ರಚನೆ ಹೇಗಿರುತ್ತದೆಂದರೆ : ಅರಗಿನ ಮಣಿಗಳಿಂದ ಮಾಡಿದ ಕಂಠಾಭರಣದಂತೆ ಎಂದು ಸಾದೃಶ್ಯವೊಂದರ ಮುಖಾಂತರ ಚೇಡಿಸುತ್ತಾರೆ. ಅರ್ಥಗೌರವ ಕೆಲವರ ರಚನೆಯಲ್ಲಿದ್ದರೂ 'ಪದಸಂಯೋಜನೆ' ಇಲ್ಲದೆ ಬೀಳಾಗುತ್ತಾರೆ. ಪದಸಂಯೋಜನೆ ಸಹೃದಯನ ಹೃದಯವನ್ನು ಹೊಕ್ಕು ಆನಂದಪಡಿಸುತ್ತದೆ. ಅದಿಲ್ಲದಿದ್ದರೆ, ಅವನ ಕವಿತೆ ನೀರಸವೆಂದು ಹೇಳುವುದರಲ್ಲಿ ಜಿನಸೇನರ ದೃಷ್ಟಿ ಕವಿತೆಯ ಒಟ್ಟು ವ್ಯಾಪಾರದ ಕಡೆಗೆ ಅವರ ಗಮನ ಇರುವುದು ವಿಹಿತವಾಗಿದೆ.

ಕೆಲವು ಕವಿಗಳೇನೊ 'ಕಾವ್ಯರಚನೆ' ಮಾಡಲು ಉದ್ಯುಕ್ತರಾಗುತ್ತಾರೆ ; ಕವಿತೆಯನ್ನೂ ಪ್ರಾರಂಭಿಸಿಯೂ ಬಿಡುತ್ತಾರೆ. ಆದರೆ, ಅದನ್ನು ನಿರ್ವಹಿಸಲು ಅಸಮರ್ಥರಾಗುತ್ತಾರೆ. ಹೇಗೆಂದರೆ : ರೈತ ಕಂದಾಯ ಕೊಡಲು ಸಾಧ್ಯವಾಗದೆ ಅಳುವಂತೆ.

*ಯಥೇಷ್ಟಂ ಪ್ರಕೃತಾರಂಭಾಃ ಕೇಚಿನ್ನಿರ್ವಹಣಾಕುಲಾಃ ।*
*ಕವಯೋ ಬತ ಸೀದಂತಿ ಕರಾಕ್ರಾಂತ ಕುಡುಂಬಿವತ್ ॥* (I - ೨೧)

ಮಿಥ್ಯಾಮತಗಳನ್ನು ಪುಷ್ಟೀಕರಿಸುವುದಕ್ಕಾಗಿ ಕವಿತೆಯ ರಚನೆ ಮಾಡುವ ಬಗ್ಗೆ ಜಿನಸೇನರ ಅಭಿಮತದಲ್ಲಿ ಪರ್ಯಾಯವಾಗಿ ವೈದಿಕ ಕವಿಗಳ ರಚನೆಯ ಮೇಲೆ ಗಮನ ಇರುವಂತೆ ತೋರುತ್ತದೆ. ಕವಿತೆ ಬರೆಯುವುದಕ್ಕೆ ಅಗಾಧವಾದ ತಿಳಿವಳಿಕೆ ಬೇಕು.

*ತಸ್ಮಾದಭ್ಯಸ್ಯ ಶಾಸ್ತ್ರಾರ್ಥಾನುಪಾಸ್ಯ ಚ ಮಹಾಕವೀನ್*
*ಧರ್ಮ್ಯಂ ಶಸ್ಯಂ ಯಶಸ್ಯಂ ಚ ಕಾವ್ಯಂ ಕುರ್ವಂತು ಧೀಧನಾಃ ॥ ॥೭೪॥*

---

೮. ಭಾರವಿ ತನ್ನ 'ಕಿರಾತಾರ್ಜುನೀಯಮ್' ಕಾವ್ಯದಲ್ಲಿ 'ಅರ್ಥ' ಗಾಂಭೀರ್ಯದ ಮೇಲೆ ಇಟ್ಟಿದ್ದ ಒತ್ತನ್ನು ಈ ಸಂದರ್ಭದಲ್ಲಿ ನೆನಪು ಮಾಡಿಕೊಳ್ಳಬಹುದು. 'ಭಾರವೇರರ್ಥ ಗೌರವಮ್' ಎಂಬ ಮಾತಂತು ಪ್ರಸಿದ್ಧವಾನೆ ?

ಇದೆಲ್ಲವರ ಫಲಿತವೆಂದರೆ : ''ಬುದ್ಧಿಶಾಲಿಗಳು ಶಾಸ್ತ್ರಾರ್ಥಗಳನ್ನು ಅಭ್ಯಾಸ ಮಾಡಿ ಮಹಾ ಕವಿಗಳ ಉಪಾಸನೆ ಮಾಡಿ ; ಧರ್ಮಸಂಬಂಧೀ ಪ್ರಶಂಸಾರ್ಹವಾದ ಕಾವ್ಯರಚನೆಯನ್ನು ಮಾಡಲಿ'' ಎಂಬ ಜಿನಸೇನರ ಒಟ್ಟು 'ಕಾವ್ಯಧರ್ಮ'ದ ಬಗೆಗಿನ ಮಾತು 'ಧಾರ್ಮಿಕ ಕಾವ್ಯ'ದ ಚಿಂತನೆಯ ನೆಲೆಗಳನ್ನು ಪ್ರತಿನಿಧಿಸುವಂತಿದೆ.

ಜಿನಸೇನರು ಕಾವ್ಯರಚನೆ ಮಾಡುವ ವೇಳೆಗೆ ಕಾವ್ಯವನ್ನು ಕುರಿತ ಚಿಂತನೆ ಬೇರೆ ಬೇರೆ ನೆಲೆಗಳಲ್ಲಿ ನಡೆದದ್ದು ಸರಿತಾನೆ? ಈ ಹಿನ್ನೆಲೆಯಲ್ಲಿ ''ಪ್ರಾಚೀನ ಕವಿಗಳ ಅಭಿಪ್ರಾಯಗಳು ನವೀನ ಕವಿಗಳ ಅಭಿಪ್ರಾಯಗಳು ಕಾವ್ಯರಚನೆಯ ವಿಷಯದಲ್ಲಿ ಬೇರೆ ಬೇರೆಯಾಗಿವೆ. ಅವನ್ನೆಲ್ಲ ಅನುಸರಿಸಿ ಕವಿತೆಯನ್ನು ಮಾಡಲು ಯಾರು ಸಮರ್ಥರು ?''[೯]

*ಪುರಾಣಕವಯಃ ಕೇಚಿತ್, ಕೇಚಿನ್ನವಕುವೀಶ್ವರಾಃ ।*
*ತೇಷಾಂ ಮತಾನಿ ಭಿನ್ನಾನಿ ಕಸ್ತದಾರಾಧನೇಕ್ಷಮಃ ॥ (I- ೨೨)*

ಈ ಪ್ರಶ್ನೆಯೇ ಅವರನ್ನು ಕಾವ್ಯವಲ್ಲಿ ಯಾವುದಿದ್ದರೆ ಸುಗಮ, ಯಾವುದರಿಂದ ಕಾವ್ಯವಾಗುತ್ತದೆ. ಕಾವ್ಯವಾಗುವುದಕ್ಕೆ ಇರುವ ಪರಿಕರಗಳು ಯಾವುವು? ಎಂಬ ಪ್ರಶ್ನೆ ಮುಖ್ಯವಾಗುತ್ತದೆ.

*ಕೇಚಿತ್ ಸೌಶಬ್ದ್ಯಮಿಚ್ಛಂತಿ ಕೇಚಿದರ್ಥಸ್ಯ ಸಂಪದಂ ।*
*ಕೇಚಿತ್ ಸಮಾಸಭೂಯಸ್ತಂ ಪದೇವ್ಯಸ್ತಾಂ ಪದಾವಲೀಂ ॥*
*ಮೃದು ಬಂಧಾರ್ಥಿನಃ ಕೇಚಿತ್ ಸ್ಫಡಿಬಂಧ್ಯೈಷಿಣಃ ಪರೇ ।*
*ಮಧ್ಯಮಾಃ ಕೇಚಿದನ್ಯೇಷಾಂ ರುಚಿರನ್ಯೈವ ಲಕ್ಷ್ಯತೇ ॥ (I-೨೮-೨೯)*

ಕೆಲವರು ಒಳ್ಳೆಯ ಶಬ್ದಗಳನ್ನು ಅಪೇಕ್ಷಿಸುತ್ತಾರೆ. ಮತ್ತೆ ಕೆಲವರು ಸಮಾಸ ಹೆಚ್ಚಾಗಿರುವುದನ್ನು ಅಪೇಕ್ಷಿಸುತ್ತಾರೆ. ಇನ್ನೂ ಕೆಲವರು ವಿರಳವಾದ ಪದಸಮೂಹವನ್ನು ಇಚ್ಛಿಸುತ್ತಾರೆ. ಕೆಲವರಂತು ಮೃದುವಾದ ಕವಿತೆಯನ್ನು ಅಪೇಕ್ಷಿಸುತ್ತಾರೆ. ಬೇರೆಯವರು ಶ್ಲೇಷಯುಕ್ತವಾದ ಕವಿತ್ವವನ್ನು ಬಯಸುತ್ತಾರೆ. ಇನ್ನೂ ಕೆಲವರಿದ್ದಾರೆ ಅವರು ಮಧ್ಯಮ ಸ್ಥಿತಿಯ ಕಾವ್ಯವನ್ನು ಬೇಡುತ್ತಾರೆ. ಇನ್ನೂ ಕೆಲವರ ಅಭಿರುಚಿ ವಿಲಕ್ಷಣವಾಗಿಯೇ ಇದೆ. ಹೀಗೆ ಭಿನ್ನ ಭಿನ್ನವಾದ ಅಭಿಪ್ರಾಯಗಳು ಇರುವುದರಿಂದ ತಿಳಿದಂಥವರನ್ನು ಸಂತೋಷಪಡಿಸುವುದು

೯. ಸಂಸ್ಕೃತ ಕಾವ್ಯಮೀಮಾಂಸೆಯಲ್ಲಿ ಅಲಂಕಾರ ಪ್ರಸ್ಥಾನ ತನ್ನ ಎಲ್ಲ ಬಗೆಯ ಆಯುಧಗಳನ್ನು ಹಿಡಿದುಕೊಂಡು ಝಳಪಿಸುತ್ತಿದ್ದ ಕಾಲ. ದಂಡಿ - ಭಾಮಹರು ಆಗಿಹೋಗಿದ್ದರು. ವಾಮನ ಬಂದು ಗುಣಾಲಂಕಾರಗಳೊಡನೆ 'ರೀತಿ'ಪ್ರಸ್ಥಾನ ಮಂಡಿಸಿದ್ದ ಕಾಲ. ಇಂಥ ಕಾಲದಲ್ಲಿ ಜಿನಸೇನರು ಪ್ರಾಚೀನ ಮತ್ತು ನವೀನ ಕವಿಗಳೆಂಬ ಕವಿವಿವಕ್ಷೆ ಮಾಡುತ್ತಿರುವುದನ್ನು ನೋಡಿದರೆ 'ಕಾವ್ಯ ಮೀಮಾಂಸೆ' ರಚಿಸಿದ ಆಲಂಕಾರಿಕರನ್ನು ಅವರು 'ಕವಿ' ಎಂಬ ಪದದಿಂದಲೇ ನಿರ್ದೇಶಿಸುತ್ತಿದ್ದಾರೆಯೇ ಎಂಬ ಸಂಶಯ ಮೈದೋರುತ್ತದೆ. ಕಾವ್ಯಮೀಮಾಂಸೆಯ ಐತಿಹಾಸಿಕ ದೃಷ್ಟಿಕೋನದಿಂದ ಪ್ರಾಚೀನ ಆಲಂಕಾರಿಕರು ದಂಡಿ, ಭಾಮಹ, ವಾಮನ, ಕುಂತಕರು; ನವೀನರೆಂದರೆ ಆನಂದವರ್ಧನ ಮುಂತಾದವರು.

ಕಷ್ಟ. ಕಾವ್ಯರಚನೆಯ ಪರಿಕರಗಳು ಯಾವುದಿರಬೇಕೆಂಬ ಒಟ್ಟು ತೊಳಲಾಟ ೯ನೆಯ ಶತಮಾನದ ಕಷ್ಟಗಳ ಜತೆಯಲ್ಲಿ ಜಿನಸೇನರು ಅಭಿವ್ಯಕ್ತಗೊಳಿಸುತ್ತಿದ್ದಾರೆ. ದಂಡಿ ಭಾಮಹ ಕೆಲವು ಮಾತುಗಳು ಇಲ್ಲಿ ಪುನರ್ನಕರಿಸಿದೆ.[೧೦]

ಜಿನಸೇನರು ಕಾವ್ಯದ ಪರಿಕರಗಳ ಬಗ್ಗೆ ಆ ಕಾಲದ ಒಟ್ಟು ನೆಲೆಗಳನ್ನೂ ಅಭಿಪ್ರಾಯಗಳನ್ನೂ ಪೂರ್ವಪಕ್ಷವಾಗಿ ಮಂಡಿಸಿದ ಮೇಲೆ ಕಾವ್ಯದ ಬಗೆಗಿನ ತಮ್ಮ ನೆಲೆಯನ್ನು ಮೀಮಾಂಸೆಯನ್ನು ಸ್ಪಷ್ಟಪಡಿಸುತ್ತಾರೆ.

*ಕವೇರ್ಭಾರ್ವೋಥವಾ ಕರ್ಮಕಾವ್ಯಂ ತಜ್ಞೈರ್ನಿರುಚ್ಯತೇ ।*
*ತತ್ಪ್ರತೀತಾರ್ಥಮಗ್ರಾಮ್ಯಂ ಸಾಲಂಕಾರಮನಾಕುಲಮ್ ।* (*I-೯೪*)

ಕವಿಯ ಕವಿತೆಯನ್ನು ಮಾಡುವ ಶಕ್ತಿ ಅಥವಾ ಶಬ್ದಾರ್ಥರಚನಾ ರೂಪವಾದ ಕಾರ್ಯವು ಕಾವ್ಯವೆಂದು ಕವಿತೆಯನ್ನು ತಿಳಿದವರು ಹೇಳುತ್ತಾರೆ. ಅಂತಹ ಕಾವ್ಯವು ಪ್ರಸಿದ್ಧವಾದ ಅರ್ಥವುಳ್ಳದ್ದು ಅಗ್ರಾಮ್ಯವಲ್ಲದುದು, ಅಲಂಕಾರಗಳಿಂದ ಕೂಡಿ, ರಸಾಲಂಕಾರಗಳಿಂದ ಸಂಕುಚಿತವಲ್ಲದುದೂ ಆಗಿರಬೇಕು. ಇದಿಷ್ಟು 'ಕಾವ್ಯ'ವ್ಯಾಪಾರದ ಬಗೆಗಿನ ಜಿನಸೇನರ ನಿಲುಮೆ. ಇದು ಕಾವ್ಯ, ಇದಲ್ಲದುದು ಕಾವ್ಯವಲ್ಲ ಎಂಬ ತೀರ್ಮಾನ. ಇಲ್ಲಿನ ಮಾತನ್ನು ತುಸು ವ್ಯಾಖ್ಯಾನಿಸಿಕೊಳ್ಳಬೇಕಾದ ಅಗತ್ಯವಿದೆ. ಇಲ್ಲಿನ ಅಂಶಗಳನ್ನು ಆರು ಬಗೆಯಾಗಿ ವಿಂಗಡಿಸಿಕೊಂಡು ನೋಡಬಹುದು.

೧. ಕವಿತಾನಿರ್ಮಾಣದ ಶಕ್ತಿ
೨. ಶಬ್ದಾರ್ಥ ರಚನಾರೂಪವಾದ ಕಾರ್ಯ
೩. ಅರ್ಥಗೌರವದ ಪ್ರಸಿದ್ಧಿ
೪. ಗ್ರಾಮ್ಯವಲ್ಲದುದು
೫. ಅಲಂಕಾರಗಳಿಂದ ಕೂಡಿರುವುದು
೬. ರಸಾಲಂಕಾರಗಳಿಂದ ಸಂಕುಚಿತವಲ್ಲದುದು

''ಕವೇಃ ಭಾವಃ' ಎಂಬ ಮಾತನ್ನು ಶ್ಲೋಕದ ಮೊದಲಿಗೆ ಜಿನಸೇನರು ಬಳಸುತ್ತಾರೆ. ಭಾವಃ ಎಂದರೆ 'ಕಾವ್ಯನಿರ್ಮಾಣ ಶಕ್ತಿ' ಎಂದು ಒಬ್ಬ ವ್ಯಾಖ್ಯಾನಕಾರ ಬರೆಯುತ್ತಾನೆ. ಇದು 'ಪ್ರತಿಭೆ'ಗೆ ಪರ್ಯಾಯವಾದ ಮಾತಾಗಿದೆ. ಪ್ರತಿಭೆಯುಳ್ಳ ಕವಿಯು, ಶಬ್ದ ಮತ್ತು ಅರ್ಥರಚನೆಯ ನೆಲೆಯನ್ನು ಗಮನಿಸುತ್ತಾನೆ. ಕಾವ್ಯದ ಹೂರಣ ಶಬ್ದಾರ್ಥಗಳು ತಾನೆ ?[೧೧]

---

೧೦. ''ಗುಣಾಃ ತಿಷ್ಠಂತು ನಃ ಸ್ಫುಟಂ' (I-೮೫) ಇದರೊಡನೆ ಇಟ್ಟು ಪರಿಶೀಲಬಹುದು.

೧೧. ಕಾಳಿದಾಸ ರಘುವಂಶದ ಮೊದಲಿಗೆ ಹೇಳುವುದು ಈ 'ವಾಗರ್ಥ'ಗಳ ಸಂಬಂಧವನ್ನು ತಾನೆ ?'ವಾಗರ್ಥಾವಿವ ಸಂಪೃಕ್ತೌ' ಎಂಬಲ್ಲಿ ವಾಕ್ = (ಶಬ್ದ) ಅರ್ಥಗಳ ಸಂಯುಕ್ತ ನೆಲೆಯನ್ನು ವ್ಯಂಜಿಸಿ, ಕಾವ್ಯದ ಶರೀರವು ಶಬ್ದಾರ್ಥಗಳೆಂಬ ಆತ್ಮವನ್ನು ಹಿಡಿದು ನಡೆಯುತ್ತದೆಂಬ ಮಾತಿಗೆ ಬರುತ್ತಾನೆ.

ಇಂಥ ಶಬ್ದಾರ್ಥಗಳು 'ಪ್ರತೀತಾರ್ಥಂ' ಅಂದರೆ ಅರ್ಥಗೌರವಗಳಿಂದ ಕೂಡಿರಬೇಕು; ಪ್ರಸಿದ್ಧಿಯಾದ ಅರ್ಥವನ್ನು ಕಾವ್ಯದೊಳಗೆ ನಿಂತು ಕೆಲಸ ಮಾಡಬೇಕು. ಕಾವ್ಯಕ್ಕೆ ಸವಿರು ಮತ್ತು ಉಲ್ಲಾಸ ಪ್ರಾಪ್ತವಾಗುವುದೇ ಶಬ್ದದ ಅರ್ಥಗೌರವದಿಂದ. ''ಶಬ್ದಾರ್ಥೌ ಸಾಹಿತೌ ಕಾವ್ಯಂ'' ಎಂಬ ಮಾತೂ ''ಸಗಣೌ ಸಾಲಂಕಾರೌ ಪುನಃ ಕ್ವಾಪಿ' ಎಂಬ ಮಾತೂ ಅಲಂಕಾರ ಪ್ರಸ್ಥಾನದ ಚರ್ಚೆಯಲ್ಲಿ ಮೇಲಿಂದ ಮೇಲೆ ಬರುತ್ತದೆ. ಆದರೆ, ಒಂದು ಮಾತು; ಸಂಸ್ಕೃತದ ಯಾವ ಕಾವ್ಯಾಲಂಕಾರಿಕರು ಹೇಳದೇ ಇದ್ದ ಒಂದು ಅಂಶವನ್ನು ಜಿನಸೇನರು ಇಲ್ಲಿ ಹೇಳುತ್ತಾರೆ. ಅದು 'ಸಾಲಂಕಾರಮನಾಕುಲಂ' ಎಂಬ ಮಾತು. ಇದನ್ನು ವಿವರಿಸುತ್ತ 'ರಸಾಲಂಕಾರೈಃ ಅಸಂಕೀರ್ಣಂ' ಎಂದು ವಿವರಿಸುವ ರೀತಿಯನ್ನು ಗಮನಿಸಿದರೆ, 'ಕಾವ್ಯಕಲ್ಪನೆ'ಗೆ ಹೊಸತೊಂದು ನೆಲೆಯನ್ನು ಜಿನಸೇನರು ಸೇರಿಸುತ್ತಿದ್ದಾರೆ. ಜಿನಸೇನರ ಕಾವ್ಯರಚನೆಗೆ ಮುನ್ನ, ರಸಪ್ರಸ್ಥಾನ ಮತ್ತು ಅಲಂಕಾರ ಪ್ರಸ್ಥಾನಗಳು ಬೆಳವಣಿಗೆ ಕಂಡದ್ದು ಸರಿಯಷ್ಟೆ. ಈ ಬೆಳವಣಿಗೆ ಭಿನ್ನ ಭಿನ್ನ ನೆಲೆಗಳಲ್ಲಿ ಸಂಚರಿಸುತ್ತಿದ್ದವು. ರಸಕ್ಕೆ ಕಾವ್ಯದಲ್ಲಿ ಕೊಡುವ ಪ್ರಾಧಾನ್ಯ ಎಷ್ಟು ? ಅಲಂಕಾರಗಳಿಗೆ ಕಾವ್ಯದಲ್ಲಿ ಇರುವ ಪ್ರಾಧಾನ್ಯ ಎಷ್ಟು ? ಈ ಬಗೆಯ ಪ್ರಶ್ನೆಗಳು ಸುಮಾರು ನಾಲ್ಕು ನೂರು ವರ್ಷಗಳಷ್ಟು ಚರ್ಚೆಯ ನೆಲೆಯಲ್ಲೇ ಬೆಳೆಯುತ್ತಿದ್ದುವು. ರಸ ಮತ್ತು ಅಲಂಕಾರಗಳ ಒಂದಕ್ಕೊಂದು ಅಂತರ್ಭಾವವನ್ನು ಪಡೆದಿದ್ದು ಕಡಮೆ; ಇಲ್ಲವೆಂದರೂ ಸರಿಯೇ. ಹೀಗಾಗಿ ಜಿನಸೇನರು ತಮ್ಮ 'ಪುರಾಣಕಾವ್ಯ'ದ ನೆಲೆಯಲ್ಲಿ ಕಾವ್ಯಕಲ್ಪನೆಯ ನೆಲೆಯನ್ನು ವಿಸ್ತರಿಸಿಕೊಂಡು ರಸ ಮತ್ತು ಅಲಂಕಾರಗಳ ಪ್ರಾಧಾನ್ಯ ನೀಡಿದ್ದು ಮಹತ್ವದ ಸಂಗತಿ.

ಮೇಲಿನ ಅಂಶವನ್ನು ವಿಸ್ತರಿಸುತ್ತ, ಜಿನಸೇನರು ಹೇಳುವ ಇನ್ನಷ್ಟು ಮಾತುಗಳು ತಮ್ಮ ವಿಚಾರ ಚಿಂತನೆಗೆ ಇಂಬುಕೊಡುತ್ತವೆ.

*ಕೇಚಿದರ್ಥಸ್ಯ ಸೌಂದರ್ಯಮಪರೇಪದಸೌಷ್ಠವಂ ।*
*ವಾಚಾಮಲಂಕ್ರಿಯಾಂ ಪ್ರಾಹುಸ್ತದ್ವಯಂ ನೋಮತಂ ಮತಂ ॥*
*ಸಾಲಂಕಾರಮುಪಾರೂಢರಸಸಮುದ್ಭೂತ ಸೌಷ್ಠವಂ ।*
*ಅನುಚ್ಛಿಷ್ಟಂ ಸತಾಂ ಕಾವ್ಯಂ ಸರಸ್ವತ್ಯಾ ಮುಖಾಯತೇ ॥*
*ಅಸ್ಪೃಷ್ಟ ಬಂಧಲಾಲಿತ್ಯಮಪೇತಂ ರಸವತ್ತಯಾ ।*
*ನತತ್ಕಾವ್ಯಮತಿಗ್ರಾಮ್ಯಂ ಕೇವಲಂ ಕಟುಕರ್ಣಯೋಃ ॥*
*ಸುಶ್ಲಿಷ್ಟ ಪದವಿನ್ಯಾಸಂ ಪ್ರಬಂಧಂ ರಚಯಂತಿ ಯೇ*
*ಶ್ರಾವ್ಯ ಬಂಧಂ ಪ್ರಸನ್ನಾರ್ಥಂ ತೇ ಮಹಾಕವಯೋ ಮತಾಃ ॥*

*(I-೯೫ ರಿಂದ ೯೮)*

ಈ ಶ್ಲೋಕದ ಅಭಿಪ್ರಾಯವನ್ನು ವಿವರಿಸಿಕೊಳ್ಳುವುದಾದರೆ: ಕೆಲವರು ಕವಿಯ ವಾಕ್ಯಗಳಿಗೆ ಸುಂದರವಾದ ಅರ್ಥವು ಅಲಂಕಾರವೆಂದೂ ಇನ್ನೂ ಕೆಲವರು ಮನಸ್ಸಿಗೆ ಸಂತೋಷವನ್ನು ಕೊಡುವ ಪದಗಳು ಅಲಂಕಾರವೆಂದೂ ಹೇಳುತ್ತಾರೆ. ಈ ಎರಡೂ ಅಭಿಪ್ರಾಯಗಳು ಜಿನಸೇನರಿಗೆ ಸಮ್ಮತ. ಅಲಂಕಾರಗಳಿಂದ ಕೂಡಿ ಶೃಂಗಾರವೇ ಮೊದಲಾದ ರಸಗಳಿಂದ ಭರಿತವಾದದ್ದು ಸರಸ್ವತಿಗೆ ಮುಖದಂತೆ. ಕಾವ್ಯದಲ್ಲಿ ಪದಲಾಲಿತ್ಯ ಮತ್ತು ಶೃಂಗಾರಾದಿರಸಗಳು ಇಲ್ಲದೆ ಹೋದರೆ ಅದು ಅತ್ಯಂತ ಅಗ್ರಾಮ ಮಾತ್ರವಲ್ಲ ಅದು ಕಾವ್ಯವೇ ಅಲ್ಲ. ಉತ್ತಮ ಪದರಚನೆ ಹಾಗೂ ಶ್ರಾವ್ಯವಾದದ್ದು ಆನಂದೋತ್ಸಾಹಗಳನ್ನು ಕೊಡುವ ಅರ್ಥವುಳ್ಳ ಕಾವ್ಯರಚನೆ ಮಾಡುತ್ತಾರೋ ಅವರು ಮಾತ್ರ ಮಹಾಕವಿಗಳು. ಉಳಿದವರು ಕವಿಗಳು ಎಂದೆನಿಸಿಕೊಳ್ಳಲು ಹೇಗೆ ಸಾಧ್ಯ ?

*ಶಬ್ದರಾಶಿರಪರ್ಯಂತಃ ಸ್ವಾಧೀನೋರ್ಥಃ ಸ್ಫುಟಾರಸಾಃ ।*
*ಸುಲಭಾಶ್ಚ ಪ್ರತಿಚ್ಛಂದಾಃ ಕವಿತ್ವೇಕಾದರಿದ್ರತಾ ॥ (I ೧೦೧)*

ಲೋಕದಲ್ಲಿ ಶಬ್ದರಾಶಿ ಅಪರಿಮಿತವಾಗಿದೆ. ಅರ್ಥವೂ ಸ್ವಾಧೀನವಾಗಿದೆ. ಶೃಂಗಾರಾದಿ ರಸಗಳು ಸ್ಫುಟವಾಗಿವೆ. ಪ್ರತಿರೂಪಗಳೂ ಸುಲಭವಾಗಿವೆ. ಕವಿತ್ವಕ್ಕೇನು ದರಿದ್ರತೆ ?ಜಿನಸೇನರ ಫಲಶ್ರುತಿ ಕಾವ್ಯರಚನೆಯ ಪರಿಕಲ್ಪನೆಗೆ ಆಧುನಿಕ ಸಂವೇದನೆಯನ್ನು ನೀಡುತ್ತದೆ. ತನ್ನವರೆಗೂ ಬಂದ ಭಾಷಿಕ ರೂಪಗಳನ್ನು ಬಳಸಿಕೊಂಡು, ಕಾವ್ಯ ರಚನೆ ಮಾಡುವ ಕವಿ ಲೋಕೋತ್ತರ ಕೀರ್ತಿಗೆ ಪಾತ್ರನಾಗುತ್ತಾನೆ.[೧೨]

ಕವಿತೆಯ ರಚನೆ ಮತ್ತು ಕವಿಯ ಪ್ರತಿಭೆ ಹಾಗೂ ಲೋಕವರ್ತನೆಗಳನ್ನು ಗಮನಿಸುವ ಕ್ರಮಗಳನ್ನು ಒಟ್ಟಾರೆ ಹಿಡಿದು ನೋಡುವ ಪ್ರಯತ್ನ ಜಿನಸೇನರದಾಗಿದೆ. ಇಲ್ಲಿ ಕೇವಲ ಕಾವ್ಯರಚನೆಯ ನೆಲೆಗಳನ್ನು ಮಾತ್ರ ಪರಿಶೀಲಿಸದೆ ; ಆದರೊಂದಿಗೆ ಕಾವ್ಯತತ್ತ್ವಗಳ ಹಿಂದಿರುವ ಸಾಂಸ್ಕೃತಿಕ ಗ್ರಹಿಕೆಯನ್ನು ಚಿಂತಿಸುವ ದಿಕ್ಕಿನತ್ತ, ಜಿನಸೇನರು ಹೊರಡುತ್ತಾರೆ.

---

೧೨. ಪಂಪನ ಮಾತನ್ನು ಈ ಸಂದರ್ಭದಲ್ಲಿ ನೆನಪಿಸಿಕೊಳ್ಳಬಹುದು

ಕವಿಯಿಂ ಬಗೆವುಗೆವೊಡೆ ಕೊಂ। ಕುವೆತ್ತ ಪೊಸನುಡಿಯ ಪುಗುಗುಮುಟಿ ದುದು ಸಟಿುಸೈ । ತವಚನೆ ಮಾಡಿ ಸಟಿುಸೈ ತವೋಕುಮೇಂ ಬಗೆಯ ಬಟ್ಟೆಯಂ ಮುಟ್ಟುಗುಮೇ / (I-೧೮) । ಮೃದುಮಧುರ ವಚನರಚನೆಯೊ ಳುದಾತ್ತಮರ್ಥಪ್ರತೀತಿಯಂ ಕೇಳ್ವ ಜನ । ಕ್ಕಿದಿರೊಳ್ಳುಡದಂದದು ಕ । ಬ್ಬದೊಳಿರ್ದುಂ ಕವಿಯ ಮನದೊಳಿರ್ದಂತೆ ವಲಂ // (I-೧೯)

ಪಂಪ ಜಿನಸೇನರ ಒಟ್ಟು ಮಾತನ್ನು ಅನುವಾದಿಸುತ್ತಿದ್ದಾನೆ ಮಾತ್ರವಲ್ಲ; ಅವರ ಒಟ್ಟು ಚಿಂತನೆಗೆ ಮೇಲ್ಮೆಯನ್ನು ನಿರ್ಮಾಣ ಮಾಡುತ್ತಿದ್ದಾನೆ.

ಜಿನಸೇನರ 'ಪೂರ್ವಪುರಾಣ'ವನ್ನು ಪುರಾಣ ಕಾವ್ಯದ ನೆಲೆಯಲ್ಲಿ ನೋಡುವ ಒಂದು ಕ್ರಮ ಇದೆ ಸರಿ. ಆದರೆ ಪೀಠಿಕಾಭಾಗದ 'ಕಾವ್ಯ ಪ್ರಸ್ತಾಪ'ದ ಕಾವ್ಯಾಂತರ್ಗತ ಚರ್ಚೆ, ಇನ್ನಷ್ಟು ಹೊಸ ವಿವರಗಳೊಂದಿಗೆ ಸಮಕಾಲೀನ ಕಾವ್ಯಕುರಿತ ಚಿಂತನೆಗೆ ಹೊಸ ದಿಕ್ಕನ್ನು ಮತ್ತು ಹೊಸ ನೆಲೆಯನ್ನು ಗುರುತಿಸಲು ಪ್ರೇರಿಸುತ್ತದೆಂಬುದೇ ಒಂದು ವಿಶೇಷ..

**ಉಪಯೋಗಿಸಿಕೊಂಡ ಕೆಲವು ಕೃತಿಗಳು :**

೧. ಪೂರ್ವಪುರಾಣಂ ಮೂಲ ಮತ್ತು ಅನು : ಶಾಂತಿರಾಜ ಶಾಸ್ತ್ರಿಗಳು

೨. ಆದಿಪುರಾಣಂ. ಸಂ: ಎಲ್. ಬಸವರಾಜು, ಗೀತಾಬುಕ್ ಹೌಸ್, ಮೈಸೂರು (೧೯೭೬)

೩. ಕನ್ನಡ ಕವಿಗಳ ಕಾವ್ಯಕಲ್ಪನೆ ಜಿ.ಎಸ್.ಶಿವರುದ್ರಪ್ಪ, ಮೈಸೂರು ವಿಶ್ವವಿದ್ಯಾಲಯ ಮೈಸೂರು (೧೯೮೯)

೪. ವಿಕ್ರಮಾರ್ಜುನ ವಿಜಯಂ. ಸಂ: ಬೆಳ್ಳಾವೆ ವೆಂಕಟನಾರಾಯಣಪ್ಪ, ಕರ್ನಾಟಕ ಸಾಹಿತ್ಯ ಪರಿಷತ್ತು, ಬೆಂಗಳೂರು (೧೯೩೧)

೫. ಪಂಪ : ಒಂದು ಅಧ್ಯಯನ. ಸಂ : ಜಿ. ಎಸ್. ಶಿವರುದ್ರಪ್ಪ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು (೧೯೭೪)

೬. ಸಾಪೇಕ್ಷ : ಸೀತಾರಾಮ ಜಾಗೀರ್‌ದಾರ್, ವೆಂಕಟೇಶ್ವರ ಪ್ರಕಾಶನ, ಬೆಂಗಳೂರು (೧೯೯೦)

# ಅಕ್ಕನ ವಚನಗಳಲ್ಲಿ ತೀವ್ರಸಂವೇದನೆ

ಶ್ರೀಮತಿ ಉಷಾಕಿರಣ್

---

'ನೊಂದ ನೋವ ನೋಯದವರೆತ್ತ ಬಲ್ಲಿರೋ' ಎನ್ನುತ್ತಾ ಬದುಕಿನ ಅತ್ಯಂತ ನೋವಿನ ಕ್ಷಣಗಳನ್ನೂ ಅವಮಾನವನ್ನೂ ಕಠಿಣಪರೀಕ್ಷೆಯ ಪ್ರಸಂಗಗಳನ್ನೂ ಎದುರಿಸಿದವಳು ಮಹದೇವಿಯಕ್ಕ. ಬಹುಶಃ ಇದರಿಂದಾಗಿಯೇ ಈಕೆಯ ವಚನಗಳಲ್ಲಿ ಬದುಕಿನ ಅನುಭವಗಳು, ಸತ್ಯಾನ್ವೇಷಣೆ ಹಾಗೂ ವಿಶ್ಲೇಷಣೆಗಳು ಇತರರಿಗಿಂತ ಹೆಚ್ಚಿನ ಭಾವತೀವ್ರತೆಯನ್ನು ಪಡೆದಿವೆ. ಚನ್ನಬಸವಣ್ಣ ಈಕೆಯ ವಚನಗಳನ್ನು ಕುರಿತು ಅಜಗಣ್ಣನ ಐದು ವಚನಕ್ಕೆ ಮಹಾದೇವಿಯಕ್ಕನ ಒಂದು ವಚನ ನಿರ್ವಚನ ಕಾಣಾ ಎಂದು ಹೇಳಿರುವುದನ್ನು ಗಮನಿಸಿದಾಗ ಈಕೆಯ ವಚನಗಳ ತಾತ್ವಿಕಮೌಲ್ಯದ ವಿಶೇಷತೆಯನ್ನು ತಿಳಿಯಬಹುದಾಗಿದೆ. ಇಂತಹ ವಿಶೇಷತೆಗೆ ಕಾರಣವಾಗಿರಬಹುದಾದ ಬದುಕಿನ ದುರಂತಮಯ ಮತ್ತು ನೋವಿನ ಅನುಭವಗಳ ತೀವ್ರತೆಯನ್ನು ಸಹ ಕುರಿತು ಪರಿಭಾವಿಸಬಹುದಾಗಿದೆ. ಏಕೆಂದರೆ ವಚನಕಾರರು ಪ್ರತಿಯೊಬ್ಬರೂ ತಮ್ಮ ತಮ್ಮ ಅನುಭವಗಳನ್ನು ಸಂವಹಿಸುವುದಕ್ಕಾಗಿಯೇ ವಚನ ಮಾಧ್ಯಮವನ್ನು ಬಳಸಿಕೊಂಡವರು. ಆದ್ದರಿಂದಲೇ ವಚನಗಳನ್ನು ಅನುಭವಗಳು ಗಟ್ಟಿಗೊಂಡ ಹರಳುನುಡಿಗಳೆಂದು ತಿಳಿಯಲಾಗಿದೆ. ವಚನಗಳು ಪ್ರಧಾನವಾಗಿ ಸಂಭಾಷಣೆಯ ರೂಪದಲ್ಲಿ ಕಾಣುವುದರಿಂದ ವಚನಕಾರರು ತಮ್ಮ ಅಂತರಂಗಕ್ಕೆ ತಾವೇ ಹೇಳಿಕೊಂಡಂತೆಯೋ ಅಥವಾ ಇತರರೊಡನೆ ಹೇಳಿಕೊಂಡಂತೆಯೋ ಇರುವುದರಿಂದ ಇವು ನಮಗೆ, ನಮ್ಮ ಬದುಕಿನ ಪ್ರಸಂಗಗಳಿಗೆ ಅತ್ಯಂತ

ಪ್ರಸ್ತುತವಾಗುತ್ತವೆ. ಅಲ್ಲದೆ, ನಮ್ಮ ಅಂತರಂಗವನ್ನು ಹೊಕ್ಕು ಅಲ್ಲಿ ಸಮನ್ವಯಿಗೊಂಡು ಇದು ನಮಗೇ ಹೇಳಿದ್ದು ಎನ್ನುವುದರಿಂದ ಹಿಡಿದು ನಮಗೆ ನಾವೇ ಹೇಳಿಕೊಳ್ಳುವಂತಹವಾಗಿ ಬಿಡುತ್ತವೆ. ವಚನಕಾರರು ನೇರವಾಗಿ ತಮ್ಮ ಚಿಂತನೆಯನ್ನು ನಮ್ಮೊಂದಿಗೆ ಹೇಳಿದಂತಾಗುವುದರಿಂದ ನಾವು ಅವರಲ್ಲಿ ನಮಗೆ ತಿಳಿಯದಂತೆಯೇ ಒಳಗೊಳ್ಳುತ್ತೇವೆ, ಪ್ರತಿಕ್ರಿಯಿಸುತ್ತೇವೆ, ಚಿಂತಿಸುತ್ತೇವೆ ಹಾಗೂ ಚರ್ಚಿಸುತ್ತೇವೆ. ಅಂದರೆ ಒಂದು ರೀತಿ ಆ ವಿಚಾರಗಳು ನಮ್ಮಲ್ಲಿ ಉಂಟುಮಾಡುವ ಮಂಥನವನ್ನು ಹೊರಹಾಕುವವರೆಗೆ ಕ್ರಿಯಾಶೀಲರಾಗುತ್ತೇವೆ. ಹೀಗೆ ವಚನಕಾರರು ನಾವು ಅವರ ವಿಚಾರಗಳಿಗೆ ಪ್ರಜ್ಞಾಪೂರ್ವಕವಾಗಿಯೋ ಅಥವಾ ಅಪ್ರಜ್ಞಾಪೂರ್ವಕವಾಗಿಯೋ ಪ್ರತಿಸ್ಪಂದಿಸುವಂತೆ ನಮ್ಮನ್ನು ಆವರಿಸಿಬಿಡುತ್ತಾರೆ. ಇಂತಹ ವಚನ ವಾಙ್ಮಯದ ಹಿನ್ನೆಲೆಯಲ್ಲಿ ಮಹದೇವಿಯಕ್ಕನ ವಚನಗಳು ಅತ್ಯಂತ ಹೃದಯಸ್ಪರ್ಶಿಯೆನಿಸಲು ಕಾರಣ ಬದುಕಿನ ಬಗ್ಗೆ ಆಕೆಯ ತೀವ್ರ ಸಂವೇದನೆ. ಪ್ರತಿಯೊಬ್ಬರೂ ತಮ್ಮ ಬದುಕಿನಲ್ಲಿ ಕೋಮಲವಾದ ಕೌಮಾರ್ಯವನ್ನು ಕಳೆದು ಪ್ರೌಢತೆಯತ್ತ ಹೆಜ್ಜೆ ಇಡುವಾಗ ಹೊತ್ತ ಆದರ್ಶದ ಬದುಕು ತಮ್ಮ ಹಿಡಿಯೊಳಗೆ ನಿಲುಕದಾದಾಗ ಜೀವನದ ಪ್ರವಾಹದಲ್ಲಿ ಹುಲ್ಲಾಗಿ ಕಡ್ಡಿಯಾಗಿ ತೇಲಿ ಹೋಗುವವರೇ ಎಲ್ಲ. ಆದರೆ ಪ್ರವಾಹ ವಿರುದ್ಧ ಕಲ್ಲಾಗಿ ನಿಂತವಳು ಮಹದೇವಿಯಕ್ಕ. ಆಕೆ ತನ್ನ ತಂದೆ ತಾಯಿಗಳಿಗೆ ಕೌಶಿಕನಿಂದ ಆಗಬಹುದಾದ ಹಿಂಸೆಯನ್ನು ತಪ್ಪಿಸುವ ಸಲುವಾಗಿ ತನ್ನ ಬದುಕನ್ನು ಬಲಿಗೊಟ್ಟಳೇ ಹೊರತು ತನ್ನ ವ್ಯಕ್ತಿತ್ವವನ್ನಲ್ಲ. ತನ್ನ ಎಲ್ಲ ಆದರ್ಶ, ತತ್ತ್ವ, ಪರಿಮಿತಿಗಳಿಗೆ ಬದುಕಿನ ಘಟನೆಗಳಿಂದ ಮತ್ತು ಹೆಚ್ಚಿನ ದೃಢತೆಯನ್ನೇ ಪ್ರತಿಪಾದಿಸಿಕೊಂಡಳು. ಹೆಣ್ಣಿನ ಶತಮಾನಗಳ ಸೆರೆಯ ಬಂಧನವನ್ನೇ ಕಿತ್ತುಹಾಕಿ ವೀರವಿರಾಗಿಣಿ ಎನಿಸಿದ ಆಕೆ ಪ್ರತಿಭಟನೆಯ ಮೊದಲ ದನಿಯಾದಳಷ್ಟೇ ಅಲ್ಲ ಮೊದಲ ಬಲಿಯೂ ಆದಳು. ಆತ್ಮಾರ್ಪಣೆಯ ಪ್ರತಿಷ್ಠೆಗೆ ಹೊಸದೊಂದು ಆದರ್ಶವನ್ನು ತುಂಬಿದಳು. ಗಂಡನಿಗಾಗಿ ಸತಿಹೋಗಿ ಆತ್ಮಾರ್ಪಣೆ ಮಾಡಿದ ವೀರ ಸತಿಯರಿಗಿಂತ ಸಲ್ಲದ ಬಂಧನವನ್ನು ಮೀರಿ ಆತ್ಮೋನ್ನತಿಯನ್ನು ಸಾಧಿಸಿ ಶ್ರೀಗುರುವಿನ ಅಸಂಖ್ಯಾತರ ಅಂತಃಕರಣವನ್ನು ಪಡೆದು ತನ್ನ ಗುರಿಸಾಧನೆಗಾಗಿ ಆತ್ಮವನ್ನು ನಿಷ್ಠೆಯಿಂದ ಒಪ್ಪಿಸಿದ ಈಕೆ ಅನುಭವದಿಂದ ಮಾಗಿದ ಪರಮೋಚ್ಚ ನಿಲವಿನ ಪ್ರತೀಕವಾಗಿದ್ದಾಳೆ. ಇಂತಹ ಘಟ್ಟವನ್ನು ತಲಪುವಲ್ಲಿ ಎದುರಿಸಿದ ಹಲವು ಕಹಿ ಪ್ರಸಂಗಗಳು, ಕೊಟ್ಟ ನೋವುಗಳು, ಈಕೆಯ ಅಭಿವ್ಯಕ್ತಿಯಲ್ಲಿ ತೀವ್ರ ಸಂವೇದನ ಶಕ್ತಿಯನ್ನು ಪಡೆದು ಹೃದಯ ದ್ರವಿಸುವ ಕಂಪನಗಳಾಗಿವೆ.

*ಹೆದರದಿರು ಮನವೆ ಬೆದರದಿರು ತನುವೆ*
*ನಿಜವನರಿತು ನಿಶ್ಚಿಂತನಾಗಿರು*
*ಫಲವಾದ ಮರನ ಕಲ್ಲಲಿ ಇಡುವುದೊಂದುಕೋಟಿ*
*ಎಲವದ ಮರನ ಇಡುವರೊಬ್ಬರನು ಕಾಣೆ*
*ಭಕ್ತಿಯುಳ್ಳವರ ಬೈವರೊಂದುಕೋಟಿ*

ಭಕ್ತಿಯಿಲ್ಲದವರ ಬೈವರೊಬ್ಬರನು ಕಾಣೆ
ನಿಮ್ಮ ಶರಣರ ನುಡಿಯೆ ಎನಗೆ ಗತಿ ಸೋಪಾನ ಚೆನ್ನಮಲ್ಲಿಕಾರ್ಜುನಾ

ಮೇಲಿನ ವಚನದಲ್ಲಿ ಈ ಲೋಕದ ಜನರು ತನ್ನನ್ನು ನಡೆಸಿಕೊಂಡ ರೀತಿಯಿಂದ ಕೋಟಿ ಜನರ ಕಲ್ಲಿನೇಟನ್ನು ತಿಂದಂತಹ ತನ್ನ ನೋವಿನ ಅನುಭವವನ್ನು ತಿಳಿಯಾದ ಮಾತುಗಳಲ್ಲಿ ಹೇಳಿ ಫಲವಾದ ಮರದ ಸಾದೃಶ್ಯತೆ ಮೂಲಕ ತನ್ನ ಮನವನ್ನೇ ಸಂತೈಸಿಕೊಳ್ಳುವಲ್ಲಿ ಅತ್ಯಂತ ಹೃದಯಸ್ಪರ್ಶಿಯಾದ ಭಾವವನ್ನು ಕಾಣುತ್ತೇವೆ.

ಒಲೆಯ ಹೊಕ್ಕು ಉರಿಯ ಮರೆದವಳ
ಮಲೆಯ ಹೊಕ್ಕು ಉಲುಹ ಮರೆದವಳ ನೋಡ ನೋಡಾ
ಸಂಸಾರ ಸಂಬಂಧವ ನೋಡಾ
ಸಂಸಾರ ಸಂಬಂಧ ಭವಭವದಲ್ಲಿ ಬೆನ್ನಿಂದ ಬಿಡದು.
ಸರವು ನಿಸ್ಸರವು ಒಂದಾದವಳನು,
ಎನ್ನಲೇನ ನೋಡುವಿರಯ್ಯಾ, ಚೆನ್ನಮಲ್ಲಿಕಾರ್ಜುನಯ್ಯಾ?

ಸಂಸಾರದ ಒಲೆಯಲ್ಲಿ ಹೊಕ್ಕಿದ್ದರೂ ಉರಿಗೆ ಸಿಕ್ಕದೆ ತನ್ನತನವನ್ನು ಕಾಪಾಡಿಕೊಂಡು ಸಂಸಾರದ ಸಾರ ನಿಸ್ಸಾರಗಳನ್ನು ಅಳಿದಿರುವ ಅಕ್ಕ ತನ್ನನ್ನು ಪರೀಕ್ಷಿಸಲು ಬಂದವರಿಗೆ ಸವಾಲಾಗಿ ನಿಲ್ಲುವ ಛಲ ಹೊಂದಿದ್ದವಳು. ಇದನ್ನು ಗುರುತಿಸಲಾಗದೆ ಅಜ್ಞಾನದಿಂದ ನುಡಿಯುವವರನ್ನು ಕಂಡು ಪರಿತಾಪಪಡುತ್ತಾಳೆ. ಪ್ರಾಪಂಚಿಕ ಬಂಧನದಿಂದ ಬಿಡುಗಡೆ ಪಡೆಯುವ ಹಂಬಲದಿಂದ 'ಎನ್ನ ಸುತ್ತಿದ ಪ್ರಪಂಚ ಬಿಡಿಸಾ, ನಿಮ್ಮ ಧರ್ಮ' ಎಂದು ಭಗವಂತನಲ್ಲಿ ಮೊರೆಯಿಡುತ್ತಾಳೆ.

ವ್ಯಕ್ತಿತ್ವದ ಘನತೆಯ ನಿರೂಪಣೆಯಲ್ಲಿ ಅಕ್ಕನದು ಮೇಲ್ಪಂಕ್ತಿ. ಸಂದೇಹವಿಲ್ಲದ ಗಟ್ಟಿಯಾದ ಮಾತುಗಳು ಆಕೆಯ ಆತ್ಮಶಕ್ತಿಯ ತೇಜಸ್ಸನ್ನು ಹೆಚ್ಚಿಸಿವೆ.

ನಿಮ್ಮ ನಿಲವಿಂಗೆ ನೀವು ನಾಚಬೇಡವೇ ?
ಅನ್ಯರ ಕೈಯಲ್ಲಿ 'ಅಲ್ಲ' ಎನಿಸಿಕೊಂಬ ನಡೆನುಡಿ ಏಕೆ?
ಅಲ್ಲ ಎನಿಸಿಕೊಂಬುದರಿಂದ
ಆ ಕ್ಷಣವೆ ಸಾವುದು ಲೇಸು, ಕಾಣಾ ಚೆನ್ನಮಲ್ಲಿಕಾರ್ಜುನಾ.

ಆರೂ ಇಲ್ಲದವಳೆಂದು ಆಳಿಗೊಳಲು ಬೇಡ ಕಂಡೆಯಾ
ಏನ ಮಾಡಿದಡೂ ಆನಂಜುವಳಲ್ಲ
ತರಗೆಲೆಯ ಮೇಲಿದು ಆನಿಹೆನು
ಸರಿಯ ಮೇಲೊರಗಿ ಆನಿಹೆನು

*ಚೆನ್ನಮಲ್ಲಿಕಾರ್ಜುನಯ್ಯಾ ಕರಕೇಡಸನೊಡ್ಡಿದಡೆ*
*ಒಡಲನು ಪ್ರಾಣವನು ನಿಮಗರ್ಪಿಸಿ ಶುದ್ಧಳಹೆನು.*

ಮುಕ್ತಿಮಾರ್ಗದಲ್ಲಿ ಕಷ್ಟಗಳು ತನ್ನನ್ನು ಹೆದರಿಸಿ ಧೈರ್ಯಗೆಡಿಸಲು ಬರುತ್ತವೆ ಹಾಗೂ ಅದು ಭಗವಂತನ ಲೀಲೆ ಎಂದು ತಿಳಿದ ಮೇಲೆ ಆಕೆಗೆ ಅದರ ಭಯವೇ ಕಾಣದು. ಏಕಾಂಗಿಯಾಗಿದ್ದರೂ ಕೂಡ ಹೆದರದೆ, ತರಗೆಲೆಯನ್ನು ತಿನ್ನುವ ಸಂದರ್ಭ ಬರಲಿ ಬಂಡೆಯ ಮೇಲೆ ಮಲಗುವ ಪ್ರಸಂಗ ಬರಲಿ ಅದಕ್ಕೆ ಅಂಜದೆ ತನ್ನನ್ನೇ ಭಗವಂತನಿಗೆ ಸಮರ್ಪಿಸಿಕೊಳ್ಳುವುದರಲ್ಲಿ ಇರುವ ತನ್ನ ನಂಬಿಕೆ ವಿಶ್ವಾಸಗಳನ್ನು ಅತ್ಯಂತ ಬಿಚ್ಚುಮನಸ್ಸಿನಿಂದ ಹೇಳಿಕೊಂಡಿದ್ದಾಳೆ. ಇದು ಆಕೆಯ ವ್ಯಕ್ತಿತ್ವದ ಘನತೆಗೆ ಮತ್ತೊಂದು ಪಡಿನುಡಿಯಾಗಿದೆ. 'ನಿನ್ನ ನೀ ಸಂವರಿಸಿ ಕೈದುವ ಕೊಳ್ಳಿರಣ್ಣಾ, ಚೆನ್ನಮಲ್ಲಿಕಾರ್ಜುನನೆಂಬ ಹಗೆಗೆ ಬೆಂಗೊಡದಿರಣ್ಣಾ' ಎಂದು ತನಗೆ ನೋವುಂಟುಮಾಡಿದವರಿಗೂ ತಾನೇ ಮಾರ್ಗದರ್ಶನ ಮಾಡಿದ್ದಾಳೆ. 'ಕೈದುವ ಕೊಂಡು ಕಳನೇರಿದ ಬಳಿಕ ಕಟ್ಟಿದ ನಿರಿ ಸಡಿಲಿದಡೆ ಇನ್ನು ನಿಮ್ಮಾಣೆ' ಹಾಗೂ 'ನಿಮ್ಮಾಣೆಗೆ ಊಣೆಯವ ತಂದೆನಾದಡೆ ನಿಮ್ಮ ತೊತ್ತಿನ ಮಗಳಲ್ಲಯ್ಯಾ' ಎಂಬ ನುಡಿಗಳು ಆಕೆಯ ಧೈರ್ಯಶಕ್ತಿಯ ಗುರುತುಗಳಾಗಿವೆ.

*ಮುಡಿಬಿಟ್ಟು ಮೊಗಬಾಡಿ ತನುಕರಗಿದವಳ ಎನ್ನನೇಕೆ ನುಡಿಸುವಿರಿ ?*
*ಎಲೆ ಅಣ್ಣಗಳಿರಾ, ಎನ್ನನೇಕೆ ನುಡಿಸುವಿರಿ ?*
*ಎಲೆ ತಂದೆಗಳಿರಾ, ಬಲುಹಳಿದು ಭವಗೆಟ್ಟು ಛಲವಳಿದು*
*ಭಕ್ತೆಯಾಗಿ ಚೆನ್ನಮಲ್ಲಿಕಾರ್ಜುನನ ಕೂಡಿ ಕುಲವಳಿದವಳ.*

ಛಲದಿಂದ ಹೊರಟು ಛಲವನ್ನು ಅಳಿದು ತನುಮನದ ಗುಣಗಳನ್ನು ಮೀರಿ ನಿಂತ ನಿಲವು ಅಕ್ಕನದು. ಕೊನೆಯಾಗುವ ಮುನ್ನ ಶರಣರ ಸತ್‌ಸಂಗದ ಸವಿನೆನಪನ್ನು ಹೊತ್ತು ಹೋಗುವ ಹಂಬಲ ಅವರನ್ನು ಅಣ್ಣಗಳಿರಾ, ತಂದೆಗಳಿರಾ ಎಂದು ಮೊರೆಯಿಡುವಂತೆ ಮಾಡಿತು. ಈ ಸಜ್ಜನಿಕೆಗೆ ದೊರೆತ ಪ್ರತಿಫಲವೂ ಅಪೂರ್ವವಾದುದು. ಇತಿಹಾಸದಲ್ಲಿ ಹಿಂದೆಂದೂ ಕಾಣ ದಂತಹ, ಇಂದಿಗೂ ಮತ್ತೊಬ್ಬ ಮಹಿಳೆಗೆ ಸಿಗಲಾರದಂತಹ ಸ್ಥಾನವನ್ನು ಇದು ಆಕೆಗೆ ದೊರಕಿಸಿ ಕೊಟ್ಟಿತು. ಚೆನ್ನಮಲ್ಲಿಕಾರ್ಜುನನ ಕೂಡಿ ಕುಲವಳಿದು ದಿಟ್ಟೆಯಾಗಿ ನಿಂತ ಈಕೆಯ ಸಾಹಸದ ಕಥೆಗೆ ಇಂದಿಗೂ ಕೂಡ ಹಲವಾರು ಬಗೆಯ ಪ್ರತಿಕ್ರಿಯೆಗಳು ಮೂಡಿ ಬರುತ್ತಲೇ ಇವೆ.

'ತಾಯಿ ನೊಂದಡೆ ಒಡಲ ಶಿಶು ನೋವ ತೆರದಂತೆ', ಭಕ್ತ ಭಗವಂತರ ಸಂಬಂಧವನ್ನು ಕಾಣುವುದು ಮಹಾದೇವಿಯಕ್ಕನ ಉನ್ನತ ಅನುಭಾವಿಕ ನಿಲವನ್ನು ತೋರಿಸುತ್ತದೆ.

*ಅಳಿಸಂಕುಲವೇ, ಮಾಮರವೇ, ಬೆಳುದಿಂಗಳೇ, ಕೋಗಿಲೆಯೇ*
*ನಿಮ್ಮನೆಲ್ಲರನೂ ಒಂದ ಬೇಡುವೆನು*

*ಎನ್ನೊಡೆಯ ಚೆನ್ನಮಲ್ಲಿಕಾರ್ಜುನ ದೇವರ ಕಂಡರೆ*
*ಕರೆದು ತೋರಿರೆ.*

ಅಳಿಸಂಕುಲ, ಮಾಮರ, ಬೆಳದಿಂಗಳು, ಕೋಗಿಲೆ ಇವುಗಳ ಸಾಮೀಪ್ಯದಲ್ಲಿ ಭಗವಂತನನ್ನು ಅರಸುವ ಅಕ್ಕನ ಕೋಮಲ ಹೃದಯದಲ್ಲಿ ಪ್ರಕೃತಿಯಲ್ಲಿ ಸಮರಸಗೊಳ್ಳುವ ದೈವತ್ವದ ಪರಿಕಲ್ಪನೆಯನ್ನು ಕಾಣುತ್ತೇವೆ. 'ಕರೆದು ತೋರಿರೆ' ಎಂದು ಕೇಳಿಕೊಳ್ಳುವ ವಿನೀತಭಾವ ಶರಣ ಸಹಜವಾದ ನಡೆನುಡಿಗಳ ಪ್ರತೀಕವಾಗಿದೆ.

'ಒಲಿಸಲೆನ್ನಳವಲ್ಲ ನೀನೊಲಿವುದೆ ಸುಖವಯ್ಯಾ' ಎನ್ನುವ ಸಂಪೂರ್ಣ ಶರಣಾಗತಿಯ ಮನೋಭಾವದಿಂದ ಮತ್ತೂ ಎತ್ತರಕ್ಕೆ ಏರುತ್ತಾಳೆ. 'ಬಸವಣ್ಣನ ಶ್ರೀಪಾದವ ಕಂಡು ಬದುಕಿದೆ' ಎನ್ನುವ ಧನ್ಯಭಾವದಲ್ಲಿ ಬಸವಣ್ಣನವರ ಉಚ್ಚಆದರ್ಶಗಳಲ್ಲಿಯೇ ದೈವತ್ವವನ್ನು ಕಾಣುವ ಅಕ್ಕನ ಅಪೂರ್ವದರ್ಶನದಲ್ಲಿ 'ದೇವಲೋಕದವರಿಗೂ ಬಸವಣ್ಣನೇ ದೇವರು, ಮರ್ತ್ಯಲೋಕದವರಿಗೂ ಬಸವಣ್ಣನೇ ದೇವರು' ಎನ್ನುವ ಬದುಕಿನ ವಾಸ್ತವತೆಗಳಿಗೆ ಪ್ರತಿಕ್ರಿಯಿಸುವ ಅತ್ಯಂತ ಮೌಲಿಕವಾದ ಜ್ಞಾನವನ್ನು ಕಾಣುತ್ತೇವೆ. ಅಲ್ಲದೆ.

*ಆವ ವಿದ್ಯೆಯ ಕಲಿತಡೇನು ? ಸಾವ ವಿದ್ಯೆ ಬೆನ್ನ ಬಿಡದು!*
*ಅಶನವ ತೊರೆದಡೇನು, ವ್ಯಸನವ ಮರೆದಡೇನು ?*
*ಉಸುರ ಹಿಡಿದಡೇನು, ಬಸುರ ಕಟ್ಟಿದಡೇನು ?*
*ಚೆನ್ನಮಲ್ಲಿಕಾರ್ಜುನ ದೇವಯ್ಯಾ*
*ನೆಲತಳವಾರನಾದಡೆ ಕಳ್ಳನೆಲ್ಲಿಗೆ ಹೋಹನು ?*

ಎಂಬ ಪ್ರಜ್ಞಾವಂತಿಕೆಯನ್ನು ಕಾಣುತ್ತೇವೆ. ಆತ್ಮಜ್ಞಾನ ವಿದ್ಯೆಯೇ ನಿಜವಾದ ವಿದ್ಯೆ. ಉಳಿದವೆಲ್ಲ ಕೇವಲ ಅವಿದ್ಯೆ ಎಂಬ ಉಪನಿಷತ್ ವಾಕ್ಯಕ್ಕೆ ಇದು ಸೂಕ್ತವಾದ ವಿವರಣೆಯಂತಿದೆ.

*ಹೂವು ಕಂದಿದಲ್ಲಿ ಪರಿಮಳವನರಸುವರೆ ?*
*ಕಂದನಲ್ಲಿ ಕುಂದನರಸುವರೆ ?*
*ಎಲೆದೇವ ಸ್ನೇಹವಿದ್ದ ಠಾವಿನೊಳು ದ್ರೋಹವಾದ ಬಳಿಕ*
*ಮರಳಿ ಸದ್ಗುಣವನರಸುವರೆ ?*
*ಎಲೆದೇವ ಬೆಂದ ಹುಣ್ಣಿಗೆ ಬೇಗೆಯನಿಕ್ಕುವರೆ ?*
*ಕೇಳಯ್ಯಾ ಶ್ರೀಶೈಲ ಚೆನ್ನಮಲ್ಲಿಕಾರ್ಜುನಾ*
*ಹೊಳೆಯಿಳಿದ ಬಳಿಕ ಅಂಬಿಗಂಗೇನುಂಟು ?*

ಇಂತಹ ನುಡಿಗಳು ಅಕ್ಕನ ಮನದ ನೋವಿನ ತೀವ್ರಸಂವೇದನೆಗೆ ಅತ್ಯಂತ ಪರಿಣಾಮಕಾರಿಗಳಾಗಿವೆ. ಮೇಲುನೋಟಕ್ಕೆ ಇವು ತಪ್ತಹೃದಯದ ಕರುಣಾಕ್ರಂದನಗಳಂತೆ

ಕಂಡರೂ ಅಂತರಾಳದಲ್ಲಿ ಆಕೆ ಪಡೆದುಕೊಂಡಿದ್ದ ಪರಿಪಕ್ವತೆಯನ್ನು ತೋರಿಸುತ್ತವೆ. ಹೊಳೆಯಿಳಿದ ಬಳಿಕ ಅಂಬಿಗಂಗೇನುಂಟು ಎನ್ನುವಾಗ ಆಕೆಗೆ ತಾನು ನಿಂತಿರುವ ನೆಲೆಯ ಬಗ್ಗೆ ಖಚಿತವಾದ ಅರಿವು ಇದೆ ಎಂದು ತಿಳಿಯುತ್ತದೆ. ಅರಳಿದ ಹೂವು ತನ್ನ ಪರಿಮಳವನ್ನೆಲ್ಲ ಬೀರಿ ಮುಗಿಸಿ ಕಂದಿಹೋದ ಮೇಲೆ ಪರಿಮಳದ ಇರುವಿಕೆ ಬೇಕಾಗದ ಹಾಗೆ ಅರಿವು ಪಕ್ವವಾದ ಮನಸ್ಸಿಗೆ ಭಕ್ತಿಸಾಧನಗಳು ಅವಶ್ಯಕವಿಲ್ಲದಿರುವಿಕೆಯನ್ನು ಹಲವು ಬಗೆಯಲ್ಲಿ ಹೇಳಿಕೊಳ್ಳುವುದರಿಂದ ಮನಸ್ಸಿಗೆ ಮತ್ತಷ್ಟು ದೃಢತೆಯನ್ನು ತಂದುಕೊಳ್ಳುವಂತೆ ಕಾಣುತ್ತದೆ. ಭವಬಂಧನ ಕಳೆದು ಕಂದನ ಮನದಂತೆ ನಿಷ್ಕಲಂಕವಾದಮೇಲೆ ಅದರಲ್ಲಿ ಕುಂದುಗಳಿರಲು ಸಾಧ್ಯವೆ ?ಬೆಂದ ಹುಣ್ಣು ಈಗಾಗಲೇ ಕಳಿತು ಮಾಗುವ ಸ್ಥಿತಿಗೆ ಬಂದ ಮೇಲೆ ಪುನಃ ಅದಕ್ಕೆ ಬೇಗೆಯನ್ನಿಡಬೇಕಾಗಿಲ್ಲ. ಹೊಳೆಯನ್ನು ದಾಟಿ ಬಂದವರಿಗೆ ಅಂಬಿಗನಿಂದ ಆಗಬೇಕಾದುದು ಏನೂ ಇಲ್ಲ. ತೀವ್ರವಾದ ಭಾವಸಂವೇದನೆಯಿಂದ ತುಂಬಿದ ಈ ಸಾದೃಶ್ಯತೆಗಳು ಸಾಧನೆಯ ಮಾರ್ಗದಲ್ಲಿ ಒದಗಿಬಂದ ತಾಪಗಳು ಅಕ್ಕನ ಮನಸ್ಸಿನಲ್ಲಿ ಉಂಟುಮಾಡಿದ ಅನುಭವಗಳನ್ನು ಸಮರ್ಥವಾಗಿ ಹೇಳುತ್ತವೆ.

ದೈವತ್ವದ ಅನುಭವಕ್ಕಾಗಿ ಹಂಬಲಿಸುವ ಅಕ್ಕನ ಮನಸ್ಸಿಗೆ ತನ್ನ ಪರಿತಾಪವನ್ನು ಬೇರೆಯವರಿಗೆ ಮನವಟ್ಟು ಮಾಡಿಸುವುದು ಸಾಧ್ಯವಾಗದಾಗ 'ಬಂಜೆ ತಾಯಿಯ ಬೇನೆಯ ನರಿವಳೆ ?' ಎಂದು ಅತ್ಯಂತ ಭಾವನಾಶೀಲವಾದ ಸಂವೇದನೆಯನ್ನು ತೋರುತ್ತಾಳೆ. 'ಚೆನ್ನಮಲ್ಲಿಕಾರ್ಜುನ ದೇವರ ಬೆಳಗನುಟ್ಟು ಲಜ್ಜೆಗೆಟ್ಟವಳಿಗೆ ಉಡುಗೆ ತೊಡುಗೆಯ ಹಂಗೇಕೋ ಮರುಳೆ ?' ಎನ್ನುವಲ್ಲಿ ನಿಜವಾದ ದೈವತ್ವದ ಅರಿವು ಪಡೆದ ಮೇಲೆ ಇಹಬಂಧನದ ಹಂಗು ತೀರಿಹೋಗುತ್ತದೆ ಎಂಬ ದೃಢವಾದ ಮನೋಭಾವವನ್ನು ಕಾಣುತ್ತೇವೆ.

ಮುತ್ತು ನೀರಲಾಯಿತ್ತು ವಾರಿಕಲ್ಲು ನೀರಲಾಯಿತ್ತು
ಉಪ್ಪು ನೀರಲಾಯಿತ್ತು
ಉಪ್ಪು ಕರಗಿತ್ತು ವಾರಿಕಲ್ಲು ಕರಗಿತ್ತು
ಮುತ್ತು ಕರಗಿದ್ದುದನಾರೂ ಕಂಡವರಿಲ್ಲ
ಈ ಸಂಸಾರಿ ಮಾನವರು ಲಿಂಗವ ಮುಟ್ಟಿ ಭವಭಾರಿಗಳಾದರು
ನಾ ನಿಮ್ಮ ಮುಟ್ಟಿ ಕರಿಗೊಂಡೆನಯ್ಯಾ
ಚೆನ್ನಮಲ್ಲಿಕಾರ್ಜುನಯ್ಯಾ

ನೀರಿನಿಂದಲೇ ಆಗಿದ್ದರೂ ಕೂಡ ಉಪ್ಪು ಆಲಿಕಲ್ಲುಗಳಿಗೆ ವಿರುದ್ಧವಾಗಿ ಮುತ್ತು ನೀರಿನಲ್ಲಿ ಕರಗದೆ ಇರುವ ಗುಣವನ್ನು ಆಧ್ಯಾತ್ಮಿಕ ಅನುಭಾವದ ತುತ್ತತುದಿಯಲ್ಲಿ ನಿಂತ ಅಕ್ಕನ ಪರಿಪಕ್ವವಾದ ಮನಸ್ಸು ಪ್ರಾಪಂಚಿಕವಾದ ಬಂಧನವನ್ನು ಮೀರಿ ಬಿಡುಗಡೆ ಪಡೆದನಂತರ ಮತ್ತೆ ಹಿಂದಕ್ಕೆ ಹೋಗದಿರುವಿಕೆಗೆ ಸಂವಾದಿಯಾಗಿ ಹೇಳಲಾಗಿದೆ.

*ಕಲ್ಲ ಹೊಕ್ಕಡೆ ಕಲ್ಲ ಬರಸಿದೆ, ಗಿರಿಯ ಹೊಕ್ಕಡೆ ಗಿರಿಯ ಬರಸಿದೆ*
*ಭಾಪು ಸಂಸಾರವೆ ಬೆನ್ನಿಂದ ಬೆನ್ನು ಹತ್ತಿ ಬಂದೆ*
*ಚೆನ್ನಮಲ್ಲಿಕಾರ್ಜುನಯ್ಯಾ ಇನ್ನೇವೆನಿನ್ನೇವೆ ?*

ಚೆನ್ನಮಲ್ಲಿಕಾರ್ಜುನನೇ ಗಂಡನಾಗಬೇಕೆಂದು ಬಯಸಿ ಬದುಕಿನ ಬಗ್ಗೆ ತನ್ನದೇ ಆದ ಮಾರ್ಗವನ್ನು ಅತ್ಯಂತ ಪ್ರೀತಿ ಶ್ರದ್ಧೆಗಳಿಂದ ರೂಪಿಸಿಕೊಂಡ ಮಹದೇವಿಯಕ್ಕನಿಗೆ ಅದಕ್ಕೆ ತದ್ವಿರುದ್ಧವಾಗಿ ಬದುಕಬೇಕಾದ ಸಂದರ್ಭ ಒದಗಿ ಬಂದು ಆಕೆಯನ್ನು ವೀರ ವಿರಾಗಿಣಿಯನ್ನಾಗಿ ಮಾಡಿತು. ಸಂಸಾರದ ಕಠೋರತೆ ಮನಸ್ಸನ್ನು ಗಾಸಿಗೊಳಿಸಿ ಉದ್ದಕ್ಕೂ ಮುಳ್ಳಿನ ಹಾದಿಯನ್ನೇ ತೆರೆಯಿತು. ತನ್ನ ಗುರಿಸಾಧನೆಗಾಗಿ ಹುಟ್ಟಿಬೆಳೆದ ಪ್ರೀತಿಯ ಪರಿಸರವನ್ನು ಬಿಟ್ಟು ಕಲ್ಲು ಮುಳ್ಳಿನ ಮೇಲೆ ಕಲ್ಲಾಗಿ ನಡೆದಳು.

*ಸಂಸಾರವೆಂಬುದು ಹಗೆಯಯ್ಯಾ ಎನ್ನ ತಂದೆ*
*ಎನ್ನ ವಂಶ ವಂಶದಪ್ಪದೆ ಅರಸಿಕೊಂಡು ಬರುತ್ತಿದೆಯಯ್ಯಾ*
*ಎನ್ನುವನರಸಿಯರಸಿ ಹಿಡಿದು ಕೊಲುತ್ತಿದೆಯಯ್ಯಾ*
*ನಿನ್ನ ನಾ ಮರೆಹೊಕ್ಕೆ ಕಾಯಯ್ಯಾ*
*ಎನ್ನ ಬಿನ್ನಪವನವಧರಿಸಾ ಚೆನ್ನಮಲ್ಲಿಕಾರ್ಜುನಾ*

ಆಕೆಗೆ ಸಂಸಾರವೇ ಒಂದು ಹಗೆಯಾಯಿತು. ಪ್ರಾಪಂಚಿಕ ಬಂಧನ ಹಗೆಯ ರೂಪದಲ್ಲಿ ಜನ್ಮಜನ್ಮಾಂತರಕ್ಕೆ ಅಟ್ಟಿಸಿಕೊಂಡು ಬಂದು ಬಂಧಿಸಿ ಕೊಲ್ಲುತ್ತಿದೆ. ಇದರ ಬಿಡುಗಡೆಗೆ ಚನ್ನಮಲ್ಲಿಕಾರ್ಜುನನ ದೈವತ್ವದ ಅರಿವೊಂದೇ ದಾರಿಯಾದ್ದರಿಂದ ಅದಕ್ಕೆ ಮರೆಹೊಕ್ಕು ಆತ್ಮೋದ್ಧಾರದ ಮಾರ್ಗದಲ್ಲಿ ಮುಂದುವರಿದಿದ್ದಾಳೆ.

*ನಾ ಹುಟ್ಟಿದಲ್ಲಿ ಸಂಸಾರ ಹುಟ್ಟಿತ್ತು.*
*ಸಂಸಾರ ಹುಟ್ಟಿದಲ್ಲಿ ಅಜ್ಞಾನ ಹುಟ್ಟಿತ್ತು.*
*ಅಜ್ಞಾನ ಹುಟ್ಟಿದಲ್ಲಿ ಆಶೆ ಹುಟ್ಟಿತ್ತು*
*ಆಶೆ ಹುಟ್ಟಿದಲ್ಲಿ ಕೋಪ ಹುಟ್ಟಿತ್ತು*
*ಆ ಕೋಪಾಗ್ನಿಯ ತಾಮಸ ಧೂಮ್ರ ಮುಸುಕಿದಲ್ಲಿ*
*ನಾ ನಿಮ್ಮ ಮರೆತು ದುಃಖಕ್ಕೀಡಾದೆ*
*ನೀ ಕರುಣದಿಂದೆತ್ತಿ ಎನ್ನ ಮರಹ ಏಂಗಡಿಸಿ*
*ನಿಮ್ಮ ಪಾದವನರುಹಿಸಯ್ಯಾ, ಚೆನ್ನಮಲ್ಲಿಕಾರ್ಜುನಾ*

ಸಂಸಾರದ ಕೋಪತಾಪಗಳಿಗೆ ಕಾರಣವಾಗುವ ಅಜ್ಞಾನವನ್ನು ಜ್ಞಾನದ ಕರುಣೆಯಿಂದ ಪರಿಹರಿಸಿಕೊಳ್ಳಬಲ್ಲ ದಕ್ಷತೆ, ಸಾಧನೆಗಳಿಗೆ ಮೇಲಿನ ವಚನ ಉತ್ತಮ ನಿದರ್ಶನವಾಗಿದೆ. ಹಂತ

ಹಂತವಾಗಿ ಬಿಡುಗಡೆ ಪಡೆಯುತ್ತಾ ದೈವತ್ವದ ಮಟ್ಟಕ್ಕೆ ತಲುಪಿದ ಅಕ್ಕನ ಅನುಭಾವ ಇತರ ಸಾಧಕರಿಗೆ ಅತ್ಯಂತ ಉತ್ಕೃಷ್ಟ ಮಾರ್ಗದರ್ಶನವಾಗುತ್ತದೆ.

ಭಾನುವಿನಂತಿಪ್ಪುದು ಜ್ಞಾನ, ಭಾನುಕಿರಣದಂತಿಪ್ಪುದು ಭಕ್ತಿ
ಭಾನುವನಳಿದು ಕಿರಣಂಗಳಿಲ್ಲ, ಕಿರಣಂಗಳನುಳಿದು ಭಾನುವಿಲ್ಲ
ಜ್ಞಾನವಿಲ್ಲದ ಭಕ್ತಿ, ಭಕ್ತಿಯಿಲ್ಲದ ಜ್ಞಾನವೆಂತಿಪ್ಪುದು
ಚೆನ್ನಮಲ್ಲಿಕಾರ್ಜುನಾ ?

'ಭಕ್ತಿಜ್ಞಾನವೆಂಬುದು ಕಾಕಾಕ್ಷಿಯಂತೆ' ಒಂದು ಬಿಟ್ಟು ಒಂದಕ್ಕೆ ಪೂರ್ಣತೆಯುಂಟಾಗುವುದಿಲ್ಲವೆಂಬುದನ್ನು ಭಾನು ಮತ್ತು ಭಾನುಕಿರಣಗಳ ಸಂಪೂರಕತೆಯ ಭಾವದೊಂದಿಗೆ ಒಂದು ಬಿಟ್ಟು ಒಂದು ಅರ್ಥಹೀನವಾಗುವ ಸ್ಥಿತಿಯನ್ನು ಹೇಳುತ್ತಾಳೆ. ಇದರಿಂದ ಅಕ್ಕನಲ್ಲಿದ್ದ ಅರಿವಿನ ಜಾಗೃತಿಯನ್ನು ಕಾಣಬಹುದಾಗಿದೆ.

'ಅರಲುಗೊಂಡ ಕೆರೆಗೆ ತೊರೆ ಬಂದು ಹಾಯ್ದಂತೆ' 'ಬರಲುಗೊಂಡ ಸಸಿಗೆ ಮಳೆ ಸುರಿದಂತಾಯಿತ್ತು' ಹಾಗೂ 'ಚೆನ್ನಮಲ್ಲಿಕಾರ್ಜುನನ ತಂದೆನ್ನ ಕೈವಶಕ್ಕೆ ಕೊಟ್ಟ ಗುರುವೇ ನಮೋ' ಎನ್ನುವ ಗುರುಕರುಣೆಯ ಅಮೃತಾನುಭವದ ಹೇಳಿಕೆಗಳಲ್ಲಿ ಅಕ್ಕನ ವ್ಯಕ್ತಿತ್ವ ಮತ್ತಷ್ಟು ಹೊಳಪಾಗುತ್ತದೆ.

ಎನ್ನ ಕಾಯ ಮಣ್ಣು, ಜೀವ ಬಯಲು
ಆವುದ ಹಿಡಿವೆನಯ್ಯಾ ದೇವಾ ?
ನಿಮ್ಮನಾವ ಪರಿಯಲ್ಲಿ ನೆನೆವೆನಯ್ಯಾ ?
ಎನ್ನ ಮಾಯೆಯನು ಮಾಣಿಸಯ್ಯಾ
ಚೆನ್ನಮಲ್ಲಿಕಾರ್ಜುನಾ

ಕಾಯ ಕೇವಲ ಮಣ್ಣಿನ ರೂಪ, ಜೀವ ಬಯಲು ರೂಪ ಎಂದು ಅರಿತ ಮೇಲೆ ಇಂತಹ ಮಾಯೆಯನ್ನು ಮಾಣಿಸಿ ಆತ್ಮರೂಪನಾದ ಚೆನ್ನಮಲ್ಲಿಕಾರ್ಜುನನಲ್ಲಿ ಬೆರಸುವುದೇ ಆಕೆಗೆ ಮುಖ್ಯ ಗುರಿಯಾಗುತ್ತದೆ. ಅದಕ್ಕೆ ಬೇಕಾದ ಸಿದ್ಧತೆಯನ್ನು ಮಾಡುತ್ತಾ ಕಡುಪರೀಕ್ಷೆಗೆ ಒಳಗಾಗಿ ಪರಿಶುದ್ಧಗೊಂಡ ಭಾವವನ್ನು ಕೆಳಗಿನ ವಚನದಲ್ಲಿ ಕಾಣಬಹುದು.

ಎನಗೇಕಯ್ಯಾ ? ನಾ ಪ್ರಪಂಚಿನ ಪುತ್ಥಳಿ!
ಮಾಯಿಕದ ಮಲಭಾಂಡ, ಆತುರದ ಭವನಿಳಯ !!
ಜಲಕುಂಭದ ಒಡೆಯಲ್ಲಿ ಒಸರುವ ನೆಲೆವನೆಗೇಕಯ್ಯಾ ?
ಬೆರಳು ತಾಳ ಹಣ್ಣಾ ಹಿಸುಕಿದಡೆ ಮೆಲಲುಂಟೆ ?
ಬಿತ್ತೆಲ್ಲಾ ಜೀವ ಅದರೊಪ್ಪದ ತೆರ ಎನಗೆ

*ಎನ್ನ ತಪ್ಪನೊಪ್ಪುಗೊಳ್ಳಿ*
*ಚೆನ್ನಮಲ್ಲಿಕಾರ್ಜುನ ದೇವರ ದೇವ ನೀವೆ ಅಣ್ಣಗಳಿರಾ !*

ಆತ್ಮಪರೀಕ್ಷಣೆಯ ವಿವಿಧ ಹಂತಗಳಲ್ಲಿ ಮುಂದುವರಿದು ತನ್ನ ತಪ್ಪನ್ನು ಶರಣರ ಮುಂದಿಟ್ಟು ಒಪ್ಪಗೊಳಿಸಿಕೊಂಡು, 'ಎನ್ನ ಮನದ ದುರಾಶೆಯ ಮಾಣಿಸಿ ನಿಮ್ಮತ್ತ ತೋರಾ' ಎನ್ನುವ ದೈನ್ಯಭಾವದಿಂದ 'ಅರಸಿ ಕಾಣದ ತನುವ ಬೆರಸಿ ಕೂಡದ ಸುಖವ ಎನಗೆ ನೀ ಕರುಣಿಸಾ' ಎನ್ನುವ ಹಂಬಲ 'ನಾಮದಲ್ಲಿ ಹೆಂಗೂಸಾದರೇನು ಭಾವಿಸಲು ಗಂಡು ರೂಪು !' ಎನ್ನುವ ಆತ್ಮಶಕ್ತಿಯ ತೇಜಸ್ಸಿನಿಂದ ತನ್ನ ವ್ಯಕ್ತಿತ್ವದಲ್ಲಿ ಪೂರ್ಣತೆಯನ್ನು ಕಂಡುಕೊಳ್ಳುತ್ತಾಳೆ.

*ಹಂಡನಗಲಿ ಹಿಡಿವಡೆದ ಕುಂಜರ*
*ತನ್ನ ವಿಂಧ್ಯವ ನೆನೆವಂತೆ ನೆನೆವೆನಯ್ಯಾ*
*ಬಂಧನಕ್ಕೆ ಬಂದ ಗಿಳಿ*
*ತನ್ನ ಬಂಧುವ ನೆನೆವಂತೆ ನೆನೆವೆನಯ್ಯಾ*
*ಕಂದಾ ನೀನಿತ್ತ ಬಾ ಎಂದು*
*ನೀವು ನಿಮ್ಮಂದವ ತೋರಯ್ಯಾ, ಚೆನ್ನಮಲ್ಲಿಕಾರ್ಜುನಾ.*

ಮೇಲಿನ ವಚನವಲ್ಲಿ, ಈ ಲೋಕಕ್ಕೆ ಬಂದು ಸಿಲುಕಿಕೊಂಡ ನೋವು ಬಂಧನಕ್ಕೆ ಒಳಗಾದ ಗಿಳಿಯಂತೆ, ಹಂಡನಗಲಿದ ಕುಂಜರದಂತೆ ಅನುಭವವಾಗಿ ಆಕೆಯ ಮನಸ್ಸಿಗೆ ಗಾಸಿಯನ್ನುಂಟುಮಾಡಿದೆ. ದೈವಕರುಣೆಯಿಲ್ಲದೆ ಅನುಭಾವ ಸಾಧ್ಯವಿಲ್ಲವೆಂದು ಮನಗಂಡಿದ್ದ ಆಕೆ 'ನಾನಳಿದು ನೀನುಳಿವ ಪರಿಯ ತೋರಯ್ಯಾ' ಎಂದು ಮೊರೆಯಿಡುತ್ತಾಳೆ. 'ಹಸಿವೆಯೇ ನೀನು ನಿಲ್ಲು ನಿಲ್ಲು, ತೃಷೆಯೇ ನೀನು ನಿಲ್ಲು ನಿಲ್ಲು' ಎನ್ನುತ್ತಾ ಎಲ್ಲ ಇಂದ್ರಿಯಗಳನ್ನು ತಡೆದು ನಿಲ್ಲಿಸಿ ಚೆನ್ನಮಲ್ಲಿಕಾರ್ಜುನನ ಸಮೀಪವನ್ನು ಮಾತ್ರ ಚಿಂತಿಸುತ್ತಾಳೆ. 'ಮರವಿದ್ದು ಫಲವೇನು ನೆಳಲಿಲ್ಲದನ್ನಕ್ಕ' 'ಧನವಿದ್ದು ಫಲವೇನು ದಯವಿಲ್ಲದನ್ನಕ್ಕ' 'ನಾನಿದ್ದು ಫಲವೇನು ನಿಮ್ಮ ಜ್ಞಾನವಿಲ್ಲದನ್ನಕ್ಕ' ಎನ್ನುವ ಅರಿವು ಆಕೆಯ ಅನುಭಾವಿಕ ಸಾಧನೆಯ ಒರೆಗಲ್ಲಾಗಿದೆ. 'ನಚ್ಚುಗೆ ಮನ ನಿಮ್ಮಲ್ಲಿ, ಮಚ್ಚುಗೆ ಮನ ನಿಮ್ಮಲ್ಲಿ.... ಎನ್ನ ಪಂಚೇಂದ್ರಿಯಂಗಳು ಕಬ್ಬುನ ಉಂಡ ನೀರಿನಂತೆ ನಿಮ್ಮಲ್ಲಿ ಬೆರಸುಗೆ' ಎಂದು ಭಾವಾತೀತ ಗುಣವನ್ನು ಪಡೆಯುವ ಅಕ್ಕ ಜೀವ-ಶಿವ ಸಂಬಂಧವನ್ನು 'ಮರೆದು ಬೀಸುವ ಗಾಳಿ ಪರಿಮಳವನ್ನುಂಡಂತೆ ಬೆರೆಸಬೇಕು' ಎನ್ನುವ ಅಪೂರ್ವವಾದ ಚಿಂತನೆಗೆ ಜೀವಂತನಿದರ್ಶನವಾಗಿದ್ದಾಳೆ.

# ಅಂಬಿಗರ ಚೌಡಯ್ಯ

**ಎನ್. ಸಿದ್ಧಲಿಂಗಯ್ಯ,** ಎಂ. ಎ. ಬಿಎಡ್.,

---

ಭಾರತೀಯ ಸಾಹಿತ್ಯ ಸಂಸ್ಕೃತಿಗಳ ಕೆಲವು ಅತ್ಯುನ್ನತ ಶಿಖರಗಳಲ್ಲಿ ಹನ್ನೆರಡನೆಯ ಶತಮಾನದ ಕನ್ನಡ ನಾಡಿನ ಶರಣ ಧರ್ಮ ಸಂಸ್ಕೃತಿಯೂ ಒಂದು. ಶರಣರು ಧರೆಯ ಮೇಲೆಯೇ ಸ್ವರ್ಗಸಿರಿಯನ್ನು ತಂದ ಮಹಾನುಭಾವರು. ಪ್ರಜಾಸತ್ತೆಯ ಆಧಾರದ ಮೇಲೆ ಹೊಸ ಸಮಾಜದ ನಿರ್ಮಾಣಕ್ಕೆ ಕಾರಣ ಕರ್ತರಾದರು. ಶತ-ಶತಮಾನಗಳಿಂದ ಹಲವು ವಿಧವಾದ ಒತ್ತಡಗಳ ಅಡಿಯಲ್ಲಿ ಸಿಕ್ಕಿ ಉಸಿರುಗಟ್ಟಿದ್ದ ಶೋಷಿತ ಜನಾಂಗಕ್ಕೆ ಉಸಿರು ನೀಡಿದ ಮಹಿಮಾ ಪುರುಷರೆಂದರೆ ಶರಣರು. ಶರಣರ ಹೊಸತನ, ಉನ್ನತಿ, ಉದಾತ್ತತೆಗಳನ್ನು ಕಾಣಬೇಕಾದರೆ ಅವರ ಜೀವನ ಹಾಗೂ ತತ್ತ್ವ, ಧರ್ಮ, ಸಾಹಿತ್ಯವನ್ನು ಅವಲೋಕಿಸಬೇಕಾಗುತ್ತದೆ. ಶರಣರು ಅನಾದಿಕಾಲದಿಂದ ಬಂದ ಜಾತಿ, ಮತ, ಪಂಥ-ಪಂಗಡಗಳನ್ನು ಮೆಟ್ಟಿನಿಂತರು. ಜಾತಿ ವ್ಯವಸ್ಥೆಗೆ ಇತಿಶ್ರೀ ಹಾಡಿದರು. ಮಾನವ ಜಾತಿ ಒಂದೇ ಎಂಬುದಾಗಿ ಸಾರಿದರು. ಸಮಾನತೆ, ಐಕ್ಯಭಾವನೆಗೆ ನಾಂದಿ ಹಾಡಿದರು. ಸಮಾಜದಲ್ಲಿ ಯಾರಿಗೆ ಯಾರೂ ಮೇಲಲ್ಲ, ಕೀಳೂ ಅಲ್ಲ, ಆಳಲ್ಲ, ಅರಸಲ್ಲ, ಎಂದು ಹೇಳಿದರು. ಶರಣಧರ್ಮ, ತತ್ತ್ವ ವಿಚಾರಗಳು ಇಂದಿನ ಸಮಾಜಕ್ಕೆ ಅತ್ಯಂತ ಅನುಕರಣೀಯ ಅಗತ್ಯಗಳಾಗಿವೆ.

ವ್ಯಕ್ತಿಸ್ವಾತಂತ್ರ್ಯ, ಸ್ತ್ರೀಸ್ವಾತಂತ್ರ್ಯ, ವಿಚಾರಸ್ವಾತಂತ್ರ್ಯ, ಅಭಿವ್ಯಕ್ತಿ ಸ್ವಾತಂತ್ರ್ಯ, ಧಾರ್ಮಿಕ ಸ್ವಾತಂತ್ರ್ಯ ಮುಂತಾದ ಹಲವು ಬಗೆಯ ಸ್ವಾತಂತ್ರ್ಯಗಳನ್ನು ಶರಣ-ಶರಣೆಯರು ಅನುಭವ ಮಂಟಪದಲ್ಲಿ ಪಡೆದುಕೊಂಡು ಅನುಭವಿಸಿದರು ಮತ್ತು ರೂಢಿಯಲ್ಲಿ ತಂದರು. ಅನುಭವ ಮಂಟಪದಲ್ಲಿ ತಮಗೆ ಅನಿಸಿದ್ದನ್ನು ಸಾಧಕರು ಸ್ಪಷ್ಟವಾಗಿ ನೇರವಾದ ನುಡಿಗಳಿಂದ, ಮುಕ್ತಮನಸ್ಸಿನಿಂದ ಚರ್ಚೆ

ಮಾಡುತ್ತಿದ್ದರು. ಇದಕ್ಕೆ ವಚನ ಸಾಹಿತ್ಯವೇ ನಿದರ್ಶನವಾಗಿದೆ. ವ್ಯಕ್ತಿ-ಸಮಾಜದ ಸಂಬಂಧದ ಬಗೆಗೆ ಚಿಂತಿಸಿದರು. ವ್ಯಕ್ತಿ-ಸಮಾಜ ಇವು ಬೇರೆಯಲ್ಲ, ವ್ಯಕ್ತಿಯ ಜೀವನ ವಿಕಾಸವಾಗುವುದು ಸಾಮಾಜಿಕ ಪರಿಸರದ ಮಧ್ಯದಲ್ಲಿಯೇ. ಸಾಮಾಜಿಕ ಪ್ರಜ್ಞೆಯುಳ್ಳ ಶರಣರು ಅಂತರಂಗ ಬಹಿರಂಗ ಶುದ್ಧಿಯ ಬಗ್ಗೆ ಒತ್ತುಕೊಟ್ಟರು. ಮನುಷ್ಯನು ಒಳಗೂ - ಹೊರಗೂ ಶುದ್ಧವಾಗಿರಬೇಕು. ಅಂದಾಗಲೇ ಮನುಷ್ಯನ ಅಭಿವೃದ್ಧಿ ಸಾಧ್ಯ. ವೈಯಕ್ತಿಕವಾಗಿ ಪರಿಶುದ್ಧನಾದ ಮನುಷ್ಯ ಸಾಮಾಜಿಕ ಜೀವನದಲ್ಲಿ ಕೂಡಿ ಬೆಳೆದು ಪ್ರಗತಿ, ವಿಕಾಸವನ್ನು ಹೊಂದುತ್ತಾನೆಂದು ಸಾರಿದರು. ವ್ಯಕ್ತಿಯ ವಿಕಾಸ ಸಾಂಘಿಕ ಜೀವನದಲ್ಲಿ ವಿಕಾಸಗೊಳ್ಳುತ್ತದೆ ಎಂಬುದಕ್ಕೆ ಶಿವಶರಣೆ ಅಕ್ಕಮಹಾದೇವಿಯ ಈ ಒಂದು ವಚನ ಸ್ಪಷ್ಟಪಡಿಸುತ್ತದೆ.

*"ಸಂಗದಿಂದಲ್ಲದೆ ಅಗ್ನಿಹುಟ್ಟದು*
*ಸಂಗದಿಂದಲ್ಲದೆ ಜೀವ ಮೊಳೆದೋರದು*
*ಸಂಗದಿಂದಲ್ಲದೆ ಹೂವಾಗದು*
*ಸಂಗದಿಂದಲ್ಲದೆ ಸರ್ವಸುಖದೋರದು*
*ಚನ್ನಮಲ್ಲಿಕಾರ್ಜುನಯ್ಯ*
*ನಿಮ್ಮ ಮಹಾನುಭಾವಿಗಳ ಸಂಗದಲಾನು*
*ಪರಮಸುಖಿಯಾದೆನಯ್ಯಾ"*

ಶರಣರು ಸಾಮಾಜಿಕ ಹಿತಚಿಂತಕರು, ಪ್ರಜಾಸತ್ತಾತ್ಮಕ ಮೌಲ್ಯಗಳನ್ನು ರೂಢಿಸಿದವರು. ವ್ಯಕ್ತಿ-ಸಮಾಜ ಪರಿಸರದ ಬಗ್ಗೆ ಆಳವಾಗಿ ಆಲೋಚಿಸಿ ಅವುಗಳ ಮಧ್ಯೆ ಹೊಂದಾಣಿಕೆಯನ್ನು ಕಲ್ಪಿಸುವಲ್ಲಿ ಯಶಸ್ವಿಯಾದರು. ಶಿವಶರಣರು ತಮ್ಮ ಸಮಕಾಲೀನ ಸಾಮಾಜಿಕ ಜೀವನದಲ್ಲಿ ಕಂಡ ಅಂಧಶ್ರದ್ಧೆಗಳನ್ನು ಗುರುತಿಸಿದರು. ಜನ ತಾವು ಕೈಕೊಂಡ ವೃತ್ತಿ ಕುಲ ಕಸಬುಗಳಲ್ಲಿಯೇ ಮೇಲು-ಕೀಳುಗಳನ್ನು ಅರಸುತ್ತ, ಸದಾ ಬಡತನ, ಹಸಿವುಗಳ ದವಡೆಗೆ ಸಿಲುಕಿ, ನಿರುತ್ಪಾದಕ ಪರಾವಲಂಬಿ ಸಮೂಹವಾಗಿ ಆರ್ಥಿಕ ದಾಸ್ಯದಿಂದ ನರಳುವುದನ್ನು ಕಂಡ ಶಿವಶರಣರು, ಧಾರ್ಮಿಕ ಹಿನ್ನೆಲೆಯಲ್ಲಿ ಭೂತಾಕಾರವಾಗಿ ಬೆಳೆದು ನಿಂತಿದ್ದ ಈ ಅನಿಷ್ಟ ಪರಂಪರೆಯನ್ನು ಮೂಲೋತ್ಪಾಟನೆ ಮಾಡಲು ತೊಡಗಿದರು. ಈ ಪರಂಪರೆ ನಿವಾರಣೆಯಾಗದ ಹೊರತು ಮಾನವಕುಲ ಹೊಸ ದಿಕ್ಕಿಗೆ ಸಾಗಲು ಅಸಾಧ್ಯವೆಂದು, ಮನಗಂಡರು. ಇದರ ನಿವಾರಣೆ ಧರ್ಮದ ಭದ್ರತಳಹದಿಯ ಮೇಲೆ ಸಮಗ್ರ ಪರಿವರ್ತನೆ ತರಲು ಸಾಧ್ಯ ಎನ್ನುವ ಸತ್ಯವನ್ನು ದಿನನಿತ್ಯದ ಬದುಕಿನಲ್ಲಿ ಅಳವಡಿಸುವುದು ಶಿವಶರಣರಿಗೆ ಅತಿಮುಖ್ಯವಾಗಿ ಕಂಡಿತು.

ದೇವನೊಬ್ಬ ನಾಮಹಲವು, ಸ್ವರ್ಗಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿರೋ! ಸತ್ಯವ ನುಡಿವುದೇ ಸ್ವರ್ಗಲೋಕ, ಮಿಥ್ಯವ ನುಡಿವುದೇ ಮರ್ತ್ಯಲೋಕ ; ಆಚಾರವೇ ಸ್ವರ್ಗ; ಅನಾಚಾರವೇ ನರಕ ; ಆಚಾರವೇ ಕುಲ, ಅನಾಚಾರವೇ ಹೊಲೆ;

ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟ, ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು ಎಂಬುದಾಗಿ ಜನರ ಹೃದಯವನ್ನು ಮುಟ್ಟುವಂತೆ ಸಾರಿದರು. ಸಾವಿರಾರು ವರ್ಷಗಳಿಂದ ಅವರ ಮೈ-ಮನಗಳನ್ನು ಬಿಗಿದಿದ್ದ ವರ್ಣಾಶ್ರಮ ಧರ್ಮದ ಸರಪಳಿಗಳನ್ನು ಕತ್ತರಿಸಿಕೊಂಡು ಜನ ಮುಕ್ತವಾಗಿ ಹೊರಬಂದರು. 'ಕುಲ ಹದಿನೆಂಟೆಂಬರು' ಇದ ನಾವು ನಂಬೆವು ಭಕ್ತನೊಂದು ಕುಲ, ಭವಿಯೊಂದು ಕುಲ ಎಂದು ವೃತ್ತಿಯಾಧಾರಿತ ಕುಲ ಜಾತಿಗಳ ಬೇರನ್ನು ಕಿತ್ತೆಸೆದರು. ವಚನಕಾರರ ಈ ಧಾರ್ಮಿಕ ಕ್ರಾಂತಿ ವ್ಯಾಪಕವಾಗಿ ಬೆಳೆದು ಶೋಷಣೆಗೆ ಗುರಿಯಾಗಿದ್ದ ಅಂದಿನ ದೀನ-ದಲಿತ ವರ್ಗಗಳ ಜನರ ಮನಸ್ಸಿನಲ್ಲಿ ಇದ್ದಿರಬಹುದಾದ ಸಂದೇಹಗಳನ್ನು ಉಚ್ಚಾಟನೆಗೊಳಿಸಿ, ಹೊಸ ಮಾನವ ಸಮಾಜದ ನಿರ್ಮಾಣಕ್ಕೆ ಅವರನ್ನು ಅಣಿಗೊಳಿಸಿತು. ಆದುದರಿಂದ ದೇಶದ ಮೂಲೆ ಮೂಲೆಗಳಿಂದ ಅನೇಕ ಜನ ಬಂದು ಕಲ್ಯಾಣದಲ್ಲಿ ಒಂದುಗೂಡಿದರು. ಕಲ್ಯಾಣ, ಮಾನವ ಕಲ್ಯಾಣದ ಹೊಸ ಕ್ಷಿತಿಜಗಳನ್ನು ತೆರೆದಿಟ್ಟ ಅದ್ಭುತ ಕ್ರಾಂತಿಯ ಕೇಂದ್ರವಾಯಿತು.

ಬಸವಾದಿ ಶಿವಶರಣರು ಹಮ್ಮಿಕೊಂಡ ವರ್ಗ-ವರ್ಣ ಶೋಷಣೆ ರಹಿತವಾದ ನವ ಮಾನವ ಸಮಾಜ ನಿರ್ಮಾಣಕಾರ್ಯದ ದಿಟ್ಟ ಧೋರಣೆಗಳಿಂದ ನಿಶ್ಚಿತ ಮಾನವೀಯ ನಿಲುವುಗಳಿಂದ ಆಕರ್ಷಿತನಾಗಿ ಬಂದು, ತನ್ನ ಶ್ರಮಜೀವನವನ್ನು 'ಅಂಬಿಗ' ಕಾಯಕದಲ್ಲಿ ಪಲ್ಲಟಗೊಳಿಸಿ, ಅನುಭಾವ ಪಥದ, ಭಕ್ತಿ ಪಂಥದ ಹರಿಕಾರನಾಗಿ ನಿಲ್ಲುತ್ತಾನೆ **ಶಿವಶರಣ-ಅಂಬಿಗ ಚೌಡಯ್ಯ**. ಬಸವಣ್ಣನವರ ಸಮಕಾಲೀನನಾದ ಅಂಬಿಗರ ಚೌಡಯ್ಯ ೧೨ನೇ ಶತಮಾನಕ್ಕೆ ಸೇರುತ್ತಾನೆ. ೧೨ನೇ ಶತಮಾನದ ಇಷ್ಟಲಿಂಗ ಮಹತ್ವ, ಆ ಕಾಲದ ಕೆಲವು ಸಾಮಾಜಿಕ ಆಚರಣೆ ಇತ್ಯಾದಿಗಳು ಈತನ ವಚನಗಳಲ್ಲಿ ಒಂದಲ್ಲ ಒಂದು ರೂಪದಲ್ಲಿ ಉಲ್ಲೇಖಿತವಾಗಿವೆ. ಈ ಕೆಲವು ಆಂತರಿಕ ಆಧಾರಗಳನ್ನು ಗಮನಿಸಿದ ವಿದ್ವಾಂಸರು ಈತ ೧೨ನೇ ಶತಮಾನದ ಬಸವ ಸಮಕಾಲೀನನೆಂಬುದನ್ನು ಸ್ಪಷ್ಟಪಡಿಸುತ್ತಾರೆ.[೧] ಈಗಿನ ಧಾರವಾಡ ಜಿಲ್ಲೆಯ ಪೂರ್ವಗಡಿಯಲ್ಲಿ ಹರಿಯುತ್ತಿರುವ ತುಂಗಭದ್ರಾನದಿಯ ದಡದಲ್ಲಿರುವ 'ಚೌಡದಾಸಪುರ' ಚೌಡಯ್ಯನ ಕಾಯಕಕ್ಕೆ ಆಶ್ರಯವಾಗಿದ್ದ ಊರು. ತುಂಗಭದ್ರೆಯ ಒಂದು ದಡದಿಂದ ಇನ್ನೊಂದು ದಡಕ್ಕೆ ಹರಿಗೋಲಿನಲ್ಲಿ ಜನರನ್ನು ದಾಟಿಸುವ 'ಅಂಬಿಗವೃತ್ತಿ'ಯೇ ಇವನು ಅನುಸರಿಸುತ್ತಿದ್ದ ಕಾಯಕ.

ಹೊಳೆಹಾಯಿಸುವ ಕಾಯಕವನ್ನು ನಿಷ್ಠೆಯಿಂದ ಮುಂದುವರಿಸಿದ ಈ ಶರಣ, ಮೆಲ್ಲ ಮೆಲ್ಲನೆ ಭಕ್ತನಾಗುತ್ತಾನೆ. ಭಕ್ತಿಸಾಧನೆಯ ಗರಗಸದ ಕೊರೆತಗಳನ್ನು ಅನುಭವಿಸಿ ಹೆಜ್ಜೆ ಹೆಜ್ಜೆಗೂ ಪ್ರಜ್ಞೆಯಿಂದ ಪುಟಗೊಳ್ಳುತ್ತಾನೆ. ಅಂಧಶ್ರದ್ಧೆ, ಮೌಢ್ಯಗಳನ್ನು ಖಂಡಿಸುತ್ತಾನೆ. ಇತರರಲ್ಲಿ ಕಂಡು ಬರುವ ಅಜ್ಞಾನ, ಅದರಿಂದಾಗಿ ತಮ್ಮಂತಹ ದಲಿತರ ಮೇಲೆ ದಾಳಿಯಿಡುವ ಆಘಾತಗಳಿಂದ ಆಕ್ರೋಶಗೊಳ್ಳುತ್ತಾನೆ. ಯಾವುದನ್ನೂ ಬಚ್ಚಿಡದೆ, ಬಿಚ್ಚಿಟ್ಟು ಖಂಡಿಸುವ

೧. ಅಂಬಿಗರ ಚೌಡಯ್ಯನ ವಚನಗಳು (ಸಂ) ಬಸವರಾಜ ಸಿದ್ಧಾಶ್ರಮ ಡಾ|| ಎಸ್. ವಿದ್ಯಾಶಂಕರ ಪು.೧೧

ಎಚ್ಚರಿಸುವ ಎಚ್ಚೆತ್ತುಕೊಳ್ಳುವ ನಿರ್ಭೀತನಾಗುತ್ತಾನೆ. ದಲಿತ ವರ್ಗವೊಂದರಿಂದ ಬಂದ ಅನೇಕರಲ್ಲಿ ಈತ ವಿಶಿಷ್ಟವಾಗಿ ಕಾಣಿಸಿಕೊಳ್ಳುತ್ತಾನೆ. ಶತ-ಶತಮಾನಗಳಿಂದ, ತುಳಿತಕ್ಕೆ ಸಿಕ್ಕಿ ಮೂಕವೇದನೆಗಳನ್ನು ಅನುಭವಿಸುತ್ತಿದ್ದ ವೃಂದಕ್ಕೆ ಹೃದಯವಾಗುತ್ತಾನೆ. ಅವರ ಸಂವೇದನೆಗಳಿಗೆ ಧ್ವನಿಯಾಗುತ್ತಾನೆ. ಇದೇ ಈತನ ಆಕ್ರೋಶ ಮತ್ತು ಖಂಡನೆಗಳ ಮೂಲ ಪ್ರೇರಣೆ. ಇದರ ಮೂಲಕ ತನ್ನನ್ನು ತಾನು ಕಂಡುಕೊಳ್ಳುತ್ತಾನೆ. ಆದರೆ ಮೇಲುನೋಟಕ್ಕೆ ಈ ಪ್ರಜ್ಞಾಪ್ರೇರಿತ ಆಕ್ರೋಶ, ಸಾಮಾಜಿಕ ಅನಾಚಾರ ದೌರ್ಜನ್ಯಗಳ ಖಂಡನೆಯಾಗಿ ತೋರಿದರೂ ಇದರ ಮೂಲ ಸೂತ್ರ ಶೋಧನೆಯೇ ಆಗಿದ್ದಿತು.

ಅಂಬಿಗರ ಚೌಡಯ್ಯನು ಕೆಳವರ್ಗದಿಂದ ಬಂದ ವಚನಕಾರ. ಈತನ ಜೀವನದ ವಿವರಗಳು ಹೆಚ್ಚಾಗಿ ತಿಳಿಯದಿದ್ದರೂ ಬಸವಣ್ಣನವರ ನಿಕಟವರ್ತಿಯಾಗಿದ್ದನೆಂಬುದು ಸ್ಪಷ್ಟ. ಈತನು ಬರೆದಿರುವ ಸುಮಾರು ಇನ್ನೂರಕ್ಕೂ ಹೆಚ್ಚು ವಚನಗಳು ದೊರಕಿವೆ. ತನ್ನ ಹೆಸರನ್ನೇ ಆತ ಅಂಕಿತವಾಗಿ ವಚನಗಳಲ್ಲಿ ಬಳಸಿಕೊಂಡಿದ್ದಾನೆ. ಈತನ ವಚನಗಳು ತೀಕ್ಷ್ಣವಾಗಿಯೂ ಮತ್ತು ಚುರುಕಿನಿಂದಲೂ ಕೂಡಿವೆ. ಇವನ ವಚನಗಳ ವಸ್ತು ಭಾಷೆ ಶೈಲಿಯನ್ನು ಗಮನಿಸಿದರೆ ಇವನೊಬ್ಬ ಕೆಚ್ಚೆದೆಯ, ನಿಷ್ಠುರ ಪ್ರಕೃತಿಯ, ಗ್ರಾಮ್ಯ ಮನೋಧರ್ಮದ ಒರಟು ವಚನಕಾರ ನೆಂಬುದು ಸ್ಪಷ್ಟವಾಗುತ್ತದೆ. ತಾತ್ತ್ವಿಕ ಚಿಂತನೆಗಿಂತಲೂ ಹೆಚ್ಚಾಗಿ ಕ್ರಿಯಾತ್ಮಕತೆಗೆ ಬೆಲೆ ಕೊಡುವಂಥವನು. ಅಂತರಂಗದ ಪ್ರಾಮುಖ್ಯತೆ ಇವನಲ್ಲಿದ್ದು ವೀರನಿಷ್ಠೆ ಇವನ ಅಭಿವ್ಯಕ್ತಿಯ ಒಟ್ಟು ನಿಲುವಾಗಿ ತೋರುತ್ತದೆ. ಅಂಬಿಗರ ಚೌಡಯ್ಯ ನಿರ್ದಯೀಕರಣದ ವಾತಾವರಣದಲ್ಲಿ ಮಾತನಾಡುತ್ತಾ ಏನನ್ನೂ ಮುಚ್ಚುಮರೆಯಿಲ್ಲದೆ ಖಚಿತವಾಗಿ ಹೇಳುವಂಥ ದಿಟ್ಟ ಮನೋಭಾವದವನು.

*ಬ್ರಹ್ಮದ ಮಾತನಾಡಿ*
*ಕನ್ನೆಯರ ಕಾಲದೆಸೆಯಲ್ಲಿ ಕುಳಿತು*
*ಪರಬೊಮ್ಮದ ಮಾತು ಅಲ್ಲಿಯೆ ನಿಂದಿತ್ತೆಂದ ನಂಬಿಗ -ಚೌಡಯ್ಯ (ವ.೧೦೬)*

ಎನ್ನುವ ಈ ಮಾತುಗಳು ನಿಷ್ಠೂರವಾಗಿ, ನಿಸ್ಸಂಕೋಚವಾಗಿ, ವೇಷಧಾರಿಗಳನ್ನು ನೇರವಾಗಿ ಪ್ರಶ್ನಿಸುತ್ತವೆ.

ಅಂದಿನ ಸಮಾಜದಲ್ಲಿ ರೂಢಮೂಲವಾಗಿದ್ದ ಮೇಲುಕೀಳುಗಳನ್ನು ತೊಡೆದು ಹಾಕಿ ಎಲ್ಲರಿಗೂ ಉದ್ಧಾರಕ್ಕೆ ಕಾರಣವಾಗುವ ಮಾರ್ಗವನ್ನು ರೂಪಿಸಬೇಕೆಂಬುದೇ ಬಸವಾದಿ ಶಿವಶರಣರ ಘನೋದ್ದೇಶವಾಗಿದ್ದಿತು. ಇದಕ್ಕಾಗಿ ಜನಜೀವನದಲ್ಲಿ ಜಾಗೃತಿಯನ್ನುಂಟು ಮಾಡಲು ಯತ್ನಿಸಿದರು. ಜೀವನ ಸಂಗ್ರಾಮದಲ್ಲಿ ಬದುಕುವುದಕ್ಕಾಗಿ ವ್ಯಕ್ತಿ ಯಾವುದೇ ಉದ್ಯೋಗವನ್ನು ಕೈಗೊಂಡಿರಲಿ ಅವನಿಗೆ ತನ್ನ ವಿಕಾಸಕ್ಕೆ ಪೂರ್ಣ ಅವಕಾಶ ಸಿಕ್ಕಬೇಕು ಅದಕ್ಕಾಗಿ ಅವರು ಉದ್ಯೋಗದಲ್ಲಿ ಶ್ರದ್ಧೆಯನ್ನೂ ಸಮಾನ ಗೌರವವನ್ನೂ ಮೂಡಿಸಿದರು.

ಉದ್ಯೋಗದಲ್ಲಿ ಮೇಲುಕೀಳುಗಳೆಂಬುದು ಇರಬಾರದು. ಉದ್ಯೋಗಗಳು 'ಕಾಯಕ'ಗಳಾಗಿ ಪರಿಣಮಿಸಿದಾಗ ಅವು ಸಾಧನೆಗೆ ಅಡ್ಡಿಯಾಗುವುದಿಲ್ಲವೆಂದು, ದೈಹಿಕ ಶ್ರಮದಿಂದ ದುಡಿಯದೆ ಬದುಕುವ ಹಕ್ಕು ಯಾರಿಗೂ ಇಲ್ಲ ಎಂದು ಅಂಬಿಗರ ಚೌಡಯ್ಯ ಮುಂತಾದ ಶರಣರು ಸಾರಿದರು.

ಅಂಬಿಗರ ಚೌಡಯ್ಯ ಕಾಯಕದಲ್ಲಿ 'ಅಂಬಿಗ'ನಾದುದರಿಂದ ಅನೇಕ ತರಹದ ಮನೋಭಾವವುಳ್ಳವರನ್ನು ಆತ ಎದುರಿಸಬೇಕಾಗಿತ್ತು. ತಾನು ಕಂಡುಕೊಂಡಿರುವ ಹಾದಿಯನ್ನು ಇತರರಿಗೂ ತೋರಿಸುವ ಪರಮ ಕಾರಣಿಕ. ಅಂತೆಯೇ ಅವನ ವ್ಯವಹಾರ ಕ್ಷೇತ್ರ ಒಂದೇ ನದಿಗೆ ಸೀಮಿತವಾಗಿದ್ದರೂ ತಾನಿದ್ದ ನೆಲೆಯಲ್ಲೇ ತನ್ನಿಷ್ಟೆ ಪಡೆದವನು. ತನ್ನ ಪರಿಸರದಲ್ಲಿ ಕಂಡು ಬರುವುದನ್ನೇ ಉದಾಹರಿಸಿ ತಿಳಿಯ ಹೇಳುತ್ತಿದ್ದನು. ಕಾಯಕವನ್ನೇ ತನ್ನ ಉಸಿರಾಗಿಸಿಕೊಂಡು ಅದರಲ್ಲೇ ಆತ್ಮತೃಪ್ತಿಯನ್ನು ಕಂಡುಕೊಂಡವನು.

ಚೌಡಯ್ಯನ ವಚನಗಳಲ್ಲಿ ಜಾನಪದದ ಕವಲುಗಳು ಬಳಕೆಯಾಗಿರುವುದು ಕಂಡುಬರುತ್ತದೆ. ಅಂದಿನ ಕಾಲದ ಜನಪದರಲ್ಲಿ ಬಳಕೆಯಲ್ಲಿದ್ದ ಅನೇಕ ಉಪಮೆ, ನಾಣ್ಣುಡಿ, ಗಾದೆ, ಪಡೆನುಡಿ, ಜನಪದ ಕಲೆಗಳು, ನಂಬಿಕೆ, ಸಂಪ್ರದಾಯಗಳು, ಊಟ, ದೇವತೆಗಳು, ಬೈಗುಳ ಶಬ್ದಗಳು ಚೌಡಯ್ಯನ ವಚನಗಳಲ್ಲಿ ಸಮೃದ್ಧವಾಗಿ ಬಳಕೆಯಾಗಿವೆ. ಕೆಲವು ಕಡೆ ಆಡು ಮಾತಿನ ಶೈಲಿಯಲ್ಲಿಯೇ ವಚನಗಳು ಸಾಗುತ್ತವೆ.

ಉದಾಹರಣೆಗೆ : ಕೆಲವನ್ನು ನೋಡಬಹುದು.

'ಒಡಲ ಕಿಚ್ಚಿಗೆ ಹೋಗಿ ತುಡುಗುಣಿಯ ನಾಯಿ ಹೊಕ್ಕು' (ವ.೧೬)

'ಬಾಜಾರಿಯ ತೊತ್ತಿಗೆಲ್ಲಿಯದೊ ನಿಜ ಮುತ್ತೈದೆತನ' (ವ. ೧೮)

'ಸೆರಗು ಹಾಸುವವಳನು ಒಪ್ಪುವರೆ ಲೋಕದೊಳು' (ವ.೨೦)

'ಬೆಲ್ಲದ ಹಗೆಯನಿಕ್ಕಿ ಭರಣಿಯ ಹೊರುವಂತೆ' (ವ.೫೧)

'ದಾರಿಯ ಹಸಮಾಡಿ ನೀರ ತಿದ್ದುವಂತೆ' (ವ. ೫೧)

'ನಡುನೀರೊಳು ಹೋಗುವ ಹರಿಗೋಲು ಹೊಡೆಗೆಡೆದಂತಾಯಿತ್ತು' (ವ-೬೩)

'ಸಕಲ ವ್ಯಾಪಾರದಲ್ಲಿ ಮೂಡಿ ಮುಳುಗುವರಿಗೆ ಸುಖದ ತದ್ರೂಪೆ ಬಲ್ಲನೆ' (ವ-೮೨)

'ಒಡೆಯದೆ ತೆಂಗಾಯಿ ಮೆದ್ದವರುಂಟೆ' (ವ-೧೪೦)

'ಕುರುಡಿಯಾಗಲಿ, ಕುಂಟಿಯಾಗಲಿ ಮನೆಯ ಹೆಂಡತಿಯೇ ಲೇಸು' (ವ-೨೫೫)

ಈ ರೀತಿ ಜನಸಾಮಾನ್ಯರ ಜೀವನ ಚಿತ್ರಣಕ್ಕೆ ಜನಪದ ಮಧ್ಯದಲ್ಲಿರುವ ನುಡಿಗಳೇ ವಚನಗಳಲ್ಲಿ ಉತ್ತಮ ಮಾಧ್ಯಮವಾಗಿ ರೂಪಿತವಾಗಿವೆ.

ಚೌಡಯ್ಯನು ವಚನಗಳಲ್ಲಿ ಗಾದೆಗಳನ್ನು ನೇರವಾಗಿ ಬಳಸಿರುವುದನ್ನು ಕಾಣಬಹುದಾಗಿದೆ.

'ಸತ್ತವನ ಬಾಯಲ್ಲಿ ನಾಯಿ ಉಚ್ಚೆ ಹೋಯಿತ್ತೆಂಬ ಗಾದೆ ನಿನಗಾಯಿತು' (ವ.೫೧) 'ಗಾಳಿ ಬಿಟ್ಟಲ್ಲಿ ತೂರಿಕೊಳ್ಳಯ್ಯ, ಗಾಳಿ ನಿನ್ನಾಧೀನವಲ್ಲ ಕಂಡಯ್ಯ ನಾಳೆ ತೂರಿಹೆನೆಂದಡಿಲ್ಲ ಕಂಡಯ್ಯ' (ವ-೨೨೪)

ಹೀಗೆ ಇನ್ನೂ ಹತ್ತಾರು ಕಡೆ ಗಾದೆಗಳನ್ನು ಬಳಸಿರುವುದು ಕಂಡುಬರುತ್ತದೆ. ಅಂದಿನ ಸಂಪ್ರದಾಯ ನಂಬಿಕೆಗಳನ್ನು ತನ್ನ ಮಾತಿನ ಭಾಷೆಯಲ್ಲಿಯೇ ಚಾಟಿಯೇಟಿನಂತೆ ಖಂಡಿಸುತ್ತಾನೆ.

''ಗಂಡನ ಕೂಡ ಸಮಾಧಿಯ ಕೊಂಬ ಹೆಂಡಿರು ಅನಂತ ಹೆಂಡಿರ ಕೂಡ ಸಮಾಧಿಯ ಕೊಂಬ ಗಂಡರುಂಟೆ'' (ವ-೪೬), 'ಮುನ್ನ ಮಾಡಿದ ಕರ್ಮ ಎಂಬರು ' (ವ.೨೦೭) 'ಗಿಡ ಮೂಲಿಕೆಗಳ ತಂತ್ರ ಮಂತ್ರ ಯಂತ್ರವ ಭಾಷೆಯ ಕಲಿತುಕೊಂಡು - (ವ. ೨೧೨)

ಇಂತಹ ನಂಬಿಕೆ ಸಂಪ್ರದಾಯ ಆಚರಣೆಗಳು ಚೌಡಯ್ಯನ ವಚನಗಳಿಂದ ತಿಳಿದು ಬರುತ್ತವೆ. ಒಟ್ಟಿನಲ್ಲಿ ಚೌಡಯ್ಯನ ವಚನಗಳಲ್ಲಿ ಕಮ್ಮಾರ, ಕುಂಬಾರ, ಬಡಗಿ, ಅಕ್ಕಸಾಲಿಗ, ಕಂಚುಗಾರ, ಅಂಬಿಕ, ಹೊಲೆಯ, ಮಾದಿಗ ಇತ್ಯಾದಿ ಹತ್ತು ಹದಿನೆಂಟು ವಿವಿಧ ಜನಾಂಗದವರನ್ನು ಕುರಿತಾದ ಹಗರಣ, ಕಲೆ, ಆಟ, ವಿಧಿ-ವಿಧಾನಗಳು, ಹಬ್ಬ ಹರಿದಿನ, ದೇವತೆಗಳ ನಂಬಿಕೆ ಸಂಪ್ರದಾಯಗಳ ಮಾಟ, ಮಂತ್ರ, ತಂತ್ರಗಳು ಹೀಗೆ ಹತ್ತು ಹಲವಾರು ಸಂಪ್ರದಾಯಗಳನ್ನು ಚೌಡಯ್ಯನ ವಚನಗಳಲ್ಲಿ ಕಾಣಬಹುದಾಗಿದೆ. ಅಂಬಿಗರ ಚೌಡಯ್ಯನ ವಚನಗಳು ಧಾರ್ಮಿಕ ಸ್ವರೂಪದ ಚಿಂತನೆ ಮತ್ತು ಸಾಮಾಜಿಕ ಚಿಂತನೆಯ ಹಿನ್ನೆಲೆಯಲ್ಲಿಯೇ ಮೂಡಿ ಬರುತ್ತವೆ. ಸಾಮಾಜಿಕ ಕರಾಳ ವ್ಯವಸ್ಥೆಗೆ ಸಿಲುಕಿ, ತುಂಬ ನಿರ್ಲಕ್ಷಿತವಾಗಿದ್ದ ಅಂಬಿಗ ಜನಪದ ವೃಂದದಿಂದ ಬಂದ ಚೌಡಯ್ಯ ತನ್ನ ಅಂಬಿಗರ ವೃತ್ತಿಯಲ್ಲಿಯೆ ಆಧ್ಯಾತ್ಮಿಕ ನಿಲುವನ್ನು ಸ್ಥಿರಗೊಳಿಸಿಕೊಳ್ಳುತ್ತಾನೆ. ಇದರಿಂದಾಗಿ ಅಂಬಿಗರ ವೃತ್ತಿ 'ಅಂಬಿಗ ಕಾಯಕ'ವಾಗುತ್ತದೆ. ಅಂಬಿಗ ವೃತ್ತಿಯ ಪರಿಕರಗಳಾದ ದೋಣಿ, ಹರಿಗೋಲು, ಹುಟ್ಟು ಮುಂತಾದವು ಆಧ್ಯಾತ್ಮಿಕ ಅನುಭವಗಳ ಪ್ರತೀಕಗಳಾಗುತ್ತವೆ. ವಾಸ್ತವಿಕ ಅಂಶಗಳು ದಿವ್ಯ ಅನುಭವದ ಅನುಸಂಧಾನಕ್ಕೆ ಪ್ರೇರಕ ಶಕ್ತಿಯ ಸಂಕೇತವಾಗಿ ಸ್ಥಿರಗೊಳ್ಳುವುವು.

*ಅಂಬಿಗನು ಜಗದೊಳಗೆ ಆಡುವನು*
*ತುಂಬಿದ ಸಾಗರದೊಳಗೆ ನೋಡಯ್ಯ*
*ನಿಂದ ದೋಣಿಯನೇರದಂದಿನ*
*ಹುಟ್ಟು ಕಡಿವಂದವನರಿಯದಾತ ತೊಳಸುತ್ತಿದ್ದನು*
*ಚೆಂದಗೆಟ್ಟವರೆಲ್ಲ ಬಂದೇರಿ ದೋಣಿಯನು*

ಶಿವನೊಂದೇ ತಾವಿಗೊಯ್ದಿಳುಹುವೆನೆಂದ ನಂಬಿಗಚೌಡಯ್ಯ. ಅಮೂರ್ತವಾದ ಅನುಭಾವಗಳನ್ನು ಮೂರ್ತೀಕರಣಗೊಳಿಸುವ ಹಂತ ತುಂಬಾ ಕ್ಲಿಷ್ಟವಾಗಿ ತೋರುತ್ತದೆ.

ಅಂಬಿಗರ ಚೌಡಯ್ಯನ ಅನುಭಾವದ ನಿಲುವು, ಆತ್ಮಾನುಸಂಧಾನದ ವಿವರಗಳನ್ನು ಸಾರುವ ವಚನವನ್ನು ನೋಡಿ :

*ತಡೆನೆಲೆಯಿಲ್ಲದ ಮಹಾನದಿಯಲ್ಲಿ ಒಡಲಿಲ್ಲದಂಬಿಗಬಂದಿದ್ದೇನೆ*
*ಹಿಡಿವ ಬಿಡುವ ಮನದ ಬೆಲೆಗೊಟ್ಟಡೆ*
*ಕಡೆಗಣಿಸಿ ಹಾಯಿಸುವೆ ಮಹಾಹೊಳೆಯ*
*ನುಡಿಯಿಲ್ಲದ ನಿಸ್ಸೀಮ ಗ್ರಾಮದಲ್ಲಿರಿಸುವೆನೆಂದಾತನಂಬಿಗ - ಚೌಡಯ್ಯ*

ಆತ್ಮಾನುಸಂಧಾನದ ಪಥದಲ್ಲಿ ವ್ಯಕ್ತಿ ಹೇಗೆ ಹೆಜ್ಜೆ ಹೆಜ್ಜೆಗೆ ತನ್ನೊಡನೆ ಸಂಘರ್ಷ ನಡೆಸಬೇಕಾಗುತ್ತದೆ. 'ನಾನೊಂದು ನೆನೆದರೆ ತಾನೊಂದ ನೆನೆವ ಮನ, ಬೇಡವಾದುದನ್ನು ಹಿಡಿಯುತ್ತದೆ, ಬೇಕಾದುದನ್ನು ಬಿಡುತ್ತದೆ. ಹಮ್ಮು, ಸ್ವಾರ್ಥಗಳ ಅರಿವಿಗೆ ಸಾಧಕವಾದ ಮನವನ್ನು ಬಂಧಿಸಿಟ್ಟಿದೆ. ಆದುದರಿಂದ ಈ ಹೊಳೆ ದಾಟುವುದಕ್ಕೆ ಕೊಡಬೇಕಾದದ್ದು ಮನದ ಬೆಲೆ ಮಾತ್ರ.

ವೀರಶೈವ ಧಾರ್ಮಿಕ ಆಚರಣೆಯ ಅಷ್ಟಾವರಣ, ಪಂಚಾಚಾರ, ಷಟ್ಸ್ಥಲಗಳ ನೀತಿ-ನಿಯಮ ಪಾಲನೆಗಳಲ್ಲಿ ಚೌಡಯ್ಯ ನಿಷ್ಠಾವಂತನಾಗಿದ್ದನೆಂದೂ ತೋರುತ್ತದೆ. ಕಟ್ಟಿದ ಲಿಂಗವ ಬಿಟ್ಟು ಬೆಟ್ಟದ ಲಿಂಗಕ್ಕೆ ಹೋಗಿ ಅರ್ಚಿಸುವುದನ್ನು ಖಂಡಿಸುತ್ತಾನೆ. ಬೆಟ್ಟದ ಲಿಂಗವ ಹಿರಿದು ಮಾಡುವ ಇಂಥ ಮೂಢಜನರನ್ನು 'ಬಿಟ್ಟು ಕೊಡಿ ನಿಮ್ಮ ಇಷ್ಟಲಿಂಗವ ನಮ್ಮ ಕೈಗೆ' ಎಂದು ಹೇಳುತ್ತಾ, ಕೊಡದಿದ್ದರೆ ನಡುನೀರಿನಲ್ಲಿ ಒಯ್ದು ಕಟ್ಟಿ ಮುಳುಗಿಸಿ ಲಿಂಗೈಕ್ಯರ ಮಾಡುತ್ತೇನೆ ಎಂದು ಗೇಲಿ ಮಾಡುತ್ತಾನೆ. ಸ್ಥಾವರಲಿಂಗ ಪರಿಕಲ್ಪನೆಯನ್ನು ಅಲ್ಲಗಳೆದು ಇಷ್ಟಲಿಂಗಾನು ಸಂಧಾನದ ಹಿರಿಮೆಯನ್ನು ಸಾರುತ್ತಾನೆ. ಇತರ ವಚನಕಾರರಂತೆ ಚೌಡಯ್ಯನು ವೀರಶೈವ ಧರ್ಮದ ತತ್ತ್ವ ಮತ್ತು ಸಾಮಾಜಿಕ ವಿಷಯಗಳನ್ನು ಕುರಿತು ವಚನ ರಚಿಸಿದ್ದಾನೆ. ಪರಮಾತ್ಮ, ಜಗತ್ತು, ಗುರು, ಲಿಂಗ, ಜಂಗಮ, ಇಷ್ಟಲಿಂಗ, ಭಕ್ತ ಅನುಭಾವ ಮುಂತಾದವುಗಳ ಬಗ್ಗೆ ತನ್ನ ವಚನಗಳಲ್ಲಿ ವಿಚಾರಪೂರ್ಣವಾದ ತತ್ತ್ವಗಳನ್ನು ಅಭಿವ್ಯಕ್ತಪಡಿಸಿರುತ್ತಾನೆ. ಚೌಡಯ್ಯನ ನಿಜವಾದ ಸ್ವಭಾವ ಗೊತ್ತಾಗುವುದು ಅವನ ವಿಡಂಬನಾತ್ಮಕ ವಚನಗಳಿಂದ ತಾತ್ತ್ವಿಕ ಚರ್ಚೆ ಒಬ್ಬನ ಬುದ್ಧಿಯ ಮಟ್ಟ ಸೂಚಿಸಿದರೆ, ಸಾಮಾಜಿಕ ಸಮಸ್ಯೆಗಳಿಗೆ ಪ್ರತಿಕ್ರಿಯಿಸುವ ರೀತಿ ಅವನ ಸ್ವಭಾವದ ಮೇಲೆ ಬೆಳಕು ಬೀರುತ್ತದೆಂಬುದನ್ನು ಅಂಬಿಗರ ಚೌಡಯ್ಯನ ವಚನಗಳ ಮೂಲಕ ಅರಿತುಕೊಳ್ಳಬಹುದಾಗಿದೆ. ಚೌಡಯ್ಯನ ವಿಡಂಬನೆ ಸಾಮಾನ್ಯವಾಗಿ ಸಮಾಜದ ಎಲ್ಲ ವರ್ಗದ, ಮತಗಳ ಆಚರಣೆಗಳನ್ನು ಕುರಿತಾದುದಾಗಿದ್ದಿತು. ಮತ್ತೆ ಅವನೇ ಒಪ್ಪಿ-ಅಪ್ಪಿಕೊಂಡಿದ್ದ ವೀರಶೈವ ಧರ್ಮದ ವಲಯದಲ್ಲಿ ಗೋಚರಿಸಿದ ಧರ್ಮಬಾಹಿರ ಕ್ರಿಯಾಚರಣೆಗಳ ಬಗೆಗೆ ಅಂದಿನ ಸಮಾಜದಲ್ಲಿ ಬಹಳಷ್ಟು ಮಟ್ಟಿಗೆ ಆವರಿಸಿಕೊಂಡಿದ್ದ ಮೂರ್ತಿಪೂಜೆ, ಕಲ್ಲು ಮರಗಳನ್ನು ದೇವರೆಂದು ಪೂಜಿಸುವುದನ್ನು ಕಂಡು ಕಟುವಾಗಿ ಟೀಕಿಸಿದ್ದಾನೆ.

*ನಾದದ ಬಲದಿಂದ ವೇದ*
*ಮಾತಿನ ಬಲದಿಂದ ಶಾಸ್ತ್ರ*
*ಪಾಷಾಣದ ಬಲದಿಂದ ಸಮಯಗಳೇ ಹೊರತು*
*ಇವಾವುವೂ ಸ್ವಯಂಭುವಲ್ಲ*
*ಹೀಗೆ ಮಾತಿನ ಬಣಬೆಯ ಮುಂದಿಟ್ಟುಕೊಂಡು*
*ಪರಮಾತ್ಮನನ್ನು ಕಾಣಲು ಸಾಧ್ಯವೆ ? ಆತ*
*ಅತ್ಯತಿಷ್ಠದ್ದಶಾಂಗುಲನಲ್ಲವೆ ? (ವ-೪)*

ಎಂದು ಪ್ರಶ್ನಿಸುವನು.

*ಆರಿಕೆಯ ಬಿತ್ತಿದ ಗಿಡುವಿನ ಹೂವಕೊಯಿದು*
*ಊರೆಲ್ಲರೂ ಕಟ್ಟಿಸಿದ ಕೆರೆಯ ನೀರು ತಂದು*
*ನಾಡೆಲ್ಲರೂ ನೋಡಿಯೆಂದು ಪೂಜಿಸುತ್ತಾ,*
*ಪೂಜಿಸಿದ ಪುಣ್ಯ ಹೂವಿಗೋ, ನೀರಿಗೋ ?*
*ನಾಡೆಲ್ಲಕ್ಕೋ ?   ಪೂಜಿಸಿದಾತಗೋ ?*
*ಇದ ನಾನರಿಯೆ ನೀ ಹೇಳೆಂದನಂಬಿಗ ಚೌಡಯ್ಯ !*

ಮೂರ್ತಿಪೂಜೆ, ಅದೂ ಜನಪ್ರಿಯತೆಗಾಗಿ ಮಾಡುವಂತಹದು ಎಷ್ಟು ಅರ್ಥಹೀನವಾದುದೆಂಬುದನ್ನು ಚೌಡಯ್ಯ ಇಲ್ಲಿ ವಿಮರ್ಶಿಸಿದ್ದಾನೆ. ಕಲ್ಲುಗಳಲ್ಲಿ ದೇವತೆಗಳಿಗೆ ಆಕಾರ ಮಾಡಿಸಿ, ಆ ದೇವತೆಗಳಿಂದ ಧರ್ಮಗಳನ್ನು ಸೃಷ್ಟಿಸಿರುವ. ನಮ್ಮ ಪೂರ್ವಿಕರ ಧೋರಣೆಯನ್ನು ಅಂಬಿಗರ ಚೌಡಯ್ಯ ಅಲ್ಲಗಳೆದಿರುವುದು ಸಾಕಾರ ಪೂಜೆ ಮಾಡುವವರನ್ನು ತೀವ್ರವಾಗಿ ವಿರೋಧಿಸಿರುವುದು ಅವನ ಪ್ರಗತಿಪರ ಆಲೋಚನೆಗೆ ಸಾಕ್ಷಿಯಾಗಿದೆ. ಆದರೆ ನೀತಿ-ಅನೀತಿಗಳ ತಿಳುವಳಿಕೆ ಇದ್ದು ಅನಾಚಾರದ ಜೀವನ ನಡೆಸುತ್ತಾ ದೈವಪೂಜೆಯ ಸಮಾಜಕ್ಕೆ ಎಚ್ಚರಿಕೆಯನ್ನು ನೀಡುತ್ತಾನೆ.

*ಅರಳಿಯ ಮರ ವಿಷ್ಣು ಕಾಂತಿ, ಬನ್ನಿ, ತೊಳಸಿ*
*ಎಂದು ಹೊಡೆ ಹೊಮ್ಮುವಿರಿ,*
*ಎಲ್ಲಿಭೋ, ಎಲ್ಲಿ ಭೋ !*
*ನಿಮ್ಮ ಹೊಡೆವಡ ದೈವಂಗಳೆಲ್ಲಾ ಗಿಡಮರನಾಗಿ ಹೋದುವಲ್ಲಾ,*
*ನಿಮ್ಮ ನಡೆಯಲ್ಲಿ ಅನಾಚಾರ*
*ನಿಮ್ಮ ನುಡಿಯಲ್ಲಿ ಶಿವದ್ರೋಹ*
*ಇವಂದಿರ ಗಡಣ ಬೇಡೆಂದನಂಬಿಗಚೌಡಯ್ಯ (ವ.೧೬೯)*

ಅರಳಿಯಮರ, ವಿಷ್ಣುಕಾಂತಿ, ಮುತ್ತುಗ, ತೋಳಸಿ, ಇವುಗಳನ್ನು ಪೂಜಿಸಿ ನಮಸ್ಕರಿಸುವ ಜನರನ್ನು ಕಂಡು 'ಎಲ್ಲಿ ಭೋ ! ಎಲ್ಲಿ ಭೋ ! ಹೊಡೆವಡುವ ದೈವಗಳೆಲ್ಲಾ ಗಿಡಮರವಾಗಿ ಹೋದುವಲ್ಲಾ ! ಗಿಡಮರಗಳನ್ನು ದೇವರೆಂದು ನಂಬಿ ಪೂಜಿಸುವುದು ತಪ್ಪಾದರೆ, ಅನಾಚಾರಕ್ಕೆ ದೈವ ಪೂಜೆಯ ಮುಸುಕು ಹಾಕುವುದು ಮತ್ತೊಂದು ತಪ್ಪು. ಇಂಥವರ ಸಹವಾಸವೇ ಬೇಡೆಂದು ತಿರಸ್ಕರಿಸುತ್ತಾನೆ.

ಅಂಬಿಗರ ಚೌಡಯ್ಯನು ವಾಸ್ತವಿಕ ವಿಚಾರಗಳಿಗೆ ಮತ್ತು ಜನರ ಮೌಢ್ಯಗಳನ್ನು ಹರಿತವಾದ ಮಾತುಗಳಿಂದ ಖಂಡಿಸುತ್ತಾ ತೀರ್ಥಯಾತ್ರೆಗಳು ಪುಣ್ಯಪಾಪಗಳನ್ನು ಹೆಚ್ಚಿಸುವಂತಹವು. ಇವು ಹೆಚ್ಚಿನ ಭವದಲ್ಲಿ ಮನುಷ್ಯನನ್ನು ಬಂಧನದಲ್ಲಿರಿಸುತ್ತವೆ. ಇದರಿಂದ ನಿನ್ನನ್ನು ನೀನು ತಿಳಿಯಲಾರದೆ ಎಂದು ತೀರ್ಥಯಾತ್ರೆಯ ಬಗ್ಗೆ ಎಚ್ಚರಿಕೆಯ ಮಾತನ್ನು ಹೇಳುತ್ತಾನೆ.

*ತೀರ್ಥಯಾತ್ರೆ ಎಂಬುವ ಅಧ್ಯತನಬೇಡ*
*ಪುಣ್ಯ ಪಾಪವೆಂಬೆರಡು ಭಾಂಡಾರವನು*
*ಬೆನ್ನಿನಲ್ಲಿಕ್ಕಿಕೊಂಡು ಬಾರದಿರೇ ನೀನು*
*ನಿನ್ನಲ್ಲೇ ನೀನು ತಿಳಿದು ನೋಡು ಜಗದೊಳಗೆಂದಾತ*
*ನಮ್ಮ ಅಂಬಿಗರ ಚೌಡಯ್ಯ*

ಎನ್ನುವಲ್ಲಿ 'ಭಕ್ತಂಗೆ ಮನವೇ ಸಾಕ್ಷಿ' ಎಂದು ಸಾಕ್ಷಿಪ್ರಜ್ಞೆಯನ್ನು ಹೇಳುತ್ತಾನೆ. ಮಡಿ ಮುಡಿ ಎಂದು ಹಾರಾಡುವವನೇ ಬಹಳ ಕ್ರೂರಿ ಎನ್ನುವ ಕೆಳವರ್ಗದ ಚೌಡಯ್ಯ ಹೆಚ್ಚು ಪ್ರಜ್ಞಾವಂತನಾಗಿ ಇವುಗಳನ್ನು ನೋಡುತ್ತಾನೆ.

*ಜಲ ಶುದ್ಧವೆಂಬೆನೆ ಜಲ ಶುದ್ಧವಲ್ಲ ;*
*ನೆಲ ಶುದ್ಧವೆಂಬೆನೆ ನೆಲ ಶುದ್ಧವಲ್ಲ ;*
*ಅಗ್ನಿ ಶುದ್ಧವೆಂಬೆನೆ ಅಗ್ನಿ ಶುದ್ಧವಲ್ಲ ;*
*ವಾಯು ಶುದ್ಧವೆಂಬೆನೆ ವಾಯು ಶುದ್ಧವಲ್ಲ ;*
*ಬೆಳಗು ಶುದ್ಧ ವೆಂಬೆನೆ ಬೆಳಗು ಶುದ್ಧವಲ್ಲ ;*
*ಗುರುವೆ ನೀ ಕೇಳಯ್ಯ*
*ದೇವರಾಯ ಹುಸಿ ಮಸುಳ ಕಳೆದು ;*
*ಜ್ಞಾನವೆಂಬ ಬೆಳಗ ಸಾಧಿಸಬಲ್ಲಡೆ,*
*ಅಲ್ಲಿ ತಾನಿಪ್ಪನೆಂದನಂಬಿಗ ಚೌಡಯ್ಯ*

ಈ ರೀತಿ 'ಅನ್ವೇಷಣೆ ಪ್ರವೃತ್ತಿಯೇ ಜ್ಞಾನ' ವೆಂದು ನಿಜವಾದ ಜ್ಞಾನದ ಬಗ್ಗೆ ತಿಳಿಹೇಳುತ್ತಾ ಡಂಭಾಚಾರ ಆಚರಣೆಗಳನ್ನು ಉಗ್ರವಾಗಿ ಹೀಯಾಳಿಸಿದ್ದಾನೆ.

ವೀರಶೈವ ಧರ್ಮದಲ್ಲಿ ಗುರುವಿನ ಸ್ಥಾನ ಮಹತ್ವದ್ದು, ಮಂತ್ರೋಪದೇಶ ಮಾಡಿ ಶಿಷ್ಯನನ್ನು ಶುದ್ಧೀಕರಿಸಿ, ಅವನ ಅಜ್ಞಾನವನ್ನು ನಿವಾರಿಸಿ, ಇಷ್ಟಲಿಂಗವನ್ನು ಅನುಗ್ರಹಿಸಿ, ಅವನನ್ನು ಉದ್ಧರಿಸುವ ಗುರುವಿನ ಪಾತ್ರ ದೊಡ್ಡದು, ಗುರು-ಲಿಂಗ-ಜಂಗಮವೆಂದರಿಯದ ಗೊಡ್ಡುಗಳ ಶಿಷ್ಯರ ಮಾರಿಕೊಂಬ ಹೆಡ್ಡ ಜೀವಿಗಳನೇನೆಂಬೆನಯ್ಯಾ ?ಆಚಾರ-ಅನಾಚಾರದ ಭೇದವನರಿಯದ ಹೆಡ್ಡ ಮಾನವರಿಗೆ ಉಪದೇಶವ ಕೊಡುವ ಮತಿಭ್ರಷ್ಟರನೇನೆಂಬೆನಯ್ಯಾ ? ಅವನ ಅಜ್ಞಾನವಳಿಯದೆ, ಅವನ ನಡೆ-ನುಡಿ ಹಸನು ಮಾಡದೆ, ಅವನ ಆದಿ-ಅಂತ್ಯವ ತಿಳಿಯದೆ, ಧನ-ಧಾನ್ಯದಾಸೆಗೆ ಶಿವದೀಕ್ಷೆಯ ಮಾಡುವನೊಬ್ಬ ಗುರುವು ಹುಟ್ಟಂಧಕ ನೆಂಬೆನಯ್ಯಾ ! (ವ ೫೫) ಎನ್ನುವನು. ಸಂತೆಗೆ ಹೋಗಿ ಮೂರು ಪಾಕಿಗೆ ಲಿಂಗವನ್ನು, ಆರು ಪಾಕಿಗೆ ವಸ್ತ್ರವನ್ನು ತಂದು ಲಿಂಗಧಾರಣೆ ಹೊಂದಲು ಪ್ರಯತ್ನಿಸುತ್ತಿದ್ದವರನ್ನು ಚೌಡಯ್ಯ ಕಟುವಾಗಿ ಟೀಕಿಸುತ್ತಾ, ಕಟ್ಟಿದವನೂ, ಕಟ್ಟಿಸಿಕೊಂಡವನೂ ಕಳ್ಳನಾಯಿಗಳು ಎಂದಿರುವನು.

ಗುರುವಿನ ಉಪದೇಶ ಪಡೆದು ಲಿಂಗಧರ್ಮದಲ್ಲಿ ಪ್ರವೇಶಿಸಿದ ಮೇಲೆ ತಮ್ಮ ನಿಷ್ಠೆಯನ್ನು ಪುನಃ ಕೀಳುದೈವಕ್ಕೆರಗುವವರನ್ನು ಕಂಡು ಹೀಗೆ ಹೇಳುತ್ತಾನೆ.

*ಗಂಡನೆಂಜಲಿಗೆ ಹೇಸುವಳು*
*ಮಿಂಡನ ತುಂಬುಲವ ತಿಂಬುವ ತೆರನಂತೆ*
*ಗುರುವಿನ ಉಪದೇಶವ ಕೊಂಡು*
*ಅನೀತಿ ದೇವರುಗಳ ಎಡೆಯ ತಿನ್ನುವಂತಹ*
*ಮಾದಿಗರು ನೀವು ಕೇಳಿರೋ*
*ಅಂಡಜ ಉತ್ಪತ್ತಿ ಎಲ್ಲಾ ದೇವರಿಂದಾಯಿತ್ತು*
*ಮೈಲಾರ ಬೀರ ಭೈರವ ದೂಳಕೇತನೆಂಬ*
*ಕಿರಿದೈವಕ್ಕೆರಗಿ ಭಕ್ತರೆನಿಸಿಕೊಂಬುವ*
*ಚಂಡಿ ನಾಯಿಗಳ ಕಂಡು ಮನ ಹೇಸಿತ್ತೆಂದಾತ*
*ನಮ್ಮ ಅಂಬಿಗರ ಚೌಡಯ್ಯ ನಿಜ ಶರಣನು (ವ.೧೯)*

ಹೀಗೆ ತೀವ್ರವಾಗಿ ನಿಂದಿಸಿದ್ದಾನೆ. ಅಂಥವರ ಬಗ್ಗೆ ಚೌಡಯ್ಯನಿಗಿರುವ ಕೋಪ ಉಗ್ರವಾದ ಭಾಷೆಯಲ್ಲಿ ಹೊರಹೊಮ್ಮಿದೆ. ಇದು ಅವನ ಸ್ವಭಾವ. ಕಂಡದ್ದನ್ನು ಕಂಡ ಹಾಗೆ ಹೇಳುವುದರೊಂದಿಗೆ ಕೆಂಡ ಕಾರುತ್ತಾನೆ. ಯಾರ ಹಂಗೂ ಆತನಿಗಿಲ್ಲ, ಭಾವುಕ ಮನಸ್ಸನ್ನು ಚುಚ್ಚಿ ಎಚ್ಚರಗೊಳಿಸುವುದು ಅವನ ಉದ್ದೇಶವಾಗಿದ್ದಿತು. ಗುರುಪೀಠ ಅಸ್ತಿತ್ವಕ್ಕೆ ಬಂದ ಮೇಲೆ ಅವನ್ನು ಯಾರೂ ಅಲುಗಾಡಿಸದಂತಾಯಿತು. ಅನರ್ಹರು ಲಾಂಛನ ಧರಿಸಿದ ಮಾತ್ರದಿಂದಲೇ ಗುರುಗಳಾಗಿದ್ದೇವೆ ಎಂದು ತಿಳಿದು ಭೋಗಜೀವನದಲ್ಲಿ ತೊಡಗಿ ಮೆರೆಯಲು ಪ್ರಾರಂಭಿಸುತ್ತಾರೆ. ಅಂತಹವರನ್ನು ಕಂಡು ಹೀಗೆ ಹೇಳುತ್ತಾನೆ.

*ಈಶ ಲಾಂಛನವ ತೊಟ್ಟು*
*ಮನ್ಮಥ ವೇಷ ಲಾಂಛನವ ತೊಡಲೇತಕ್ಕೆ ?*
*ಇದು ನಿಮ್ಮ ನಡೆನುಡಿಗೆ ನಾಚಿಕೆಯಲ್ಲವೆ ?*
*ಅಂದಣ ಛತ್ರ ಆಭರಣ*
*ಕರಿ ತುರಗಂಗಳ ಗೊಂದಣವೇತಕ್ಕೆ ?*
*ಅದು ಘನಲಿಂಗದ ಮೆಚ್ಚಲ್ಲಾ ಎಂದನಂಬಿಗ ಚೌಡಯ್ಯ*

ಎಂದು ಪ್ರಶ್ನಿಸಿದ್ದಾನೆ. ಗುರುಪೀಠಗಳ ಮೂಲಉದ್ದೇಶವೇ ಮರೆಯಾಗಿ ಭೋಗ ಜೀವನದ ಆಡಂಬರದ ತಾಣಗಳಾಗುತ್ತಿದ್ದ ಗುರುಪೀಠಗಳನ್ನು ಕಂಡು ಈ ರೀತಿ ಹೇಳಿದ್ದಾನೆ. ''ನಾವು ಪರಮ ವಿರಕ್ತರು, ಪಟ್ಟದ ಅಯ್ಯನವರು, ಚರಮೂರ್ತಿಗಳು, ಪರದೇಶಿಗಳು ಎಂದು, ಶಂಖ, ಗಿಳಿಲು, ದಂಡಾಗ್ರ ಎಂಬ ಬಿರುದು ಹಿಡಿದು, ಕಾವಿಕಾಷಾಯಾಂಬರವ ಹೊದ್ದು, ಸರ್ವಕಾರ್ಯದಲ್ಲಿ ಶ್ರೇಷ್ಠರೆಂದು ಗರ್ವದಲ್ಲಿ ಕೊಬ್ಬಿ, ಕಾಮನಾಟದಲ್ಲಿ ಕಲಕಿ, ಮನಸ್ಸಿನಲ್ಲಿ ದುರ್ಗುಣವನ್ನಿಟ್ಟುಕೊಂಡು, ಮಾತಿನಲ್ಲಿ ನೀತಿಯ ಸೇರಿಸುತ್ತಾ, ಕಪಟದಲ್ಲಿ ಊರಿಂದೂರಿಗೆ ಹಾಗುವ ಜಂಗಮರನ್ನು ಚೌಡಯ್ಯ ತೊನ್ನ ಹೊಲೆ ಮಾದಿಗರೆಂದು ಕರೆದು ಅವರ ಸಂಗವನ್ನು, ಮಾಡಲಾಗದು, ಅವರ ಪ್ರಸಂಗವ ಕೇಳಲಾಗದು'' ಎಂದು ಕಟುವಾಗಿ ನುಡಿದಿರುವನು (ವ. ೨೧೨). ಮತ್ತೆ ಗುರುಗಳು ಪೀಠದಲ್ಲಿ ಕುಳಿತು ಸಂಸಾರಿಗಳಂತೆ, ಧೂರ್ತನಾಗಿ ವರ್ತಿಸುವುದನ್ನು ಪ್ರತ್ಯಕ್ಷವಾಗಿ ಕಂಡ ಚೌಡಯ್ಯ :

*ದೊಡ್ಡ ದೊಡ್ಡ ಶೆಟ್ಟಿಗಳ ಕಂಡು*
*ಅಡ್ಡಗಟ್ಟಿ ಹೋಗಿ ಶರಣಾರ್ಥಿ ಎಂಬರು*
*ದುಡ್ಡು ಬೇಡುತ್ತ, ತಮ್ಮ ಮಠಕ್ಕೆ ಬನ್ನಿ ಹಿರಿಯರೇ ಎಂಬರು*
*ಹೋಗಿ ''ಶರಣಾರ್ಥಿ'' ಭಕ್ತನೆಂದೊಡೆ-ಕೇಳದೆ ಹಾಗೆ*
*ಅಡ್ಡಮೋರೆಯನಿಕ್ಕಿಕೊಂಡು ಸುಮ್ಮನೆ ಹೋಗುವ*
*ಹೆಡ್ಡ ಮೂಳರಿಗೆ ದುಡ್ಡೇ ಪ್ರಾಣವಾಯಿತ್ತು*
*ದುಡ್ಡಿನ್ಸ್ತರ ಕುರುಹನರಿಯದೆ ಮೊಳಪಾದದ ಮೇಲೆ*
*ಹೊಡ ಹೊಡಕೊಂದು ನಗುತಿರ್ದಾತ ನಮ್ಮ ಅಂಬಿಗರ ಚೌಡಯ್ಯ(ವ-೧೯೨)*

ದುಡ್ಡೇ ಪ್ರಾಣವಾದ ಮಠಪತಿಗಳು ಹಣವಂತ ದೊಡ್ಡ ಶೆಟ್ಟಿಗಳನ್ನು ಕಂಡಾಗ ಅವರನ್ನು ತಡೆದು ಶರಣಾರ್ಥಿ ಎಂದು ಹೇಳಿ ತಮ್ಮ ಮಠಕ್ಕೆ ಬನ್ನಿ ಹಿರಿಯರೇ ಎಂದು ಒತ್ತಾಯಿಸುವುದನ್ನು, ಬಡವರು ಮಠಕ್ಕೆ ಬಂದು ಶರಣಾರ್ಥಿ ಎಂದರೆ ಕೇಳಿಸದ ಹಾಗೆ ಅಡ್ಡ ಮೋರೆ ಹಾಕಿಕೊಂಡು ಸುಮ್ಮನೆ ಹೋಗುವುದನ್ನು ಕಂಡ ಚೌಡಯ್ಯ ಅವರ ವರ್ತನೆಯ ಬಗೆಗೆ ನಗೆಯಾಡಿರುವನು. ಈ ಮಾತು ಚೌಡಯ್ಯನ ಕಾಲಕಷ್ಟೇ ಏಕೆ ? ಇಂದಿನ ಸಮಾಜಕ್ಕೂ

ಅನ್ವಯವಾಗುವಂತಹ ಮಾತಾಗಿದೆ. ಈ ರೀತಿಯಾಗಿ ಸಮಾಜದ ಅನುಭಾವಿಯಾದ ಚೌಡಯ್ಯನು ಸಾಧಕರಿಗೆ ಅವಶ್ಯಕವಾದ ಹಿತೋಪದೇಶವನ್ನು ನೀಡುತ್ತಾನೆ. ಸಾಧಕನು ಕುಲಜಾತಿ ಭ್ರಮೆ ಸಹಿತ ಎಲ್ಲಾ ಭ್ರಮೆಗಳನ್ನು ಕಿತ್ತೊಗೆಯಬೇಕೆಂದೂ, ಇಂತಹ ಭ್ರಮೆಗಳನ್ನು ತ್ಯಜಿಸಿದವನೇ ಯೋಗಿಯೆಂದೂ ಸಾರಿದ್ದಾನೆ.

*ಜಾತಿಭ್ರಮೆ ನೀತಿಭ್ರಮೆಯೆಂಬ ಕರ್ಮಂಗಳ*
*ಘಾಸಿಮಾಡಿ ಕಳೆಯಬಲ್ಲಡಾತ ಯೋಗಿ*
*ಕ್ಷೇತ್ರಭ್ರಮೆ, ತೀರ್ಥಭ್ರಮೆಯೆಂಬ ಕರ್ಮಂಗಳ*
*ನೀಕರಿಸಿ ಕಳೆಯಬಲ್ಲಡಾತ ಯೋಗಿ,*
*ವೇದಭ್ರಮೆ ಪಾಷಾಣಭ್ರಮೆಯೆಂಬ ಕರ್ಮಂಗಳ*
*ದೂಷಿಸಿ ಕಳೆಯಬಲ್ಲಡಾತ ಯೋಗಿ*
*ಲೋಕಕ್ಕಂಜಿ ಲೌಕಿಕವ ಮರೆಗೊಂಡು ನಡೆವಾತ*
*'ತೂತಯೋಗಿ' ಎಂದಾತನಂಬಿಗರ ಚೌಡಯ್ಯ*

ಇಲ್ಲಿ ಸಂಗ್ರಹಿಸಿ ಹೇಳಿರುವ 'ಭ್ರಮೆ' ಎಂದರೆ ತಪ್ಪು ತಿಳುವಳಿಕೆ ಎಂದರ್ಥ. ಇದು ಯಾರಲ್ಲಿ ಇರುತ್ತದೋ ಅಂತಹವರಿಗೆ ಯೋಗ ಸಿದ್ಧಿಸದು. ಮೇಲೆ ಹೇಳಲಾಗಿರುವ ಅಂಶಗಳು ಭ್ರಮೆಗಳೆಂದು ತಿಳಿದು ಯಾವಾತನು ಲೋಕಕ್ಕಂಜಿ ಒಳಗೊಂದು, ಹೊರಗೊಂದು, ಮರೆಗೊಂದು ನಡೆಯುವನೋ ಅವನು ನಿಜವಾಗಿಯೂ 'ತೂತಯೋಗಿ' ಅರ್ಥಾತ್ ತೂತುಬಿದ್ದ ಕೊಡವು ಎಂದೂ ತುಂಬದಂತೆ ಅವನ ಸಾಧನೆಯ ಕೊಡವು ಎಂದೂ ತುಂಬಲಾರದು ಎಂಬುದಾಗಿ ಅಭಿಪ್ರಾಯ ಪಡುತ್ತಾನೆ. ಇಂಥ ಅನುಭಾವ ಸಿದ್ಧನಾದ ಚೌಡಯ್ಯನು ದ್ವಂದ್ವಾತೀತನಾಗಿ ಸಾರುತ್ತಾನೆ.

*ಕಟ್ಟಿ ಕಳೆ ಪಾಪವ ಬಿಟ್ಟು ಕಳೆ ಪುಣ್ಯವ*
*ಒತ್ತು ದೋಷವ, ಸಮತೆಯ ಪಸರಿಸಾ !*
*ಎತ್ತಿದಪ್ಪನು ಬೈಚ್ಚಿಟ್ಟು ಮನದಲ್ಲಿ ಚೆಕ್ಕನೆ ತೀವ್ರ ಪರಿಣಾಮವನು*
*ಇದು ಬಟ್ಟೆ, ದೇವತ್ವವ ಮುಟ್ಟುಲುಪದೇಶ*
*ಕೊಟ್ಟನಂಬಿಗರ ಚೌಡಯ್ಯ ತನ್ನನೊಲಿದವರಿಗೆ*

ಪಾಪ-ಪುಣ್ಯಗಳನ್ನು ಕಟ್ಟಿ, ಬಿಟ್ಟು ಕಳೆದು ಕೊಳ್ಳಬೇಕು. ರೋಷವನ್ನು ಒತ್ತಿ ಸರಿಸಿ, ಸಮತಾದೃಷ್ಟಿಯನ್ನು ಒಲಿಸಿಕೊಳ್ಳಬೇಕು. ಶರಣರ ಅನುಭಾವ, ಆಚರಣೆಗಳಲ್ಲಿ ಕೇಳಿ ಕಂಡುದನ್ನು ಮನದಲ್ಲಿ ಬೈಚಿಟ್ಟು ಪರಿಣಾಮಿಯಾಗಬೇಕು, ಇದುವೇ ದೇವತ್ವವನ್ನು ಮುಟ್ಟಿಸುವ ಪರಿ ! ದೀರ್ಘವಾದ ದಾರ್ಶನಿಕ ಸಿದ್ಧಾಂತವನ್ನು ಪ್ರತಿಪಾದಿಸುವಂತಿದೆ ಈ ವಚನ.

ಅಂಬಿಗರ ಚೌಡಯ್ಯ ಸಾಮಾನ್ಯ ಅಂಬಿಗನಲ್ಲ. "ತಡೆ ನೆಲೆಯಿಲ್ಲದ, ಮಹಾನದಿಯ ಕಡೆಗಾಣಿಸಿ ಹಾಯಿಸಿ, ನುಡಿಯಿಲ್ಲದ ನಿಸ್ಸೀಮ ಗ್ರಾಮದಲ್ಲಿರಿಸುವನಂತೆ" !ಅಬ್ಬಾ !ಅದೆಂಥಾ ಅಂಬಿಗನವ !ಒಡಲಿಲ್ಲದ ಅಂಬಿಗ, ಕಡೆಗಾಣಿಸುವ ಅಂಬಿಗ, ಕಾಸಿನ ಆಸೆಯಿಲ್ಲದ ಅಂಬಿಗ, ಆತ್ಮವಿಶ್ವಾಸದ ಅಂಬಿಗ, ಆಧ್ಯಾತ್ಮ ಸಂಪದದ ಅಂಬಿಗ, ಅನುಭಾವಿ ಅಂಬಿಗ, ಕಾಯಕ ನಿಷ್ಠಾವಂತ ಅಂಬಿಗ, ಎಂದು ಶ್ರೀ ಸಿದ್ಧಯ್ಯ ಪುರಾಣಿಕರು ಸ್ತುತಿಸಿದ್ದಾರೆ (ಶ ರ.ಚ. ೪೨೦)

ಅಂಬಿಗರ ಚೌಡಯ್ಯನ ವಚನಗಳು ಅಧರಕ್ಕೆ ಕಹಿಯಾಗಿ ಉದರಕ್ಕೆ ಸಿಹಿಯಾಗಿವೆ. ಸಮಾಜವನ್ನು ಪ್ರತ್ಯಕ್ಷದರ್ಶಿಯಾಗಿ, ಕಂಡದ್ದನ್ನು ಕಂಡಹಾಗೆ ಹೇಳಿ ಕೆಂಡದಂತಹ ಕೋಪ ಬರಿಸುವ ಕೆಂಪುಕಣ್ಣಿನ ಮೂರ್ತಿಯಾಗಿದ್ದವನು. ಡಂಭಾಚಾರ, ಮೂಢನಂಬಿಕೆ, ವಿಡಂಬನೆ ಆಡಂಬರಗಳಿಗೆ ಅನಲವಾಗಿ ಸಾತ್ವಿಕದ ಕಿಚ್ಚನ್ನು ಕೆರಳಿಸಿಕೊಂಡಿದ್ದಾನೆ. ನಿಜದ ನಗಾರಿ, ನಿರ್ಭಯತೆಯ ಭೇರಿ ಅಂಬಿಗರ ಚೌಡಯ್ಯ ಎಂದಿದ್ದಾರೆ ಶರಣರು. ಅವನು ಜೀವನದ ಬಗ್ಗೆಯೂ ಆಲೋಚನೆ ಮಾಡಿದ್ದಾನೆ ಎಂಬುದಕ್ಕೆ ಈ ವಚನವನ್ನು ನೋಡಬಹುದು.

*ಬಡತನಕ್ಕೆ ಉಂಬುವ ಚಿಂತೆ ಉಣಲಾರದೆ ಉಡುವ ಚಿಂತೆ,*
*ಉಡಲಾದರೆ ಇಡುವ ಚಿಂತೆ, ಇಡಲಾದರೆ ಹೆಂಡಿರ ಚಿಂತೆ,*
*ಹೆಂಡಿರಾದರೆ ಮಕ್ಕಳ ಚಿಂತೆ, ಮಕ್ಕಳಾದರೆ ಬದುಕಿನ ಚಿಂತೆ,*
*ಬದುಕಾದರೆ ಕೇಡಿನ ಚಿಂತೆ, ಕೇಡಾದರೆ ಮರಣದ ಚಿಂತೆ,*
*ಇಂತೀ ಹಲವು ಚಿಂತೆಯಲ್ಲಿ ಇಪ್ಪವರ ಕಂಡೆನು*
*ಶಿವನ ಚಿಂತೆಯಲ್ಲಿದ್ದವರೊಬ್ಬರನೂ ಕಾಣೆನೆಂದಾತ*
*ನಮ್ಮ ಅಂಬಿಗರ ಚೌಡಯ್ಯ ನಿಜ ಶರಣನು.*

ಆಸೆಗಳು ಹೇಗೆ ಒಂದಕ್ಕೊಂದು ಬೆಸುಗೆಯಾಗುತ್ತಾ ಮನುಷ್ಯನನ್ನು ದಿಕ್ಕು ತಪ್ಪಿಸುತ್ತವೆಯೆಂಬ ಸಹಜ ಚಿತ್ರಣ ಈ ವಚನದಲ್ಲಿದೆ. ಶಿವನ ಚಿಂತೆಯಲ್ಲಿರುವವರನ್ನು ಮಾತ್ರ ಇನ್ನು ಕಾಣಿಲ್ಲವೆಂದು ನಿಟ್ಟುಸಿರು ಬಿಡುತ್ತಾನೆ.

ಶಿವಶರಣ ಅಂಬಿಗರ ಚೌಡಯ್ಯ ಸಿದ್ಧನಾಗಿ ಲೋಕವನ್ನು ತಿದ್ದಿದವನು. ಈತನಲ್ಲಿ ಆತ್ಮಜ್ಞಾನವು ಸಿದ್ಧಿಸಿತ್ತಾದ್ದರಿಂದ ಆಚರಿಸಬೇಕಾದುದು ಏನೂ ಇರಲಿಲ್ಲವೆಂದೂ ತೋರುತ್ತದೆ. ಅತನಿಗೆ ವಾಸ್ತವಿಕವಾಗಿ ಧ್ಯಾನ, ಮೌನ, ಜಪ, ತಪ ಮೊದಲಾದ ಯಾವ ನಿಯಮವೂ ಇಲ್ಲ. ಆತನಿಗಿದ್ದುದು ಲೋಕವನ್ನು ತಿದ್ದುವ ಚಿಂತೆ ಮಾತ್ರ. ಅನೇಕ ಸಾಮಾಜಿಕ ದುರ್ವ್ಯವಹಾರ, ಕುಂದು-ಕೊರತೆಗಳತ್ತ ದೃಷ್ಟಿಹಾಯಿಸಿ, ಲೋಕವನ್ನು ಭವಸಾಗರದಿಂದ ದಾಂಟಿಸಬಲ್ಲ ಲೋಕೋತ್ತರ ಅಂಬಿಗನಿಗೇ ಈ ಅನುಭಾವಸಿದ್ಧಿ ಸಾಧ್ಯ. ಚೌಡಯ್ಯ ಅಂತಹ ಪೂರ್ಣ ಮೂರ್ತಿಯಾಗಿದ್ದನು. ಅವನಂತೂ "ಚೆಂದಗೆಟ್ಟವರೆಲ್ಲ ಬಂದೇರಿ ದೋಣಿಯನು ಶಿವನೊಂದೇ ಠಾವಿಗೆ ಒಯ್ಯುವೆ" ಎಂದು ತಮ್ಮ ಮೂಲಸ್ವರೂಪವನ್ನು ಮರೆತು ಚೆಂದ

ಗೆಟ್ಟಜೀವರಿಗೆಲ್ಲ ಅನುಭಾವ ದೋಣಿಯನ್ನೇರಲು ಆಹ್ವಾನವನ್ನು ಕೊಟ್ಟಿದ್ದಾನೆ. ಈ ರೀತಿಯಾಗಿ ಸಮಾಜ, ಧರ್ಮ, ವ್ಯವಸ್ಥೆ ಪರಂಪರೆಗಳನ್ನು ವಿಡಂಬನೆ ಮಾಡಿರುವ ಅಂಬಿಗರ ಚೌಡಯ್ಯನ ಸ್ಥಾನ, ವಚನಸಾಹಿತ್ಯದಲ್ಲಿ ವಿಶಿಷ್ಟವಾದ ಸ್ಥಾನವನ್ನು ಪಡೆದುಕೊಂಡಿದೆ.

## ಗ್ರಂಥಋಣ


೧. ಅಂಬಿಗರ ಚೌಡಯ್ಯನ ವಚನಗಳು : ಸಂ. ಬಸವರಾಜು ಸಿದ್ಧಾಶ್ರಮ ಡಾ|| ಎಸ್. ವಿದ್ಯಾಶಂಕರ

೨. ಸಕಲ ಪುರಾತನರ ವಚನಗಳು : ಸಂ. ಡಾ || ಆರ್. ಸಿ. ಹಿರೇಮಠ

೩. ವಚನ ಸಾಹಿತ್ಯ : ಡಾ|| ಎಂ. ಚಿದಾನಂದ ಮೂರ್ತಿ

೪. ಅಂಬಿಗರ ಚೌಡಯ್ಯನ ವಚನಗಳು : ಸಂ. ಬಿ. ಆರ್. ಸುರಪುರ

೫. ಕಾಯಕ ಜೀವಿಗಳ ಚಳವಳಿ - ಸಿ. ವೀರಣ್ಣ

೬. ಶರಣ ಚರಿತಾಮೃತ - ಡಾ|| ಸಿದ್ಧಯ್ಯ ಪುರಾಣಿಕ

೭. 'ಬಸವ ಪಥ ಲೇಖನಗಳು "ಶರಣರ ಸೂಳ್ನುಡಿಗಳ ಅಕಾರಾದಿ" - ಸಂಗ್ರಾಹಕರು - ಸಿದ್ಧಯ್ಯ ಪುರಾಣಿಕ ಮತ್ತು ಎಸ್. ಸಿದ್ಧಲಿಂಗಯ್ಯ

೮. ವಚನಾನುಶೀಲನ - ಡಾ || ವಿದ್ಯಾಶಂಕರ

# ವಿಶ್ವಮಾನವ ಬಂಧು ಬಸವಣ್ಣನವರು

**ಜಿ. ಅಬ್ದುಲ್ ಬಷೀರ್**

---

ಧಾರ್ಮಿಕವಾಗಿ, ನೈತಿಕವಾಗಿ, ಆಧ್ಯಾತ್ಮಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ, ಸಾಮಾಜಿಕವಾಗಿ ಹಾಗೂ ಸಾಹಿತ್ಯಕವಾಗಿ ಸತ್ತಂತಿದ್ದ ಜನರನ್ನು, - ದಲಿತರನ್ನು, ಶೂದ್ರರನ್ನು, ಶೋಷಿತರನ್ನು, ಸ್ತ್ರೀಯರನ್ನು-ಎಚ್ಚರಿಸಿ, ಅವರಲ್ಲಿ ಚೈತನ್ಯವನ್ನು ತುಂಬಿ ಮೇಲೆತ್ತಿದ, ಬಸವೇಶ್ವರರು ಲೋಕೋತ್ತರ ಮೂರ್ತಿ; ಸಾರ್ವತ್ರಿಕ, ಸಾರ್ವಕಾಲಿಕ ಮಾನವ ಕಲ್ಯಾಣದ ಶಿಲ್ಪಿ; ದಯಾಮೂರ್ತಿ; ವಿನಯಭಂಡಾರಿ;ವಿಶ್ವಮಾನವ ಪ್ರೇಮಿ; ಜನತಾಧರ್ಮಿ; ನ್ಯಾಯ ನಿಷ್ಠೂರಿ. 'ಎನಗಿಂತ ಕಿರಿಯರಿಲ್ಲ, ಶಿವ ಭಕ್ತರಿಗಿಂತ ಹಿರಿಯರಿಲ್ಲ' ಎಂಬ ನಡೆನುಡಿಗಳಿಂದ ದೀನ-ದಲಿತ-ನೊಂದ-ಬೆಂದ ಸಾಮಾನ್ಯ ಜನತೆಯನ್ನು ದೇವತ್ವದೆಡೆಗೆ ಕರೆದೊಯ್ದವರು. ಅಸಮಾನತೆಯನ್ನು ತೊಲಗಿಸಿ ಹೆಣ್ಣಿನ ಬದುಕಿಗೂ ಗೌರವವನ್ನು ತಂದುಕೊಟ್ಟ ಮಹಾನುಭಾವ, ಕ್ರಾಂತಿಕಾರಿ, ಅನುಭಾವಿ, ಪ್ರವಾದಿ, ಶಿವಯೋಗಿ. ೧೨ನೆಯ ಶತಮಾನದಲ್ಲಿ ಕರ್ನಾಟಕದಲ್ಲಿ ನಡೆದ ಪ್ರಗತಿಪರ- ಜನಪರ ಚಳುವಳಿಯ ನೇತಾರರು. ಸಾಮಾನ್ಯರಲ್ಲಿ ಸಾಮಾನ್ಯರು, ಕ್ಷುದ್ರವೈಭವಗಳ ವಿಡಂಬಕರು, ಜಾತಿಕಲ್ಪನೆ-ನೀಚಮನೋಭಾವನೆಗಳ ವಿರೋಧಿ, ಮನೋವಿಜ್ಞಾನಿ, ಸಮಾಜ ಶಾಸ್ತ್ರಜ್ಞರು, ಇತಿಹಾಸಕಾರರು, ಕವಿಗಳು, ವಿಮರ್ಶಕರು, ಬಸವಣ್ಣನವರು ಒಂದು ಶಕ್ತಿ, ಒಂದು ಸಂಸ್ಥೆ, ಜ್ಞಾನದ ಗಣಿ, ತಿಳಿವಿನ ಮೂರ್ತಿ. ಜಗತ್ತಿನ ಸದ್ವಿದ್ಯೆಗಳು, ಸದಿಚ್ಛೆಗಳು, ಸದ್ಗುಣಗಳು, ಸನ್ಮಂಗಳಗಳು, ಸನ್ಮಾನಗಳು ಯಾವುವು

ಇರಬಹುದೋ ಅವೆಲ್ಲವುಗಳ ಮೂರ್ತರೂಪ ಬಸವಣ್ಣನವರು. ಒಂದೇ ಮಾತಿನಲ್ಲಿ ಅವರ ವ್ಯಕ್ತಿತ್ವವನ್ನು ಕಡೆದಿರುವುದಾದರೆ ಅವರು ಮನುಕುಲದ ಉದ್ಧಾರಕರು.

*ಬ್ರಹ್ಮಪದವಿಯ ನೊಲ್ಲೆ, ವಿಷ್ಣುಪದವಿಯನೊಲ್ಲೆ*
*ರುದ್ರಪದವಿಯನೊಲ್ಲೆ, ಮತ್ತಾವ ಪದವಿಯನೊಲ್ಲೆನಯ್ಯಾ !*
*ಕೂಡಲಸಂಗಮ ದೇವಾ, ನಿಮ್ಮ ಸದ್ಭಕ್ತರ*
*ಪಾದವನಱಿದಿಪ್ಪ ಮಹಾಪದವಿಯನೆ ಕರುಣಿಸಯ್ಯಾ*

(ಶ್ರೀ ಬಸವಣ್ಣನವರ ವಚನ ಸಂಗ್ರಹ, ವ.ಸಂ. ೫೧. ಪ್ರ. ಸಾಹಿತ್ಯ ಅಕಾಡೆಮಿ, ಹೊಸದೆಹಲಿ, ೧೯೬೩)

ಜೇಡರದಾಸಿಮಯ್ಯನ "ಕರಿಯನಿತ್ತಡೆ ಒಲ್ಲೆ, ಸಿರಿಯನಿತ್ತಡೆ ಒಲ್ಲೆ, ಹಿರಿದಪ್ಪ ರಾಜ್ಯವನಿತ್ತಡೆ ಒಲ್ಲೆ, ಶರಣರ ಸೂಳ್ನುಡಿಯನೊಂದರಗಳಿಗೆಯಿತ್ತಡೆ, ನಿಮ್ಮನಿತ್ತೆ ಕಾಣಾ ರಾಮನಾಥಾ ಎಂಬ ವಚನವನ್ನು ನೆನಪಿಗೆ ತರುವ ಬಸವಣ್ಣನವರ ವಚನದಲ್ಲಿ ಅವರ ನಿರಹಕಾರ ನಿಲುವು, ಪ್ರಾಮಾಣಿಕತೆ, ಶಿವಶರಣ ನಿಷ್ಠೆ ವ್ಯಕ್ತವಾಗಿದೆ. ಕೆಳಗಿನ ಎರಡು ವಚನಗಳಲ್ಲಿ ಅವರ ಮನೋವೈಶಾಲ್ಯ ಹಾಗೂ ಅಪ್ರತಿಮ ಧೈರ್ಯ ವ್ಯಕ್ತವಾಗಿದೆ.

*ಇವನಾರವ, ಇವನಾರವ, ಇವನಾರವನೆಂದೆನಿಸದಿರಯ್ಯಾ*
*ಇವ ನಮ್ಮವ, ಇವ ನಮ್ಮವ, ಇವ ನಮ್ಮವನೆಂದೆನಿಸಯ್ಯಾ*
*ಕೂಡಲ ಸಂಗಮ ದೇವಾ, ನಿಮ್ಮ ಮನೆಯ ಮಗನೆಂದೆನಿಸಯ್ಯಾ (ವ.ಸಂ.೪೧೪)*

*ಆರು ಮುನಿದು ನಮ್ಮನೇನ ಮಾಡುವರು ?*
*ಊರು ಮುನಿದು ನಮ್ಮನೆಂತು ಮಾಡುವರು ?*
*ನಮ್ಮ ಕುನ್ನಿಗೆ ಕೂಸಕೊಡಬೇಡ*
*ನಮ್ಮ ಸೊಣಗಂಗೆ ತಳಿಗೆಯಲಿಕ್ಕಬೇಡ*
*ಆನೆಯ ಮೇಲೆ ಹೋಹನ ಶ್ವಾನ ಕಚ್ಚಬಲ್ಲುದೆ ?*
*ನಮಗೆ ನಮ್ಮ ಕೂಡಲ ಸಂಗಯ್ಯನುಳ್ಳನ್ನಕ್ಕರ (ವ.ಸಂ.೧೬೭)*

ಬಸವಣ್ಣನವರ ವಚನಗಳ ಪ್ರಭಾವ ಹರಿದಾಸರ ಉಗಾಭೋಗಗಳ ಮೇಲೆ ಎಷ್ಟರ ಮಟ್ಟಿಗಾಗಿದೆಯೆಂಬುದನ್ನು ನೋಡಲು ಪುರಂದರದಾಸರ ಒಂದು ಉಗಾಭೋಗವನ್ನು ಉದಾಹರಿಸಬಹುದು.

*ಯಾರು ಮುನಿದು ನಮಗೇನು ಮಾಡುವರಯ್ಯ ?*
*ಯಾರು ಒಲಿದು ನಮಗೇನು ಕೊಡುವರಯ್ಯ ?*

*ಕೊಡಬೇಡ ನಮ್ಮ ಕುನ್ನಿಗೆ ಕಾಸನು*
*ಈಯಲು ಬೇಡ ನಮ್ಮ ಶುನಕಗೆ ತಳಿಗೆಯ*
*ಆನೆ ಮೇಲೆ ಪೋಪಗೆ ಶ್ವಾನ ಮುಟ್ಟಬಲ್ಲದೆ ?*
*ನಮಗೆ ಶ್ರೀ ಪುರಂದರ ವಿಠಲನೆ ಸಾಕು*

ಇಬ್ಬರ ರಚನೆಗಳಲ್ಲಿಯೂ ಆರಾರು ಸಾಲುಗಳಿಗೆ ಅವೇ ಮಾತುಗಳು, ಅದೇ ನಿರ್ಭಯ ವಾಣಿ. ಒಂದರ ಪ್ರತಿಬಿಂಬ ಮತ್ತೊಂದು ಎಂಬಂತಿದೆ. ಈ ಬಗ್ಗೆ ಹೆಚ್ಚಿನ ಸಂಶೋಧನೆ ನಡೆಯಬೇಕಾಗಿದೆ.

ಬಸವಣ್ಣ ಒಂದು ದಿವ್ಯ ಮಂತ್ರವಿದ್ದಂತೆ. ಮಂತ್ರವೆಂದರೆ ಅದನ್ನು ಅರ್ಥಮಾಡಿಕೊಳ್ಳದೆ, ಸುಮ್ಮನೆ ಕಾಲಹರಣ ಮಾಡುತ್ತಾ ಜಪಿಸುತ್ತಾ ಕೂರುವುದಲ್ಲ. ಆ ಮಂತ್ರದ ಅರ್ಥವನ್ನರಿತು ಬದುಕಿನ ಶೋಭೆಯನ್ನಾಗಿ ಮಾಡಿಕೊಳ್ಳುವುದು ಎಂದರ್ಥ.

ಬಸವಣ್ಣನವರ ಲಭಿಸಿರುವ ೧೪೨೪ ವಚನಗಳ ಆಧಾರದಿಂದ ಹಾಗೂ ಬಗೆಬಗೆಯ ಗ್ರಂಥಾಧಾರಗಳಿಂದ (ಹರಿಹರನ ಬಸವರಾಜದೇವರ ರಗಳೆ, ಶೂನ್ಯ ಸಂಪಾದನೆಗಳು, ವೀರಶೈವ ಪುರಾಣಗಳು - ಬಸವ ಪುರಾಣ, ಪ್ರಭುಲಿಂಗಲೀಲೆ, ಸಿಂಗಿರಾಜ ಪುರಾಣ, ಶಿವಶರಣರ ಕಥೆಗಳು, ಇತರರ ವಚನಗಳು, ಇತ್ಯಾದಿ) ಅವರ ವ್ಯಕ್ತಿತ್ವವನ್ನು ರೂಪಿಸಬಹುದು. ಬಿಜಾಪುರ ಜಿಲ್ಲೆಯ ಬಾಗೆವಾಡಿಯ ಶೈವ ಬ್ರಾಹ್ಮಣ ಮನೆತನದ ಮಾದಿರಾಜ ಮಾದಂಬೆಯರ ಪುತ್ರರಾಗಿ ಅವರು ಜನಿಸಿದರು - (೧೧೦೬). ಬ್ರಾಹ್ಮಣ ಧರ್ಮ, ಜಾತಿ ಪದ್ಧತಿಯನ್ನು ಪ್ರತಿಪಾದಿಸುತ್ತದೆಂದರಿತ ಬಸವಣ್ಣನವರು ವೈದಿಕ ಕರ್ಮಕಾಂಡಗಳಲ್ಲಿ ನಿರಾಸಕ್ತರಾಗಿ, ವೈಚಾರಿಕ ನೆಲೆಯ ತುತ್ತ ತುದಿಯನ್ನೇರಿ, ಜಾತಿವಿಹೀನವೂ ಭಕ್ತಿಪ್ರಧಾನವೂ ಆದ ಆಧ್ಯಾತ್ಮದಲ್ಲಿ ಆಸಕ್ತರಾದರು. ಅದರ ಸಂಕೇತವೋ ಎಂಬಂತೆ ತಮಗೆ ಮಾಡಲಿದ್ದ ಉಪನಯನ ಕರ್ಮಾದಿಗಳ ಬೇರನ್ನು ಕಿತ್ತೊಗೆದರು. ಅಂದಿನ ಪುರೋಹಿತಶಾಹಿಯನ್ನು ಪ್ರತಿಭಟಿಸಿ ಪ್ರಗತಿಗಾಮಿ ಮನೋಭಾವದವರಾದರು. ಮುಂದೆ ಅವರು ಕೂಡಲಸಂಗಮಕ್ಕೆ ತೆರಳಿದ್ದು ಅಲ್ಲಿ ಶಿವ ಇವರ ಇಷ್ಟದೈವವಾದದ್ದು, ಈಶಾನ್ಯಗುರುಗಳ ಲಾಭವನ್ನು ಪಡೆದದ್ದು, ಹತ್ತು-ಹನ್ನೆರಡು ವರ್ಷ ಅವಿಶ್ರಾಂತ ಆಧ್ಯಾತ್ಮಿಕ ತಪಸ್ಸಿನಲ್ಲಿದ್ದದ್ದು, (ಬಸವಣ್ಣನವರು ಬಿಜ್ಜಳನ ಬಳಿ ಮೂವತ್ತಾರು ವರ್ಷವಿದ್ದರು, ಅನುಭವ ಮಂಟಪದಲ್ಲಿ ಸುಮಾರು ಇಪ್ಪತ್ತೇಳು ವರ್ಷಕಳೆದರೆಂಬ ಒಂದು ಅಭಿಪ್ರಾಯವೂ ಇದೆ.) ಮುಂದೆ ಮಂಗಳವಾಡಕ್ಕೆ ತೆರಳಿ ಕಲ್ಯಾಣದ ಚಾಲುಕ್ಯಸಾಮಂತನಾಗಿದ್ದ ಬಿಜ್ಜಳ ರಾಜನ ಬಳಿ ಭಂಡಾರಿಯಾದದ್ದು, ನೀಲಲೋಚನೆ, ಗಂಗಾಂಬಿಕೆಯರನ್ನು ವರಿಸಿದ್ದು, ರಾಜ ಬಿಜ್ಜಳನು ತನ್ನ ರಾಜಧಾನಿಯನ್ನು ಕಲ್ಯಾಣಕ್ಕೆ ವರ್ಗಾಯಿಸಿದಾಗ ಅವನೊಡನೆ ಬಸವಣ್ಣನವರೂ ತೆರಳಿದ್ದು, ಬಿಜ್ಜಳನ ಕೊಲೆಯಾದ ಮೇಲೆ ಬಸವಣ್ಣನವರು ಕೂಡಲ ಸಂಗಮಕ್ಕೆ ತೆರಳಿ ಲಿಂಗೈಕ್ಯರಾದದ್ದು ಎಲ್ಲರಿಗೂ ಗೊತ್ತಿರುವ ವಿಚಾರಗಳೇ ಆಗಿವೆ. ಅವರ

ಬದುಕನ್ನು ಗಮನಿಸಿದರೆ ಅವರಿಗೆ ರಾಜಕೀಯದಲ್ಲಾಗಲೀ ಆಡಳಿತದಲ್ಲಾಗಲೀ ಆಸಕ್ತಿಇರಲಿಲ್ಲ. ಅವರ ಆಸಕ್ತಿಯೇನಿದ್ದರೂ ಸಾಮಾನ್ಯ ಜನರ ಉದ್ಧಾರದಲ್ಲಿ, ಶಿವನಲ್ಲಿ, ಶಿವಶರಣರಲ್ಲಿ ಮಾತ್ರ ಇತ್ತು. ಜಾತಿಪದ್ಧತಿಯಂಥ ಅಮಾನವೀಯ ಪದ್ಧತಿಯನ್ನು ನಮ್ಮ ದೇಶದಲ್ಲಿ ಪ್ರಪ್ರಥಮವಾಗಿ ಸರಳವಾಗಿ ಖಂಡಿಸಿದವರು ಬಸವಣ್ಣನವರು. ಸಾಮಾಜಿಕ ಮೌಲ್ಯಗಳು ವಿಪತ್ತಿಗೊಳಗಾಗಿದ್ದ ಕಾಲದಲ್ಲಿ ಬಸವಣ್ಣನವರಿದ್ದರು. ಅವರು ಏಕಕಾಲದಲ್ಲಿ ಶೂದ್ರರನ್ನೂ ಮೇಲೆತ್ತಿ, ಕನ್ನಡ ಭಾಷೆಯನ್ನೂ ಉದ್ಧರಿಸಿದ್ದು ಬಹು ದೊಡ್ಡಸಂಗತಿಯಾಗಿದೆ. ಕವಿ ಹೃದಯದ ಅವರು ಆಡಿದ್ದೆಲ್ಲಾ ಕಾವ್ಯವಾಯಿತು. ''ಬಸವಣ್ಣನವರು ಕನ್ನಡ ಭಾಷೆಗೆ ಪ್ರಾಧಾನ್ಯ ಕೊಟ್ಟು ತಮ್ಮ ತತ್ತ್ವಪ್ರಚಾರದ ಚಳುವಳಿಗೆ ಕನ್ನಡವನ್ನು ಮಾಧ್ಯಮವನ್ನಾಗಿ ಮಾಡಿಕೊಳ್ಳದಿದ್ದರೆ ಇಂದು ಕನ್ನಡ ಇಷ್ಟರ ಮಟ್ಟಿಗೆ ಉಳಿಯುತ್ತಿರಲಿಲ್ಲ. ಯಾವುದನ್ನು ಮಾಡಬಾರದೆಂದು ಬಸವಣ್ಣನವರು ಬೋಧಿಸಿದ್ದರೋ ಜನ ಇಂದು ಅದನ್ನೇ ಮಾಡುತ್ತಿರುವುದು ವಿಷಾದನೀಯ ಸಂಗತಿಯಾಗಿದೆ'' ಎಂದು ಡಾ॥ ಸಿದ್ದಯ್ಯ ಪುರಾಣಿಕರು, ''ಕಾಲ್ಪನಿಕ ರಕ್ತಸಂಬಂಧವನ್ನು ವಚನಗಳಲ್ಲಿ ಪಡಿಮೂಡಿಸಿ ಜಾತಿಭೇದ ರಹಿತವಾಗಿ ಎಲ್ಲರಲ್ಲೂ ಕರುಳಬಳ್ಳಿಯ ಆತ್ಮೀಯತೆಯ ಸಂಬಂಧವನ್ನು ಹುಟ್ಟುಹಾಕಿದವರು ಬಸವಣ್ಣನವರು. ಅಣ್ಣ, ಅಕ್ಕ, ತಮ್ಮ, ಅಪ್ಪ ಇತ್ಯಾದಿಯಾದ ಇಂತಹ ಆತ್ಮೀಯತೆಯನ್ನು ಸೂಚಿಸುವ ಪದಗಳು ವಚನಗಳಲ್ಲಿ ಇರುವಷ್ಟು ಬೇರೆಯವರ ಸಾಹಿತ್ಯದಲ್ಲಿಯೂ ಇಲ್ಲ'' ಎಂದು ಡಾ॥ ಎಂ. ಚಿದಾನಂದ ಮೂರ್ತಿಯವರೂ ಹೇಳಿದ್ದಾರೆ. (ಬೆಂಗಳೂರಿನ ವಿಶ್ವವೀರಶೈವ ಸಂಸ್ಥೆಯು ಏರ್ಪಡಿಸಿದ್ದ 'ಬಸವ ಜಯಂತಿ' ಸಮಾರಂಭದಂದು ಪಾಲ್ಗೊಂಡು ಆಡಿದ ಮಾತುಗಳು. ಪ್ರಜಾವಾಣಿ ದಿನಾಂಕ.೧೦.೫.೧೯೯೩ ವರದಿಯಲ್ಲಿ) 'ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ' ಎಂಬ ಅವರ ಮಾತಿನಲ್ಲಿರುವ 'ಸ್ಥಾವರ' ಎಂಬ ಶಬ್ದ ಜಡತ್ವವನ್ನೂ ಸ್ಥಗಿತವಾದುದನ್ನೂ ನಾಶವಾಗುವುದನ್ನೂ ಸೂಚಿಸುತ್ತದೆ. ಅಷ್ಟೇ ಅಲ್ಲ, ಅಗ್ರಹಾರ ಸಂಸ್ಕೃತಿ, ದೇವಾಲಯ ಸಂಸ್ಕೃತಿ, ರಾಜಾಧಿಕಾರ ಸಂಸ್ಕೃತಿಗಳೆಂಬ ಸ್ಥಗಿತ ನಿಲುವುಗಳ ವಿರುದ್ಧ ಬಸವಣ್ಣನವರು ಬಂಡಾಯವೆದ್ದಿದ್ದಾರೆ. 'ಜಂಗಮ' ಎಂಬ ಶಬ್ದ ಚೈತನ್ಯವನ್ನೂ ಸ್ಥಿತ್ಯಂತರಗಳಿಗೆ ತಕ್ಕಂತೆ ಹೊಂದಿಕೊಂಡು ಹೋಗುವ ಚಿರಂತನತ್ವವನ್ನೂ ಧ್ವನಿಸುತ್ತದೆ. ತಮಗೂ ಹಿಂದಿದ್ದ ಚಂಪೂಪರಂಪರೆಯ 'ಜಡತ್ವ'ವನ್ನು ನೀಗಿ ಕಂದಾಚಾರಗಳ ಸ್ಥಗಿತ ಸಮಾಜವನ್ನೂ ಟೀಕಿಸಿ, ಎಚ್ಚರಿಸಿ, ವಿಮರ್ಶಿಸಿ ಬಸವಣ್ಣನವರು ಸ್ವಚ್ಛಂದವಾಗಿ (ಆನೊಲಿದಂತೆ ಹಾಡುವೆ) ವಚನಗಳನ್ನು ರಚಿಸಿದ್ದನ್ನು ಗಮನಿಸಿದರೆ ಇದು ಸ್ಪಷ್ಟವಾಗುತ್ತದೆ. ಬಸವಣ್ಣನವರು ಸಮಕಾಲೀನ ಸಮಾಜದಲ್ಲಿ ಮನೆಮಾಡಿಕೊಂಡಿದ್ದ ಮೌಢ್ಯತೆ ಅಂಧಸಂಪ್ರಾದಾಯ, ಡಾಂಭಿಕ ಪೂಜೆಗಳ ವಿರುದ್ಧ ಪ್ರತಿಭಟಿಸಿ ನಿಂತ ಮೊದಲವ್ಯಕ್ತಿ ಎಂಬ ಗೌರವಕ್ಕೆ ಪಾತ್ರರಾಗಿದ್ದಾರೆ.

*ವೇದಕ್ಕೆ ಒರೆಯ ಕಟ್ಟುವೆ, ಶಾಸ್ತ್ರಕ್ಕೆ ನಿಗಳವನಿಕ್ಕುವೆ*
*ತರ್ಕದ ಬೆನ್ನ ಬಾರನೆತ್ತುವೆ, ಆಗಮದ ಮೂಗ ಕೊಯಿವೆ'*

ಎಂಬ ಮಾತುಗಳಲ್ಲಿರುವ ಖಾರ ಅಸಮಾಧಾನ ಹಾಗೂ ಜಿಗುಪ್ಸೆಯನ್ನು ಗಮನಿಸಬೇಕು. ಸ್ವಧರ್ಮಿ, ಸಮಾಜ ಧರ್ಮಿ ಹಾಗೂ ಮಾನವ ಧರ್ಮಿಯಾದ ಇವರು ಮನುಷ್ಯನ ಸಾಂಸ್ಕೃತಿಕ ಇತಿಹಾಸದ ಉನ್ನತ ಶಿಖರ. ಹಿಂದಿನ-ಇಂದಿನ-ಮುಂದಿನ ಸಮಾಜದ ಮಾರ್ಗದರ್ಶಿ, ಭಾರತದ ಆಧ್ಯಾತ್ಮಿಕ ಭಂಡಾರವನ್ನು ಸಮೃದ್ಧಗೊಳಿಸಿದ ಯುಗ ಪುರುಷ, ಕರ್ನಾಟಕದ ನವೋದಯದ ಹರಿಕಾರ, ಆತ್ಮ-ಪರಮಾತ್ಮ ತತ್ತ್ವಗಳ ದಿವ್ಯಶೋಧಕರು. ಅವರ ವ್ಯಕ್ತಿತ್ವದಲ್ಲಿ ಬುದ್ಧನ ದಯೆ, ಮಹಾವೀರನ ಸರಳತೆ, ಕ್ರಿಸ್ತನ ಅನುಕಂಪೆ, ಮುಹಮ್ಮದರ (ಸ) ಕೆಚ್ಚು, ಗಾಂಧಿಯ ಸತ್ಯ, ಅಹಿಂಸೆ, ನಿಷ್ಠೆಗಳು ಸೇರಿವೆ ಎಂಬಿವೇ ಮುಂತಾದ ಮಾತುಗಳಿಂದ ವಿಮರ್ಶಕರು ಬಸವಣ್ಣನವರನ್ನು ಕೊಂಡಾಡಿದ್ದಾರೆ. ಬಸವಣ್ಣನವರು ಆತ್ಮನಿರೀಕ್ಷಣೆ, ಅಂತಃಶುದ್ಧಿ, ಸರಳತೆ, ಸದಾಚಾರಗಳಿಗೆ ಮಹತ್ವದ ಸ್ಥಾನವನ್ನು ನೀಡಿದ್ದಾರೆ.

*ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿರೋ*
*ಸತ್ಯವ ನುಡಿವುದೆ ದೇವಲೋಕ, ಮಿಥ್ಯವ ನುಡಿವುದೇ ಮರ್ತ್ಯಲೋಕ*
*ಆಚಾರವೇ ಸ್ವರ್ಗ, ಅನಾಚಾರವೇ ನರಕ*
*ಕೂಡಲ ಸಂಗಮದೇವಾ, ನೀನೇ ಪ್ರಮಾಣ*

ಅವರು ಬೋಧಿಸಿದ ಕಾಯಕತತ್ತ್ವದಿಂದ (ಕಾಯಕವೇ ಕೈಲಾಸ) ಭಿಕ್ಷಾವೃತ್ತಿ ನಿವಾರಣೆಯಾಯಿತು. ಸರ್ವಸಮಾನತೆ ಮೂಡಲು ಸಾಧ್ಯವಾಯಿತು. ವ್ಯಕ್ತಿಗೌರವದ ಕಲ್ಪನೆ ಮೂಡಿತು. ಕಾಯಕತತ್ತ್ವ, (i) ಸಾಮಾಜಿಕ ಜವಾಬ್ದಾರಿಯನ್ನು (ii) ಜನ ನಿರುದ್ಯೋಗಿಗಳಾಗಿರದೆ, ಪರರನಾಶ್ರಯಿಸದೆ, ಸೋಮಾರಿಗಳಾಗದೆ ಇರುವುದನ್ನು (iii) ಕಾಯಕನಿರ್ವಹಣಾ ಸ್ವಾತಂತ್ರ್ಯ-ವೃತ್ತಿ ವ್ಯತ್ಯಾಸ-ವರ್ಣ-ಜಾತಿ-ವರ್ಗಭೇದವನ್ನು ನಿವಾರಿಸಿ ಸಮಾನತೆ ತರುವುದನ್ನು (iv) ತನ್ನ ಅಗತ್ಯಕ್ಕಿಂತ ಹೆಚ್ಚು ಇಟ್ಟುಕೊಳ್ಳದೆ ಸಮಾಜದ ಒಳಿತಿಗಾಗಿ ಬಳಸಬೇಕೆಂಬುದನ್ನು (v) ಶ್ರಮಕ್ಕೆ ಗೌರವ ನೀಡಬೇಕೆಂಬುದನ್ನು ಸಾರುತ್ತದೆ. ಬಸವಣ್ಣನವರು ಈ ವೈಜ್ಞಾನಿಕವಾದ, ಆಧುನಿಕ ರೀತಿಯ ವಿಚಾರಗಳನ್ನು ಪ್ರಸ್ತಾಪಿಸಿರುವುದು ವಿಸ್ಮಯದ ಸಂಗತಿಯಾಗಿದೆ. ಡಾ|| ಜಿ. ಎಸ್. ಶಿವರುದ್ರಪ್ಪನವರು ಹೇಳುವಂತೆ ''ಕಾಯಕ ಮಾತ್ರ ಅದರಲ್ಲಿ ತೊಡಗಿದ್ದ ಎಲ್ಲರನ್ನೂ 'ಸಾಧಕ' ರೆಂಬ ಸಮಾನತಾ ನೆಲೆಯಲ್ಲಿ ನಿಲ್ಲಿಸುವ ಒಂದು ವಿಧಾನ''. ಇದು ಅಂದಿಗಿಂತ ಇಂದು ಹೆಚ್ಚು ಅರ್ಥಪೂರ್ಣವಾಗುತ್ತದೆ.

ವಿಭೂತಿ ಪುರುಷರಾದ ಬಸವಣ್ಣನವರಿಗೆ ವೇದೋಪನಿಷತ್ತುಗಳ ವಿಚಾರ ಚೆನ್ನಾಗಿ ಗೊತ್ತಿತ್ತು. ಅವರ ವಚನಗಳಲ್ಲಿ ಉದ್ಧರಣೆಯಾಗಿರುವ ಸಂಸ್ಕೃತ ಪದ, ಪಾದ, ಶ್ಲೋಕಗಳನ್ನು ನೋಡಿದರೆ ಇದು ಸ್ಪಷ್ಟವಾಗುತ್ತದೆ. ಕರ್ಮಮಾರ್ಗ ಹಾಗೂ ಜ್ಞಾನಮಾರ್ಗಗಳ ಮುಖಾಂತರ ದೈವಸಾಕ್ಷಾತ್ಕಾರ ಮಾಡಿಕೊಳ್ಳುವುದು ಬಡಬಗ್ಗರಿಗೂ ಅನಕ್ಷರಸ್ಥರಿಗೂ ಕೈಗೆಟುಕದ ಮಾತು. ಸುಲಭವಾದ ಭಕ್ತಿಮಾರ್ಗದ ಮೂಲಕ ಹರನನ್ನೊಲಿಸಿಕೊಳ್ಳಬಹುದು. ಅವಕ್ಕೆ ದೇಗುಲದ

ಅಗತ್ಯವೂ ಇಲ್ಲ. ಅದಿದ್ದರೆ ಅಲ್ಲಿ ಕೆಲವರಿಗೆ ಪ್ರವೇಶ ಲಭಿಸುತ್ತದೆ. ಕೆಲವರಿಗೆ ಇಲ್ಲ. ಆದ್ದರಿಂದಲೇ ಬಸವಣ್ಣನವರು ದೇವಸ್ಥಾನದ ಅಸ್ತಿತ್ವವನ್ನೇ ನಿರಾಕರಿಸಿದರು. ಇದು ಇವರ ದಲಿತಪ್ರಜ್ಞೆಗೂ ಬಂಡಾಯಪ್ರವೃತ್ತಿಗೂ ಸೊಗಸಾದ ನಿದರ್ಶನವಾಗಿದೆ.

*ಉಳ್ಳವರು ಶಿವಾಲಯವ ಮಾಡುವರು*
*ನಾನೇನ ಮಾಡುವೆ, ಬಡವನಯ್ಯಾ*
*ಎನ್ನ ಕಾಲೇ ಕಂಬ, ದೇಹವೇ ದೇಗುಲ*
*ಶಿರ ಹೊನ್ನಕಳಸವಯ್ಯಾ, ಕೂಡಲಸಂಗಮದೇವ*
*ಕೇಳಯ್ಯಾ, ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ*[1]

ದೇಹವೇ ದೇಗುಲವಾಗುವ ರೀತಿಯನ್ನು ಇದಕ್ಕಿಂತ ಚೆನ್ನಾಗಿ ಸ್ಪಷ್ಟವಾಗಿಯಾರೂ ಹೇಳಿಲ್ಲ. ಜಂಗಮ ಓಡಾಡುವ ದೇವರಿದ್ದಂತೆ, ಇಷ್ಟಲಿಂಗವೇನಿದ್ದರೂ ಒಂದು ಸಂಕೇತ ಮಾತ್ರ ಎಂದು ತಿಳಿದವರು ಶಿವಶರಣರು. 'ನಾನೇನ ಮಾಡುವೆ ಬಡವನಯಾ'.... ಎಂಬ ಅಣ್ಣನವರ ಮಾತಿನಲ್ಲಿ ತುಂಬಿರುವ ನೋವು ಅವರೊಬ್ಬರದು ಮಾತ್ರವಲ್ಲ. ಆಕಾಲದ ಅಷ್ಟೇ ಏಕೆ ಎಲ್ಲಾ ಕಾಲಗಳ ಕೋಟಿ ಕೋಟಿ ಜೀವಿಗಳ ಮೂಕಜೀವಿಗಳೆಲ್ಲರಿಗೂ ಅನ್ವಯಿಸುವಂಥದ್ದು. ಮೂರ್ತಿ ಪೂಜೆ ಯಾಂತ್ರಿಕವಾಗಿ ಜೀವಿಗಳ ಹೃದಯ ಬರಡಾದ ಬಗೆಯ ಪ್ರತಿರೂಪವನ್ನಿಲ್ಲಿ ಕಾಣಬಹುದು. ಅದಕ್ಕೆ ಮೂಲಕಾರಣ ವಿವಿಧ ಹಂತಗಳ ಪುರೋಹಿತರು, ಸ್ವಾಮಿಗಳು ಹಾಗೂ ಪೂಜಾರಿ ವರ್ಗದವರು ಮಾಡುತ್ತಿದ್ದ ಶೋಷಣೆ. ದರಿದ್ರರು ದರಿದ್ರರಾಗಿಯೇ ಉಳಿಯಲು ಇದೂ ಒಂದು ಕಾರಣವಾಯಿತು. ಇದಕ್ಕೆ ಆ ಕಾಲದ ಸಾಮಾನ್ಯರಿರಲಿ, ರಾಜಮಹಾರಾಜರೂ ಬಲಿಯಾದರೆಂಬುದಕ್ಕೆ ಬಿಜ್ಜಳರಾಜನು ಚಾಡಿಮಾತುಗಳನ್ನು ಕೇಳುತ್ತಿದ್ದುದೇ ಇದಕ್ಕೆ ನಿದರ್ಶನ. ವರ್ಗರಹಿತ, ವರ್ಣರಹಿತ, ಸಮಾನಮನೋಭಾವನೆಗಳನ್ನೊಳಗೊಂಡ ಆದರ್ಶಸಮಾಜ ರಚನೆಯ ಉದ್ದೇಶ ಬಸವೇಶ್ವರದಾಗಿತ್ತು. ಅವರು ಬೋಧಿಸಿದ "ಪ್ರಗತಿಶೀಲ ವ್ಯವಸ್ಥೆ... ಸಮಾನತೆಯ ನೆಲೆಗಟ್ಟಿನ ಮೇಲೆ ನಿಲ್ಲಿಸಿದ ಅದ್ವೈತ ಸಿದ್ಧಾಂತ - ಇಷ್ಟಲಿಂಗೋಪಾಸನೆ, ತನ್ನರಿವೆ ಗುರುವಾಗಿ, ತನ್ನಂತರಂಗವೆ ದೇವರ ನೆಲೆಯಾಗಿ ಚಿತ್ ಶಕ್ತಿಯೆ ಆರಾಧ್ಯದೈವವಾಗುವ ಅನುಪಮ ಸಿದ್ಧಾಂತ" (ವಚನ ಚಿಂತನ, ಪುಟ ೪೩).

ದೂರದರ್ಶನದ ಸಂದರ್ಶನ ಕಾರ್ಯಕ್ರಮವೊಂದರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾದ ಶ್ರೀ ಬರಗೂರು ರಾಮಚಂದ್ರಪ್ಪನವರು "ಬಸವಣ್ಣನವರು ಶಿವಸಂಸ್ಕೃತಿಯಂಥ ಪ್ರಧಾನ ಸಂಸ್ಕೃತಿಯನ್ನು ಪ್ರಚಾರ ಮಾಡಿದರು. ಆ ಭರದಲ್ಲಿ ಉಪಸಂಸ್ಕೃತಿಗಳು ನಾಶವಾದವು. ಅವುಗಳ ಅಧ್ಯಯನದಿಂದ ನಾವು ವಂಚಿತರಾದೆವು. ಆದರೂ ಅವರ ಬಂಡಾಯಪ್ರವೃತ್ತಿ,

---

೧. ವಚನ ಸಾಹಿತ್ಯ ಸಂಗ್ರಹ ಪುಟ : ೬೨೮. ಸಂ॥ ಸಂ. ಲ. ಭೂಸನೂರು ಮಠ, ಸಾಹಿತ್ಯ ಸಂಸ್ಕೃತಿ ಅಭಿವೃದ್ಧಿ ಶಾಖೆ,ಬೆಂಗಳೂರು, ೧೯೬೫

ಸಾಮಾಜಿಕ ಕಳಕಳಿ, ಶಿವಸಂಸ್ಕೃತಿ ದೃಷ್ಟಿ ಮೆಚ್ಚಿಕೊಳ್ಳದಿರಲು ಸಾಧ್ಯವಿಲ್ಲ'' ಎಂಬರ್ಥ ಬರುವ ಮಾತುಗಳನ್ನಾಡಿದರು. ಶೈವದ ವಿವಿಧಪಂಥಗಳ ಪಳೆಯುಳಿಕೆಗಳನ್ನು ಕುರಿತು ಆಡಿರಬಹುದಾದ ಈ ಮಾತುಗಳ ಬಗ್ಗೆ ಚರ್ಚೆ ನಡೆಯುವುದು ಒಳ್ಳೆಯದು.

ನಿಂತ ನೀರಿನಂತೆ ಕೊಳೆಯಾಗಿದ್ದ ಹಲವಾರು ಮತಗಳನ್ನು ತಿರಸ್ಕರಿಸಿ ಪ್ರತಿಭಟನೆಯ ರೂಪದಲ್ಲಿ ವೀರಶೈವವು ಎದ್ದುನಿಂತಿತು. ೧೨ನೆಯ ಶತಮಾನದ ಜನರು ಹಲವಾರು ದೈವಗಳ ಉಪಾಸನೆಯಲ್ಲಿ ತೊಡಗಿದ್ದರು. ಆ ಉಪಾಸನೆಯಲ್ಲಿ ಹಿಂಸೆ-ಬೀಭತ್ಸವನ್ನು ಅನುಸರಿಸುತ್ತಿದ್ದರು. ಜನತೆ ಏಕದೈವೋಪಾಸನೆ ಮಾಡುವಷ್ಟು ದೃಢಚಿತ್ತರಾಗದೆ ಮೂಢನಂಬಿಕೆ, ಭಯಗಳಿಂದಾಗಿ ಸಿಕ್ಕಸಿಕ್ಕ ವಸ್ತುಗಳನ್ನೆಲ್ಲಾ ದೇವರೆಂದೇ ಪೂಜಿಸುತ್ತಿದ್ದರು.

*ಮಡಕೆ ದೈವ, ಮೊಱದೈವ, ಬೀದಿಯ ಕಲ್ಲು ದೈವ,*
*ಹಣಿಗೆ ದೈವ, ಬಿಲ್ಲನಾರಿ ದೈವ, ಕಾಣಿರೋ*
*ಕೊಳಗ ದೈವ, ಗಿಣ್ಣಿಲು ದೈವ, ಕಾಣಿರೋ*
*ದೈವ, ದೈವವೆಂದು ಕಾಲಿಡಲಿಂಬಿಲ್ಲಾ*
*ದೈವನೊಬ್ಬನೆ ಕೂಡಲಸಂಗಮದೇವ' (ಶ್ರೀಬಸವ ವ.ಸಂ ೨೨೯)*

ಎಂದು ಬಸವಣ್ಣನವರು ಹೇಳುವಂತೆ ಆ ಕಾಲದಲ್ಲಿ ಪ್ರತಿಯೊಂದು ವಸ್ತುವೂ ದೈವತ್ವವನ್ನು ಪಡೆಯಲು ಜನರ ಅವಿಚಾರವೇ ಮೂಲಕಾರಣವಾಗಿತ್ತು. 'ವಿಗ್ರಹಾರಾಧನೆಯ ಜನತೆಗೆ ಕಂಡದ್ದನ್ನೆಲ್ಲಾ ವಿವೇಚನೆಯಿಲ್ಲದೆ ಆರಾಧಿಸುವ ರೀತಿ ಜನರ ಮಾನಸಿಕ ಅಸ್ಥಿರತೆಯನ್ನೂ ನೈತಿಕಮಟ್ಟದ ಕೀಳ್ಮೆಯನ್ನೂ ಸೂಚಿಸುತ್ತಿದ್ದವು. ಲಿಂಗಾಚಾರ, ಸದಾಚಾರ, ಶಿವಾಚಾರ, ಗಣಾಚಾರ, ಭೃತ್ಯಾಚಾರಗಳ ನೀತಿಸಂಹಿತೆಯನ್ನು ಅವರು ರೂಪಿಸಿದರು. ಗುರು-ಲಿಂಗ-ಜಂಗಮ-ಪಾದೋದಕ-ಪ್ರಸಾದ-ವಿಭೂತಿ-ರುದ್ರಾಕ್ಷಿ, ಮೂತ್ರಗಳೆಂಬ ಪವಿತ್ರ ಅಷ್ಟಾವರಣಗಳನ್ನು ನಿರ್ಮಿಸಿದರು ; ಭಕ್ತ ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯಗಳೆಂಬ ಷಟ್‌ಸ್ಥಲಗಳನ್ನು ರೂಪಿಸಿದರು.

*ವಿಪ್ರ ಮೊದಲು ಅಂತ್ಯಜ ಕಡೆಯಾಗಿ*
*ಶಿವಭಕ್ತರಾದವರನ್ನೆಲ್ಲರನೊಂದೆ ಎಂಬೆ*
*ಹಾರುವ ಮೊದಲು ಶ್ವಪಚ ಕಡೆಯಾಗಿ*
*ಭವಿಯಾದವರನೆಲ್ಲರನೊಂದೆ ಎಂಬೆ*
*ನೆಲನೊಂದೆ ಹೊಲಗೇರಿ ಶಿವಾಲಯಕ್ಕೆ*
*ಜಲವೊಂದೆ ಶೌಚಾಚಮನಕ್ಕೆ*
*ಕುಲವೊಂದೆ ತನ್ನ ತಾನ ಱಿದವಂಗೆ*

*ಫಲವೊಂದೆ ಷಡುದರುಶನ ಮುಕ್ತಿಗೆ*
*ನಿಲವೊಂದೆ ಕೂಡಲಸಂಗಮದೇವಾ,*
*ನಿಮ್ಮನ ಅರಿದವಂಗೆ'' (ಶ್ರೀಬವಸಂ, ನಸಂ,೪೨೫)*

*ಕೊಲುವವನೇ ಮಾದಿಗ, ಹೊಲಸತಿಂಬವನೇ ಹೊಲೆಯ,*
*ಕುಲವೇನೋ, ಅವಂದಿರ ಕುಲವೇನೋ?*
*ಸಕಲ ಜೀವಾತ್ಮರಿಗೆ ಲೇಸನೇ ಬಯಸುವ*

*ನಮ್ಮ ಕೂಡಲಸಂಗನ ಶರಣರೇ ಕುಲಜರು (ಶ್ರೀಬವಸಂ, ವಸಂ, ೧೯೬)*

ಎಂದು ಹೇಳಿ ಎಲ್ಲಾ ಜಾತಿಯ ಜನರನ್ನೂ ಒಂದು ಛತ್ರದಡಿತಂದರು. ಇವರ ವ್ಯಕ್ತಿತ್ವ, ನಡೆ-ನುಡಿ-ದೃಷ್ಟಿಗಳಿಗೆ ಮಾರುಹೋದ ಜನ ತಂಡೋಪತಂಡವಾಗಿ ಬಂದು ಬಸವಣ್ಣನವರ ಕೈಬಲಪಡಿಸಿದರು, ಬಸವಣ್ಣನವರ ಎಷ್ಟೋ ವಿಚಾರಗಳು ಪ್ಲೇಟೋ - ಸಂತ ತುಕಾರಾಮರ ವಿಚಾರಗಳನ್ನು ಹೋಲುತ್ತವೆ. Great minds think alike ಎಂಬ ಮಾತು ಸುಳ್ಳಲ್ಲ.

ಬಸವಣ್ಣನವರ ಪ್ರಕಾರ ಭವಿ, ಭಕ್ತ ಎರಡೇ ಜಾತಿ. I am the shepherd'' ಎಂದು ಹೇಳುತ್ತಿದ್ದ ಏಸುಕ್ರಿಸ್ತನು ಮಾನವಧರ್ಮವೊಂದರ ಪ್ರತಿಷ್ಠಾಪನೆ ಮಾಡಿ ಶಿಲುಬೆಗೇರಿದನು. ಲೌಕಿಕಾಲೌಕಿಕಗಳ ಸಮನ್ವಯದೊಡನೆ ಆಧ್ಯಾತ್ಮಿಕ ಸಾಧನೆಯಲ್ಲಿ ನಿರತರಾದ ಬಸವಣ್ಣನವರು ಆತ್ಮಸಮರ್ಪಣೆಯನ್ನು ಮಾಡುವುದರ ಮುಖಾಂತರ ವೀರಶೈವಮತವನ್ನು ನಿಲ್ಲಿಸಿದರು. ಈ ನಡುವೆ ಅವರು ನಡೆಸಿದ್ದು ಹೋರಾಟದ ಬದುಕು. ಆ ಹೋರಾಟ ತಮ್ಮ ಮನಸ್ಸಿನೊಡನೆ, ಜಾತಿಕಲ್ಪನೆಯೊಡನೆ, ರಾಜಶಾಹಿಯೊಡನೆ, ಅಸಮಾನತೆಯೊಡನೆ ಹೀಗೆ ನೂರಾರು ಸಮಸ್ಯೆಗಳೊಡನೆ ಒಂದೇಮಾತಿನಲ್ಲಿ ಹೇಳುವುದಾದರೆ ಅವರ ವಚನಗಳೇ ಅವರ ಆತ್ಮಚರಿತ್ರೆಯನ್ನು ಹೇಳುತ್ತವೆ. ಆತ್ಮೋನ್ನತಿಯೊಡನೆ ಲೋಕೋನ್ನತಿಯೂ ಇಲ್ಲಿ ಸೇರಿದ್ದು ಒಂದು ವಿಶೇಷವೆನ್ನಬೇಕು.

ಬಸವಣ್ಣನವರು ಮನಸ್ಸಿನ ಚಂಚಲತೆಯ ನಿರೂಪಣೆಗೆ ಬಳಸಿಕೊಂಡ 'ಸೊಣಗ', 'ಮರ್ಕಟ', 'ಪಶು' ಎಂಬ ಪ್ರಾಣಿರೂಪಕಗಳು (ಕಪ್ಪೆ, ನೊಣ, ಹಾವು, ಮೊಲ, ಎಕ್ಕೆಯ ಕಾಯಿ, ಗಾಳಿ, ಪರಿಮಳ, ಸಸಿಅತ್ತಿಯ ಹಣ್ಣು, ಅಂಬುಧಿ, ಆಲಿಕಲ್ಲು, ಬೇವು ಮುಂತಾದ ಪ್ರಕೃತಿ ಚಿತ್ರಗಳು) ಎಲ್ಲರಿಗೂ ಚಿರಪರಿಚಿತವಾದವು.

ಮನಸ್ಸು ಕೊಂಬೆಯಿಂದ ಕೊಂಬೆಗೆ ಹಾರುವ ಮರ್ಕಟ; ತನ್ನ ಮಾನವನ್ನು ಗಮನಿಸದ ವಿಷಯಕ್ಕೆಳಸುವ ಮನಸ್ಸು ಅಂದಣವನೇರಿದ ಸೊಣಗ, ಮೃತ್ಯುವಿನ ನೆರಳಲ್ಲಿಯೇ ಮುಂದುವರಿಯಬೇಕಾದ ಬದುಕು, ಸರ್ಪದ ನೆರಳಲ್ಲಿಯ ಕಪ್ಪೆ, ಚಿತ್ತ ಅತ್ತಿಯ ಹಣ್ಣು, ಅಂಬುಧಿ, ಆಲಿಕಲ್ಲು, ಬೇವು ಮುಂತಾದ ಪ್ರಕೃತಿ ಚಿತ್ರಗಳು) ಎಲ್ಲರಿಗೂ ಚಿರಪರಿಚಿತವಾದವು.

'ಮನಸ್ಸು ಕೊಂಬೆಯಿಂದ ಕೊಂಬೆಗೆ ಹಾರುವ ಮರ್ಕಟ', 'ತನ್ನ ಮಾನವನ್ನು ಗಮನಿಸದ ವಿಷಯಕ್ಕೆಳಸುವ ಮನಸ್ಸು, ಅಂದಣವನೇರಿದ ಸೊಣಗ, ಮೃತ್ಯುವಿನ ನೆರಳಲ್ಲಿಯೇ ಮುಂದುವರಿಯಬೇಕಾದ ಬದುಕು, ಸರ್ಪದ ನೆರಳಲ್ಲಿಯ ಕಪ್ಪೆ, ಚಿತ್ತ ಅತ್ತಿಯ ಹಣ್ಣಿನಂತೆ ನೋಡುವುದಕ್ಕೆ ಚೆಂದವಾದರೂ ಒಳಗೆ ಹುಳುಕು, ಒಂದು ಮೊಲಕ್ಕೆ ನಾಯನೊಂಬತ್ತು ಬಿಟ್ಟಂತೆ, ಕಾಯ ವಿಕಾರಗಳು, ಆತ್ಮನಾದ ಭಕ್ತ ಅಡವಿಯೊಳಗೆ ಹೊಲಬುಗೆಟ್ಟ ಪಶುವಿನಂತೆ, ಶರಣರ ನಡುವೆ ತಾವು ಮಾವಿನ ಕಾಯಿಯೊಳಗೊಂದು ಎಕ್ಕೆಯ ಕಾಯಿಯಂತೆ, ಸಂಸಾರವೆಂಬುದು ಗಾಳಿಯ ಸೊಡರು, ಕೂಡಲಸಂಗಮನ ನಿಲವು ಸಸಿಯೊಳಗಣ ರುಚಿಯಂತೆ, ನನೆಯೊಳಗಣ ಪರಿಮಳದಂತೆ, ಕನ್ನೆಯ ಸ್ನೇಹದಂತೆ, ಭಿನ್ನಭಾವವನರಿಯದ ಪರಮಾತ್ಮನಲ್ಲಿ ಒಂದಾಗುವ ಭಕ್ತ ಅಂಬುಧಿಯಲ್ಲಿ ಬಿದ್ದ ಆಲಿಕಲ್ಲಿನಂತೆ, ಆದ್ಯರ ವಚನ ಬೇವ ಸವಿದಂತೆ ಅಧರಕ್ಕೆ ಕಹಿ ಉದರಕ್ಕೆ ಸಿಹಿ, ಈ ಬಗೆಯ ನೂರಾರು ಉಪಮಾಲಂಕಾರಗಳನ್ನು ತುಂಬ ಸಹಜವಾಗಿ, ವಿಚಾರ ಸ್ಪಷ್ಟತೆಗಾಗಿ ಹಾಗೂ ಅರ್ಥಪುಷ್ಟಿಗಾಗಿ ಬಳಸಿದ್ದಾರೆ. ಈ ಬಗೆಯ ವೈವಿಧ್ಯಮಯ ಉಕ್ತಿಗಳು ನನಗೆ ತಿಳಿದಂತೆ ಬೇರೆ ಯಾವ ಕನ್ನಡ ಕವಿಯಲ್ಲಿಯೂ ಬಂದಿಲ್ಲ. ಅವರ ವಚನಗಳಲ್ಲಿ ಬರುವ ದೃಷ್ಟಾಂತಾಲಂಕಾರಗಳ ಸೊಗಸನ್ನು ಪರಿಭಾವಿಸಬೇಕು.

*ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ*
*ಅಂಬುಜಕೆ ಭಾನುವಿನುದಯದ ಚಿಂತೆ*
*ಭ್ರಮರಂಗೆ ಪರಿಮಳದ ಬಂಡುಂಬ ಚಿಂತೆ*
*ಎನಗೆ ನಮ್ಮ ಕೂಡಲಸಂಗಮದೇವರ ನೆನೆವುದೆ ಚಿಂತೆ* (ಶ್ರೀ ಬವಸಂ, ವಸಂ, ೩೩೮)

*ಸೂರ್ಯನುದಯ ತಾವರೆಗೆ ಜೀವಾಳ*
*ಚಂದ್ರಮನುದಯ ನೆಯ್ದಿಲೆಗೆ ಜೀವಾಳ*
*ಕೂಪರ ಠಾವಿನಲ್ಲಿ ಕೂಟ ಜೀವಾಳ*
*ಬಲಿದ ಠಾವಿನಲ್ಲಿ ನೋಟ ಜೀವಾಳನಯ್ಯಾ*
*ಕೂಡಲಸಂಗನ ಶರಣರ ಬರವೆನಗೆ*
*ಪ್ರಾಣ ಜೀವಾಳವಯ್ಯಾ* (ಶ್ರೀಬವಸಂ, ವಸಂ, ೪೮)

ನೀರಿಂಗೆ ನೆಯ್ದಿಲೆ ಶೃಂಗಾರ, ಸಮುದ್ರಕ್ಕೆ ತೆರೆ ಶೃಂಗಾರ, ನಾರಿಗೆ ಗುಣವೇ ಶೃಂಗಾರ, ಗಗನಕ್ಕೆ ಚಂದ್ರಮನೇ ಶೃಂಗಾರ ನಮ್ಮ ಕೂಡಲಸಂಗನ ಶರಣರಿಗೆ ನೊಸಲ ವಿಭೂತಿಯೇ ಶೃಂಗಾರ'' ಹಳಗನ್ನಡ ಕವಿಗಳು ಪುನಃ ಪುನಃ ಬಳಸಿ ಹಳಸಿಹೋಗಿರುವ ಪ್ರಕೃತಿ ಚಿತ್ರಗಳ ಮುಖಾಂತರ ಬಸವಣ್ಣನವರು ಎಂಥ ಮೋಡಿಮಾಡಿದ್ದಾರೆ. ನವೀನ ಸೌಂದರ್ಯ ನಿರ್ಮಾಣ ಮಾಡಿದ್ದಾರೆಂಬುದನ್ನು ಗಮನಿಸಬೇಕು. ಅವರ ನಿಸರ್ಗ ಪ್ರೇಮಕ್ಕೂ ಇದು ಅತ್ಯಂತ ಸೊಗಸಾದ ನಿದರ್ಶನವಾಗುತ್ತದೆ. ಬಸವಣ್ಣನವರು ವಿರೋಧಾಂಶದ ಪ್ರಶ್ನೆಗಳನ್ನು ಕೇಳಿ ಅರ್ಥಪುಷ್ಟಿಯನ್ನು ತರುವ ಪ್ರಶ್ನೋತ್ತರ ರೀತಿ ಸಹೃದಯರನ್ನು ಸೆಳೆಯುತ್ತದೆ.

*ಕರಿಘನ, ಅಂಕುಶ ಕಿಱಿದೆನ್ನಬಹುದೆ? ಬಾರದಯ್ಯಾ*
*ಗಿರಿಘನ, ವಜ್ರ ಕಿಱಿದೆನ್ನಬಹುದೆ? ಬಾರದಯ್ಯಾ,*
*ತಮಂಧ ಘನ, ಜ್ಯೋತಿ ಕಿಱಿದೆನ್ನಬಹುದೆ ? ಬಾರದಯ್ಯಾ*
*ಮಱಹು ಘನ, ನಿಮ್ಮ ನೆನೆವ ಮನ ಕಿಱಿದೆನ್ನಬಹುದೆ? ಬಾರದಯ್ಯಾ,*
*ಕೂಡಲಸಂಗಮದೇವಾ (ಶ್ರೀ ಬವಸಂ. ವಸಂ ೩೯೮)*

ಉಪಮೆ, ಉತ್ಪ್ರೇಕ್ಷೆ, ರೂಪಕ, ಪ್ರತಿಮೆ, ವಿರೋಧಾಭಾಸ, ಹಾಸ್ಯ, ಶ್ಲೇಷೆ, ವ್ಯಂಗ್ಯ, ದೃಷ್ಟಾಂತ, ಕಟಕಿ, ಪ್ರಸಾನುಪ್ರಾಸ, ನಾಟಕೀಯ ನುಡಿಚಿತ್ರಗಳು ಬಸವಣ್ಣನವರ ವಚನಗಳಲ್ಲಿ ಧಾರಾಳವಾಗಿ ಬಂದು ಅವರೊಬ್ಬ ಉತ್ಕೃಷ್ಟಕವಿ ಎಂಬುದನ್ನು ಸಾರುತ್ತವೆ. ಸಂಸ್ಕೃತ, ಕನ್ನಡ ಪದಗಳ ಹಿತಮಿತ ಬಳಕೆ, ಗದ್ಯದ ತಾರ್ಕಿಕತೆ, ಪದ್ಯದ ಮಾಂತ್ರಿಕತೆ, ಲಯಬದ್ಧತೆ, ಲಯವೈವಿಧ್ಯ, ಗಾದೆ ಮಾತು, ಆಡುನುಡಿಗಳು (ಅಧರಕ್ಕೆ ಕಹಿ, ಉದರಕ್ಕೆ ಸಿಹಿ, ಬಳ್ಳಿಗೆ ಕಾಯಿ ದಿಮ್ಮಿತ್ತೆ ?'ಬಡವನ ಕೋಪ ಅವುಡಿಗೆ ಮೃತ್ಯುವಾದಂತೆ, ನಡೆವೆಣ, ನುಡಿವೆಣ, ಆಚಾರವೇ ಸ್ವರ್ಗ ಅನಾಚಾರವೇ ನರಕ) ಕನ್ನಡ ಭಾಷೆಯನ್ನು ಸಮೃದ್ಧಗೊಳಿಸಿವೆ.

*ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೊ ?*
*ಹೊಸ್ತಿಲಲ್ಲಿ ಹುಲ್ಲು ಹುಟ್ಟಿ ಮನೆಯೊಳಗೆ ರಜತುಂಬಿ*
*ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೊ ?*
*ತನುವಿನೊಳಗೆ ಹುಸಿ ತುಂಬಿ ಮನದೊಳಗೆ ವಿಷಯ ತುಂಬಿ*
*ಮನೆಯೊಳಗೆ ಮನೆಯೊಡೆಯನಿಲ್ಲಾ ಕೂಡಲ ಸಂಗಮ ದೇವ*

*(ವಚನ ಸಾಹಿತ್ಯ ಸಂಪುಟ ೫೯)*

ಮೊದಲನೆಯ ಸಾಲಿನಲ್ಲಿ ೫+೫+೫+೪, ಎರಡನೆಯ ಸಾಲಿನಲ್ಲಿ ೩+೩+೩+೩+೫+೫ ಮೂರನೆಯ ಸಾಲಿನಲ್ಲಿ ೫+೫+೫+೪, ನಾಲ್ಕನೆಯ ಸಾಲಿನಲ್ಲಿ ೩+೩+೨+೩+೫+೩+೩, ಐದನೆಯ ಸಾಲಿನಲ್ಲಿ ೫+೫+೪ರ ಲಯ ಹೇಗೆ ಅರ್ಥಪೂರ್ಣವಾಗಿ, ವೈವಿಧ್ಯಮಯವಾಗಿ ಬಂದಿದೆ ಎಂಬುದನ್ನು ಪರಿಭಾವಿಸಬೇಕು. ಮನೆಯೊಳಗೆ ಮನೆಯೊಡೆಯನಿಲ್ಲದ ಈ ಮನೆಯ ಚಿತ್ರ ಮಾನವ ಮನಸ್ಸಿನ ರಿಕ್ತ ಸ್ಥಿತಿಯ ಸುಂದರವಾದ ಪ್ರತಿಮೆಯಾಗಿದೆ. ಈ ವಚನದಲಯ ವೈವಿಧ್ಯ, ಗಣ ವಿನ್ಯಾಸ, ಯತಿ, ಪುನರಾವರ್ತನೆ, ಭಾಷೆಯ ಸಹಜ ಬಳಕೆ, ಕಾತರ ಮುಂತಾದವು ಬಸವಣ್ಣನವರನ್ನು ವಿಶ್ವಮಟ್ಟದ ಕೀರ್ತಿಗೆ ಭಾಜನರಾಗುವಂತೆ ಮಾಡಿವೆ. ವಚನ ಪ್ರಕಾರಕ್ಕೂ ಕೀರ್ತಿ ಪ್ರಾಪ್ತವಾಗಲು ಈ ಲಯ ವೈವಿಧ್ಯವೇ ಕಾರಣ ಏಕತಾನತೆ ನಿವಾರಣೆಯಾಗಲೂ ಇದೇ ಕಾರಣ.

''ವಜ್ರದಂತೆ ಕಠಿಣವಾಗಬಲ್ಲ, ಹೂವಿನಂತೆ ಮೃದುವಾಗಬಲ್ಲ'' ಬಸವಣ್ಣನವರ ಮಾತು ಎಂಥವರನ್ನೂ ಬೆರಗುಗೊಳಿಸುತ್ತದೆ.

ಭಕ್ತಿಯಿಲ್ಲದ ವ್ರತಾಚರಣೆಗಳು, ಮನಪೂರ್ವಕವಾಗಿ ಶುದ್ಧವಾಗದೆ ಮಾಡುವ ಆಚರಣೆಗಳು ನಿಷ್ಪ್ರಯೋಜಕ, ನಿರರ್ಥಕವಾದುವು.

ನೀರ ಕಂಡಲ್ಲಿ ಮುಳುಗುವರಯ್ಯಾ,
ಮರನ ಕಂಡಲ್ಲಿ ಸುತ್ತುವರಯ್ಯಾ,
ಬತ್ತುವ ಜಲವನೊಣಗುವ ಮರನ
ಮೆಚ್ಚಿದವರು ನಿಮ್ಮನೆತ್ತಬಲ್ಲರು
ಕೂಡಲ ಸಂಗಮದೇವಾ ?

(ಶ್ರೀ ಬವಸಂ, ವಸಂ. ೨೦೮)

ಹುತ್ತವ ಬಡಿದೊಡೆ ಹಾವು ಸಾಯಬಲ್ಲುದೆ ಅಯ್ಯಾ ?
ಅಘೋರ ತಪವ ಮಾಡಿದಡೇನು ?
ಅಂತರಂಗ ಆತ್ಮಶುದ್ಧಿಯಿಲ್ಲದವರನೆಂತು ನಂಬುವನಯ್ಯಾ,
ಕೂಡಲಸಂಗಮದೇವ ?

(ಶ್ರೀ ಬವಸಂ, ವಸಂ, ೨೪೭)

''ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಃ'' ಸ್ತ್ರೀಯರು ಕನಿಷ್ಠರೆಂಬ ಸಂಪ್ರದಾಯವಿತ್ತು, ಬಸವಣ್ಣನವರಂಥ ವಿಚಾರವಾದಿಗಳು ಹೆಣ್ಣಿಗೆ-ಶಿಕ್ಷಣದಲ್ಲಿಸಾಹಿತ್ಯರಚನೆಯಲ್ಲಿ, ಸ್ವಾತಂತ್ರ್ಯದಲ್ಲಿ, ಪುರುಷನಿಗೆ ಸರಿದೊರೆಯಾಗಿ ನಿಲ್ಲುವಂತೆ ಮಾಡಿದ್ದು ಮಹಾಕ್ರಾಂತಿಕಾರಿ ವಿಚಾರವಾಗಿದೆ.

ಮೊಲೆ ಮುಡಿ ಬಂದರೆ ಹೆಣ್ಣೆಂಬರು
ಗಡ್ಡಮೀಸೆ ಬಂದರೆ ಗಂಡೆಂಬರು
ನಡುವೆ ಸುಳಿವಾತ್ಮ ಹೆಣ್ಣೂ ಅಲ್ಲ ಗಂಡೂಅಲ್ಲ
ಕಾಣಾ ರಾಮನಾಥಾ-

ಎಂಬ ಜೇಡರದಾಸಿಮಯ್ಯನ ವಚನವನ್ನಿಲ್ಲಿ ಸ್ಮರಿಸಿಕೊಳ್ಳುವುದು ಉಚಿತವಾಗಿದೆ.

ಬಸವಣ್ಣನವರು ಶಿವನೊಡನೆ ನಡೆಸುವ ಆತ್ಮೀಯ ಸಂಭಾಷಣೆಯಂತಿರುವ ಒಂದು ವಚನವನ್ನು ಉದಾಹರಿಸಿದಲ್ಲದೆ ಮನಸ್ಸಿಗೆ ತೃಪ್ತಿಯಾಗುವುದಿಲ್ಲ.

ತಂದೆ ನೀನು, ತಾಯಿ ನೀನು.
ಬಂಧು ನೀನು ಬಳಗ ನೀನು
ನೀನಲ್ಲದೆ ಮತ್ತಾರೂ ಇಲ್ಲವಯ್ಯಾ
ಕೂಡಲ ಸಂಗಮ ದೇವಾ,
ಹಾಲಲದ್ದು ನೀರಲದ್ದು (ಶ್ರೀ ಬವಸಂ. ವಸಂ. ೩೦೪)

ವಿನೋಬಾಭಾವೆ ಹೇಳುತ್ತಿದ್ದರು. ಮತಗಳ ಕಾಲ ಮುಗಿದಿದೆ. ಈಗ ಆಧ್ಯಾತ್ಮಿಕತೆಯ ಕಾಲ ಇಂಡಿಯಾದ ಮನಃಸ್ಥಿತಿಯನ್ನೂ ಬದಲಾಯಿಸುವವರು ಈ ರೀತಿಯ ಆಧ್ಯಾತ್ಮಿಕವಾಗುತ್ತಿದ್ದ ಹಿಂದೂ ಪರಂಪರೆಯನ್ನು ಹಾಳುಮಾಡುತ್ತಿದ್ದಾರೆ, ಮತ್ತೆ ಮತೀಯತೆಯೇ ಆಧ್ಯಾತ್ಮಿಕತೆ ಎಂಬ ಭ್ರಮೆಯನ್ನುಂಟುಮಾಡುತ್ತಿದ್ದಾರೆ. ಮಸೀದಿ - ಮಂದಿರ ಅಪ್ರಸ್ತುತ ಎಂದು ತಿಳಿದ ಕಬೀರ, 'ಸ್ಥಾವರಕಳಿವುಂಟು, ಜಂಗಮಕ್ಕಳಿವಿಲ್ಲ' ಎಂದು ದೇವಾಲಯಗಳನ್ನು ಅಲ್ಲಗಳೆದ ಬಸವಣ್ಣ ನಮ್ಮ ನಿಜವಾದ ಗುರುಗಳು ಎಂಬ ಮಾತುಗಳನ್ನು ಸಂದರ್ಶನವೊಂದರಲ್ಲಿ ಡಾ|| ಯು. ಆರ್. ಅನಂತಮೂರ್ತಿಯವರು ಹೇಳಿರುವುದನ್ನು[೧] ಸ್ಮರಿಸಿಕೊಳ್ಳುವುದು ಸೂಕ್ತವಾಗಿದೆ.

ಬುದ್ಧ, ಮುಹಮದ್ (ಸ) ಪೈಗಂಬರ್, ಕ್ರಿಸ್ತ, ಬಸವಣ್ಣ, ಕನಕದಾಸ, ಗಾಂಧಿ ಮುಂತಾದವರು ಮಾನವತೆಯನ್ನು ಪರಿಪೂರ್ಣತೆಯತ್ತ ಸಾಗಿಸುವ ಸಾಧನೆ - ಬೋಧನೆಗಳ ಉಜ್ವಲ ಪ್ರತೀಕವಾಗಿದ್ದಾರೆ. ಹರಿಜನರ ಉದ್ಧಾರದ ಬಗೆಗೆ ನಾನು ಪ್ರಚಾರ ಮಾಡಿದ್ದೇನೆ. ಆದರೆ ಬಸವಣ್ಣನವರು ಅದನ್ನು ಆಚರಿಸಿ ತೋರಿಸಿದ್ದಾರೆ ಎಂದು ಗಾಂಧಿ ಹೇಳಿದ್ದಾರೆ. Basava was the first free thinker in modern India ಎಂದು ಪಾಶ್ಚಿಮಾತ್ಯ ವಿದ್ವಾಂಸರೊಬ್ಬರು ಹೇಳಿರುವುದು ಅರ್ಥಪೂರ್ಣವಾಗಿದೆ. "ಧರ್ಮದ ಬಗ್ಗೆ ತೋರಿದ ವೈಜ್ಞಾನಿಕ ಹೊಸಮಾರ್ಗ, ವೈಚಾರಿಕ ಕ್ರಾಂತಿ, ದೇವರುಗಳ ಬಗೆಗಿನ ಹೊಸದೃಷ್ಟಿ ಕಾಯಕಕ್ಕೆ ನೀಡಿದ ಪ್ರಾಮುಖ್ಯ, ಜಾತಿಯ ಬಗೆಗಿನ ದೂರದೃಷ್ಟಿ ವೀರಶೈವ ಧರ್ಮದ ಅದ್ವಿತೀಯತೆಗೆ ಕಾರಣವಾದವು" ಎಂದು ವಿಮರ್ಶಕರು ನುಡಿದಿದ್ದಾರೆ.

ಭಾವೈಕ್ಯ, ಸಹಜೀವನ ಹಾಗೂ ವಿಶ್ವಬಾಂಧವ್ಯಗಳು ಅಗತ್ಯವಿರುವ ಈ ಕಾಲದಲ್ಲಿ ಬಸವಣ್ಣನವರ ಸಂದೇಶವೂ ಸ್ಫೂರ್ತಿಯ ಸೆಲೆಯಾಗಿದೆ. ಆತ್ಮಪರಿಶೀಲನೆಯ ಎಚ್ಚರದಿಂದ ಆರಂಭವಾಗಿ, ಭಕ್ತಿ-ನಿಷ್ಠೆ ನಿರಹಂಕಾರ, ಸಮರ್ಪಣೆಗಳಿಂದ ನಿಜದ ನಿಲವನ್ನು ಕಾಣುವ ಹಾದಿಯಲ್ಲಿ ಸಾಗಿ, ಅನುಭಾವದ ದಿವ್ಯಬೆಳಕಿನಲ್ಲಿ ರಮಿಸುವ ವ್ಯಕ್ತಿ ಪ್ರಜ್ಞೆಯ ವಿಕಾಸ, ಪರಿಶುದ್ಧ ನಡೆ-ನುಡಿಗಳ ಭಕ್ತಿಯ ಬಾಂಧವ್ಯದ ಸಮಷ್ಟಿ ವಿಕಾಸ, ಪರಮಾತ್ಮನ ಸ್ವರೂಪ, ಶರಣರ ನಿಲುವು ಅವರ ವಾಣಿಯ ಹಿರಿಮೆ" ಎಂದು ವಿಮರ್ಶಕರು ಬಸವಣ್ಣನವರನ್ನು

೧. ಪ್ರಜಾವಾಣಿ ಸಾಪ್ತಾಹಿಕ ಪುರವಣಿ : ದಿನಾಂಕ : ೨೧.೩.೯೩

ಕೊಂಡಾಡಿದ್ದಾರೆ. ಬಸವೇಶ್ವರರು ಸ್ವಾತಂತ್ರ್ಯ, ಸಮಾನತೆ ಹಾಗೂ ಸಹೋದರತ್ವಗಳನ್ನು (ಇವು ಪ್ರಜಾಪ್ರಭುತ್ವದ ಮೂಲಬೇರುಗಳು) ಬೋಧಿಸಿದರು. ಸಾಮಾಜಿಕ, ಆರ್ಥಿಕ, ರಾಜಕೀಯ ಹಾಗೂ ಧಾರ್ಮಿಕ ರಂಗಗಳಲ್ಲಿ ಎಲ್ಲರಿಗೂ ನ್ಯಾಯ ದೊರಕಿಸಿ ಕೊಡಲು ತೀವ್ರವಾಗಿ ಹೋರಾಡಿದರು. ಅವರ ವಚನಗಳನ್ನೊಮ್ಮೆ ಓದಿದರೆ ಸಾಕು, ಅವರು ಎಂಥ ಪ್ರಗತಿಪರ ವಿಚಾರಧಾರೆಯನ್ನು ಹರಿಸಿದ್ದಾರೆಂಬುದು ತಿಳಿಯುತ್ತದೆ.

ಪ್ರಪಂಚದ ಅದರಲ್ಲಿಯೂ ನಮ್ಮ ದೇಶದ ಇವತ್ತಿನ ಸಾಮಾಜಿಕ, ಧಾರ್ಮಿಕ, ಜಾತಿ ಸಮಸ್ಯೆಗಳ ಪರಿಸ್ಥಿತಿಯಲ್ಲಿ ಬಸವಣ್ಣನವರ ವಿಚಾರ ಬೋಧೆ ತುಂಬ ಮೌಲಿಕವಾಗಿ ಕಂಡು ಬರುತ್ತದೆ. ಯಾವ ವರ್ಣ ವರ್ಗದವರೇ ಆಗಲಿ ಸ್ವಾರ್ಥ ದೃಷ್ಟಿಯಿಂದ ದೇಶದ ಒಗ್ಗಟ್ಟಿಗೆ ಭಂಗತರುವ ಕಾರ್ಯವನ್ನು ಮಾಡಲು ಪ್ರಯತ್ನಿಸಿದರೆ ಅದು ಬಸವಣ್ಣನವರಿಗೆ ಮಾತ್ರವಲ್ಲ, ಎಲ್ಲ ವರ್ಣವರ್ಗದ ಧಾರ್ಮಿಕ ಪ್ರವಾದಿಗಳಿಗೇ ಕೇಡು ಬಗೆದಂತಾಗುತ್ತದೆ. ಈ ಮಹಾ ಪುರುಷರೆಂದೂ ಇಂಥ ಸಂಕುಚಿತ ಮನೋಭಾವನೆಗಳನ್ನು ಬೋಧಿಸಿಲ್ಲ.

# ಕೊಡಗು, ಕೋಲಾರ, ಹಾಸನ ಜಿಲ್ಲೆಗಳ ವೀರಶೈವ ಮಠಗಳು

ಎಂ.ಜಿ. ನಾಗರಾಜ್

---

ವಿಹಾರ, ಚೈತ್ಯಾಲಯ, ಬಸದಿ ಅಥವಾ ಮಠ, ಇವುಗಳನ್ನು ಯಾವ ಹೆಸರಿನಿಂದಲೇ ಕರೆದಿರಬಹುದು. ಸ್ಥೂಲವಾಗಿ ಧಾರ್ಮಿಕ ಸಂನ್ಯಾಸಿಯ ನೆಲೆ ಎಂಬ ಮೂಲಭಾವದಲ್ಲಿ ನೋಡುತ್ತೇವೆ. ಇದು ನಮ್ಮ ಜಾಯಮಾನ. ಧ್ಯಾನ, ಉಪದೇಶ ನೆಮ್ಮದಿ, ಶಾಂತಿಗಾಗಿ ಈ ನೆಲೆಗಳ ಹುಟ್ಟು. ಆದರೆ ಸಾಂಸ್ಕೃತಿಕವಾಗಿ, ಶೈಕ್ಷಣಿಕವಾಗಿ, ಸಾಮಾಜಿಕವಾಗಿ ರಾಜಕೀಯವಾಗಿ ಅವುಗಳು ಬೀರಿದ ಪ್ರಭಾವಗಳಿಗೆ ಪ್ರತ್ಯೇಕ ಸ್ತರವೇ ಇದೆ. ಸೇವೆ, ಧರ್ಮ-ಎಂಬೀ ಅಂಕಣದಲ್ಲಿ ಅವು ಗೆಲುವು ಸೋಲುಗಳನ್ನುಂಡದ್ದು ಉಂಟು. ಆದರೆ ಜನಮೂಲದಲ್ಲಿ ಅವುಗಳಿಗಿರುವ ಗೌರವ ಭಕ್ತಿಗಳನ್ನು ಕಳೆಯುವುದು ಸುಲಭವಲ್ಲ. ಪ್ರಸ್ತುತ ನಮ್ಮ ದೃಷ್ಟಿ ಮಠಗಳ ಮೇಲೆ. 'ಮಠಚ್ಛಾತ್ರಾದಿ ನಿಲಯಂ' ಎಂಬುದು ಅಮರ್ಕೋಶದ ಮಾತು. ಅಂದರೆ ವಿದ್ಯೆ ಹಾಗೂ 'ಅಶನದ ವ್ಯವಸ್ಥೆಯ ನೆಲೆ' ಎಂಬ ಅದರ ಅರ್ಥವು ಸಾಮಾನ್ಯಮತಿಗೂ ಗೋಚರ. ವೀರಾಗಮದ ರೀತ್ಯಾ

ಮಠ ಮಧ್ಯೇ ಮಹಾಶ್ರೇಷ್ಠಾನ್ವೀರಮಹೇಶ್ವರಾನ್ ಪ್ರಿಯೇ
ಪೂಜ್ಯಾನ್ ಪುರಾತನಾನ್ ಪೂರ್ವಾನ್ ಪುರುಷಾರ್ಥ ಪ್ರದಾಯಕಾನ್ ।

ಎಂದಿವೆ ಮಠಗಳಲ್ಲಿ ವೀರಮಾಹೇಶ್ವರರು, ಪೂಜ್ಯರು, ಪುರಾತನರು, ಪುರುಷಾರ್ಥ ಪ್ರದಾಯಕರು ನೆಲೆಗೊಂಡಿದ್ದರು; ಮಹೇಶ್ವರಜ್ಞಾನ ದಾನದ ಗೋಷ್ಠಿ ನಡೆಯುತ್ತಿತ್ತು.[೧] ಒಂದು ರೀತಿ ಅವು ಧರ್ಮದಾಸೋಹದ ತಾಣಗಳಾಗಿದ್ದುವು. ಹೊಟ್ಟೆಗೆ ತುತ್ತಿಟ್ಟಂತೆ ನೆತ್ತಿಗೂ ತುತ್ತು ಇಡುವಂತಹ ನೆಲೆ ಅವು. ಅಂದರೆ ಎರಡೂ ಪ್ರಸಾದವೆ. ಯೋಗ, ಧ್ಯಾನ, ಜಪ, ಯಜ್ಞ, ಶೀಲ ಇವುಗಳ ಅನುಷ್ಠಾನ ಮಠ ದಾಸೋಹದಲ್ಲಿ ಸಂಯೋಗವಾಗಿದ್ದುವು. ಇಂತಹ ಮಠಗಳ ಉಗಮ ರುದ್ರನ ಕಾಲದಿಂದ ಎನ್ನುವುದುಂಟು. ಪ್ರಯೋಗದಲ್ಲಿ ರುದ್ರ 'ಮುಕ್ತಿ ಮಂಟಪ'ವನ್ನೂ ರೂಪಿಸಿದ; ವೀರಭದ್ರ ಹೇಮಾದ್ರಿಯಲ್ಲಿ ಪೂಜಾಮಂಟಪ ನಿರ್ಮಿಸಿದ; ಶ್ರೀ ಆದಿರೇಣುಕರು ಶಿಂಶುಮಾರ, ಡಿಂಡಿಮಾರರಿಗೆ ಪ್ರೇರಣೆ ಇತ್ತು ಮಠಗಳನ್ನೂ ರೂಢಿಗೆ ತಂದರು. ಅವುಗಳ ಗುರಿ ಮಾನವ ಬದುಕಿನ ಹಸನು, ಮೌಲ್ಯಗಳ ಉತ್ಥಾನ, ದಲಿತರ ಉದ್ಧಾರ ಆಗಿತ್ತು. ಪಾಂಥಾತಿಥ್ಯದ ಜೊತೆಗೆ ನಿಸರ್ಗದ ಸೊಬಗಿನ ನೆಲೆಯನ್ನೂ ಒದಗಿಸುತ್ತಿದ್ದಂತಹವಾಗಿದ್ದುವು. ಶಿವಬಂಧುಗಳ ಸಮಭಾವಿಗಳ, ಶಿವಜ್ಞಾನ ನಿರತರ, ಶಿವಯೋಗಿಗಳ ನೆಲೆ ಆಗಿರುತ್ತಿದ್ದುವು.[೨]

ಮಂಟಪರೂಪ ಅಂದರೆ ತೆರೆದ ವಾತಾವರಣದ ನಾಲ್ಕು ಚೌಕಟ್ಟುಗಳಿಂದ ಉದಿಸಿದ್ದು ಕಾಲಕ್ರಮೇಣ ನಾಲ್ಕು ಭಿತ್ತಿಗಳ ನಡುವೆಯೂ ನೆಮ್ಮದಿಯಿಂದ ಜೀವನದ ಮೌಲ್ಯಗಳನ್ನು ಅರ್ಥೈಸಿಕೊಳ್ಳುವ ವಿಕಾಸದ ರೂಪ ಇಲ್ಲಿ ಕಾಣುತ್ತದೆ. ಪ್ರಾಚೀನ ಸ್ವರೂಪದ ವಿಕಾಸದ ಮಜಲು ಈ ಮೇಲಿನ ಮಾತುಗಳಿಂದ ವ್ಯಕ್ತವಾಗುತ್ತದೆ. ಯಾವುದೇ ಧರ್ಮ, ಜನಾಂಗದ ಆಶಯಕ್ಕೂ ಈ ಸೂತ್ರ ಅನ್ವಯವಾದುದೇ ಆಗಬಹುದು. ಪ್ರಸ್ತುತ ವಿಷಯ ವೀರಶೈವ ಮಠಗಳಿಗೆ ಅನ್ವಯವಾದ ಕಾರಣ 'ಶಿವಸ್ವರೂಪ'ದ ನಿಟ್ಟಿನಲ್ಲಿ ಕೆಲವಂಶಗಳನ್ನು ಮೇಲಿನ ಸಾಲುಗಳಲ್ಲಿ ಸೂಚಿಸಲಾಯಿತು. ಇದನ್ನು ಸಾಂಪ್ರದಾಯಿಕ ದೃಷ್ಟಿ ಎನ್ನುವುದಕ್ಕಿಂತ ಆಧುನಿಕ ಅರ್ಥಗಳಿಗೆ, ಅವು ಹೇಗೆ ಪರಂಪರೆಯನ್ನು ಒದಗಿಸಿವೆ ಎಂಬುವನ್ನು ಗಮನಿಸಬೇಕಾಗುತ್ತದೆ. ಒಂದು ಉದಾಹರಣೆ - ಇಲ್ಲಿನ 'ಮಾಹೇಶ್ವರ ದೃಷ್ಟಿ' ಜನಪದೀಯವಾಗಿ ಯಾವ ಯಾವ ನೆಲೆಯಲ್ಲಿಯೂ ಬೇರು ಬಿಟ್ಟಿರುವಂತಿದೆ. ಆದರೆ ಬಳಕೆಯಲ್ಲಿ ವೈವಿಧ್ಯಗಳು ಕಾಣಬರುತ್ತವೆ.

ಮಹೇಶ್ವರ ಜ್ವರ ಅರ್ಥಾತ್ ಮಿತಿಮೀರಿದ ಜ್ವರ, ಸತಿ ಅಗ್ನಿಪ್ರವೇಶ ಮಾಡಿದಾಗ ಶಿವನ ಹಣೆಗಣ್ಣಿನಿಂದ ಹುಟ್ಟಿದ ಜ್ವರವಂತೆ. 'ಮಹೇಶ್ವರ ವ್ಯಾಧಿ', ' ಮಹೇಶ್ವರ ಉಪದ್ರ' ಎಂದೂ ಇದೆ. ಶಿವಮೊಗ್ಗ ಚಿತ್ರದುರ್ಗ ಬಳ್ಳಾರಿ ಜಿಲ್ಲೆಗಳಲ್ಲಿ ವೀರಶೈವರು 'ಮಹೇಶ್ವರ ಜಾತ್ರೆ'ಯನ್ನು ಸ್ತ್ರೀಯರಿಲ್ಲದ ಜಾತ್ರೆಯಾಗಿ ನಡೆಸುತ್ತಾರೆ. ಬೆಂಗಳೂರಿನ ಚಾಮರಾಜಪೇಟೆಯ ಕನ್ನಡ ಸಾಹಿತ್ಯ ಪರಿಷತ್ತಿಗೆ ಬಲಬದಿ ಸಮೀಪದ ಚಂದ್ರಶೇಖರ ಭಾರತಿ ಕಲ್ಯಾಣಮಂಟಪದ ಪಕ್ಕದಲ್ಲಿ

೧. ಡಾ|| ಶ್ರೀ ಜಚನಿ : ರುದ್ರ-ಭದ್ರ-ರೇಣುಕ, ಬೆಂಗಳೂರು, ೧೯೮೫, ಪು.೬೩

೨. ಅದೇ. ಪು.೬೨-೬೭

ಮಹೇಶ್ವರಮ್ಮನ ದೇವಸ್ಥಾನವೂ ಇದೆ.[೩] ಇದಲ್ಲದೆ ಹಾಸನ ಜಿಲ್ಲೆಯ ಬಾಣಾವರದ ಕೇದಿಗೆ ಮಠದಲ್ಲಿ ಮಾಹೇಶ್ವರ ಜಾತ್ರೆ ಉಂಟು. ಮಾಹೇಶ್ವರ ಅಡ್ಡೆಯೂ ಉಂಟು. ಹಾಗೆಯೆ ಹಾರ್ನಳ್ಳಿ ಕೋಡಿಮಠದಲ್ಲಿ ಜಂಗಮಜಾತ್ರೆ ಎಂದು ಮಾಹೇಶ್ವರ ಜಾತ್ರೆ ನಡೆಯುತ್ತದೆ. ವಿಶೇಷವೆಂದರೆ ಮುತ್ತೈದೆಯರು ಇಲ್ಲಿ ಪಾಲುಗೊಳ್ಳುತ್ತಾರೆ. ಅಲ್ಲದೆ ಹೆಂಗಸರಿಗೆ ಮೊದಲು ನಂತರ ಉಳಿದವರಿಗೆ ಪ್ರಸಾದ ಹಂಚಿಕೆ ಇಲ್ಲಿದೆ. ಬಹುಶಃ ಕೋಡಿ ಮಠದ ನೀಲಮ್ಮಜ್ಜಿಯ ಅವರ ಆಶೀರ್ವಾದದ ಕಾರಣ ಇದಿರಬೇಕು. ಬೆಂಗಳೂರಿನ ಮಹೇಶ್ವರಮ್ಮನ ಗುಡಿಯ ಬಲ ಮುಂದಿನ ಅಂಗಳದಲ್ಲಿ ಪ್ರಾಚೀನವೂ, ಭಿನ್ನವೂ ಆದ ಮಹೇಶ್ವರಮ್ಮನದೆನ್ನಬಹುದಾದ ಪುಷ್ಟ ವಿಗ್ರಹವಿದೆ. ಈಕೆ ಎಳೂರು ಗ್ರಾಮದೇವತೆ ಮಹೇಶ್ವರಮ್ಮನಂತೆ. ಈಕೆಗೂ ಗವಿಪುರ ಗುಟ್ಟಹಳ್ಳಿಯ ಮಾರಿಕಾಂಬೆಗೂ (ರಾಜ ರಾಜೇಶ್ವರಿ ದೇಗುಲ ಸಂಕೀರ್ಣ) ಸಂಬಂಧವಿದೆ.[೪] ಇಷ್ಟೆಲ್ಲ ಹೇಳುವ ಕಾರಣವೆಂದರೆ ಮಠಗಳಲ್ಲಿದ್ದ ಮಾಹೇಶ್ವರರು ಹಾಗು ಮಾಹೇಶ್ವರ ಉಪಾಸನೆ ಜನಜೀವನದಲ್ಲಿ ಬೇರು ಬಿಟ್ಟ ಬಗೆಯಿಂದಾಗಿ ಅವುಗಳ ಪ್ರಭಾವ ಅರಿವಾಗುತ್ತದೆ. ೧೦-೧೧ನೇ ಶತಮಾನದಲ್ಲಿಯೂ ಐತಿಹಾಸಿಕ ಪರಂಪರೆಯನ್ನು ಸೂಚಿಸುವ ಸಂಕೇತವಾಗಿ ಅವು ಕಾಣುತ್ತವೆ

ವೀರಶೈವ ಮಠಗಳ ರಾಚನಿಕ ಸಂವಿಧಾನದಲ್ಲಿ ಹಲವು ಬಾಧ್ಯತೆಗಳು ಕಾಣಬರುತ್ತವೆ. ಗುರುಮಠ, ವಿರಕ್ತಮಠಗಳಲ್ಲಿ ಅನುಕ್ರಮವಾಗಿ ಗೃಹಸ್ಥ, ಬ್ರಹ್ಮಚಾರಿ ಸ್ವಾಮಿಗಳಿರುತ್ತಿದ್ದರು. ಗುರುಪೀಠದ ಗುರುಗಳಿಗೆ ಲಿಂಗದೀಕ್ಷೆ ನೀಡುವ ಅಧಿಕಾರವಿದೆ. ವಿರಕ್ತ ಸ್ವಾಮಿಗಳು ಬರಿ ಉಪದೇಶ ನೀಡುವ ಪರಿವ್ರಾಜಕರಾಗಿರುತ್ತಿದ್ದರು. ವಿರಕ್ತಮಠಗಳು ವ್ಯಕ್ತಿಗಳ ಕುಟುಂಬಗಳ ಸಮುದಾಯಗಳ ಜೊತೆಗೆ ನಿಕಟ-ಸಂಬಂಧಗಳನ್ನು ಹೊಂದಿ ಶ್ರೀಸಾಮಾನ್ಯರ ಜೀವನದಲ್ಲಿ ಬೆರೆತದ್ದುಂಟು. ಸಮಾಜಶಾಸ್ತ್ರೀಯ ದೃಷ್ಟಿಯಿಂದ ಈ ಮಠಗಳ ರಚನೆ ಅಥವಾ ಚೌಕಟ್ಟು ಕ್ರಿಯೆ, ಸಂಚಲನೆ, ರೋಗಸ್ಥಿತಿ, ಪರಿಹಾರಾತ್ಮಕ ಸಂಪನ್ಮೂಲ (Remedy) ಎಂಬ ಶೀರ್ಷಿಕೆಗಳಲ್ಲಿ ವಿವೇಚಿಸುವ ಆಧುನಿಕ ಪ್ರಯತ್ನವೂ ಇದೆ.[೫] ಆಧ್ಯಾತ್ಮಿಕ ಜ್ಞಾನ ಪ್ರಸಾರ, ದೀಕ್ಷಾಸಂಸ್ಕಾರ, ವಿದ್ಯಾಪ್ರಸಾರ, ವಸತಿ ಹಾಗೂ ಕಲ್ಯಾಣಾಭಿವೃದ್ಧಿ ಅಂದರೆ ಕ್ಷೇಮಾಭಿವೃದ್ಧಿ, ಸಾರ್ವಜನಿಕ ಹಾಸ್ಟೆಲ್ಲುಗಳ ನಿರ್ಮಾಣ. ವೃದ್ಧಾಶ್ರಮ, ಗ್ರಂಥ ಪ್ರಕಟನೆ, ಗ್ರಂಥ ಭಂಡಾರ

---

೩. ಡಾ|| ಎಂ. ಚಿದಾನಂದ ಮೂರ್ತಿ : ಹೊಸತು ಹೊಸತು ಕನ್ನಡ ವಿಶ್ವವಿದ್ಯಾಲಯ, ಹಂಪೆ, ೧೯೯೩ ಪು. ೩೯೧-೯೩

೪. ಎಂ.ಜಿ. ನಾಗರಾಜ್ : ಶ್ರೀ ಗೌರೀಶಂಕರ ದರ್ಶನ, ಬೆಂಗಳೂರು-೧೯, ೧೯೯೦, ಪು.-೧೨೯- ೧೩೧

೫. ಡಾ|| ಎಚ್. ಎಂ. ಮರುಳಸಿದ್ದಯ್ಯ: 'ವೀರಶೈವ ಮಠಗಳ ಸಾಮಾಜಿಕಟ ಹೊಣೆಗಾರಿಕೆ', 'ಉಪನ್ಯಾಸ ಸಂಚಯ', (ಸಂ) ಟಿ.ಆರ್. ಮಹದೇವಯ್ಯ, ಬೆಂಗಳೂರು, ೧೯೯೧, ಪು.೨೬೯.

ನಿರ್ವಹಣೆ. ತಾಂತ್ರಿಕ ಪದವಿ ಶಿಕ್ಷಣ ನೀಡಿಕೆ. ಜನಸಂಪರ್ಕ, ಕಷ್ಟ-ಸುಖಗಳಲ್ಲಿ ಪಾಲುದಾರಿಕೆ ಹಾಗೂ ಪರಿಹಾರ ಇತ್ಯಾದಿ ಪ್ರಾಚೀನ-ಅರ್ವಾಚೀನ ಅಗತ್ಯಗಳ ಪೂರೈಕೆಗಳಲ್ಲಿ ಇಂದಿನ ಅನೇಕ ಗುರುಪೀಠಗಳು-ಪಟ್ಟದ ಮಠಗಳು, ವಿರಕ್ತ ಮಠಗಳು (ಶೂನ್ಯ ಸಿಂಹಾಸನ) ತೊಡಗಿಕೊಂಡಿವೆ. ಸಾಂಸ್ಕೃತಿಕವಾಗಿ, ಸಾಮಾಜಿಕವಾಗಿ, ಸಕಾರಾತ್ಮಕವಾಗಿ ಕ್ರಿಯಾಶೀಲತೆಯಿಂದ ಈ ವೀರಶೈವ ಮಠಗಳಿವೆ. ಆದರೆ ಈ ಎಲ್ಲ ಸಂದರ್ಭಗಳಲ್ಲಿ ಅಪವಾದಗಳಾಗಿ ನಿರ್ಜೀವ ಮಠಗಳು ಇಲ್ಲವೆನ್ನುವಂತಿಲ್ಲ. ಅವುಗಳದೇ ಆದ ಸಾಂದರ್ಭಿಕ ಕಾರಣಗಳಿರಬಹುದಾದರೂ ಸಮಾಜದ ನಿರೀಕ್ಷೆಗಳಿಗೆ ಶ್ರೇಯಃಪರವಾಗಿ ಅವು ಬದ್ಧಕೊಳ್ಳಬೇಕಾದ ಯುಗವಿದು. ಲಿಂಗದೇವನೂ ಪೀಠಕ್ಕೆ ಸಿಕ್ಕದನ್ನಕ್ಕೆ ಜಗದ ಅಗು ಬೇಗೆಯನರಿಯಬೇಕು. ಶೂನ್ಯವಾದರೂ ಆ ಕುರುಹುಕ್ಕೆ ಸ್ಪಕ್ಕೆ ಸುಖಿ ದುಃಖಿಕ್ಕೊಳಗಾ ಜನ್ಮದ ಶಿವಲೋಕ ದುಂದುಭಿ ಶಿವಾಚಾರ್ಯರ ನುಡಿ ಈ ದಿಸೆಯಲ್ಲಿ ಗಮನಾರ್ಹವೆ.

ಮಠದ ಕಲ್ಪನೆ ಶ್ರೀ ಶಂಕರಾಚಾರ್ಯರಿಗಿಂತ ಹಿಂದಿನದೆನ್ನುತ್ತಾರೆ. 'ಮಂಟಪ'ದ ಸ್ವರೂಪದಿಂದ ಮಠದ ರೂಪ ಉದ್ಭವಗೊಂಡಂತಿದೆ. ಅದರಲ್ಲಿಯೂ ವೀರಶೈವ ಧರ್ಮದ ಅವಿಭಾಜ್ಯ ಅಂಗವಾಗಿ ಮಠವಿದೆ. ಕನ್ನಡದಲ್ಲಿ ಸೂಕ್ತಿ-ವಚನ ಸಾಹಿತ್ಯ, ಸಂಸ್ಕೃತದ ಆಗಮ, ಉಪನಿಷತ್ತು, ಸಿದ್ಧಾಂತಶಿಖಾಮಣಿ ಸಾಹಿತ್ಯವು ವೀರಶೈವದ ಲಿಂಗನಂಬಿಕೆಯನ್ನು ಪ್ರಸ್ತಾಪಿಸುತ್ತದೆ. ಅದರ ಸಮಯೋಗದಲ್ಲಿ ಮಠಗಳ ಅಸ್ತಿತ್ವವೂ ವಿಕಾಸಗೊಂಡು ಬಂದಿದೆ. ಇಂತಹ ಮಠಗಳು ವಿವಿಧ ಪೀಠಗಳ ಹೆಸರಾಗಿ ನಿಂತಿವೆ. ಪಟ್ಟದ ಮಠವೆ, ವಿರಕ್ತ ಮಠ, ಸಂಸಾರಿ ಮಠಗಳೆಂದು ಚಾಲ್ತಿಯಲ್ಲಿ ಇಂದೂ ಇವೆ.

ಕೆಳದಿ ಅರಸರು ಮಾಡಿಕೊಂಡ ವಿಭಾಗಗಳಲ್ಲಿ ಮಹತ್ತಿನ ಮಠ (ಗುರುಮಠ) ಪಾಶಿಕ್ಷಿತ ಮಠವೆಂದೂ ವಿಂಗಡನೆ ಇವೆ.[೬] ಬಹುಶಃ ಪಾಶಿಕ್ಷಿತ ಮಠಗಳೇ ಸಂಸಾರಿ ಮಠಗಳಾದಂತೆ ಕಾಣುತ್ತವೆ. ಇವಲ್ಲದೆ ಶರಣ ಸ್ಥಲದ ಮಠಗಳು ಹಾಸನ, ಚಿಕ್ಕಮಗಳೂರು ಜಿಲ್ಲೆಯಲ್ಲಿಯೂ ಕಾಣಬರುತ್ತವೆ. ಸಿಂಹಾಸನಮಠಗಳು ಗುರು ಹಾಗೂ ವಿರಕ್ತ ಸಂಪ್ರದಾಯಗಳಲ್ಲಿ ಕಾಣಬರುತ್ತವೆ. ಹಾಗೆ ನೋಡಿದರೆ ಪಂಚ ಪೀಠಗಳ ಪೈಕಿ ಕೇದಾರ ಪೀಠವು ವೈರಾಗ್ಯ ಸಿಂಹಾಸನ ಪರಂಪರೆಯದಾಗಿದೆ. ವೈರಾಗ್ಯ, ವಿರಕ್ತ ಮೂಲಶಬ್ದವೇ ಆಗಿದೆ. ಈ ವೀರಶೈವ ಮಠಗಳು ಬಹುತೇಕ ಕಾಳಾಮುಖ ಮಠಗಳಿಂದ ರೂಪಾಂತರಗೊಂಡಂತಹವು ಎಂಬ ಅಭಿಪ್ರಾಯವಿದೆ. 'ಪಾಶುಪತ' ಪಂಥವನ್ನು ವೀರಶೈವ ಭಿನ್ನವಾಗಿ ಕೆಲವರು ಆಲೋಚಿಸುವುದುಂಟು. ಆದರೆ ಒಂದು ಯಾವುದೋ ಕಾಲದ ಗಡಿಯನ್ನಿಟ್ಟುಕೊಂಡು ವೀರಶೈವ ಧರ್ಮದ ಉದ್ಭವವನ್ನು ಬದ್ಧಗೊಳಿಸುವ ಪ್ರಯತ್ನದಲ್ಲಿ ಇಂತಹ ಭಾವನೆಗಳನ್ನು ಕಾಣುತ್ತೇವೆ. ವಾಸ್ತವವಾಗಿ ಸಂಸ್ಕೃತದ ಶಿವಾಗಮಗಳು, ವಚನ ಸಾಹಿತ್ಯ, ಕೊಂಡಗುಳಿ ಕೇಶಿರಾಜನ ಶಾಸ್ತ್ರಸ್ತುತಿಗಳು, ಸಿದ್ಧಾಂತ

೬. K. N. Chitnis : 'VIRS'AIVA Mathas in the Keladi Kingdom', The journal of Karnataka University Social Sciences, Dharwar, 1967, P.2

ಶಿಖಾಮಣಿ ಇವೆಲ್ಲವನ್ನು ಪರಾಮರ್ಶಿಸಿದಾಗ ಸಾಹಿತ್ಯದ ದೃಷ್ಟಿಯಿಂದ ಇವೆಲ್ಲದರ ಮೊತ್ತವಾಗಿ ವೀರಶೈವ ಧರ್ಮಸಾಹಿತ್ಯವಿದೆ ಎನಿಸುತ್ತದೆ. ವೇದಕಾಲದ ಜಂಗಮರು, ಆಚಾರ್ಯರು, ಶಿವಾಚಾರ್ಯರು, ಶರಣರು, ಯತಿಗಳು ಇವರೆಲ್ಲರ ಸಮುದಾಯ, ತಮ್ಮ ದರ್ಶನದ ಮೊತ್ತವನ್ನಾಗಿಟ್ಟದ್ದೆ ವೀರಶೈವದರ್ಶನವಾಗಬೇಕು. ಅದು ರುದ್ರನಿಂದ ಹಿಡಿದು ಇಂದಿನ ವೀರಶೈವಾಚಾರ್ಯರಿರಲಿ, ನಿರಂಜನಶ್ರೀಗಳಿರಲಿ, ಇವರೆಲ್ಲರ ಒಟ್ಟಾಯವೇ ವೀರಶೈವವೆನ್ನಬೇಕು. ಈ ದೃಷ್ಟಿಯಿಂದ ವೀರಶೈವ ಸಿದ್ಧಾಂತ-ಆಚರಣೆಗಳ ಮೂಲ ಬೇರನ್ನು ಸ್ವಲ್ಪಮಟ್ಟಿಗೆ ಗಮನಿಸಬೇಕಾಗುತ್ತದೆ.

ಸೈಂಧವ ಸಂಸ್ಕೃತಿಯ ಜನರಲ್ಲಿ ಲಿಂಗಧಾರಣವಿತ್ತು, ಅವರಲ್ಲಿ ಪಾಶುಪತ ಮತಾಚರಣೆ ಇತ್ತು. ಪಾಶುಪತರ ಯೋಗಿಗಳು ಚರಜಂಗಮರೆನಿಸಿದ್ದರು. ಪಾಶುಪತರೆನಿಸಿದ್ದ ವ್ರಾತ್ಯರಿಗೆ ಆಧಾರವಿದ್ದ ಆಗಮಗಳು ಪೂರ್ವ ದ್ರಾವಿಡ ಭಾಷೆಯಲ್ಲಿದ್ದುವು ಎನ್ನಲಾಗಿದೆ. ಈ ವ್ರಾತ್ಯ ಪಾಶುಪತರಲ್ಲಿ ಲಿಂಗಪೂಜೆ ಇತ್ತು. ಆ ಕಾಲದ ಪಾಶುಪತ ಯತಿಗಳು ಕರ ಪೀಠಾರ್ಚಕರಾಗಿದ್ದರು. ಭಗವಂತನ ಕುರುಹಾದ ಲಿಂಗವು 'ಮೂರ್ತಿ' ಅಲ್ಲ ಎಂದು ವೀರಶೈವವು ಭಾವಿಸಿದೆ. ಪಾಶುಪತ ಮುನಿಗಳು ತಮ್ಮ ಕರಪೀಠದಲ್ಲಿ ಭಗವಂತನನ್ನೂ ಅರ್ಚಿಸುತ್ತಿದ್ದರು.[೬-ಅ] ಸೈಂಧವ ಸಂಸ್ಕೃತಿಯ ರುದ್ರನ ಯೋಗಮೂರ್ತಿ (ಫಾಲಾಕ್ಷ ಸಿದ್ಧಿಯ ಮುನಿವರೇಣ್ಯ) ಯ ಹಣೆಯಲ್ಲಿ ನೋಡಿದರೆ ಮುಂಬದಿ ಕೇಂದ್ರದಲ್ಲಿ ವೃತ್ತಾಕಾರದ ಚಿಹ್ನೆಯಲ್ಲಿ ಬಹುಶಃ ಲಿಂಗರೂಪ ಇದ್ದಂತೆ ಕಾಣುತ್ತದೆ. ಅಂದರೆ ಶಿರೋಲಿಂಗಧಾರಿ ಇಷ್ಟಲಿಂಗೋಪಾಸಕರಿದ್ದು ಅವರ ಪ್ರತಿನಿಧಿ ರುದ್ರನಾಗಿದ್ದಿರಬಹುದು. ವ್ರಾತ್ಯರು ಅಂತಹ ದೇವಾಚರಣೆ ನಡೆಸಿರಬೇಕು. ಆಚಾರ್ಯಶಂಕರರು ಅವರನ್ನು ಪ್ರಕೃತಿಯಿಂದಲೇ ಶುದ್ಧರಾದವರು ಎಂದಿದ್ದಾರೆ. ಅವರದು ಆರ್ಯೇತರ ಭಾಷೆ. ವೇದಕಾಲದಲ್ಲಿ ವೀರಶೈವ ಎಂಬ ಹೆಸರಿನಲ್ಲಿ ಇಲ್ಲದಿದ್ದರೂ ಪಾಶುಪತ, ವ್ರಾತ್ಯಪಾಶುಪತ ಎಂಬ ಹೆಸರಿನಲ್ಲಿದ್ದು ಅವರಲ್ಲಿ ವೀರಶೈವ ಶಿರೋವ್ರತಿಗಳೂ ಕರಪೀಠಾರ್ಚಕರು, ಪಾಣಿಪೀಠಾರ್ಚಕರು, ಮುನಿಗಳು ಮುಂತಾದ ಹೆಸರುಗಳಿಂದ ಆ ಕಾಲದ 'ಜಂಗಮ'ರೆನಿಸಿದ್ದಾರೆ. 'ಅಯಂ ಮೇ ಹಸ್ತೋ ಭಗವಾನ್'- ವೇದ ಪುರುಷನಿಗೆ ಪ್ರಾಣಲಿಂಗಧಾರಣೆಯನ್ನು ವಿಧಿಸಿರುವ ಬಗೆ ಹಾಗಿರುವಲ್ಲಿ, ಶಿವದೀಕ್ಷಿತನಾದ ಪಾಶುಪತ ಜಂಗಮನು ಎಡಹಸ್ತ ಪೀಠದಲ್ಲಿ ಇಷ್ಟಲಿಂಗವನ್ನು ಇಟ್ಟು ಪೂಜಿಸುವ ಕಾರಣ ಆ ಹಸ್ತವು ಜೀವ ಸ್ವರೂಪ ಪಡೆದಿದೆ ಎಂಬುದು ಎಂ.ಜಿ. ನಂಜುಂಡರಾಧ್ಯರ ವಿಶ್ಲೇಷಣೆ. ಅಂತಾಗಿ ಎಡಹಸ್ತ ಪೀಠವೂ ದೇವಾಂಗವೇ ಆಗಿದೆ. ಆದಾಗಿ ವೀರಶೈವರಿಗೆ ಕರ ಪೀಠಾರ್ಚನೆ (ಅರ್ಥಾತ್ ಇಷ್ಟಲಿಂಗೋಪಾಸನೆ) ಮುಖ್ಯವಾದದ್ದು[೭] ಈ ಹಿನ್ನೆಲೆಯಲ್ಲಿ ಡಾ||

---

೬-ಅ. ಶಿವಾಗಮ ಸೌರಭ : (ಸಂ) ಎಂ. ಜಿ. ನಂಜುಂಡಾರಾಧ್ಯ, ಶ್ರೀ ಜಚನಿ ಅಧ್ಯಯನ ಪೀಠ ಮತ್ತು ಸಂಶೋಧನ ಸಂಸ್ಥೆ, ಬೆಂಗಳೂರು, ೧೯೮೬, ಪೀಠಿಕೆ, ಪು.xxi, xxiii, xxxiii

೭. ಎಂ.ಜಿ. ನಂಜುಂಡಾರಾಧ್ಯ : 'ವೇದ ಕಾಲದ ಜಂಗಮರು' : ಚಿನ್ಮೂಲಾದ್ರಿ ಚೇತನ (ಸಂ) ಜಿ. ಶಿವಕುಮಾರ್. ಎಂ.ಎಸ್. ಕರಿಬಸವಸ್ವಾಮಿ, ಎಸ್.ಎಂ. ವೀರಭದ್ರಯ್ಯ, ಚಿತ್ರದುರ್ಗ, ಪು.೧೯೮೯, ಪು.೧೮೫-೮೭

ಶ್ರೀ ಜಚನಿ ಅವರು ವೀರಶೈವವು ಅನಾದಿ ಪಾಶುಪತ ಮತದಿಂದುದಿಸಿವೆ ಎಂದು ತರ್ಕಬದ್ಧ ಚಿಂತನೆಯನ್ನೂ ಮುಂದಿಟ್ಟಿದ್ದಾರೆ. ಇನ್ನು ಆಗಮಗಳ ಹಿನ್ನೆಲೆಯಲ್ಲಿ ಲಿಂಗಗಳ ಬಗೆಯನ್ನು ಹೀಗೆ ನಿರೂಪಿಸಲಾಗಿದೆ.[೮]

ಮಹಾಲಿಂಗಂ

| ಭಾವಲಿಂಗಂ | ಪ್ರಾಣಲಿಂಗಂ | ಇಷ್ಟಲಿಂಗಂ |
|---|---|---|
| (ಪರಾತ್ಪರ) | (ಮನೋಗ್ರಾಹ್ಯ) | (ದೃಕ್ ಕಲಾಗ್ರಾಹ್ಯ-ಸಕಲ) |

ಅಂದರೆ ಇಷ್ಟಲಿಂಗದ ಕಲ್ಪನೆ ಆಗಮಗಳ ಕಾಲಕ್ಕೂ ಎಂದು ನಿದರ್ಶನವಾಗುತ್ತದೆ ಇತ್ತು.

ಹೀಗೆ ವಿಚಾರ ಮಾಡುವಲ್ಲಿ ವೀರಶೈವದ ಸಿದ್ಧಾಂತವಿರುವಲ್ಲಿ ಮಠದ ಕಲ್ಪನೆಯು ಒಡಮೂಡಿ ಬಂದಿರುವುದು ಸಹಜ. ಸಾಂಪ್ರದಾಯಿಕ ಪಂಚಪೀಠಗಳಿರಲಿ, ಗೋಸಲ ವಿರಕ್ತ ಪರಂಪರೆ ಇರಲಿ, ಶೂನ್ಯ ಸಿಂಹಾಸನದ ಸಂದರ್ಭವಿರಲಿ, ವೀರಶೈವ ಮಠಗಳು ಅವುಗಳ ಕಾರಣ ರೂಪವೇ ಆಗಿವೆ. ತಮ್ಮ ವಿಕಾಸದ ಹಾದಿಯಲ್ಲಿ 'ಮಂಟಪ' ಎಂದೇ ಆರಂಭವಾಗಿದ್ದರೂ ಬೌದ್ಧ, ಜೈನ, ವೈದಿಕ ಹಾಗೂ ಕಾಳಾಮುಖ ಮಠಗಳ ಸ್ವರೂಪ - ರಚನೆಗಳು ವೀರಶೈವ ಮಠಗಳ ಮೇಲೆ ಕಾಲೀನ ಪರಿಣಾಮಗಳನ್ನು ಬೀರಿವೆ. ಆದರೆ ಆ ಮಠಗಳೇ ವೀರಶೈವ ಮಠಗಳಾದುವು ಎಂಬುದು ಪೂರ್ಣಸತ್ಯವಾಗುವುದಿಲ್ಲ. ಇದನ್ನು ಗಮನಿಸದೆ ಶಾಸನಗಳ ಶಿಲ್ಪದಲ್ಲಿ ಕಾಣಬರುವ ಸ್ಥಾವರಲಿಂಗ ಹಾಗೂ ಇಷ್ಟಲಿಂಗೋಪಾಸಕರಾಗಿದ್ದು ವೀರಶೈವರೇ ಆದ ಪಾಶುಪತ ಮಾಹೇಶ್ವರ ಅರ್ಚಕರ (೧೧ನೇ ಶತಮಾನ) ಶಿಲ್ಪಗಳನ್ನು ಸಾರಾಸಗಟಾಗಿ ಕಾಳಾಮುಖರೆಂದು ಪರಿಗಣಿಸುವುದು ಸೂಕ್ತವಾಗುವುದಿಲ್ಲ. ಶ್ರೀಶೈಲ ಪರಂಪರೆಯು ವೀರಶೈವ ಶಿವಾಚಾರ್ಯ ಸಾನ್ನಿಧ್ಯದಿಂದ ಕೂಡಿದ್ದರೂ, ಸೀಮಿತ ಗ್ರಹಿಕೆಗಳ ಕಾರಣ 'ಕಲ್ಯಾಣಿ ಚಾಲುಕ್ಯರ ಕಾಲದ ಒಂದು ಪ್ರಸಿದ್ಧ ಕಾಳಾಮುಖ ಕೇಂದ್ರವಾಗಿ ಶ್ರೀ ಶೈಲವಿತ್ತು ಎಂಬ ಒಂದು ಅಭಿಪ್ರಾಯವನ್ನು[೯] ವ್ಯಕ್ತಪಡಿಸಲಾಗಿದೆ. ಆದರೆ ಅಂತಹ ಶಾಸನಗಳು ಶ್ರೀಶೈಲದಲ್ಲಿ ಲಭ್ಯವಾಗಿಲ್ಲ. ೮ನೆಯ ಶತಮಾನದ ಮುನ್ನಿನವರಾದ ಶ್ರೀಶೈಲ (ಸೂರ್ಯ ಸಿಂಹಾಸನ) ಪೀಠದ ಜಗದ್ಗುರು ಶ್ರೀ ಪಂಡಿತಾರಾಧ್ಯರು ಕಾಳಾಮುಖರನ್ನು ಶ್ವೇತಮುಖಿಗಳನ್ನಾಗಿ ಮಾಡಿ ಶ್ವೇತಾಚಾರ್ಯರೆಂದು ಪ್ರಸಿದ್ಧರಾಗಿದ್ದರು ಎಂದು ಪೀಠದ ಇತಿಹಾಸವಿದೆ.[೧೦] ಇಂತಿರುವಲ್ಲಿ ಶ್ರೀಶೈಲವು ಕಲ್ಯಾಣಿ ಚಾಲುಕ್ಯರ ಕಾಲಕ್ಕೆ ಕಾಳಾಮುಖರ ಪ್ರಸಿದ್ಧ ಕೇಂದ್ರವಾಗಿತ್ತು ಎನ್ನುವುದು ಸಮಂಜಸವಾಗದು. ಶ್ರೀಶೈಲಪೀಠ ಹಾಗೂ ಕಾಳಾಮುಖ ಮಠಗಳು ಬೇರೆ ಬೇರೆ ಎಂದು

೮. ಆಸೂರಿ ಸಂಪತ್ಕುಮಾರ ರಾಮಾನುಜ ಜೀಯರ್ ಸ್ವಾಮೀಜಿ : 'ಶೈವ ಶಿವಲಿಂಗಗಳು-ಅರ್ಥ, ತತ್ತ್ವ, ನಿರ್ಮಾಣ, ಪ್ರತಿಷ್ಠೆ, ಪ್ರಭೇದ', ಮಾಮಿಡಿ ಸಂ. ೩, ೧೯೮೨, ಪು.೮೨.

೯. ಎಚ್.ಎಸ್. ಗೋಪಾಲರಾವ್ : 'ಆಲಂಪುರ ಶಾಸನಗಳ ಅಧ್ಯಯನ' ; ಸತ್ಯಶುದ್ಧಕಾಯಕ, (ಸಂ) ಬಿ.ರಾಜಶೇಖರಪ್ಪ ಚಿತ್ರದುರ್ಗ, ಸಂ.೧, ಸಂ.೨, ೧೯೯೦, ಪು.೪೪

೧೦. ಡಾ|| ಶ್ರೀ. ಜಚನಿ : ಪ್ರತಿಭಾಸಿದ್ಧ ಪಂಡಿತಾರಾಧ್ಯರು, ಬೆಂಗಳೂರು, ೧೯೬೬, ಪು. ೨೭

ತಮಿಳುನಾಡಿನ ಶಾಸನಗಳಿಂದಲೂ ವಿದಿತವಾಗುತ್ತದೆ. ಅಲ್ಲದೆ ಎಂಟನೇ ಶತಮಾನದ ಪ್ರಸ್ತಾಪ ಬಂದಿರುವ ಹಿನ್ನೆಲೆಯಲ್ಲಿ ಜಿನಧರ್ಮಿಗಳಿಂದ ಸ್ಥಾಪಿಸಲಾಗಿರುವ ಗಂಗರ ಕಾಲದಲ್ಲಿ ಶಿವ ಧರ್ಮದ ಪ್ರಭಾವ ಹೇಗಿತ್ತು ಎಂಬುದನ್ನು ಶೋಧಿಸಬೇಕಾಗುತ್ತದೆ.

ರುದ್ರೋಪಾಸಕರಲ್ಲಿ ರುದ್ರ ಶಬ್ದದ ಕನ್ನಡ ರೂಪವಾದ ಕೆಂಪಯ್ಯ, ಕೆಂಪಣ್ಣ ಎಂಬ ಹೆಸರುಗಳನ್ನಿಡುತ್ತಾರೆ. ಹಾಗೆಯೇ ವೀರಭದ್ರನಿಗೆ ಕನ್ನಡದಲ್ಲಿ ಮಲ್ಲ, ರಾಚ, ಎನ್ನುತ್ತಾರೆ. ವೀರಭದ್ರೋಪಾಸಕರು ಮಕ್ಕಳಿಗೆ ಮಲ್ಲಯ್ಯ, ರಾಚಯ್ಯ ಎಂದು ಹೆಸರು ಹಾಕುತ್ತಾರೆ. 'ಮಲ್ಲ' ಎಂದರೆ ವೀರ ರಾಚ ಎಂದರೆ ಭದ್ರ, ಶುಭ ಎಂದರ್ಥ.[೧೦೭] ಇಲ್ಲಿ ಗಮನಾರ್ಹ ಅಂಶವೆಂದರೆ ರಾಚಮಲ್ಲ ಎಂಬ ಹೆಸರು ವೀರಭದ್ರನಿಗೆ ಅನ್ವಯವಾಗುವುದಂತಿದೆ. ಅಂದರೆ ಗಂಗ ಅರಸರಲ್ಲಿ ಬರುವ 'ರಾಚಮಲ್ಲ' ಎಂಬ ಹೆಸರು ವೀರಭದ್ರೋಪಾಸನೆಯ ಮೂಲ ಸೂಚನೆ ಹೊಂದಿರಬಹುದೆ ? ಎನಿಸುತ್ತದೆ. ಕೊಡಗಿನ ಗಂಗರ ಶಾಸನಗಳ ಸಂಬಂಧದಲ್ಲಿ ಇದು ಮತ್ತೂ ಗಮನಾರ್ಹವಾಗುತ್ತದೆ

ಗಂಗ ಅರಸರಲ್ಲಿ ಮೊದಲಿಗೆ ಜಿನಧರ್ಮಿಗಳಿದ್ದರೂ ನಂತರದಲ್ಲಿ ವೈಷ್ಣವ ಧರ್ಮಿಗಳೂ ಇದ್ದರು.[೧೦೮] ಅದರೆ ಶಾಸನಗಳು ಅವರನ್ನು ಜಾಹ್ನವೇಯ ಕುಲಸಂಭೂತರೆಂದಿವೆ. ಅಂದರೆ ಗಂಗೆ ಅವರ ವಂಶದ ತಾಯಿ. ಶಿವಗಣದ ಹೆಣ್ಣು. ಅಂತಾಗಿ ಗಂಗ ಅರಸರಲ್ಲಿ ಜಿನಧರ್ಮಿಗಳು, ವೈಷ್ಣವ ಧರ್ಮಿಗಳಿದ್ದಂತೆ ಶಿವಧರ್ಮಿಗಳೂ ಇದ್ದಿರಬೇಕು. ಮುಖ್ಯವಾಗಿ ರಾಚಮಲ್ಲ ಎಂಬ ಹೆಸರು ಅವರ ನಾಲ್ಕು ತಲೆಮಾರುಗಳ ಅರಸರಲ್ಲಿ ಕಾಣಬರುವುದು ಇದಕ್ಕೆ ಪೋಷಕವೆನಿಸುತ್ತದೆ. ಕ್ರಿ.ಶ. ೯೭೮ ರ ಶಾಸನದಲ್ಲಿಯೂ ಆ ಹೆಸರಿದೆ.[೧೦೯] ಗಂಗರ ರಾಜಧಾನಿ ತಲಕಾಡು, ಕೋಲಾರ, ಮಣ್ಣೆ ಯಾವುದೇ ಇರಲಿ ಅಲ್ಲಿ ಶಿವದೇವಾಲಯಗಳನ್ನು ಕಟ್ಟಿಸಿರುವುದು ಹಾಗೂ ವೀರಭದ್ರ ಶಿಲ್ಪಗಳಿರುವುದು ಕಾಣಬರುತ್ತದೆ. ಅಂದರೆ 'ವೀರಭದ್ರ' ಶಬ್ದದ ಕನ್ನಡ ರೂಪದ ಹೆಸರು ಹಾಗೂ ವೀರಭದ್ರ ಉಪಾಸನೆ ಮಾಡಿದ ಅರಸರೂ ಅವರಲ್ಲಿ ಇದ್ದಿರಬೇಕು. ವೀರಭದ್ರ, ಹಾಗೂ ವೀರಶೈವಕ್ಕೆ ಇರುವ ಸಂಬಂಧದ ಕಾರಣ ಶಿವಧರ್ಮಕ್ಕೂ ಅವರಿಂದ ಆಸರೆ ದೊರೆತಿರಬೇಕು. ೧೦ನೆಯ ಶತಮಾನದ ಅಂತ್ಯ ಮೀರಿ ಕೊಡಗನ್ನು ಆಳಿದ ಗಂಗರು ಜಿನಬಸದಿ ಜಿನಾಲಯಗಳ ಜೊತೆಗೆ, ಶಿವದೇಗುಲ, ಹಾಗು ವೀರಭದ್ರ ಉಪಾಸನೆಗೂ ಅನುವು ಮಾಡಿರಬೇಕು ವೀರಶೈವ. ಮಠಗಳಿಗೂ ಆಸರೆ ನೀಡಿರಬಹುದು. ಬಹುಶಃ ಈ ಸಂದರ್ಭದ ಬಲವು ಕಂಡೋ ಏನೋ ಶೈವ ಬ್ರಾಹ್ಮಣನಾದ ಛಂದೋಂಬುಧಿಯ ಕರ್ತೃ ಒಂದನೇ ನಾಗವರ್ಮನು ಕೊಡಗಿನ ಬೆದ್ದೂರಗರೆಯನ್ನು

೧೦೭. ಶ್ರೀ ಜಟನಿ : ಅಬ್ಬಾಳು ವೀರಭದ್ರ, ನಿಡುಮಾಮಿಡಿ ಪುಸ್ತಕ ಭಂಡಾರ, ಬೆಂಗಳೂರು, ೧೯೭೦, ಪು-೨೫

೧೦೮. ಡಾ|| ದೇಸಾಯಿ ಪಾಂಡುರಂಗರಾಯರು, ಡಾ|| ಬಿ.ಪಿ. ಸಾಲತ್ತೊರೆ, ಕನ್ನಡ ನಾಡಿನ ಚರಿತ್ರ (ಭಾಗ-೧) ಕನ್ನಡಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೩ (೬ನೆಯ ಮುದ್ರಣ), ಪು-೨೭.

೧೦೯. ಎ.ಕ. ಸಂಪುಟ, ೧(ಪರಿಷ್ಕತ) ಕೊಡಗು ಜಿಲ್ಲೆ, ೧೯೭೨, ಪೆಗ್ಗೂರು ೯೮, ಕೋತೂರು ೯೬-೯೭

ಆಳುತ್ತಿದ್ದ ನಾಲ್ವಡಿ ರಾಚಮಲ್ಲನ ತಮ್ಮ ರಕ್ಕಸಗಂಗನಲ್ಲಿಗೆ ಬಂದು ಆಶ್ರಿತಕವಿ ಆಗಿದ್ದಿರಬೇಕು. ಈ ರಕ್ಕಸ ಗಂಗನ ಆಶ್ರಿತ ಕವಿ ಅಷ್ಟೇ ಅಲ್ಲ ಯೋಧನೂ ಆಗಿದ್ದ ನಾಗವರ್ಮ.[೧೦-ಈ]

ಇಂತೆಲ್ಲ ಶಿವ ವೇದಿಕೆಯ ನಿರ್ಮಾಣವಿದ್ದ ಕೊಡಗಿನಲ್ಲಿ ಕ್ರಿ.ಶ. ೧೦೦೪ರಲ್ಲಿ ಚೋಳರು, ಗಂಗರನ್ನು ಸೋಲಿಸಿದರು. ಅಲ್ಲದೆ ಕಾವೇರಿಯ ಪೂರ್ವದಂಡೆಯಲ್ಲಿ (ಈಗಿನ ನಂಜರಾಯಪಟ್ಟಣದ ನಂಜುಂಡೇಶ್ವರ ದೇಗುಲದ ಬಲಬದಿಯ ಕಾವೇರಿ ದಂಡೆ) 'ಚೋಳ ಪ್ರತಿಷ್ಠಾ ವೀರಭದ್ರ'ನ ಪ್ರತಿಷ್ಠೆ ಮಾಡಿದರು.[೧೦ಉ] ಬಹುಶಃ ಶ್ರೀಶೈಲಪೀಠದ ಜ॥ ಚಂದ್ರ ಗುಂಡ ಶಿವಾಚಾರ್ಯರು ಹಾಗೂ ಅವರ ಹಿಂದಿನ ಗುರುಗಳಿಂದ ಪ್ರಭಾವಿತರಾಗಿ ವೀರಶೈವವನ್ನು ಅನುಸರಿಸಿದ ಕೆಲವು ಅರಸರು ಚೋಳರಲ್ಲಿಯೂ ಇದ್ದು, ಈ ವಿಗ್ರಹ ಪ್ರತಿಷ್ಠೆಗೆ ಕಾರಣರಾಗಿದ್ದಿರಬೇಕು. ಈ ವಿವೇಚನೆಯು ಕೊಡಗಿನಲ್ಲಿ ಚೋಳರ ಮುನ್ನವೂ ಹಾಗು ಅವರ ಕಾಲದಲ್ಲಿ ವೀರಶೈವ ಮಠಗಳ ಅಸ್ತಿತ್ವದ ಸೂಚನೆ ನೀಡುವಂತಿದೆ. ಈ ದಿಸೆಯಲ್ಲಿ ಚೋಳರಸರ ವೀರಶೈವ ಧರ್ಮಾನುಸರಣೆಯ ಉದಾಹರಣೆ ಶಾಸನಗಳ ಮೂಲಕವೂ ದೊರಕುವಂತಿದೆ.

ಕ್ರಿ.ಶ. ೧೦೪೯-೫೧ ರ ಒಂದನೇ ರಾಜಾಧಿರಾಜ ಚೋಳನ ತಮಿಳುನಾಡಿನ ಶಾಸನದಲ್ಲಿ 'ಪರ್ವತ್ತಿರ ಮಾಣಿಕ ಮಡಂ' ಎಂದು ಅಲ್ಲಿನ ಮಹಾದೇವರ್ ದೇಗುಲದಲ್ಲಿದ್ದ ಮಠದ[೧೧] ಬಗ್ಗೆ ಉಲ್ಲೇಖವಿದೆ. ಅಂದರೆ ಪಂಚಪೀಠಗಳಲ್ಲಿ ಒಂದಾದ ಶ್ರೀಶೈಲ ಪೀಠದ ಶಾಖಾ ಮಠವಿದಾಗಿರಬಹುದೆನ್ನಿಸುತ್ತದೆ. ಶ್ರೀಶೈಲಪೀಠಕ್ಕೆ 'ಪರ್ವತ ಪೀಠ' ಎಂದೂ ಹೆಸರಿರುವುದು ಹಾಗು ಮಾಣಿಕ್ಯ ಶಬ್ದದ ಅನ್ವಯಕ್ಕೆ ಅನುಗುಣವಾಗಿ 'ಮುಕ್ತಗುಚ್ಛ ಸೂತ್ರವು' ಗೋತ್ರಪ್ರವರದಲ್ಲಿ[೧೧-ಅ] ಕಾಣಬರುವುದು ಮೇಲಿನ ಮಾತಿಗೆ ಪೋಷಕವಾಗುತ್ತದೆ.

ಕ್ರಿ.ಶ. ೮೯೪ರಿಂದ ಕ್ರಿ.ಶ.೧೦೫೭ರ ವರೆಗಿನ ಚೋಳರಾಳ್ವಿಕೆಯ ಅನೇಕ ಶಾಸನಗಳಲ್ಲಿ ಶಿವದೇಗುಲಗಳಿಗೆ (ಮಹಾದೇವ, ಬಿಲ್ವಾಂತೇಶ್ವರ) ಅಂಟಿಕೊಂಡಂತೆ ಶೈವ ಮಠಗಳ ಮುಖ್ಯಸ್ಥರ ಹೆಸರುಗಳು ಕಾಣಬರುತ್ತವೆ. ಬ್ರಾಹ್ಮಣ, ಶೈವಬ್ರಾಹ್ಮಣ ಎಂಬ ಪ್ರತ್ಯೇಕ ವಿಂಗಡನೆಯೂ ಕಾಣಬರುತ್ತದೆ. ಮಠಗಳ ಮುಖ್ಯಸ್ಥರಾಗಿ ಮಾಹೇಶ್ವರರು ಇದ್ದ ಬಗ್ಗೆ ಹಾಗೂ ಬಲಿಮೂರ್ತಿ (ಉತ್ಸವಮೂರ್ತಿ)ಯಾಗಿ ಇದ್ದ ಪಾಶುಪತ ಮೂರ್ತಿಗಳ ವಿಗ್ರಹಗಳ ಬಗ್ಗೆ ಸಾಕಷ್ಟು ಉಲ್ಲೇಖಗಳಿವೆ.[೧೨] ಮಾಹೇಶ್ವರರೆಂದರೆ ವೀರಶೈವ ಜಂಗಮರೆನಿಸುವ ಕಾರಣ ಸ್ಥಾವರ

---

೧೦-ಈ. ಗೋವಿಂದ ಪೈ : 'ನಾಗವರ್ಮರು ಎಷ್ಟು ಮಂದಿ ?, ಕರ್ನಾಟಕ ಸಾಹಿತ್ಯ ಪರಿಷತ್ಪತ್ರಿಕೆ, ಬೆಂಗಳೂರು, ಸಂ-೨೦, ಸಂ.೧, ೧೯೩೫, ಪು. ೨೯-೬೨.

೧೦ಉ : Coorg. District Gazetteer : (Ed.). B.N.Satyan, 1965, Bangalore, PP 43-45.

೧೧. T.V. Mahalingam : A Topographical List of Inscriptions in the Tamilnadu and Kerala States, New Delhi, 1985 PP. 74-75.

೧೧-ಅ. ಶಿವಾಗಮ ಸೌರಭ : ಅದೇ, ಅನುಬಂಧ, ಪು.೯೦

೧೨. T. V.Mahalingam : Ibid, PP.4-285, S11, iii No.19, No.45, S11V.No.1365 Et.

ಲಿಂಗಾರ್ಚನೆಯೂ ಅವರಲ್ಲಿ ಬಳಕೆ ಇದ್ದುದರಿಂದ ಆ ದೇಗುಲದ ಮಠಗಳು ವೀರಶೈವ ಮಠಗಳಾಗಿದ್ದಿರಬೇಕು. ಪಾಶುಪತಮತ ವೆಂದೂ ವೀರಶೈವಕ್ಕೆ ಬಳಕೆ ಇದ್ದ ಕಾರಣ, ಜಂಗಮದ ಕಲ್ಪನೆಯನ್ನು ಅಳವಡಿಸಿಕೊಂಡ ಸಂಕೇತವಾಗಿ ಮೂಲಮೂರ್ತಿಯ ಬದಲು 'ಉತ್ಸವಮೂರ್ತಿ' ಯಾಗಿ ಪಾಶುಪತ ಮೂರ್ತಿಗಳಿದ್ದುದು ಪೂರಕ ಅಂಶವೆ ಆಗುತ್ತದೆ. ಜೊತೆಗೆ ಶ್ರೀಶೈಲಪೀಠದ ಜ॥ ಚಂದ್ರಗುಂಡ ಶಿವಾಚಾರ್ಯರು ತಮ್ಮ ಚೋಳಮಂಡಲ ಸಂಚಾರದಲ್ಲಿ ಹೈಹಯವಂಶದ ರಾಜೇಂದ್ರಚೋಳನಿಗೆ ಶಿವದೀಕ್ಷೆ ಇತ್ತು, ವೀರಭದ್ರಮೂರ್ತಿಗಳನ್ನು ಸ್ಥಾಪಿಸಿ ಅನೇಕ ಚೋಳವಂಶೀಯರನ್ನು ವೀರಶೈವಕ್ಕೆ ಆಕರ್ಷಿಸಿದರು,[೧೩] ಎಂಬ ಡಾ॥ ಶ್ರೀ ಜಚನಿ ಅವರ ನುಡಿಯೂ ಮಹತ್ವದ್ದಾಗುತ್ತವೆ. ಈ ದೃಷ್ಟಿಯಿಂದ ಚೋಳರು ನಿಷ್ಠಾವಂತ ಶೈವರಾಗಿದ್ದರು[೧೪] ಎಂಬ ಮಾತಿಗೆ ವೀರಶೈವದ ಸಂಬಂಧವು ಹೆಚ್ಚು ಅಡಕಗೊಳಿಸಬಹುದೆನ್ನಿಸುತ್ತದೆ. ಲಕುಲೀಶ ಮತ್ತು ಕಾಳಾಮುಖ ಮಠಗಳಿದ್ದ ಸ್ಥಳದಲ್ಲಿ ಇಂದು ವೀರಶೈವ ಮಠಗಳಿದ್ದು ಅವುಗಳ ಮೂಲ ಶೈವಮಠವೆಂದು ಹೇಳುವುದಿದ್ದರೂ,[೧೫] ಮೇಲಿನ ಮಠಗಳ ಅಸ್ತಿತ್ವವಿದ್ದ ಕಾಲದಿಂದಲೂ ಪ್ರಭಾವಯುತವಾಗಿದ್ದ ವೀರಶೈವ ಮಠಗಳಲ್ಲಿ ಅವು ಅಂತಿಮವಾಗಿ ಐಕ್ಯವಾದುವು ಎನ್ನುವುದು ಹೆಚ್ಚು ಸೂಕ್ತವಾಗುತ್ತದೆ. ಶೈವ ಶಾಖಾ ಮಠಗಳಿಂದ ವೀರಶೈವ ಮಠಗಳನ್ನು ಪ್ರತ್ಯೇಕಿಸಿ ನೋಡಿದಾಗ, ವೀರಶೈವ ಮಠಗಳ ಪ್ರಭಾವಯುತ ಅಸ್ತಿತ್ವವನ್ನು ತಮಿಳುನಾಡಿನ ಶಾಸನಗಳೂ ಕನಿಷ್ಠ ೯ನೇ ಶತಮಾನದಿಂದಲೇ ಗುರುತಿಸಿ ತೋರಿಸುವುದನ್ನು ಗಮನಿಸಬೇಕು.

ಒಟ್ಟಿನಲ್ಲಿ ಅನಾದಿ ಪಶುಪತಿ ಅರ್ಥಾತ್ ವೀರಶೈವ ಧರ್ಮದ ಸಂಸ್ಥಾಪಕ ರುದ್ರ.[೧೬] ಈ ಧರ್ಮಕ್ಕೆ ವೈದಿಕ ಸಂಸ್ಕೃತಿಯ ಒಳಿತುಗಳನ್ನು ತಳಹದಿಯ ಘಟಕಗಳನ್ನಾಗಿ ಶ್ವೇತಾರೋಪನಿಷತ್ತು ಸಂಯೋಗಿಸಿದೆ. ಗುರುವಿನಿಂದ ಶಿವದೀಕ್ಷೆಯ ಮೂಲಕ ಅಂಗಳದ ಲಿಂಗ ಅಂಗಕ್ಕೆ ಬರುವುದು ವೀರಶೈವದ ಲಿಂಗವಂತಿಕೆ. ಅಂದರೆ ಇಷ್ಟಲಿಂಗವಂತಿಕೆ ಗುರುವಿನಿಂದ ಅಂಗಸ್ಥಲಕ್ಕೆ ಬರುವುದು. ಚಂದ್ರಜ್ಞಾನಾಗಮದ ಚರ್ಯಾಪಾದದ ಎರಡನೆಯ ಪಟಲದ ಈ ಅಂಶ ರುದ್ರ-ಭದ್ರರ ಕಾಲದ್ದು, ಸೈಂಧವ ಸಂಸ್ಕೃತಿಯದು. ಅದಾಗಿ ಆದಿರೇಣುಕರ ಅನ್ವಯವೂ ಸೇರಿದಂತೆ ಸೈದ್ಧಾಂತಿಕವಾಗಿ ೧೨ನೆಯ ಶತಮಾನದವರೆಗೆ ಬೆಳೆಯುತ್ತ ಬಂದಿತು ಈ ಧರ್ಮ ಹಾಗೂ ಮುಖ್ಯವಾಗಿ ಬಸವಾದಿ ಪ್ರಮಥರಿಂದ ಪುನರುಜ್ಜೀವನಗೊಂಡಿತು ; ೧೫-೧೬ನೆಯ

೧೩. ಶ್ರೀ ಜಚನಿ : ಚಂದ್ರಗುಂಡ ಶಿವಾಚಾರ್ಯರು, ಬೆಂಗಳೂರು, ೧೯೬೪, ಪು.೬

೧೪. ಡಾ॥ ಎಂ. ಚಿದಾನಂದಮೂರ್ತಿ : ಅದೇ ಪು.೭೮೨

೧೫. ಡಾ॥ ಹೆಚ್.ಎಂ. ಸದಾಶಿವಯ್ಯ :'ವೀರಶೈವ ಮಠಗಳ ಪರಂಪರೆ,' ಸಿದ್ಧಗಂಗಾಶ್ರೀ (ಸಂ) ಚನ್ನಪ್ಪ ಎರೆಸೀಮೆ, ಟಿ.ಆರ್. ಮಹಾದೇವಯ್ಯ, ಸಿದ್ಧಗಂಗಾಕ್ಷೇತ್ರ, ೧೯೮೦, ಪು.೫೫೬

೧೬. ಡಾ॥ ಶ್ರೀ ಜಚನಿ : ರುದ್ರ ಭದ್ರ-ರೇಣುಕ, ಅದೇ, ಪು.೯೯

ಶತಮಾನದಲ್ಲಿ ಎಡೆಯೂರು ಸಿದ್ಧಲಿಂಗಯತಿಗಳಿಂದ ಹೊಸ ಆಯಾಮ ಪಡೆಯಿತು. ಅಲ್ಲದೆ ಈ ಧರ್ಮಕ್ಕೆ ೧೪ನೆಯ ಶತಮಾನದ ಮಾಧವರ 'ಸರ್ವದರ್ಶನ ಸಂಗ್ರಹ'ದಲ್ಲಿ ಪಾಶುಪತ ಮತ ಎಂದೇ ಹೆಸರಿರುವುದು ಗಮನಾರ್ಹವಾಗಿದೆ.[೧೭] ಇಂತೆಲ್ಲ ವಿಕಸಿಸಿದ ಧರ್ಮದ ಇತಿಹಾಸದೊಂದಿಗೆ ಯುಗದ ಅನ್ಯಪ್ರಭಾವಗಳನ್ನು ಮೇಳೈಸಿಕೊಂಡು ವೀರಶೈವ ಮಠಗಳು ಬದುಕಿ ಬಂದಿವೆ. ಪ್ರಸ್ತುತ ಮಲೆಸೀಮೆ, ಬಯಲುಸೀಮೆಯ ಈ ವೀರಶೈವ ಮಠಗಳನ್ನು ಕುರಿತು ತೌಲನಿಕ ಪರಿಶೀಲನೆಯನ್ನು ಕೊಡಗು, ಕೋಲಾರ ಹಾಗೂ ಹಾಸನ ಜಿಲ್ಲೆಗಳಿಗೆ ಸಂಬಂಧಿಸಿದಂತೆ ಮಾಡಲಾಗಿದೆ.

**ಕೊಡಗಿನ ವೀರ ಶೈವಮಠಗಳ ಹಿನ್ನಲೆ** : ಕೊಡಗಿನಲ್ಲಿ ನವಶಿಲಾಯುಗದಲ್ಲಿ ಜನರಿದ್ದ ಬಗ್ಗೆ, ಕ್ರಿ.ಪೂ.೧೦೭೫ರ ವೇಳೆಗೆ ಅಗಸ್ತ್ಯನು ದಕ್ಷಿಣಕ್ಕೆ ಕಾಲಿಟ್ಟಾಗ ಕೊಡಗಿಗೂ ಬಂದ ಬಗ್ಗೆ, ಸಂಗಂ ಸಾಹಿತ್ಯದಲ್ಲಿ ಕೊಡಗಿನ ಕುರಿತು ಉಲ್ಲೇಖಿಸಿರುವ ಬಗ್ಗೆ ಹೇಳಿರುವುದುಂಟು. ಗಂಗರ ಆಳ್ವಿಕೆಯಲ್ಲಿ ಜಿನಧರ್ಮದ ಪ್ರಭಾವವಿದ್ದರೂ ಶೈವಧರ್ಮದ ಪ್ರಭಾವವೂ ಇತ್ತು ಎನ್ನಲು ಶಾಸನಗಳು ಪರೋಕ್ಷ ಸಾಕ್ಷಿಯನ್ನು ಸೂಚಿಸುತ್ತವೆ. ಕೊಡಗಿನ ಸಾಂಸ್ಕೃತಿಕ ಪರಂಪರೆಯಲ್ಲಿ ಶಿವಧರ್ಮದ ಪ್ರಭಾವವೇ ಹೆಚ್ಚು ಕಾಣಬರುವುದು ಇದಕ್ಕೆ ಪೋಷಕವಾದ ಸಂಗತಿಯೇ ಆಗಿದೆ. ಇಲ್ಲಿನ ಗ್ರಾಮ ಗ್ರಾಮಗಳಲ್ಲಿ ಕಾಣಬರುವ ವೀರಭದ್ರ, ಭೈರವ, ಭದ್ರಕಾಳಿ, ಭಗವತಿ, ಚೌಡಿ (ಚೌಡೇಶ್ವರಿ), ಚಾಮುಂಡಿ, ಮಹಾದೇವ, ಅಯ್ಯಪ್ಪ (ಈಶ್ವರ), ಗಣಪತಿ, ಸುಬ್ರಮಣ್ಯ ಇತ್ಯಾದಿ ದೇವರಾರಾಧನೆಗಳು ಇಂದಿಗೂ ಪ್ರಚಲಿತವಾಗಿವೆ. ಐತಿಹಾಸಿಕವಾಗಿ ಶಾಸನ ಹಾಗೂ ಬರಹದ ದಾಖಲೆಗಳಲ್ಲಿ ಒದಗುತ್ತ ಮುಂಚಿನಿಂದಲೂ ಜನಪದ ಪರಂಪರೆಯಲ್ಲಿಯೂ ಶಿವಧರ್ಮವು ಇಲ್ಲಿ ಬೇರು ಬಿಟ್ಟಿರುವುದು ಕಾಣಬರುತ್ತದೆ. ಅದರಲ್ಲಿಯೂ ಚೋಳರ ಪ್ರಭಾವಕ್ಕೆ ಕೊಡಗಿನ ಚಂಗಾಳ್ವರು ಪೂರ್ಣವಾಗಿ ಒಳಗಾದ ಮೇಲೆ ಅಂದರೆ ಕ್ರಿ.ಶ. ೧೦೦೪ರ ಪನಸೋಗೆ ಯುದ್ಧದಲ್ಲಿ ಸೋತು ಅಧೀನರಾದ ಮೇಲೆ ಜೈನರಾಗಿದ್ದ ಅವರು ಕ್ರಮೇಣ ಶಿವಧರ್ಮದತ್ತ ವಾಲಿದರು. ಕ್ರಿ.ಶ. ೧೦೦೪ರ ವೇಳೆಗೆ ಚೋಳರಲ್ಲಿ ವೀರಶೈವಕ್ಕೆ ಒಲಿದ ಅರಸರೂ ಇದ್ದಿರಬೇಕು. ಅವರು ತಮ್ಮ ದೀಕ್ಷಾಗುರುಗಳನ್ನು ಅನುಸರಿಸಿ ವೀರಭದ್ರನ ಗುಡಿಗಳನ್ನೂ, ವೀರಶೈವಮಠಗಳನ್ನೂ ಸ್ಥಾಪಿಸುವಲ್ಲಿ ಆಸಕ್ತಿ ತೋರಿರಬೇಕು. ಕ್ರಿ.ಶ. ೧೦೦೪ರಲ್ಲಿ ಕೊಡಗಿಗೆ ಅವರು ಕಾಲಿಟ್ಟಾಗ (ಸೇನಾಪತಿ ಪಂಚವನ್ ಮಹಾರಾಯನ ಮೂಲಕ) ಕೊಡಗಿನ ಕಾವೇರಿಯ ಪೂರ್ವದಂಡೆಯಲ್ಲಿ 'ಚೋಳ ಪ್ರತಿಷ್ಠಾ

---

೧೭. ಟಿ.ಎನ್.ಮಲ್ಲಪ್ಪ : ವೀರಶೈವ ಧರ್ಮದ ಉಗಮ ಮತ್ತು ಪ್ರಗತಿ, ಬೆಂಗಳೂರು, ೧೯೭೯ ಪು. ೩ ಮತ್ತು ೭ ಹಾಗೂ ಎಂ.ಜಿ. ನಾಗರಾಜ್ : 'ಕೊಡಗಿನಲ್ಲಿ ವೀರಶೈವಧರ್ಮ' ; 'ಪರಿಪೂರ್ಣ' ಸಂತ ಅನ್ನಮ್ಮ ದೇವಾಲಯ ದ್ವಿಶತಮಾನೋತ್ಸವ ಸ್ಮರಣ ಸಂಚಿಕೆ (ಸಂ) ಸಿ.ಎಚ್. ಜಾಕೋಬ್‌ಲೋಬೋ, ವೀರರಾಜೇಂದ್ರಪೇಟೆ, ೧೯೯೩, ಪು.೯೦-೯೧.

ವೀರಭದ್ರ'ನನ್ನೂ ಪ್ರತಿಷ್ಠಾಪಿಸಿದರು[೧೮] ಎಂಬುದನ್ನು ಈ ಹಿಂದೆಯೇ ಹೇಳಿದೆ. ಕೊಡಗಿನ ಬಳುಗುಂದದ ೧೧ನೇ ಶತಮಾನದ ಆರಂಭದ ಹೊಸ ಶಾಸನದಲ್ಲಿ '... ಗೊರುಣಭದ್ರ ಗುರೋಃಪಿ.. ನಿಂಣಗಣ ಗೋಪತಿ ಕೋಕ್ಷ .. ಭದ್ರಗೋತ್ರಾ ಶಿಕ್ಷರ್ ಎಂದು ಕಾಣುವ ಸಾಲುಗಳಲ್ಲಿ ಬರುವ ಗೋಪತಿ ಬಹುಶಃ ಶ್ರೀಶೈಲಪೀಠದ ಜಗದ್ಗುರು ಶ್ರೀ ಚಂದ್ರಗುಂಡ ಶಿವಾಚಾರ್ಯರಿಗೆ ಅನ್ವಯವಾಗುವುದು[೧೯] ಮೇಲಿನ ಘಟನೆಗಳಿಂದ ಸೂಚನೆ ಕಾಣುತ್ತದೆ. ಅವರ ಪೂರ್ವಾಶ್ರಮದ ಹೆಸರು ಗೋಪತಿ ಎಂದಿದ್ದು ಶಾಸನದಲ್ಲಿ ಅದನ್ನು ಬಳಸಿರುವಂತಿದೆ. ಪಂಚವನ್ ಮಹಾರಾಯನ ಹೆಸರಿನಲ್ಲಿ ವೀರಭದ್ರನ ಗುಡಿಯು ನೆರೆಯ ದುಬಾರೆ ಕಾಡಿನಲ್ಲಿ ಪಂಚಲಿಂಗೇಶ್ವರ ಗುಡಿಯೂ ಆ ನಂತರದಲ್ಲಿ ಚಂಗಾಳ್ವರಿಂದ ನಿರ್ಮಾಣಗೊಂಡಿರುವಂತಿದೆ. ಚಂಗಾಳ್ವರೊಡನಾದ ಯುದ್ಧದಲ್ಲಿ ಕೊಂಗಾಳ್ವರ ಮನಿಜ ತೋರಿದ ಸಾಹಸದ ಕಾರಣ ಮಾಲಂಬಿಯಲ್ಲಿ ಚೋಳರಿಂದ ಪಟ್ಟವಾಗಿ ಕೊಂಗಾಳ್ವವಂಶ ಸ್ಥಾಪಕನಾದ.

ಜೈನರಾಗಿದ್ದ ಕೊಂಗಾಳ್ವರು ಚೋಳರ ಅಧೀನರಾಗಿ ಶಿವಧರ್ಮದ ಪ್ರಭಾವಕ್ಕೆ ತುಸುಮಟ್ಟಿಗೆ ಸಿಲುಕಿದರೂ ಚಂಗಾಳ್ವರಂತೆ ವೀರಶೈವಧರ್ಮದಲ್ಲಿ ಉಳಿದರು ಎನ್ನುವಂತಿಲ್ಲ. ಅಲ್ಲದೆ ರಾಜೇಂದ್ರಚೋಳನು (ಕ್ರಿ.ಶ. ೧೧೦೪-೪೨) ಶ್ರೀಶೈಲ ಜ|| ಚಂದ್ರಗುಂಡ ಶಿವಾಚಾರ್ಯ ಅನುಗ್ರಹಕ್ಕೆ ಒಳಗಾದವನು, ಗಂಗರನ್ನು ಸೋಲಿಸಿದವನು. ಹಾಗೂ ನಂದಿಬೆಟ್ಟದ ಜೈನಬಸದಿಗಳನ್ನು ಶ್ರೀಗಳವರು ನಂದೀಶ್ವರ ದೇಗುಲವಾಗಿ ಮಾರ್ಪಡಿಸಿದ್ದು ಈ ಸಮಯದಲ್ಲಿಯೇ ಇರಬೇಕು.[೨೦] ಈ ಸಂದರ್ಭದಲ್ಲಿ ಕೊಡಗಿನಲ್ಲಿದ್ದ ಚಂಗಾಳ್ವರಸರ ಶಾಖೆಯು ೧೧ನೆಯ ಶತಮಾನದಲ್ಲಿ ವೀರಶೈವ ಧರ್ಮ ಪ್ರಭಾವಕ್ಕೆ ಒಳಗಾಗಿರುವಂತಿದೆ. ಈ ಮೊದಲೂ ೧೦ನೆಯ ಶತಮಾನದಲ್ಲಿ ಶ್ರೀಗಿರಿ ಎಂದು ಹೆಸರಾಗಿದ್ದ ಬೆಟ್ಟದಪುರದ ಅನ್ನದಾನಿ ಮಲ್ಲಿಕಾರ್ಜುನದೇವರ ಭಕ್ತನಾಗಿದ್ದ ಕುಲೋತ್ತುಂಗಚೋಳನಂತೆ, ಚಂಗಾಳ್ವ ಅರಸರೂ ಆ ದೇವರ ಭಕ್ತರಾಗಿದ್ದರು.[೨೧] ಆ ಕಾಲಕ್ಕೆ ಬೆಟ್ಟದಪುರ, ರಾಮನಾಥಪುರ, ಸಕಲೇಶಪುರವು ವನಸೋರಿಗೆ ಸಹಿತವಾಗಿ ಕೊಡಗಿನ ಭಾಗಗಳಾಗಿದ್ದುದು ಪ್ರಾಚೀನ ಭೂಪಟಗಳಿಂದ ವಿದಿತವಾಗುತ್ತದೆ.[೨೨] ಜೈನರಾಗಿದ್ದ ಚಂಗಾಳ್ವರು ಹೀಗೆ ಶಿವಭಕ್ತಿಗೆ ತೆರೆದುಕೊಳ್ಳುತ್ತ ಬಂದು ಚೋಳರಿಗೆ ಅಧೀನರಾಗಿದ ಮೇಲೆ ಕೊಡಗಿನ ಚಂಗಾಳ್ವರು ಬೆಟ್ಟದ ಪುರದ ಮೂಲಮಠದ ಅನ್ನದಾನಿ ಮಲ್ಲಿಕಾರ್ಜುನನನ್ನು

---

೧೮. Coorg District Gazetteer, Bangalore, 1965. pp.೪೩೦-೪೫

೧೯. ಎಂ.ಜಿ. ನಾಗರಾಜ್ : 'ಕೊಡಗಿನ ಕೊಲೆ ಕಲ್ಲುಗಳು'- ಹರತಿಸಿರಿ (ಸಂ) ಲಕ್ಷ್ಮಣ ತೆಲಗಾವಿ, ಹರ್ತಿಕೋಟೆ ೧೯೮೭, ಪು-೭೨೦

೨೦. ಎಂ.ಜಿ. ನಂಜುಂಡಾರಾಧ್ಯ : ಶ್ರೀ ನಿಡುಮಾಮಿಡಿ ಶ್ರೀಶೈಲಪೀಠ ಪರಿಚಯ-ಮಾಮಿಡಿ ಸಂ.೪, ಸಂ.೧೬, ೧೯೮೪ ಗೂಳೂರು, ಪು.೪೭

೨೧. ಎಂ.ಜಿ. ನಾಗರಾಜ್ : 'ಕೊಡಗಿನಲ್ಲಿ ವೀರಶೈವ ಧರ್ಮ', ಅದೇ, ಪು.೯೭

೨೨. I.M. Muthanna : A Tiny Model State of south India, Coorg, 1953, p.26

ಶ್ರೀಶೈಲ ಪೀಠದ ವಿ|| ಚಂದ್ರಗುಂಡ ಶಿವಾಚಾರ್ಯರ ಕಾರಣವಾಗಿ ಶ್ರೀಶೈಲ ಪೀಠ ಸಂಪ್ರದಾಯದವರಾಗಿ ತಮ್ಮ ಕುಲದೇವರನ್ನಾಗಿಸಿಕೊಂಡು ವೀರಶೈವ ಧರ್ಮವನ್ನು ಪೂರ್ಣವಾಗಿ ಅನುಸರಿಸಿದಂತೆ ಕಾಣುತ್ತದೆ. ಅದರಿಂದ ಚಂಗಾಳ್ವರಸರ ದಸ್ಯಕಪ್ಯಾದಿ ಧಾರ್ಮಿಕ ಆಚರಣೆಗಳಿಗೆ ವೀರಶೈವದ ಸಹಜ ಅಂಗವಾದ ಮಠಗಳು ಮೊದಲಿಗಿಂತ ಹೆಚ್ಚು ಸಂಖ್ಯೆಯಲ್ಲಿ ಅಗತ್ಯವಾಯಿತು. ಕೊಡಗಿನಲ್ಲಿ ಬಹುಶಃ ೧೧ನೆಯ ಶತಮಾನದ ಮುಂಚೆಯೇ ವೀರಶೈವ ಮಠಗಳು ರೂಪುಗೊಂಡು ಕಾಲಾಂತರದಲ್ಲಿ ಗುರುಸ್ಥಲ, ವಿರಕ್ತ ಹಾಗು ಸಂಸಾರಿ ಮಠಗಳಾಗಿ ವಿಂಗಡಣೆಗೊಂಡವು. ಅಂದರೆ ಹಾಲೇರಿ ಅರಸರ ಮುನ್ನವೆ ಕೊಡಗನ್ನಾಳಿದ ಕೆಲವರಸರು ವೀರಶೈವಧರ್ಮವನ್ನನುಸರಿಸಿ, ಮಠಗಳನ್ನು ರೂಪಿಸಿ, ಜನತೆಯ ಸಾಂಸ್ಕೃತಿಕ ವಲಯದಲ್ಲಿ ಪ್ರಭಾವ ಬೀರಿದ್ದರು ಎಂದಾಗುತ್ತದೆ. ಕೊಡಗಿನ ಅನೇಕ ಶಾಸನಗಳೂ ಈ ಮಾತಿಗೆ ಇಂಬುಗೊಡುತ್ತವೆ. ಚಂಗಾಳ್ವರಾಳಿಕೆಯಲ್ಲಿಯೂ ಬಹುಶಃ ಸ್ಥಾಪಿತವಾದ ಬೆಟ್ಟದ ಪುರದ ಶಾಖಾಮಠಗಳು ಅಮ್ಮತಿನಾಡಿನಲ್ಲಿ ಇದ್ದ ಬಗ್ಗೆ ಸಾಕ್ಷ್ಯಗಳು ಇಂದೂ ದೊರಕುತ್ತಿವೆ. ಪೂರ್ವಚಂಗಾಳ್ವರ ಕಾಲದಲ್ಲಿಯೂ ರೂಪುಗೊಂಡ ಕೊಡಗಿನ ವೀರಶೈವ ಮಠಗಳು ೧೫ನೇ ಶತಮಾನದ 'ನಂತರದ ಚಂಗಾಳ್ವರ' ಕಾಲದಲ್ಲಿ ಮತ್ತಷ್ಟು ಸಂಖ್ಯೆಯಲ್ಲಿ ವೃದ್ಧಿಗೊಂಡಂತಿದೆ. ಅಪ್ಪಿಮಠದ ಬಳಿಯ ಮಲ್ಲಿಕಾರ್ಜುನ ಗುಡಿಯ ಅಸ್ತಿತ್ವ ಹಾಗೂ ಕ್ರಿ.ಶ. ೧೪೬೪ ರ ಆ ಗುಡಿಯ ಹೊಸ ಶಾಸನದ ಸಂಗತಿಗಳು ಅಲ್ಲಿ ಮೊದಲಿಗೆ ಗುರುಸ್ಥಲದ ಮಠವೊಂದಿತ್ತು ಎಂಬ ಸೂಚನೆಯನ್ನು ನೀಡುವಂತಿದೆ.

ಕ್ರಿ.ಶ. ೧೧೭೫ ರ ನಂದಿಗುಂದ ಶಾಸನದಲ್ಲಿ ಬರುವ 'ಗಣಪೂರು' ಗ್ರಾಮಕ್ಕೆ ವೀರಶೈವದ ಗಣಾಚಾರದ ಸಂಬಂಧವಿದ್ದು ಅಲ್ಲಿ ಮಠವೊಂದರ ಅಸ್ತಿತ್ವವನ್ನು ಸೂಚಿಸುವಂತಿದೆ. ಅಲ್ಲಿನ ಕ್ರಿ.ಶ. ೧೫೯೨ರ ಶಾಸನವು ಚಂಗಾಳ್ವರ ಪೆರಿಯರಾಜ ರುದ್ರಗಣ ತನ್ನ ತಂದೆ ತಾಯಿಗಳಿಗೆ ಕೈಲಾಸ ಪದವಿ ಒದಗಲೆಂದು ಭೂದಾನ ನೀಡಿದ ಸಂಗತಿ ಹೇಳುತ್ತದೆ. ನಂಜರಾಯಪಟ್ಟಣದ ಕ್ರಿ.ಶ. ೧೨೯೮ರ ಹೊಸ ಶಾಸನದ ರೀತ್ಯಾ ಅಲ್ಲಿದ್ದ ಕೊಡಗು ಶ್ರೀರಂಗಪಟ್ಟಣವನ್ನು ವೀರ ಚೋಳ ಚಂಗಾಳ್ವ ಆಳುತ್ತಿದ್ದ. ಅವನ ಶಿವಾಚಾರದ ದಸ್ಯಕಪ್ಯಾದಿ ಕರ್ಮಗಳಿಗೆ ಮಠವೊಂದಿದ್ದು ಶಿವಾನಂದಸ್ವಾಮಿಮಠ ಎಂಬ ಹೆಸರಿದ್ದಂತೆ ಕಾಣುತ್ತದೆ. ಅದು ಹಾಲೇರಿ ಅರಸರ ಕಾಲದಲ್ಲಿಯೂ ಪ್ರಸಿದ್ಧವಾಗಿತ್ತು. ಹಾಗೆಯೆ ಕ್ರಿ.ಶ. ೧೨೪೫ರ ವೇಳೆಗೆ ಪಾಲ್ಪರೆಯ ಚಂಗಾಳ್ವರ ಆಳ್ವಿಕೆಯಲ್ಲಿ ಸುತ್ತಮುತ್ತ ವೀರಶೈವ ಮಠಗಳು ಸ್ಥಾಪಿತವಾಗಿದ್ದವು. ಅವುಗಳ ಪಳೆಯುಳಿಕೆಗಳಾಗಿ ಕೆಲವು ಇಂದೂ ಹೆಸರಿನಲ್ಲಿಯಾದರೂ ಉಳಿದುಕೊಂಡಿವೆ.

ಕ್ರಿ.ಶ.೧೫೮೬ ಸುಮಾರಿಗೆ ಇಕ್ಕೇರಿಯಿಂದ ರಾಮರಾಜನಾಯಕನ ಹಿರಿಯಮಗ ವೀರರಾಜ ಒಡೆಯ ಕೊಡಗಿಗೆ ಬಂದು ಹಾಲೇರಿಯಲ್ಲಿ ಹಾಲೇರಿ ರಾಜವಂಶ ಸ್ಥಾಪಿಸಿದ. ಅವನು ಚಂಗಾಳ್ವ ಪೆರಿಯರಾಜ ರುದ್ರಗಣನ ಕುಮಾರಿಯನ್ನು ಮದುವೆಯಾದ. ನಂತರ ತನಗೆ ಅವಳಲ್ಲಿ ಜನಿಸಿದ

ಒಬ್ಬ ಮಗನನ್ನು ಪೆರಿಯಾಪಟ್ಟಣವಾಳ್ವಿಕೆಗೆ ಕಳುಹಿಸಿದಂತೆ ತೋರುತ್ತದೆ.[೨೩]. ವೀರರಾಜ ಒಡೆಯನು ಹಾಲೇರಿ ಮಠಗಳನ್ನು ಜಂಗಮನೂ ಆಗಿದ್ದ ಕಾರಣ ರೂಪಿಸಿದ. ಇದಲ್ಲದೆ ಕೆಳದಿ ಅರಸರೂ ಕೊಡಗಿನಲ್ಲಿ ವಿರಕ್ತ ಸಂಪ್ರದಾಯದ ಜಂಗಮ ಮಠಗಳನ್ನೂ ಸ್ಥಾಪಿಸಿದರು.[೨೪] ಅಂದರೆ ಕೆಳದಿಗೆ ಕ್ರಿ.ಶ. ೧೪೫೦ರ ಸುಮಾರಿನಲ್ಲಿ ಪೂರ್ವ ಚಂಗಾಳ್ವರ ಒಂದು ಶಾಖೆ ಕೊಡಗಿನಿಂದ ವಲಸೆ ಹೋಗಿದ್ದು[೨೫] ಕೆಳದಿ ರಾಜ್ಯ ರೂಪುಗೊಂಡ ಮೇಲೆ ತಮ್ಮ ಪೂರ್ವವಂಶಿಕರ ನೆಲೆಯಾದ ಕೊಡಗಿನಲ್ಲಿಯೂ ವೀರಶೈವ ಮಠಗಳನ್ನು ಸ್ಥಾಪಿಸಿರುವಂತಿದೆ. ಅಂತೇ ಹಾಲೇರಿಯ ಮೊದಲ ವೀರರಾಜ ಪ್ರಾಯಶಃ ಚೆಂಗಾಳ್ವರಾಜರ ಸಂತಾನದವನಾಗಿರಬಹುದು ಎಂಬ ಮಾತು[೨೬] ಗಮನಾರ್ಹವಾಗುತ್ತದೆ ಹಾಗೂ ಚಂಗಾಳ್ವ ಕೆಳದಿ-ಹಾಲೇರಿ ಅರಸರ ದಾಯಾದಿ ಸಂಬಂಧಗಳ ಸೂಚನೆ ದೊರೆಯುತ್ತದೆ.

ಹಾಲೇರಿ ಅರಸರಲ್ಲಿ ವೀರರಾಜೇಂದ್ರ ಒಡೆಯ ೬೩ ವೀರಶೈವ ಆಚಾರ್ಯರನ್ನು ನೇಮಿಸಿದರೆ ಲಿಂಗರಾಜ ಒಡೆಯ ೬೩ ಜಂಗಮ ಮತ್ತು ಪಟ್ಟದ ಮಠಗಳನ್ನು ರೂಪಿಸಿದ ಎಂಬ ಮಾತಿದೆ.[೨೭] ಆದರೆ ಕೊಡಗಿನಲ್ಲಿ ೧೦೮ ಮಠಗಳಿದ್ದ ಬಗ್ಗೆ ಪುರಾವೆಗಳಿವೆ. ಬಹುಶಃ ೬೩ ಪುರಾತನ ಸಂಕೇತವಾಗಿ ಹಿಂದಿನ ೪೫ ಮಠ ಜೊತೆಗೆ ೬೩ ಮಠಗಳನ್ನೂ ರೂಪಿಸಿದಂತಿದೆ. ಜೊತೆಗೆ ಒಂದು ಕೊಂಬು ಕೂಗಿದಾಗ ಶಬ್ದ ಕೇಳಿಸುವಷ್ಟು ದೂರದಲ್ಲಿ ಒಂದೊಂದು ಮಠ ಇರಬೇಕು ಎಂಬುದು ಹಾಲೇರಿ ಅರಸರ ಇಚ್ಛೆ ಆಗಿತ್ತು ಎಂಬುದು ಜನ ಪ್ರತೀತಿ. ಶಿರಿಬಾಯಿ ದೊಡ್ಡವೀರಪ್ಪ ಒಡೆಯನ ಕಾಲದಲ್ಲಿ ಕೊಡಗಿನಲ್ಲಿ ೨೮ ನಾಡುಗಳಿದ್ದು, ಒಂದು ನಾಡಿಗೆ ಕನಿಷ್ಠ ೪ ಮಠಗಳು ನಾಲ್ದಿಸೆಯಲ್ಲಿ ಇರುವಂತೆ ಮಠಗಳು ನಿರ್ಮಾಣವಾದಂತಿವೆ ಹಾಗೂ ೧೦೮ ಮಠಗಳು ಒಟ್ಟಾರೆ ಇದ್ದು ಅವುಗಳಿಗೆ ದಾನ ದತ್ತಿಗಳನ್ನೂ ನೀಡಲಾಗಿತ್ತು.

ಕೊಡಗಿನಲ್ಲಿದ್ದ ೫೭ ಮಠಗಳಿಗೆ ಒಟ್ಟು ೩,೧೫೫೭ ಭಟ್ಟಿ ಭೂಮಿ ದತ್ತಿ ಇತ್ತು. ಅವುಗಳಲ್ಲಿ ಬಸವನಹಳ್ಳಿ ಮಠಕ್ಕೆ ೪೧೦೫ ಭಟ್ಟಿ, ಅಬ್ಬಿಮಠಕ್ಕೆ ೪೦೦೫ ಭಟ್ಟಿ, ಮಾದಾಪುರ ಮಠಕ್ಕೆ ೨೬೪೩ ಭಟ್ಟಿ, ಸಿದ್ದಾಪುರ ಮಠಕ್ಕೆ ೨೩೭೨ ಭಟ್ಟಿ, ಅಮ್ಮತ್ತಿನಾಡಿನ ತಾನಡಿ ಮಠಕ್ಕೆ ೧೧೮೨ ಭಟ್ಟಿ, ಚಡವರಹಳ್ಳಿ ಮಠಕ್ಕೆ ೧೪೩೦ ಭಟ್ಟಿ ಜಪವಕಟ್ಟೆ ಮಠಕ್ಕೆ ೧೧೮೩ ಭಟ್ಟಿ ತೊರೆನೂರು ಮಠಕ್ಕೆ ೧೧೦೦ ಭಟ್ಟಿ ಭೂಮಿ ದಾನವಿತ್ತು(ನೂರು ಭಟ್ಟಿಭೂಮಿ ಎಂದರೆ ಸುಮಾರು

೨೩. ರಾಜೇಂದ್ರ ನಾಮೆ-(ಸಂ) ಡಿ.ಎನ್. ಕೃಷ್ಣಯ್ಯ, ಪು.೪ (ಇಲ್ಲಿನ ಕ್ರಿ.ಶ. ೧೬೪೪ರ ನಂಜುಂಡ ಅರಸುವಿಗೆ ಹಾಲೇರಿ ಅರಸ ಮುದ್ದುರಾಜನು ಹೇಳುವ ಮಾತಿನಿಂದ ಈ ಸೂಚನೆ ದೊರೆಯುತ್ತದ)

೨೪. ಕೆಳದಿಗುಂಡಾಜೋಯಿಸ್ : ಇಕ್ಕೇರಿಯ ಐತಿಹಾಸಿಕ ಹಿನ್ನಲೆ, ಕೆಳದಿ,. ೧೯೭೫, ಪು.೭೫

೨೫. ಎಂ.ಜಿ. ನಾಗರಾಜ್ : 'ಕೊಡಗಿನಲ್ಲಿ ವೀರಶೈವದ ಚಾರಿತ್ರಿಕ ವಿಕಾಸ ಮತ್ತು ಪ್ರಭಾವ' : ಸಂಶೋಧನೆ (ಸಂ)ಲಕ್ಷ್ಮಣ ತೆಲಗಾವಿ, ಬೆಂಗಳೂರು, ೧೯೯೧, ಪು.೬೩೯

೨೬.ಸ. ಪಟ್ಟೋಲೆ ಪಳಮೆ :(ಸಂ) ನಡಿಕೇರಿಯಂಡ ಚಿಣ್ಣಪ್ಪ, ಮೈಸೂರು ವಿಶ್ವವಿದ್ಯಾಲಯ, ೧೯೭೫, ಪು.೨೪

೨೭. ತಾಮ್ರ ಹಡ್ಲು ಮಠದ ಮುಖ್ಯಸ್ಥ ಜಂಗಮ ಚನ್ನವೀರಯ್ಯ ಅವರು ತಿಳಿಸಿದ ವಿಷಯ.

ಮೂರೂವರೆ ಎಕರೆ) ಎಂದು ರಿಕ್ಟರ್ ತನ್ನ ಗ್ಯಾಸೆಟಿಯರ್‌ನಲ್ಲಿ ಹೇಳಿದ್ದಾನೆ. ಆದರೆ ಒಂದು ಕಾಲಕ್ಕೆ ೧೦೮ಮಠಗಳು ಇದ್ದುದ್ದು ಅದನು ತಿಳಿಯದೆ ತಾನು ಕಂಡ ಸಂದರ್ಭದಲ್ಲಿದ್ದ ಮಠಗಳನ್ನು ಮಾತ್ರ ಹೆಸರಿಸಿರುವಂತಿದೆ. ವಾಸ್ತವವಾಗಿ ಇಂದಿಗೂ ೯೩ ಮಠಗಳ ಹೆಸರು ತಿಳಿದು ಬರುವಲ್ಲಿ ರಿಕ್ಟರನ ಹೇಳಿಕೆ ವೀರಶೈವ ಮಠಗಳನ್ನು ಕುರಿತಂತೆ ಸಮಂಜಸವಾಗಿಲ್ಲ ಹಾಗೂ ಮಠಗಳ ಚಟುವಟಿಕೆಗಳ ಬಗ್ಗೆ ಪೂರ್ವಗ್ರಹಪೀಡಿತ ಹೇಳಿಕೆಗಳನ್ನು ನೀಡಿದ್ದಾನೆ ಎಂದೆನಿಸುತ್ತದೆ.

ಉತ್ತರ ಕರ್ನಾಟಕದಲ್ಲಿ ಸಾಮಾನ್ಯವಾಗಿ ಕಂಡುಬರುವ ಹಿರೇಮಠಗಳ ಹೆಸರು ಕೊಡಗಿನಲ್ಲಿಲ್ಲ. ಗುರುಸ್ಥಲ ಸಿಂಹಾಸನ ಪೀಠಗಳಾದ ಬಾಳೆಹೊನ್ನೂರು, ಶ್ರೀಶೈಲ, ಉಜ್ಜಯಿನಿ ಹಾಗೂ ಶ್ರೀ ಶೈಲ ಸಿಡುಮಾಮಿಡಿ ಸಂಪ್ರದಾಯದ ಮಠಗಳು, ವಿರಕ್ತ ಸಂಪ್ರದಾಯದ ಶೂನ್ಯಸಿಂಹಾಸನದ ಅಲ್ಲಮಪ್ರಭು ಶಿಷ್ಯಪರಂಪರೆಯ ಮುರುಘಾ, ಚೀಲಾಳ ಹಾಗೂ ಲೀಲಾಖ್ಯ ಸಮಯದ ಮಠಗಳು ಕಾಣಬರುತ್ತವೆ. ಆದರೆ ಎರಡೂ ಸಂಪ್ರದಾಯದ ಸಂಸಾರಿ ಮಠಗಳೂ ಇಂದು ಇಲ್ಲಿವೆ. ಬಹುಶಃ ವಾಶೀಕೃತ ಮಠಗಳಾಗಿ ಪರಿವರ್ತನೆಯಾದಂತಹ ಮಠಗಳಿವು. ಈ ದಿಸೆಯಲ್ಲಿ ಕೆಲವು ಮಠಗಳ ವಿವರವನ್ನು ಪ್ರಾತಿನಿಧಿಕವಾಗಿ ಗಮನಿಸಬಹುದು.

**ಅಬ್ಬಿಮಠ:** ಕೊಡಗಿನ ಪ್ರಾಚೀನ ಮಠಗಳ ಪೈಕಿ ಒಂದಾಗಿದ್ದು, ಶಾಸನ ಹಾಗು ದಾಖಲೆಗಳಲ್ಲಿ ಉಲ್ಲೇಖಗೊಂಡಿದೆ. ಕ್ರಿ.ಶ. ೧೭೨೮ರ ಅಬ್ಬಿಮಠ ಶಾಸನದಲ್ಲಿ ಈ ಮಠಕ್ಕೆ ಒದಗಿದ ಗ್ರಾಮದಾನದ ಸಂಗತಿ ಇದೆ. ಕ್ರಿ.ಶ.೧೭೯೬ರಲ್ಲಿ ಜೀರ್ಣೋದ್ಧಾರವಾದ ಸಂಗತಿ ಈ ಮಠಕ್ಕೆ ಸಂಬಂಧಿಸಿದ ಇನ್ನೊಂದು ಶಾಸದಲ್ಲಿದೆ. ಕ್ರಿ.ಶ. ೧೮೬೮ರ ಸುಮಾರಿನಲ್ಲಿ ಹುಲಸೇಗ್ರಾಮದ ಜಂಗಮ ಈರಯ್ಯ ಬರೆದ ಹಸ್ತ ಪ್ರತಿಯಲ್ಲಿ ಚಿತ್ರದುರ್ಗದ ಶೂನ್ಯಸಿಂಹಾಸನಕ್ಕೆ ಸೇರಿದ ಮುರುಘಾಸ್ವಾಮಿಗಳ ಶಿಷ್ಯ ಶಾಂತಮಲ್ಲಿಕಾರ್ಜುನ ಸ್ವಾಮಿಗಳು ಇಲ್ಲಿ ಚೌಕಿ ಕಟ್ಟಿಸಿದ್ದರು. ಚಿಕ್ಕವೀರರಾಜೇಂದ್ರ ಒಡೆಯ ಇದನ್ನು ಚೌಕಿಮಠವಾಗಿ ರೂಪಿಸಿದ. ಸನಿಹದಲ್ಲಿರುವ ಜಯಮಲ್ಲಿಕಾರ್ಜುನ ಗುಡಿಯ ಶಾಸನದಲ್ಲಿ ಶಾಂತಮಲ್ಲಸ್ವಾಮಿಗಳು ತಪಸ್ಸಿಗೆ ಕ್ರೌಂಚಾದ್ರಿಗೆ ಹೋದ ದಿನಾಂಕ ಸೂಚಿಸಿದೆ ಎಂದೆಲ್ಲ ಬರೆದಿದೆ.[೨೭ಅ] ಆದರೆ ಈ ಶಾಸನದಲ್ಲಿ ಅಂತಹ ಪಾಠವಿಲ್ಲ. ಬದಲು ಕ್ರಿ.ಶ. ೧೪೬೪ರಲ್ಲಿ ಮಲ್ಲಣನಾಯಕನು ಇಲ್ಲಿ ಆಳುತ್ತಿದ್ದು, ದೇಗುಲಕ್ಕೆ ದತ್ತಿ ನೀಡಿದ ಸಂಗತಿ ಇದೆ. ಇದೊಂದು ಹೊಸ ಶಾಸನ. ಇನ್ನೊಂದು ಶಾಸನ ರೀತ್ಯಾ ಕ್ರಿ.ಶ. ೧೭೯೬ರಲ್ಲಿ ಮಹಂತಸ್ವಾಮಿ ಅವರ ಚರಮೂರ್ತಿ ಶಾಂತವೀರಸ್ವಾಮಿ ಅವರ ಚರಮೂರ್ತಿ ಅಬ್ಬಿಮಠದ ನಿರಂಜನ ದೇವರು ಎಂದಿದೆ. ಜನಗಳ ಬಾಯಲ್ಲಿ ಮೂಲಕರ್ತೃ ಶಾಂತಮಲ್ಲ ಸ್ವಾಮಿಗಳ ಗದ್ದುಗೆ ಎಂದಿದ್ದು ಅವರ ಬದುಕಿಗೆ ಸಂಬಂಧಿಸಿದ ಕತೆ ಇದೆ.

ಪುಷ್ಪಗಿರಿಯಲ್ಲಿ ತಪಸ್ಸಿಗೆ ಹೊರಟಾಗ ಪಟ್ಟೆಪಾರಿ ಎಂಬ ಶಿವಶರಣೆ ಹಿಂಬಾಲಿಸಿದಳಂತೆ. (ಈಕೆಗೆ ಪಂಡರಾಬಾಯಿ ಎಂಬ ಹೆಸರೂ ಇತ್ತು) ಸ್ವಾಮಿಗಳು ಬೇಡ ಎಂದಾಗ ಕತ್ತಿನ

೨೭-ಅ. ಈ ಹಸ್ತಪ್ರತಿಯನ್ನು ಹೊಸ ಪಟ್ಟಣದ ಶ್ರೀ ಬಿ. ಈ. ವೀರರಾಜು ಅವರು ತೋರಿಸಿದರು.

ಕರೀಮಣಿಗೆ ಹರಿಬರುವ ಶಕ್ತಿ ಇಲ್ಲವೆ ಎಂದು ಕಿತ್ತು ಎಸೆದಳಂತೆ. ಅದಕ್ಕೆ ಪುಷ್ಪಗಿರಿಯಲ್ಲಿ ದೊರೆವ ಷಡ್ಭುಜಾಕಾರದ ಹರಳುಗಳಿಗೆ 'ಷಣ್ಮುಖೇಶ್ವರ' ಎಂದು ಕರೆವ ಜನಪದ, ಪಟ್ಟೇಹಾರಿ ಎಸೆದ ಕರಿಮಣಿಗಳು ಎಂದು ಕಥೆಯನ್ನು ಅಂಟಿಸಿದೆ. ಈಕೆ ಹರಿಜನ ಹೆಣ್ಣು ಎಂಬ ಪ್ರತೀತಿಯೂ ಇದೆ.

ಪುಷ್ಪಗಿರಿಯ ಬುಡದ ಹೆಗ್ಗಡೆಮನೆ ಗ್ರಾಮದ ಬಳಿ ಪಟ್ಟೇಹಾರಿ ಕಲ್ಲು ಎಂಬ ವಿಶಾಲ ಬಂಡೆಯ ಮೇಲೆ ಪೇರಿಸಿದ ಕಲ್ಲುಗಳ ಶಿಲಾಸ್ತಂಭಗಳಿವೆ. ಅವು ಆಕೆಯ ಹೆಸರಿನಲ್ಲಿ ಹರಕೆಯ ಕಲ್ಲುಗಳ ಕಂಬದ ಗುಡಿ ಎನಿಸಿದರೂ, ಕೊಡಗಿನ ಬೃಹತ್ ಶಿಲಾಯುಗದ ಪದ್ಧತಿಯ ಅವಶೇಷವಾಗಿ ಅವುಗಳ ಅಸ್ತಿತ್ವ ಚಾಲ್ತಿಯಲ್ಲಿದೆ ಎನ್ನಬೇಕು. ೧೯೩೦ರಲ್ಲಿ ಮೈಸೂರು ಮಹಾರಾಜರು ಅಬ್ಬಿಮಠಕ್ಕೆ ಬಂದಿದ್ದಾಗ ಇಲ್ಲಿಗೆ ಬಂದು ಹರಕೆಯ ಕಲ್ಲುಗಳ ಕಂಬದ ಗುಡಿ ನಿಲ್ಲಿಸಿರುವುದು ಜನರ ಬಾಯ್ದೆರೆಯಲ್ಲಿದೆ.[೨೮]

ನಿಸರ್ಗದ ನಿಡುತೋಪಿನಲ್ಲಿ ನಿಂತ ಅಬ್ಬಿಮಠ ಹಿಂದೂ-ಇಸ್ಲಾಮಿಕ್(ಆದಿಲ್‌ಶಾಹಿ) ಶೈಲಿಯ ಕಟ್ಟಡವಾಗಿದ್ದು, ನಾಲ್ಕು ಗುರುಗದ್ದುಗೆಗಳನ್ನೂ ಹೊಂದಿದೆ. ಚಿತ್ರದುರ್ಗದ ಬೃಹನ್ಮಠದ ನೇರ ಆಡಳಿತದ ಬೇಳೂರು ಮಠದ ನಿರ್ವಹಣೆಯಲ್ಲಿ ಇಂದು ಈ ಅಬ್ಬಿಮಠವಿದೆ. ನೆರೆಯಲ್ಲಿ ಕ್ರಿ.ಶ.೧೫೬೫ರ ಶಾಸನೋಕ್ತ ಜಯ ಮಲ್ಲಿಕಾರ್ಜುನ ದೇವರ ಗುಡಿ ಇದೆ. ಗುಡಿಯ ಬಲಬದಿಯಲ್ಲಿ ನಯನ ಮನೋಹರ 'ತಲೆತೊರೆ'(ಅಬ್ಬಿ) ಇದೆ. ಸಪ್ತಮಾತೃಕೆಯರ ಬಿಡಿಶಿಲ್ಪ ಹಾಗು ದೀಪದಮಲ್ಲಿಯ ಬಿಡಿ ಶಿಲ್ಪ ಸಹಿತವಾಗಿ ಪ್ರಾಚೀನ ಮಲ್ಲಿಕಾರ್ಜುನ ಲಿಂಗವಿದೆ. ಕೊಡಗಿನ ವೀರಶೈವ ಮಠಗಳ ಗುರುಗಳು, ಭಕ್ತರೊಡನೆ ಬಂದು ವಾರ್ಷಿಕವಾಗಿ ಅಬ್ಬಿಯ ಕೆಳಗಿನ ತೇರುಗದ್ದೆ ಬಯಲಿನಲ್ಲಿ (ಮಲ್ಲಿಕಾರ್ಜುನ ಪರ್ವ)ಪರ ಆಚರಿಸುತ್ತಿದ್ದರು. ಹುತ್ತರಿಯಲ್ಲಿ ಇಂದಿಗೂ ಇಲ್ಲಿ ಕದಿರು ಅರ್ಪಿಸುತ್ತಾರೆ. ಶಿವರಾತ್ರಿ, ಸಂಕ್ರಾಂತಿಯಲ್ಲಿ ಅಬ್ಬಿಮಠದ ಗದ್ದುಗೆ ಹಾಗು ಗುಡಿಗೆ ಬಂದು ಪೂಜೆ ಸಲ್ಲಿಸುತ್ತದೆ ಜನತೆ. ಒಂದು ಕಾಲವಲ್ಲಿ ಕಾರ್ತೀಕ ಶುಕ್ರವಾರದಂದು ನಡೆಯುತ್ತಿದ್ದ ಗುಡಿಯ ಲಕ್ಷ ದೀಪೋತ್ಸವ ಇಂದು ನಿರ್ಲಕ್ಷಿತವಾಗಿದೆ. ಅಬ್ಬಿಮಠದ ಶಾಂತಮಲ್ಲಸ್ವಾಮಿಗಳು ಹಾಗು ಅಲ್ಲಿನ ಮಹಿಳೆಯೊಬ್ಬಳು (ಶಿವಶರಣೆ ಪಟ್ಟೆಹಾರಿ!) ಬರೆದ ಗ್ರಂಥದೋಲೆ ಪ್ರತಿಗಳಿದ್ದ ಬಗ್ಗೆ ಕೃತಿಯೊಂದು ತಿಳಿಸಿದೆ.[೨೯].

**ಮೂದಾಪುರ ಮಠ:** ಮುರುಘಾಸಂಪ್ರದಾಯದ ಮಠವಿದು. ಮಠದ ಮುಂಬಾಗಿಲು ಬಸವನ ಗುಡಿಯ ಒಳಬಾಗಿಲು, ಹಾಗೂ ಗೋಪುರ ಕಳಸದ ಹಿತ್ತಾಳೆಯ ಪತಾಕೆಯ ಮೇಲೆ

---

೨೮. ಈ ಅಂಶವನ್ನೂ ತಿಳಿಸಿದವರು ೧೯೩೦ರ ಸಮಯದಲ್ಲಿ ಇಲ್ಲಿ ಮಠಾಧಿಕಾರಿಗಳಾಗಿದ್ದು ಇಂದು ಬೆಂಗಳೂರಿನ ಶಿವನಹಳ್ಳಿಯಲ್ಲಿರುವ ಕುಂಭಕೋಣದ ಪೆರಿಯ ಮಠದ ಅಧ್ಯಕ್ಷರಾದ ಶ್ರೀ ಜಗದ್ಗುರು ಶಾಂತದೇವ ಸಾರಂಗ ದೇಶೀಕೇಂದ್ರರು.

೨೯. ಕೊಡಗಿನ ಬರಹಗಾರರು: (ಸಂ) ಎಸ್.ಆರ್. ನಾರಾಯಣರಾವ್, ಎನ್. ಮಹಾಬಲೇಶ್ವರ ಭಟ್ಟ. ಕೊಡಗು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಮಡಿಕೇರಿ, ಪು-೧.

ಶಾಸನೋಲ್ಲೇಖಿಗಳಿವೆ. ತಾಮ್ರಶಾಸನವೂ ಬೇರೆ ಇದೆ. ಹೆಚ್ಚು ಶಾಸನಗಳನ್ನು ಹೊಂದಿರುವ ಈ ಮಠದ ಶಾಸನಗಳಲ್ಲಿ ಹಾಲೇರಿ ಅರಸರ ಗೋತ್ರ, ಸೂತ್ರ ಹಾಗು ಶಾಖೆಗಳು ಉಲ್ಲೇಖಿತವಾಗಿವೆ. ಇಲ್ಲಿ ಲಿಂಗರಾಜೇಂದ್ರ ಒಡೆಯನ ಗದ್ದುಗೆ ಇದೆ. ಕ್ರಿ.ಶ. ೧೭೭೯ ರಲ್ಲಿ ಅವನ ಮಗ ವೀರರಾಜೇಂದ್ರಒಡೆಯ, ಗದ್ದುಗೆಯ ಮೇಲೆ ಕಟ್ಟಿಸಿದ ಬಸವೇಶ್ವರ ದೇಗುಲವಿದೆ. ಮಠದ ಆವರಣದಲ್ಲಿ ಸೋಮೇಶ್ವರ ಶಿವಯೋಗಿಗಳ ಗದ್ದುಗೆ ಹಾಗು ಅವರ ಕರಕಮಲ ಸಂಜಾತರಾದ ಗುರುಪಾದಸ್ವಾಮಿಗಳ ಗದ್ದುಗೆಗಳೂ ಇವೆ. ಜಂಬೂರು, ಜೇಳೂರು, ಬಸವನಹಳ್ಳಿಗಳಲ್ಲಿ ಈ ಮಠಕ್ಕೆ ಜಹಗೀರು ಜಮೀನು ಇದ್ದು ೧೯೫೭ರಿಂದ ಜೇಳೂರು ಮಠದಲ್ಲಿದ್ದ ಶ್ರೀ ಜಯಾನಂದ ಸ್ವಾಮಿಗಳು ನಿರ್ವಹಣೆ ನೋಡಿಕೊಳ್ಳುತ್ತಿದ್ದರು. ಈಗ ಕೊಡ್ಲಿಪೇಟೆಯ ಕಲ್ಲಳ್ಳಿ ಮಠ ಸಹಿತವಾಗಿ ಇದನ್ನು ಶ್ರೀಮೋಕ್ಷಪತಿಸ್ವಾಮಿಗಳು ನಿರ್ವಹಣೆ ಮಾಡುತ್ತಿದ್ದಾರೆ.

ಹುತ್ತರಿಯಲ್ಲಿ ಮಠದ ಗದ್ದೆಯಿಂದ ಭತ್ತದ ಕದಿರು ತಂದು ಗದ್ದುಗೆ ಬಸವೇಶ್ವರನ ಬಳಿ ಪೂಜೆಗಿಟ್ಟು ನಂತರ ಗ್ರಾಮದ ಎಲ್ಲರೂ ಕದಿರುಗಳನ್ನು ಮನೆಗೆ ಒಯ್ಯುತ್ತಿದ್ದರು. ಮಠದ ಮುಂದೆ ಹುತ್ತರಿ ಕೋಲಾಟ ನಡೆಯುತ್ತಿತ್ತು, ಪತ್ತುಕೂಟ ಪಾತಾಳ[೩೦] (ವಿವಿಧ ದೈವಗಳ ತೆರೆ, ಕೋಲಗಳು)ವನ್ನು ಕಟ್ಟಿಸಲಾಗುತ್ತಿತ್ತು. ಇಂದಿಗೂ, ಕೇರಳ, ದ.ಕನ್ನಡಜಿಲ್ಲೆ, ಉತ್ತರ ಕನ್ನಡಜಿಲ್ಲೆಯ ಕಡೆಗಳಿಂದ ಭಕ್ತರು ವರ್ಷಕ್ಕೊಮ್ಮೆ ಪೂಜೆಗೆ ಬರುತ್ತಾರೆ. ಮಳೆಗಾಲದಲ್ಲಿ ನಾಟಿನೆಡುವಲ್ಲಿ 'ಒಯ್ಯ ಹಾಕುವುದು', (ನಾಟಿ ಹಾಡು) ಓಟ್‌ನಾಟಿ (ಕೆಸರುಗದ್ದೆ ಓಟ) ಸ್ಪರ್ಧೆ ಇದ್ದು ಮಠದಸ್ವಾಮಿಗಳು ಕೊಡವವೇಷ ಧರಿಸಿ ಸ್ಪರ್ಧಾ ವಿಜೇತರಿಗೆ ಬಹುಮಾನ ನೀಡುತ್ತಿದ್ದರು. ಸ್ವಾಮಿಗಳು ಹುತ್ತರಿ ಕೋಲಾಟದ ಆಶೀರ್ವಾದದ ಕೋಲು ಹೊಡೆದ ಮೇಲೆ ಕೊಡವರು ಕೋಲಾಟ ಆರಂಭಿಸುತ್ತಿದ್ದರು. ಕೊಡಗಿನ (ಹಾಲೇರಿ) ರಾಜರು ದೀಪಾವಳಿ ಹಾಗು ಜಂಬೂಸವಾರಿಯನ್ನೂ ಇಲ್ಲಿ ನಡೆಸುತ್ತಿದ್ದರು. ಅಂದರೆ ಕೊಡಗಿನ ಜನತೆಯ ಸಾಂಸ್ಕೃತಿಕ ಬದುಕಿನಲ್ಲಿ ಹಾಲೇರಿ ಅರಸರ ಕಾಲದಲ್ಲಿ ವೀರಶೈವ ಮಠಗಳು ಮಿಳಿತಗೊಂಡಿದ್ದುದಕ್ಕೆ ಇವೆಲ್ಲ ಸಾಕ್ಷ್ಯಗಳಾಗಿವೆ. ಈ ಮಠದ ವಾಸ್ತುಶೈಲಿಯು, ಆದಿಲ್‌ಶಾಹಿ ವಾಸ್ತುಶೈಲಿ ಪ್ರಭಾವಿತ (ಇಂಡೋ-ಇಸ್ಲಾಮಿಕ್)ವಾದ ಗೋಳಗುಮ್ಮಟ ಹಾಗೂ ಕಟ್ಟಡ ಸ್ವರೂಪ ಮಡಿಕೇರಿಯ ರಾಜರಗದ್ದುಗೆ ಹಾಗು ಓಂಕಾರೇಶ್ವರ ದೇಗುಲದಲ್ಲಿಯಂತೆ[೩೧] ಇದೆ.

**ಸೋಮವಾರಪೇಟೆ ಮಠ** : ಶ್ರೀಮತ್ಕೆಳದಿ ಬಸಪ್ಪನಾಯಕರು ಜವನೂರು ತಳವಾರಿಕೆ ಶಿಸ್ತಿನಲ್ಲು ಸೋಮವಾರ ಪೇಟೆಯಲ್ಲೂ ಮುರಿಗೆ ಸ್ವಾಮಿಯವರ ಸಂಪ್ರದಾಯದ ಶಾಂತವೀರ ಸ್ವಾಮಿಗಳಿಗೆ ಕಟ್ಟಿಸಿಕೊಟ್ಟ ವಿರಕ್ತಮಠ ಎಂದು ಕ್ರಿ.ಶ. ೧೭೪೦ ರ ನಗರ ಶಾಸನ ತಿಳಿಸುತ್ತದೆ.[೩೨] ಕೊಡಗಿನ ಸೋಮವಾರಪೇಟೆಯ ವಿರಕ್ತಮಠಕ್ಕೆ ಜಮಾಬಂದಿಯಲ್ಲಿ ನಗರೂರು ಮಠ ಎಂದೇ

---

೩೦. ತೋತ, ಚಾವುಂಡಿ, ನಚ್ಚುಟ್ಟೆ, ಭೈರವ, ಮುಂದಣಮೂರ್ತಿ, ಕರಿಬಾಳ, ಕುಟ್ಟಿಚಾತ, ಪೊಟ್ಟೆ, ಕುಳಿಯ. ವಿಷ್ಣುಮೂರ್ತಿ, ಪಂಜುರ್ಲಿ ಮುಂತಾದವು.

೩೧. A Sundara : Impact of the Adilshahi Architectural style on the temple Architecture.

## ಕೊಡಗು ಜಿಲ್ಲೆಯ ವೀರಶೈವ ಮಠಗಳು



ಅಬ್ಬಿಮಠ



ಮಾದಾಪುರಮಠ



ಸೋಮವಾರಪೇಟೆ ವಿರಕ್ತಮಠ



ಅರಮೇರಿಮಠ

ಗುತ್ತಿಮಠ



ಕೆಳಕೋವೆ ಮಠ



ಶ್ರೀಶೈಲ ನಿಡುಮಾಮಿಡಿ ಪೀಠ, ಗೂಳೂರು

# ಹಾಸನ ಜಿಲ್ಲೆಯ ವೀರಶೈವ ಮಠಗಳು



ಚಿಲುಮೆ ಮಠ



ಹಾರ್ನಳ್ಳಿಕೋಡಿಮಠದ ದೃಶ್ಯ



ಚೆಲುವನಹಳ್ಳಿ ಮೇಲಣಗವಿ ಮಠ

ಜಟಾಧರ ಸ್ವಾಮಿಗಳ ಪಾದುಕೆ–ತೊಟ್ಟಿಲು

ಹೆಸರಿದೆ. ಬಹುಶಃ ಕೆಳದಿಯ ಬಸಪ್ಪನಾಯಕನೇ (ಕ್ರಿ.ಶ. ೧೭೪೦-೫೫) ಸ್ಥಾಪಿಸಿದ ಮಠ ನಗರೂರು ಮಠವಾಗಿದ್ದು ಶಾಂತವೀರಸ್ವಾಮಿಯವರು ಇದರ ಮೊದಲ ಗುರುವಾಗಿದ್ದಿರಬೇಕು. ನಗರದ ಕಡೆಯ ನಾಯಕ ಸ್ಥಾಪಿಸಿದ್ದರಿಂದ ನಗರೂರು ಮಠ ಎಂಬ ಹೆಸರು ಬಂದಿರಲು ಸಾಕು. ಕೆಳದಿ ಅರಸರ ಕಾಲದಲ್ಲಿ ಮಠದ ಕಾರ್ಯ ನಿರ್ವಹಣೆಯಲ್ಲಿ, ಭಾರತೀಯ ಷಡ್ದರ್ಶನಗಳ ಅಧ್ಯಯನ, ಧರ್ಮಪೋಷಣೆ, ಬಸವ ಜಯಂತಿ ಆಚರಣೆ, ಚಾತುರ್ಮಾಸ ಶಿವಾರಾಧನೆ, ಗೋಶಾಲೆ ನಿರ್ವಹಣೆ, ಕೃಷಿಕಾರ್ಯ ಸಾಗುವಳಿಯ ಉತ್ಪನ್ನಗಳನ್ನು ಸಮಾಜ ಸೇವೆಗೆ ಬಳಕೆ, ಅನ್ನದಾಸೋಹ ಇತ್ಯಾದಿಗಳು ನಡೆದುಬರುತ್ತಿತ್ತು.[೩೩] ಅದೇ ಪರಂಪರೆ ಪ್ರಸ್ತುತ ಮಠದಲ್ಲಿದೆ. ೧೯೩೮ರಲ್ಲಿ ಮಠಾಧಿಪತಿಗಳಾಗಿ ಬಂದ ಶ್ರೀ ಗುರುಸಿದ್ಧಸ್ವಾಮಿಗಳು, ಮೇಲಿನ ಕೈಂಕರ್ಯದ ಜೊತೆಗೆ, ದಲಿತರಾದಿಯಾಗಿ ಎಲ್ಲ ವರ್ಗದವರೂ ಸೇರಿದಂತೆ ಉಚಿತ ಹಾಸ್ಟೆಲ್, ವಿದ್ಯಾಶಾಲೆ ಧನಸಹಾಯ ಪಡೆಯಲು ಅನುವು ಮಾಡಿದರು. ಕೊಡವ, ಗೌಡ ಜನಾಂಗದವರು ದೇಗುಲ ಹಾಗು ಇತರೆ ಸಾಂಸ್ಕೃತಿಕ ಸಮಾರಂಭಗಳ ಉದ್ಘಾಟನೆಗೆ, ಆಶೀರ್ವಾದಕ್ಕೆ ಈ ಸ್ವಾಮಿಗಳನ್ನು ಕರೆಸುತ್ತಿದ್ದರು. ಭಕ್ತಿ ಗೌರವದಿಂದ ಆದರಿಸುತ್ತಿದ್ದರು. ಬಿಳಿಗೇರಿಯ ಬಸವೇಶ್ವರ ದೇಗುಲದ ಉದ್ಘಾಟನೆಗೆ ಬಾಚಿನಾಡಂಡ ಮನೆಯವರು ಊರಿನ ಪರವಾಗಿ (೨೬-೪-೧೯೮೬ ರಂದು) ಕರೆಸಿ ಭಕ್ತಿ ಗೌರವ ಅರ್ಪಿಸಿ, ಕೊಡವರ ಉಮ್ಮತ್ತಾಟ್ ಕುಣಿತಗಳನ್ನೂ ಪ್ರದರ್ಶಿಸಿದರು. ಇವರು ಲಿಂಗೈಕ್ಯರಾದ ಮೇಲೆ ಹಾಲಿ ಶ್ರೀ ವಿಶ್ವೇಶ್ವರಸ್ವಾಮಿಗಳ ಸಮರ್ಪಕ ನಿರ್ವಹಣೆಯಲ್ಲಿ ಮಠದ ಸೇವಾ ಕಾರ್ಯಗಳು ನಡೆಯುತ್ತಿವೆ. ಹುತ್ತರಿ ಆಚರಣೆ, ಮಠದ ಚೌಡಮ್ಮನ ಪೂಜೆ ಜಾತಿಭೇದವಿಲ್ಲದೆ ವಿವಾಹ ಕಾರ್ಯಗಳು, ಶಿವಾನುಭವಗೋಷ್ಠಿ, ಶಿಕ್ಷಣ ಸಂಸ್ಥೆಗಳ ನಿರ್ವಹಣೆ ಇತ್ಯಾದಿಗಳ ಮೂಲಕ ಮಠದ ಸಾಂಸ್ಕೃತಿಕ ಪರಂಪರೆಯನ್ನು ಇಂದಿನ ಸ್ವಾಮಿಗಳು ಜೀವಂತವಾಗಿ ಇಟ್ಟಿದ್ದಾರೆ.

**ಆರಮೇರಿ ಮಠ** : ದ.ಕೊಡಗಿನ ಪ್ರಾಚೀನ, ಪ್ರಸಿದ್ಧ ಮಠವಾಗಿದ್ದು, ಇಂದೂ ಜೀವಂತ. ದೊಡ್ಡ ವೀರಪ್ಪ ಒಡೆಯನ ತಂಗಿ ನೀಲಮ್ಮಾಜಿಯನ್ನು ನಾಯಕಂಡ ಮನೆಯ ಉತ್ತಪ್ಪನನ್ನು ಚೆನ್ನಬಸಪ್ಪನನ್ನಾಗಿಸಿ ಮದುವೆ ಮಾಡಿಕೊಡಲಾಗಿತ್ತು. ಗಂಡ ಯುದ್ದದಲ್ಲಿ ತೀರಿದಾಗ ಚಿಕ್ಕವಯಸ್ಸಿನ ಆಕೆಗೆ ಸದ್ಬೋಧೆಗಾಗಿ ವೀರರಾಜೇಂದ್ರ ಒಡೆಯ ಕ್ರಿ.ಶ. ೧೭೧೨ರಲ್ಲಿ ಈ ಮಠವನ್ನು ಕಟ್ಟಿಸಿದ. ಶಿವಾನಂದ ಸ್ವಾಮಿಗಳನ್ನು ಈ ಮಠದ ಮೊದಲ ಗುರುಗಳನ್ನಾಗಿಸಿ ನಿರೂಪ ಹೊರಡಿಸಿದ. ಚೀಲಾಳ ಸಮಯಕ್ಕೆ ಸೇರಿದ ಈ ಮಠದಲ್ಲಿ ಹುತ್ತರಿ, ಬಸವಜಯಂತಿ ಆಚರಣೆ, ಶಿವಾನುಭವ ಗೊಷ್ಠಿಯ ನಿರ್ವಹಣೆ ಉಂಟು. ದಲಿತ ಕೆಂಬಟ್ಟಿ ವರ್ಗದ ಜನರು ಉಭ-ಶುಭ ಕೇಳಲು ಇಲ್ಲಿಗೆ ಬರುವ ಪದ್ಧತಿ ಬಹಳ ಹಿಂದಿನಿಂದ ಬಂದಿದೆ.[೩೩-ಅ] ಜಮ್ಮ ಮಾಪಿಳ್ಳೆಗಳ ಜನಪದ ಕಲೆ ದಪ್ಪು ಆಟದ ಪ್ರದರ್ಶನವು ಮಠದ ಸಾಂಸ್ಕೃತಿಕ

೩೨. ಎ.ಕ. ಸಂಪುಟ ೮ (ರೈಸ್ ಆವೃತ್ತಿ), ನಗರ ೩೨, ಪು.೨೫೨

೩೩. K.N. Chitnis : 'VIR SHAIVA MATHAS IN THE KELADI KINGDOM' The Journal of Karnataka University Social Sciences, Dharwar 1967 p.8

ಸಂದರ್ಭದಲ್ಲಿ ನಡೆಯುತ್ತಿತ್ತು. ಶೈಕ್ಷಣಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಸೇವಾಕಾರ್ಯಗಳ ಕುರುಹಾಗಿ ವಾರ್ಷಿಕ ವಿದ್ಯಾರ್ಥಿ ವೇತನ, ವೀರಾಜಪೇಟೆ ಕರ್ನಾಟಕ ಸಂಘದ ಕಟ್ಟಡಕ್ಕೆ ದೇಣಿಗೆ, ವಿವಾಹ ಕಾರ್ಯಕ್ಕೆ ಸಹಾಯ ನೀಡಲಾಗುತ್ತಿದೆ. ೮೦ ವರ್ಷ ಮೀರಿದ ಹಿರಿಯ ಸ್ವಾಮಿಗಳಾದ ಶ್ರೀ ಶಾಂತಮಲ್ಲಸ್ವಾಮಿಗಳು ಇಂದೂ ಸಕ್ರಿಯರಾಗಿದ್ದಾರೆ. ವಿಧವಾ ವಿವಾಹ, ಇಚ್ಛಿಸಿದ ವೀರಶೈವ ಹಾಗು ಇತರೆ ಜನಾಂಗದ ವಧೂವರರಿಗೆ ದೀಕ್ಷೆ ನೀಡಿ ವಿವಾಹಗಳ ಮಾಡಿಸಿ ಪ್ರಗತಿಪರ ಧೋರಣೆ ತೋರಿದ್ದಾರೆ. ಕಿರಿಯ ಸ್ವಾಮಿಗಳೂ ಸಕ್ರಿಯವಾಗಿ ದುಡಿಯುತ್ತಿದ್ದಾರೆ. ಈ ಮಠಕ್ಕೆ ಕಳಂಚೇರಿ ಮಠ, ಬೆಪ್ಪುನಾಡುಮಠ ಎಂಬ ಹೆಸರೂ ಉಂಟು.

**ತೊರೆನೂರು ಮಠ:** ತೊರೆನೂರು ಪಂಚ ಮಠ ಎಂದು ಪ್ರಸಿದ್ಧವಾಗಿರುವ ಈ ಮಠ ಚೀಲಾಳ ಸಮಯಕ್ಕೆ ಸೇರಿದ ವಿರಕ್ತ ಮಠವಾಗಿದೆ. ಮರುಳಸಿದ್ದೇಶ್ವರರ ಗದ್ದುಗೆಯನ್ನು ಹೊಂದಿದೆ. ಹಾಲೇರಿಅರಸು ಈ ಮಠಕ್ಕೆ ದಾನವಾಗಿ ಭೂಮಿ ಕೊಡಲು ಬಂದನಂತೆ. ಮಠದ ಸ್ವಾಮಿಗಳು ಸ್ವೀಕರಿಸಲಿಲ್ಲವಂತೆ. ಕೊನೆಗೆ ರಾಜ ಕುದುರೆ ಹತ್ತಿ ಹೋದ ಜಾಗಗಳಲ್ಲೆಲ್ಲ ದಾನವ ಭೂಮಿಯನ್ನು ಅರ್ಪಿಸಿ ಸ್ವೀಕರಿಸಲು ಮತ್ತೆ ಪ್ರಾರ್ಥಿಸಿದನಂತೆ. ಆದಾಗಿ ಶಿರಂಗಾಲ, ಕಣಿವೆ, ಕೂಡುಮಂಗಳೂರು, ಕೂಡಿಗೆಕೊಪ್ಪಲಿನ ಬಳಿಯ ಹೆಗ್ಗಡಹಳ್ಳಿ, ಮುಳ್ಳುಸೋಗೆ (ಕುಶಾಲನಗರ) ಹುಲಸೆ, ಹಾರಂಗಿ, ಕಮ್ಮತ್ತನಹಳ್ಳಿ ಇತ್ಯಾದಿ ಕಡೆ ಮಠಕ್ಕೆ ಜಹಗೀರು ಜಮೀನು ಲಭ್ಯವಾಗಿತ್ತು. ಹೆಗ್ಗಡೆಹಳ್ಳಿಯಲ್ಲಿ ಅಂತಹ ಭೂಮಿ ಮಠಕ್ಕೆ ಇದ್ದು, ಅಲ್ಲಿ ಶಿವಾಲಯವೂ ನಿರ್ಮಿತವಾಗಿತ್ತು. ಇಂದು ಅದರ ನವರಂಗದ ಸ್ತಂಭ, ಸ್ತಂಭದ ಮೇಲಿನ ಬಸವ, ಲಿಂಗದ ಪಾಣಿಪೀಠಗಳು ಅವಶೇಷವಾಗಿ ಬಿದ್ದಿವೆ. ಕ್ರಿ.ಶ. ೧೭೩೦ರ ದೊಡ್ಡವೀರಪ್ಪನು ಕುಡುಮದ ಮಂಜುನಾಥದೇವರಿಗೆ (ಧರ್ಮಸ್ಥಳ) ಹೆಗ್ಗಡೆಹಳ್ಳಿಯಿಂದ ಶಿರಂಗಾಲದ ಉಭಯಗಡಿಗೆ ಸಲ್ಲುವ ಉಪಗ್ರಾಮಗಳನ್ನು ದೇವತಾ ಸೇವೆಗೆಂದು ಡಮರು, ತ್ರಿಶೂಲ ಸಂಕೇತಗಳನ್ನು ಹಾಕಿಸಿ ನೀಡಿರುವ ಸಂಗತಿಶಿಲಾ ಶಾಸನೋಕ್ತವಾಗಿದೆ.[೩೪] ಈ ಶಿವಾಲಯವೆ ಮಂಜುನಾಥ ದೇವರ ಸಾಕ್ಷಿ ಗುಡಿಯಾಗಿ ಕೊಡಗಿನಲ್ಲಿದೆ. ಮಠಕ್ಕೆ ಹೆಗ್ಗಡಹಳ್ಳಿ, ಶಿರಂಗಾಲದಲ್ಲಿ ಜಮೀನು ಇರುವ ಕಾರಣ ಮೇಲಿನ ಗುಡಿಯ ನಿರ್ವಹಣೆ ಒಂದು ಕಾಲಕ್ಕೆ ಮಠದ ಹೊಣೆಗಿದ್ದಿರಬೇಕು. ಹೆಗ್ಗಡೆಹಳ್ಳಿಯಲ್ಲಿ ಸಪ್ತಮಾತೃಕಾ ಶಿಲ್ಪ, ಶಿವಲಿಂಗದ ಗುಂಡುಗಳನ್ನು ರಕ್ಷಿಸಿಡಲಾಗಿದೆ. ಸುಗ್ಗಿ ಕಟ್ಟೆಯೂ ಇದೆ. ತೊರೆನೂರು ಮಠದಲ್ಲಿಯೂ ಸಪ್ತಮಾತೃಕೆಯರ ಸಂಕೇತ ಶಿಲೆಗಳು, ಮರದ ಸುಗ್ಗಿಕಟ್ಟೆ ಕಂಬವಿದ್ದು ಹಬ್ಬದಾಚರಣೆಗಳಿದ್ದು ಪರಂಪರೆಯ ಸಂಬಂಧಗಳ ಸೂಚನೆ ನೀಡುತ್ತವೆ. ಅಲ್ಲದೆ ದೊಡ್ಡವೀರಪ್ಪನ ಕಾಲದಲ್ಲಿ ಮೇಲಿನ ದಾನ ನೀಡಿಕೆಯ ಪ್ರಕರಣ ಘಟಿಸಿದಂತಿದೆ. ಹಾಗೂ ಅವನ ಕಾಲದಲ್ಲಿ (ಕ್ರಿ.ಶ. ೧೬೮೭-೧೭೩೬) ಮಠ ಜೀರ್ಣೋದ್ಧಾರವಾದಂತಿದೆ. ಕ್ರಿ.ಶ. ೧೯೩೫ರಲ್ಲಿ ರಾ॥ಬ॥ಕೇಟೋಳಿರ ಚಂಗಪ್ಪನವರು

೩೩-ಅ. ಎಂ.ಜಿ. ನಾಗರಾಜ:ಕಂಬಟ್ಟಿ ಹೊಲೆಯರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ೧೯೯೩ :

೩೪. ಎ.ಕ ಸಂಪುಟ,೧(ಪರಿಷ್ಕೃತ) ಕೊಡಗು ಜಿಲ್ಲೆ, ಹೆಗ್ಗಡಹಳ್ಳಿ ೪೦,೪೧

(ಕೊಡಗಿನ ಅಧಿಕಾರದಲ್ಲಿದ್ದವರು) ಮಠಗಳ ನಿರೂಪಗಳನ್ನು ನೋಡಿ, ಸ್ವಾಮಿಗಳನ್ನು ಖಾತೆ ವರ್ಗದಾರರನ್ನಾಗಿ ಮಾಡಿ ಜಮಾಬಂದಿಯ ೬ನೇ ಕಾಲಂಗೆ ಸೇರಿಸಿ ಜಮೀನು ಪರಭಾರೆ ಆಗದಂತೆ ಆ ಕಾಲಕ್ಕೆ ವ್ಯವಸ್ಥೆ ಮಾಡಿದರಂತೆ. ಈಗ ಈ ಮಠದ ಶಾಖೆಗಳು ಹಾರಂಗಿ ಅಣೆಕಟ್ಟಿನಲ್ಲಿ ದಾನದ ಜಮೀನು ಸಹಿತವಾಗಿ ಮುಳುಗಿವೆ. ಮಠದ ವತಿಯಿಂದ ವಿದ್ಯಾರ್ಥಿಗಳಿಗೆ ಅನ್ನದಾನ, ವಿದ್ಯಾಸಂಸ್ಥೆಗಳಿಗೆ ಧನಸಹಾಯ, ನೌಕರರ ಸಂಘದ ಕಟ್ಟಡಕ್ಕೆ, ನೆರೆಯ ಚಾಮರಾಯನ ಕೋಟೆಯ ಹನುಮಂತನ ದೇಗುಲದ ಕಟ್ಟಡ ನಿರ್ಮಾಣಕ್ಕೆ ಧನಸಹಾಯ ಮಾಡಲಾಗಿದೆ. ಈಚೆಗೆ ಮಠದ ಒಂದು ಶಾಖೆಯ ನಿರ್ವಹಣೆಯನ್ನು ಕ್ಯಾತ್ಸಂದ್ರದ ಪ್ರಸಿದ್ಧ ಸಿದ್ದಗಂಗಾಮಠದ ವಶಕ್ಕೆ ಅರ್ಪಿಸಿಲಾಗಿದೆ. ತೊರೆನೂರು ಮಠದ ಮುಂದೆ ಶಿಲಾಶಾಸನವಿದ್ದು ಅಸ್ಪಷ್ಟವಾಗಿದೆ. ಮಠದ ಮುಖ್ಯಸ್ಥರಾದ ಶ್ರೀ ಮಹಂತಸ್ವಾಮಿಗಳು ಧಾರ್ಮಿಕ, ಸಾಂಸ್ಕೃತಿಕ, ಸಾಮಾಜಿಕ ಸೇವಾಕಾರ್ಯಗಳಲ್ಲಿ ಸಕ್ರಿಯರಾಗಿದ್ದಾರೆ.

**ನೂರಂಬಾಡಿ ಮಠ** : ಇದು ಹಾಲೇರಿ ದೊರೆಯ ಕುಮಾರನಿಗಾಗಿ ಕಟ್ಟಿದ ಕಟ್ಟಡವಾಗಿತ್ತು ಮೊಲವೊಂದು ಹೊಕ್ಕ ಕಾರಣ ದೊರೆ ಕುಮಾರನಿಗೆ ಒಗ್ಗಿ ಬರದು ಎಂದಾಯಿತು. ಆಗ ಗುರುಮನೆ-ಗುರುಮಠವಾಗಲೆಂದು ರಾಜ ತೀರ್ಮಾನಿಸಿದನಂತೆ. ಬಹುಶಃ ದೊಡ್ಡವೀರರಾಜೇಂದ್ರಒಡೆಯ ನಾಲ್ಕುನಾಡಿನಲ್ಲಿ (ಯವಕಪಾಡಿ ಬಳಿ) ಪುಲಿಯಂಡ ಮನೆತನದ ಭೂಮಿಯಲ್ಲಿ ಕ್ರಿ.ಶ. ೧೭೯೧ ಡಿಸೆಂಬರ್ ತಿಂಗಳಲ್ಲಿ ಅರಮನೆಯನ್ನು ರಾಜ ಕುಟುಂಬದ ರಕ್ಷಣೆಗೆಂದು ಕಟ್ಟಿಸಿದ ಸಂದರ್ಭ. ಆಗ ಅಷ್ಟು ಆಯಕಟ್ಟಿನ ಜಾಗವಲ್ಲದ ನೂರಂಬಾಡಿಯ ಕಟ್ಟಡವನ್ನು ಮಠಕ್ಕೆ ನೀಡಿದ್ದಿರಬೇಕು. ಮೊಲದ ಕಥೆ ನಂತರ ಅಂಟಿದೆ. ಈ ಮಠ ನಿರ್ಮಾಣದ ಸಮಯದಲ್ಲಿಯೇ ಹಾಲೇರಿ ಅರಸರು ವೀರಭದ್ರನ (ಹಲಗೆ) ವಿಗ್ರಹವನ್ನೂ ನೀಡಿದ್ದಾರೆ. ಇದು ಬಾಳೆಹೊನ್ನೂರು ಶಾಖೆಗೆ ಸೇರಿದ ಮಠ. ದೇವರ ದಾಸಿಮಯ್ಯನ ಜಯಂತಿ ಆಚರಣೆ ಇಲ್ಲಿರುವ ಕಾರಣ ಶ್ರೀಶೈಲ ನಿಡುಮಾಮಿಡಿ ಪೀಠದ ಸಂಪರ್ಕವೂ ಒಂದು ಕಾಲಕ್ಕೆ ಇಲ್ಲಿದ್ದಿರಬೇಕು ಎನಿಸುತ್ತದೆ. ಕೊಡಗಿನ ಸಾಂಸ್ಕೃತಿಕ ಹೃದಯ ಎನಿಸಿದ ನಾಪೋಕ್ಲು (ಹಳೆ ತಾಲೋಕು)ವಿನಲ್ಲಿ ಇಡೀ ನಾಲ್ಕು ನಾಡಿಗೆ ಉಳಿದಿರುವ ಈ ಒಂದೇ ವೀರಶೈವ ಮಠ, ಈಗ ಸಂಸಾರಿ ಮಠವಾಗಿದೆ. ಮಠದ ವಾಸ್ತು ಇಂಡೋ-ಇಸ್ಲಾಮಿಕ್ ಶೈಲಿಯಲ್ಲಿದೆ. ಕಮಾನಿನ ತೆರೆದ ಭಾಗಗಳು ಮುಂದಿನ ಭಿತ್ತಿಯಲ್ಲಿದ್ದು, ವಿಶಾಲ ಅಂಕಣ ಹೊಂದಿದ್ದು ಆಕರ್ಷಕ ಹಳೆಗಾಲದ ರಾಜಗೃಹದಂತೆ ಕಾಣುತ್ತದೆ. ಒಳಗಿನ ರಚನೆ ಕೊಡಗಿನ ವಿಶಿಷ್ಠ ನಾಲ್ಕಟ್ಟು ಮುಂದುಮನೆಗಳಂತಿದೆ. ಕೇಟೋಳಿರ, ಅಪ್ಪಾರಂಡ ಹಾಗೂ ಬಿದ್ದಾಟಂಡ ಕೊಡವ ಮನೆತನಗಳು ಒಂದು ಕಾಲಕ್ಕೆ ಈ ಮಠಕ್ಕೆ ನಡೆದುಕೊಳ್ಳುತ್ತಿದ್ದುವು. ಬಿದ್ದಾಟಂಡ ಐನ್ ಮನೆ ಬಳಿ ಶಿವಾಲಯ, ಅಪ್ಪಾರಂಡ ಐನ್‌ಮನೆಯಲ್ಲಿನ ನೆಲ್ಲಕ್ಕಿ ನಡುಬಾಡೆ (ಮಧ್ಯದ ಅಂಗಳದಲ್ಲಿನ ಪ್ರಾರ್ಥನಾನೆಲೆ)ಯ ತೂಕುಂಬೊಳಿಚ (ತೂಗುದೀಪ) ಸರಪಳಿಯಲ್ಲಿ ಬಸವ

ವಿಗ್ರಹವಿರುವುದು ಮೇಲಿನ ಸಂಗತಿಗೆ ಪೂರಕವೆನಿಸುತ್ತದೆ. ಶ್ರೀ ಜೆ.ಸಿ.ನಂಜಪ್ಪನವರು ಈ ಮಠದ ಮುಖ್ಯಸ್ಥರಾಗಿದ್ದಾರೆ.

**ದೊಡ್ಡಕೊಡ್ಲಿ ಕಲ್ಲುಮಠ:** ಪರಶುರಾಮ ಕೊಡಲಿ ಇಟ್ಟ ಕ್ಷೇತ್ರ ಕೊಡ್ಲಿಪೇಟೆ. ಇಲ್ಲಿರುವ ಚೇಲಾಳ ಸಮಯದ ಈ ವೀರಶೈವ ಮಠ ಒಂದು ನಿರಂಜನ ಪೀಠ. ಕೊಡಗಿನ ಮೊದಲ ಮಠವೆಂದು ಪ್ರತೀತಿ. ಹಾಸನ ಜಿಲ್ಲೆಯ ಹಾರ್‍ನಳ್ಳಿ ಕೋಡಿಮಠವನ್ನು ನಿರಂಜನ ಆದಿಪೀಠ ಎನ್ನಲಾಗಿದೆ. ಅಂತಿರುವಲ್ಲಿ ಈ ಮಠದ ಸಂಬಂಧ ಪ್ರಾಚೀನದಲ್ಲಿ ಕೋಡಿಮಠದೊಡನೆ ಇದ್ದಿರಬಹುದೇ ? ಕೊಡಗಿನಲ್ಲಿ ೧೧ನೆಯ ಶತಮಾನದ ಆರಂಭದಲ್ಲಿಯೇ ಶ್ರೀಶೈಲಪೀಠದ ಆಚಾರ್ಯ ಪರಂಪರೆಯ ವೀರಶೈವಧರ್ಮದ ಅಸ್ತಿತ್ವವನ್ನು ಬಿಳುಗುಂದ ಶಾಸನವು ಸೂಚಿಸುತ್ತದೆ. ಹರದನಹಳ್ಳಿ ಗೋಸಲ ವಿರಕ್ತ ಪರಂಪರೆ ಹತ್ತನೆಯ ಶತಮಾನದಿಂದ ಬಂದುದು ಎಂಬ ಮಾತಿರುವಲ್ಲಿ[೩೫] ಈ ನಿರಂಜನ ಪೀಠದ ಮೂಲ ಅಂದಿನಿಂದಲೆ ಇಲ್ಲಿ ಮೂಡಿರಬಹುದೆ ಎಂಬ ಪ್ರಶ್ನೆ ಕೊಡಗಿನಲ್ಲಿ ವೀರಶೈವ ಧರ್ಮದ ಅಸ್ತಿತ್ವದ ದೃಷ್ಟಿಯಿಂದ ಗಮನಾರ್ಹವಾಗುತ್ತದೆ. ಒಟ್ಟಿನಲ್ಲಿ ಕೊಡಗಿನ ನೆಲ ಆಚಾರ್ಯ ಹಾಗೂ ವಿರಕ್ತ ಪೀಠಪರಂಪರೆಗೆ ೧೦ ನೆ ಶತಮಾನದಿಂದಲೇ ವೇದಿಕೆ ಒದಗಿಸಿರಬಹುದಾದ ಹಿನ್ನಲೆಗೆ, ಮೇಲಿನ ಮಠವು ಸೂಚಕವೆನಿಸುತ್ತದೆ. ಇಲ್ಲಿ ಮಠಾಂತರ್ಗತ ದೇಗುಲವಿದ್ದು ದ್ರಾವಿಡ ಶೈಲಿಯದಾಗಿದೆ. ತ್ರಿಶೂಲ, ಡಮರು, ನಾಗದಂಡ ಹಿಡಿದ ಚತುರ್ಭುಜ ಸ್ಥಾನಕ ಮೂರ್ತಿಗಳಾಗಿ ದ್ವಾರಭದ್ರ, ದ್ವಾರಭದ್ರೆಯರ ಶಿಲ್ಪವಿದೆ. ಗರ್ಭಗೃಹ, ನವರಂಗಗಳಲ್ಲಿ ಭುವನೇಶ್ವರಿಗಳಿವೆ. ದೇಗುಲದ ಬ್ರಹ್ಮಕಾಂತ ಮಾದರಿಯ ಸ್ತಂಭಗಳಲ್ಲಿ ಕಾಮಧೇನು, ಆನೆ, ಬೇಡರಕಣ್ಣಪ್ಪ ಹಾಗೂ ವೀರಭದ್ರನ ಶಿಲ್ಪಗಳು ಬಿಡಾವಣೆಗೊಂಡಿವೆ. ಆನೆಮರಿಗಳನ್ನು ಕೊಕ್ಕಿನಲ್ಲಿ ಹಿಡಿದ ಗಂಡುಭೇರುಂಡ ಶಿಲ್ಪವಿದೆ. ಗರ್ಭಗೃಹದ ದ್ವಾರದ ನೆತ್ತಿಯಲ್ಲಿ ಯೋಗಮೂರ್ತಿ, ಪಾರ್ಶ್ವದಲ್ಲಿ ಪತ್ರತೋರಣ, ಭುವನೇಶ್ವರಿಯಲ್ಲಿನ ಕಮಲದ ಮೊಗ್ಗು, ನಕ್ಷತ್ರಗಳ ಬಿಡಾವಣೆ ಆಕರ್ಷಕವಾಗಿವೆ. ಗರ್ಭಗೃಹದಲ್ಲಿ ಮಹಂತ ಸ್ವಾಮಿಗಳ ಗದ್ದುಗೆ ಇದೆ. ಅದರ ಬಳಿ ಜಂಗುವನ್ನು ಕಟ್ಟಿದ ತ್ರಿಶೂಲ, ಮೇಲೆ ನಾಗಾಭರಣವಿರುವ ಶಿವಲಿಂಗವಿದೆ.

ಭಾಗಮಂಡಲದ ಹಾದಿಯ ಮದೆನಾಡು-ಓಣಿಪುರದ ಮಠದಿಂದ ಬಂದ ಯುವಸ್ವಾಮಿ ಚರಮೂರ್ತಿ ಶ್ರೀ ಮಹಂತಸ್ವಾಮಿಗಳು ಇಂದಿನ ಈ ಮಠದ ಅಧ್ಯಕ್ಷರಾಗಿದ್ದಾರೆ. ಮಠಕ್ಕೆ ೨೫ ಎಕರೆ ಗದ್ದೆ ಬಾಣೆ ಜಹಗೀರು ಆಗಿ ಬಂದಿದೆ. ಚೌಡಮ್ಮನ ಪೂಜೆ ಇಲ್ಲಿದೆ. ದೀಪಾವಳಿಯಲ್ಲಿ ಬೆಳಗುಂಬಳ ಬಳ್ಳಿಯನ್ನು ಬಿದಿರಿಗೆ ಸಿಗಿಸಿ ಮದ್ದಿನ ತೆಕ್ಕೆ (ಭಾಗಮಂಡಲದ ಕಡೆ ಬೆಟ್ಟಿಕುತ್

೩೫. ವೀರಶೈವ ಸೊಳ್ಳುಡಿಕಾರರು : (ಸಂ) ಡಾ॥ ಶ್ರೀ ಜಚನಿ ಸನ್ನಿಧಿ, ಬೆಂಗಳೂರು-೪, ೧೯೯೨, ಪ್ರಸ್ತಾವನೇ ಪುಟ ೧೧.

ಎನ್ನುತ್ತಾರೆ)ಯನ್ನು ಕೊಡಗಿನ ಸಂಪ್ರದಾಯದಂತೆ ಮಠದಲ್ಲಿ ಇಡುತ್ತಾರೆ. ೧೬೪೭ರಲ್ಲಿ ಈ ಮಠವ ಜೀರ್ಣೋದ್ಧಾರ ಸಂದರ್ಭದಲ್ಲಿ ಕಲ್ಲುಕಟ್ಟಡವಾಗಿ ರೂಪಾಂತರಿಸಲಾಗಿದೆ.

**ಕಿರಿಕೊಡ್ಲಿ ಮಠ** : ಉಜ್ಜಯಿನಿ ಶಾಖೆಯ ಈ ಮಠದಲ್ಲಿ ಉರಿಬಸವ ಸ್ವಾಮಿಗಳ ಗದ್ದುಗೆ ಇದೆ. ೧೯೮೨ರಲ್ಲಿ ಪಟ್ಟಾಧಿಕಾರವಾದ ಶ್ರೀ ಸದಾಶಿವಸ್ವಾಮಿಗಳು ಮಠಾಧ್ಯಕ್ಷರಾಗಿದ್ದಾರೆ. ಇಲ್ಲಿ ಮಠವ ಅಮ್ಮ (ಬಹುಶಃ ಚೌಡಮ್ಮ)ನ ಪೂಜೆ ಇದೆ. ಕೊಡಗಿನ ಹುತ್ತರಿ ಸಮಯದ ಬದಲು ದೀಪಾವಳಿಯಲ್ಲಿ ಗದ್ದೆಯಿಂದ ಭತ್ತದ ತೆನೆ ತಂದು ಗದ್ದುಗೆ ಬಳಿ ಇಟ್ಟು ತೆನೆಪೂಜೆ ಮಾಡುತ್ತಾರೆ.

**ದೊಡ್ಡಕೊಡ್ಲಿ ಊರುಮಠ** : ಉಜ್ಜಯಿನಿ ಶಾಖೆಯ ಈ ಮಠದಲ್ಲಿ ಸಿದ್ದೇಶ್ವರ ಗದ್ದುಗೆ ಇದೆ. ಮಠದ ಮುಖ್ಯಸ್ಥರು ಶ್ರೀ ಸಿದ್ದಲಿಂಗ ಶಿವಾಚಾರ್ಯರು. ಮೊದಲಿಗೆ ಇಲ್ಲಿ ಸುಗ್ಗಿಸ್ತಂಭ ಇದ್ದು, ದೇವೀರಮ್ಮನ ಮೂರು ಮುಖವಾಡಗಳನ್ನಿಟ್ಟು ಸುಗ್ಗಿ ಕಟ್ಟೆ, ಹಬ್ಬಕ್ಕಾಗಿ 'ದೇವಿರಮ್ಮನ ಸುಗ್ಗಿ' ಮಾಡುವ ರೂಢಿ ಇತ್ತು. ದೀಪಾವಳಿಯಲ್ಲಿ ಇಂದೂ 'ತೆನೆ ಪೂಜೆ' ನಡೆಸುತ್ತಾರೆ. ಈ ಮಠವ ದ್ವಾರದ ಹಿಂಬದಿಯ ಮೇಲಿನ ಮರದ ಮಚ್ಚಿನಲ್ಲಿ ಸ್ಖಾಲಿತ್ಯದ ಶಾಸನ ಬರಹ 'ಶ್ರೀಮತು ಯಿ ಮಟವ ಜಿರಣ ಉದರವ ಮಡಿದು ಸುಕ್ಲ ಸಂವತ್ಸರದಿ ಮಟವ ಕಟಿ ದೇಸವಾರದ ನಂಜಯ್ಯ' ಎಂದಿದೆ. ೧೮-೧೯ನೇ ಶತಮಾನದ ಲಿಪಿಯನ್ನು ಹೋಲುವ ಈ ಶಾಸನದಿಂದಾಗಿ, ಬಹುಶಃ ಹಾಲೇರಿ ಅರಸರ ಕಾಲದಲ್ಲಿ ಕ್ರಿ.ಶ.ಸು. ೧೭೫೦-೧೮೧೦ ರ ಅವಧಿಯಲ್ಲಿ ಮಠವು ಜೀರ್ಣೋದ್ಧಾರವಾದ ಸಂಗತಿ ವ್ಯಕ್ತವಾಗುತ್ತದೆ. ದೇಸವಾರದ ನಂಜಯ್ಯ ಇದನ್ನು ಕಟ್ಟಿದ್ದಾನೆ.

ಕೊಡ್ಲಿಪೇಟೆಯ ಈ ಮಠದ ಸಮೀಪದಲ್ಲಿ ಪರಶುರಾಮೇಶ್ವರ ದೇಗುಲವಿದೆ. ವಿಶೇಷವೆಂದರೆ ಈ ಗುಡಿಯ ಶಿವಲಿಂಗವು, ಚಿದ್ರಸ ಹಾಕಿ ಕಂತೆ ಕಟ್ಟಿದ ಇಷ್ಟಲಿಂಗದ ಆಕೃತಿಯಂತೆ ಇರುವುದಾಗಿದೆ. ಈ ದೇಗುಲದಲ್ಲಿ ಕಪಾಲಭೈರವ ಹಾಗೂ ನಗ್ನ ವೀರಭದ್ರನ ವಿಗ್ರಹಗಳಿವೆ.

**ಓಣಿಪುರದ ಮಠ** : ಮಲೆನಾಡಿನ ಈ ಮಠವನ್ನು ಕ್ರಿ.ಶ. ೧೮೦೯ರಲ್ಲಿ ಲಿಂಗರಾಜೇಂದ್ರ ಒಡೆಯನು ಹೂ ಗದ್ದುಗೆ ಪೂಜೆಗಾಗಿ ಮೊದಲಿನ ಮಠದ ನೆಲೆಯನ್ನು ಜೀರ್ಣೋದ್ಧಾರ ಮಾಡಿ ೯ ಎಕರೆ ಜಮೀನು ಉಂಬಳಿ ನೀಡಿ ಮಠ ನಿಲ್ಲಿಸಿದ. ಬಾಳೆಹೊನ್ನೂರು ಶಾಖೆಗೆ ಸೇರಿದ ಈ ಮಠದ ಗದ್ದುಗೆ ಮಣ್ಣಿನ ಕಟ್ಟಡ ಹೊಂದಿತ್ತು. ಈಗ ಸಂಸಾರಿ ಮಠವಾಗಿ 'ಮಠದ ಮನೆ' ಎಂದು ಕರೆಸಿಕೊಳ್ಳುತ್ತಿದೆ. ಇಲ್ಲಿ ಹುಚ್ಚಪ್ಪನವರ ಗದ್ದುಗೆಗೆ ಸೋಮವಾರದಂದು, ಚೌಡಮ್ಮನ ಹೆಸರಿನಲ್ಲಿ ಮಂಗಳವಾರದಂದು, ಹಿರಿಯರ ಹೆಸರಿನಲ್ಲಿ ಬುಧವಾರದಂದು, ಕೆರೆ ಅಮ್ಮನ ಹೆಸರಿನಲ್ಲಿ ಗುರುವಾರದಂದು ಎಡೆ ಇಡುತ್ತಾರೆ. ಮೊದಲಿಗೆ ಕೊಡಗಿನ ಸಾಂಸ್ಕೃತಿಕ

ಆಚರಣೆಗಳಾದ ಹುತ್ತರಿ, ಓಟ್‌ನಾಟಿ, (ನಾಟಿಗದ್ದೆ ಓಟ) ಹಾಗೂ ಅಂಜ್‌ಕೂಟ್ ಪಾತಾಳ ತೆರೆ ಕಟ್ಟಿಸುವ ಪದ್ಧತಿ ಇತ್ತು.

**ಮುದ್ದಿನ ಕಟ್ಟೆ ಮಠ** : ಉಜ್ಜಯಿನಿ ಸದ್ಧರ್ಮ ಸಿಂಹಾಸನ ಶಾಖೆಯ ಈ ಮಠದಲ್ಲಿ ಮೂಲಕರ್ತೃ ಸಿದ್ದಲಿಂಗ ಶಿವಾಚಾರ್ಯರ ಗದ್ದುಗೆ ಇದೆ. ಮಠದ ಇತಿಹಾಸ ಸುಮಾರು ಮುನ್ನೂರು ವರ್ಷಗಳಿಗೆ ಮೀರಿದ್ದು ಎಂದು ಹಾಲಿ ಮಠಾಧಿಪತಿ ಶ್ರೀ ಸಿದ್ದವೀರ ಶಿವಾಚಾರ್ಯರು ಹೇಳುತ್ತಾರೆ. ಒಮ್ಮೆ ಚಿಕ್ಕವೀರರಾಜೇಂದ್ರ ಕೊಡಲು ಬಂದ ಜಹಗೀರನ್ನು ಸ್ವೀಕರಿಸದೆ ಮಠದ ಶಿಷ್ಯರು ನೀಡಿರುವ ಎಂಟು ಎಕರೆ ಜಮೀನು ತಮಗೆ ಸಾಕು ಎಂದರಂತೆ. ಮಠದಲ್ಲಿ ದೀಪಾವಳಿ ಸಂದರ್ಭದಲ್ಲಿ ಮುದ್ದಿನ ತೆಕ್ಕೆಯನ್ನು ಗದ್ದುಗೆ ಹಾಗೂ ಗದ್ದೆಯ ಬಳಿ ಇಡುತ್ತಾರೆ. ಈ ಮಠದ ಸಂಬಂಧ ಬಿಳಿಚೌಡಿ ಹಾಗೂ ಕರಿಚೌಡಿ ಪೂಜೆ ಇದೆ. ಏಪ್ರಿಲ್-ಮೇ ತಿಂಗಳಲ್ಲಿ ಈ ಪೂಜೆ ನಡೆಯುತ್ತದೆ.

**ಗುಡಗೂರು ಮಠ:** ಶ್ರೀಶೈಲ ನಿಡುಮಾಮಿಡಿ ಪೀಠ ಪರಂಪರೆಗೆ ಸೇರಿದಂತೆ ಎರಡು ಮಠಗಳಿದ್ದುವು. ಅವುಗಳಲ್ಲಿ ಮೇಲಣ ಮಠ ಸಂಸಾರಿ ಮಠವಾಗಿದೆ. ಕೆಳಗಣ ಸಂನ್ಯಾಸಿ ಮಠದ ಅವಶೇಷ ಮಾತ್ರ ಕುರುಹಾಗಿ ಉಳಿದಿದೆ. ೧೦ ಎಕರೆ ಗದ್ದೆ, ೫ ಎಕರೆ ತೋಟ, ಕಾಡು ೫ ಎಕರೆ ಮಠಕ್ಕೆ ಇದದ್ದರಲ್ಲಿ ಅನ್ಯಾಕ್ರಮಣವೂ ಆಗಿದೆ. ಹುತ್ತರಿಯಲ್ಲಿ ಗದ್ದುಗೆ ಹಾಗೂ ಬಸವಣ್ಣ ವಿಗ್ರಹಕ್ಕೆ ಕದಿರು ಇಡುತ್ತಾರೆ. ಮೊದಲಿಗೆ ಮಠದವರೇ ಕದಿರು ತಂದು ಪೂಜಿಸಿ ಎಲ್ಲರಿಗೂ ಹಂಚುತ್ತಿದ್ದರು, ಕಳ್ಳರನ್ನೂ ಹಿಡಿದು ಕೊಡುವವಳು ಎಂಬ ನಂಬಿಕೆಯ ಹಿನ್ನಲೆಯಲ್ಲಿ 'ಚೌಡಮ್ಮನ ಅಡ್ಲು' ಎಂಬ ನೆಲೆಯಲ್ಲಿ ಆಕೆಯ ಆರಾಧನೆ ಉಂಟು. ಭೂಮಿ ಕಾವಲುಗಾರನ ಸಂಕೇತವಾದ ಗುಳಿಗನಿಗೆ ಗೌಡ ಜನಾಂಗದ ವ್ಯಕ್ತಿಗಳ ಮೂಲಕ ಕೋತ್ರಿ (ಕಡ್ಡಿ ಬತ್ತಿ-ಕೋಲ್ಪಂಜು) ಇಟ್ಟು ವಾರ್ಷಿಕವಾಗಿ ಬಲಿ ಇಡಿಸುತ್ತಾರೆ.

**ಗುತ್ತಿ ಮಠ** : ನಂಜರಾಯಪಟ್ಟಣ-ಹೊಸಪಟ್ಟಣದ ನಡುವೆ ಕಾವೇರಿ ನಡುಹೊಳೆಯ ದಿಬ್ಬದಲ್ಲಿ ಈ ಮಠವಿದೆ. ಕ್ರಿ.ಶ.೧೮೪೩ರ ಮಾದಾಪುರ ಶಾಸನದಲ್ಲಿ ಬರುವ ಶಾಂತವೀರಸ್ವಾಮಿಗಳ ಕರಕಮಲ ಸಂಜಾತರಾದ ಸೋಮಶೇಖರ ಶಿವಯೋಗಿಗಳ ಗದ್ದುಗೆ (ಸೋಮಪ್ಪನ ಗದ್ದುಗೆ) ಈ ಮಠದಲ್ಲಿದೆ. ಕಾವೇರಿ ಕವಲುಗಳ ನಡುವೆ ದಿಬ್ಬ ದ್ವೀಪ ಅಂದರೆ ಗುತ್ತಿ ಪ್ರದೇಶದಲ್ಲಿರುವ ಕಾರಣ ಈ ಹೆಸರಿದ್ದು, ಈ ಮಠದ ವಾಸ್ತು ದೇಗುಲದಂತೆಯೇ ಇದೆ. ಕ್ರಿ.ಶ. ಸು ೧೨೪೫ರಲ್ಲಿ ಈ ಪ್ರದೇಶಕ್ಕೆ ಕೊಡಗು-ಶ್ರೀರಂಗಪಟ್ಟಣ ಎಂಬ ಹೆಸರು ಇತ್ತು. ಆ ಹೆಸರು ಬರಲು ಬಹುಶಃ ಶ್ರೀರಂಗನ ಗುಡಿಯ ನೆಲೆ ಇದಾಗಿದ್ದಿರಬೇಕು. ಈ ಮಠದ ಆಸ್ತಿಯಾಗಿ ೧೦ ಎಕರೆ ಬಾಣೆ ಜಮೀನು ಇದೆ.

**ಬೆಂಮತ್ತಿ ಮಠ:**[೩೬] ದಕ್ಷಿಣ ಕೊಡಗಿನ ದನುಗಾಲದ ಬಳಿ ಇರುವ ಈ ಮಠ ತೊರೆನೂರು ಮಠದ ಶಾಖೆ ಆಗಿದ್ದು ಈಗ ಸ್ವತಂತ್ರ ಸಂಸಾರಿ ಮಠವಾಗಿದೆ. ಶಾಸನದ ಸೂಚನೆಯ ರೀತ್ಯಾ ಲಿಪಿಯ ಆಧಾರವನ್ನೂ ಗಮನಿಸಿ ಹೇಳಿದರೆ ಲಿಂಗರಾಜ ಒಡೆಯನು ಕ್ರಿ.ಶ. ೧೮೧೪-೧೫ರಲ್ಲಿ ದಾನ ನೀಡಿ ಈ ಮಠವನ್ನು ಹೆಸರಿಸಿದಂತೆ ತೋರುತ್ತದೆ. ವಿರಾಜಪುರ ಮಠ ಎಂಬ ಹೆಸರೂ ಇದಕ್ಕೆ ಇದ್ದಂತೆ ಕಾಣುತ್ತದೆ.

**ದನಗಲ್ಲು ಮಠ:**[೩೭] ಇದು ಯಡತೊರೆ ಮಠಕ್ಕೆ ಸೇರಿದ ಅಂದರೆ ಬಹುಶಃ ಬೆಟ್ಟದಪುರ ಮಠದ ಶಾಖೆಯಾಗಿರುವಂತಿದೆ. ಶಾಸನದ ಆಧಾರದಿಂದ ಕ್ರಿ.ಶ. ೧೮೩೦-೩೧ರ ಚಿಕ್ಕವೀರ ರಾಜೇಂದ್ರ ಒಡೆಯನ ಕಾಲದಲ್ಲಿ ಮಠದ ಜೀರ್ಣೋದ್ಧಾರ ಮಾಡಿ ಸಿದ್ದಲಿಂಗಸ್ವಾಮಿ ಅವರಿಗೆ ಕೊಡಲಾಗಿದೆ ಎನ್ನಬಹುದು.

**ಮಾಯಮುಡಿ ಮಠ:** ಉಜ್ಜಯಿನಿ ಶಾಖೆಗೆ ಸೇರಿದ ಜಪದಕಟ್ಟೆ ಮಠ ಎಂಬ ಹೆಸರು ಇದಕ್ಕಿದೆ. ಇಲ್ಲಿನ ಶಾಸನದ ಲಿಪಿ ದೃಷ್ಟಿಯಿಂದ ಅಲ್ಲದೆ ವೀರರಾಜೇಂದ್ರ ಒಡೆಯನ ಹೆಸರು ಹಾಗೂ ಅಂದಿನ ಗುರು ಗಂಗಾಧರದೇವರು ಎಂಬ ಹೆಸರೂ ಇರುವ ಕಾರಣ ಕ್ರಿ.ಶ. ೧೮೦೯ರಲ್ಲಿ ವೀರರಾಜೇಂದ್ರ ಒಡೆಯನಿಂದ ಈ ಮಠ ಜೀರ್ಣೋದ್ಧಾರವಾದಂತಿದೆ. ಹುತ್ತರಿ ಸಮಯದಲ್ಲಿ ಕುಪ್ಪಸದಟ್ಟಿ ಉಟ್ಟು ಇಲ್ಲಿನ ಸ್ವಾಮಿಗಳು ಕುದುರೆ ಹತ್ತಿ ಹೋಗಿ ಆಶೀರ್ವಾದದ ಕೋಲು ಹೊಡೆದ ಮೇಲೆ ಮಾಯಮುಡಿ ಮಡಿಕೆಬಿಡು ಹುತ್ತರಿ ಕೋಲಾಟ ಆರಂಭವಾಗುತ್ತಿತ್ತು. (ತುಲಾಸಂಕ್ರಮಣದ ಆಚರಣೆಯೂ ಮಠದಲ್ಲಿದೆ) ವೀರಶೈವರೂ ಕೊಡವ ವೇಷದಲ್ಲಿ ಕೋಲಾಟದಲ್ಲಿ ಭಾಗವಹಿಸುತ್ತಿದ್ದರು. ಮಠದ ಬಳಿ ಕೊಂಡ ಹಾಯುವ ಪದ್ಧತಿ ಇತ್ತು. ಪಾಷಾಣ ಮೂರ್ತಿ ಎಂಬ ತೆರೆಯನ್ನು ಪಾಲೆಯರಿಂದ ಕಟ್ಟಿಸುವ ಪದ್ಧತಿ ಇತ್ತು. ಕೋತೂರಿನ ಅಮ್ಮಕೊಡವರಾದ ಹೆಮ್ಮಚ್ಚ ಮನೆತನದವರು ಉಗಾದಿಯ ಸಮಯದಲ್ಲಿ ಈ ಮಠದ ಜಂಗಮರನ್ನು ಕರೆಸಿ ತಮ್ಮಲ್ಲಿನ ಈಶ್ವರಲಿಂಗಕ್ಕೆ ಮಹಾಪೂಜೆ, ಹಿರಿಯರ ಸ್ಮಾರಕ ಕಟ್ಟಡವಾದ ಕೈಮಡ ಸಮಾಧಿಗಳಿಗೆ ವಾರ್ಷಿಕ ಸಂಸ್ಕಾರ ಮಾಡಿಸುತ್ತಿದ್ದರು. ಗುರುಸ್ಥಲದ ಈ ಮಠ ಮೂರುತಲೆಮಾರುಗಳ ಹಿಂದೆ ಸಂಸಾರಿ ಮಠವಾಯಿತಂತೆ.

**ಮಡಿಕೆಬೀಡು ಮಠ :** ಮುಪ್ಪಿನಸ್ವಾಮಿ ಗದ್ದುಗೆ ಇರುವ ಈ ಮಠಕ್ಕೆ ಮುಪ್ಪಿನಸ್ವಾಮಿ ಮಠ, ಮೂಗನ ಮಠ ಎಂಬ ಹೆಸರಿದೆ. ಸಂಸಾರಿ ಮಠವಾಗಿ ಇಬ್ಬರು ಹೆಂಗಳೆಯರು 'ಮಠದ ಅಮ್ಮ' ಆಗಿದ್ದು ಈಗ ಅವರು ಇಲ್ಲವಾಗಿದ್ದಾರೆ. ಮಂಗಳೂರಿನ ಗುರುಪುರದ ಮಠದ ಸಂಬಂಧ ಈ ಮಠಕ್ಕಿದೆ. ಕ್ರಿ.ಶ.೧೬೧೫ರ ಸುಮಾರಿನಲ್ಲಿ ಕೆಳದಿ ವೆಂಕಟಪ್ಪನಾಯಕನು ಚನ್ನಬಸವಪ್ಪಸ್ವಾಮಿ ಎಂಬುವರಿಗೆ ಗುರುಪುರಮಠವನ್ನು ಉಂಬಳಿ ಸಹಿತ ನೀಡಿದ. ಆ

೩೬,೩೭. ಎ.ಕ. ಸಂಪುಟ ೧. ಅದೇ, ದನಗಲ್ಲು ೧೦೩, ೧೦೪

ಪರಂಪರೆಯಲ್ಲಿ ಬಂದ ಮತ್ತೊಬ್ಬ ಚರಮೂರ್ತಿ ಚನ್ನಬಸಪ್ಪಸ್ವಾಮಿ ಕ್ರಿ.ಶ.೧೮೭೭ ರಲ್ಲಿದ್ದವರು.[೩೮] ಬಹುಶಃ ಚರಮೂರ್ತಿಯಾಗಿ ಬಂದು ಅಂತ್ಯಕಾಲದಲ್ಲಿ ಮಡಿಕೆಬೀಡಿಗೆ ಬಂದು ಮುಪ್ಪಿನಸ್ವಾಮಿ ಎನಿಸಿ ನೆಲೆಗೊಂಡಿರಬೇಕು. ಗುರುಪುರದ ಪ್ರಾಚೀನ ಗುರುಗಳ ಗದ್ದುಗೆ ಮಡಿಕೇರಿ ಸಮೀಪ ಗೋಣಿಕೊಪ್ಪಲುವಿನಲ್ಲಿ ಇದ್ದು ಈ ಗದ್ದುಗೆಗೂ ಕೊಡಗು ರಾಜರಿಂದ ದತ್ತಿಭೂಮಿ ಇತ್ತು.[೩೯] ಎನ್ನಲಾಗಿದೆ. ಬಹುಶಃ ಗುರುಪುರ ಮಠಕ್ಕೂ ಕೊಡಗು ರಾಜರಿಂದ ದತ್ತಿಭೂಮಿ ದೊರೆತಿರಬೇಕು. ಆದರೆ ಮಡಿಕೇರಿಗೂ ಗೋಣಿಕೊಪ್ಪಲಿಗೂ ಸುಮಾರು೪೦ ಕಿ.ಮೀ. ದೂರವಿದೆ. (ದ.ಕೊಡಗಿನ) ಗೋಣಿಕೊಪ್ಪಲಿನಲ್ಲಿ ಇದ್ದದ್ದು ದಾಸೋಹಕ್ಕೆ ಹೆಸರಾಗಿದ್ದ ಎಡೆಮನೆ ಮಠ ಇಂದಿಲ್ಲ. ಗುರುಪುರದ ಪ್ರಾಚೀನ ಗುರುಗಳ ಗದ್ದುಗೆ ಇರುವುದು ಗೋಣಿಕೊಪ್ಪಲುವಿನಿಂದ ಸುಮಾರು ೧೨ ಕಿ.ಮಿ. ದೂರದಲ್ಲಿರುವ ಮಡಕೆಬೀಡು ಎಂಬ ಗ್ರಾಮದಲ್ಲಿ. ಅಲ್ಲದೆ ಕ್ರಿ.ಶ.೧೬೧೫ರ ಸಮಯದಲ್ಲಿ (ಕೊಡಗಿನ) ಪಾಲ್ಪರೆಯನ್ನೂ ಗೆದ್ದ ಕೆಳದಿ ವೆಂಕಟಪ್ಪನಾಯಕನ ಆಡಳಿತಕ್ಕೆ ಅದು ಒಳಪಟ್ಟಿತ್ತು[೪೦] ಎನ್ನಲಾಗಿರುವುದರಿಂದ, ಪಾಲ್ಪರೆಗೆ ಸಮೀಪದ ಮಡಿಕೆಬೀಡಿನಲ್ಲಿ ಗುರುಪುರ ಮಠದ ಶಾಖೆಯನ್ನು ನಿರ್ಮಿಸಿರುವ ಸಾಧ್ಯತೆ ಇದೆ. ಈ ಮಠ ಈಗ ಮಠದಮನೆ ಎನ್ನಿಸಿದೆ. ಗುರುಪುರ ಮಠದವರು ಇಲ್ಲಿನ ಆಸ್ತಿ ಅನ್ಯಾಕ್ರಮಣವಾಗಿರುವ ಬಗ್ಗೆ ಗಮನಿಸಿದ್ದಾರೆಂದು ತಿಳಿದು ಬಂದಿದೆ. ಗೋಣಿಕೊಪ್ಪಲಿನಲ್ಲಿದ್ದ ಮಠಕ್ಕೆ ಸಂಬಂಧಿಸಿದುದು ಈ ಮಠ.

**ನಾಣಚ್ಚಿ ಮಠ** : ಹಾಲೇರಿ ಅರಸರು ಶ್ರೀಮಂಗಲನಾಡು ಪೂರ್ವಬಾಡಗದ ಬಳಿ ನಿರ್ಮಿಸಿದ ಈ ಮಠಕ್ಕೆ ೨೮ ಎಕರೆ ಭೂಮಿ ಹಾಗೂ ಕಾಡು ನೀಡಿದ್ದರಂತೆ. ಮಠಕ್ಕೂ ನೆರೆಯ ಕುಟ್ಟದ ಗ್ರಾಮದೇವತೆ ಕರಿಂಗಾಳಿ ಅವ್ವೆ (ಕುಟ್ಟಾಲಮ್ಮ)ಗೂ ಜಾನಪದ ಸಂಬಂಧವಿದೆ. ಆಕೆಯ ವಾರ್ಷಿಕ ಜಾತ್ರೆಯಲ್ಲಿ ಕೇರಳದ ಮುನ್ನೂಟ ಜಾತಿಯವರಿಗೆ ಮಾತ್ರ ತೆರೆ ಕಟ್ಟುವ ಹಕ್ಕು ಇದೆಯಂತೆ. ಅವರ ಮೇಲೆ ಆಕೆಯ ತಿರುವಳ (ದೈವಾವೇಶ) ಬಂದಾಗ ಕೇಳುತ್ತಾಳೆ: 'ನಾಣಚ್ಚಿ ಮಠತ್ತುಳ್ಳ ಗುರುಗಳು ಉಂಡೋ-'ನಾಣಚ್ಚಿ ಮಠದ ಗುರುಗಳು ದಯಮಾಡಿಸಿರುವರೇ? ಅಂದರೆ ಅಂತಹ ಭಕ್ತಿ, ಗೌರವಗಳು ಮಠದ ಕುರಿತಾಗಿ ಆ ದೈವಕ್ಕಿದೆ ಎಂಬುದು ಗಮನಾರ್ಹ. ಆದರೆ ಕುಟ್ಟ ಪ್ರದೇಶದ ಜೆಟ್ಟ ಕುರುಬರ ಏಳಿಗೆಗಾಗಿ ಇದ್ದ ಎಂಟು ಮಠಗಳಲ್ಲಿ ನಾಣಚ್ಚಿಯಲ್ಲಿದ್ದ ಮಠವೂ ಒಂದಾಗಿತ್ತು; ಗುರುಭೂತಪ್ಪ ಎಂಬ ಶ್ರೀಮಂತ ಅದರ ಅಧಿಪತಿ ಆಗಿದ್ದ[೪೧] ಎಂಬ ಮಾತಿನಲ್ಲಿ ಜೆಟ್ಟಕುರುಬರಿಗೇ ಮೀಸಲಿದ್ದ ಮಠ ನಾಣಚ್ಚಿಮಠ ಆಗಿತ್ತು

---

೩೮. ಪು. ಶ್ರೀನಿವಾಸ ಭಟ್ಟ: 'ಗುರುಪುರದ ಜಂಗಮ ಮಠ', ಬಸವ ಪಥ, ಆಗಸ್ಟ್ ೧೯೮೦, ಪು.೮೮

೩೯. ಪು. ಶ್ರೀನಿವಾಸಭಟ್ಟ : 'ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ವೀರಶೈವಧರ್ಮ', ಪರಂಜ್ಯೋತಿ ಸಂಚಿಕೆ-೧, ಸಂ.೨೭, ಆಗಸ್ಟ್ ೧೯೯೩, ಪು.-೩೭

೪೦. ಕೆಳದಿ ಗುಂಡಾ ಜೋಯಿಸ್ : ಇಕ್ಕೇರಿಯ ಐತಿಹಾಸಿಕ ಹಿನ್ನಲೆ, ಕೆಳದಿ, ಪು. ೩೫, ೫೨.

೪೧. ಡಾ|| ಪಿ.ಎನ್. ಹರೀಶ್ : ಎರವರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ೧೯೯೩, ಪು.೨೬೫

ಎನ್ನಲು ಸಾಕ್ಷ್ಯ ಸ್ಪಷ್ಟವಾಗಿಲ್ಲ. ಅಂತಾಗಿ ಕುಟ್ಟ ಪ್ರದೇಶದಲ್ಲಿ ವೀರಶೈವರು ಸಾಕಷ್ಟು ಇದ್ದು, ಬೆಟ್ಟು ಕುರುಬರನ್ನು ಶಿಷ್ಯರನ್ನಾಗಿಸಿಕೊಂಡಿದ್ದ ವೀರಶೈವಮಠ ನಾಣಚ್ಚಿ ಮಠವಾಗಿತ್ತು ಎನ್ನುವುದೆ ಸೂಕ್ತ. ಕೊಡವ ಹಿರಿಯ ಜನರೂ ಹಾಲೇರಿ ಅರಸರ ಕಾಲದಲ್ಲಿ ಅದೊಂದು ವೀರಶೈವ ಮಠವಾಗಿತ್ತು ಅಲ್ಲಿ ಶಿವದೇಗುಲವಿತ್ತು[೪೧-ಅ] ಎನ್ನುತ್ತಾರೆ.

**ಹೆಗ್ಗಡಹಳ್ಳಿ ಮಠ:** ಶನಿವಾರಸಂತೆಯ ಬಳಿ ಇರುವ ಶ್ರೀಶೈಲ ಪೀಠದ ಶಾಖೆಗೆ ಸೇರಿದ ಈ ಮಠ ಒಂದು ಕಾಲಕ್ಕೆ ಕೊಡಗಿಗೆ ಸೇರಿದ್ದ ಮಠವಾಗಿತ್ತು. ಈಗ ಹಾಸನ ಜಿಲ್ಲೆಗೆ ಸೇರಿದ ಕೊಡಗಿನ ಗಡಿಯ ಸನಿಹದ ಮಠವಾಗಿದೆ. ವೀರರಾಜೇಂದ್ರ ಒಡೆಯ ಈ ಮಠಕ್ಕೆ ಜಹಗೀರು ನೀಡಿದ್ದ. ವಿಶೇಷವಾಗಿ ಮಕರಸಂಕ್ರಾಂತಿಯ ಮರುದಿನ ನಡೆಯುವ ಗೊದ್ದು ದೊಡ್ಡಯ್ಯನ ಜಾತ್ರೆ (ಹಾಸನಜಿಲ್ಲೆ) ಹಾಗೂ ಕೊಡಗಿನ ಹುಲುಕೋಡಯ್ಯನ ಜಾತ್ರೆಗೂ ಸಾಂಸ್ಕೃತಿಕವಾಗಿ ಸಂಬಂಧವಿದೆ. ಅಂದು ಮಠದ ಗುರುಗಳು ಎರಡು ನೆಲೆಗೂ ದಯ ಮಾಡಿಸುತ್ತಾರೆ. ಬಲಗೈ ಹರಿಜನ ಪಂಗಡದ ವ್ಯಕ್ತಿಗಳಿಬ್ಬರಿಗೆ ದೀಕ್ಷೆ ನೀಡಿ ಅವರವರ ಕುಲದ ಕರ್ಮಾದಿಗಳಿಗೆ ಮುಖ್ಯಸ್ಥರೆಂದು ಅಧಿಕೃತ ಮುದ್ರೆಯು ಈ ಮಠದ ವತಿಯಿಂದ ಬೀಳುತ್ತದೆ. ಈ ಕೊಟವಳಿ-ಕಣಿಯರು ದೀಕ್ಷೆಪಡೆದ ಮೇಲೆ ಸಸ್ಯಾಹಾರಿಗಳಾಗಿ ಬಿಡುತ್ತಾರೆ. ಮಠದ ಉತ್ಸವ ಜಾತ್ರೆಗಳಲ್ಲಿ ಗುರುಗಳ ಜೊತೆ ಸನಿಹವಾಗಿ ಸಾಗುತ್ತಾರೆ. ಈ ಮಠದ ಇಂದಿನ ಸ್ವಾಮಿಗಳು ಶ್ರೀಶಿವಶಂಕರ ಶಿವಾಚಾರ್ಯರು.

**ಮೈಲಾತಪುರದ ಮಠ** : ಹಾಸನಜಿಲ್ಲೆ ಅರಕುಲಗೂಡಿನವರೆಗೂ ಒಂದು ಕಾಲಕ್ಕೆ ಕೊಡಗಿನ ಗಡಿ ಇದ್ದು, ಕ್ರಿ.ಶ.೧೨೪೫ರಲ್ಲಿ ಹೊಯ್ಸಳ ಸೋಮೇಶ್ವರನನ್ನು ಕೊಡಗು ಶ್ರೀರಂಗಪಟ್ಟಣದ ರಾಜಕುಮಾರರಾದ ಸೋಮದೇವ, ಬೊಪ್ಪದೇವರು ಗೌರವಿಸಿ, ಆದರಿಸಿದ ನೆಲೆ ಮೈಲಾತಪುರ, ಇಂದೂ ಕೊಡಗಿನಲ್ಲಿದೆ. ಆದರೆ ಅರಕಲಗೂಡು ಬಳಿಯ ಮೇರುವೆ ಮಠದಿಂದ ಬಂದ ಚಂದಾರಯ್ಯ ಮೈಲಾತಪುರ ಮಠದ ಸ್ಥಾಪಕರು. ಚರಮೂರ್ತಿಯಾಗಿ ಈ ಸಂಚಾರಿ ಮಠದ ಸ್ಥಾಪನೆಗೆ ಕಾರಣರಾದವರು. ಉಜ್ಜಯಿನಿ ಶಾಖೆಯ ಈ ಮಠದಲ್ಲಿ ಅವರ ವಂಶೀಕರು ಬಿನ್ನಹ ಬಿಡುಗಡೆಗೆ ಹಕ್ಕುದಾರರಾಗಿದ್ದಾರೆ. ಆಂಗ್ಲರ ಆಳ್ವಿಕೆಯಲ್ಲಿ ಈ ಮಠಕ್ಕೆ ಉಂಬಳಿ ದೊರೆಯಿತಂತೆ. ಇದಕ್ಕೆ ಕಾರಣವಿದೆ. ಇಲ್ಲಿನ ಸ್ವಾಮಿಗಳು ಕತ್ತಿವರಸೆಯಲ್ಲಿ ಬಹಳ ಗಟ್ಟಿಗರು. ನಾಲ್ಕುನೂರು ನಿಂಬೆಹಣ್ಣು ಎಸೆದಾಗ ಒಂದು ಸುತ್ತು ತಿರುಗಿ ಕತ್ತಿವರಸೆ ಮಾಡುವಲ್ಲಿ ಕತ್ತರಿಸಿ ಬೀಳಿಸಬೇಕು ಎಂಬ ಶರತ್ತು ಸ್ವೀಕರಿಸಿದ ಸ್ವಾಮಿಗಳು ನಾನೂರು ಹಣ್ಣುಗಳನ್ನು ಕತ್ತರಿಸಿದರು. ಆದರೆ ೪೦೧ಹಣ್ಣುಗಳನ್ನು ಎಸೆದದ್ದರಿಂದ ಒಂದು ಉಳೀತು. ಅದನ್ನು ಏನು ಮಾಡಲಿ ? ಎಂದಾಗ ಅದು ಎಸೆದು ಎಷ್ಟು ದೂರ ಬೀಳಿಸುವಿರೋ ಅಷ್ಟು ಜಾಗ ನಿಮ್ಮದು ಎಂದರು, ಆಂಗ್ಲ ಅಧಿಕಾರಿಗಳು. ಸ್ವಾಮಿಗಳು ಉಳಿದ ನಿಂಬೆಹಣ್ಣು

---

೪೧-ಅ : ಕುಮಟೂರು ಗ್ರಾಮದ ಬಿ.ಕೆ.ಅಣ್ಣಯ್ಯ (೭೦) ಅವರು ತಿಳಿಸಿದ ವಿಷಯ.

ಎಸೆಯಲಾಗಿ ಏಳು ಖಂಡುಗ ಗದ್ದೆ ಆಚೆ ಬಿತ್ತು. ಅಲ್ಲಿಯವರೆಗೆ ಉಂಬಳಿ ಜಮೀನನ್ನು ಆಂಗ್ಲರು ಮಠಕ್ಕೆ ನೀಡಿದರಂತೆ. ಶಾಸನ ಮಾಡಿದರಂತೆ. ಚರಪಟ್ಟದ ಮಠ ಸ್ಥಿರವಾಯಿತು. ಶಿವಾನುಭವ ಗೋಷ್ಠಿ ವಟುದೀಕ್ಷೆ, ಸಿದ್ದೇಶ್ವರ ಆರಾಧನೆ ಇಲ್ಲಿ ನಡೆಯುತ್ತದೆ. ಗೌರೀ ಹಬ್ಬದಲ್ಲಿ ಕೋರಣ್ಯ ಮಾಡಿ, ದಾಸೋಹ ನಡೆಸುತ್ತಾರೆ ಮಠಾಧಿಪತಿ ಸಿದ್ದಪ್ಪಯ್ಯ ಅವರು.[೪೨] ಮಠದ ಬಳಿ ಬಲಗೈ ಹರಿಜನ ಒಕ್ಕಲುಗಳಿದ್ದು 'ಶನಿದೇವಗಣ' (ಮೈಮೇಲೆ ಶನಿದೇವರು ಬರುವುದು) ಆಚರಿಸುತ್ತಾರೆ. ಇದು ಮಠದ ಮುಂದೆಯೆ ನಡೆಯುತ್ತದೆ. ಶಿಲಾವಿಗ್ರಹವೂ ಇದ್ದು ಪೂಜೆಗೊಳ್ಳುತ್ತಿದೆ. ಮಠದ ಹಾದಿಯಲ್ಲಿ ವಿಶಾಲವಾದ ಬಿಲ್ವತ್ರೆವನ ಪ್ರಾಚೀನ ಮಳೆ ಮಲ್ಲೇಶ (ಮಳೆ ಆಗದಿದ್ದಾಗ ಕಾಡು ಮಲ್ಲೇಶನಿಗೆ ಆರಾಧನೆ ನಡೆಸಿ ಮಳೆ ಬಂದದ್ದರಿಂದ ಈ ಹೆಸರು ಕೊಟ್ಟಿದೆ) ದೇಗುಲವಿದೆ. ವಿಷ್ಣು, ದುರ್ಗೆ ಹಾಗೂ ಶಿವಲಿಂಗಗಳಿದ್ದರೂ, ವಿಗ್ರಹಗಳು ಭಿನ್ನವಾಗಿವೆ. ಚಂಗಾಳ್ವರ ಕ್ರಿ.ಶ.೧೩ನೇ ಶತಮಾನ ಕಾಲದ ಈ ದೇಗುಲ ಚಂಗಾಳ್ವ ಶೈಲಿಗೆ ಒಂದು ಉದಾಹರಣೆ ಆಗಿದೆ. ಇನ್ನೊಂದು ವಿಶಿಷ್ಟ ಸಂಗತಿ ಎಂದರೆ, ನೆರೆಯ ಕಿತ್ತೂರು ಹಾಲೇರಿ ಅರಸರ ಕಾಲದಿಂದಲೂ ಕತ್ತಿವರಸೆಗೆ ಪ್ರಸಿದ್ಧಿ ಆದ ಕಾರಣ, ಹಾಗೂ ಮೈಲಾತಪುರ ಮಠದ ಸ್ವಾಮಿಗಳ ಕತ್ತಿವರಸೆ ಶರತ್ತಿನ ಕತೆಗೂ ಬಹುಶಃ ಸಂಬಂಧವಿದೆ. ಆವಾಗಿ ಇಂದಿಗೂ ಹುಲುಕೋಡಯ್ಯನ ಜಾತ್ರೆಯ ಸಂದರ್ಭದಲ್ಲಿ ಅವನ ತಮ್ಮ ಕಿತ್ತೂರಿನ ಕುಮಾರಲಿಂಗೇಶ್ವರನ ಗುಡಿಯ ಬಳಿ ಕತ್ತಿವರಸೆ ಪ್ರದರ್ಶನ ನಡೆಯುತ್ತದೆ.

**ನಂದಿನಿಪುರದ ಮಠ:** ನಾಕೂರು ಶಿರಂಗಾಲದ ನೆಲೆಗೆ ಸೇರಿದ ಮಠವಿದು. ಅಂದಗೋವೆಗೆ ಬಹುಶಃ ಮೊದಲಿಗೆ ನಂದಿನಿಪುರ ಎಂಬ ಹೆಸರಿದ್ದಿರಬೇಕು. ಅಂದಗೋವು ಚಂದದ ಹಸು ಅರ್ಥಾತ್ ನಂದಿನಿ ಎಂಬ ಶಬ್ದ ಇವುಗಳನ್ನೆಲ್ಲ ಅಡಕಗೊಂಡಿದ್ದು ಇಲ್ಲಿನ ಮಠವೂ ಪ್ರಾಚೀನವಿದ್ದಿರಬೇಕು. ಗೋಸಂಪತ್ತಿಗೆ ಹೆಸರಾದುದಾಗಿರಬೇಕು. ಒಂದು ಕಾಲಕ್ಕೆ ಇಲ್ಲಿ ಇದ್ದ ದೇಗುಲ, ಬಿಲ್ವತ್ರೆವನ ಇಂದು ನೆಲಗಚ್ಚಿವೆ. ಇನ್ನೊಂದು ಗಮನಾರ್ಹ ಅಂಶವೆಂದರೆ ಹಾಲೇರಿ ವಂಶದ ಕೊನೆ ಅರಸು ಚಿಕ್ಕವೀರರಾಜೇಂದ್ರ ಒಡೆಯನ ದಿವಾನ ಕುಂಟ ಬಸವಯ್ಯ ಅಂದಗೋವೆಯವನು. ಅವನ ಮನೆತನದವರು ಕೊಡವರಾಗಿ ಇಂದು 'ಕೇಚಿರ' ಎಂಬ ಮನೆ ಹೆಸರು ಹೊಂದಿದ್ದಾರೆ. ಬಹುಶಃ ಈ ಬಸವಯ್ಯ ಇಲ್ಲಿನ ಮಠದ ಹಿನ್ನಲೆ ಗಮನಿಸಿದರೆ ವೀರಶೈವ ಧರ್ಮದ ಪ್ರಭಾವಕ್ಕೆ ಒಳಗಾಗಿದ್ದವ. ಅವನು ಹಾಲೇರಿ ಅರಸನ ಗಮನಕ್ಕೆ ಬರುವ ಮುನ್ನಾ ಅಜ್ಞಾತ ಜಟ್ಟಿಯಾಗಿದ್ದ. ಕತೆ ಹೀಗಿದೆ.[೪೩] ಒಮ್ಮೆ ಮೈಸೂರಿನಿಂದ ಬಂದ ಪ್ರಸಿದ್ಧ ಜಟ್ಟಿಯೊಬ್ಬ ಕೊಡಗಿನ ಅರಸನ ಮುಂದೆ ಸೆಣಸಲು ಯಾರೇ ಬರಲಿ ಎಂದು ಸವಾಲು ಇಟ್ಟ. ಆಗ ಮುಂದೆ ಬಂದು ಆ ಜಟ್ಟಿಯನ್ನು ಸೋಲಿಸಿದವನು ಅಂದಗೋವೆಯ ಈ ಬಸವಯ್ಯ.

---

೪೨. ಇವರಿಂದ ವಿವರ ತಿಳಿಯಲು ನೆರವಾದವರು ತಾಳೂರು - ಕಿತ್ತೂರಿನ ಶ್ರೀ ಕೆ.ವಿ. ಮಂಜುನಾಥ್ ಅವರು.

೪೩. ಎಂ.ಜಿ. ನಾಗರಾಜ್ : 'ಕೊಡಗಿನಲ್ಲಿ ವೀರಶೈವ ಧರ್ಮ' ಪರಿಪೂರ್ಣ (ಸಂತ ಅನ್ನಮ್ಮ ಸ್ಮರಣ ಸಂಚಿಕೆ), ವೀರರಾಜೇಂದ್ರಪೇಟೆ, ೧೯೯೩, ಪು.೧೦೨

ಅಂತಾಗಿ ರಾಜದೃಷ್ಟಿಗೆ ಬಿದ್ದು, ಅರಮನೆಯಲ್ಲಿ ಸ್ಥಾನಮಾನಗಳಿಸಿದ, ಹೆಸರು ಪಡೆದ, ದಕ್ಷನಿದ್ದ ಎಂದೂ ಜನ ಹೇಳುವ ಕತೆಯಲ್ಲಿದೆ. ಇವನು ರಾಜನ ಒತ್ತಾಸೆ, ಕೃಪೆಗೆ ಹೆಚ್ಚು ಹತ್ತಿರವಾಗಿ ಇತರರ ಮತ್ಸರಕ್ಕೂ ಗುರಿಯಾಗಿದ್ದುದು ಸಹಜ. ಆದಾಗಿ ಕಾದಂಬರಿ ಮೂಲದಲ್ಲಿ ಬಂದ ಕುಂಟ ಬಸವಯ್ಯನ ವಿಭಿನ್ನ ಚಿತ್ರ, ಜನಪದದಲ್ಲಿ ಕಾಣಬರದು. ಅದೇನೇ ಇರಲಿ ನಂದಿಪುರ ಮಠದ ಶಿಷ್ಯನಾಗಿ ಬಸವಯ್ಯನಿದ್ದ ಎಂಬುದು ಜನಪದರ ಮಾತು.

**ಚಂಗಡಹಳ್ಳಿಯ ಮಠ:** ಚಿತ್ರದುರ್ಗದ ಜಗದ್ಗುರುಗಳ ಈ ಖಾಸಾಮಠ, ಕ್ರಿ.ಶ. ೧೭೩೦-೫೦ರ ಕಾಲದ ಹಳಮೆ ಹೊಂದಿದೆ. ಶಿರಹಟ್ಟಿ ಸಿದ್ದಲಿಂಗ ಸ್ವಾಮಿಗಳ ಗದ್ದುಗೆ ಇಲ್ಲಿ ಇದೆ. ಮಠದ ಪ್ರವೇಶ ದ್ವಾರದಲ್ಲಿ ಶಾಸನವೊಂದಿದ್ದು ಮಠಕ್ಕೆ ಸಂಬಂಧಿಸಿದ ಕೆರೆಯ ವಿಷಯವನ್ನೂ ತಿಳಿಸುವಂತಿದೆ. ಇಂದು ಹಾಸನ ಜಿಲ್ಲೆಗೆ ಸೇರಿದರೂ ಹಿಂದೆ ಕೊಡಗಿಗೆ ಸೇರಿದ್ದ ಈ ಮಠಕ್ಕೆ ಇಂದಿನ ಕೊಡಗಿನಲ್ಲಿ ಜಮೀನು ಇದೆ. ಮಠದ ನಿರ್ವಹಣೆಯನ್ನು ಶ್ರೀಚಂದ್ರಶೇಖರ ಸ್ವಾಮಿಗಳು ನೋಡಿಕೊಳ್ಳುತ್ತಿದ್ದಾರೆ.

**ತೇಜೂರು ಮಾಯಿಗೌಡನಹಳ್ಳಿ ರಾಜಾಪುರದ ಮಠ** : ಹೇಮಾವತಿ - ಯಗಚಿ ನದಿಗಳ ಸಂಗಮದ ಬಳಿ ಕೊಡಗಿಗೆ ಸೇರಿದ್ದ ರಾಜಾಪುರ ಮಠವಿತ್ತು. ಅಣೆಕಟ್ಟಿನಲ್ಲಿ ಅದು ಮುಳುಗಿತು. ಬಾಳೆಹೊನ್ನೂರು ಶಾಖೆಯ ಶಿಷ್ಯವರ್ಗದ ಈ ಮಠವನ್ನು ಶಿಷ್ಯಮಂಡಲಿ ಅಪೇಕ್ಷೆಯ ಮೇರೆಗೆ ೧೯-೪-೧೯೫೧ರಲ್ಲಿ ತೇಜೂರಿನಲ್ಲಿ ಈ ಮಠ ಪುನರ್ ಸ್ಥಾಪನೆಗೊಂಡಿತು. ಕೊಡಗಿನ ಶಿಡುಗಳಲೆ ಮಠದ ಪಟ್ಟದ ಬಸವರಾಜ ದೇಶಿಕೇಂದ್ರರಾದ ಶ್ರೀ ಚಂದ್ರಶೇಖರಸ್ವಾಮಿಗಳಿಗೆ ಶಿವದೀಕ್ಷಾ ಪಟ್ಟಾಧಿಕಾರವಾಗಿ ಮಠಾಧಿಪತ್ಯ ದೊರೆಯಿತು.

**ಮೈಸೂರಿನ ಕೊಡಗು ಮಠ:** ಕಾಂತಿ ಮಹಾಸ್ವಾಮಿಗಳ ಮಠ ಎಂಬ ಹೆಸರು ಹೊಂದಿ ಮೈಸೂರಿನ ಬಸವೇಶ್ವರ ರಸ್ತೆ (ಪ್ರಭುದೇವ ಚಿತ್ರಮಂದಿರದ ಮುಂದಿನ ಹಾದಿ)ಯಲ್ಲಿದೆ. ಮಹಾರಾಜರ ಕುದುರೆಯನ್ನು ಪಳಗಿಸಿ ತೋರಿಸಿದ ಸಾಹಸಕ್ಕಾಗಿ ಸ್ವಾಮಿಗಳಿಗೆ ಜಹಗೀರು ಒದಗಿತಂತೆ. ಸೋಮವಾರಪೇಟೆ ಮಠದೊಡನೆ ಸಂಬಂಧವೂ ಇತ್ತು. ಈಗ ಇದು ಸಂಸಾರಿ ಮಠವಾಗಿದೆ. ಕೊಡಗಿನ ಪ್ರಾತಿನಿಧಿಕ ಮಠವಾಗಿ ಇದ್ದ ಈ ಮಠದಲ್ಲಿ ಶಾಸನವೊಂದು ಇದೆ ಎನ್ನಲಾಗಿದೆ. ನೋಡಲು ಅವಕಾಶವಾಗಿಲ್ಲ.

**ಸಿದ್ದೇಶ್ವರ ಮಠ** : ಕೊಡಗು ಶ್ರೀರಂಗಪಟ್ಟಣ-ಮಾಲ್ದಾರೆ ಆಚೆಯ ಸಿದ್ದೇಶ್ವರ ಬೆಟ್ಟದ ಬುಡದಲ್ಲಿ ೧೭ನೇ ಶತಮಾನದ ಜಂಗಮ ಸ್ವಾಮಿಗಳ ಈ ಮಠವಿತ್ತು. ಇದಕ್ಕೆ ಬೆಟ್ಟೇರಿ ಮಠ ಎಂಬ ಹೆಸರೂ ಇದ್ದಂತೆ ಕಾಣುತ್ತದೆ. ಸಿದ್ದೇಶ್ವರಗದ್ದುಗೆಯೂ ಇದೆ. ಮೊದಲಿಗೆ ಕುಳ್ಳಂಗೋಡು ಮಠದ ಸ್ವಾಮಿಗಳಿಂದ ಪೂಜಾರಾಧನೆ ನಡೆಯುತ್ತಿತ್ತು. ಈಗ ಮಾಲ್ದಾರೆಯ ಕೊಡವ ಹಾಗೂ ಗೌಡ ಜನಾಂಗದವರು ಈ ವ್ಯವಸ್ಥೆಗೆ ಅನುವಾಗಿದ್ದಾರೆ. ಹಬ್ಬ ನಡೆಸುತ್ತಾರೆ. ಬಲಗೈ ಹರಿಜನರು 'ಜುಮ್ಮಾ' ಕೊಡುತ್ತಾರೆ. ಬೆಟ್ಟದ ಮೇಲೆ ಸಿದ್ದೇಶ್ವರ ಮಲ್ಲಿಕಾರ್ಜುನ ಲಿಂಗಗಳಿವೆ. ಪಾರ್ವತಿ, ಗಣಪತಿ ಗುಡಿಗಳಿವೆ. ಮೇಲಿನ ನಿರ್ವಾಹಕರು ಹಬ್ಬದಲ್ಲಿ ಮುಖ್ಯವಾಗಿ ಈ ದೇವರ

ಆಚರಣೆಗಳ ನಿರ್ವಹಣೆ ಮಾಡುತ್ತಾರೆ. ಈ ಗುಡಿಗಳ ವೀರಶೈವ ಅರ್ಚಕರಾದ ಶ್ರೀ ತಮ್ಮಯ್ಯ ಬೆಟ್ಟದ ಪಶ್ಚಿಮ ಬದಿಯ ಲಿಂಗಾಪುರ ಗ್ರಾಮದಲ್ಲಿದ್ದು ಗದ್ದುಗೆ ಪೂಜೆಯನ್ನೂ ನಿರ್ವಹಿಸುತ್ತಿದ್ದಾರೆ. ಬೆಟ್ಟದ ಮಧ್ಯಬಾಗದಲ್ಲಿ ಬಸರಿ ಮರವೊಂದರ ಕೆಳಗೆ ಲಕ್ಕಮ್ಮನ ನೆಲೆ ಇದ್ದು ವಾರ್ಷಿಕ ಪೂಜೆ ನಡೆಯುತ್ತದೆ. ಈಕೆಯ ಕುರಿತು ಪಿರಿಯಾಪಟ್ಟಣ ತಾಲೂಕು ಆಲನಹಳ್ಳಿಯ 'ಗುಡ್ಡೋರು' ಹಾಡುತ್ತಾರೆ. ಲಿಂಗಗಳನ್ನು ಕುರಿತು ಹಾಡುತ್ತಾರೆ. 'ಲಿಂಗವೇ ಬಾ' ಹಾಗು 'ಇಕ್ಕೇರಿ ಲಕ್ಕಮ್ಮ ಇಳಿದು ಬಾ' ಎಂಬ ಜನಪದ ಹಾಡುಗಳನ್ನು ದೀರ್ಘವಾಗಿ ಹಾಡುತ್ತಾರೆ. ಗಮನಿಸಬೇಕಾದ್ದು ಇಲ್ಲಿ ಇಕ್ಕೇರಿ ಲಕ್ಕಮ್ಮನ ಸಂಗತಿ. ಆಕೆಯ ಕುರಿತು ಪ್ರೋಲಿ ಮಾತುಗಳಿಂದ ಹಾಡಿ ಇಳಿದು ಬರಲು ಹೇಳುತ್ತಾರೆ. ಇಕ್ಕೇರಿ ಸಂಬಂಧ ಎಂದರೆ, ಹಾಲೇರಿ ಅರಸು ವಂಶದ ಮೂಲಪುರುಷ ವೀರರಾಜ ಇಕ್ಕೇರಿಯಿಂದ ಬಂದವ, ಪಿರಿಯಾಪಟ್ಟಣಕ್ಕೆ ಕೊಡಗಿನಿಂದ ಸಂಪರ್ಕಿಸುವಲ್ಲಿ, ಈ ಹಾಡು ಸಿದ್ದೇಶ್ವರ ಗದ್ದುಗೆಯ ಮೂಲಕವಾಗಿ ಸಾಗಿದ ಸಂಕೇತ ಎನಿಸುತ್ತದೆ. ಅವನು ಜಂಗಮವಾಗಿ ಬಂದವ ಲಕ್ಕಮ್ಮನ ಮಾರ್ಗ ದರ್ಶನದಲ್ಲಿ ಬರುವಲ್ಲಿ ಅರ್ಥದಾರಿಯಲ್ಲಿ ನಿಂತ ಕಾರಣ ಅವಳಿಗೆ ಬೈಗುಳ ಬಿದ್ದಿರಬೇಕು. ಸ್ವಲ್ಪಕಾಲ ಮಠ ಮಾಡಿಕೊಂಡು ಇದ್ದು, ಸಿದ್ದೇಶ್ವರ ಸ್ವಾಮಿಗಳನ್ನು ನಿಲ್ಲಿಸಿರಬೇಕು. ಈ ಘಟನೆಗಳೆಲ್ಲ ಜನಪದದಲ್ಲಿ ಮೂಡಿಬಂದು ಹಾಡಾಗಿರುವಂತಿದೆ. ಜೊತೆಗೆ ೧೬ನೇ ಶತಮಾನದ ಮಠದ ಇತಿಹಾಸ ಹೇಳುವಂತಿದೆ ಅದಕ್ಕೂ ಮುನ್ನಾ ಚಂಗಾಳ್ವರು ಆಳಿದ ನೆಲೆಗೆ ಸಂಬಂಧಿಸಿದ ಕಾರಣ, ಚೆಂಗಾಳ್ವರ ಕಾಲಕ್ಕೆ ಮಠವೊಂದು ಇಲ್ಲಿ ರೂಪುಗೊಂಡಿದ್ದು ಹಾಲೇರಿ ವೀರರಾಜನಿಗೂ ಮಾರ್ಗದರ್ಶನ ನೀಡಿದಂತಿದೆ.

ಈ ಹಿನ್ನಲೆಯಲ್ಲಿ ಲಭ್ಯವಾಗಿರುವ ೯೪ ಕೊಡಗಿನ ವೀರಶೈವ ಮಠಗಳ ಹೆಸರುಗಳನ್ನು ಒಟ್ಟಾರೆಯಾಗಿ ಮುಂದಿನಂತೆ ಸೂಚಿಸಿದೆ. ಸಂಪ್ರದಾಯಕ್ಕನುಗುಣವಾಗಿ ಸಂಕೇತಗಳನ್ನು ಆವರಣದಲ್ಲಿ ಹೀಗೆ ಸೂಚಿಸಲಾಗಿದೆ.

ಚೀ-ಚೀಲಾಳ, ಮು-ಮುರುಘಾ, ಲೀ-ಲೀಲಾಖ್ಯ, ಶ್ರೀ-ಶ್ರೀಶೈಲ, ಬಾ.ಹೊ - ಬಾಳೆಹೊನ್ನೂರು, ಉ-ಉಜ್ಜಯಿನಿ, ಸಂ-ಸಂಸಾರಿ ಮಠ.

೧. **ವೀರರಾಜಪೇಟೆ ತಾಲೂಕು :**

i. ಅ) **ಪಟ್ಟದ ಮಠಗಳು** : ಮಾಯಮಾಡಿ ಜಪದಕಟ್ಟೆಮಠ (ಉ) ಕುಳ್ಳಂಗೋಡುಮಠ (ಬಾ.ಹೊ), ಸಿದ್ದೇಶ್ವರ ಬೆಟ್ಟೇರಿ ಮಠ, ಕುಟ್ಟದ ಮಠ (ಉ); ಸಂಗಮಪಟ್ಟದ ಮಠ (ಈಗ ಸ್ವಾಮಿಗಳಿಲ್ಲ)

ಆ) **ಪರಾಧೀನ ಮಠಗಳು:** ಗೋಣಿಕೊಪ್ಪಲಿನ ಎಡೆಮನೆಮಠ (ಬಾ.ಹೊ), ನಾಣಚ್ಚಿಮಠ (ಉ) ಅಮ್ಮತ್ತಿ ತಾನಡಿಮಠ (ಬಾ.ಹೊ) ಸಿದ್ದಾಪುರಮಠ (ಬಾ.ಹೊ), ವೀರಾಜ ಪೇಟೆ ಚಿಕ್ಕಮಠ ಜಪದ ಕಟ್ಟೆ ವರ್ಗ (ಉ).

ii. ಅ) **ವಿರಕ್ತ ಮಠಗಳು** : ಬೆಂಮತ್ತಿ ಮಠ(ಚೀ,ಸಂ) ಮುಪ್ಪಿನಸ್ವಾಮಿಮಠ (ಗುರುಪುರ ಶಾಖೆ) ವೀರಾಜಪೇಟೆ ದೊಡ್ಡ ಮಠ(ಚೀ)

ಆ) **ಪರಾಧೀನ:** ಅಮ್ಮತ್ತಿ ತಲೆನಾಡುಮಠ, ಅಮ್ಮತ್ತಿ ಕನ್ನಡ ಮಠ (ಲೀ) ತಿತಿಮತಿ ಚಿನಿವಾರ ಕೋಟೆ ಮಠ(ಚೀ), ಚಿಲುಮೆಮಠ(ಮು) ದನಗಲ್ಲು -ಯಡತೊರೆ ಶಾಖಾ ಮಠ (ಲೀ),

ಈ) **ಸ್ವಾಮಿಗಳಿರುವ ಮಠ** : ಅರಮೇರಿ ಮಠ(ಚೀ)

೨. **ಮಡಿಕೇರಿ ತಾಲೂಕು:**

i. ಅ) **ಪಟ್ಟದ ಮಠಗಳು (ಸಂಸಾರಿ)** : ಹಾಲೇರಿ ಮಠ, ಚಡದರಹಳ್ಳಿಮಠ, ಸಿದ್ದಾಪುರ ಮಠ, ಭಾಗಮಂಡಲದ ಕಾವೇರಿ ಮಠ, ಓಣಿಪುರದ ಮಠ, ತಾಮ್ರಹಡ್ಲು (ಜಂಬೂರು)ಮಠ, ಕೆಳಗಾನ ಹಳ್ಳಿಮಠ, ಕೆಲಕೋವೆ ಮಠ(ಎಲ್ಲ ಬಾ.ಹೊ)

ಆ) **ಪರಾಧೀನ ಮಠಗಳು:** ಹಾಲೇರಿ ಐಗಳ ಮಠ, ಹಾಲೇರಿ ಜಾಂಬಳ್ಳಿ ಮಠ (ಬಾ.ಹೊ), ಬೈಚನ ಹಳ್ಳಿಮಠ(ಬಾ.ಹೊ.ಸಂ), ಕಲ್ಲೂರುಮಠ(ಶ್ರೀ.ಸಂ), ಉದ್ದಿಬಾಣೆಮಠ (ಶ್ರೀ.ಸಂ)

ii. ಅ) **ವಿರಕ್ತ ಮಠಗಳು** : ಬೇಳೂರು ಮಠ, ಮಾದಾಪುರ ಮಠ (ಮು)

ಆ) **ವಿರಕ್ತ - ಸಂಸಾರಿ ಮಠ** : ಚಿಕ್ಕಾರ್ಜಿಮಠ (ಮು)

ಇ) **ಪರಾಧೀನ** : ಕಾರ್ಖಾನೆ ಮಠ, ಬಲಮುರಿ ಮಠ

೩. **ಸೋಮವಾರ ಪೇಟೆ ತಾಲೂಕು** :

i ಅ) **ಪಟ್ಟದ ಮಠಗಳು**(ಸಂಸಾರಿ): ಚೌಡ್ಲುಮಠ, ಕಲಕಂದೂರು ಮಠ, ಹರಗದ ಮಠ, ತಲ್ತರೆ ಶೆಟ್ಟಳ್ಳಿ ಮಠ, ಹೆಬ್ಬುಲಸೆಮಠ (ಬಾ.ಹೊ); ರಂಗಸಮುದ್ರ ಮಠ(ಶ್ರೀ) ಗುಡಗೂರು ಮೇಲಣಮಠ (ಶ್ರೀಶೈಲ ನಿಡುಮಾಮಿಡಿ ಶಾಖೆ), ಚೌಡೇನಹಳ್ಳಿಮಠ (ಬಾ.ಹೊ) ಮೈಲಾತಪುರದ ಮಠ (ಉ)

ಆ) **ಪರಾಧೀನ ಮಠಗಳು** :

ನಂಜರಾಯಪಟ್ಟಣದ ಶಿವಾನಂದಸ್ವಾಮಿ ಮಠ, ಗುಡಗಳಲೆ ಮಠ, ಮಸಗೋಡು ಮಠ (ಬಾ.ಹೊ), ಮುಕಟ್ಟೆಮಠ (ಉ), ಗಣಗೂರು ಮಠ (ಶ್ರೀ.ಸಂ), ಗೋಣಿಮರೂರು ಮಠ (ಶ್ರೀ.ಸಂ.), ಯಡೂರು ಮಠ (ಶ್ರೀ.ಸಂ.) ಗುಡಗೂರು ಕೆಳಗಣ ಮಠ (ಶ್ರೀಶೈಲ ನಿಡುಮಾಮಿಡಿ ಶಾಖೆ),ಚೇರಲ ಸಿರಿಮಂಗಲ - ಭಕ್ತನ

ಕೋಟೆ ಮಠ, ಕಟ್ಟೆಪುರದ ಮಠ, ನಂದಿನಿಪುರದ ಮಠ (ಅಂದಗೋವೆ ಮಠ)

ಇ) **ಸ್ವಾಮಿಗಳಿರುವ ಮಠಗಳು :**

ಶಿಡುಗಡಲೆ ಮಠ (ಬಾ.ಹೊ) ಕಿರಿಕೊಡ್ಲಿಮಠ, ದೊಡ್ಡಕೊಡ್ಲಿ ಊರುಮಠ, ಮುದ್ದಿನ ಕಟ್ಟೆ ಮಠ (ಎಲ್ಲ ಉಜ್ಜಯನಿ)

ii **ವಿರಕ್ತ - ಸಂಸಾರಿ ಮಠಗಳು :**

ಕಲ್ಲೂರು ಮಠ-ಶಿರಂಗಾಲಮಠ ಸಂಬಂಧ (ಚೀ), ಕಿಬ್ಬೆಟ್ಟ ಮಠ, ಮೈಸೂರು ಕೊಡಗಿನ ಮಠ (ಮು)

ಅ) **ಪರಾಧೀನ** : ಮಾದಾ ಪಟ್ಟಣ ಮಠ (ಚೀ), ಕೂಡುಮಂಗಳೂರು ಮಠ, ಹೆಬ್ಬಾಲೆಮಠ, ಕರಕಡಲೆಮಠ, ನೇರುಗಡಲೆ ಮಠ, ಬರಗಡಲೆಮಠ, ಯಲಕನೂರು ಮಠ, ಹುಲಸೇಮಠ, ಅಕ್ಕಿಪಾರಮಠ, ಶಿರಂಗಾಲಮಠ, ಚಿಕ್ಕ ಅಳುವಾರಮಠ, ಕೋವರ್ ಕೊಲ್ಲಿಮಠ, ಕಾಜೂರುಮಠ, ಐಗೂರುಮಠ (ಎಲ್ಲ ಚೀಲಾಳ ಶಾಖೆಯವು) ಬಸವನಹಳ್ಳಿ ಮಠ, ತಂಣೀರು ಹಳ್ಳದ ಮಠ(ಮು), ಬ್ಯಾಡಗೊಟ್ಟದ ಚಿಲುಮೆ ಮಠ

ಇ) **ಮುಳುಗಡೆ ಮಠಗಳು:** ಕಮ್ಮತ್ತನಹಳ್ಳಿಮಠ, ಹಾರಂಗಿಮಠ, ಹಾರಂಗಿಚಿಕ್ಕಮಠ (ಚೀಲಾಳ)

ಈ) **ಸ್ವಾಮಿಗಳಿರುವ ಮಠಗಳು** : ತೊರೆನೂರು ಮಠ (ಚೀ), ಬೇಳೂರುಮಠ, ಅಬ್ಬಿಮಠ, ಕಲ್ಲಹಳ್ಳಿಮಠ, ಸೋಮವಾರ ಪೇಟೆ ವಿರಕ್ತಮಠ, ದೊಡ್ಡಕೊಡ್ಲಿ ಕಲ್ಲುಮಠ.

ಇವಲ್ಲದೆ ಕೊಡಗಿನಲ್ಲಿದ್ದ ಮಠಗಳಾಗಿ ಹೆಗ್ಗಡಹಳ್ಳಿ, ರಾಜಾಪುರ ಮಠ (ಬಾ.ಹೊ), ಚಂಗಡಹಳ್ಳಿ ಮಠ (ಮು), ಇದ್ದವು. ಈಗ ಹಾಸನ ಜಿಲ್ಲೆಯಲ್ಲಿವೆ. ಹೀಗೆ ವೀರರಾಜಪೇಟೆ ತಾಲೂಕಿನಲ್ಲಿ ೧೯, ಮಡಿಕೇರಿ ತಾಲೂಕಿನಲ್ಲಿ ೧೮, ಸೋಮವಾರ ಪೇಟೆ ತಾಲೂಕಿನಲ್ಲಿ ೫೭ ಮಠಗಳು ಕಾಣಬರುವಲ್ಲಿ ಇತಿಹಾಸದ ಎಳೆಯನ್ನು ಗುರುತಿಸಬಹುದು. ಅಂದರೆ ಉತ್ತರ ಕೊಡಗಿನ ಭಾಗವು ಹಾಲೇರಿ ಅರಸರಿಗೆ ಮುನ್ನವೆ ವೀರಶೈವ ಚಂಗಾಳ್ವರಸರ ಆಡಳಿತಕ್ಕೆ ಇದ್ದು, ಅದರ ಪ್ರಭಾವದ ಕಲ್ಪನೆ ಒದಗುವಂತಿದೆ. ಚಂಗಾಳ್ವ ಹಾಗೂ ಹಾಲೇರಿ ಅರಸರು, ಗುರು ವಿರಕ್ತ ಮಠಗಳ ಸಮನ್ವಯವನ್ನು ಪ್ರೋಷಿಸಿರುವುದು ಕಾಣುತ್ತದೆ. ಆ ಅರಸರ ನಂತರವೂ ವೀರಶೈವ ಮಠಗಳ ಪ್ರಭಾವವು ಸಾಂಸ್ಕೃತಿಕ ಬದುಕಿನಲ್ಲಿ ಉಂಟು ಮಾಡಿದ ಬದಲಾವಣೆಯನ್ನು ಸೂಚಿಸುವಂತಿದೆ. ಇಲ್ಲಿನ ಮಠಗಳ ವಾಸ್ತುಶಿಲ್ಪವು ಇಂಡೋ-ಇಸ್ಲಾಮಿಕ್ ಶೈಲಿಯನ್ನು ಹೊಂದಿ ಸಮನ್ವಯ ದೃಷ್ಟಿಗೆ ಕಾರಣವಾಗಿದೆ. ಈ ಮಠಗಳು ಜನಪದ ಸಂಸ್ಕೃತಿಯನ್ನು

ತೆಕ್ಕೆಗಾಗಿಸಿಕೊಂಡಿವೆ. ಹುತ್ತರಿ, ತುಲಾಸಂಕ್ರಮಣ, ಸುಗ್ಗಿಕಟ್ಟೆ ಹಬ್ಬ, ಮದ್ದಿನ ತೆಕ್ಕೆ, ತೆರೆ-ಕೋಲ ಕಟ್ಟಿಸುವಿಕೆ ಇತ್ಯಾದಿಗಳನ್ನು ಆಚರಿಸುವಲ್ಲಿ ಇದು ಸ್ಪಷ್ಟ. ಹಾಗೆಯೆ ಕೊಡಗಿನ ಜನತೆ ಮಠದ ಸ್ವಾಮಿಗಳಿಂದ ಹುತ್ತರಿ ಆಶೀರ್ವಾದದ ಕೋಲು ಹೊಡೆಸುವಿಕೆ ಕೈಮಡಗಳಿಗೆ ಸಂಸ್ಕಾರ ಮಾಡುವುದು, ಮನೆಗಳಲ್ಲಿ ಭಸ್ಮ ಸಂಪುಟ ನಿರ್ವಹಣೆ, ಮಠದಿಂದ ಹುತ್ತರಿ ಕದಿರು ಒಯ್ಯುವುದು ಇತ್ಯಾದಿಗಳು ವೀರಶೈವ ಧರ್ಮದ ಪ್ರಭಾವವಾಗಿ ಕಾಣುತ್ತವೆ.

ಅಲ್ಲದೆ ಕುಂದ ಬೆಟ್ಟದ ಪಶ್ಚಿಮ ಬುಡದಲ್ಲಿರುವ ಫೀಲ್ಡ ಮಾರ್ಷಲ್ ಕೊಡಂದೇರ ಎಂ. ಕಾರ್ಯಪ್ಪ ಅವರ ಮೂಲ ಐನ್‌ಮನೆಯ (ಮೂಲಹಿರಿಯ ಕಟ್ಟಿದ ಮನೆ) ಮುಂದೆ ಹಿರಿಯರ ಸಮಾಧಿಗಳ ಮೇಲೆ ಬಸವನ ದೊಡ್ಡ ವಿಗ್ರಹಗಳಿವೆ. ಕೊಡಗಿನ ವೀರಶೈವ ಚಂಗಾಳ್ವರಸರ ಅರಸೊತ್ತಿಗೆ ಅಳಿದ ಮೇಲೆ ಉಳಿದ ಅವರ ಕುಟುಂಬಗಳು ಇಲ್ಲಿನ ಜನಪದದಲ್ಲಿ ಐಕ್ಯವಾಗಿವೆ. ಅಂತೇ ಚಂಗಂಡ, ಚಂಗಚಂಡ, ಚಂಗೇಟಿರ, ಎಂಬ ಕೊಡವ ಮನೆ ಹೆಸರುಗಳು ರೂಪುಗೊಳ್ಳಲು ಕಾರಣವಾಗಿವೆ. ಹಾಗೂ ರಾಜಮನೆತನದ ವ್ಯಕ್ತಿಸೌಷ್ಠವ, ಸೌಂದರ್ಯ ಜನಪರಂಪರೆಯಲ್ಲಿ ಕಾಣಬರುವಲ್ಲಿ, ಸುಂದರರೆನಿಸಿದ್ದ ಚಂಗಾಳ್ವರು, ಹಾಲೇರಿ ಅರಸು ವಂಶಗಳು ಪಾಲ್ಗೊಂಡಿವೆ. ವಿವಾಹ ಸಂಬಂಧಗಳು ಜನ ಕುಟುಂಬಗಳೊಡನೆ ಸುಗಮವಾಗಿ ನಡೆಯಲು ಆ ಅರಸರ ಕಾಲದಿಂದಲೂ ಇದ್ದ ವೀರಶೈವ ಮಠಗಳು ತಮ್ಮ ಹೊಣೆಯನ್ನು ನಿರ್ವಹಿಸಿವೆ. ಮಠಗಳು ಆಧುನಿಕ ಕಾಲದ ಅಗತ್ಯಗಳಿಗೆ ತಕ್ಕಂತೆ ವಿದ್ಯಾದಾನ-ಶಾಲಾ ನಿರ್ವಹಣೆ, ವಿದ್ಯಾರ್ಥಿ ವೇತನ ಹಂಚುವಿಕೆ, ಇಚ್ಚಿತ ಅಂತರ್ ಜಾತೀಯ ವಧುವರರಿಗೆ ದೀಕ್ಷೆ ನೀಡಿ ವಿವಾಹ ವ್ಯವಸ್ಥೆ ಮಾಡುವುದು ಇತ್ಯಾದಿ ಕಾರ್ಯಗಳನ್ನು ನಡೆಸಿಕೊಂಡು ಬಂದಿವೆ. ಈ ದೃಷ್ಟಿಯಿಂದ ಕೊಡಗಿನ ವೀರಶೈವ ಮಠಗಳು ಕೇವಲ ಧಾರ್ಮಿಕ ಪ್ರತಿಷ್ಠಾನವೆನಿಸದೆ ಸಾಂಸ್ಕೃತಿಕ ಪ್ರತಿಷ್ಠಾನವಾಗಿರುವ ಪರಂಪರೆಯನ್ನೆ ಹೊಂದಿವೆ.

## ಕೋಲಾರ ಜಿಲ್ಲೆಯ ವೀರಶೈವ ಮಠಗಳು (ಸಂಕ್ಷಿಪ್ತ ಪರಿಚಯ)

ವೀರಶೈವ ಧರ್ಮದ ದೃಷ್ಟಿಯಿಂದ ೧೨ನೆಯ ಶತಮಾನ ಮುಂಚಿನ ಕಾಲದಿಂದ ಶ್ರೀಶೈಲದ ಧಾರ್ಮಿಕ ಪರಂಪರೆ ಈ ಜಿಲ್ಲೆಗಿದ್ದಂತೆ ಕಾಣುತ್ತದೆ. ಗಂಗರ ರಾಜಧಾನಿಯನ್ನು ಹೊಂದಿದ್ದ ಜಿಲ್ಲೆಯಿದು. ಪ್ರಸ್ತುತ ಬರಹದ ದೃಷ್ಟಿಯಿಂದ, ಗಂಗರ ಕಾಲದಲ್ಲಿ ವೀರಶೈವಕ್ಕೆ ಇಲ್ಲಿ ದೊರೆತ ಉತ್ತೇಜನದ ಬಗ್ಗೆ ಶೋಧನೆ ಬೇಕಿದೆ. ಆದರೆ ಚೋಳ ಅರಸರ ಕಾಲದಲ್ಲಿ ಇಲ್ಲಿನ ವೀರಶೈವ ಮಠಗಳ ಅಸ್ತಿತ್ವ ಶಾಸನಗಳಿಂದಲೂ ವಿದಿತವಾಗುತ್ತದೆ.

ಶಾಸನಗಳ ಹಿನ್ನಲೆಯಲ್ಲಿ ಗಮನಕ್ಕೆ ಬರುವ ಮಠಗಳು[೪೪] ಹಾಗು ಇತರೇ ಸಾಕ್ಷಿಗಳಿಂದಂದ ಕಾಣಬರುವ ಮಠಗಳು ಹೀಗಿವೆ. ಕೋಲಾರ ಕಸಬಾ ಹಾಗೂ ತಾಲೂಕಿನಲ್ಲಿ ವಿಭೂತಿಪುರದ

೪೪. ಎ.ಕ. ಸಂಪುಟ ೧೦ (ರೈಸ್ ಸಂಪಾದಿತ) ೧೯೦೫. ಕೋಲಾರ ಜಿಲ್ಲೆಯ ಶಾಸನಗಳು.

ಗವಿಮಠ, ಜಂಗಮಗುರ್ಜಿತಹಳ್ಳಿಮಠ, ನಾಗಲಾಪುರಮಠ ಬಸವಾಪುರದ ಮಠಗಳಿದ್ದು ಇಂದು ಪರಾಧೀನವಾಗಿವೆ. ಕ್ರಿ.ಶ. ೧೬೦೮ರಲ್ಲಿ ಬಸವಲಿಂಗದೇವರಗುಡಿಯಲ್ಲಿ ಮಠ ಮಾಡಿ ಮಹಂತದೇವರಿಗೆ ಕೊಟ್ಟ ವೀರಪುರದ ಮಠವಿತ್ತು. ಇದು ಬಸವಾಪುರದ ಮಠ ಎಂದು ಹೆಸರಾಗಿತ್ತು. ಇದು ವಿರಕ್ತ ಮಠವಾಗಿದ್ದಂತೆ ತೋರುತ್ತದೆ. ಶ್ರೀಶೈಲ ನಿಡುಮಾಮಿಡಿ ಪೀಠದ ಶಾಖೆಯಾಗಿದ್ದ ಕಂಬಳಿ ಮಠವು ಈಗ ಸಂಸಾರಿ ಮಠವಾಗಿದೆ.

ಶಿಡ್ಲಘಟ್ಟ ತಾಲೂಕಿನಲ್ಲಿ ಜಂಗಮಕೋಟೆಮಠ, ಗುರುಗಳಾಗಿ ಶ್ರೀ ಸಿದ್ದೇಶ್ವರ ಶಿವಾಚಾರ್ಯರಿದ್ದ ಇರುಗಪ್ಪನ ಹಳ್ಳಿ ಮಠ, ಕ್ರಿ.ಶ. ೧೬೫೧ರಲ್ಲಿ ಶ್ರೀ ಲಿಂಗಚಕ್ರವರ್ತಿ ಎಂಬ ಗುರುಗಳನ್ನೂ ಹೊಂದಿದ್ದ ಬೂದಿಹಾಳುಮಠ ಕಾಣಬರುತ್ತವೆ. ಬೂದಿಹಾಳು ಗ್ರಾಮದ ಮಠವು ಶ್ರೀಶೈಲ ನಿಡುಮಾಮಿಡಿ ಶಾಖೆಗೆ ಸೇರಿದ್ದ ಮಠವೆಂಬುದಕ್ಕೆ ಅದರ ಶಿಷ್ಯರ 'ಸುಜನ ಶಿವಾಚಾರ' ಸಂಬಂಧವನ್ನು ಶಾಸನದಲ್ಲಿ ಹೇಳಿರುವುದೇ ಸಾಕ್ಷಿ. ಈ ತಾಲೂಕಿನಲ್ಲಿ ಈ ಪೀಠದ ಇನ್ನೂ ಕೆಲವು ಶಾಖಾ ಮಠಗಳಿದ್ದಂತೆ ಕಾಣುತ್ತವೆ.

ಗುಡಿಬಂಡೆ ತಾಲೂಕಿನಲ್ಲಿ ವಾಟದಹೊಸಳ್ಳಿಮಠಕ್ಕೆ ಶ್ರೀರುದ್ರಾರಾಧ್ಯರು ನಿರ್ವಹಣಾಕಾರರಾಗಿದ್ದಾರೆ. ಗುಡಿಬಂಡೆಯಲ್ಲಿ ಮಠಗಳು ರಂಭಾಪುರಿ ಶಾಖೆಗಳಾಗಿದ್ದವು. ಈಗ ಪರಾಧೀನವಾಗಿವೆ. ಶ್ರೀನಿವಾಸಪುರ ತಾಲೂಕಿನ ಈ ಪೀಠದ ಶಾಖೆಯಾದ ಶ್ರೀನಿವಾಸಪುರದ ಮಠವೂ ಅನ್ಯಾಕ್ರಮಣವಾಗಿದೆ. ಕೂಗೇನಹಳ್ಳಿ ಮಠವೂ ಇಲ್ಲಿದ್ದುದು ಪರಾಧೀನವಾಗಿದೆ.

ಬಂಗಾರುಪೇಟೆ ತಾಲೂಕಿನಲ್ಲಿ ಐತಾಂಡನಹಳ್ಳಿ ಮಠವಿದೆ. ಶ್ರೀಶೈಲ ನಿಡುಮಾಡಿ ಪೀಠದ ಈ ಶಾಖಾಮಠದಲ್ಲಿ ಗದ್ದುಗೆಯೂ ಇದೆ. ಈ ಮಠ ಬಹಳ ಪ್ರಸಿದ್ಧಿ ಹೊಂದಿದ ಮಠವಾಗಿತ್ತು. ಚಿಕ್ಕಬಳ್ಳಾಪುರ ತಾಲೂಕಿನಲ್ಲಿ ವಾಪಸಂದ್ರ ಮಠವಿದೆ. ಗದ್ದುಗೆಯನ್ನೂ ಹೊಂದಿದೆ. ಶ್ರೀಶೈಲ ನಿಡುಮಾಮಿಡಿ ಪೀಠದ ಶಾಖಾಮಠವಿದಾಗಿದೆ. ಇದಲ್ಲದೆ ನಂದಿ ಗ್ರಾಮದಲ್ಲಿ ಚಂದ್ರಗುಂಡ ಶಿವಾಚಾರ್ಯರು ಸ್ಥಾಪಿಸಿದ್ದರೆನ್ನಲಾದ ಮಠ ಈಗ ಕಾಣಬರುತ್ತಿಲ್ಲ. ಚಿಕ್ಕಬಳ್ಳಾಪುರ ಮಠವೊಂದಿದ್ದುದು ಪರಾಧೀನವಾಗಿದೆ. ಮುಳಬಾಗಿಲು ತಾಲೂಕಿನ ಮುಳಬಾಗಿಲು ಮಠವೂ ಶ್ರೀಶೈಲ ನಿಡುಮಾಮಿಡಿ ಪೀಠದ ಶಾಖಾಮಠವಾಗಿದ್ದುದು ಪರಾಧೀನವಾಗಿದೆ.

ಗೋರಿಬಿದನೂರು ತಾಲೂಕಿನಲ್ಲಿ ಹೊಸೂರುಮಠ, ಬೈಚಾಪುರಮಠ ಚನ್ನಸೋಮೇಶ್ವರಸ್ವಾಮಿಮಠ ಹಲ್ಲೂರುಮಠ ಇದ್ದವು ಪರಾಧೀನವಾಗಿವೆ. ಆದರ ಸುಮಾರು ೧೧ನೇ ಶತಮಾನದ ರಾಜರಾಜೇಂದ್ರ ಚೋಳನ ಕಾಲದ ಮಠವೊಂದು ಗುಲಗಂಜ ಹಳ್ಳಿಯಲ್ಲಿದ್ದು ಪ್ರೊಮಂಣ ಆರಾಧ್ಯ ಎಂಬುವ ಗುರುವಾಗಿದ್ದ ಸೂಚನೆ ಶಾಸನದಿಂದ ಲಭ್ಯವಾಗುತ್ತದೆ. ಈತನು ಶುದ್ಧಶೈವಾಗಮ ಆಚಾರ್ಯನಾಗಿದ್ದನೆಂದೂ ಉಕ್ತವಾಗಿದೆ. ಇದೇ ತಾಲ್ಲೂಕಿನ ನಾಮಗೊಂಡ್ಲು ಮಠ ರಂಭಾಪುರಿಪೀಠದ ಶಾಖಾಮಠವಾಗಿದೆ. ಮಾಸ್ಯವೂ ಇತ್ತು.

ಬಿಲ್ಪತ್ರೆವನವು. ಇತ್ತು. ಮೂರು ಗದ್ದುಗೆಗಳಿಲ್ಲಿದ್ದು ಎರಡು ಕಲ್ಯಾಣಿಗಳನ್ನು ಹೊಂದಿವೆ. ರಂಭಾಪುರಿ ಶಾಖೆಗೆ ಸೇರಿದ ನಾರಸಿಂಹನಹಳ್ಳಿ ಮಠ, ಮುದುಗೆರೆ ಮಠ ಇದೇ ತಾಲ್ಲೂಕಿನಲ್ಲಿವೆ. ಇಲ್ಲಿಯೂ ಗದ್ದುಗೆಗಳಿವೆ. ಮಾನ್ಯವೂ ಇತ್ತು.

ಚಿಂತಾಮಣಿ ತಾಲೂಕಿನಲ್ಲಿ, ಬಸವೇಶ್ವರ ದೇಗುಲವನ್ನು ಹೊಂದಿದ್ದ ಕುರುಬೂರುಮಠ, ಗುಟ್ಟಹಳ್ಳಿಮಠ, ಭಗತರಹಳ್ಳಿ ಮಠ, ವಿರಕ್ತ ಸಂಪ್ರದಾಯದ ಬಚ್ಚಪ್ಪನಹಳ್ಳಿಮಠ ಇತ್ಯಾದಿ ಮಠಗಳಿದ್ದು ಇಂದು ಪರಾಧೀನವಾಗಿವೆ. ಇದಲ್ಲದೆ ಶಾಸನ ೧೫೩ರ ರೀತ್ಯಾ ೧೧ನೇ ಶತಮಾನದ ರಾಜೇಂದ್ರ ಚೋಳನ ಕಾಲದ ಗವಿಮಠವೊಂದಿದ್ದು ಇಂದು ಕಾಣಬರುವುದಿಲ್ಲ.

**ಶ್ರೀಶೈಲ ನಿಡುಮಾಮಿಡಿ ಪೀಠ ಗೂಳೂರು :**

ಬಾಗೆಪಲ್ಲಿ ತಾಲೂಕಿನಲ್ಲಿ ಶ್ರೀಶೈಲ ನಿಡುಮಾಮಿಡಿ ಸೂರ್ಯ ಸಿಂಹಾಸನ ಪೀಠದ ಶಾಖಾ ಮಠಗಳಾದ ಗುಮ್ಮಿನಾಯಕನ ಪಾಳ್ಯದಮಠ, ಜ॥ ಕರಿಬಸವೇಂದ್ರರ ಮಠಗಳು ಅನ್ಯಾಕ್ರಮಣವಾಗಿವೆ. ಆದರೆ ಕೋಲಾರ ಜಿಲ್ಲೆಯಲ್ಲಿ ಪ್ರಮುಖ ಪೀಠವಾಗಿ ಕರ್ನಾಟಕ, ಆಂಧ್ರ, ತಮಿಳನಾಡು ಸೇರಿದಂತೆ ಸಾವಿರಾರು ಶಾಖಾಮಠಗಳನ್ನು ಹೊಂದಿದ್ದು (ಇಂದು ದಾಖಲೆಗೆ ಸಿಕ್ಕಿರುವ ೧೫೪ ಮಠಗಳ ಯಾದಿ ಇದೆ[೪೫]) ಪ್ರಸಿದ್ಧವಾಗಿರುವ ಶ್ರೀ ನಿಡುಮಾಮಿಡಿ ಶ್ರೀಶೈಲ ಜಗದ್ಗುರು ಪಂಡಿತಾರಾಧ್ಯ ಪೀಠವು ಗೂಳೂರು ಸಂಸ್ಥಾನದಲ್ಲಿದೆ. ಈ ಪೀಠವು ೬ನೇ ಶತಮಾನದ ಶ್ರೀ ಜಗದ್ಗುರು ಪಂಡಿತಾರಾಧ್ಯ ಶಿವಾಚಾರ್ಯರಿಂದ ಹಿಡಿದು, ಸಾಹಿತ್ಯ ಪೀಠವನ್ನಾಗಿಸಿದ ಶ್ರೀ ನಿಡುಮಾಮಿಡಿ ಶ್ರೀಶೈಲ ಜಗದ್ಗುರು ಸೂರ್ಯ ಸಿಂಹಾಸನಾಧೀಶ್ವರ ಚನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯ ಸನ್ನಿಧಿಯವರವರಿವಿಗೆ ೩೮ ಪೀಠಾಧಿಪತಿಗಳಿದ್ದಾರೆ[೪೬]. ೩೯ನೆಯವರಾಗಿ ಶ್ರೀ ವೀರಭದ್ರಚನ್ನಮಲ್ಲ ಮಹಾಸ್ವಾಮಿಗಳು ಪೀಠಾಧಿಪತಿಗಳಾಗಿದ್ದಾರೆ.

ಈ ಪೀಠದ ಪರಂಪರೆಯ ಸಂಬಂಧ ಲಿಂ॥ ಎಂ.ಜಿ. ನಂಜುಂಡಾರಾಧ್ಯರಿಗೆ ಪೂರ್ಣವಾಗಿ ಇತ್ತು.

೧೫೦೦ ವರುಷಗಳ ಶ್ರೀಶೈಲ ಪೀಠದ ಪರಂಪರೆಯಲ್ಲಿ ಪೀಠದ ನಾಲ್ಕನೆಯವರಾದ ಇಮ್ಮಡಿ ಪಂಡಿತಾರಾಧ್ಯರು ಸೊಳ್ನುಡಿ ಸೃಜಿಸಿ ವಚನ ರಚನೆಗೆ ನಾಂದಿ ಹಾಕಿದ್ದಾರೆ. ಪೀಠದ ೫ನೆಯವರಾದ ೧೦ನೆಯ ಶತಮಾನದ ವಿರೂಪಾಕ್ಷ ದೇಶಿಕೇಂದ್ರರು ಕಾಶ್ಮೀರದವರೆಗೂ ಸಂಚಾರಮಾಡಿ ವೀರಶೈವ ಧರ್ಮ, ದರ್ಶನ ಪ್ರಸಾರ ಮಾಡಿದರು. ತಮ್ಮ ಉತ್ತರಾಧಿಕಾರವನ್ನು ಶ್ರೀಪತಿಸುತ ಗೋಪತಿಗೆ ವಹಿಸಿ ಚಂದ್ರಗುಂಡಶಿವಾಚಾರ್ಯ ಎಂಬ. ಅಭಿದಾನವಿತ್ತರು.

೪೫-೪೬. ನೂತನ ಚೇತನ :(ಸಂ) ಡಾ॥ ಸಾ.ಶಿ. ಮರುಳಯ್ಯ, ಡಾ॥ ಎಸ್. ವಿದ್ಯಾಶಂಕರ್, ಬೆಂಗಳೂರು ೧೯೯೦, ಪು.೯-೧೦ ಮತ್ತು ಪು.೧-೬

ಪಂಡಿತಾರಾಧ್ಯರಿಂದ ಉದಿಸಿದ ಸೂಳ್ನುಡಿ ಕ್ರಾಂತಿಯನ್ನು ಮುಂದುವರಿಸಿದ ಚಂದ್ರಗುಂಡ ಶಿವಾಚಾರ್ಯರು ಶ್ರೀಶೈಲದಲ್ಲಿ ಅನುಭವ ಕೇಂದ್ರ ಸ್ಥಾಪಿಸಿದರು. ಅಸ್ಪೃಶ್ಯೋದ್ಧಾರ ಮಾಡಿದರು. ಛಲವಾದಿಗಳನ್ನು ರೂಪಿಸಿದರು. ನಂದಿ ಬೆಟ್ಟದ ಬಳಿ ನಂದಿ ಗ್ರಾಮದಲ್ಲಿ, ವಾಪಸಂದ್ರದಲ್ಲಿ, ಗುಡಿಬಂಡೆಯಲ್ಲಿ ಶಾಖಾಮಠಗಳನ್ನು ನಿರ್ಮಿಸಿದರು. ವಂಶದ ಚೋಳರಾಜನ ಉಪವನದಲ್ಲಿ ತೆಂಗಿನಮರದ ಫಲಪವಾಡ ತೋರಿದರು. ರಾಜನ ಶಾಪದೋಷಗಳನ್ನು ನಿಗ್ರಹಿಸಿ ಗುಯ್ಯಲೂರು ('ಗೂಳೂರು') ನೆಲೆಯಲ್ಲಿಯೆ ನಿಂತು ಪೀಠವನ್ನು ನೆಲೆಯಾಗಿಸಿದರು. ವೀರಭದ್ರ ಪ್ರತಿಷ್ಠೆಯನ್ನು ನಾಡಿನಲ್ಲೆಲ್ಲ ಮಾಡಿದರು. ಈ ಪರಂಪರೆಯಲ್ಲಿ ೧೪ನೆಯ ಶತಮಾನದ ಹಕ್ಕಬುಕ್ಕರ ಗುರು ಕ್ರಿಯಾಶಕ್ತಿಒಡೆಯ, ನಿಡುಮಾಮಿಡಿ (ಮಾಮರ) ಲೀಲೆಯ ಕ್ರಿ.ಶ. ೧೧೮೦ರ ಕರಿಬಸವೇಂದ್ರರು, ಕ್ರಿ.ಶ. ೧೪೩೮ರ ಶಾಸನೋಕ್ತ ಜ|| ಚಂದ್ರಭೂಷಣ ದೇವ, ಒಡೆಯರು[೪೭] (ವಿಜಯನಗರದರಸರ ರಾಜಗುರು) ಪ್ರಸಿದ್ಧರಾದವರು.

ಈಗ ಗೂಳೂರು ಸಂಸ್ಥಾನದಲ್ಲಿರುವ ಈ ಪೀಠದ ಮಠದಲ್ಲಿ ವಿಶಿಷ್ಟ ಶಿವಲೀಲಾಮೂರ್ತಿಗಳು ಹಾಗು ಕುಮಾರ ವೀರಭದ್ರ, ನಂದಿಕೇಶ್ವರ ಮೂರ್ತಿಶಿಲ್ಪಗಳಿವೆ. ಪ್ರಾಚೀನ ಶೈಲಿಯ ಅಚ್ಚು ಅವುಗಳಲ್ಲಿ ಕಾಣುತ್ತವೆ. ಶ್ರೀ ಅಕ್ಕುಲಯ್ಯ ದೀಕ್ಷಿತರು, ವಿರೂಪಾಕ್ಷಪಂಡಿತಾರಾಧ್ಯ, ಸಂಪಾದನೆಯಸಿದ್ಧನಂಜೇಶ, ಶಿವಲಿಂಗಕವಿ, ಪುಲ್ಲಕವಿ, ಇಡಗೂರುರುದ್ರಕವಿ ಕಾಶೀನಾಥಶಾಸ್ತ್ರಿಗಳು, ಪಿ.ಎಸ್.ಲಿಂಗಣ್ಣಯ್ಯ ಮುಂತಾದವರು ಈ ಪೀಠವನ್ನು ಕುರಿತು ಬರೆದಿದ್ದಾರೆ. ಡಾ|| ಜ.ಚ.ನಿ ಸನ್ನಿಧಿಯವರು ಕನ್ನಡ ಸಂಘಟನೆಗೂ ದುಡಿದುದಲ್ಲದೆ, ಸುಮಾರು ೩೫೦ ಕ್ಕೂ ಮೀರಿ ಸಾಹಿತ್ಯಕೃತಿಗಳನ್ನು ರಚಿಸಿ ಪ್ರಕಟಿಸಿದ್ದಾರೆ. ಕವನ, ಕಾವ್ಯ, ಮಹಾಕಾವ್ಯ, ಆಗಮ ಸಂಶೋಧನ ಕೃತಿಗಳು, ಷಟಸ್ಥಲ ಸಿದ್ಧಾಂತ, ದರ್ಶನ ಕುರಿತ ಕೃತಿಗಳು, ಕಾವ್ಯಮೀಮಾಂಸಾ, ಕೃತಿಗಳು, ಹಾಗೂ ೮೦೦೦ ವಚನಗಳೂ ಅವುಗಳಲ್ಲಿ ಸೇರಿವೆ. ಈಗಿನ ಶ್ರೀ ವೀರಭದ್ರ ಚನ್ನಮಲ್ಲ ಮಹಾಸ್ವಾಮಿಗಳು ವೈಚಾರಿಕ ಯುವ ಸಾಹಿತಿಗಳಾಗಿದ್ದಾರೆ. ಶೈಕ್ಷಣಿಕ, ಸಮಾಜಿಕಸೇವೆಗಳಲ್ಲಿ ತೊಡಗಿ, ಕಾಲೇಜು ಕಟ್ಟಡ, ವೃದ್ಧಾಶ್ರಮ, ಶಿಶುವಿಹಾರ, ಗ್ರಂಥಾಲಯಗಳನ್ನು ತೆರೆದಿದ್ದಾರೆ. ಪೀಠದ ಬಳಿ ಹಸಿರು ನಿರ್ಮಿಸಿ, ಪರಿಸರ ನಿರ್ಮಾತೃ ಎನಿಸಿದ್ದಾರೆ.

ಕೋಲಾರ ಜಿಲ್ಲೆಯ ವೀರಶೈವ ಮಠಗಳನ್ನು ಗಮನಿಸಿದರೆ, ಪಟ್ಟದ ಮಠಗಳು ಸಾಕಷ್ಟು ಸಂಖ್ಯೆಯಲ್ಲಿದ್ದು, ಬಹುತೇಕ ಗೂಳೂರು (ನಿಡುಮಾಮಿಡಿ) ಸಂಸ್ಥಾನದ ಶಾಖಾಮಠಗಳಾಗಿರುವುದು ಕಾಣಬರುತ್ತದೆ. ಹಾಗೆಯೆ ಬಹಳಷ್ಟು ಮಠಗಳು ಅನ್ಯಾಕ್ರಮಣವಾಗಿರುವುದು ಕಾಣಬರುತ್ತದೆ. ಕೊಡಗಿನಂತಹ ಹಸಿರುವಲಯದಲ್ಲಿ ರಾಜಪ್ರೋತ್ಸಾಹಿತ ಮಠಗಳೇ ಹೆಚ್ಚು. ಆದರೆ ಬಯಲುನಾಡು ಕೋಲಾರಜಿಲ್ಲೆಯಲ್ಲಿ

---

೪೭. ಎಂ.ಜಿ. ನಾಗರಾಜ್: ೮ ಶತಮಾನಗಳ ರೋಚಕ ಇತಿಹಾಸದ ನಿಡುಮಾಮಿಡಿಮಠ ಬೆಂಗಳೂರು ೧೯೯೧, ಮಾಮಿಡಿ ಸಂ.೧೨, ಸಂಗಮ ಸಂಚಿಕೆ, ೪೬-೪೭, ಪು.೬೫

ವಿಜಯನಗರದ ಕಾಲದವರೆಗೆ ರಾಜಪ್ರೋಷಣೆ ಕಂಡು ಬಂದು ನಂತರದಲ್ಲಿ ಜನಪ್ರೋಷಿತವಾಗಿ ಮಠಗಳು ಉಳಿದುವು. ಬರಬರುತ್ತ ಆದಾಯದ ಮೂಲ ಕಡಿಮೆಯಾದಂತೆ ಮಠಗಳು ಪರಾಧೀನವಾದಂತೆ ತೋರುತ್ತವೆ. ಹೀಗಿದ್ದರೂ ಕನ್ನಡ ಭಾಷೆ ಹಾಗೂ ವಾತಾವರಣ ನಿರ್ಮಿಸುವಲ್ಲಿ ಗಡಿನಾಡಿನಲ್ಲಿ ಈ ವೀರಶೈವ ಮಠಗಳು ವಿಶಿಷ್ಟ ಪಾತ್ರವನ್ನೂ ವಹಿಸಿವೆ. ಜನಮನದಲ್ಲಿಯೂ ಬೇರೂರಿವೆ.

ಇಲ್ಲಿ ಪ್ರಸ್ತಾಪಿಸಿರುವ ಯಾವುದೇ ಜಿಲ್ಲೆಯ ಮಠಗಳು ಸ್ಥಾಪನೆಯ ಕಾಲದಲ್ಲಿ ಸೇರಿದ್ದ ಸಂಪ್ರದಾಯವು ಬದಲಾಗಿ ಬೇರೆ ಸಂಪ್ರದಾಯಕ್ಕೆ ಸಾಂದರ್ಭಿಕವಾಗಿ ವರ್ಗವಾದ ಸಂದರ್ಭವಿರುವಲ್ಲಿ ಹಾಲಿ ಅನುಸರಿಸುತ್ತಿರುವ ವೀರಶೈವ ಮಠಗಳ ಶಾಖಾ ಸಂಪ್ರದಾಯವನ್ನೆ ಮಠಗಳ ಹೆಸರಿನ ಮುಂದೆ ಲೇಖನದಲ್ಲಿ ನಮೂದಿಸಲಾಗಿದೆ.

## ಹಾಸನ ಜಿಲ್ಲೆಯ ವೀರಶೈವ ಮಠಗಳು (ಸಂಕ್ಷಿಪ್ತ ಪರಿಚಯ)

ಕೊಡಗಿನಂತೆ ಇಲ್ಲಿನ ಬಹುತೇಕ ಮಠಗಳು ಹಸಿರಿನ ನಡುವೆ ಬೆಳೆದು ಬಂದಿದ್ದರೂ ಮಲೆನಾಡು ಬಯಲು ಸೀಮೆಯ ಮಿಶ್ರಹಂದರದಲ್ಲಿ ಬೆಳೆದು ಬಂದ ಮಠಗಳಲ್ಲಿನ ರಾಜಪ್ರೋಷಣೆಗಿಂತ ಸ್ವಂತ ಕಾಯಕದಿಂದ ರೂಢಿಸಿಕೊಂಡ ಮಠಗಳು ಇಲ್ಲಿ ಹೆಚ್ಚು ಕಾಣ ಬರುತ್ತವೆ. ಮಹತ್ತಿನಮಠಗಳು, ಸಂಸಾರಿಮಠಗಳು, ವಿರಕ್ತಮಠಗಳು, ಶರಣಸ್ಥಲದ ಮಠಗಳು ಇಲ್ಲಿ ಕಾಣಬರುತ್ತವೆ. ಇತಿಹಾಸದ ದೃಷ್ಟಿಯಿಂದ ೧೧ನೆಯ ಶತಮಾನದ ವೀರಶೈವ ಮಠಗಳೂ ಇಲ್ಲಿವೆ. ಮಾಹೇಶ್ವರ ಜಾತ್ರೆ, ಸುಗ್ಗಿಕಟ್ಟೆಹಬ್ಬ, ಈ ಮಠಗಳಲ್ಲಿ ಸಾಮಾನ್ಯವಾಗಿ ಅಡಕಗೊಂಡ ಸಾಂಸ್ಕೃತಿಕ ಘಟಕಗಳಾಗಿವೆ. ದೇಗುಲಗಳು ಹೊಂದಿಕೊಂಡಂತಹ ಮಠಗಳಿದ್ದು, ಶಿಲ್ಪಗಳು ಕಾಣಬರುತ್ತವೆ. ಶಾಸನೋಕ್ತ ಮಠಗಳು ಸಾಕಷ್ಟು ಇದ್ದುವು ಇಂದು ಕಾಣೆಯಾಗಿವೆ. ಈ ಹಿಂದೆ ೮೫ ಮಠಗಳನ್ನೂ ಗುರುತಿಸಲಾಗಿದ್ದು[೪೮] ಈಗ ಮತ್ತೆ ಹನ್ನೊಂದು ಮಠಗಳು ಗಮನಕ್ಕೆ ಬಂದು ೯೬ ಮಠಗಳ ಹೆಸರನ್ನು ಇಲ್ಲಿ ದಾಖಲಿಸಲಾಗಿದೆ. ಇವುಗಳಲ್ಲಿ ಪ್ರಾತಿನಿಧಿಕವಾಗಿ ಕೆಲವು ಮಠಗಳ ಸಂಕ್ಷಿಪ್ತ ಪರಿಚಯವನ್ನು ನೀಡಲಾಗಿದೆ. ಕೆಲವು ಮಠಗಳಲ್ಲಿ, ವೀರಶೈವದ ಎಲ್ಲ ಆಚಾರಗಳಿವೆ. ಮಠದ ಮುಖ್ಯಸ್ಥರು ಲಿಂಗಧಾರಿಗಳಾದರೂ ಪ್ರತ್ಯೇಕ ಅಸ್ತಿತ್ವವನ್ನೂ ಹೇಳಿಕೊಳ್ಳುವ ಸಂದರ್ಭಗಳಿವೆ. ಸುಮಾರು ಶೇ.೫೦ ಭಾಗದಷ್ಟು ಮಠಗಳು ಜೀವಂತ ಇವೆ. ಕೆಲವೆಡೆ ಸ್ವಾಮಿಗಳಿದ್ದರೆ ಕೆಲವೆಡೆ ಜಂಗಮರು, ಕೆಲವೆಡೆ ಸಂಸಾರಿಗಳು ಮಠಗಳ ನಿರ್ವಹಣೆ ನೋಡಿಕೊಳ್ಳುತ್ತಿದ್ದಾರೆ. ಈ ಜಿಲ್ಲೆಯಲ್ಲಿ ಮಾಹೇಶ್ವರ ಜಂಗಮಜಾತ್ರೆಯ ಪ್ರಭಾವ ಹೆಚ್ಚಾಗಿದೆ.

**ಜವೇನಹಳ್ಳಿ ಮಠ** : ಹಾಸನ ನಗರ ಪ್ರದೇಶದಲ್ಲಿ ಅಡಕವಿರುವ ಜವೇನಹಳ್ಳಿಯಲ್ಲಿರುವ ಈ ವಿರಕ್ತಮಠದಲ್ಲಿ ಶ್ರೀಸಂಗಮೇಶ್ವರ ಸ್ವಾಮಿಗಳ ಗದ್ದುಗೆ ಇದೆ. ಈ ಮಠದಲನೇಕ ಶಾಖಾ

೪೮. ಎಂ. ಜಿ. ನಾಗರಾಜ್ : ಹಾಸನ ಜಿಲ್ಲೆಯ ವೀರಶೈವ ಮಠಗಳಯಾದಿ !ಮಾಮಿಡಿ, ಸಂ.೮, ಸಂ.೩೦, ೧೯೮೭, ಬೆಂಗಳೂರು, ಪು. ೯೨-೭೧

ಮಠಗಳಲ್ಲಿ ಅಗಚಿಗದ್ದೆಯಹಾಲುಒಡೆಯರ ಮಠ ಒಂದಾಗಿತ್ತು. ಕ್ರಿ.ಶ.೧೭೭೫ರಲ್ಲಿ ಬೇಲೂರು ನಾಯಕರು ಕಟ್ಟಿಸಿಕೊಟ್ಟ ಮಠವದು. ನಿರಾಭಾರಿ ವೀರಶೈವ ಸಂಪ್ರದಾಯಕ್ಕೆ ಸೇರಿದ ಮಠವಿದಾಗಿದೆ.

**ಶ್ರೀ ಗುರುಸಂಗಮೇಶ್ವರ ಸ್ವಾಮಿ ಮಠ** : ಆಲೂರು ತಾಲೂಕು ನಿಡ್ನೂರು ಬಳಿ ಇರುವ ಈ ಮಠ ಶರಣಸ್ಥಲದ ಮಠವಾಗಿದೆ. ಏಳು ಶರಣಸ್ಥಲದ ಮಠಗಳ ಪೈಕಿ ಇದೂ ಒಂದು ಎನ್ನಲಾಗಿದೆ. ಸಾಮಾನ್ಯವಾಗಿ ಮುಖ್ಯಪೀಠಾಧಿಕಾರಿಗಳಿಂದ ಶಾಖಾಮಠಗಳಿಗೆ ನೇಮಕಗೊಂಡ ಮುಖ್ಯಸ್ಥರ ಸೇವೆ ಮಾಡಿಕೊಂಡು ಬಂದ ಶರಣರು ಕಾಲಾಂತರದಲ್ಲಿ ಆ ಮಠದ ನಿರ್ವಹಣೆಗೆ ನಿಲ್ಲುವರು. ಅವರ ವಂಶೀಕರೇ ಮಠದ ನಿರ್ವಹಣೆ ಮಾಡುತ್ತ ಕೋರಣ್ಯಕ್ಕೆ ಹೋಗಿ ದವಸ ಧಾನ್ಯ ತಂದು ದಾಸೋಹ ನಡೆಸುವ ಸಂಪ್ರದಾಯ ಈ ಮಠಗಳಲ್ಲಿರುತ್ತವೆ. ಮೂಲಕರ್ತೃ ಗದ್ದುಗೆ ಇಲ್ಲಿರುವುದದಿಲ್ಲವಾದರೂ ಕರ್ತೃವಿನ ಬಳಕೆಯ ದಂಡ ಉರಿಹಸ್ತ ಇತ್ಯಾದಿ ವಸ್ತು ಸಂಕೇತಗಳು ಇರುತ್ತವೆ. ಶಾಖಾ ಗುರುಗಳ ಗದ್ದುಗೆ ಇರುತ್ತವೆ. ಕೆಲವೆಡೆ ಶರಣಸ್ಥಲದವು ಪಟ್ಟದ ಮಠಗಳೂ ಆಗಿರುತ್ತವೆ ಎಂಬ ಮಾತಿದೆ. ಪ್ರಸ್ತುತ ಮಠದಲ್ಲಿ 'ಉರಿಹಸ್ತ'ದ ಜಾತ್ರೆ, 'ಸಂಗಮೇಶ್ವರ ಅಡ್ಡೆ'ಯ ಮೆರವಣಿಗೆ, ಸುಗ್ಗಿಹಬ್ಬ, ಸಂಗಮೇಶ್ವರ ಸ್ವಾಮಿಗಳ ಬಂಟ ಭೂತರಾಯನ ಪೂಜೆ ನಡೆಯುತ್ತವೆ. ಮಠದ ಆವರಣದಲ್ಲಿಯೆ ಇರುವ ಈ 'ಭೂತರಾಯ'ನ ಅರ್ಚಕ ಹರಿಜನ ವ್ಯಕ್ತಿ ಆಗಿದ್ದಾನೆ. ಶ್ರೀ ಕೆ.ಎಸ್.ಚಂದ್ರಶೇಖರಪ್ಪ ಅವರು ಹಾಲಿಮಠದ ನಿರ್ವಾಹಕ ಮುಖ್ಯಸ್ಥರಾಗಿದ್ದಾರೆ.

**ಚಿಲುಮೆ ಮಠ** : ಮುರುಘಾಸಮಯದ ವಿರಕ್ತ ಮಠವಿದು ಅರಕಲಗೂಡಿಗೆ ಸಮೀಪದಲ್ಲಿದೆ. ಚಿನ್ಮೂಲಾದ್ರಿ (ಚಿತ್ರದುರ್ಗ)ಯಿಂದ ಬಂದ ಚಿಲುಮೇಶ್ವರ ಸ್ವಾಮಿಗಳಿಗೆ ನೀರು ಎಲ್ಲೂ ಸಿಗಲಿಲ್ಲ. ಆಗ ಶಿಷ್ಯನಿಗೆ ಭೂಮಿ ಬಗೆಯಲು ಹೇಳಿದರು. ನೀರು ಬುಗ್ಗೆಯಾಗಿ ಬಂತು. ಅವಾಗಿ ಅಲ್ಲಿಯೆ ನೆಲೆನಿಂತು 'ಚಿಲುಮೆ ಮಠ' ಎಂದು ಹೆಸರಿಟ್ಟರಂತೆ. ಮಠದಲ್ಲಿನ ಅವರ ಗದ್ದುಗೆಗೆ ಇಂದಿಗೂ ಇರುವ ಈ ಚಿಲುಮೆ ನೀರಿನಿಂದ ಅಭಿಷೇಕವಿದೆ ಮತ್ತು ಮಠದ ಗದ್ದೆಗೂ ಕೂಡ ನೀರು ಹಾಯಿಸುತ್ತಾರೆ. ಮಠದಲ್ಲಿ 'ತೋರುಗದ್ದುಗೆ' ಮಾತ್ರವಿದೆ. ಚಿಲುಮೇಶ್ವರ ಸ್ವಾಮಿಗಳು ಬಂದ ಕಾಲ ಕ್ರಿ.ಶ.೧೮೮೫ ಎನ್ನಲಾಗಿದೆ.

**ಮರೂರು ಮಠ** : ಅರಕಲಗೂಡಿನ ಸನಿಹವಿರುವ ಈ ಮಠಕ್ಕೆ ಶ್ರೀ ಶಿವದೇವ ಸ್ವಾಮಿಗಳು ಮುಖ್ಯಸ್ಥರು. ವಿಜಯನಗರದರಸು ಪ್ರೌಢದೇವರಾಯನ ಅಮಾತ್ಯ ಲಕ್ಕಣ್ಣ ದಂಡೇಶನ ಸಂಪರ್ಕದ ೧೦೧ ವಿರಕ್ತರಲ್ಲಿ ಸಿದ್ದೇಶ್ವರ ಯತಿಗಳು ಒಬ್ಬರು. ಆನೆಗೊಂದಿಯಿಂದ ಬಂದು ಅವರು ಈ ಮರೂರುಮಠವನ್ನು ಸ್ಥಾಪಿಸಿದರಂತೆ. ಈ ಮಠದಲ್ಲಿ ಇಂದಿಗೂ 'ಹಂಪೆಹುಣ್ಣಿಮೆ' ( ದವನ ಹುಣ್ಣಿಮೆ )ಯು ಯುಗಾದಿ ಸಮಯದಲ್ಲಿ ನಡೆಯುತ್ತವೆ.

**ಕೇದಿಗೆ ಮಠ :** ಅರಸೀಕೆರೆ ತಾಲೂಕು ಮಾರ್ಗೇನ ಹಳ್ಳಿಯ ಈ ಮಠ ಇಂದು ಮುರುಘಾ ಸಮಯದ ವಿರಕ್ತ ಮಠವಾಗಿದ್ದು, ಸಾಲುಗದ್ದುಗೆಗಳನ್ನು ಹೊಂದಿದೆ. ಮೊದಲಿಗೆ ಕೇದಿಗೆ ವನವಲ್ಲಿ ಮಠವಿದ್ದಕಾರಣ ಈ ಹೆಸರು ಬಂದಿದೆ. ಇದರ ಜಮೀನಿಗೆ 'ಕೇದಿಗೆ ಅಡ್ಲು' ಎಂಬ ಹೆಸರಿದೆ. ಫಾಲ್ಗುಣ ಮಾಸದಲ್ಲಿ ಇಲ್ಲಿ ಮಾಹೇಶ್ವರ ಸ್ವಾಮಿ ಜಾತ್ರೆಯು ವಿಶಿಷ್ಟವಾಗಿ ನಡೆಯುತ್ತದೆ. ಹಾಲಿ ಯುವ ಸ್ವಾಮಿಗಳಾದ ಶ್ರೀ ಜಯಚಂದ್ರ ಶೇಖರ ಸ್ವಾಮಿಗಳು ಶೈಕ್ಷಣಿಕ, ಸಾಮಾಜಿಕ ಸೇವಾಕಾರ್ಯಗಳಲ್ಲಿ ತೊಡಗಿದ್ದಾರೆ.

**ಹಾರ್ನಳ್ಳಿ ಕೋಡಿಮಠ:** ಅರಸೀಕೆರೆ ಸಮೀಪದ ಪ್ರಾಚೀನ ಪ್ರಸಿದ್ಧವಾದ ಈ ಮಠವನ್ನು ಅನಾದಿ ನಿರಂಜನ ಜಗದ್ಗುರು ಜಂಗಮ ಪೀಠವೆಂದು ಹೇಳುವ ಸಂಪ್ರದಾಯವಿದೆ. ಕೊಡಗಿನ ವೀರರಾಜೇಂದ್ರ ಒಡೆಯ, ಹೈದರನಿಗೆ ತನ್ನ ಈ ಗುರುಗಳ ಆಸ್ತಿ ಮಟ್ಟದೆ ಮರ್ಯಾದೆ ಸಲ್ಲಿಸಬೇಕು ಎಂದನಂತೆ. ಅವನ ಪ್ರಾರ್ಥನೆಯ ಮೇರೆಗೆ ಹೈದರನು ಈ ಮಠದ ಗುರುಗಳಿಗೆ ಪಾದುಕೆ ಹಾಗೂ ಕಿರೀಟ ಸಂಕೇತದ ಟೋಪಿ ಕಳುಹಿಸಿದನಂತೆ. ಅದರಲ್ಲಿ ಉರ್ದು ಲಿಪಿಗಳಿವೆ. ಎರಡು ದಂತದ ಪಾದುಕೆ, 'ಏ' ಎಂದು ಅಕ್ಷರವೂ ಇರುವ ಟೋಪಿಯು ಮಠದಲ್ಲಿವೆ. ಈ ಮಠದಲ್ಲಿ ನಿರ್ವಿಕಲ್ಪ ಶಿವಯೋಗ ಸಮಾಧಿ ಹೊಂದಿದ ಆದಿಗುರು 'ನೀಲಮ್ಮ ಒಡೆಯರ' (ನೀಲಮ್ಮಜ್ಜಯ್ಯ) ಗದ್ದುಗೆ ಇದೆ. ಬಸವಪೂರ್ವ ಕಾಲದ್ದೆನ್ನಲಾದ ಈ ಮಠದಲ್ಲಿ ಫಾಲ್ಗುಣ ಬಹುಳದಲ್ಲಿ ನಡೆಯುವ ಜಂಗಮ ಮಾಹೇಶ್ವರ ಜಾತ್ರೆ ಬಹಳ ಪ್ರಸಿದ್ಧ. ಈ ಜಾತ್ರೆಯಲ್ಲಿ ಮೊದಲು ಪ್ರಸಾದ ವಿನಿಯೋಗವಾಗುತ್ತದೆ. ಹಾಲಿ ಶ್ರೀ ಶಿವಾನಂದ ಶಿವಯೋಗಿ ರಾಜೇಂದ್ರ ಮಹಾಸ್ವಾಮಿಗಳ ಈ ನಿರಂಜನ ಆದಿ ಪೀಠದ ಅಧ್ಯಕ್ಷರಾಗಿದ್ದಾರೆ.

**ಪುಷ್ಪಗಿರಿ ಸಂಸ್ಥಾನದ ಮಲ್ಲಾಪುರ ಮಠ:** ಬಾಳೆಹೊನ್ನೂರು ಪೀಠದ ಶಾಖಾ ಮಠವಿದಾಗಿದ್ದು ಬೇಲೂರು ವೆಂಕಟಾದ್ರಿನಾಯಕರಿಂದ ದಾನ ದತ್ತಿಗಳನ್ನು ಪಡೆದಿದ್ದ ಮಠವಾಗಿದೆ. ಕೊಡಗಿನ ಹಾಲೇರಿ ಅರಸರ ವಂಶೀಕ ನಂಜುಂಡ ಅರಸನ ಸಂಬಂಧಿಗಳು ಅಂದರೆ ಜಂಗಮ ವಂಶೀಕರು ಇಲ್ಲಿಗೆ ಬಂದು ಶಿವಲಿಂಗ ಸ್ಥಾಪನೆ ಮಾಡಿದರಂತೆ. ಈಗಾಗಲೇ ಎಂಟು ತಲೆಮಾರಿಗಳ ಸ್ವಾಮಿಗಳು ಈ ಮಠದ ಮುಖ್ಯಸ್ಥರಾಗಿ ಸಂದು ಹೋಗಿದ್ದಾರೆ. ಶ್ರೀ ದೊಡ್ಡಚೆನ್ನಮಲ್ಲಿಕಾರ್ಜುನ ಒಡೆಯರ್ ಅವರು ಮಠದ ಹಾಲಿ ಮುಖ್ಯಸ್ಥರಾಗಿದ್ದಾರೆ. ಗಮನಾರ್ಹ ಸಂಗತಿ ಎಂದರೆ, ಮೂಲಗುರುಗಳ ತಂಗಿ ಬಸಮ್ಮಣ್ಣಿ ಒಡೆಯರ್ ಅವರ ಗದ್ದುಗೆಯು ಇದ್ದು 'ಮುತ್ತೈದೆಯರ ಹಬ್ಬ'ವು ಶಿವರಾತ್ರಿಯಲ್ಲಿ ನಡೆಯುತ್ತದೆ.

**ಮೂರುಕಳಶದ ಮಠ:** ಎಳೆನಾಡು ಅರಸೀಕೆರೆ ಸಂಸ್ಥಾನದ ಈ ಮಠದ ಸ್ಥಾಪಕರು ಬೂದಿಗುರುಸಿದ್ಧಸ್ವಾಮಿಗಳು ಆದಿಗುರುಗಳು. ಚರಪಟ್ಟಾಧ್ಯಕ್ಷತೆ ಇಲ್ಲಿನದು. ಸ್ವತಂತ್ರ ಮಠವಿದಾಗಿದೆ. ಇಲ್ಲಿ ಮೇಲಣ ಮಠ, ಕೆಳಗಣ ಮಠಗಳು ಎಂದಿದ್ದು, ಪಟ್ಟದ ಹಾಗೂ ಚರದ

ಸಂಯುಕ್ತ ರೂಪ ಕಾಣುತ್ತದೆ. ನೊಳಂಬ (ಅರಸು) ವಂಶದ ಸಂಬಂಧವೂ ಇದೆ ಎನ್ನಲಾಗಿದೆ. ಇಲ್ಲಿ ಶಾಸನವೂ ಇದ್ದು ವೀರಸಿಂಹಾಸನ ಪರಂಪರೆಯ ಸಂಕೇತವಿದ್ದು 'ಶ್ರೀ ಮದ್ರಂಭಾಪುರಿ ಶ್ರೀ ಮದ್ವರಶೀಕರೆ ಶ್ರೀ ಮಠದ ಚರಪಟ್ಟಾಧ್ಯಕ್ಷ ಬಸವಲ್ಲಿಂಗ ದೇಶಿಕೇಂದ್ರ ಸ್ವಾಮಿಗಳವರಿಂದ ಶಿಥಿಲವಾಗಿದ್ದಯಿಮಠವನ್ನು ಹೊಸದಾಗಿ ತಯರ್ಮಾಡಿಸಲ್ಪಟ್ಟಿದೆ' ಎಂಬ ಲೇಖ ಇದೆ.

**ಹೊಸಂಬತ್ತು ಗಡಿಮಠ** : ಶಿಷ್ಯವರ್ಗದ ಸ್ವತಂತ್ರ ಮಠವಾಗಿದ್ದು ಬಾಣಾವರದ ಈ ಮಠವನ್ನು ಶ್ರೀ ಜಗದ್ಗುರು ಸರೂರು ಶಾಂತ ಮುತ್ತಿಂ ಶಾಖಾ ಬಾಣಾವರ ಹೊಸಂಬತ್ತು ಗಡಿಮಠ ಎನ್ನುತ್ತಾರೆ. ಈ ಮಠಾಧ್ಯಕ್ಷರು ಕುರುಬ ಜನಾಂಗಕ್ಕೆ ಗುರುಗಳಾಗಿ ನಿರ್ವಹಣೆ ಮಾಡುತ್ತಾರೆ. ಒಂದು ಕಾಲಕ್ಕೆ ಗಡಿಮಠವಾಗಿದ್ದು, ೯ ಗಡಿಗಳಿಗೆ ಮುಖ್ಯವಾಗಿ ನೆಲೆ ಆಗಿದ್ದುದರಿಂದ ಈ ಹೆಸರು ಬಂದಿದೆ. ಈ ಮಠದಲ್ಲಿರುವ ಗದ್ದುಗೆಯಲ್ಲಿ ರೇಣುಕ, ಸಿದ್ಧರಾಮ, ಬಸವಣ್ಣ, ಪ್ರಭುದೇವರು ಹಾಗೂ ರುದ್ರದೇವರು ಸಂಕೇತವಾಗಿ ೫ ಲಿಂಗಗಳಿವೆ. ರುದ್ರನ ಹಲಗೆ ಇದ್ದು, ಹನ್ನೆರಡು ವರ್ಷಕ್ಕೊಮ್ಮೆ ಲಿಂಗದ ಕಂತೆ ಇಟ್ಟು ಜಾತ್ರೆ ನಡೆಯುತ್ತದೆ. ಈ ಮಠದ ಗುರುಗಳು ಲಿಂಗಧಾರಿಗಳು, ಶಿಷ್ಯರಿಗೆ ಲಿಂಗದೀಕ್ಷೆಯ ಅಧಿಕಾರ ಇವರಿಗಿದೆ. ಇಲ್ಲಿನ ಗದ್ದುಗೆ ಪಟ್ಟ ಹಾಗೂ ವಿರಕ್ತ ಸಂಪ್ರದಾಯದ ಸಂಯುಕ್ತ ರೂಪವೆನಿಸುತ್ತದೆ.

ಲೇಖನ ವಿಸ್ತಾರ ಭಯದ ಕಾರಣ ಅನೇಕ ಮಠಗಳ ವಿವರಗಳನ್ನು ಇಲ್ಲಿ ನೀಡಲಾಗಿಲ್ಲ. ಆದ ಕಾರಣ ಈಗ ಜಿಲ್ಲೆಯಲ್ಲಿ ಲಭ್ಯವಾದ ವೀರಶೈವ ಮಠಗಳ ಹೆಸರುಗಳನ್ನು ತಾಲೂಕುವಾರಾಗಿ ನೀಡಲಾಗಿದೆ. ನಕ್ಷತ್ರ ಗುರುತಿನವು ಶಾಸನಗಳಿಂದ ಹೆಕ್ಕಿದ ಹೆಸರುಗಳಾಗಿವೆ.[೪೯]

೧. **ಹಾಸನ ತಾಲೂಕು** ಕಸಬಾ ಸೇರಿದಂತೆ : i) ವಿರಕ್ತ ಮಠಗಳು-ತಂಣೀರು ಹಳ್ಳಿವಮಠ (ಮು), ಜವೇನಹಳ್ಳಿ ಮಠ,(ಸ್ವಾಮಿಗಳಿದ್ದಾರೆ)

ii) ಪರಾಧೀನ-ಬೂದಿಸ್ವಾಮಿ ಮಠ, ಮಡಿವಾಳಸ್ವಾಮಿ ಮಠ, ಕಲ್ಮಠ, ಹೂಡರ ಹಳ್ಳಿ ಮಠ

iii) ಸ್ವಾಮಿಗಳಿರುವ ಮಠಗಳು-ಮುಕ್ಕುಂದೂರುಮಠ, ಯಲಗುಂದಮಠ, ಗುಂಡಶೆಟ್ಟಿ ಹಳ್ಳಿಮಠ (ಉ)

---

೪೯. ಎ.ಕ. ಸಂಪುಟ೫, (ರೈಸ್ ಸಂಪಾದಿತ) ಹಾಸನಜಿಲ್ಲೆ ಮತ್ತು ಎ.ಕ. ಸಂಪುಟ ೧೫, ಸಪ್ಲಿಮೆಂಟರಿ ಇನ್ಸ್‌ಕ್ರಿಪ್ಷನ್ಸ್ ಹಾಸನಜಿಲ್ಲೆ, ೧೯೪೩

iv) ಶಾಸನೋಕ್ತ ಮಠಗಳು-ಅಗಚೆಗದ್ದೆಮಾನಿಮಠ - ಕ್ರಿ.ಶ. ೧೭೭೫ರಲ್ಲಿ ಹಾಲ ಒಡೆಯರಿಗೆ ಬೇಲೂರು ನಾಯಕರು ಕಟ್ಟಿಸಿಕೊಟ್ಟ ಮಠ, ಸಸಾನ ಮಠ, ೧೬ನೇ ಶತಮಾನದ ಸಿಂಗರಿಕಳಿಶಾಂತದೇವರ ಮಠ, ಕ್ರಿ.ಶ. ೧೪೭೪ರ ಮಲ್ಲಪ್ಪನ ಬೆಟ್ಟದ ಕೊಪ್ಪಲಿನ ವಿರಕ್ತಮಠ (ಮು). ಮಠದ ಗುರುಗಳಾಗಿದ್ದವರು, ಪಟ್ಟದ ಚಕ್ರವರ್ತಿ ಬ್ರಹ್ಮಾನಂದ ಪರಶಿವಮೂರ್ತಿ.

೨. **ಅರಕಲಗೂಡು ತಾಲೂಕು-** i)ಸ್ವಾಮಿಗಳಿರುವ ವಿರಕ್ತ ಮಠಗಳು-ದೊಡ್ಡಮಠ, ಚಿಲುಮೆ ಮಠ, ಮರೂರುಮಠ, ಮಾದಾಪುರಮಠ, ದೊಡ್ಡಬೊಮ್ಮನ ಹಳ್ಳಿಮಠ, ಚಿಕ್ಕ ಬೊಮ್ಮತ್ತಿ ಮಠ, ಸಲ್ಲೂರು ಜಂಗಮ ಮಠ,

ii)ಪರಾಧೀನ ಮಠಗಳು- ಚಿಕ್ಕಬೊಮ್ಮನ ಹಳ್ಳಿಮಠ, ಬಸವಾಪಟ್ಟಣ ಮಠ

iii) ಪಟ್ಟದ ಮಠ- ಹಂಡರಂಗಿ ಮಠ(ಶ್ರೀಶೈಲ ಪೀಠ, ಹೆಗ್ಗಡಹಳ್ಳಿ ಮಠದ ಶಾಖಾ ಮಠ)

iv) ಸಂನ್ಯಾಸಿಮಠ: ಶ್ರೀ ಜಯಾನಂದಸ್ವಾಮಿಗಳ ಶ್ರೀಜಯದೇವ ಜಯಾನಂದ, ಆಶ್ರಮ

v. ಶಾಸನೋಕ್ತ ಮಠಗಳು: ಹೊನ್ನಗೊಂಡನ ಹಳ್ಳಿಯ ಮಹಾಮಹತ್ತಿನ ಮಠ (ಶ್ರೀಶೈಲ)

೩. **ಹೊಳೆನರಸೀಪುರ ತಾಲೂಕು:** i. ಸ್ವಾಮಿಗಳಿರುವ ಪಟ್ಟದ ಮಠಗಳು- ತೇಜೂರು ಮಾಯಿಗೌಡನಹಳ್ಳಿ ರಾಜಾಪುರದ ಮಠ - ಕೊಡಗಿನ ಬಾಳೆಹೊನ್ನೂರು ಶಾಖೆಯ ಈ ಮಠ, ಅಣೆಕಟ್ಟಿನ ಕಾರಣ ವರ್ಗಾವಣೆ ಆದ ಮಠ

ii. ಪರಾಧೀನ ಮಠಗಳು- ಹೊಳೆ ನರಸೀಪುರ ಟೌನ್‌ಮಠ, ಹುಣಿಸೇಮರದ ಮಠ, ನಂಜರಾಜಪುರದ ಮಠ

೩. ಕಲ್ಮಠ (ಕೊಡಗಿನ ಕೊಡ್ಲಿಪೇಟೆ ಕಲ್ಮಠದ ಸಂಬಂಧದ ವಿರಕ್ತಮಠ

೪. **ಸಕಲೇಶಪುರ ತಾಲೂಕು** : i ಸ್ವಾಮಿಗಳಿರುವ ಪಟ್ಟದ ಮಠಗಳು - ಸಕಲೇಶಪುರದ ಮಠ (ಬಾ.ಹೊ) ಶಾಂತಪುರದಮಠ (ಶ್ರೀ) ಈಗ ಸಂಸಾರಿ ಮಠ, ತೆಂಕಲಗೂಡು ಬೃಹನ್ಮಠ-ಎಸಳೂರು ಮಠ (ಉ), ಹೆಗ್ಗಡಹಳ್ಳಿಮಠ (ಶ್ರೀ) ; ಸಂಕಲಾಪುರಮಠ - (ವಿರಕ್ತ)

೨. ಪರಾಧೀನ ಮಠಗಳು- ಹೆತ್ತೂರು ಮಠ (ಅಗಚಿಗದ್ದೆ ಹಾಲು ಒಡೆಯರ ಮಠದ ಶಾಖೆ - ವಿರಕ್ತಮಠ) ಉದೇವಾರದ ಬಾಳದ ಕಲ್ಲುಮಠ (ಈಶ್ವರ ಮಲ್ಲಿಕಾರ್ಜುನ ಒಡೆಯರ ತೋರುಗದ್ದುಗೆ ಇದೆ), ಬಾಳ್ಳುಮಠ (ವಿರಕ್ತ), ಗೊಳಗಂಡೆಮಠ, ಚಂಗಡಹಳ್ಳಿಮಠ (ಚಿತ್ರದುರ್ಗ ಮುರುಘಾ ಸಮಯದ ಖಾಸಾ ಮಠ) ಬಾಳುಗೋಡುಮಠ.

೫. **ಬೇಲೂರು ತಾಲೂಕು**

i)ಸ್ವಾಮಿಗಳಿರುವ ಗುರುಸ್ಥಲದ ಮಠಗಳು-ಚಿಲಕೂರುಮಠ(ಶ್ರೀಶೈಲ) ಮಲ್ಲಾಪುರದ ಮಠ, ಮತ್ತಾವರದ ಗವಿಮಠ, ಯಲಹಂಕ ಮಠ

ii) ಪರಾಧೀನ ಮಠಗಳು-ಪುಷ್ಪಗಿರಿ ಮಠ (ಹಳೆಬೀಡು ಬಳಿ), ಮಲ್ಲಿಕಾರ್ಜುನ ಮಠ (ಶ್ರೀ), ಹಳೆಬೀಡಿನ ಕಲ್ಮಠ, ಶಂಕರದೇವರಮಠ (ಶ್ರೀ), ಬೆಳಗೋಡುಮಠ (ಈಶ್ವರನಹಳ್ಳಿ ಮಠ - ವಿರಕ್ತ)

iii) ಸ್ವಾಮಿಗಳಿರುವ ವಿರಕ್ತ ಮಠ- ಬಿಕ್ಕೋಡು ಮಠ(ಹಾರ್ನಳ್ಳಿ ಕೋಡಿಮಠದ ನೇರನಿರ್ವಹಣೆ) ವೆಂಕಟಪೇಟೆಮಠ (ಜಂಗಮರಿಂದ ಪೂಜೆ ನಡೆಯುತ್ತಿದೆ) ಚೌಕಿಮಠ (ಚಿಲಕೂರು ಮಠದ ಶ್ರೀಗಳವರ ನಿರ್ವಹಣೆಗಿದೆ)

iv) ಶಾಸನೋಕ್ತ ಮಠಗಳು - ಕ್ರಿ.ಶ.೧೨೭೬ರ ಜಡೆಶಂಕರ ದೇವರ ಮಠ

೬. **ಆಲೂರು ತಾಲೂಕು** i) ಶರಣಸ್ಥಲದ ಮಠಗಳು-ಸಂಗಪ್ಪನ ಮಠ, ವೀರಪ್ಪನ ಮಠ

ii) ಪರಾಧೀನ ಮಠಗಳು - ಅಜ್ಜನಮಠ, ನಲ್ಲೂರುಮಠ, ತಿಪ್ಪಾಪುರದ ಮಠ, ಕಾರ್ಜುರಳ್ಳಿ ಮಠ, ಮಾರನಾಯಕನಹಳ್ಳಿ ಹೊಸಮಠ

೭. **ಚನ್ನರಾಯಪಟ್ಟಣ-** ಪರಾಧೀನಮಠಗಳು- ಅಣತಿಕೋಡಿಹಳ್ಳಿಮಠ, ಚನ್ನರಾಯಪಟ್ಟಣ ಟೌನ್ ಮಠ, ಕ್ರಿ.ಶ. ೧೬೬೪ರ ಭಕ್ತರಹಳ್ಳಿ ಮಠ

೮. **ಅರಸೀಕೆರೆ ತಾಲೂಕು** - i) ಪಟ್ಟದ ಮಠಗಳು-ಮೂರು ಕಳಶದ ಮಠ, ಮೇಲಣ ಮಠ, ಪ್ರಾಗೈತಿಹಾಸಕಾಲದ ಬಂಡೆಗಲ್ ಚಿತ್ರಗಳನ್ನು ಹೊಂದಿರುವ ಚೆಲುವನಹಳ್ಳಿಮೇಲಣಗವಿಮಠ, ಸಾತಂಗೆರೆಮಠ, ಅಯ್ಯನಹಳ್ಳಿ ಹಿರೇಮಠ, (ಸಂಸಾರಿ ಮಠ) ಬಂಡಿಹಳ್ಳಿ ರೇವಣಸಿದ್ದೇಶ್ವರ ಮಠ, ನಾಗೇನಹಳ್ಳಿ ಮಠ, ಹರಳುಕಟ್ಟೆಮಠ, ಕೋಳುಗೋಡು ಕೆಳಗಣ ರುದ್ರದೇವರ ಮಠ (ಸಂಸಾರಿ ಮಠ) ಹಲಕೂರು ಮಠ, ಫಲಾಹಾರಸ್ವಾಮಿ ಮಠ (ಪರಾಧೀನ), ಅಳಕಟ್ಟೆಮಠ

ii) ವಿರಕ್ತ ಮಠಗಳು-ಹಾರ್ನಳ್ಳಿಕೋಡಿಮಠ, ಬಾಣಾವರದ ಕೋಡಿಮಠ, ಮಾಡಾಳು ವಿರಕ್ತಮಠ (ಮು), ಮಾಡಾಳು ಆಶ್ರಮ, ಮಾರಗೊಂಡನಹಳ್ಳಿ ಮಠ(ಮಾರ್ಗೇನಹಳ್ಳಿಮಠ) ಕೇದಿಗೆ ಮಠ, ಚಿಲುವನಹಳ್ಳಿ ಕೆಳಗಣ ಗವಿಮಠ.

iii) ವಿವರ ಲಭ್ಯವಿಲ್ಲದೆ ಮಠಗಳು-ಅಂಚೆಕೊಪ್ಪಲಿನ ಬೂದಪ್ಪನ ಮಠ, ಕಲ್ಲುಗುಡಿ ಮಠ, ಅಂಚೆಕೊಪ್ಪಲು ಮರಳುಸಿದ್ದೇಶ್ವರಮಠ, ಕೆಂಗಲ್ಲುಸಿದ್ದೇಶ್ವರ ಮಠ, ಸಿಂದಿಗೆರೆ ಕರಡಿಗವಿ ಮಠ, ಬೆಳಗೋಡು ಕಲ್ಮಠ, ದೊಡ್ಡಮೇಟಿ ಕುರ್ಕೆ ಬೂದಿಹಾಳು ಸ್ವಾಮಿ ಮಠ, ಬಾಣಾವರದ ಸಿದ್ದರಾಮೇಶ್ವರ ಮಠ.

iv) ಶಾಸನೋಕ್ತ ಮಠಗಳು-ಬೆಂಡೆಕೆರೆಮಠ (ಶ್ರೀಶೈಲ), ಕ್ರಿ.ಶ. ೧೫೪೭ರ ಫಿರಂಗಿ ಪಡುವಣ ಮಠ, ಸಂಧ್ಯಾಮಠ (ಬಾ.ಹೊ), ಕ್ರಿ.ಶ.೧೬೪೭ರ ವಿಜಯಪುರ ಮಠ

v) ವಿಶೇಷ ಮಠಗಳು-ಹೊಸಂಬತ್ತುಗಡಿಮಠ

ಒಟ್ಟಾರೆ ವೀರಶೈವ ಸಂಪ್ರದಾಯದ ಆಚಾರ್ಯ ಪರಂಪರೆ ಇರಲಿ, ಶರಣ ಪರಂಪರೆ ಇರಲಿ, ಪ್ರಾಚೀನದಿಂದಲೂ ಅವುಗಳ ಸಹಯೋಗಕ್ಕೆ ರಾಜಮಾನ್ಯತೆ ದೊರಕಿದೆ. ವರ್ತಮಾನದಲ್ಲಿ ಎರಡು ಪರಂಪರೆಯ ಸಮನ್ವಯ, ಸಹಯೋಗ ಜನಮುಖಿ ಸ್ಪಂದನಕ್ಕೆ ಅವಕಾಶವಾಗುತ್ತದೆ ಎಂಬುದನ್ನು ಮರೆಯಬಾರದು.

---

ಹಾಸನ ಜಿಲ್ಲೆಯ ಮಠಗಳ ಹೆಸರುಗಳನ್ನು ತಿಳಿಯಲು ನೆರವಾದ ತಂಣೇರುಹಳ್ಳದಮಠ, ಚಂಗಢಹಳ್ಳಿಮಠ, ಹಾರ್ನಳ್ಳಿ ಕೋಡಿಮಠ, ಕೇದಿಗೆ ಮಠದ ಸ್ವಾಮಿಗಳಿಗೆ ಹಾಗು ಹಾಸನದ ಐಸಾಮಿಗೌಡರಿಗೂ ನನ್ನ ಕೃತಜ್ಞತೆಗಳನ್ನು ಅರ್ಪಿಸುವೆ.

# ಗೌರಿ ಹುಣ್ಣಿಮೆ ಮತ್ತು ಸೀಗೀ ಹುಣ್ಣಿವೆ

## - ಒಂದು ಪರಿಚಯ

ಶಶಿಕಲಾ ವೀರಯ್ಯಸ್ವಾಮಿ

---

ಋಗ್ವೇದದಲ್ಲಿ ಪುರುಷದೈವತಕ್ಕೆ ಪ್ರಾಧಾನ್ಯ. ಹಾಗಿದ್ದರೂ ಅಲ್ಲಿ ಉಷಾ, ರಾತ್ರಿ, ಸಿನಿವಾಲಿ, ರಾಕಾ, ಗಂಗು, ಪೃಥ್ವಿ, ಅದಿತಿ, ದಿತಿ, ಪ್ರಶ್ನಿ, ಸ್ವಸ್ತಿ, ರೇವತಿ, ಪುರಂಧಿ, ಅನುಮತಿ, ಅಪದೇವಿ, ಸರಸ್ವತಿ, ಸಿಂಧು, ಇಂದ್ರಾಣಿ, ವರುಣಾಣಿ, ರುದ್ರಾಣಿ, ಆಗ್ನೇಲಿ, ಶರಣ್ಯು, ಸೂರ್ಯ, ಶಚಿ, ರೊವಾಸಿ, ಸೀತಾ, ದಕ್ಷಿಣಾ, ಶೃದ್ಧಾ, ದಿಶ್ನಾ, ಇಳಾ, ಮಾಹೆ, ಭಾರತಿ, ಗೌರಿ, ಸ್ವಧಾ, ಊರ್ವಶಿ, ಅಲಕ್ಷ್ಮಿ, ಕೃತ್ವಾ, ನಿರ್ಋತಿ ಮುಂತಾದ ಸ್ತ್ರೀದೇವತೆಯರ ಹೆಸರು ಸಿಗುತ್ತವೆ. ಅದಿತಿಯು ಮಹತ್ವದ ದೇವತೆಯಾಗಿದ್ದು ಋಗ್ವೇದಕ್ಕಿಂತ ತೀರ ಪ್ರಾಚೀನಳಾದವಳು, ಆರ್ಯದೇವತೆಯಲ್ಲಿ ಎಂಬುದಾಗಿ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಇಂದಿಗೂ, ಮಾದಿಗರಲ್ಲಿ ಕಂಡುಬರುವ ಮಾತಂಗಿಯವರೆಗೂ, ಆಕೆಯ ಮೂಲವನ್ನು ಗುರುತಿಸಲಾಗಿದೆ.

ಋಗ್ವೇದದ ನಂತರದ ಇತರ ವೇದಗಳಲ್ಲಿ, ಉಪನಿಷತ್ತುಗಳಲ್ಲಿ ಧಾರಾಳವಾಗಿ ಸ್ತ್ರೀದೇವತೆಯ ಉಲ್ಲೇಖಗಳು ದೊರೆಯುತ್ತವೆ. ಇವುಗಳಲ್ಲಿ ಶಾಕ್ತಉಪನಿಷತ್ತುಗಳೇ ಪ್ರತ್ಯೇಕವಾಗಿದ್ದು ಶಕ್ತಿಯ ಕುರಿತಾಗಿ ವಿಶೇಷವಾದುದನ್ನು ಹೇಳುತ್ತವೆ. ಇವು ಹೇಳುವಂತೆ

ಸೃಷ್ಟಿಯನ್ನು ಉಂಟುಮಾಡುವ ಶಿವನನ್ನು ಪೂಜಿಸುವವಳೇ ಶಕ್ತಿ. ಇವಳೇ ವಿಶ್ವದ ಜನನಿ. ಪ್ರಕೃತಿ ಪುರುಷರ ಕಾರಣಳು. ಅದಕ್ಕೇ ಪೂಜ್ಯಳು.

ಗೌರಿ, ಶೀಗಿ ಇಬ್ಬರೂ ಸ್ತ್ರೀದೇವತೆಗಳು. ಉತ್ತರ ಕರ್ನಾಟಕದಲ್ಲಿ ಮಾತ್ರ ಹೆಚ್ಚು ಪ್ರಚಲಿತವಿರುವ ಈ ಸೀಗಿ ಮತ್ತು ಗೌರಿ ಹುಣ್ಣಿವೆಗಳ ಹಬ್ಬಗಳು ಶಕ್ತಿಪೂಜೆಯ ಸಂಕೇತಗಳಾಗಿವೆ. ಈ ಹಬ್ಬಗಳಲ್ಲಿ ಪೂಜಿಸುವ ಸೀಗಿ ಮತ್ತು ಗೌರಿಯ ಆಕೃತಿಗಳು ಗುಪ್ಪೆ ಆಕಾರದವು ಎಂಬುದು ವಿಶೇಷವಾದ ಅಂಶ. ಈ ಗುಪ್ಪೆಯ ಆಕೃತಿಗಳಿಗೆ ಸಂಸ್ಕೃತಿಯ ಪ್ರಾರಂಭಕಾಲದಿಂದಲೂ ವಿಶೇಷ ಹಿನ್ನೆಲೆ ಇದೆ ಎಂಬುದನ್ನು ಸಂಶೋಧಕರು ಕಂಡುಕೊಂಡಿದ್ದಾರೆ. ಅಲ್ಲದೆ ಅನೇಕ ಜನಾಂಗಗಳಲ್ಲಿ ಇದು ಸಂಸ್ಕೃತಿಯ ಲಕ್ಷಣವಾಗಿ ಬೆಳೆದು ಬಂದಿದೆ ಎನ್ನುವುದೂ ಗಮನಾರ್ಹವಾಗಿದೆ.

ಪ್ರಾಚೀನ ಸಂಸ್ಕೃತಿಯಿಂದ ಇದಕ್ಕೆ ಬೇಕಾದಷ್ಟು ಆಧಾರಗಳು ಸಿಗುತ್ತವೆ. ಮೊಹೆಂಜೊದಾರೊ ಹರಪ್ಪಾಗಳಲ್ಲಿ ಈ ಬಗೆಯ ಆಕೃತಿಗಳು ಸ್ಪಷ್ಟವಾಗಿ ಕಲ್ಲಿನಲ್ಲಿ ಮಣ್ಣಿನಲ್ಲಿ, ರೂಪುಗೊಂಡಿದ್ದು ವ್ಯಕ್ತವಾಗಿದೆ. ಅಲ್ಲಿ ದೇವತೆಗಳಂತೆ ಪೂಜಿಸಲ್ಪಟ್ಟ ಸಾಧ್ಯತೆಯನ್ನು ಸಂಶೋಧಕರು ಗುರುತಿಸಿದ್ದಾರೆ. ಇಲ್ಲಿ ಸಂಶೋಧನೆಯನ್ನು ಕೈಕೊಂಡ ಶ್ರೀ ರಾಯಬಹದ್ದೂರ್ ದಯಾರಾಮ ಸಾಹನಿ ಅವರು ಹೇಳುವ ಹಾಗೆ.

The inhabitants of Harapa appear also to have been in the habit of offering in their temples-Terra-Cotta cones, with or without figures of animals, of which several specimens have been recovered, A large cone of dark stone, 11 inches high resembling the Siva-linga of modern times, must have been used for worship (Hindu Architecture in India and Abroad P. K.Acharya)

ಅಲ್ಲಿಯೇ ಇನ್ನೊಂದೆಡೆ ಶಿಲ್ಪದಲ್ಲಿ ಏಕಶೃಂಗೀಯ ಎತ್ತಿನ ಮೂರ್ತಿಯ ಮುಂದೆ ಇಂಥದೊಂದು ಆಕೃತಿಯು ಕಂಡುಬರುವುದು. ವರ್ತುಳದ ಇಲ್ಲವೇ ಚೌಕಾಕಾರದ ವೇದಿಕೆ ಅದರ ಮೇಲೆ ಕಂಬದಾಕೃತಿಯ ತುದಿಯಲ್ಲಿ ಗುಪ್ಪೆ (ಇಂಡಿಯನ್ ಆರ್ಟ್ ವಿ.ಎಸ್. ಅಗರವಾಲಾ, ೩೩.೩೪). ಇದು ವಿಶೇಷವಾಗಿ ವಿದ್ವಾಂಸರ ಗಮನ ಸೆಳೆದದ್ದು ಕೆಲವರು ಗುಪ್ಪೆಯೊಂದಿಗೆ ಇಡಿಯಾಗಿ ಕಂಬವನ್ನು ದೇವತೆಯು ಸಂಕೇತವಾಗಿ ಗ್ರಹಿಸಿದರೆ ಕೆಲವರು ಕಂಬದ ತುದಿಯಲ್ಲಿನ ಗುಪ್ಪೆಯನ್ನಷ್ಟೇ ದೇವತೆಯ ಸ್ಥಾನ ಎಂದು ಗುರುತಿಸಿದ್ದಾರೆ. ಆದರೆ ನಾಣ್ಯಗಳಲ್ಲಿ ಇತರ ಮುದ್ರೆಗಳಲ್ಲಿ ಇದು ಸ್ವತಂತ್ರವಾಗಿ ಬಳಕೆಯಾಗಿರುವುದರಿಂದ ಅಂದಿನ ವಸ್ತುಪೂಜೆಯ ಸಂಕೇತಗಳಾಗಿವೆ ಎಂದೂ ಶಂಕಿಸಲಾಗಿದೆ.

ಅವರೆ ರೈತ ಜೀವನದ ಬಹುಮುಖ್ಯವಾದ ಸೀಗಿಹುಣ್ಣಿವೆಯಲ್ಲಿನ, ಗೌರಿ ಹುಣ್ಣಿವೆಯಲ್ಲಿನ ಆಕೃತಿಗಳು, ಗುಪ್ಪೆಯ ಸ್ವರೂಪದಲ್ಲಿವೆ. ಎರಡೂ ಹಬ್ಬಗಳಲ್ಲಿ ಇವೇ ಪೂಜೆಗೊಳ್ಳುತ್ತವೆ.

**ಸೀಗಿ ಹುಣ್ಣಿವೆ** - ಸೀಗಿ ಹುಣ್ಣಿವೆಯಲ್ಲಿ ಪೂಜಿಸಲ್ಪಡುವ ಈ ಗುಪ್ಪೆಯ ಆಕೃತಿ ಧಾನ್ಯರಾಶಿಯ ಆಕಾರ ಎನ್ನುವ ಸಾಧ್ಯತೆಯೂ ಇಲ್ಲದಿಲ್ಲ. ಯಾಕೆಂದರೆ ಸೀಗಿ ಅನ್ನುವದು ಸುಗ್ಗಿಯ ವಿಕಾರ ರೂಪ ಅನ್ನುವವರೂ ಇದ್ದಾರೆ. ಅಥವಾ ಸೀಗಿ ಸಂಸ್ಕೃತ 'ಶಿಖಾ'ದ ತದ್ಭವರೂಪವೂ ಆಗಿರಬಹುದು. ಶಿಖರ-ಶಿಖಿ-ಶೀಗಿ ಹೀಗೂ ಆಗಿರುವ ಸಾಧ್ಯತೆ ಇದೆ. ಇದು ಶಿಖರಾಕೃತಿಯಲ್ಲಿರುವುದೂ ನಿಜ.

ಹಿಂದಿನ ಶಾಸನಗಳನ್ನು ಅವಲೋಕಿಸಿದರೆ ಈ ಕಾಲದಲ್ಲಿ ಹೆಜ್ಜುಗ್ಗಿ ಎಂಬ ಹೆಸರಿನ ಎಂಬ ದೊಡ್ಡ ಹಬ್ಬವು ವಿಜೃಂಭಣೆಯಿಂದ ನಡೆಯುತ್ತಿದ್ದಿತು ಎಂದು ತಿಳಿದು ಬರುತ್ತದೆ. ಹೆಜ್ಜುಗ್ಗಿಯ ಹಬ್ಬ ಅಂದರೆ ಹಿರಿಯ ಸುಗ್ಗಿಯ ಹಬ್ಬ. ಈಗಲೂ ಕೆಲವೆಡೆ ಸೀಗೀ ಹುಣ್ಣಿವೆಗೆ ಹೆಜ್ಜುಗ್ಗಿ ಎಂದೇ ಅನ್ನುವರು. ಸೀಗಿ ಹುಣ್ಣಿವೆ ಚಾಂದ್ರಸಂಪ್ರದಾಯದ ಮೂಲದಲ್ಲಿ ಬರುವ ಹಬ್ಬವೆಂದೂ ಇದಕ್ಕೆ ಕೌಮುದೀ ಮಹೋತ್ಸವ ಎಂದು ಕರೆದು ಬೆಳದಿಂಗಳ ಹಬ್ಬ ಮಾಡುವದೂ ಇದೆ.

ಸೀಗಿಹುಣ್ಣಿಮೆಯು ಅಶ್ವಯುಜ ಶುದ್ಧ ಪೂರ್ಣಿಮೆಯಂದು ಇದ್ದು ಈ ಕಾಲ, ಮುಂಗಾರು ಬೆಳೆಗಳಿಂದ ನೆಲದಾಯಿ ಫಲವತಿಯಾಗಿ ನಲಿವ ಕಾಲ. ಈಗಾಗಲೇ ಮನೆಗೆ ಬಂದ ಸಜ್ಜೆ-ಜೋಳ-ನವಣೆಗಳು ಹೊಸಧಾನ್ಯಗಳು. ನಾಳೆ ಹುಣ್ಣಿವೆ ಅಂದರೆ ಹಿಂದಿನ ಇಡೀ ರಾತ್ರಿ ಮನೆಯ ಹೆಣ್ಣುಮಕ್ಕಳು ನಿದ್ದೆಗೆಟ್ಟು ಅಡಿಗೆ ಮಾಡುತ್ತಾರೆ. ಜೋಳದ ಕಡುಬು, ಸಜ್ಜೆ ಕಡುಬು, ನವಣೇಕಡುಬು, ಎಳ್ಳು ಶೇಂಗಾ ಹೋಳಿಗೆಗಳು, ಎಲ್ಲ ತಲದ ಕಾಯಿಪಲ್ಲೆಗಳು, ಜುಣಕ, ಕುಂಬಳಕಾಯಿ ಬರ್ತ ಇವು ಮುಖ್ಯ ಪಕ್ವಾನ್ನಗಳು. ಕರ್ಜೀಕಾಯಿ, ಸುರಳೀ ಹೋಳಿಗೆ, ಸಿಹಿಗಳು. ಶೇಂಗಾ, ಪುತಾಣಿ, ಕಾರೆಳ್ಳು, ಎಳ್ಳು, ಅಗಸಿ ಹಿಂಡಿಗಳು, ಖೊಬ್ರಿ, ಬಳ್ಳೊಳ್ಳಿ, ಉಳ್ಳಾಗಡ್ಡಿ, ಚಪ್ಪರ ಬದನೀಕಾಯಿ ಚಟ್ನಿಗಳು, ಹೀಗೆ ನಾನಾತರದ ಅಡಿಗೆಗಳು ಬೆಳಗಾಗುವುದರಲ್ಲಿ ಸಿದ್ಧ. ಅವನ್ನೆಲ್ಲ ಕಟ್ಟಿಕೊಂಡು ಮನೆಯ ಮಂದಿ ಓಣಿಯ ತಮಗೆ ಬೇಕಾದವರನ್ನು ಕೂಡಿಕೊಂಡು ಹೊಲಕ್ಕೆ ಹೋಗುತ್ತಾರೆ. ಅಲ್ಲಿ ತಾವು ಮಾಡಿದ ಅಡಿಗೆಯಲ್ಲಿ ಸ್ವಲ್ಪಭಾಗ ತೆಗೆದುಕೊಂಡು ಹೊಲದ ತುಂಬ ಚೆಲ್ಲಾಡುತ್ತಾರೆ. ಇದು ಭೂದೇವಿಗೆ ಬಯಕೆಯಾಟ ಎಂದೂ ಕೆಲವು ಹಳ್ಳಿಗಳಲ್ಲಿ ಹೇಳುತ್ತಾರೆ. ಅದಕ್ಕೆ ಅದೇ ಎಲ್ಲಾತರದ ಅಡಿಗೆ ಮಾಡಲೇಬೇಕು. ಇದನ್ನು'ಚರಗ,ಚಲ್ಲುವುದೂ' ಅನ್ನುತ್ತಾರೆ. ಅದನ್ನು ಹೊಲದ ತುಂಬ ಚೆಲ್ಲಾಡುವಾಗ "ಚಾಂಗೆ ಬೊಲೊ, ಚಾಂಗೆ ಬೊಲೊ"ಎಂದು ಕೂಗುತ್ತಾರೆ.

ಹಾಗೆಯೇ ಹೊಲದ ಒಂದು ಭಾಗದಲ್ಲಿ 5 ಚಿಕ್ಕಕಲ್ಲು ಗುಂಡುಗಳನ್ನಿಟ್ಟು ಅವುಗಳ ಮೇಲೆ..ಹೀಗೆ ಸುಣ್ಣಾದಕಾರ ಮಾಡಿರುತ್ತಾರೆ. ಇವುಗಳ ಮೇಲೆ 5ತೆನೆಗಳುಳ್ಳ

ಹಸಿಜೋಳದ ದಂಟನ್ನು ಕೂಡಿಸಿ ಕಟ್ಟಿರುತ್ತಾರೆ. ಸುಗ್ಗಿಮಾಡುವಾಗ ಕಣವಲ್ಲಿ ಈ ಪೂಜಿಸಿದ ಕಲ್ಲುಗಳು ಬೇಕೇಬೇಕು. ಈ ಐದರ ಹತ್ತಿರ ಇನ್ನೊಂದು , ಸ್ವಲ್ಪ ದೊಡ್ಡ ಆಳತೆಯ ಕಲ್ಲನ್ನಿಟ್ಟು ಅದಕ್ಕೆ ವಿಭೂತಿ,ಕುಂಕುಮ ಹಚ್ಚಿ, ಹೂವು ಪತ್ರಿಏರಿಸಿ ಪೂಜೆಮಾಡುತ್ತಾರೆ. ಒಂದೇ ದೊಡ್ಡ ಕಲ್ಲು ಕುಂತಿ ಎಂದು ಉಳಿದ ಐದು ಹರಳುಗಳು ಪಾಂಡವರೆಂದೂ ಪ್ರತೀತಿ. ಕುಂತಿ ಸಂತಾನದೇವತೆ ಎಂದೂ, ಆವಳ ಪೂಜೆಯಿಂದ ಬೆಳೆ ಹುಲುಸಾಗಲೆಂದೂ ಆಶಿಸಲಾಗುತ್ತದೆ. ಕೆಲಕಡೆಗಳಲ್ಲಿ ಇಲ್ಲಿಯೇ ಸೀಗಿಯನ್ನು ಮಾಡಿ ಪೂಜಿಸುವದಿದೆ. ಬನದಲ್ಲಿ ಊಟವಾದ ನಂತರ ಮನೆಗೆ ಬರುವಾಗ ಮಣ್ಣನ್ನು ಜೊತೆಗೆ ತಂದು ಮನೆಯಲ್ಲಿ ಸೀಗಿಯನ್ನು ತೀಡುವರು. ಸೀಗೆ ಹುಣ್ಣಿವೆ ಇನ್ನೂ5 ದಿನವಿರುವಾಗಲೇ ಇದನ್ನು ಇಡುವದು ಹೆಚ್ಚು ವಾಡಿಕೆಯಲ್ಲಿದೆ. ಮಣ್ಣಿನ ಎರಡು ಗುಪ್ಪೆಗಳನ್ನು ಮಾಡುತ್ತಾರೆ. ಕೈಯಿಂದ ಮಾಡುವರ ಜೊತೆಗೆ ಕುಂಬಾರ ತಿಗರಿಯಲ್ಲಿ ತಯಾರಾದ ಇಂಥವನ್ನು ಬಳಸುವದೂ ಹೆಚ್ಚಾಗಿ ಕಂಡುಬರುತ್ತದೆ. ಕುಂಬಾರನಲ್ಲಿ ತಯಾರಾದಾಗ ಅಡಕಲಗಡಿಗೆಯ ಹಾಗೆ ಗಡಿಗೆ ಮೇಲೆ ಗಡಿಗೆ ಇಟ್ಟಂತೆ ಸೊಗಸಾಗಿರುತ್ತದೆ. ಈ ಮಜಲುಗಳು ಸಾಮಾನ್ಯವಾಗಿ ೫-೭-೯-೧೧ ಇರುವವು. ಇಂಥವು ೧೯ ಮಜಲುಗಳವರೆಗೂ ಇವೆ. ಈ ಎರಡು ಆಕೃತಿಗಳ ಮುಂದೆ ಮತ್ತೆ 5 ಇಂಥವೇ ಚಿಕ್ಕ ಆಕೃತಿಗಳನ್ನ ಇಡುತ್ತಾರೆ. ಇವು ಕೆಲವೆಡೆ ಚೌಕಾದ ತಳವನ್ನು ಹೊಂದಿದ್ದು 4 ಮೈಯನ್ನು ಹೊಂದಿರುತ್ತವೆ. ಇವನ್ನು ಕೊಂತಿ ಎಂದೂ ಅವಳ ಮಕ್ಕಳೆಂದೂ ಕರೆಯುವುದಿದೆ. ಕೊನೆಯದಿನ ಒಂದನ್ನು ಕಳಿಸಿ ಇನ್ನೊಂದನ್ನು ಇಟ್ಟುಕೊಳ್ಳುತ್ತಾರೆ. ಮನೆಯಲ್ಲಿ ಹೆರಿಗೆಯಾಗಿದ್ದರೆ ಕಳಿಸದೇ ಮೇಲಿನ ಮಾಡದಲ್ಲಿಡುತ್ತಾರೆ. ಹೀಗೆ ಉಳಿಸಿಕೊಳ್ಳುವ ಸಂಪ್ರದಾಯವೊಂದು ಎಲ್ಲ ವಿಧಿಕ್ರಿಯೆಗಳಲ್ಲೂ ಕಂಡು ಬರುತ್ತದೆ. ದೇವಿಯ ಪ್ರಸಾದ ಸ್ವರೂಪವಾಗಿಯೋ ದೇವಿಯದೇ ಸ್ವರೂಪವೆಂದೋ ಅದನ್ನು ತಾವು ಭರಿಸುವುದು ಆ ಮೂಲಕ ಪವಿತ್ರತೆಯನ್ನು ಹೊಂದುವದೇ ಇಲ್ಲಿಯ ಆಶಯ. ಈ ೫ ದಿನಗಳೂ ಸೀಗಿಯನ್ನು ಸಾಯಂಕಾಲ ಸಿಂಗರಿಸಿ ಓಣಿಯ ಕಿಶೋರಿಯರು ಸೇರಿ ಹಾಡು ಹೇಳಿ ಆರತಿ ಮಾಡುತ್ತಾರೆ. ೫ ದಿನವೂ ೫ ತರದ ನೈವೇದ್ಯ ಮಾಡಿದ್ದು ಅದನ್ನೇ ಬಂದವರಿಗೆ ಹಂಚುತ್ತಾರೆ. ಅವಿವಾಹಿತರು ಕೂಡ ಸೀಗಿಗೆ ಆರತಿ ಮಾಡುತ್ತಾರೆ. ಆದರೆ ಈ ಸೀಗಿ ಮತ್ತು ಗೌರಿ ಹುಣ್ಣಿವೆಗಳಲ್ಲಿ ಹಾಡುವ ಹಾಡುಗಳಲ್ಲಿ ಮಾತ್ರ ವ್ಯತ್ಯಾಸವಿಲ್ಲ. ಎರಡೂ ಹಬ್ಬಗಳಲ್ಲಿ ರಾತ್ರಿ ಬೆಳದಿಂಗಳಲ್ಲಿ ಹೆಣ್ಣುಮಕ್ಕಳು ಹಾಡು, ಆಟ, ವಿನೋದಗಳಲ್ಲಿ ಕಾಲ ಕಳೆಯುತ್ತಾರೆ. ಗೌರಿ ಹುಣ್ಣಿವೆ ಗೆ ಮಾತ್ರ ಕೆಲವು ಪ್ರತ್ಯೇಕ ಹಾಡುಗಳಿವೆ. ೫ನೇ ದಿನ ಈ ಸೀಗಿಯನ್ನು ಬಾವಿ, ಕೆರೆ, ಹಳ್ಳಗಳಲ್ಲಿ ಮುಳುಗಿಸುತ್ತಾರೆ.

ಆದರೆ ಈ ಹಬ್ಬದ ಸಂಪ್ರದಾಯ ಇತ್ತೀಚೆಗೆ ಹಳ್ಳಿಗಳಲ್ಲಿ ಕಡಿಮೆಯಾಗುತ್ತಿದೆ. ಸೀಗಿ ಕೂಡಿಸುವುದನ್ನು ಕೂಡ ಬಹಳ ಜನ ಬಿಟ್ಟಿದ್ದಾರೆ. ಯಾಕೆಂದು ಕೇಳಿದರೆ ''ಮನ್ಯಾಗ ತರೂದಕ್ಕ ಯಾರಿಗೂ ಮನಸಿಲ್ಲ. ತಂದ್ರೂ ಓಣ್ಯಾಗ ಯಾರೂ ಬರೂದಿಲ್ಲ ಆರತೀಗಿ'' ಎಂದು ಉದಾಸೀನ ತೋರಿಸುತ್ತಾರೆ.

ನಾಗರಿಕತೆ ನಮ್ಮ ಬದುಕಿನ ಅಹ್ಲಾದಕರ ಕ್ಷಣಗಳನ್ನು ಕಿತ್ತಿಕೊಳ್ಳುತ್ತಾ ಹೇಗೆ ನಮ್ಮ ಜನಾಂಗದ ಸಂಸ್ಕೃತಿಯನ್ನು ಬರಡುಮಾಡುತ್ತಿದೆ. ನಮ್ಮ ಉದರಪೋಷಣೆ ಮಾಡುವ ಜೀವದಾಯಿ ಶಕ್ತಿಗೆ ಕೃತಜ್ಞತೆ ತೋರಿಸಲು ಕೂಡ ನಮಗೆ ಸಮಯವಿಲ್ಲ.

**ಗೌರಿಹುಣ್ಣಿವೆ** : ಉತ್ತರ ಕರ್ನಾಟಕದಲ್ಲಿ ಗೌರಿಯು ಒಂದು ಮಹತ್ವದ ದೇವತೆ. ಗೌರಿಹುಣ್ಣಿವೆ ಗೌರಿ, ಅಷ್ಟಮಿ ಗೌರಿ, ತೊಟ್ಟಿಲು ಗೌರಿ, ಶ್ರಾವಣ ಗೌರಿ-ಹೀಗೆ ನಾನಾ ಬಗೆಯಲ್ಲಿ ಗೌರಿಪೂಜೆ ನಡೆಯುತ್ತದೆ. ಆದರೆ ಇದೆಲ್ಲ ಗುಪ್ಪೆಗಳನ್ನಲ್ಲದೇ ಗಡಿಗೆಗಳನ್ನು ಮೂರ್ತಿಗಳನ್ನು ಹೊಂದಿರುವುದಿದೆ.

ಗೌರಿ ಹುಣ್ಣಿವೆಯ ಆಚರಣೆ ಕೆಲವು ಕಡೆ ಕೆಲವು ರೀತಿ ಇದೆ. ಬಹಳ ಕಡೆಗೆ ಸೀಗಿಯ ಆಕೃತಿಗಳಂಥ ಗುಪ್ಪೆಯ ಆಕೃತಿಗಳನ್ನೇ ತಂದು ಐದು ದಿನಗಳವರೆಗೆ ಪೂಜೆ ಮಾಡಿ 5ನೇ ದಿನ ಅವನ್ನು ಕೆರೆ-ಹೊಳೆಯ ಪಾಲುಮಾಡುತ್ತಾರೆ. ಇನ್ನು ಕೆಲವು ಕಡೆ ಓಣಿಯ ಜನರೆಲ್ಲ ಸೇರಿ ಒಂದು ಮನೆಯ ಕಟ್ಟೆಯ ಮೇಲೆ ಕೆರೆಯಿಂದ ತಂದ ಮಣ್ಣಿನಿಂದ ಗೊಂಬೆಯ ಆಕಾರ ಮಾಡಿ ಕೂಡಿಸಿ ಸಿಂಗರಿಸಿ 5 ದಿನವೂ ಅಲ್ಲಿ ಸೇರಿ ರಾತ್ರಿ ತುಂಬಾ ಹೊತ್ತು ಆಟ-ಹಾಡುಗಳಲ್ಲಿ ಕಳೆಯುತ್ತಾರೆ. ಕೆಲವು ಕಡೆ ಆ ಊರ ಪ್ರಮುಖ ದೇವಸ್ಥಾನದಲ್ಲಿ ಕಟ್ಟಿಗೆಯ ಶಿವ-ಪಾರ್ವತಿಯರ ಮೂರ್ತಿಯನ್ನು ಮಾಡಿ ಕಟ್ಟಿಗೆಯ ಬಸವಣ್ಣನ ಮೇಲೆ ಕೂಡಿಸಿ ಹುಣ್ಣಿವೆಯ ದಿನ ಊರ ಮುತ್ತೈದೆಯರೆಲ್ಲ ಬಂದು ಆರತಿ ಮಾಡಿ ಹಾಡಿ ಹೋಗುತ್ತಾರೆ. ಇನ್ನು ಕೆಲವು ಕಡೆಗೆ ದೇವಸ್ಥಾನದಲ್ಲಿ ಗುಪ್ಪೆಯಾಕೃತಿಗಳನ್ನಿಟ್ಟು ಪೂಜಿಸಿರುತ್ತಾರೆ. ಇಲ್ಲಿಗೆ ಊರ ಯುವತಿಯರೆಲ್ಲ ಸಕ್ಕರೆಯಚ್ಚಿನಲ್ಲಿ ಮಾಡಿದ ನಾನಾ ತರದ ಚಿಕ್ಕ, ಆಕಾರಗಳಿಂದ ತುಂಬಿದ ಆರತಿಯನ್ನು ತಂದು ಬೆಳಗುತ್ತಾರೆ. ಹಾಗೆ ಗುಡಿಗೆ ಹೋಗುವಾಗ ಬರುವಾಗ ಹಾಡುತ್ತಲೇ ಇರುತ್ತಾರೆ.

ಇನ್ನೂ ಕೆಲವೆಡೆ ಗೌರಿಯನ್ನು ಕೂಡಿಸಿ ಮೆಟ್ಟಿಲುಗಳನ್ನು ರಚಿಸಿ ಅದರ ತುಂಬ ತರತರದ ಅಡಿಗೆಯ ಸಾಮಾನುಗಳನ್ನು ಜೋಡಿಸುತ್ತಾರೆ. ಅದರ ಸುತ್ತ ಕೋಟೆ ಕಟ್ಟುತ್ತಾರೆ. ಇದೊಂದು ರೀತಿಯಾದರೆ ಹೆಚ್ಚಾಗಿ ಹಳ್ಳಿಗಳಂಥ ಪ್ರದೇಶಗಳಲ್ಲಿ ಕೆರೆಯಿಂದ ಹೆಣ್ಣುಮಕ್ಕಳು ಕೆಸರನ್ನು ತಂದು ಮೊಳದೆತ್ತರದ ಗೌರಿಯ ಮೂರ್ತಿಯನ್ನು ಮಾಡಿ ಅದಕ್ಕೆ ಸೀರೆ ಉಡಿಸುತ್ತಾರೆ. ಕಣ್ಣಿಗೆ ಗುಲಗಂಜಿ ಕೂಡಿಸುತ್ತಾರೆ. ಕಿವಿ-ಮೂಗು, ಕೊರಳುಗಳಲ್ಲಿ ಆಭರಣ ಹಾಕುತ್ತಾರೆ. ಕೈಗೆ ಬಳೆ, ಕಾಲಿಗೆ ಕಾಲುಂಗುರ. ಹೀಗೆ ಐದುದಿನ ಅವಳಿಗೆ ದಿನಕ್ಕೊಂದು ಸೀರೆ, ಎದುರಿಗೆ ಮಣ್ಣಲ್ಲೇ ಮಾಡಿದ ಅನೇಕ ಬಗೆಯ ಆಕೃತಿಗಳು, ಸೀರೆಯ ಮಂಟಪ, ಹೀಗೆ ಮನೆ ಎದುರಿನ ದೊಡ್ಡ ಜಗಲಿಯ ಮೇಲೆ ಅರ್ಧದಷ್ಟು ಜಾಗವನ್ನು ಇದು ಆಕ್ರಮಿಸುತ್ತದೆ. ಉಳಿದರ್ಧ ಜಾಗದಲ್ಲಿ ರಾತ್ರಿ ಮನೆಯ ಗಂಡಸರ ಊಟವಾದ ಮೇಲೆ ಹೆಣ್ಣು ಮಕ್ಕಳೆಲ್ಲ ಅದೇ ಜಗಲಿಗೆ ಊಟ

ತರುತ್ತಾರೆ. ಉಂಡಾದ ಮೇಲೆ ಬೆಳದಿಂಗಳಲ್ಲಿ ರಾತ್ರಿ ೨-೩ ಗಂಟೆಯವರೆಗೆ ಹಾಡು, ಆಟ, ವಿನೋದಗಳಲ್ಲಿ ಕಾಲಕಳೆಯುತ್ತಾರೆ.

ಆ ಗೌರಿಯನ್ನು ೫ ಮಂಗಳವಾರ ಅಥವಾ ಐದು ಶುಕ್ರವಾರ ಕೂಡಿಸುವ ಪರಿಪಾಠವಿದೆ. ಈ ವಿಶೇಷವಾರಗಳಲ್ಲಿ ಆ ಓಣಿಯ ಕುಮಾರಿಯರೆಲ್ಲ ಮಧ್ಯಾಹ್ನ ಬುತ್ತಿ ಕಟ್ಟಿಕೊಂಡು ತಮ್ಮಂದಿರನ್ನು ಕರೆದುಕೊಂಡು ಆ ಊರಿಗೆ ಹತ್ತಿರವಿರುವ ತೋಟವನ್ನೋ ತೋಪನ್ನೋ ಸೇರುತ್ತಾರೆ. ಅಲ್ಲಿ ಒಂದೊಂದು ಮರವನ್ನು ಒಂದೊಂದು ಓಣಿಯವರು ಆಕ್ರಮಿಸಿಕೊಂಡು ಮರದ ಸುತ್ತ ಸ್ವಚ್ಛಮಾಡಿ ತಾವು ಕುಳಿತು ಊಟಮಾಡುವಷ್ಟು ಜಾಗದ ಸುತ್ತಲೂ ಕಲ್ಲುಗುಂಡುಗಳನ್ನಿಟ್ಟು ತಮ್ಮ ಸರಹದ್ದಿನ ಕೋಟೆಯನ್ನು ಕಟ್ಟಿಕೊಳ್ಳುತ್ತಾರೆ. ಎಲ್ಲರಿಗೂ ಹತ್ತಿರವಲ್ಲಿರುವ ಒಂದು ಗಿಡಕ್ಕೋ ಕಲ್ಲಿಗೋ ವಿಭೂತಿ-ಕುಂಕುಮ ಹಚ್ಚಿ ಊದುಬತ್ತಿ ಬೆಳಗಿ ಪೂಜಿಸುತ್ತಾರೆ. ನಂತರ ಪರಸ್ಪರರು ಬುತ್ತಿಯನ್ನು ವಿನಿಮಯ ಮಾಡಿಕೊಂಡು ನಗು-ಹಾಸ್ಯಗಳಿಂದ ಊಟ ಮುಗಿಸಿರುತ್ತಾರೆ. ಹೊಟ್ಟೆ ಭಾರವಾಗಿದ್ದರೂ ತೀರದ ಉತ್ಸಾಹ. ಎಲ್ಲರೂ ಪಾತ್ರೆಗಳನ್ನು ತೊಳೆದಿಟ್ಟುಕೊಂಡು ತಾವು ಬರುವಾಗ ತಂದ ಹಿತ್ತಾಳೆಯ ಕಳಸ ತಂಬಿಗೆಯನ್ನು ಒಂದು ಮಧ್ಯವರ್ತಿ ಜಾಗದಲ್ಲಿ ಎಲ್ಲರೂ ಇಟ್ಟು ಅದಕ್ಕೆ ತೋಟದಲ್ಲಿ ಸಿಗುವ ಹೂವೇರಿಸುತ್ತಾರೆ. ಇನ್ನೊಂದು ವಿಶೇಷವೆಂದರೆ ಒಂದು ತರದ ಹುಲ್ಲಿನ ಮಾರುದ್ದ ಜಡೆಯನ್ನು ಮಾಡಿ ಅದನ್ನು ಈ ಕಳಸ ತಂಬಿಗೆಯಲ್ಲಿ ಸೇರಿಸುತ್ತಾರೆ. ನಂತರ ವರ್ತುಲಾಕಾರವಾಗಿ ಸುತ್ತಿಕೊಳ್ಳುತ್ತಾ ಹಾಡುತ್ತಾರೆ. ಇಲ್ಲಿ ಹಾಡುವ ಹಾಡುಗಳೇ ಬೇರೆ. ಮನೆಯಲ್ಲಿ ಗೌರಿಯ ಎದುರಿಗೆ ಹಾಡುವ ಹಾಡುಗಳೇ ಬೇರೆ.

*ಒಂದs ಸೇರೆಣ್ಣೆ ತಂದೇನೆ ಗೌರಿ*
*ಒಂದs ದೀವಿಗೆ ಹಚ್ಚೇನೆ ಗೌರಿ*
*ರಾಯರಾಡೂದು ಹಾದಿ ಬೀದ್ಯಾಗ*
*ಶೆಟ್ಟರಾಡೂದು ಪಟ್ಟಣ ಸಾಲ್ಯಾಗ*
*ನಾವಾಡೂದು ಗೌರಿ ಹುಣವ್ಯಾಗ್ಯ ಕೋಲು ಕೋಲ*

ಹೀಗೆ ಐದು ಸೇರೆಣ್ಣೆ ತಂದೇವ ಗೌರಿ ಎನ್ನುವವರೆಗೆ ಹಾಡು ಮುಂದುವರಿಯುತ್ತದೆ. ಇಂಥವೇ ಚುಟುಕಿನ ಹಾಡುಗಳನ್ನೇ ಹೆಚ್ಚಾಗಿ ಹೇಳುತ್ತಾರೆ.

*ಒಂದ ಚಂದದ ಕೋಟಿ*
*ಅದರೊಳು ಒಂದ ಚಂದದ ಬಸವ*
*ಬಸವಕ ಬಸವೆನ್ನಿರೆ*
*ಬಸವನ ಪಾದಕ ಶರಣೆನ್ನಿರೆ*

ಇದೂ ಕೂಡ ಐದು ಚಂದದ ಕೋಟಿ ಎನ್ನುವವರೆಗೆ ಮುಂದುವರಿಯುತ್ತದೆ. ಹೀಗೆ ಹಾಡುತ್ತ ಹುಡುಗೆಯರು ಮನೆ ತಲುಪುವುದರಲ್ಲಿ ದೀಪ ಹಚ್ಚುವ ಸಮಯವಾಗಿರುತ್ತದೆ. ಹೀಗೆ ಊಟ ಕಟ್ಟಿಕೊಂಡು ಹೋಗುವುದಕ್ಕೆ "ಕೆರೆ ಕಟ್ಟಲು ಹೋಗುವದು" ಎಂದು ಹೇಳಲಾಗುತ್ತದೆ ಮತ್ತು ದೇವರಿಗೆ ದೀಪ ಮುಡಿಸಿ ಸ್ವಲ್ಪ ಹೊತ್ತು ಕಳೆದು ಮತ್ತೆ ರಾತ್ರಿ ಊಟವನ್ನು ಗೌರಿಯ ಜಗಲಿಗೋ ಅನುಕೂಲವಿಲ್ಲದಿದ್ದರೆ ಮನೆಯಲ್ಲೋ ಮಾಡಿ ಮುಗಿಸುತ್ತಾರೆ.

ಈ ಕೆರೆಕಟ್ಟುವ ಕೊನೆಯ ದಿನ ಒಂದು ಸ್ವಾರಸ್ಯಕರವಾದ ಆಟವನ್ನು ಆಡುತ್ತಾರೆ. ಅಂದು ಊಟವಾದ ಮೇಲೆ ಎಂದಿನಂತೆ ಹಾಡುವುದಿಲ್ಲ. ಗಂಡುಹುಡುಗರಿಗೆ ಮೊದಲೇ ಊಟ ಹಾಕಿ ಕಳಿಸಿರುವುದರಿಂದ ಹೆಣ್ಣುಮಕ್ಕಳ ಊಟವಾಗುವುದರಲ್ಲಿ ಈ ಹುಡುಗರು ಅಲ್ಲೇ ಹತ್ತಿರದಲ್ಲಿ ಸೇರುತ್ತಾರೆ. ಒಣಮಣ್ಣಿನ ರಾಶಿ ಮಾಡಿ ಅದಕ್ಕೆ ಕೈ, ಕಾಲು, ಹೊಟ್ಟೆ, ಮುಖ ಮಾಡಿ ಪುರುಷಾಕಾರ ಕೊಡುತ್ತಾರೆ. ಹೊಟ್ಟೆಯ ಮಣ್ಣಲ್ಲಿ ಕಾಣದಂತೆ ಮುಳ್ಳುಗಳನ್ನು ಸೇರಿಸಿರುತ್ತಾರೆ. ಇದಕ್ಕೆ "ಕುಂಯ್ಯಾ" ಎಂಬ ವಿಶಿಷ್ಟ ಹೆಸರಿದೆ. ಉಂಡ ಹುಡುಗಿಯರು ಈ ಅಂಗಾತ ಮಲಗಿದ 'ಕುಂಯ್ಯಾ'ನ ಸುತ್ತ ಕುಳಿತುಕೊಳ್ಳುತ್ತಾರೆ. ಹೆಣದ ಸುತ್ತ ಮುತ್ತ ಕುಳಿತಂತೆ. ಆಮೇಲೆ ಅದರ ಹೊಟ್ಟೆ-ಎದೆಯ ಮೇಲೆ ಬಡಿ-ಬಡಿದು ಸತ್ತಾಗ ಅಳುವ ಅಣಕ ಮಾಡುತ್ತಾರೆ.

**ಹೋಳಿಗಿ ಮಾಡಿದ್ಯಾ ಕುಂಯ್ಯಾ**
**ನೀ ಉಣಲೇ ಇಲ್ಲ ಕುಂಯ್ಯಾ**
**ಹೊಯ್ಕೋತ ಹೋದೆಲ್ಲ ಕುಂಯ್ಯಾ**
**ನಾ ಹ್ಯಾಂಗ ಮಾಡ್ಲಿ ಕುಂಯ್ಯಾ**

ಎಂದೆಲ್ಲಾ ಹುಗ್ಗಿ ಮಾಡಿದ್ಯಾ, ಶಾವಿಗೆ ಮಾಡಿದ್ಯಾ ಎಂದೆಲ್ಲಾ ಹೇಳುತ್ತ ಅತ್ತಂತೆ ಮಾಡುತ್ತಾರೆ. ಹೀಗೆ ಹೊಟ್ಟೆ ಬಡಿ-ಬಡಿದು ಮಣ್ಣು ಸರಿದಾಗ ಕೈಗೆ ಮುಳ್ಳುಗಳು ಚುಚ್ಚಿಕೊಳ್ಳುತ್ತವೆ. ತಕ್ಷಣ ತಮ್ಮ ಶೋಕನಾಟಕ ನೋಡುತ್ತ ನಿಂತ ಹುಡುಗರನ್ನು ಬೆನ್ನಟ್ಟಿ ಹೊಡೆಯಲು ಅಟ್ಟಿಸಿಕೊಂಡು ಹೋಗುತ್ತಾರೆ. ಆ ಮಂಗಗಳು ಗಿಡವೇರಿ ಕುಳಿತು ಹಲ್ಲು ಕಿಸಿದಾಗ ಇವರು ನಗುತ್ತ 'ಕುಂಯ್ಯಾ'ನನ್ನು ಅಲ್ಲೇ ಬಿಟ್ಟು ಕಳಸ ತಂಬಿಗೆ, ಉಂಡ ಪದಾರ್ಥಗಳನ್ನು ತೆಗೆದುಕೊಂಡು ಊರ ಕಡೆಗೆ ಹಾಡುತ್ತ ಬರುತ್ತಾರೆ. ಆದರೆ ಈ 'ಕುಂಯ್ಯಾ' ಅಂದರೆ ಯಾರು ?ಅವನೇಕೆ ಸತ್ತ ?ಅವನನ್ನು ಕುರಿತು "ಹೊಯ್ಕೋತ ಹೋದೆಲ್ಲ" ಅಂತ ಇವರೇಕೆ ಇಷ್ಟು ತಿರಸ್ಕಾರದಿಂದ ಹಾಡುತ್ತಾರೋ ಇಂದಿಗೂ ನನಗೆ ತಿಳಿದು ಬಂದಿಲ್ಲ. ಎಷ್ಟೋ ಕಡೆಗೆ ಈ ವಿಷಯ ವಿಚಾರಿಸಿದೆನಾದರೂ ಖಚಿತವಾದ ಉತ್ತರ ಎಲ್ಲೂ ಸಿಗಲಿಲ್ಲ.

ಓಣಿಯ ಜನರೆಲ್ಲ ಒಂದೇ ಸ್ಥಳದಲ್ಲಿ ಗೌರಿಯನ್ನು ಕೂಡಿಸಿದ್ದರೆ ಪ್ರತಿದಿನ ರಾತ್ರಿ ಮಡಿಯಲ್ಲಿ ಗೌರಿಗೆ ಎಡೆ ತರುತ್ತಾರೆ. ಇಂದು ಗೌರಿಗೆ ಉಡಿತುಂಬಿ ಗಂಡನ ಮನೆಗೆ ಕಳಿಸುವ ಶಾಸ್ತ್ರ ಎಂದು ಅವತ್ತು ಕೇವಲ ಉಡಿ ತುಂಬುವ ಹಾಡನ್ನು ಹಾಡುತ್ತಾರೆ. ಇಲ್ಲಿಯ ಹಾಡು ನೋಡಿ,

*ಬಂಗಾರ ಹೆಣೂಲಾ ಬೆನ್ನೀಗಿ ಬಡಿಯೂತ*
*ಅಲ್ಲಿ ನಮ್ಮ ಗೌರಾ ಪಗಡಾಡೆ ಸೋ*
*ಅಲ್ಲಿ ನಮ್ಮ ಗೌರಾ ಪಗಡ್ಯಾಡಿದರಾಡಲಿ*
*ಬಲ್ಲಿದ್ದ ಶಿವಾ ಮನಸೋತ ಸೋ*
*ಬಲ್ಲಿದ್ದ ರಾಯಾ ಮನಸೋತರ ಸೋಲಾಲಿ*
*ಹರಳಾಕಿದ ಮಂಚ ಲಿಕಿ ಲಿಕಿ ಸೋ*
*ಬಂಗಾರದ ಹೆಣೂಲಾ ಬೆನ್ನೀಗಿ ಬಡಿಯೂತ*
*ಅಲ್ಲಿ ನಮ್ಮ ಗೌರಾ ಪಗಡ್ಯಾಡೆ ಸೋ*
*ಅಲ್ಲಿ ನಮ್ಮ ಗೌರಾ ಪಗಡ್ಯಾಡಿದರಾಡಲಿ*
*ಬಲ್ಲಿದ್ದ ಶಿವಾ ಮನಸೋತ ಸೋ*
*ಬಲ್ಲಿದ್ದ ರಾಯಾ ಸೋತಾರ ಸೋಲಾಲಿ*
*ಮುತ್ತಾಕಿದ ಮಂಚ ಲಿಕಿಲಿಕಿ ಸೋ*
*ಹುತ್ತಿನ ಮಣ್ಣ ತಂದು ಕೆತ್ತಿ ಲಿಂಗವ ಮಾಡಿ*
*ಎತ್ತ ಮೋರ್ಯಾನ ಬಸವಣ್ಣ ಸೋ*
*ಎತ್ತ ಮೋರ್ಯಾನ ಬಸವಾ ನಮ್ಮ ಬಸವಾಗ*
*ಹೊಸ ಮುತ್ತ ನೀಡಿ ಶರಣೆಂಬೆ ಸೋ,*
*ಹೊಸ ಸೀರಿ ಉಡಸ್ಯಾರ ಹೊಸಾ ಕುಬಸಾ ತೊಡಸ್ಯಾರ*
*ಹೊಸಾ ಮರದಾಗ ಉಡಿಯಕ್ಕಿ ಸೋ*
*ಹೊಸಾನೆ ಮರದಾಗ ಉಡಿಯಕ್ಕಿ ಹಾಕೊಂಡು*
*ಕಳಿ ಬಂದ ಶಿವನ ಅರಮನಿಗಿ ಸೋ*
*ಕಳಿಬಂದೆವು ನಮ್ಮ ಕಳಿಯುಳ್ಳ ಗೌರವ್ವನ*
*ಕಳಿಬಂದೆವು ಶಿವನ ಅರಮನಿಗಿ ಸೋ*

ಇದು ಉಡಿತುಂಬುವುದಾದರೆ ಎರಡನೇ ದಿನ ಗೌರಿಗೆ ಕುಬುಸದ ಶಾಸ್ತ್ರ ಎಂದು ಸೀರೆ ಉಡಿಸಿ ಅವತ್ತು ಬಯಕೆಯದೋ ಕುಬುಸದ್ದೋ ಹಾಡುತ್ತಾರೆ. ನಂತರ ಗೌರಿಗೆ ಗಣಪ್ಪ ಹುಟ್ಟಿದನೆಂದು ತೊಟ್ಟಿಲು ಹಾಕುವ ಶಾಸ್ತ್ರ ಮಾಡುತ್ತಾರೆ. ಕೊನೆಯ ದಿನ ಗೌರಿಯನ್ನು ಮಣ್ಣಿನಿಂದ ಮಾಡಿದ್ದರೆ ನೀರಲ್ಲಿ ಬಿಡುತ್ತಾರೆ. ಕಟ್ಟಿಗೆಯದಿದ್ದರೆ ಪೂಜಿಸಿ ಉಡಿತುಂಬಿ ಆರತಿ ಮಾಡಿ ತೆಗೆದಿಡುತ್ತಾರೆ.

ಗೌರಿಯ ಎದುರಿಗೆ ಒಂದು ಮಣ್ಣಿನ ಸ್ತ್ರೀರೂಪ ಮಾಡಿ ಅದನ್ನು 'ದೀಬರದಿಂಡಿ' ಎಂದು ಕರೆಯುವ ವಾಡಿಕೆ ಕೆಲವರಲ್ಲಿದೆ. ಅದನ್ನು ಕುರಿತಾದ ವಿನೋದದ ಹಾಡುಗಳೂ ಇವೆ.

*"ದೀಬರದಿಂಡಿ ದೀಬರದಿಂಡಿ ದೀಪಾ ಎಲ್ಲಿಟ್ಟೆ ?"*
*"ಗಾಳಿಗಿ-ಗೀಳಿಗಿ ಆರಿತ್ತಂತ ಕುಂಬಿ ಮ್ಯಾಲಿಟ್ಟೆ"*
*"ದೀಬರದಿಂಡಿ ದೀಬರದಿಂಡಿ ಕೂಸಿನ್ನೆಲ್ಲಿಟ್ಟೆ?"*
*"ಕತ್ತಲ ಖೋಲ್ಯಾಗ ಕರಗೀತಂತ*
*ಮ್ಯಾಳಗಿ ಮ್ಯಾಲಿಟ್ಟೆ"*

ಈ ಪದ ನಾವು ಚಿಕ್ಕವರಾಗಿದ್ದಾಗ ತುಂಬ ಪ್ರಸಿದ್ಧವಾಗಿತ್ತು. ಬಹುಶಃ ಬಾಯಿ ಬಡುಕಿಯರ, ಮುಂಗಾಲು ಪುಟಿಗೆಯ ಹೆಣ್ಣುಗಳನ್ನು ಕುರಿತಂತೆ ಈ ಅಣಕ ಇರಬೇಕೆನಿಸುತ್ತದೆ.

ಶಿವನು ಗಂಗೆಯನ್ನು ಮನೆಗೆ ಕರೆತಂದಾಗ ಗೌರಿ ಅವನನ್ನು ಸ್ವಾಗತಿಸುವ ಹಾಸ್ಯದ ಹಾಡೊಂದಿದೆ.

*ಹಳ್ಳದ ದಂಡೀಲೆ ಹೂವ ಕೊಯ್ಯುವ ಜಾಣೆ*
*ಲಿಂಗಕ್ಕೊಂದ್ಹೂವ ದಯಮಾಡಿದರ ಮಾಡೇನ*
*ನಮ್ಮವ್ವ ನಮಗ ಬಯದಾಳ*
*ನಮ್ಮಪ್ಪ ನಮಗ ಬಡಿದಾನ ಕೋಲ*
*ನಿಮ್ಮವ್ವ ಬಯದಾಗ ನಿಮ್ಮಪ್ಪ ಬಡಿದಾಗ*
*ಬಂದಿಯೇನ ಗಂಗಾ ನನ್ನ ಜಡಿಯೊಳಗ ಕೋಲ*
*ಜಡಿಯೊಳಗ ಬಂದರ ಜನ ಏನ ಅಂದೀತು*
*ಮಡದಿದ್ದಾಳ್ಹೋಗ ಮನಿಯಾಗ ಕೋಲ*
*ಮಡದೀನ ಕಾಣಲ್ದ ಇಂದೀಗ ಹನ್ನೆರಡೊರುಷ*
*ಬಂದೀಯೇನ ಗಂಗಾ ನನ್ನರಮನಿಗೆ ಕೋಲ*
*ಬಾಳೀಯ ಬನದನ್ನ ಬಾಲುಳ್ಳ ಗಿಣಿಗೋಳ್ಯಾ*
*ಹೋಗಿ ಗೌರಮ್ಮಗ ಹೇಳಬ್ಯಾಡ್ರೆ ಕೋಲ*
*ಬಡಬಡ ಬಂದಾನ ಬಾಗಲ್ದಾಗ ನಿಂತಾನ*
*ಏಳಗೌರಮ್ಮ ಏಟೊತ್ತ ಮಲಗೀದಿ*
*ಶಿವರಾಯ ನಿನಮ್ಯಾಲೆ ಸೌತಿತಂದ ಕೋಲ*
*ಮಲಗೀದ ಗೌರಮ್ಮ ಎದ್ದೊರ್ಗೋಗ್ಯಾಳ*
*ಬಂಗಾರದ ಗಿಂಡಿ ಬಲಗಯ್ಯ ಕೋಲ*
*ಎಂದಿಲ್ಲದ ಗೌರಮ್ಮ ಇಂದ್ಯಾಕ ಬಂದಾಳ*

ಕುಂದರ ಹಾಕ್ಯಾರ ಮಣಿಚೌಕ ಕೋಲ
ಕುಂದರ ಬಂದಿಲ್ಲ ನಿಂದರ ಬಂದಿಲ್ಲ
ಅಣ್ಣಾ ಒಂದ ಮಾತು ಹೇಳಲು ಬಂದೆ ಕೋಲ
ಅದು ಏನ ಗೌರಮ್ಮ ನನಗ್ಹೇಳ ಕೋಲ
ಶಿವರಾಯಾ ನನಮ್ಯಾಲ ಸೌತಿ ತಂದ ಕೋಲ
ಸೌತೀನ ತಂದರ ಆ ಚಿಂತಿ ನಿನಗ್ಯಾಕ
ಸುಮ್ಮನಿರ ಹೋಗ ಶ್ರೀ ಗೌರಿ ಕೋಲ
ಅಲ್ಲೀದ ಗೌರಮ್ಮ ಎದ್ದಾದರೂ ಬಂದಾಳ
ಎದ್ದು ಬಂದಾಳ ತನ್ನರಮನಿಗಿ ಕೋಲ
ಹಳ್ಳ ಕೊಳ್ಳವ ತಿರುಗಿ ಬ್ಯಾಸತ್ತು ಬಂದೀನಿ
ಬಾಗಲ ತರೀಯ ಶ್ರೀ ಗೌರಿ ಕೋಲ
ದೇಶ ದಿಕ್ಕವ ತಿರುಗಿ ಬ್ಯಾಸತ್ತು ಬಂದೀನಿ
ಸಿಟ್ಟೇನ ಶ್ರೀಗೌರಿ ಕದ ತರೀಯ ಕೋಲ
ಒಂದ ಗಿಂಡಿ ಕೊಡ ಅಂದ್ರ ಎಡ್ಡ ಗಿಂಡಿ ಕೊಡತೀದಿ
ನಿನಗೆರಡ ಮನಸೇನ ಶ್ರೀ ಗೌರಿ ಕೋಲ
ಅಯ್ಯ ಅಯ್ಯ ಶಿವನೇ ಅಣಕಿವ ಮಾತ್ಯಾಕ
ಸುರಳೀ ಕೆಂಜೆಡಿಯ ಒಗಟವ ಕೋಲ
ಸುರಳೀ ಕೆಂಜೆಡಿಯ ಮೊಗಟದೊಳಗಿರುವ
ಸುಖನಾರಿಗೊಂದು ನಿನಗೊಂದು ಕೋಲ
ಒಂದ ಮಣಿಹಾಕಂದ್ರ ಎಡ್ಡ ಮಣಿ ಹಾಕತೀದಿ
ನಿನಗೆಡ್ಡೇನ ಮನಸ ಶ್ರೀ ಗೌರಿ ಕೋಲ
ಅಯ್ಯ ಅಯ್ಯ ಶಿವನ ಅಣಕದ ಮಾತ್ಯಾಕ
ಸುಖನಾರಿಗೊಂದು ನಿನಗೊಂದು ಕೋಲ
ಬಾಗಿ ಬಾರಯ್ಯ ಶಿವನೇ ಬಾಗಿಲ ಬಡಿದಾವ
ಬಾಯಾಗಿನ ಹಲ್ಲ ಉದರ್ಯಾವ
ಬಾಯಾಗಿನ ಹಲ್ಲ ಉದರ್ಯಾವ
ಜಡಿಯಾನ ಬಾಲಿ ಬಿದ್ದಾಳು ಜತನವ ಕೋಲ
(ಎಡ್ಡ-ಎರಡು)

ಶಿವನು ಗಂಗೆಯನ್ನು ಮನೆಗೆ ಕರೆತಂದಾಗ ಗೌರಿ ಸಂಕಟದಿಂದ ತವರುಮನೆಗೆ ಹೋಗಿ ದೂರುತ್ತಾಳೆ. ಆದರೆ ಅಣ್ಣ ಅವಳನ್ನು ಹೊಂದಿಕೊಂಡು ಹೋಗೆಂದು ವಾಪಸ್ಸು ಕಳಿಸುತ್ತಾನೆ. ಆದರೂ ಅವಳ ವಿಷಾದ ವ್ಯಂಗ್ಯವಾಗಿ ಹರಿಯುವುದನ್ನು ಕೊನೆಯ ಸಾಲುಗಳಲ್ಲಿ ಕಾಣಬಹುದು. ಛೇಡಿಸುವಿಕೆಯನ್ನು ಅವಳು ಬಿಟ್ಟಿಲ್ಲ. ಬಾಗಿ ಬಾ ಇರದಿದ್ದರೆ ಬಾಯ ಹಲ್ಲು

ಮುರದಾವು ಅಥವಾ ಜಡೆಯ ಜಾಲಿ ಬಾಗಿಲಿಗೆ ತಾಕಿ ಬಿದ್ದಾಳು ಜತನ (ಜೋಪಾನ) ಹಿಂದ ಬಾ ಎನ್ನುತ್ತಾಳೆ. ಮಾನವ ಸಹಜವಾದ ಎಲ್ಲ ಸ್ವಭಾವಗಳನ್ನು ಜನಪದರು ದೇವತೆಗಳಿಗೂ ಆರೋಪಿಸಿದ್ದಾರೆ.

ಗಂಗೆ-ಗೌರಿಯರ ಜಗಳವಂತೂ ಜಾನಪದದಲ್ಲಿ ಸುಪ್ರಸಿದ್ಧ. ಈ ಬಗ್ಗೆ ಅನೇಕ ಹಾಡುಗಳು ಪ್ರಚಾರದಲ್ಲಿವೆ. ಒಂದನ್ನು ಇಲ್ಲಿ ನೋಡಿ.

ಗೌರಿ : *ನೀ, ಆನಿ-ಅಂಬಾರಿ ಮ್ಯಾಲೆ*
*ನಿಮ್ಮವ್ವ ಬರತಾರ ಮೀನು-ಮಸಳಿಹಂಗ*
*ಕೇಳಲೆ ಗಂಗಿ ಸುಮ್ಮನೊಳಿಯಾಕ ಹೋಗ*

ಗಂಗಿ : *ಆತಗ ಹೇಳಸೇನು*
*ಗಾತವ ಮಾಡಿಸೇನು*
*ರೀತಿಸಂಗಾಟ ಇರುವ ಕೇಳಲೆ ಗೌರಿ*

ಗೌರಿ : *ನಮ್ಮವ್ವ ಕೊಟ್ಟಾರ ತಾಮರದ ಕೊಡ*
*ನಿಮ್ಮವ್ವ ಕೊಟ್ಟಾರ ಆರ‍್ಯಾಣ ಪರ‍್ಯಾಣಾ*
*ಸುಮ್ಮನೊಳಿಯಾಕ ಹೋಗ ಕೇಳಲೆ ಗಂಗಿ*
*ಸುಮ್ಮನೊಳಿಯಾಕ ಹೋಗ*

ಗಂಗಿ : *ಆತಗ ಹೇಳಸೇನು ಗಾತವ ಮಾಡಿಸೇನು*
*ರೀತಿ ಸಂಗಾಟ ಇರುವ ಕೇಳಲೆ ಗೌರಿ*

ಗೌರಿ : *ಮೀನ ಮಾರಾವ್ವುಮಗಳ ಕೇಳಲೆ ಗಂಗಿ ನೀನು*
*ನೀನು ಕಬ್ಬಲಗಿತ್ತೆ, ಮೀನು ಮಾರಾದು ಬಿಡಿಸಿ*
*ಮಾಲಿನ್ಯಾಗಿಡಸೀನಿ ಸುಮ್ಮನೊಳಿಯಾಕ ಹೋಗ*
*ಕೇಳಲೆ ಗಂಗಿ ಸುಮ್ಮನೊಳಿಯಾಕ ಹೋಗ*

ಗಂಗಿ : *ಆತಗ ಹೇಳಸೇನು ಗಾತವ ಮಾಡಿಸೇನು*
*ರೀತಿ ಸಂಗಾಟ ಇರುವ ಕೇಳಲೆ ಗೌರಿ*

ಗೌರಿ : *ಹುಲ್ಲ ಮಾರಾವ್ವುಮಗಳ ಕೇಳಲೆ ಗಂಗಿ*
*ಚಲ್ಲಂಗ ಪಲ್ಲಂಗ ನಿನಗ್ಯಾಕ ಗೌರಿ*
*ಹುಲ್ಲು ಮಾರಾದು ಬಿಡಿಸಿ ಮಹಲಿನೊಳಗಿಡಸೀನಿ*
*ಗಂಗೀ ಸುಮ್ಮನೊಳಿಯಾಕ ಹೋಗ*

ಗಂಗಿ : ಆತಗ ಹೇಳಸೇನ ಗಾತವ ಮಾಡಿಸೇನ
ರೀತಿ ಸಂಗಾಟ ಇರುವ ಕೇಳಲೆ ಗೌರಿ

ಹೀಗೆ ಗೌರಿ ತನ್ನ ತವರಿನ ಹೆಮ್ಮೆಯನ್ನು ಹೇಳಿಕೊಂಡು ಅವಳ ತವರನ್ನು ಹೀಯಾಳಿಸುತ್ತಿದ್ದುವಲ್ಲದೆ ತಾನೇ ಅವಳಿಗೆ ಅನೇಕ ಅನುಕೂಲಗಳನ್ನು ಮಾಡಿಕೊಟ್ಟಿರುವುದಾಗಿ ಹೀಗಳೆಯುತ್ತಾಳೆ. ಆದರೆ ಗಂಗಿ ಪಾಪ ಅಸಹಾಯಕಳಾಗಿ ಶಿವನಿಗೆ (ಆತನೆ) ಹೇಳಿ ಪೆಟ್ಟು (ಘಾತ = ಗಾತ) ಕೊಡಿಸೇನು ಇದೆಲ್ಲ ಬೇಡ ರೀತಿ ಸಂಗಾಟ (ಹೊಂದಿಕೊಂಡಿರೋಣ) ಎನ್ನುತ್ತಾಳೆ. ಇಲ್ಲಿಯ ಹಾಸ್ಯ ನವಿರಾದುದು. ಮಾನವ ಸ್ವಭಾವ ಜನ್ಯವಾದುದು.

ಗೌರಿಯನ್ನು ತವರವರು ಕರೆಯಲು ಬಂದಿರುತ್ತಾರೆ. ಅವಳಿಗೆ ಮನಸ್ಸಿದೆ. ಆದರೆ ಶಿವನಿಗೆ ಅವಳನ್ನು ಬಿಟ್ಟಿರಲು ಮನಸ್ಸಿಲ್ಲ. ಏನೇನೋ ನೆವ ಒಡ್ಡುತ್ತಾನೆ. ಆದರೂ ಗೌರಿ ಗಣಪನೊಂದಿಗೆ ಹೊರಡುತ್ತಾಳೆ.

ಗಡಗಡ ಗದ್ದರಿಸುತ ಮುಗಲ ಚಂಡಾಡುತ್ತ
ಒನಪೀನ ಕುದರಿ ತಿರುವೂತ ರನ್ನದ ಕೋಲು ಕೋಲ
ಏ ಹೂವಿನ ಕೋಲು ಕೋಲ
ಒನಪೀನ ಕುದರೀ ತಿರವೂತ ಬಂದಾನ
ತಂಗೀ ಗೌರಮ್ಮನ ಕರಿಬಂದ ರನ್ನದ....
ಏಳೇಳ ಗೌರಮ್ಮ ಏಟೊತ್ತ ಮಲಗೀದಿ
ಕರಿ ಬಂದಾರೇಳ ತವರವರ ರನ್ನದ....
ಮಲಗಿದ ಗೌರಮ್ಮ ಮೈಮುರದು ಎದ್ದಾಳ
ಹಾಲಿಲೆ ಮುಖವ ತೊಳದಾಳ ರನ್ನದ...
ಹಾಲಿಲೆ ಮುಖವ ತೊಳೆವೂತ ಕೇಳ್ಯಾಳ
ಹೋಗಿ ಬರತೀನಿ ಶಿವರಾಯಾ ತವರೀಗಿ ರನ್ನದ...
ಹಾಲ ಬಾನುಣ್ಣ ಗೌರಿ ಮೇಲ್ವೇಳೆ ಮೆಲಿಗೌರಿ
ಹೋಗಬೇಡ ಶ್ರೀ ಗೌರಿ ತವರೀಗಿ ರನ್ನದ....
ರಾಜಗಿರಿಯ ಪಲ್ಯಾ ರಾಗಿ ಜೋಳದ ರೊಟ್ಟಿ
ರಾಜ್ಯಕ ತವರವರು ಬಡವರ ರನ್ನದ....
ರಾಜ್ಯಕ ತವರವರು ಬಡವರ ತವರವರ
ಮನಿಯಾಗ ನಾಕ ದಿನ ಇದ್ದು ಬರುವೇನ ರನ್ನದ....
ಗಡಗಡ ಗದ್ದರ ಸೂತ ಮುಗಲ ಚಂಡಾಡುತ್ತ
ಒನಪೀನ ಕುದರೀ ತಿರವೂತ ರನ್ನದಿ....

ಒನಪೀನ ಕುದರಿ ತಿರುವೂತ ಬಂದಾನ
ತಂಗೀ ಗೌರಮ್ಮನ ಕರಿ ಬಂದ ರನ್ನದ...
ಏಳೇಳೆ ಗೌರಮ್ಮಾ ಏಟೋತ್ತ ಮಲಗೀದಿ
ಕರಿ ಬಂದಾರೇಳ ತವರವರ ರನ್ನದಿ....
ಮಲಗಿದ ಗೌರಮ್ಮ ಮೈ ಮುರಿದು ಎದ್ದಾಳ
ತುಪ್ಪದೆಲೆ ಮುಖವ ತೊಳೆದಾಳ ರನ್ನದಿ...
ತುಪ್ಪದಲೆ ಮುಖವ ತೊಳಿಯೂತ ಕೇಳ್ಯಾಳ
ಹೋಗಿ ಬರತೀನಿ ಶಿವರಾಯ ತವರೀಗಿ ರನ್ನದ...
ತುಪ್ಪ ಬಾನುಣ್ಣ ಗೌರಿ ಮೆತ್ತೀಲಿ ಮೆರೆ ಗೌರಿ
ಹೋಗಬ್ಯಾಡ ಶ್ರೀ ಗೌರಿ ತವರೀಗಿ ರನ್ನದಿ...
ಗುಂಜಗೊಳಿಯ ಪಲ್ಲೆ ಕೆಂಜ್ವಾಳದ ರೊಟ್ಟಿ
ದೇಶಕ ತೌರವರ ಬಡವರ ರನ್ನರ....
ದೇಶಕ ತೌರವರ ಬಡವರ ಮನಿಯಾಗ
ಐದು ದಿನವಿದ್ದು ಬರತೀನೆ ರನ್ನದ...
ಕುಂತೀದ ಗಣಪಣ್ಣ ಅಳವೂತ ಎದ್ದಾನ
ನಾನು ಬರತೀನೆ ನಿನಗೂಡ ರನ್ನದ...
ಬಗಲಾಗ ಗಣಪಣ್ಣ ಹೊಂಟಾಳ ತವರೀಗಿ
ಅಚ್ಚಾಕ ತವರಮನಿ ಇಚ್ಚಾಕ ಗಂಡನಮನಿ
ನಟ್ಟನಡುವ ಹಿರಿಹೊಳಿ ರನ್ನದ....
ಅಂಬಿಗೇರಣ್ಣ ನಿನ್ನ ನಂಬಿ ಬಂದೆವು ನಾವು
ನಮ್ಮನ್ನ ಹೊಳಿಯ ದಾಟಿಸ ರನ್ನದ...
ಮುಂಜಾನೆದ್ದು ಅಂಬಿಗರಣ್ಣ
ಹಾಲು ಬಾನುಂಡಾನ ಹವಳದ ಹುಟ್ಟ ಹೆಗಲಲ್ಲಿ ರನ್ನದ
ಹವಳದ ಹುಟ್ಟ ಹೆಗಲಲ್ಲಿ ಅಂಬಿಗರಣ್ಣ
ಹಾರೂವ ನೀರ ಶಡದಾನ ರನ್ನದ...
ಮುಂಜಾನೆದ್ದು ಅಂಬಿಗರಣ್ಣ ತುಪ್ಪ ಬಾನುಂಡಾನ
ಮುತ್ತೀನ ಹುಟ್ಟ ಹೆಗಲಲ್ಲಿ ರನ್ನದ.....
ಮುತ್ತಿನ ಹುಟ್ಟ ಹೆಗಲಲ್ಲಿ ಅಂಬಿಗಣ್ಣ
ವತ್ತುವ ನೀರ ಕಡದಾನ ರನ್ನದ....
ವತ್ತೂವ ಈ ನೀರ ಕಡಿವೂತ ಅಂಬಿಗಣ್ಣ
ಹಚ್ಚೀ ಬಂದಾನ ತವರೀಗಿ ರನ್ನದ....

(ಅಚ್ಚಾಕ-ಆಚೆಕಡೆ : ಇಚ್ಚಾಕ-ಈಚೆ ಕಡೆ)

ಹೀಗೆ ಶಿವರಾಮ ತನ್ನ ಸತಿಗೆ ತನ್ನ ಮನೆಯಲ್ಲಿ ವೈಭವದಿಂದಿರು ಎಂದರೂ ಅವಳು ''ತನ್ನ ತವರವರು ನಾಡಿಗೇ ಬಡವರಾಗಿದ್ದರೂ ತವರವರೇ. ತಾನು ಐದು ದಿನವಾದರೂ ಇದ್ದು ಬರುತ್ತೇನೆ'' ಎನ್ನುತ್ತಾಳೆ. ಶಿವ ಕಳಿಸಲು ಮನಸ್ಸಿಲ್ಲದ್ದಕ್ಕೆ ಏನೇನೋ ಹೇಳಿದರೂ ತವರ ಸೆಳೆತವೇ ಅವಳಿಗೆ ಬಲವಾಗಿದೆ. ಪುಂಡ ಗಣಪ ತಾನೂಬರುವುದಾಗಿ ಹಟತೊಡುತ್ತಾನೆ. ಅವನೊಂದಿಗೆ ಹೊಳೆ ದಾಟಿ ಗೌರಿ ತವರಿಗೆ ಬರುತ್ತಾಳೆ. ಆದರೆ ಗಣಪನ ಪುಂಡತನ ಇಲ್ಲೂ ಸುಮ್ಮನಿರುವುದಿಲ್ಲ. ಏನು ತಿನ್ನಕೊಟ್ಟರೂ ರುಚಿ ಇಲ್ಲವೆಂದು ಹೇಳುತ್ತ ತವರು ಮನೆಯಿಂದ ಅವಳನ್ನು ಮಾತಿನ ಇಕ್ಕಟ್ಟಿಗೆ ಸಿಲುಕಿಸಿ ದನ-ಕರುಗಳನ್ನು ಸಾಗಿಸಿಕೊಂಡು ಬರುವ ದೃಶ್ಯ ವಿನೋದ ಪೂರ್ಣವಾಗಿ ಚಿತ್ರಿತವಾಗಿದೆ.

*ದುಂಡಗೋದೀಯ ಬೀಸೆ ಗುಂಡಗಡಬವ ಮಾಡೆ*
*ಪುಂಡ ಗಣಪನ್ನ ಉಡಿಯಲ್ಲೆ ಕೋಲೆನ್ನ ಕೋಲೆ*
*ಪುಂಡ ಗಣಪನ್ನ ಉಡಿಯಲ್ಲೆ ಕಟ್ಟಿದರ*
*ಸಾಲಲಿಲ್ಲಂತ ಅಳುವಾನ ಕೋಲೆನ್ನ ಕೋಲೆ*
*ಸಾಲಲಿಲ್ಲಂತ ಬಾಂಬಿ ಬಡಿಯಲಿ ಬ್ಯಾಡೋ*
*ಬಾಲ ನನ್ನ ತವರವರು ಬಡವರ ಕೋಲೆನ್ನ ಕೋಲೆ*
*ಬಡವರ ಇದ್ದರ ತಮ್ಮಷ್ಟಕ ತಾವಿರಬೇಕ*
*ನನ್ನ ನಿನ್ಯಾಕ ಕರಸ್ಯಾರ ಕೋಲೆನ್ನ ಕೋಲೆ*
*ಬುಟ್ಟಿ ಸಜ್ಜೀಯ ಬೀಸೆ ಗಟ್ಟಿ ಗಡಬವ ಮಾಡೆ*
*ಪುತ್ರ ಗಣಪನ್ನ ಉಡಿಯಲ್ಲೇ ಕೋಲೆನ್ನ ಕೋಲೆ*
*ಪುತ್ರಾನೆ ಗಣಪನ್ನ ಉಡಿಯಲ್ಲಿ ಕಟ್ಟಿದರ*
*ಸಾಲಲಿಲ್ಲಂತ ಅಳುವಾನೆ ಕೋಲೆನ್ನ ಕೋಲೆ*
*ಸಾಲಲಿಲ್ಲಂತ ಬಾಯಿ ಬಡಿಯಲಿ ಬ್ಯಾಡೋ*
*ಬಾಲ ನನ್ನ ತವರವರು ಬಡವರ ಕೋಲೆನ್ನ ಕೋಲೆ*
*ಬಡವರ ಇದ್ದರ ತಮ್ಮಷ್ಟಕ ತಾವಿರಬೇಕ*
*ನನ್ನ ನಿನ್ಯಾಕ ಕರಸ್ಯಾರ ಕೋಲೆನ್ನ ಕೋಲೆ*
*ಕರಸಿದರ ಕರಸಲಿ ಬಡವರಾದರ ಕೇಳು*
*ಹತ್ತೆಮ್ಮಿ ನಮಗೆ ಬಳುವಳಿ ಕೋಲೆನ್ನ ಕೋಲೆ*
*ಹತ್ತೆಮ್ಮಿ ನಮಗ ಬಳುವಳಿ ಹಡದವ್ವ*
*ಹೊಡದಬ್ಬಂತೇಳ ಹೊರಿಯಾಕ ಕೋಲೆನ್ನ ಕೋಲೆ*

(ಹೊರಿಯಾಕ-ಹೊರಗೆ)

ಇದು ಗಣಪತಿಯ ಚತುರತೆಯನ್ನು ಸಾರುವ ಚಿತ್ರ. ಗುಂಡಗಡಬ (ಸಜ್ಜೀಕಡಬ)ನ್ನು ಒಪ್ಪದೇ “ಬಡವರಾದರೆ ನಿಮ್ಮನ್ಯಾಕೆ ಕರೆಸಬೇಕು ಕರೆಸಿದ ತಪ್ಪಿಗೆ ಈಗ ಹತ್ತು ಎಮ್ಮೆಗಳನ್ನು ಹೊಡೆದು ನಮ್ಮನೆಗೆ ಹಚ್ಚಲಿ” ಎನ್ನುತ್ತಾನೆ ಈ ಪುಂಡ.

ಗಂಡನ ಮನೆಯವರು ಮಗಳನ್ನು ಕರೆದೊಯ್ಯಲು ಬಂದಾಗ ಅವಳನ್ನು ಕಳಿಸಲು ತಾಯಿ-ತಂದೆಯರಿಗೆ ಮನಸ್ಸಿಲ್ಲ. ಕಳಿಸದಿರುವುದಕ್ಕೆ ಯಾವ್ಯಾವ ನೆಪಗಳನ್ನು ಮುಂದೊಡ್ಡುತ್ತಾರೆ ನೋಡಿ. ದೇವತೆಯಾದರೂ ಅವಳು ಮಗಳೇ ಅಲ್ಲವೇ ?

*ಹಿಂಗ ನಮ್ಮ ಗೌರವ್ವಗ ಗಂಡ ಕರೆಯಲು ಬಂದ*
*ಗಂಡ ಕರೆಯಲು ಬಂದರ*
*ಗೊಂಡೇದ ಸೆರಗಿನ್ನ ಮುಗದಿಲ್ಲ ಕೋಲ*

ಉತ್ತರ ಕರ್ನಾಟಕದ ಇಲಕಲ್ಲು ಸೀರೆಯು ಸೆರಗಿನ ಕರಿಗೆ ಗೊಂಡೆ ಕಟ್ಟುತ್ತಾರೆ. ಹೊಸ ಸೀರೆ ಉಡಿಸಿ ಮಗಳನ್ನು ಕಳಿಸಬೇಕು. ಆದರೆ ಹೊಸ ಸೀರೆಯು ಗೊಂಡೆ ಕಟ್ಟುವದೇ ಮುಗಿದಿಲ್ಲವೆಂದು ಪತಿರಾಯನನ್ನು ವಾಪಸ್ಸು ಕಳಿಸುತ್ತಾರೆ. ಈಗ ಮಾವ ಕರೆಯ ಬರುತ್ತಾನೆ.

*ಹಿಂಗ ನಮ್ಮ ಗೌರವ್ವ ಮಾವ ಕರೆಯಲು ಬಂದ*
*ಮಾವ ಕರೆಯಲು ಬಂದರ*
*ಮಲ್ಲೀಗಿ ಶಾಲ ಮುಗಿದಿಲ್ಲ ಕೋಲ*

ಮಗಳಿಗೆ ಕಾಣಿಕೆ ಕೊಡಲು ಮಲ್ಲಿಗೆ ಹೂವಿನ ಶಾಲನ್ನು ಹೆಣೆಯುತ್ತಿದ್ದಾರೆ. ಅದು ಮುಗಿಯದೇ ಹೇಗೆ ಕಳಿಸುವುದು ? ಮಾವನೂ ಮರಳಿ ಹೋಗುತ್ತಾನೆ. ಈಗ ಮೈದುನ ಬರುತ್ತಾನೆ.

*ಹಿಂಗ ನಮ್ಮ ಗೌರವ್ವಗ ಮೈದುನ ಕರೆಯಬಂದ*
*ಮೈದುನ ಕರೆಯಲು ಬಂದರ*
*ಮಲ್ಲಿಗಿ ಹೂವಿನ ದಂಡಿ ಮುಗಿದಿಲ್ಲ ಕೋಲ*

ಊರಿಗೆ ಕಳಿಸುವಾಗ ದಂಡೆ ಕಟ್ಟಿ ಆರತಿ ಮಾಡಿ ಕಳಿಸುವುದು ಸಂಪ್ರದಾಯ. ಆದರೆ ಅವಳಿಗೆ ಕಟ್ಟುವ ಮಲ್ಲಿಗೆ ದಂಡೆ ಇನ್ನೂ ಮುಗಿಯುತ್ತಲೇ ಇಲ್ಲವಂತೆ. ಸರಿ ಅವನೂ ಮರಳುತ್ತಾನೆ. ಈಗ ಅತ್ತೆಯ ಸರದಿ

*ಹಿಂಗ ನಮ್ಮ ಗೌರವ್ವಗ ಅತ್ತೆ ಕರೆಯಲು ಬಂದು*
*ಅತ್ತೆ ಕರೆಯಲು ಬಂದರ*
*ನತ್ತೀಗಿ ಮುತ್ತ ಬಿಗದಿಲ್ಲ ಕೋಲ*

ನತ್ತು ಮಾಡಿಸುತ್ತಿದ್ದಾರೆ ಮಗಳಿಗೆ, ಅದಕ್ಕೆ ಇನ್ನೂ ಮುತ್ತು ಬಿಗಿಯಬೇಕು ಎಂದು ಅತ್ತೆಯನ್ನು ಕಳಿಸಿಬಿಡುತ್ತಾರೆ. ಈ ಸಲ ಗಂಡನೇ ಸ್ವಲ್ಪ ಸೆಡವಿನಿಂದಲೇ ಬರುತ್ತಾನೆ. 'ಬರುತ್ತೇನs ಗೌರ ಇರುತ್ತೇನsಗೌರ' ಎಂದು ಅವಳನ್ನೇ ನೇರ ಕೇಳುತ್ತಾನೆ. ಅವಳಿಗಿನ್ನೂ ತವರಿನ ಮೋಹ ಬಿಡುತ್ತಲಿಲ್ಲ.

*ಆಗಿ ಹುಣ್ಣಿವಿ ಮಾಡಿ ಸೀಗಿ ಹುಣ್ಣಿವಿ ಮಾಡಿ*
*ಗೌರಿ ಹುಣ್ಣಿವಿ ಮಾಡಿ ಬರುತೀನಿ ಕೋಲ ಎನ್ನುತ್ತಾಳೆ*

ಗೌರಿ ಹುಣ್ಣಿವೆಯ ನಂತರವೂ ಬರದಿದ್ದರೆ ನಿನಗೆ ಆ ಮನೆಯಲ್ಲಿ ಬೆಲೆ ಇಲ್ಲ. ಬೇಕಾದರೆ ನಾನೇ ನತ್ತಿಗೆ ಮುತ್ತು ಮಾಡಿಕೊಡುವೆ ನಡಿ ಎನ್ನುತ್ತಾರೆ. ಇದು ಹೆಣ್ಣಿನ ಹಂಬಲದ ತವರಿನ ಚಪಲವನ್ನು ಎತ್ತಿ ಹೇಳುತ್ತಲಿದೆ. ಗೌರಿಯನ್ನು ಎಲ್ಲರ ಮನೆಯಲ್ಲೂ ಕೂಡಿಸುವುದರಿಂದ ಅವಳು ಯಾವ ಜಾತಿಯವರ ಸೊತ್ತು ಅಲ್ಲ. ಅವರವರಿಗೆ ತಕ್ಕಂತೆ ಅವಳನ್ನು ಸಿಂಗರಿಸುತ್ತಾರೆ ಎನ್ನುವುದಕ್ಕೆ ಇಲ್ಲೊಂದು ಹಾಡಿದೆ.

*ಕುಂಬಾರ ಗೌರೀಗಿ ಏನೇನ ಸಿಂಗಾರ*
*ಕುಂಬರದ ದಡಿ ಸೀರಿ ಕುಡಿನತ್ತ ಕೋಲೆ*
*ಅಗಸರ ಗೌರೀಗಿ ಏನೇನ ಸಿಂಗಾರ*
*ಅಗಸಿಕಾಳಟ ಹೂವ ಬುಗಡೀಯ ಕೋಲ*
*ಪತ್ತಾರ ಗೌರೀಗಿ ಏನೇನ ಸಿಂಗಾರ*
*ಪತ್ತಲದಡಿ ಸೀರಿ ಕುಡಿಸತ್ತ ಕೋಲ*
*ಜಾಡರ ಗೌರೀಗಿ ಏನೇನ ಸಿಂಗಾರ*
*ಬ್ಯಾಡಾದ ಮಾತ ಇಡ ಕುದರಿ ಕೋಲ*
*ಬಡಿಗೇರ ಗೌರೀಗೆ ಏನೇನ ಸಿಂಗಾರ*
*ಬಡದೂ ಹಾಕಿದ ಹುಟ್ಟ ಕಡ[illegible]ೀಗೆ ಕೋಲ*

ಹೀಗೆ ಈ ಸೀಗಿ ಮತ್ತು ಗೌರಿ ಹುಣ್ಣಿವೆಗಳು ಕನ್ನಡಿಗರ ಸಂಸ್ಕೃತಿಯನ್ನು ಬಿಂಬಿಸುತ್ತವಲ್ಲದೇ ಕೌಟುಂಬಿಕ ರಸಾನುಭವಗಳನ್ನು ಸಹೃದಯತೆಯಿಂದ ಅನುಭವಿಸುವ ಆನಂದಾನುಭೂತಿಯನ್ನುಂಟುಮಾಡುವಂಥ ಸಂಪ್ರದಾಯಗಳಿಂದ ತುಂಬಿವೆ. ಬದುಕು ರಸಪೂರ್ಣವಾಗಬೇಕಾದರೆ ಇಂಥ ಹಬ್ಬದ ಆಚರಣೆಗಳು ನಮಗೆ ಬೇಕೇಬೇಕು.

ಹೆಣ್ಣುಮಕ್ಕಳಿಗೂ ಮನರಂಜನೆಗೆ ಅವಕಾಶ ಮಾಡಿಕೊಟ್ಟ ಆಗಿನ ಹಿರಿಯರು ಉದಾರ ಹೃದಯರು, ಸೀಗಿ ಹುಣ್ಣಿವೆ ಮೂಲಕ ಭೂತಾಯಿಯನ್ನು ಪೂಜಿಸಿ ಬದುಕಿನಲ್ಲಿ ಕೃತಜ್ಞತೆ ಅನ್ನುವುದು ದೊಡ್ಡದು ಎಂದು ತೋರಿಸಿದ ಹಿರಿಯರು ಪೂಜ್ಯರು. ಆದರೆ ಜೊತೆಗೇ ಇಂದು ನಾಗರಿಕತೆಯ ಸುಳಿಗೆ ಸಿಕ್ಕ ನಾವು ಬಾಳಿನ ಒಂದು ಸುಂದರ ಅನುಭೂತಿಯನ್ನು ಕೃತಜ್ಞತೆಯಂಥ ಹೃದಯವಂತಿಕೆಯನ್ನು ಕಳೆದುಕೊಂಡು ಜಡರಾಗುತ್ತಿದ್ದೇವೆ ಎನ್ನುವುದು ನೋವಿನ ಸಂಗತಿ.

# ವಿಶ್ವಗಣ್ಯ ಕರ್ನಾಟಕದ ಸಮ್ರಾಟ ಅಮೋಘವರ್ಷ ನೃಪತುಂಗ

ಡಾ|| ಸೂರ್ಯನಾಥ ಕಾಮತ್

---

"ವಲ್ಲಭನು (ಬಲರಸು) ಭಾರತದ ಅರಸರಲ್ಲೇ ಅತ್ಯಂತ ಗಣ್ಯನಾದವನಾಗಿದ್ದು ಭಾರತದ ಪ್ರತೀಯೊಬ್ಬ ದೊರೆಯೂ ವಲ್ಲಭನ ಹಿರಿತನವನ್ನು ಮಾನ್ಯ ಮಾಡಿ ಅವನಿಗೆ ಗೌರವ ಸಲ್ಲಿಸುತ್ತಾನೆ".

ಅರಬ್ ದೇಶದ ಪ್ರವಾಸಿ ಸುಲೇಮಾನ್ ೮೫೧ ರಲ್ಲಿ ಭಾರತಕ್ಕೆ ಭೇಟಿ ನೀಡಿದಾಗ ಹೇಳಿದ ಈ ಮಾತು ಕರ್ನಾಟಕದಲ್ಲಿ ಆಗ ಆಳುತ್ತಿದ್ದ ಅರಸು ಒಂದನೆಯ ಅಮೋಘ ವರ್ಷನ ಬಗೆಗೆ ಈತ ಜಗತ್ತಿನ ನಾಲ್ಕು ಹಿರಿಯ ಸಮ್ರಾಟರಲ್ಲಿ ಒಬ್ಬ, ಎಂದೂ ಆತ ತಿಳಿಸಿದ್ದಾನೆ. (ಅವನು ಉಲ್ಲೇಖಿಸಿದ ಇತರ ಮೂರು ಸಮ್ರಾಟರೆಂದರೆ ಅರಬ್, ಚೀನೀ, ಹಾಗೂ ಕಾನ್ಸ್‌ಟೆಂಟಿನೋಪಲ್‌ನಿಂದ ಆಳುತ್ತಿದ್ದ ಪೂರ್ವದ ರೋಮನ್ ದೊರೆಗಳು).

ರಾಷ್ಟ್ರಕೂಟ ವಂಶದ ಅರಸು ಅಮೋಘವರ್ಷ ನೃಪತುಂಗನು ಕರ್ನಾಟಕದ ಅತ್ಯಂತ ಗಣ್ಯ ಅರಸನೊಬ್ಬನಷ್ಟೇ ಅಲ್ಲ ಭಾರತದ ಅಗ್ರಗಣ್ಯ ಚಕ್ರವರ್ತಿಗಳಲ್ಲಿ ಒಬ್ಬನಾಗಿರುವವನು. ಆತನು ಸಮರ್ಥ ಅರಸನಷ್ಟೇ ಅಲ್ಲ ವಿದ್ವಾಂಸ, ಕವಿ, ವಿದ್ಯಾಪಕ್ಷಪಾತಿ, ಪರಮಧಾರ್ಮಿಕ ತ್ಯಾಗಿ

ಹಾಗೂ ಶಾಂತಿಪ್ರಿಯ. ಶಾಂತಿಪ್ರಿಯನೆಂದಾಕ್ಷಣ ಆತ ಯುದ್ಧನಿರಾಸಕ್ತನೆಂದಲ್ಲ; ಹೇಡಿಯೆಂದೂ ಅರ್ಥವಲ್ಲ. ಬಹುಪಾಲು ವಿದ್ವಾಂಸರು ಆತ ಯುದ್ಧಪರಾಙ್ಮುಖನಾದ ವ್ಯಕ್ತಿಯೆಂಬ ಅಭಿಪ್ರಾಯ ಹೊಂದಿದ್ದಾರೆ; ಇದು ಸರಿಯಲ್ಲ. ತನ್ನ ವಂಶದ ಇತರ ಅರಸರ ರೀತಿಯಲ್ಲಿ ಆತ ಸಾಮ್ರಾಜ್ಯದ ಗಡಿದಾಟಿ ದಂಡಯಾತ್ರೆಮಾಡಿದವನಲ್ಲ. ಇದಕ್ಕೆ ಅವನ ಶಾಂತಿಪ್ರಿಯತೆ ಕಾರಣ. ಆದರೆ ಕೆಣಕಿದ ಶತ್ರುಗಳನ್ನು ಸದೆಬಡಿದು, ಅವರನ್ನು ಕ್ಷಮಿಸಿ, ಅವರ ಜೊತೆ ಸ್ನೇಹ, ರಕ್ತಸಂಬಂಧ ಬೆಳೆಸಿದ್ದ ಪರಮೌದಾರಿಯಾದ ವೀರಪುರುಷ ಆತ. ಈ ಹಿರಿಯಗುಣವೇ ಅವನನ್ನು ಭಾರತದ ಗಣ್ಯ ಅರಸನನ್ನಾಗಿ ಮಾಡಿದೆ. ''ಮೌರ್ಯ ವಂಶದ ದೇವಾನಾಂಪ್ರಿಯ ಅಶೋಕ ಚಕ್ರವರ್ತಿಯಂತೆ ಅಮೋಘವರ್ಷನು ಶೂರನೂ, ಶಾಂತಿಪ್ರಿಯನೂ, ಎಲ್ಲ ಧರ್ಮ - ಮತಗಳನ್ನು ಸಮಾನ ದೃಷ್ಟಿಯಿಂದ ನೋಡುತ್ತ ಪ್ರಜೆಗಳ ಹಿತವನ್ನು ಸಾಧಿಸುವವನೂ ಆಗಿ ಭಾರತದ ಚರಿತ್ರೆಯಲ್ಲಿ ಚಿರಕಾಲ ಬಾಳುವ ಶ್ರೇಷ್ಠಪದವನ್ನು ಗಳಿಸಿದ್ದಾನೆ'', ಎಂದು ವಿದ್ಯಾರತ್ನ ಶ್ರೀ ಪಂಚಮುಖಿಯವರು ಅಭಿಪ್ರಾಯ ನೀಡಿದ್ದಾರೆ.

ವಾಸ್ತವವಾಗಿ ರಾಷ್ಟ್ರಕೂಟರು ಕರ್ನಾಟಕದ ವೀರಶ್ರೀಯ ಪರಿಚಯವನ್ನು ಇಡೀ ಭಾರತಕ್ಕೆ ಮಾಡಿಕೊಟ್ಟು 'ಕರ್ಣಾಟ' ಎಂಬ ಶಬ್ದ ಹೆಮ್ಮೆಯ ಶಬ್ದವೆನಿಸುವಂತೆ ಮಾಡಿದವರು. ಆ ಕಾಲದಲ್ಲಿ ಕನ್ನಡಿಗರೆಂದರೆ ವೀರರು, ಪರಾಕ್ರಮಿಗಳು. ಎಂಬ ನಂಬುಗೆ ಎಲ್ಲೆಡೆ ಹರಡಿತ್ತು. ಬಂಗಾಲದ ಖ್ಯಾತ ಸೇನವಂಶದ ಅರಸರು ತಾವು ''ಕರ್ಣಾಟ ಕ್ಷತ್ರಿಯ''ರೆಂದು ಹೆಮ್ಮೆಯಿಂದ ಹೇಳಿಕೊಂಡಿದ್ದಾರೆ. ಮಿಥಿಲಾ (ಬಿಹಾರ) ದಲ್ಲಿ ಆಳಿದ ಒಂದು ರಾಜವಂಶವಂತೂ ಕರ್ಣಾಟವಂಶವೆಂದೇ ತನ್ನನ್ನು ಕರೆದುಕೊಂಡಿದೆ. ''ಕಾವ್ಯಮೀಮಾಂಸೆ''ಯ ಖ್ಯಾತ ಲೇಖಕ, ವಿಮರ್ಶಕ ರಾಜಶೇಖರ ಹೇಳಿರುವಂತೆ, ಕರ್ಣಾಟರು ಯುದ್ಧತಂತ್ರದಲ್ಲಿ ''ಚತುರತರಮತಿ''ಗಳು; ಕರ್ಣಾಟರದು ''ಅಖಂಡ ಪುರಷಾಕಾರ''ವೆಂದೂ ಆತ ಹೊಗಳಿದ್ದಾನೆ. ಕನ್ನಡಿಗರ ಕೀರ್ತಿ ಪದೇ ಪದೇ ಕಿವಿಗೆ ಬಡಿಯುತ್ತಿದೆ ('ಕರ್ಣೇ ಅಟಯತಿ') ಆದರಿಂದಲೇ ಅವರು ಕರ್ಣಾಟರು, ಎಂದು ವೆಂಕಟಾಧ್ವರಿಯೆಂಬ ವಿದ್ವಾಂಸನ ಅಭಿಮತ. ಇದೆಲ್ಲ ಕನ್ನಡಿಗರ ಗಣ್ಯಸಾಧನೆಗಳಿಂದಾಗಿ ಬಂದ ಕೀರ್ತಿ. ಬಾದಾಮಿಯ ಚಾಳುಕ್ಯರ ''ಅಜೇಯ ಕರ್ಣಾಟಕ ಬಲ'' ವನ್ನೇ ಗೆದ್ದು ಅಧಿಕಾರಕ್ಕೆ ಬಂದ ರಾಷ್ಟ್ರಕೂಟರು ಸಕಲ ದೆಸೆಗಳಲ್ಲೂ ವಿಜಯಯಾತ್ರೆ ಕೈಕೊಂಡ ವೀರರು. ಅಮೋಘವರ್ಷನ ಅಜ್ಜನಾದ ಧೋರಪ್ಪಯ್ಯ (ಧ್ರುವ, ೭೮೭-೯೩), ಆಗಿನ ಉತ್ತರಾಪಥದ ಸ್ವಾಮಿಯಾಗಿದ್ದ ಕನೋಜದ ಅರಸನನ್ನೂ ಉತ್ತರದ ಇತರ ಇಬ್ಬರು ಗಣ್ಯ ಅರಸರಾಗಿದ್ದ ಗೂರ್ಜರಪ್ರತೀಹಾರವಂಶದ ವತ್ಸರಾಜನನ್ನೂ ಬಂಗಾಲದ ಅರಸು ಖ್ಯಾತ ಧರ್ಮಪಾಲನನ್ನೂ ಸೋಲಿಸಿ, ಅವರ ಶ್ವೇತಚ್ಛತ್ರಗಳನ್ನು ಸೆಳೆದುಕೊಂಡು ಮೂರು ಬೆಳ್ಗೊಡೆಗಳಿಗೆ ಸ್ವಾಮಿಯಾದ ''ಕಲಿವಲ್ಲಭ''. ಅಮೋಘವರ್ಷನ ತಂದೆ ಮುಮ್ಮಡಿ ಗೋವಿಂದ ಮತ್ತೆ ಕನೋಜದ ದೊರೆಯಿಂದ ಕಪ್ಪ ಸಂಗ್ರಹಿಸಿ ಮುಂದೆ ಸಾಗಿ ಹಿಮಾಲಯದ ತಪ್ಪಲ ಹಿಮಕರಗಿದ ನೀರನ್ನು ತನ್ನ ಅಶ್ವದಳ

ಕುಡಿಯುವಂತೆ ಮಾಡಿದ ವಿಜೇತ.(ಹಿಮವರ್ಷಪರ್ವತ ನಿರ್ಝರಾಂಬು ತುರಗೈಃ ಪೀತಂಚ ಗಾಂಗಂ ಗಜಂ).

ಇಂಥ ವೀರಪರಂಪರೆಯಲ್ಲಿ ಅಮೋಘವರ್ಷ ಜನಿಸಿದವನು. ಅವನ ತಾಯಿ ಬಹುಶಃ (ಗೋವಿಂದನ ಏಕಮಾತ್ರ ಶಾಸನೋಲ್ಲೇಖಿತ ರಾಣಿ) ಗಾವುಂಡಬ್ಬೆ. ಗೋವಿಂದ ಉತ್ತರದ ದಂಡಯಾತ್ರೆಯಿಂದ ಮರಳುವಾಗ ಗುಜರಾತಿನ ಶ್ರೀಭವನ (ಈಗಣ ಸೂರತ್ ಬಳಿಯ ಸೊಬ್ರಾಂವ್) ದಲ್ಲಿ ವಿಶ್ರಮಿಸುತ್ತಿದ್ದ ಕಾಲದಲ್ಲಿ ಜನಿಸಿದವನು. ಈ ರಾಜಪುತ್ರ ಶ್ರೀಭವನದಿಂದ ಆಗ ಆಳುತ್ತಿದ್ದ ತನ್ನ ಮಾಂಡಲಿಕ ಶರ್ವನೆಂಬ ದೊರೆಯ ಗೌರವಾರ್ಥ ಅಮೋಘವರ್ಷನಿಗೆ 'ಶರ್ವ' ಎಂದೂ ಗೋವಿಂದ ನಾಮಕರಣ ಮಾಡಿದ್ದ. ಮಣ್ಣೆ ಶಾಸನದ ನೆರವಿನಿಂದ ಅಮೋಘವರ್ಷನ ಜನನ ಕ್ರಿ.ಶ. ೮೦೦ ರಲ್ಲಿ ಆಗಿರಬೇಕೆಂದು ನಿರ್ಧರಿಸಲಾಗಿದೆ.

## ಸಂಕಟಗಳು

ಪಟ್ಟಕ್ಕೆ ಬಂದಾಗ (೮೧೪) ಅಮೋಘವರ್ಷ ತೀರ ಎಳಸು. ಹೀಗಾಗಿ ಮಾಂಡಲಿಕರ, ಸಂಬಂಧಿಗಳ ಬಂಡಾಯದಿಂದ ಆತ ತತ್ತರಿಸಿದ. ಆದರೆ ಆತನಿಗೆ ನೆರವಾಗಿ ನಿಂತವನು, ಗುಜರಾತಿನಲ್ಲಿ ಮಾಂಡಳಿಕನಾಗಿ ಆಳುತ್ತಿದ್ದ ಕರ್ಕಸುವರ್ಣವರ್ಷನೆಂಬ ದಾಯಾದಿ (ಪಾತಾಳಮಲ್ಲನೆಂಬ ಹೆಸರನ್ನೂ ಹೊಂದಿದ್ದ ಈತ ಅಮೋಘವರ್ಷನ ಚಿಕ್ಕಪ್ಪ ಇಂದ್ರನ ಮಗ). ಅಮೋಘವರ್ಷನ ಶಿರೂರ್ ಶಾಸನದ ನೆರವಿನಿಂದ ಆತ ಪಟ್ಟಕ್ಕೆ ಬಂದ ವರ್ಷವು ಕ್ರಿ.ಶ. ೮೧೪-೧೫ ಎಂದು ಡಾ|| ಫ್ಲೀಟ್ ಅವರು ನಿರ್ಧರಿಸಿದ್ದಾರೆ.

ಅಮೋಘವರ್ಷನ ಸಂಕಷ್ಟಗಳು ಬಹುಶಃ ಅವನು ಪಟ್ಟಕ್ಕೆ ಬಂದ ೩-೪ ವರ್ಷಗಳ ನಂತರ ಆರಂಭವಾಗಿರಬೇಕು. ಏಕೆಂದರೆ ತನ್ನ ತಂದೆ ಗೋವಿಂದನ ಕಾಲದಲ್ಲಿ ಬಂಡಾಯ ಹೂಡಿದ್ದ ಗಂಗ ಎರಡನೆಯ ಶಿವಮಾರನು ಈತನಿಗೆ ತಲೆಬಾಗಿದ ವಿಚಾರ ಸುಮಾರು ೮೧೫ ರ ಕಲ್ಭಾವಿ ಶಾಸನದಿಂದ ಸ್ಪಷ್ಟವಾಗುವುದಲ್ಲದೆ, ಮುಂದೆ ೮೧೬ ರಲ್ಲಿ (ಬಹುಶಃ ಮತ್ತೆ ಬಂಡೆದ್ದ) ಶಿವಮಾರನನ್ನು ಈತ ಕಾಗೆಮೊಗೆಯೂರಲ್ಲಿ ಕೊಂದ ವಿಚಾರ ಸ್ಪಷ್ಟವಾಗುತ್ತದೆ. ಹಿರೇಗುಂಡುಗಲ್‌ನ ವೀರಗಲ್ಲಿನಿಂದ ತಿಳಿಯುವ ಈ ಶಿವಮಾರನ ಹತ್ಯೆಯ ಈ ತಾರೀಕನ್ನು ಮುಂದಿನ ಗಂಗಅರಸ ರಾಚಮಲ್ಲನ ಪಟ್ಟಬಂಧವಾದ ತಾರೀಕಿನ ನೆರವಿಂದ ಗೊತ್ತುಪಡಿಸಿದೆ. ರಾಚಮಲ್ಲನ ಮಣ್ಣೆ ತಾಮ್ರಪಟಗಳಲ್ಲಿ ಈ ತಾರೀಕು ಇದೆ. ಹೀಗೆ ಪಟ್ಟಕ್ಕೆ ಬಂದ ಆರಂಭದ ದಿನಗಳಲ್ಲೇ ಗಂಗರನ್ನು ಸದೆಬಡಿದ ಅಮೋಘವರ್ಷನು ಶೀಘ್ರ ವೆಂಗಿಯ ಚಾಳುಕ್ಯರಿಂದ ಅಪಾಯವನ್ನು ಎದುರಿಸಬೇಕಾಯಿತು.

ಚಾಳುಕ್ಯ ಎರಡನೆಯ ವಿಜಯಾದಿತ್ಯನು ರಾಷ್ಟ್ರಕೂಟರ ನೆರವಿನಿಂದ ಪಟ್ಟವೇರಿದ್ದ ತನ್ನ ಸೋದರ ಭೀಮನನ್ನು ಪದಚ್ಯುತಗೊಳಿಸಿ, ರಾಷ್ಟ್ರಕೂಟರನ್ನು ಅನೇಕ ಯುದ್ಧಗಳಲ್ಲಿ ಸೋಲಿಸಿ

ಅವರ ವಶವಿದ್ದ ಸ್ತಂಭಪಟ್ಟಣವನ್ನೂ ಗೆದ್ದ. (ಈ ಸ್ತಂಭ ಗುಜರಾತ್ ಕರಾವಳಿಯ ಕ್ಯಾಂಬೇ ಎಂದು ಒಂದು ಅಭಿಪ್ರಾಯವಿತ್ತು; ಆದರೆ ಈಗಿನ ಕರ್ನೂಲು ಜಿಲ್ಲೆಯ ಕಮ್ಮಂ ಕಮ್ಮಮೇಟು ಇದೆಂದು ಡಾ|| ಎನ್. ವೆಂಕಟರಮಣಯ್ಯ ಹೇಳಿದ್ದಾರೆ). ಒಟ್ಟಿನಲ್ಲಿ ರಾಷ್ಟ್ರಕೂಟರಿಗೆ ವಿಶೇಷ ಅಪಾಯವಾಯಿತು. ಚಾಳುಕ್ಯರ ಸಮುದ್ರದಲ್ಲಿ ಮುಳುಗಿದ್ದ ತನ್ನ ರಾಜ್ಯವನ್ನು ಅಮೋಘವರ್ಷನು ಉಳಿಸಿದನೆಂದು ಬೇಗುಮ್ರಾಶಾಸನ ಹೇಳಿದೆ. (ಚಾಳುಕ್ಯರನ್ನು ವಿಂಗವಳ್ಳಿಯಲ್ಲಿ ಯಮನಿಗೆ ಬಲಿಕೊಟ್ಟನೆಂದೂ ಅವರನ್ನು ಕಡಲೆಯಂತೆ ಹುರಿದನೆಂದೂ ಕ್ಯಾಂಬೆ ಮತ್ತು ಸಾಂಗ್ಲಿ ತಾಮ್ರಪಟಗಳು ಹೇಳಿವೆ). ಅಮೋಘವರ್ಷನಿಗೆ ಬಂದ ಈ ಅಪಾಯ ೮೧೭ ಮತ್ತು ೮೨೦ ರ ನಡುವಿನದು ಹಾಗೂ ೮೨೧ರ ಸೂರತ್ ತಾಮ್ರಪಟಗಳಲ್ಲಿ ಈ ಅಪಾಯವು ಮುಗಿದು ಅಮೋಘವರ್ಷನು ಭದ್ರವಾಗಿ ತಳವೂರಿದ ವಿಷಯವಿದೆ.

ಈ ವಿಜಯದನಂತರ ತನ್ನ ದಾಯಾದಿ ಸೋದರಿ (ಗುಜರಾತಿನ ಕರ್ಕ ಸುವರ್ಣವರ್ಷನ ತಂಗಿ) ಶೀಲಮಹಾದೇವಿಯನ್ನು ಚಾಳುಕ್ಯ ವಿಜಯಾದಿತ್ಯನ ಮಗ ಐದನೆಯ ವಿಷ್ಣುವರ್ಧನನಿಗೆ ಮದುವೆ ಮಾಡಿಕೊಟ್ಟು ಉಭಯ ಮನೆತನಗಳ ನಡುವೆ ಸ್ನೇಹಕ್ಕೆ ಭದ್ರ ಬೆಸುಗೆ ಹಾಕಿದ ಅಮೋಘವರ್ಷ. ಅಷ್ಟೊತ್ತಿಗೇ ಅಮೋಘವರ್ಷನಿಗೂ ಮದುವೆಯಾಗಿದ್ದು ಅವನ ರಾಣಿ ಅಸಗವ್ವೆಯ ಹೆಸರು 820ರ ಜವಖೇಡಾ ಶಾಸನದಿಂದ ತಿಳಿದಿದೆ.

ಅಮೋಘವರ್ಷನ ಆಳ್ವಿಕೆಯ ಕಾಲದ ಇನ್ನೊಂದು ಅಪಾಯದ ಪ್ರಸಂಗವೆಂದರೆ, ೮೬೦ರ ಕೊಣ್ಣೂರು ಶಾಸನದಂತೆ, ಆಂತರಿಕ ಸಂಕಷ್ಟಗಳೂ ತನ್ನ ಸಮೀಪದಲ್ಲಿಯೇ ಆದ ತೊಂದರೆಗಳೂ ರಾಜಕುಮಾರನು ಶತ್ರುಪಕ್ಷವನ್ನು ಸೇರಿದ್ದರಿಂದ ಆದ ಗೊಂದಲಗಳೂ ಅವನನ್ನು ಧೃತಿಗೆಡಿಸಿದ್ದು. ಆಗ ಗಂಗರ ರಾಜ್ಯದಲ್ಲಿ ದಂಡಯಾತ್ರೆ ಕೈಕೊಂಡಿದ್ದ ತನ್ನ ವಿಶ್ವಾಸಿಕ ಸೇನಾನಿ ಬಂಕೆಯನನ್ನು ಆತ ಹಿಂದೆ ಕರೆಸಿಕೊಂಡ. ಗಂಗ ನೀತಿಮಾರ್ಗ (೮೫೩-೭೦) ನನ್ನು ಧ್ವಂಸಗೊಳಿಸುವುದರಲ್ಲಿ ಬಂಕೆಯ ತಲ್ಲೀನನಾಗಿದ್ದು ಕಾವೇರಿಯನ್ನು ದಾಟಿ ಸಾಗಿದ್ದ. ಆತ ಅಲ್ಲಿಂದಲೇ ಮರಳಿ ಬಂದು ಬಂಡಾಯವೆದ್ದ ಜನರನ್ನು ಸದೆಬಡಿದ. ಹೀಗೆ ಬಂಡೆದ್ದವರಲ್ಲಿ ಗುಜರಾತಿನ ರಾಷ್ಟ್ರಕೂಟವಂಶದವನಾದ, ಹಿಂದೆ ಹೇಳಿದ ಕರ್ಕ ಸುವರ್ಣವರ್ಷನ ಮಗನಾದ ಧ್ರುವನೂ ಇರಬೇಕು. ಈ ಘಟನೆ ೮೫೫ ರ ಸುಮಾರಿಗೆ ನಡೆದಿರಬೇಕು. ಏಕೆಂದರೆ ನೀತಿಮಾರ್ಗನ ವಿರುದ್ಧ ಸಾಗಿದ್ದ, ಬಂಕೆಯ ಮರಳಿದ, ಎಂದು ಮೇಲೆ ಹೇಳಿದೆ. ನೀತಿಮಾರ್ಗನಿಗೆ ಪಟ್ಟವಾದುದು ೮೫೩ರಲ್ಲಿ. ಗುಜರಾತಿನ ರಾಷ್ಟ್ರಕೂಟರ ಇಮ್ಮಡಿ ಧ್ರುವನ ೮೬೭ ರ ರಾಟೋರ್ ಶಾಸನದಲ್ಲಿ ತನ್ನ ಅಜ್ಜನಾದ ಧ್ರುವನು ವಲ್ಲಭನ ವಿರುದ್ಧ ಹೋರಾಡಿ ಮಡಿದ ಎಂದಿದೆ. ಅಮೋಘವರ್ಷನೇ ಈ ವಲ್ಲಭ.

ತನ್ನ ತಂದೆಯ ವಿರುದ್ಧ ಬಂಡೆದ್ದ ರಾಜಪುತ್ರನಾರೆಂದು ಹೇಳಲು ಬಾರದು. ಮುಂದೆ ಅರಸನಾದ ರಾಜಕುಮಾರ ಇಮ್ಮಡಿ ಕೃಷ್ಣನಲ್ಲದೆ ಅಮೋಘವರ್ಷನಿಗೆ ದುದ್ದಯ್ಯನೆಂಬ

ಇನ್ನೊಬ್ಬ ಮಗನಿದ್ದನೆಂದು ರಾಮದುರ್ಗ ಶಾಸನ ತಿಳಿಸುತ್ತದೆ. ಮಗನ ಬಂಡಾಯದಿಂದ ದುಃಖಿತನಾಗಿ ಅರಸನು 'ಕ್ಷೀರತ್ಯಾಗ' ಅಥವಾ ಹಾಲನ್ನು ಸೇವಿಸದಿರುವ ವ್ರತವನ್ನು ತೊಟ್ಟನೆಂದು ಶಾಸನ ಹೇಳಿದೆ.

## ವಿಜಯ ಪರಂಪರೆ

ಈ ಎರಡು ಅಪಾಯದ ಪ್ರಸಂಗಗಳು ''ಕಲಿಯ ಪ್ರಭಾವದಿಂದ ಆದ ಕ್ಷೋಭೆಗಳು'' ಎಂದು ತನ್ನ ವಿಶ್ವಾಸಿಕರಾದ ಮಾಂಡಳಿಕರೂ ಸಂಬಂಧಿಗಳೂ ಬಂಡೆದ್ದ ಬಗ್ಗೆ ಅಮೋಘವರ್ಷನು ದುಃಖ ತೋಡಿಕೊಂಡಿದ್ದಾನಲ್ಲದೆ ತನ್ನ ವಿಜಯದ ಸಾಧನೆಗಳ ಹೆಗ್ಗಳಿಕೆ ಹೇಳಿಕೊಂಡಿಲ್ಲ. ಇದು ಅವನ ಔದಾರ್ಯದ ಮನೋಭಾವವನ್ನು ತೋರಿಸುತ್ತದೆ. ತನ್ನ ಶಾಸನಗಳಲ್ಲೂ ತನ್ನ ತಂದೆಯೇ ಮುಂತಾದ ಹಿರಿಯರ ಸಾಧನೆಯ ವರ್ಣನೆಯನ್ನೇ ಹೆಚ್ಚಾಗಿ ಮಾಡಿದ್ದಾನೆ. ಆದರೆ, ಅದರ ಅರ್ಥ ಅಮೋಘವರ್ಷ ದುರ್ಬಲನೆಂದಾಗದು. ''ಸಮಸ್ತ ಭೂಪಾಲರ ಮುದ್ರೆಗಳನ್ನು ತನ್ನ ಗರುಡಮುದ್ರೆಯಿಂದ ಅವನು ಭಗ್ನಗೊಳಿಸಿದ'' ಎಂದು ಕೊಣ್ಣೂರು ಶಾಸನದಲ್ಲಿ ಹೇಳಿದೆ.

ಹಾಗೆ ನೋಡಿದರೆ ಅಮೋಘವರ್ಷನ ವಿಜಯಗಳ ಪಟ್ಟಿ ದೊಡ್ಡದೇ.

ಗಂಗ ಶಿವಮಾರನನ್ನೂ (೮೧೬) ಗುಜರಾತಿನ ಧ್ರುವನನ್ನೂ (ಸು.೮೪೫) ಕೊಂದುದು, ವೆಂಗಿಯ ಅರಸರನ್ನು ತೀವ್ರವಾಗಿ ಸೋಲಿಸಿದ್ದು (ಸು.೮೩೦) ಮಾತ್ರವೇ ಅಲ್ಲ, ತಿರುಗಿ ವಿಂಗವಳ್ಳಿಯಲ್ಲಿ ವೆಂಗಿಯ ವಿಷ್ಣುವರ್ಧನನ್ನು ೮೪೯ ರಲ್ಲಿ ಕೊಂದುದೂ ಕ್ರಿ.ಶ. 850ರ ನಂತರ ತುಳುನಾಡಿ ಆಳುಪ ವಿಮಲಾದಿತ್ಯನನ್ನು ಕೊಂದು ಆಳ್ವಖೇಡ ೬,೦೦೦ (ದಕ್ಷಿಣ ಕನ್ನಡ) ಪ್ರಾಂತವನ್ನು ತನ್ನ ಅಧಿಕಾರಿ ಇಂದಪ್ಪಯ್ಯನ ಆಡಳಿತಕ್ಕೆ ಒಳಪಡಿಸಿದ್ದೂ ಅವನ ಇನ್ನೊಂದು ಸಾಧನೆ. ಇದಲ್ಲದೆ, ಸಂಜನ ಶಾಸನ ಸೂಚಿಸಿರುವಂತೆ ಪಲ್ಲವರನ್ನು ಅಮೋಘವರ್ಷನು ಸೋಲಿಸಿದ್ದು. ಇದು ಪಲ್ಲವ ಮುಮ್ಮಡಿ ನಂದಿವರ್ಮನನ್ನು ಆತನು ಸೋಲಿಸಿದ ಪ್ರಸಂಗವೆಂದು ಸಂಶೋಧಕರು ಕಂಡುಕೊಂಡಿದ್ದಾರೆ. ಸೋತ ಪಲ್ಲವ ನಂದಿವರ್ಮನಿಗೆ ತನ್ನ ಮಗಳಾದ ಶಂಖಾ ಎಂಬುವಳನ್ನು ಅಮೋಘವರ್ಷನು ಮದುವೆಮಾಡಿಕೊಟ್ಟನಲ್ಲದೆ, ಮುಂದೆ ಪಲ್ಲವರ ವಿರುದ್ಧ ದಂಡೆತ್ತಿ ಬಂದ ಪಾಂಡ್ಯರ ವಿರುದ್ಧ ರಾಜಕುಮಾರ ಕೃಷ್ಣನ ಕೈಯಲ್ಲಿ ಒಂದು ಸೇನೆಯನ್ನು ಕಳುಹಿಸಲು ಆತನು ತೆಳ್ಳಾರು ಎಂಬಲ್ಲಿ ನಡೆದ ಯುದ್ಧದಲ್ಲಿ ಕ್ರಿ.ಶ. ಸು.೮೫೨ರಲ್ಲಿ ಪಾಂಡ್ಯ ವಂಶದ ಒಬ್ಬ ರಾಜಕುಮಾರನನ್ನು ಕೊಂದ. ಶಾಕಟಾಯನನ 'ಅಮೋಘವೃತ್ತಿ' ಗ್ರಂಥದಲ್ಲೂ ಚಿತ್ರದುರ್ಗ ತಾಲೂಕಿನ ಒಂದು ಶಾಸನದಲ್ಲೂ ಚಿತ್ರದುರ್ಗ ಸಂ.೭೬; (ಸು.೮೭೬) ಕೃಷ್ಣನು ಪಾಂಡ್ಯನನ್ನು ಕೊಂದ ವಿಚಾರ ಬಂದಿದೆ.

ವೆಂಗಿಯ ಚಾಳುಕ್ಯ ಇಮ್ಮಡಿ ವಿಜಯಾದಿತ್ಯನನ್ನು ಸೋಲಿಸಿ ಅವನ ಮಗನಿಗೆ ತನ್ನ ದಾಯಾದಿನಿ ಶೀಲಮಹಾದೇವಿಯನ್ನು ಮದುವೆಮಾಡಿ ಕೊಟ್ಟಿದ್ದ ಅಮೋಘವರ್ಷನು ಶೀಲ ಮಹಾದೇವಿಯ ಮಗನೂ ಮಹಾಪ್ರತಾಪಶಾಲಿಯೂ ಆದ ಗುಣಗ ವಿಜಯಾದಿತ್ಯ (೮೪೯-೮೯೨) ನನ್ನು ತನ್ನ ಮಾಂಡಳಿಕನನ್ನಾಗಿಯೇ ಇಟ್ಟುಕೊಳ್ಳುವಲ್ಲಿ, ಯಶಸ್ವಿಯಾದುದು ಒಂದು ಗಣ್ಯ ಸಾಧನೆಯೇ. ಅಮೋಘವರ್ಷನ ನೀಲಗುಂದ ಹಾಗೂ ಶಿರೂರು ಶಾಸನಗಳಲ್ಲಿ ವೆಂಗೀಶನು ತನ್ನ ಸೇವಕನೆಂದು ಹೇಳಿದೆ. ಗಂಗ ನೀತಿಮಾರ್ಗನ ವಿರುದ್ಧ ಸಾಗಿದ ಬಂಕೇಶನು ರಾಜಾರಾಮಡು ಯುದ್ಧದಲ್ಲಿ ಸೋತ. ಆಗ ಅವನ ಜೊತೆ ವೆಂಗಿಯ ಸೇನೆಯೂ ಇತ್ತು. ಬಂಕೇಶನು ಧೃತಿಗೆಡದೆ ಕೈದಾಳ ಕೋಟೆಯನ್ನು ಗೆದ್ದು, ಕಾವೇರಿಯನ್ನು ದಾಟಿ ''ಗಂಗಾರಣ್ಯ''ವನ್ನು ನಾಶಗೊಳಿಸುವುದರಲ್ಲಿ ಮಗ್ನನಾಗಿರಲು ಅವನನ್ನು ಹಿಂದಕ್ಕೆ ಕರೆಸಲಾಯಿತು. ಆದರೆ ಚಾಳುಕ್ಯ ಗುಣಗ ವಿಜಯಾದಿತ್ಯನು ಅಮೋಘವರ್ಷನ ಆಜ್ಞೆಯಂತೆ ದಂಡಯಾತ್ರೆಯನ್ನು ಮುಂದುವರಿಸಿದ. ಗಂಗರ ಮಾಂಡಳಿಕ ನೊಳಂಬ ಮಂಗಿಯು ಅವನನ್ನು ತಡೆಯಲು ಆತ ಮಂಗಿಯನ್ನು ಕೊಂದ. ಅಲ್ಲಿಂದ ಮುಂದೆ ಸಾಗಿ, ಗಂಗರನ್ನು ಶಿವಗಂಗೆ (ಗಂಗಕೂಟ)ಯಲ್ಲಿ ಸೋಲಿಸಿದ. ಹೀಗೆ ಗಂಗರಮೇಲೆ ವಿಜಯ ಸಾಧಿಸಿದ ಅಮೋಘವರ್ಷನು ತನ್ನ ಮಗಳಾದ ಚಂದ್ರಬ್ಬಲಬ್ಬೆಯನ್ನು ನೀತಿಮಾರ್ಗನ ಮಗ ಬೂತುಗನಿಗೆ ಮದುವೆ ಮಾಡಿಕೊಟ್ಟ. ಹೀಗೆ ಗಂಗರನು ಬಗ್ಗುಬಡಿದು, ಈ ವಿಜಯದ ಕ್ಷಣದಲ್ಲಿ ಅವರ ಜೊತೆ ಸ್ನೇಹಮಾಡಿಕೊಂಡುದು ಅಮೋಘವರ್ಷನ ಹೃದಯ ವೈಶಾಲ್ಯವನ್ನು ಸೂಚಿಸುತ್ತದೆ. ಇದಲ್ಲದೆ ತನ್ನ ಇನ್ನೊಬ್ಬ ಮಗಳಾದ ರೇವಕ ನಿಮ್ಮಡಿಯನ್ನು ಅವನು ಇನ್ನೊಬ್ಬ ಗಂಗ ರಾಜಕುಮಾರ ಎರೆಯಂಗನಿಗೆ ಮದುವೆ ಮಾಡಿಕೊಟ್ಟಿದ್ದ. ಆಕೆ ಎಡೆತೊರೆ ವಿಷಯದ ಆಡಳಿತವನ್ನು ನೋಡಿಕೊಳ್ಳುತ್ತಿದ್ದಳು.

### ಶಾಂತಿಪ್ರಿಯ, ತ್ಯಾಗಿ

ಆದರೆ ತನ್ನ ತಂದೆ ಅಥವಾ ಅಜ್ಜನಂತೆ ಅಮೋಘವರ್ಷನು ಉತ್ತರ ದಿಗ್ವಿಜಯವನ್ನು ಕೈಕೊಂಡವನಲ್ಲ. ಸಮಕಾಲೀನನಾದ ಗೂರ್ಜರಪ್ರತೀಹಾರ ವಂಶದ ಶ್ರೇಷ್ಠರಾಜ ಮಿಹಿರಭೋಜನು ಗುಜರಾತನ್ನು ಗೆಲ್ಲಲು ಯತ್ನಿಸಿದಾಗ ಆತನನ್ನು ಹೊಡೆದಟ್ಟಲು ತನ್ನ ಮಾಂಡಳಿಕ ಇಮ್ಮಡಿ ಧ್ರುವನಿಗೆ ಅಮೋಘವರ್ಷನು ನೆರವು ನೀಡಿದ್ದ. ಆದರೆ ಅದಕ್ಕೂ ಮೀರಿ ಆತ ಭೋಜನ ಜೊತೆ ಬೇರೆ ಯುದ್ಧ ನಡೆಸಿದಂತೆ ಇಲ್ಲ. ಇದಕ್ಕೆ ಅಮೋಘವರ್ಷನ ಶಾಂತಿಪ್ರಿಯತೆಯೇ ಕಾರಣ. ಅದೇರೀತಿ, ತನ್ನ ತಂದೆ ಮತ್ತು ಅಜ್ಜನು ಬಂಗಾಲದ ಪಾಲರ ವಿರುದ್ಧ ಯುದ್ಧ ಹೂಡಿದ್ದಂತೆ ಈತನು ಹೂಡಲಿಲ್ಲ. ಪಾಲ ದೇವಪಾಲನು ದ್ರಾವಿಡರನ್ನು ಸೋಲಿಸಿದ ಎಂಬ ಆತನ ಶಾಸನದಲ್ಲಿನ ಒಂದು ಮಾತು, 'ಅವನು ಅಮೋಘವರ್ಷನನ್ನು ಸೋಲಿಸಿದ' ಎಂಬುದಾಗಿ ಅರ್ಥೈಸಲ್ಪಟ್ಟಿತ್ತು. ಆದರೆ, ದೇವಪಾಲನು ಸೋಲಿಸಿದ್ದು ದ್ರಾವಿಡ,

ಎಂದರೆ ತಮಿಳುನಾಡಿನ ಪಾಂಡ್ಯ ಅರಸನನ್ನು, ಎಂಬುದಾಗಿ ಡಾ|| ಆರ್.ಸಿ. ಮಜುಂದಾರ್ ಸಕಾರಣವಾಗಿ ಹೇಳಿದ್ದಾರೆ. ಒಟ್ಟಿನಲ್ಲಿ ಸೇನಾಸಾಮರ್ಥ್ಯವಿದ್ದರೂ ಆಕ್ರಮಣಕಾರೀ ಯುದ್ಧಗಳನ್ನು ಕೈಕೊಂಡವನಲ್ಲ ಅಮೋಘವರ್ಷ. ಅಲ್ಲದೆ ತನಗೊದಗಿದ್ದ ಸಂಕಷ್ಟಗಳನ್ನು ಪ್ರಾಮಾಣಿಕವಾಗಿ ಶಾಸನಗಳಲ್ಲಿ ಹೇಳಿಕೊಂಡುದೂ, ಅವುಗಳ ನಿವಾರಣೆಗೆ ಕಾರಣರು ಕರ್ಕಸುವರ್ಣವರ್ಷ, ಬಂಕೆಯರೆಂದು ತಿಳಿಸಿದ್ದೂ ಅವನ ಶಾಂತಿಪ್ರಿಯ ಮನೋವೃತ್ತಿಗೆ ಸಾಕ್ಷಿ. ತನ್ನ ಸಂಬಂಧಿಗಳೂ ಮಾಂಡಳಿಕರೂ ಬಂಡೇಳಲು ಕಲಿಪುರುಷನ ರೀತಿಯೇ ಕಾರಣ, ಎಂದೂ ಅವನು ಹೇಳಿದ್ದು ಅವನ ಉದಾರ ಮನೋಧರ್ಮವನ್ನು ಪ್ರಕಟಿಸುತ್ತದೆ.

ತನ್ನ ರಾಜ್ಯದಲ್ಲಿ ಯಾವುದೋ 'ಲೋಕೋಪದ್ರವ' (ಕ್ಷಾಮ ಅಥವಾ ಯಾವುದೋ ಸಾಂಕ್ರಾಮಿಕ ರೋಗ) ಕಾಣಿಸಿಕೊಂಡಾಗ ತನ್ನ ಬೆರಳನ್ನು ಕತ್ತರಿಸಿಕೊಂಡು ಅದನ್ನು ಕೊಲ್ಲಾಪುರದ ಮಹಾಲಕ್ಷ್ಮಿಗೆ ಆತನು ಅರ್ಪಿಸಿದ ಪ್ರಕರಣ ಸಂಜಾನ ಶಾಸನದಲ್ಲಿ ಉಲ್ಲೇಖಿತವಾಗಿದೆ. ಈ ಅಪೂರ್ವ ತ್ಯಾಗವು ಶಿಬಿ, ದಧೀಚಿ, ಜೀಮೂತವಾಹನರ ತ್ಯಾಗಕ್ಕೆ ಹೋಲಿಸಿ ಶಾಸನದಲ್ಲಿ ಹೇಳಲ್ಪಟ್ಟಿದೆಯಷ್ಟೇ ಅಲ್ಲ, 'ಶಬ್ದಾನುಶಾಸನ'ದಲ್ಲಿ ಈ ಬಗ್ಗೆ ಒಂದು ಕನ್ನಡ ಪದ್ಯವೂ ಇದೆ.

*ಇಮ್ಮಡಿ ಬಲಿಗೆ ದಧೀಚಿಗೆ*
*ಮೂರ್ಮಡಿ ಜೀಮೂತವಾಹನಂಗಂ ಬಗೆಯಲ್*
*ನೂರ್ಮಡಿ ಶಿಬಿಗಂ ದಿಟಂ ಸಾ -*
*ಸಿರ್ಮಡಿ ಮಿಗಿಲಿಳೆಗೆ ಚಾಗದೊಳ್ ನೃಪತುಂಗಂ*

ಇದಲ್ಲದೆ ಪರಮಧಾರ್ಮಿಕನಾದ ಅಮೋಘವರ್ಷನು ಅನೇಕ ಬಾರಿ ರಾಜ್ಯಭಾರದಿಂದ ಬಿಡುಗಡೆ ಹೊಂದಿ ("ವಿವೇಕಾತ್ತ್ಯಕ್ತರಾಜ್ಯೇನ") ಜೈನಸಂನ್ಯಾಸಿಗಳ ಜೊತೆ ಕಾಲಕಳೆಯುತ್ತಿದ್ದನೆಂದು ಅವನೇ ಬರೆದ "ಪ್ರಶ್ನೋತ್ತರ ರತ್ನಮಾಲಾ" ಎಂಬ ಸಂಸ್ಕೃತ ಕೃತಿಯಲ್ಲಿ ಹೇಳಿದೆ. ಇದೇ ವಿಚಾರವು ಸಂಜಾನ ಶಾಸನದಲ್ಲೂ ಉಲ್ಲೇಖಿತವಾಗಿದೆ.

ಅಮೋಘವರ್ಷನು ವಿದ್ವಾಂಸರ ಮತ್ತು ಧಾರ್ಮಿಕ ವ್ಯಕ್ತಿಗಳ ಸಹವಾಸದಲ್ಲಿ ಕಾಲಕಳೆಯುತ್ತಿದ್ದು ಆತನು 'ಸ್ಯಾದ್ವಾದ'ದ ಅನುಯಾಯಿಯಾಗಿದ್ದನೆಂದು ಗಣಿತಸಾರ ಸಂಗ್ರಹದಲ್ಲಿ ಮಹಾವೀರಾಚಾರ್ಯನು ಹೇಳಿದುದರಿಂದಲೂ ಜಿನಸೇನನು "ಆದಿಪುರಾಣ"ದಲ್ಲಿ ಅಮೋಘವರ್ಷನು ತನ್ನ ಶಿಷ್ಯನೆಂದು ತಿಳಿಸಿದುದರಿಂದಲೂ ರಾಜನು ಜೈನಮತಾನುಯಾಯಿಯೆಂದು ತಿಳಿಯಲು ಅವಕಾಶವಿದೆಯಾದರೂ ಆತನು ವೈದಿಕ ಮತಾನುಯಾಯಿಯಾದ ವೈಷ್ಣವನೇ ಆಗಿದ್ದನೆಂದು ಶ್ರೀ ಮುಳಿಯ ತಿಮ್ಮಪ್ಪಯ್ಯ ಹಾಗೂ ಶ್ರೀ ಎಂ.ವಿ. ಸೀತಾರಾಮಯ್ಯನವರು ತೋರಿಸಿದ್ದಾರೆ. ಅವನ ನೀಲಗುಂದ, ಶಿರೂರು ಹಾಗೂ

ಸಂಜಾನ ಶಾಸನಗಳು ವಿಷ್ಣುಸ್ತುತಿಯಿಂದಲೇ ಆರಂಭವಾಗುತ್ತವೆ; ಕೊನೆಯ ಶಾಸನದಲ್ಲಿ ಆತನು ಮಹಾಲಕ್ಷ್ಮಿಯ ಭಕ್ತನಿದ್ದುದು ಸ್ಪಷ್ಟವಾಗುತ್ತದೆ. ಅಲ್ಲದೆ ಅವನ ಬಿರುದುಗಳಲ್ಲಿ ಒಂದಾದ 'ವೀರನಾರಾಯಣ'ಎಂಬುದು ಅವನ ವೈಷ್ಣವ ಒಲವನ್ನು ಸೂಚಿಸುತ್ತದೆ ಗರುಡ ಲಾಂಛನರಾದ ರಾಷ್ಟ್ರಕೂಟರು ಮೂಲತಃ ವೈಷ್ಣವರೇ.

ಆದರೆ ಜೈನಧರ್ಮದ ಬಗ್ಗೆ ಅಮೋಘವರ್ಷನು ಅಪಾರಗೌರವ ಹೊಂದಿದ್ದನಲ್ಲದೆ, ಅವನ ಆಸ್ಥಾನದಲ್ಲಿ ಅನೇಕ ಜೈನಸಂತರೂ ಇದ್ದರು. ಧರ್ಮಸಹಿಷ್ಣುವಾದ ಅವನು ಮುಂಬೈ ಬಳಿಯ ಕಣ್ಣೇರಿಯ ಬೌದ್ಧ ವಿಹಾರಕ್ಕೆ ನೀಡಿದ ಮೂರು ದಾನಶಾಸನಗಳಿವೆ. ಅಲ್ಲದೆ ಅವನ ಶಿಗ್ಗಾಂವಿ, ಸಿಡಗುಂದಿ, ಮಂತ್ರವಾಡಿ ಶಾಸನಗಳು ಶಿವಾಲಯಗಳಿಗೆ ನೀಡಿದ ದಾನಗಳು. ಅರಬ್ಬರ ಹಾಗೂ ಅವರ ಧರ್ಮದ ಬಗ್ಗೆಯೂ ಅವನು ಗೌರವ ಹೊಂದಿದ್ದಾನೆಂದು ಸುಲೇಮಾನ್ ತಿಳಿಸಿದ್ದಾನೆ. ಹೀಗೆ ಅವನು ತೀರ ಸಹಿಷ್ಣುನೀತಿಯನ್ನು ಅನುಸರಿಸಿದವನು. ಶಿರೂರು ಮುಂತಾದ ಅಗ್ರಹಾರಗಳನ್ನೂ ಆತ ಸ್ಥಾಪಿಸಿದ್ದಾನೆ. ಪಟ್ಟದಕಲ್ಲಿನ ಜೈನಬಸದಿ ಅವನ ಕಾಲದ್ದು.

**ಪಂಡಿತಾಶ್ರಯ**

ಅಮೋಘವರ್ಷನು ನವರಾಜಧಾನಿ ಮಾನ್ಯಖೇಟ (ಮಳಖೇಡ)ವನ್ನು ರಚಿಸಿದನೆಂದು ಕರ್ಡಾ ಶಾಸನದಿಂದ ತಿಳಿಯುತ್ತದೆ. ಈ ರಾಜಧಾನಿ ವಿದ್ವಾಂಸರ ಕವಿಗಳ ಆಶ್ರಯಸ್ಥಾನ. ಅಮೋಘವರ್ಷನ ಆಸ್ಥಾನವೆಂದರೆ ಸರಸ್ವತಿಯ ಆರಾಧನಾಗೃಹ. ಖ್ಯಾತ ಜೈನವಿದ್ವಾಂಸರಾದ ವೀರಸೇನ ಮತ್ತು ಜಿನಸೇನರು ಜೈನರ ಧಾರ್ಮಿಕ ಗ್ರಂಥ ''ಷಟ್ಖಂಡಾಗಮ'' ಗಳ ಬಗ್ಗೆ ''ಧವಳಾ'' ಮತ್ತು ''ಜಯಧವಳಾ''ಎಂಬ ಸಂಸ್ಕೃತ ಟೀಕಾಗ್ರಂಥಗಳನ್ನು ಅನುಕ್ರಮವಾಗಿ ರಚಿಸಿದ್ದು ಅಮೋಘವರ್ಷನ ''ಅತಿಶಯಧವಳ'' ಎಂಬ ಬಿರುದಿನಿಂದಾಗಿಯೇ. ಈ ಹೆಸರುಗಳನ್ನು ಆ ಗ್ರಂಥಗಳಿಗೆ ನೀಡಲಾಗಿತ್ತು. ಇದಲ್ಲದೆ ಜಿನಸೇನನು 'ಪಾರ್ಶ್ವಾಭ್ಯುದಯ' ಮತ್ತು 'ಆದಿಪುರಾಣ'ಗಳನ್ನೂ ಬರೆದ. ಜಿನಸೇನನ ಶಿಷ್ಯ ಗುಣಭದ್ರನು 'ಉತ್ತರ ಪುರಾಣ'ವನ್ನು ಬರೆದನಲ್ಲದೆ ರಾಜಕುಮಾರ ಕೃಷ್ಣನಿಗೆ ಶಿಕ್ಷಣವನ್ನೂ ನೀಡಿದನು. ಖ್ಯಾತ ಗಣಿತಜ್ಞ ಮಹಾವೀರ ಆಚಾರ್ಯನು ಗಣ್ಯ ಸಂಸ್ಕೃತ ವೈಯ್ಯಾಕರಣಿ ಶಾಕಟಾಯನನೂ ಅವನ ಆಸ್ಥಾನಿಕರು. ಎರಡನೆಯಾತನ ಕೃತಿ ''ಅಮೋಘವೃತ್ತಿ''ಯನ್ನು ಆತನು ಅಮೋಘವರ್ಷನ ಸ್ಮರಣೆಗಾಗಿ ಹಾಗೆ ಹೆಸರಿಸಿದ್ದು, ಶಾಕಟಾಯನ ಪದ್ಧತಿಯೆಂಬ ವ್ಯಾಕರಣ ಪರಂಪರೆ ಸಂಸ್ಕೃತದಲ್ಲಿ ರೂಢವಾಗಲು ಈ ಕೃತಿ ಕಾರಣವಾಗಿದೆ.

ಈ ಕಾಲದ ಇನ್ನೊಂದು ಉಲ್ಲೇಖನೀಯ ಸಾಹಿತ್ಯ ಕೃತಿಯೆಂದರೆ ಕನ್ನಡದ ಮೊದಲ ಉಪಲಬ್ಧ ಕೃತಿ ''ಕವಿರಾಜ ಮಾರ್ಗ''. ಅಮೋಘವರ್ಷನೇ ಇದರ ಕರ್ತೃವೆಂದು ಹೇಳಲಾಗಿದ್ದರೂ ಅವನ ಆಸ್ಥಾನಿಕ ಶ್ರೀ ವಿಜಯನೆಂಬಾತನು ಇದರ ಲೇಖಕನೆಂದು ಈಗ

ತಿಳಿದಿದೆ. ‘‘ಕಾವೇರಿಯಿಂದಮಾ ಗೋದಾವರಿವರಮಿರ್ದ್ದ ನಾಡದಾ ಕನ್ನಡ’’ದ ವರ್ಣನೆ ಈ ಗ್ರಂಥದಲ್ಲಿ ಬಂದಿದೆಯಲ್ಲದೆ ‘‘ಆನಾಡವರ್ಗಳ’’ ಸುಂದರ ವರ್ಣನೆಯೂ ಗ್ರಂಥದಲ್ಲಿ ಮೂಡಿದೆ. ಸ್ವತಃ ಅಮೋಘವರ್ಷನು ಸಂಸ್ಕೃತದಲ್ಲಿ ‘‘ಪ್ರಶ್ನೋತ್ತರ ರತ್ನಮಾಲಾ’’ ಎಂಬ ಸಂಸ್ಕೃತ ಕೃತಿಯನ್ನು ರಚಿಸಿದ್ದಾನೆ. ಇದರ ರಚನಕಾರರು ಶಂಕರಾಚಾರ್ಯರೆಂಬ ಒಂದು ಅಭಿಪ್ರಾಯವಿತ್ತು. ಆದರೆ ಈ ಕೃತಿಯ ಟಿಬೆಟನ್ ಭಾಷಾಂತರದಲ್ಲಿ ಈತನೇ ಅದರ ಕರ್ತೃವೆಂದು ಸ್ಪಷ್ಟವಾಗಿದೆ.

ನೃಪತುಂಗ, ವೀರನಾರಾಯಣ, ರಟ್ಟಮಾರ್ತಾಂಡ, ಶ್ರೀವಲ್ಲಭ, ಅತಿಶಯಧವಳ ಇವು ಅವನ ಬಿರುದುಗಳು. ಶಂಖಾ ಮತ್ತು ಲೋಕೇತಿ ಸಿಮ್ಮಡಿಗಳ್ ಎಂಬ ಇನ್ನಿಬ್ಬರು ರಾಣಿಯರು ಆತನಿಗೆ ಇದ್ದರೆಂದು ಶ್ರೀ ಪಂಚಮುಖಿಯವರು ಹೇಳಿದ್ದಾರೆ.

ಇವನ ಮಂತ್ರಿ ಬಂಕೆಯ ಕೊಣ್ಣೂರಲ್ಲಿ (ನರಗುಂದ ಬಳಿ) ಕಟ್ಟಿಸಿದ ಬಸದಿ (೮೫೦) ಬಲು ಪ್ರಸಿದ್ಧ. ಇದು ನಕ್ಷತ್ರಾಕಾರದ ಪ್ರಪ್ರಥಮ ರಚನೆ; ಚಾಳುಕ್ಯರು, ಹೊಯ್ಸಳರು ಈ ಶೈಲಿಯನ್ನು ಮುಂದೆ ಬಳಸಿದರು. ಪಟ್ಟದಕಲ್ಲಿನ ಒಂದು ಜೈನಬಸದಿಯು ಇವನ ಕಾಲದ ರಚನೆ. ಈತನ ಕಾಲದಲ್ಲಿ ಅನೇಕ ನೀರಾವರಿ ಯೋಜನೆಗಳ ಕಾರ್ಯಾಚರಣೆಯಾಯಿತು. ಬಾಗೇವಾಡಿ ತಾಲೋಕಿನ ಹೂವಿನ ಹಿಪ್ಪರಗಿಯಲ್ಲಿ ಎರಡು ಕೆರೆಗಳಿದ್ದದ್ದು ೮೬೨ ರ ಶಾಸನದಿಂದ ತಿಳಿಯುತ್ತದೆ. ಕೆಸರಭಾವಿಯ ಕೆರೆ, ತೂಬುಗಳು (ಹುನಗುಂದ ತಾಲೋಕು) ಇವನ, ಕಾಲದಲ್ಲೇ ಆದುವು (೮೩೭). ಗದಗ ತಾಲೂಕ ಚಿಂಚಲುವಿನಲ್ಲಿ ನಾಗರಿಕನೊಬ್ಬ ೮೭೦ರಲ್ಲಿ ಕೆರೆಯೊಂದನ್ನು ಕಟ್ಟಿದ. ಇವು ಕೆಲವು ಉದಾಹರಣೆಗಳು. ಕೊಣ್ಣೂರಿನ ಮೂಲ ಹೆಸರು ಕೊಳನೂರು ಎಂದಿತ್ತು.

# ಜನಪದ ಹಾಡುಗಳಲ್ಲಿ ಆದ್ಯಾತ್ಮ

ಡಾ॥ ವಿಜಯಶ್ರೀ ಸಬರದ

---

ಜನಪದ ಸಾಹಿತ್ಯ ಜನರ ಜೀವನದ ಪ್ರತಿಬಿಂಬ. ಜನರ ಉಸಿರಾಟದೊಂದಿಗೆ ಪ್ರಾರಂಭವಾದ ಜನಪದ ಸಾಹಿತ್ಯ ಅವರ ಬದುಕಿನ ಪ್ರೀತಿ, ಕಾಳಜಿ, ತುಡಿತ, ಶ್ರದ್ಧೆ, ಭಯ, ಭಕ್ತಿ, ನೀತಿ, ಸುಖ-ದುಃಖಗಳ ಭಂಡಾರವಾಗಿದೆ. ಸಾಮಾಜಿಕ, ಧಾರ್ಮಿಕ ಮತ್ತು ಮಾನವೀಯ ಮೌಲ್ಯಗಳು ಅವರ ಬದುಕಿನುದ್ದಕ್ಕೂ ಅರಳಿವೆ. ಜಾತಿ ಧರ್ಮದ ಬಣ್ಣವನ್ನು ಬಳಿದುಕೊಳ್ಳದ, ತತ್ತ್ವ, ಸಿದ್ಧಾಂತದ ಗೋಜಿಗೆ ಒಳಗಾಗದ ಜನಪದ ಸಾಹಿತ್ಯ, ಜನರ ಸಾಹಿತ್ಯವಾಗಿದೆ. ಅನೇಕ ದೇವತೆಗಳ ಉಪಾಸಕರಾಗಿದ್ದರೂ ಎಲ್ಲಾ ದೇವರು ಒಂದೇ, ಅವರಲ್ಲಿರುವ ಶಕ್ತಿ ಒಂದೇ ಅವರು ನಮ್ಮನ್ನು ರಕ್ಷಿಸುವವರು ಎಂಬ ಮುಗ್ಧಭಕ್ತಿಯನ್ನುಳ್ಳವರಾಗಿದ್ದರು ಜನಪದರು. ಯಾವ ಕೃತಕತೆಯ ಸೋಂಕಿಲ್ಲದೆ, ಸರಳತೆ ಮತ್ತು ಸಹಜತೆಯಿಂದ ಬದುಕುವುದರೊಂದಿಗೆ ತಮ್ಮ ಭಾವನೆಗಳನ್ನು ಹಾಡು, ಕುಣಿತ, ಕಥೆಗಳ ಮೂಲಕ ಅಭಿವ್ಯಕ್ತಪಡಿಸಿದರು. ಇವರ ಅಂತರಂಗದ ಭಾವನೆಗಳ ಮತ್ತು ಬದುಕಿನ ಅನುಭವಗಳ ಅಭಿವ್ಯಕ್ತಿಯ ಸಾರಸಂಗ್ರಹವೇ ಜಾನಪದ ಸಾಹಿತ್ಯ.

ಮನುಷ್ಯನು ಬದುಕಿನಲ್ಲಿ ತನಗಾದ ಅನುಭವಗಳನ್ನು ನಾದ, ಲಯ ಮತ್ತು ಶಬ್ದದ ಮೂಲಕ ಅಭಿವ್ಯಕ್ತಗೊಳಿಸಿದಾಗ ಅದು ಹಾಡಾಯಿತು. ತನ್ನ ಸುತ್ತಲೂ ನಡೆಯುವ ವ್ಯವಹಾರದಿಂದ ಮತ್ತು ತನ್ನ ಮೇಲೆ ಗಾಢವಾಗಿ ಬೀರಿದ ಪ್ರಭಾವದಿಂದ ಅನುಭವಿಸಿದ ಅನುಭವಗಳು ಹಾಡಿಗೆ ಚೈತನ್ಯ ತುಂಬಿದವು. ಜಾನಪದ ಹಾಡುಗಳನ್ನು ವಿಶೇಷವಾಗಿ ಎರಡು

ರೀತಿಯಲ್ಲಿ ಗುರುತಿಸಬಹುದು. ಮೊದಲನೆಯದಾಗಿ ದೈಹಿಕಶ್ರಮದ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ಹಾಡುಗಳು. ಎರಡನೆಯದಾಗಿ ಧಾರ್ಮಿಕ, ದೈವಶ್ರದ್ಧೆ, ಉತ್ಸವ, ಉತ್ಸಾಹಗಳ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ಹಾಡುಗಳು. ಮೊದಲಿನ ರೀತಿಯ ಹಾಡುಗಳು ಭೌತಿಕ ಸಂಸ್ಕೃತಿಯಿಂದ ಕೂಡಿದ್ದಾದರೆ ಎರಡನೇ ರೀತಿಯ ಹಾಡುಗಳು ಭಾವನಾತ್ಮಕ ಅಭಿವ್ಯಕ್ತಿರೂಪದ ಆಧ್ಯಾತ್ಮಿಕ ಸಂಸ್ಕೃತಿಯಿಂದ ಕೂಡಿವೆ. ಭೌತಿಕ ಸಂಸ್ಕೃತಿಯ ಹಾಡುಗಳು ಕ್ರಿಯಾತ್ಮಕ ಅಭಿವ್ಯಕ್ತಿರೂಪ ಪಡೆದಿವೆ. ಅವು ಇಂತಿವೆ - ಕುಟ್ಟುವುದು, ಬೀಸುವುದು, ನಾಟಿ ನೆಡುವುದು ಸದಿ (ಕಳೆ) ಕೀಳುವುದು, ಬಂಡಿ ಹೊಡೆಯುವುದು ಇತ್ಯಾದಿ. ಹಬ್ಬಗಳು, ಉತ್ಸಾಹ, ಅರ್ಚನೆ, ಆರಾಧನೆ, ಭಯಭಕ್ತಿ, ದೈವ, ದೇವರುನಂಬುಗೆ, ರೂಢಿ, ಆಚಾರಣೆ ಸಂಪ್ರದಾಯ ಕುಣಿತ, ಹಾಡು, ಕಥೆ ಚಿತ್ರ, ಸುಗ್ಗಿ, ಸಂಭ್ರಮಗಳ ವಿವಿಧ ಸನ್ನಿವೇಶಗಳು ಭಾವನಾತ್ಮಕ ಸಂಸ್ಕೃತಿಯ ಅಭಿವ್ಯಕ್ತಿಯಿಂದ ಆಧ್ಯಾತ್ಮಿಕ ರೂಪಗೊಂಡಿವೆ. ಮನುಷ್ಯನು ಬೌದ್ಧಿಕವಾಗಿ ಮತ್ತು ಮಾನಸಿಕವಾಗಿ ಶ್ರೀಮಂತಗೊಳ್ಳಲು ಹಾಗೂ ನೆಮ್ಮದಿಯಿಂದ ಬದುಕಲು ಆಧ್ಯಾತ್ಮಿಕ ಸಂಸ್ಕೃತಿಯನ್ನು ಬಯಸಿದನು.

ಅಧ್ಯಾತ್ಮದ ಹಾಡುಗಳೆಂದರೆ ದೇವರ ಸ್ತುತಿ, ಸ್ಮರಣೆ ಅಥವಾ ಭಜನೆಮಾಡುವ ಮಿತಿಗೆ ಒಳಪಡದೆ ದೈವಶಕ್ತಿಯನ್ನು ನಂಬುತ್ತ ಅಂತರಂಗದ ಅರಿವನ್ನು ನಿರೂಪಿಸುತ್ತ ಬದುಕಿನ ಅನುಭವಗಳನ್ನು ಪ್ರತಿಪಾದಿಸುವ ಹಾಡುಗಳನ್ನು ಅಧ್ಯಾತ್ಮದ ಹಾಡುಗಳೆಂದು ಹೇಳಬಹುದು. ಪ್ರಕೃತಿಯ ಪ್ರಕೋಪದ ಮಡಿಲಿನಲ್ಲಿ ಬದುಕುವ ಮನುಷ್ಯನಿಗೆ ಗುಡುಗು, ಸಿಡಿಲು, ಮಿಂಚು, ಗಾಳಿ, ಮಳೆ, ಬಿಸಿಲು, ಕಾಡುಮೃಗಗಳಿಂದ ಸಂರಕ್ಷಣೆ ಬೇಕಾಗಿತ್ತು. ಇವುಗಳಿಂದ ಭಯಉಂಟಾಗಿ ತೊಂದರೆಯಿಂದ ಪಾರಾಗಲು ಸ್ವಾಭಾವಿಕವಾಗಿ ಮನುಷ್ಯ ದೇವರನ್ನು ಕಲ್ಪಿಸಿಕೊಂಡು ಆರಾಧಿಸಲು ಪ್ರಾರಂಭಿಸಿದನು. ದೈವ, ದೇವರ ನಂಬುಗೆಯಿಲ್ಲದೆ ಒಂದು ಕ್ಷಣವೂ ಬದುಕುವುದು ಆತನಿಗೆ ಅಸಾಧ್ಯವಾಯಿತು. ಕೃಷಿಪ್ರಧಾನವಾದ ಈ ನಾಡಿನಲ್ಲಿ ಭೂಮಿಪೂಜೆ, ಧಾನ್ಯಪೂಜೆ, ಪಶುಗಳ ಪೂಜೆಗೂ ಮಾನ್ಯತೆ ದೊರೆಯಿತು. ತಮ್ಮ ಸುಖ-ದುಃಖಗಳನ್ನು, ತಪ್ಪು-ಒಪ್ಪುಗಳನ್ನು ದೇವರಲ್ಲಿ ತೋಡಿಕೊಳ್ಳಲು ಕಷ್ಟಗಳನ್ನು ನಿವಾರಣೆ ಮಾಡಲು ದೇವರಲ್ಲಿ ಕೇಳಿಕೊಳ್ಳಲು ಹಾಡಿನ ಅಭಿವ್ಯಕ್ತಿ ಮಾಧ್ಯಮವಾಯಿತು. ಸರಳ, ಪ್ರಾಮಾಣಿಕ ಮತ್ತು ಅಭಿಮಾನದಿಂದ ಬದುಕುವ ಹಳ್ಳಿಗರು ತಮಗೆ ಕಷ್ಟಗಳು ಬಂದಾಗ ಕುಗ್ಗದೆ ಸುಖದಿಂದಯಿದ್ದಾಗ ಹಿಗ್ಗದೆ ಸಮಾನವಾಗಿ ಅನುಭವಿಸುವ ಮನೋಧರ್ಮವುಳ್ಳವರಾಗಿದ್ದರು. ತಮ್ಮ ಕಷ್ಟಸುಖಕ್ಕೆ ದೇವರನ್ನು ದೂಷಿಸದೆ ಕರ್ಮಸಿದ್ಧಾಂತವನ್ನು ನಂಬುವವರಾಗಿದ್ದರು. 'ಕಾಯಕವೇ ಕೈಲಾಸ' ಎಂಬ ತತ್ತ್ವದಲ್ಲಿ ನಂಬಿಕೆವುಳ್ಳವರು. ತಮ್ಮ ನಡೆ, ನುಡಿ ಪವಿತ್ರವಾಗಿದ್ದು ದುಡಿಮೆಯೇ ದೇವರೆಂದು ಭಾವಿಸಿ ತಾವು ಮಾಡುವ ಕೆಲಸಗಳು ಫಲದಾಯಕವಾಗಲೆಂದು ಎಲ್ಲೆಡೆ ಸಂತೃಪ್ತಿ-ಸಮೃದ್ಧಿ ಉಂಟಾಗಲೆಂದು ದೇವರನ್ನು ಸ್ತುತಿಸಿ ಹಾಡುವರು. ಮುಗ್ಧಭಕ್ತಿ ಮತ್ತು ಶ್ರದ್ಧೆಯಿಂದ

ದೈವಶಕ್ತಿಯನ್ನು ನಂಬಿ ಹಬ್ಬ, ಉತ್ಸವಗಳ ಆಚರಣೆಯಲ್ಲಿ ಹಾಡುವರು. ಈ ಮೊದಲಾದ ಸಂದರ್ಭಗಳಲ್ಲಿ ತಮ್ಮ ಆಂತರಿಕ ಸಂವೇದನೆಗಳ ಮತ್ತು ಜೀವನ ಮೌಲ್ಯಗಳ ತುಲನಾತ್ಮಕ ಅಭಿವ್ಯಕ್ತಿಯಿಂದ ಅಂಕುರಿಸಿದ ಜಾನಪದ ಹಾಡುಗಳಲ್ಲಿ ಆಧ್ಯಾತ್ಮ ಸಂಸ್ಕೃತಿ ರೂಪಗೊಂಡಿದೆ. ಆಧ್ಯಾತ್ಮವನ್ನು ಸಂಸಾರದಲ್ಲಿದ್ದುಕೊಂಡೇ ಸಾಧಿಸಬಹುದು ಎಂಬುದಕ್ಕೆ ಜಾನಪದ ಹಾಡುಗಳೇ ಸಾಕ್ಷಿ. ಭಾವನಾತ್ಮಕ ಅಭಿವ್ಯಕ್ತರೂಪದ ಜಾನಪದ ಹಾಡುಗಳಲ್ಲಿ ಆಧ್ಯಾತ್ಮದ ತಿರುಳನ್ನು ಗುರುತಿಸಬಹುದು.

ಕ್ರಿಯಾತ್ಮಕ ಅಭಿವ್ಯಕ್ತ ರೂಪದ ಜಾನಪದ ಹಾಡುಗಳನ್ನು ಬಿಟ್ಟು ಭಾವನಾತ್ಮಕ ಅಭಿವ್ಯಕ್ತರೂಪದ ಜಾನಪದ ಹಾಡುಗಳನ್ನು ಮಾತ್ರ ಇಲ್ಲಿ ಗಮನಿಸಬಹುದಾಗಿದೆ. ಜಾನಪದ ಸಾಹಿತ್ಯದಲ್ಲಿ ಹಾಡುಗಳಿಗೇನು ಬರಗಾಲವಿಲ್ಲ ಎಂಬುದಕ್ಕೆ ಅವರ ನುಡಿಯಲ್ಲೇ ಕೇಳೋಣ.

*ಹಾಡಬಲ್ಲವನೆಂದು ಹಾರ್‍ಯಾರಿ ಬೀಳಬ್ಯಾಡೋ*
*ಹಾಡಿನ ಹಗಿಯು ನನಬಲ್ಲಿ / ಎಲೊ ಜಾಣ*
*ಹಳಿಮಾವು ತಂದು ಅಳದೊಯ್ಯೋ -*

ಹೀಗಿರುವಾಗ ವಿಷಯದ ವ್ಯಾಪ್ತಿಗೆ ಬರುವಂತಹ ಹಾಡುಗಳನ್ನು ಗಮನಿಸಬೇಕಾಗಿದೆ. ಜಾನಪದ ಹಾಡುಗಳು ಆಯಾದೇಶದ ಜನಾಂಗದಲ್ಲಿ ಹಾಸುಹೊಕ್ಕಿವೆ ಎಂಬುದಕ್ಕೆ -

*ಬಾಡದೀ ಹೂ ಹಾಡ, ಕಾಡಮಲ್ಲಿಗೆಯೆಂದು*
*ಕಾಡಗಾಳಿಗಳು ಪರಿಮಳವ / ಹೊತ್ತೊಯ್ದು*
*ನಾಡೊಳಗೆ ಸುಳಿದು ಬೀಸುವವು //*

ಎಂದು ಹೆಮ್ಮೆಯಿಂದ ಹೇಳಿಕೊಂಡಿದ್ದಾರೆ. ಜಾನಪದ ಹಾಡುಗಳನ್ನು ಚಿಕಿತ್ಸಕ ದೃಷ್ಟಿಯಿಂದ ಸಂಶೋಧನೆ ಮಾಡಿದಷ್ಟು ಶಿಷ್ಟಸಾಹಿತ್ಯದಲ್ಲಿ ದೊರೆಯದೆಯಿರುವ ಅನೇಕ ಸಂಗತಿಗಳು ಇಲ್ಲಿ ದೊರೆಯುತ್ತವೆ. ಮುಂಜಾನೆ ಏಳುತ್ತಿದ್ದಂತೆಯೇ ದೇವರನ್ನು ಸ್ಮರಿಸುವುದು ಅನಂತರ ತಮ್ಮ ಕೆಲಸಗಳಲ್ಲಿ ತೊಡಗುವುದು. ನಮ್ಮ ಹಳ್ಳಿಗರಿಗೆ ಒಕ್ಕಲತನವೇ ಮುಖ್ಯ ಉದ್ಯೋಗವಾದಾಗ ಅವರ ಪಾಲಿಗೆ ಭೂಮಿತಾಯಿಯೇ ದೇವರೆಂದು ನಂಬಿ ಹಾಡಿದ್ದಾನೆ. ಹೊಟ್ಟೆಗೆ ಅನ್ನ ಕೊಡುವ ಭೂಮಿದೇವತೆಗೆ ಪ್ರಥಮಸ್ಥಾನವನ್ನು ಕೊಟ್ಟಿದ್ದಾನೆ. ಅನ್ನ ಕೊಡುವ ಭೂಮಿ ತಾಯಿಯನ್ನು ಮರೆಯಬಾರದು ಎಂಬ ಮನುಷ್ಯಧರ್ಮದ ಭಾವವು ಹಾಡಿನಲ್ಲಿ ವ್ಯಕ್ತವಾಗಿದೆ.

*ಏಳುತಾಲೇ ಎದ್ದು ಯಾರ್‍ಯಾರ ನೆನೆಯಾಲೆ*
*ಎಳ್ಳು ಜೀರಿಗೆ ಬೆಳೆಯೋಳ / ಭೂತಾಯಿ*
*ಎದ್ದೊಂದುಗಳಿಗೆ ನೆನೆದೇನು //*

ದೇವರು ಒಲಿದರೆ ಮಾತ್ರ ನಮ್ಮ ಬಾಳು, ಮುನಿದರೆ ಹಾಳು ಎಂಬ ಮುಗ್ಧಭಾವದಿಂದ ದೇವರನ್ನು ಸ್ತುತಿಸುವರು.

*ಶಿವಶಿವ ಎಂದರ ಸಿಡಲೆಲ್ಲ ಬಯಲಾಗಿ*
*ಕಲ್ಲು ಬಂದೆರಗಿ ಕಡೆಗಾಗಿ! ಎಲೆ ಮನವೆ*
*ಶಿವನೆಂಬ ಶಂಬುವ ಬಿಡಬ್ಯಾಡ ॥ -*

ಎನ್ನುವಲ್ಲಿ ಮನುಷ್ಯನ ಬಾಳನೌಕೆಗೆ ದೇವರ ಮೇಲಿರುವ ಅಚಲವಾದ ನಂಬಿಕೆಯೇ ಹರಿಗೋಲು.

*ಮಂದಿ ಮಂದೀಯೆಂದು ಮಂದಿ ನಂಬಲಿ ಹೋದ*
*ಮಂದಿ ಬಿಟ್ಟಾರ ನಡುನೀರ । ಮಲ್ಲಯ್ಯ*
*ತಂದಿ ನನ್ನಕೈಯ ಬಿಡಬ್ಯಾಡ ।*

ಎನ್ನುವಲ್ಲಿ ಮನುಷ್ಯ ಮನುಷ್ಯನಲ್ಲಿ ನಂಬಿಕೆ ಕಳೆದುಕೊಂಡಾಗ, ನಂಬಿದ ಮನುಷ್ಯ ಮೋಸಮಾಡಿದಾಗ, ತನ್ನ ದುಃಖಕ್ಕೆ ಕಾರಣನಾದ ಮನುಷ್ಯನನ್ನು ನಂಬದೆ ದೇವರನ್ನು ನಂಬುವನು. ನೀನಾದರೂ ನನ್ನ ಕೈಬಿಡಬೇಡೆಂದು ದೀನನಾಗಿ ಕೇಳಿಕೊಳ್ಳುವನು. ನಂಬಿಕೆಯಿಲ್ಲದೆ ಮನುಷ್ಯ ಬದುಕಲಿಕ್ಕೆ ಸಾಧ್ಯವಿಲ್ಲ. ಆದರೆ ನಂಬಿಕೆಗೆ ಅರ್ಹರಾದವರನ್ನು ಮಾತ್ರ ನಂಬಬೇಕು. ಮನುಷ್ಯನಿಗಿಂತಲೂ ದೇವರನ್ನು ನಂಬಿಬಾಳುವುದೇ ಮೇಲು ಎಂಬುದನ್ನು ಸ್ಪಷ್ಟವಾಗಿ ತಿಳಿದುಕೊಂಡು ನಡೆಯಬೇಕೆಂಬುದೇ ಅವರ ಕಳಕಳಿಯಾಗಿದೆ. ಈ ತರಹದ ಭಾವ ಮುಂದಿನ ಪದ್ಯದಲ್ಲಿಯೂ ಇದೆ.

*ಮಾದೇವ ನಿನ ಹೊರತು ನಾನ್ಯಾರ ನಂಬಿಲ್ಲ*
*ನಾ ಮಾಡೆನೆಂಬ ಅಳವಿಲ್ಲ । ಮಲ್ಲಯ್ಯ*
*ನೀ ನಡಿಸು ನನ್ನ ಸರುವೆಲ್ಲ ॥*

*ಕರುಣ ಬಂದರ ಕಾಯೊ ಮರಣ ಬಂದರ ಒಯ್ಯೋ ।*
*ಕರುಣೆ ಕಲ್ಯಾಣ ಬಸವಣ್ಣ । ಕಾಶಿಲಿಂಗ*
*ಕಡೆತನ ಕಾಯೊ ಅಭಿಮಾನ* (ಗರತಿಯ ಹಾಡು)

ಈ ಮೇಲೆ ಉದಾಹರಿಸಿದ ಹಾಡುಗಳಲ್ಲಿ ದೈವಭಕ್ತಿ, ಸಮರ್ಪಣಾ ಭಾವನೆ, ಅವನ ಇಚ್ಛೆಯಿಲ್ಲದೆ ಏನು ಮಾಡಲಾಗುವುದಿಲ್ಲೆಂಬ ಅಚಲವಾದ ನಂಬಿಕೆ ಹಾಗೂ ಮನುಷ್ಯನ ಸದ್ಗುಣಗಳನ್ನು ಬಹಿರಂಗ ಪಡಿಸುವುದು, ಸಾವಿಗೆ ಅಂಜದೆ ಆತನ ಕರೆ ಬಂದಾಗ ಹೋಗ ಬೇಕಾದದ್ದು ಯಾರಿಂದಲೂ ತಪ್ಪಿಸಲು ಸಾಧ್ಯವಿಲ್ಲ. ಆದರೆ ಮನುಷ್ಯ ಕಡೆತನಕ ಅಭಿಮಾನದಿಂದ ಬದುಕಬೇಕು ಅದನ್ನು ಮಾತ್ರ ದಯಪಾಲಿಸಬೇಕೆಂದು ವಿನಮ್ರವಾಗಿ ದೇವರಲ್ಲಿ ಕೇಳುವನು.

ದೇವರು ಸರ್ವಶಕ್ತನು, ಮಹಿಮಾತೀತನು, ಸರ್ವವ್ಯಾಪಿ ಎಂಬ ಕಲ್ಪನೆಯಿದ್ದರೂ ಅವನು ತೀರ ಹತ್ತಿರದವನು ಎಂದು ಭಾವಿಸುವನು. ತಮ್ಮಿಬ್ಬರ ಮಧ್ಯೆ ಅನ್ಯೋನ್ಯ ಸಂಬಂಧವಿದೆ

ಯೆಂದು ನಂಬಿದವನು. ಹೀಗಾಗಿ ಅವನ ಜೊತೆಯಲ್ಲಿ ಸಲಿಗೆಯಿಂದ ತನ್ನ ಕ್ಷೇಮ ಸಮಾಚಾರವನ್ನು ಹೇಳಿಕೊಳ್ಳುವದು, ಆತನ ಕಷ್ಟಕ್ಕೆ ತಾನು ದುಃಖಿಸುವುದು ಇಂತಹ ಭಾವನಾತ್ಮಕ ಸಂಬಂಧದ ಹಾಡುಗಳನ್ನು ಹಾಡಿದ್ದಾರೆ ಎಂಬುದನ್ನು ಈ ಕೆಳಗೆ ಕೊಟ್ಟ ಹಾಡಿನಲ್ಲಿ ಗುರುತಿಸಬಹುದು.

*ಕೂಡಲ ಸಂಗಯ್ಯಾ ಹೊಳಿಯಾಗ ಹ್ಯಾಂಗಿದ್ದಿ*
*ಹಳ್ಳೊತ್ತಿ ಸಣ್ಣ ಮಳಲೊತ್ತಿ । ಗಂಗೀಯ*
*ನೀರೊತ್ತಿ ಲಿಂಗ ನೆನೆದಾನ ॥ -*

ಎನ್ನುವಲ್ಲಿ ದೇವರು ಬೇರಿಲ್ಲ ತಾನು ಬೇರಿಲ್ಲ ಅವನ ಕಷ್ಟವೇ ತನ್ನ ಕಷ್ಟ ಎಂದು ಭಾವಿಸುವಲ್ಲಿ ದೇವರು ಸಾಂಕೇತಿಕವಾಗಿದ್ದರೂ ಹಾಡಿನಲ್ಲಿರುವ ಭಾವ ಮನುಷ್ಯನಿಗೆ ಸಂಬಂಧಿಸಿದ್ದು. ಮನುಷ್ಯರು ಪರಸ್ಪರ ಸುಖ-ದುಃಖಗಳನ್ನು ಹಂಚಿಕೊಂಡು ಬಾಳಬೇಕೆಂದು ಹೇಳುವ ಪರೋಕ್ಷ ಭಾವವನ್ನು ಕಾಣುತ್ತೇವೆ.

*ಆರ್ಗುಣ ಅಳಿಬೇಕು ಮೂರ್ಗುಣ ತಿಳಿಬೇಕು*
*ಆರು ವಿದ್ಯಾಗೊಳಿರಬೇಕು । ತನ್ನಲ್ಲಿ*
*ಆರೂಢನಾಗಿ ನಡಿಬೇಕೊ । -*

ಎನ್ನುವಲ್ಲಿ ಹಳ್ಳಿಗರು ಸಂಸಾರದಲ್ಲಿದ್ದುಕೊಂಡು ಸಂಸಾರದ ವ್ಯಾಮೋಹಕ್ಕೆ, ಆಸೆ ಆಮಿಷಗಳಿಗೆ ಬಲಿಯಾಗದೆ ವಿಚಾರವಂತ ಜ್ಞಾನಿಯಾಗಿ ನಡೆಯಬೇಕೆಂದು ತಿಳಿದುಕೊಂಡ ಅವರು ಕರ್ಮಯೋಗಿಗಳಾಗಿ ಆಧ್ಯಾತ್ಮಿಕ ಪ್ರಜ್ಞೆಯನ್ನು ಬೆಳೆಸಿಕೊಂಡರು. ಗರತಿಯ ಹಾಡುಗಳು ಕ್ರಿಯಾತ್ಮಕ ಅಭಿವ್ಯಕ್ತಿ ಬಹಿರಂಗ ಉಪಾಸನೆ ಉತ್ಸವಗಳಿಗೆ ಮಾತ್ರ ಮೀಸಲಾಗಿರದೆ ಅಂತರ್ಮುಖಿ ಸಾಧನೆ, ಸಾತ್ವಿಕ ಭಕ್ತಿ ಮತ್ತು ದೈವಿಕ ಭಕ್ತಿಯ ಮುಗ್ಧ ಮನಸ್ಸಿನ ಹಿಂದೆ ಆಧ್ಯಾತ್ಮದ ಸ್ವರೂಪ ಅಡಗಿದೆ. ತನ್ನ ತನು, ಮನ ದೇವರಿಗೆ ಮೀಸಲೆಂದು ತನ್ನನೇ ಸಮರ್ಪಿಸಿಕೊಳ್ಳುವ ಭಾವನೆವುಳ್ಳ ಅವರು ಅಧ್ಯಾತ್ಮದ ಮಟ್ಟವನ್ನು ಮುಟ್ಟಿದವರೆಂದು ನಿಸ್ಸಂದೇಹವಾಗಿ ಹೇಳಬಹುದು. ಈ ವಿಚಾರವನ್ನು ಕೆಳಗೆ ಉದಾಹರಿಸಿದ ಹಾಡಿನಲ್ಲಿ ವ್ಯಕ್ತವಾಗುವುದು.

*ಮನವ ಮಲ್ಲಿಗಿ ಮಾಡಿ ತನುವದ ಕ್ಯಾದಗಿ ಮಾಡಿ*
*ನನ್ನೈದು ಬೆರಳ ಸಮಮಾಡಿ । ನೀಡೇನ*
*ನನ್ನ ಸಲಹಂಥ ಗುರುವೀಗೆ ॥*

*ಹೂವಿನಾಗ ಹುದುಗ್ಯಾನ । ಮಾಲ್ಯಾಗ ಮಲಗ್ಯಾನ*
*ಮೊಗ್ಗ್ಯಾಗ ಕಣ್ಣು ತೆರೆದಾನ । ಅಂಗಯನ*
*ನೋಡಟಿಗೆ ನಿದ್ದಿ ಬಯಲಾಗಿ*

ಎನ್ನುವಲ್ಲಿ ದೇವರು ಸರ್ವವ್ಯಾಪಿಯಾಗಿದ್ದಾನೆ. ಸರ್ವಾಂತರ್ಯಾಮಿ. ದೈವಭಕ್ತಿಯ ಸುಖದ ಅನುಭವ ಅಂತರಂಗದಲ್ಲಿ ಅನುಭವಿಸಬಹುದು ಹೊರತು ಬಾಹ್ಯದಲ್ಲಿ ತೋರಿಸಲಾಗುವುದಿಲ್ಲ. ನಿದ್ದೆ ಬಯಲಾಗಿ ಅಂದರೆ ದೇವರನ್ನು ವಿಶ್ವರೂಪದಲ್ಲಿ ಕಾಣಬೇಕು ಎಂಬ ನಿಲುವು ಉಳ್ಳವರಾಗಿದ್ದರು.

*ಇದು ನನ್ನಂಗಳ ಶ್ರೀಗಂಧನಿತಾವ*
*ಬಂದಿದಾನೇನ ಶ್ರೀಹರಿ ನನಮನಿಗೆ*
*ಗಂಧದ ಮಡುವ ಕಲಕೂತ*
*ಕಾಸೀಗೆ ಹೋಗಲಿಕ ಏಸೊಂದು ದಿನ ಬೇಕ*
*ತಾಸ್ಹೊತ್ತಿನಾಗ ತವರೂರ / ಮನಿಯಾಗ*
*ಕಾಸಿ ಕುಂತಾಳ ಹಡೆದವ್ವ*

ಮೇಲೆ ಉದಾಹರಿಸಿದ ಮೊದಲಿನ ಹಾಡಿನಲ್ಲಿ ದೈವಭಕ್ತಿಯ ಮುಗ್ಧಭಾವದ ಅಭಿವ್ಯಕ್ತಿಯಿದ್ದರೆ ಇನ್ನೊಂದು ಹಾಡಿನಲ್ಲಿ ವೈಚಾರಿಕ ಭಾವವಿದೆ. ರೈತನು ಬೆವರುಸುರಿಸಿ ಹೊಲದಲ್ಲಿ ಉತ್ತು ಬಿತ್ತಿ ಬೆಳೆಯನ್ನು ತನ್ನೆತ್ತರಕ್ಕೆ ಬೆಳೆದು ನಿಂತಾಗ ಆತನಿಗೆ ಎಲ್ಲಿಲ್ಲದ ಆನಂದ ಉಂಟಾಗುವುದು. ಸುಗ್ಗಿಯ ಸಂದರ್ಭ ರೈತನಿಗೆ ದೊಡ್ಡ ಹಬ್ಬವಿದ್ದಂತೆ. ತನ್ನ ಹೊಲದಲ್ಲಿ ಬೆಳೆದ ಬೆಳಸಿನಲ್ಲಿ ಮುಷ್ಠಿದಾನವನ್ನು ಹಳ್ಳಿಯಬಳಗಕ್ಕೆ ಮಾಡುವನು. ದಾಸೋಹದ ಸುಖ ವನ್ನು ಕಾಣುವನು. ದುಡಿಮೆಯ ಪ್ರತಿಫಲದಲ್ಲಿಯೂ ದೇವರನ್ನು ಸ್ಮರಿಸಲಾರದೆ ಇರಲಾರನು.

*ನಮ್ಮದೆನ್ನುವ ಬದುಕು ಸೊಮ್ಮು ಶಿವನದು ಕಾಣೊ*
*ಹುಮ್ಮಸವು ಬೇಡ ರೈತನಿಗೆ / ಕೈಲಾಸ*
*ಒಮ್ಮನದಿ ನೀಡೆ ಕಣ್ಮುಂದೆ //*

*ದೈವ ದೇವರ ಹಂತಿ, ಭವದೊಳಗೆ ನಮ್ಹಂತಿ*
*ತೇದುಂಡ ಹಂತಿ ನಮ್‌ಬಾಳು ಒಕ್ಕಲಿಗ*
*ಕೋಡ ತೆನಿಹಂತಿ ಜನುಮಽಕೂ // -*

ಎಂಬ ಇವೆರಡು ಹಾಡಿನಲ್ಲಿ ಕಾಯಕತತ್ತ್ವ ನೀತಿ ಇದೆ. ಕಾಯಕಕ್ಕೆ, ದೈವಭಕ್ತಿಗೆ ಮತ್ತು ನೈತಿಕ ಜೀವನಕ್ಕೆ ಮಾನವೀಯ ಮೌಲ್ಯಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಟ್ಟು ಬದುಕಿದ್ದ ಅವರು ಆತ್ಮದ ಪರಿಶುದ್ಧತೆಯಿಂದ ಪರಮಾತ್ಮನಲ್ಲಿ ಒಂದಾಗಲು ಬಯಸುವ ಅವರ ಸಂಸ್ಕೃತಿ ಆಧ್ಯಾತ್ಮಿಕವಾದದ್ದು. ಒಬ್ಬದೇವರನ್ನು ಕುರಿತು ಸ್ಮರಿಸದೆ ಎಲ್ಲಾ ಪೌರಾಣಿಕ ದೇವ-ದೇವತೆಗಳ, ಊರ ಒಳಗೆ ಹೊರಗೆ ಇರುವ ದೇವರ, ಹೆಣ್ಣು ದೇವತೆಗಳ ಮತ್ತು ಸೂರ್ಯ, ಚಂದ್ರ, ಅಗ್ನಿ, ಇಂದ್ರ, ವಾಯು, ಪ್ರಾಕೃತಿಕ ದೇವರ ಸ್ತುತಿಮಾಡುವರು. ಶರಣರ ಚರಿತ್ರೆಗಳನ್ನು ಕುರಿತು ಹಾಡುವರು. ಹೀಗೆ ಅನೇಕ ದೇವತಾಉಪಾಸಕರಾಗಿದ್ದರೂ ಅವರ ಭಕ್ತಿ,

ಶ್ರದ್ಧೆಯಲ್ಲಿ ಏಕತೆ ಮತ್ತು ಸಮಾನತೆಯ ಭಾವವಿದೆ.

ಋತುಮಾನಗಳ ಬದಲಾವಣೆಗೆಗೆ ತಕ್ಕಂತೆ ನಮ್ಮಲ್ಲಿ ಅನೇಕ ಹಬ್ಬಗಳು ರೂಢಿಯಲ್ಲಿವೆ. ತಾವು ಆಚರಿಸುವ ಹಬ್ಬಗಳು ಶುಷ್ಕ ಆಚರಣೆಯಿಂದ ಆರ್ಥಿಕ ಹೊರೆಯಿಂದ ಮತ್ತು ಧರ್ಮಬಾಹಿರವಾಗಿದ್ದರೆ ಅಂತಹ ಹಬ್ಬಗಳ ಬಗ್ಗೆ ಚಿಂತಿಸುವ ಮನೋಭಾವ ಕೆಳಗಿನ ಹಾಡಿನಲ್ಲಿ ಅಭಿವ್ಯಕ್ತವಾಗಿದೆ.

*ನಾಳೆ ಬೆಳಗಾಗ ನಮಗ್ ಹಬ್ಬ ಬಂತಲ್ಲ*
*ನಮಗ್ ಹಬ್ಬ ಬಂತಲ್ಲ*
*ಗೋಧಿ ಬೆಲ್ಲಗಳಿಲ್ಲ ಕಾಯಿ ಮೊದಲಿಲ್ಲ ॥ ೧ ॥*
*ಹಬ್ಬ ವೆಂಬುವುದು ಹಾಗಲ್ಲ ಜಾಣೇ*
*ಅದು ಹಾಗಲ್ಲ ಜಾಣೇ*
*ಉರ್ವಿಗೀಶ್ವರನ ಪೂಜೆ ಮಾಡೋದೆ ಹಬ್ಬ ॥ ೨ ॥*
*ಕಣ್ಣು ಕೈಕಾಲಗಳು ಇರುವೋದೆ ಹಬ್ಬ*
*ನಮಗಿರುವೋದೆ ಹಬ್ಬ*
*ಪುಣ್ಯವಂತರ ನೋಡಿ ನಲಿವೋದೆ ಹಬ್ಬ ॥ ೩ ॥*
*ಸಾಲವಿಲ್ಲದ ಸಂಸಾರವೇ ಹಬ್ಬ*
*ಸಂಸಾರವೇ ಹಬ್ಬ*
*ಜೀವಕ್ಕೆ ವ್ಯಾಧಿ ಇಲ್ಲದಿರುವೋದೆ ಹಬ್ಬ ॥ ೪ ॥*
*ಕಾಶಿಯ ಒಳಗೆ ವಾಸವೆ ಹಬ್ಬ*
*ನಮಗೆ ವಾಸವೆ ಹಬ್ಬ*
*ಮಣಿಕರ್ಣಿಕೆಯಲ್ಲಿ ಸ್ನಾನವೆ ಹಬ್ಬ ॥ ೫ ॥*
*ಹಂಗು ಇಲ್ಲದೆ ಉಂಬೋದೆ ಹಬ್ಬ*
*ದುಡಿದುಂಬೋದೆ ಹಬ್ಬ*
*ಕರ್ಣಂಗಳಲ್ ಹರಿಕಥೆ ಕೇಳೋದೆ ಹಬ್ಬ ॥ ೬ ॥ (ಸಂಪುಟ ೧, ಪುಟ ೪೬೬)*

ಸಿಹಿ ಅಡುಗೆ ಮಾಡಿ ತಿನ್ನುವುದೇ ಹಬ್ಬ ಆಗೋದಿಲ್ಲ. ಆಯಾ ಹಬ್ಬದ ಆಚರಣೆಯಿಂದ ಮಾನಸಿಕ ವಿಕಾಸ ಆಗಬೇಕೆಂಬುದೇ ಹಬ್ಬಗಳ ಉದ್ದೇಶ. ಹಬ್ಬಗಳು, ಉತ್ಸವಗಳು ಜನರ ಧಾರ್ಮಿಕ ಜೀವನವನ್ನು ರೂಪಿಸುವುದರಲ್ಲಿ ಬಹಳ ಪ್ರಮುಖ ಪಾತ್ರವನ್ನು ವಹಿಸಿವೆ. ಹಬ್ಬಗಳು ಉತ್ಸವಗಳು ಆಧ್ಯಾತ್ಮಿಕ ಜಾಗೃತಿಯ ಸಂಕೇತವಾಗಿ ಪರಿಣಮಿಸಿವೆ. ಜನಪದರು ದೇವರನ್ನು ನಂಬಿ ಭಕ್ತಿಯಿಂದ ಹಾಡಿ ಹೊಗಳಿ ಬದುಕಿದ್ದ ಅವರು ತಮ್ಮ ನಡೆ-ನುಡಿಗಳಲ್ಲಿ ಜೀವಾತ್ಮ ಪರಮಾತ್ಮರ ಬೆಸುಗೆಯೊಂದಿಗೆ ಅಧ್ಯಾತ್ಮದ ಮಟ್ಟವನ್ನು ಮುಟ್ಟಿದ್ದರು.

■

# ಭಾರತೀಯ ಶ್ರೌತಾ-ಶ್ರೌತ ಸಾಹಿತ್ಯ ಮತ್ತು ಧರ್ಮ

ಡಾ॥ ವ್ಹಿ. ಎಸ್. ಕಂಬಿ

---

ಈ ಲೇಖನದ ತಲೆಬರಹವು ತುಂಬಾ ಪರಿಚಿತ ಪದಗಳುಳ್ಳದ್ದು ಎಂದು ಅನ್ನಿಸುವುದಿಲ್ಲ. ಆದರೆ ಇಲ್ಲಿ ಬಳಸಲಾದ ಪದಗಳು ಪ್ರಾಚೀನ ಶಾಸ್ತ್ರಸಾಹಿತ್ಯದಲ್ಲಿರುವಂಥವು. 'ಶ್ರೌತಾಶ್ರೌತ'ದಲ್ಲಿಯ ಮೊದಲನೆಯ ಪದವು 'ಶ್ರೌತ' ಎಂಬುದು. ಎರಡನೆಯ ಪದವು ಅಶ್ರೌತವೆಂಬುದು. ಮೊದಲನೆಯ ಪದದ ವಿರುದ್ಧಾರ್ಥವನ್ನು ಎರಡನೆಯ ಪದವು ಕೊಡುತ್ತದೆ. ಶ್ರೌತ ಎಂಬುದು ಶ್ರೋತ್ರಕ್ಕೆ ಸಂಬಂಧವುಳ್ಳದು ಎಂಬರ್ಥ ಕೊಡುತ್ತದೆ - ವೇದ ಬೋಧಿಸಿದಂಥದು, ಯಜ್ಞಮೂಲವಾದುದು. ಶ್ರೌತಂ [ಶ್ರೋತ್ರಸ್ವಾರ್ಥೇ ಅಣ್] The ear proficiency in the Vedas ಎಂದು ಆಪ್ಟೆಯವರ The practical sanskrit English Dictionary ಯಲ್ಲಿ ಕೊಡಲಾಗಿದೆ. ಶ್ರೌತ ಅಂದರೆ ಕೇಳ್ವ, ಅಶ್ರೌತ ಎಂದರೆ ಕೇಳಲಿಕ್ಕಾಗದ ಅಥವಾ ಶ್ರೋತ್ರಗ್ರಾಹ್ಯವಲ್ಲದ ಕೇಳಲನರ್ಹ, ಕೇಳಲಿಲ್ಲದ. ಶ್ರುತಿಸಾಹಿತ್ಯವು, ವೇದ ಸಾಹಿತ್ಯವು, ಶ್ರೌತ ಸಾಹಿತ್ಯ ಶ್ರುತಿಯು ಹೇಳದ್ದನ್ನು - ವೇದ ಹೇಳದ್ದು ಅಶ್ರೌತ ಸಾಹಿತ್ಯ. ಇಲ್ಲಿರುವ 'ಶ್ರುತಿ' ಪದವು ವೇದವೆಂದಿದ್ದರೂ ವೇದವೆಂಬ ಸಾಮಾನ್ಯ ಪದದ ಅರ್ಥ ಇದಕ್ಕಿರದೆ ವಿಶೇಷಾರ್ಥವುಂಟು. ಈ ವಿಚಾರ ಮುಂದಿನ ಪುಟಗಳಲ್ಲಿ ನೋಡಬಹುದು.

'ಶ್ರುತಿ' ಎಂದರೆ ಕೇಳಿ ಅರಿತದ್ದು. ಒಬ್ಬರು ಹೇಳಿದ್ದನ್ನು ಇನ್ನೊಬ್ಬರು ಕೇಳಿ ಕಲಿವ ಅಥವಾ ತಿಳಿಯುವ ಕಾಲವೊಂದಿತ್ತು. ಇದು ಬರಹ ಗೊತ್ತಿಲ್ಲದ ಕಾಲ. ಮೊಟ್ಟಮೊದಲು

ಹೇಳಿದವರಾರು ? ಅವರು ಹೇಳಿದರೆ ?ಎಂಬ ಪ್ರಶ್ನೆಗಳು ಹುಟ್ಟುತ್ತವೆ. ವೇದವನ್ನು ಹೇಳದವ ಪುರುಷ ಅಥವಾ ವ್ಯಕ್ತಿಯಲ್ಲ. ಆತ ಅಥವಾ ಅದು, ಇಲ್ಲವೆ ಅವಳು ಪರಬ್ರಹ್ಮ. ಭಾರತೀಯರು ಪರಬ್ರಹ್ಮವನು ಈ ಮೂರೂ ಲಿಂಗಗಳಿಂದ ಸಂಬೋಧಿಸಿದ್ದುಂಟು. ಆದರೆ ಪಾಶ್ಚಿಮಾತ್ಯರಿಗೆ ಇಂಥ ಪ್ರಯೋಗ ಗೊತ್ತಿರಲಿಲ್ಲದಷ್ಟು ಪುರಾತನ ಪ್ರಯೋಗವಿದು. ಈ ಪರಬ್ರಹ್ಮವು ಹೇಳಿದ್ದನ್ನು ಕವಿಗಳು ನೋಡಿದರು. ಅವರೇ ದ್ರಷ್ಟಾರರು. ಅಂದರೆ ಕಿವಿಗಳಿಂದ ಅರಿಯಲಸಾಧ್ಯವಾದ ರೀತಿಯಲ್ಲಿದ್ದುದನ್ನು ಆ ಕವಿಗಳು (ದ್ರಷ್ಟಾರರು) ನೋಡಿ ತಿಳಿದುಕೊಂಡರು. ಪರಬ್ರಹ್ಮವು ಕಣ್ಣಿನಿಂದ ಅಂದರೆ ಪ್ರಕಾಶ ರೂಪದಲ್ಲಿ ವ್ಯಕ್ತಪಡಿಸಿತು. ಆದ್ದರಿಂದಲೆ ಕವಿಗಳು ಮಾತ್ರ ದ್ರಷ್ಟಾರರೆಂದು ಹೇಳುವುದು. ಕಣ್ಣಿನಿಂದ ಕಂಡದ್ದನ್ನು ಶಬ್ದರೂಪದಲ್ಲಿ ತಮ್ಮ ಸತ್ಪುತ್ರರಿಗೆ ಅಥವಾ ಶಿಷ್ಯರಿಗೆ ಹೇಳಲನುವಾಗಲು, ಈ ಶ್ರೋತೃಮುಖಾಂತರ ಕಲಿಯುವ ಪದ್ಧತಿ ಬಳಕೆಯಲ್ಲಿ ಬಂತು. ಈ ವಿವರಣೆಗೆ ಒಂದು ಚಿಕ್ಕ ಚಿರಪರಿಚಿತ ಉದಾಹರಣೆಯನ್ನು ಕೊಡಬೇಕು ಸಮರ್ಥಿಸಲು - 'ದಕ್ಷಿಣಾಮೂರ್ತಿ ಬೋಧಾ ಪದ್ಧತಿ' ಎಂಬ ಮಾತನ್ನು ಕೆಲವರಾದರೂ ಕೇಳದಿಲ್ಲ. ಇದಕ್ಕೆ ಆಧುನಿಕ ಯುಗದ ಒಂದು ಉದಾಹರಣೆ ಕೂಡ ಉಂಟು. ಇದೇ ಶತಮಾನದಲ್ಲಿ ಜೀವಿಸಿದ್ದ ಅರುಣಾಚಲದ ರಮಣ ಮಹರ್ಷಿಗಳು ಅವರೆಡೆಗೆ ಸಮಸ್ಯೆಗಳನ್ನು ತೆಗೆದುಕೊಂಡು ಬಂದು, ಅವರ ದರ್ಶನ ಪಡೆದು ತಮ್ಮ ಸಮಸ್ಯೆಗಳಿಗೆ ಉತ್ತರ ಹೇಳುವರೆಂದು ಅವರ ಸಮ್ಮುಖದಲ್ಲಿ ಕೂತುಕೊಂಡವರು ಮಹರ್ಷಿಗಳ ದೃಷ್ಟಿ ಅವರ ದೃಷ್ಟಿಯನ್ನು ಸಂಧಿಸಲು ಸಮಸ್ಯೆಗಳಿಗೆಲ್ಲ ಉತ್ತರ ದೊರೆತ ಉದಾಹರಣೆಗಳುಂಟು. ಅವರು ಏನನ್ನೂ ಮಾತನಾಡದೇ ಕೇವಲ ಅವರನ್ನು ನೋಡಲಾಗಿ ಸಮಸ್ಯೆಗಳಿಗೆ ಉತ್ತರವೂ ಅವರಲ್ಲಿಯೇ ದೊರೆಯುವ ಈ ಪದ್ಧತಿಯೇ ದಕ್ಷಿಣಾಮೂರ್ತಿಯ ಪದ್ಧತಿ. ದಕ್ಷಿಣಾಮೂರ್ತಿ ಎಂದರೆ ಪರಶಿವ. ದಕ್ಷಿಣಾಮೂರ್ತಿಯ ಬೋಧೆ ಕೇವಲ ನೋಟದಿಂದ ಆಗುವಂಥದು. ಈ ಪರಶಿವನೇ ವೇದವನ್ನು ಕವಿಗಳ ಕಣ್ಣುಗಳು ನೋಡುವಂತೆ ತನ್ನ ಕಂಗಳ ಬೆಳಕಿನಿಂದ ತಿಳಿಸಿದ. ಆ ಕವಿ ಎಂದರೇ ರುದ್ರ. ಈಶಾವಾಶ್ಯೋಪನಿಷತ್ತಿನ[೧] ಕವಿಯ ಲಕ್ಷಣವಂತೆ[೨] ಶ್ವೇತಾಶ್ವತರೋಪನಿಷತ್ತು ರುದ್ರನು ಪ್ರಥಮದಲ್ಲಿ ಹಿರಣ್ಯಗರ್ಭನಿಗೆ ವೇದ ಬೋಧಿಸಿದ. ಆ ವೇದಾರ್ಥವನ್ನರಿತುಕೊಂಡು ಹಿರಣ್ಯಗರ್ಭ ಪ್ರಪಂಚವನ್ನು ಸೃಷ್ಟಿಮಾಡಿದ. ಈ ಪ್ರಥಮ[೩] ಭಿತ್ತಿಯಿಂದ ಹೊರಟ ವೇದವು ರುದ್ರನಿಂದ ಹೊರಟುದೇ ಸೈ. ಈ ಮಾತನ್ನು ಡಾ|| ಆರ್. ಜಿ. ಭಾಂಡಾರಕರ ಅವರ ವಿವರಣೆಯು ಸಮರ್ಥಿಸುತ್ತದೆ. ಅವರು ರುದ್ರನ ಬಯಲ ಸ್ವರೂಪವನ್ನು ಹಾಗೂ ಆತನ ಈಶ್ವರ (Personal God) ಸ್ವರೂಪವನ್ನು ಅನುಕ್ರಮವಾಗಿ ತಿಳಿಸಿದ್ದಂತಿದೆ. The elevated notions about the nature and his relations to man and the world had been in

೧. ಈಶೋಪನಿಷತ್ತು

೨. ಯೋ ಬ್ರಾಹ್ಮಣಂ ವಿದಧಧಾತಿ ಪೂರ್ವಂ ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ ಉ ತಂ ಹ ದೇವಾತ್ಮ ಬುದ್ಧಿ ಪ್ರಕಾಶಂ ಮುಮುಕ್ಷುರ್ವೈ ಶರಣಮಹಂ ಪ್ರಪದ್ಯೇ || ಶ್ವೇ.ಉ ೬.೧೮

೩. ಬೃಹದಾರಣ್ಯಕ ಉಪನಿಷತ್ತು ೨.೪.೧೦., ೨.೧.೧೦.

the time of the upanisads have been distangled from their connection with the impersonal brahman and transferred to the God who had at that time when the upanisads were written acquired a living and active personality in the midst of the people. This God was Rudra who as we have seen had by that time of Atharvaveda attained to the dignity of the supreme God.[೪] ಆತನು ಪರಬ್ರಹ್ಮಸ್ವರೂಪಹೊಂದಿದ ವಿಚಾರವನ್ನು ಋಗ್ವೇದವೇ ತಿಳಿಸುತ್ತದೆ[೫]. ಆತನ ಮಹಾದೇವತ್ವ ಸಿದ್ಧಿಯು ಶತಪಥ ಬ್ರಾಹ್ಮಣದಲ್ಲಿ, ಯಜುರ್ವೇದದ ಶತರುದ್ರೀಯದಲ್ಲಿ ಕಂಡುಬರುವುದು. ಅದೇ ರೀತಿ ಆತನು ವಿಷ್ಣುವು ಆರ್ಯಧರ್ಮದಲ್ಲಿ ಕಾಣಿಸಿಕೊಳ್ಳುವ ಪೂರ್ವದಲ್ಲಿ ಆರ್ಯಧರ್ಮ ಸಮ್ರಾಟ, ಏಕೈಕ ದೊರೆ ಎಂದು ಭಂಡಾರಕರರು ಬರೆಯುವದು ಆತನ ಈಶ್ವರತ್ವ ಕುರಿತೇ ಬರೆದದ್ದಾಗಿದೆ. ವೇದ ಕಾಲದಿಂದಲೂ ರುದ್ರನು ಪರಬ್ರಹ್ಮ ಮತ್ತು ಈಶ್ವರ. ಈತನೇ ವೇದ ಕರ್ತೃ ಎಂಬುದಕ್ಕೆ ಈ ಒಂದೆರಡು ವಿಚಾರಗಳು ಸಮರ್ಥನೆಯನ್ನು ಒದಗಿಸುತ್ತವೆ. ಈತನೇ ಆಪ್ತ ಈತನಿಂದ ಈ ಶ್ರೌತ ಸಾಹಿತ್ಯ ಮತ್ತು ಅಶ್ರೌತ ಸಾಹಿತ್ಯವೆಂಬೆರಡೂ ಸೃಷ್ಟಿ ಗೊಂಡವು.

'ಶ್ರೌತ' ಮತ್ತು 'ಅಶ್ರೌತ' ಸಾಹಿತ್ಯಗಳ ಕರ್ತೃ ರುದ್ರನೆಂದಾಗ ಒಂದಿಷ್ಟು ಮುಜುಗರ ಆಗುತ್ತದೆಯಲ್ಲವೆ. ಶ್ರೌತ ಮತ್ತು ಅಶ್ರೌತ ವಿಚಾರಗಳು ರುದ್ರನು 'ಯಜ್ಞ ಪತಿ' ಮತ್ತು 'ಯಜ್ಞ ಭಂಜಕ' ಎಂಬ ವೇದ ವಿಚಾರದಲ್ಲಿ ವೇದಪರ ಮತ್ತು ವೇದ ವಿರೋಧ ಆಚಾರಗಳ ಪ್ರಶ್ನೆ ಉಂಟಾಗುತ್ತದೆ. ವೇದ ಧರ್ಮಕರ್ಮಗಳ ಪತಿಯಾಗಿರುವುದೇ ಶ್ರೌತಧರ್ಮ ಆ ಗಳಿಗೆ ಅಧಿಪತಿ ಎಂದರ್ಥ. ವೇದ ಧರ್ಮ ಕರ್ಮಗಳ (ಯಜ್ಞಗಳ ಧ್ವಂಸಮಾಡಿದುದೇ ವೇದ ಧರ್ಮ ವಿರೋಧ ಪರತೆ. ಇದೇ ಅಶ್ರೌತತೆ. ಸಾಹಿತ್ಯದಲ್ಲಿ ಮತ್ತು ಧರ್ಮದಲ್ಲಿ ಅಶ್ರೌತತೆಯಿರುವುದು ಖಚಿತವಾಗುತ್ತದೆ.

ಶ್ರೌತ ಸಾಹಿತ್ಯವು ವರ್ಣಾಶ್ರಮಧರ್ಮ ಬೋಧಿಸುತ್ತದೆ. ವರ್ಣಕರ್ಮಗಳ, ಯಜ್ಞಯಾಗಾದಿಗಳ ವಿವರವನ್ನು ಪ್ರತಿ ಪಾದಿಸುವುದು ಅದರ ಉದ್ದೇಶ. ವರ್ಣಕರ್ಮಗಳೆಂದರೆ ವೇದಾಧ್ಯಯನ ಬ್ರಾಹ್ಮಣ ವರ್ಣ ಕರ್ಮ. ಯಜ್ಞ ಯಾಗಾದಿಗಳನ್ನು ನೆರವೇರಿಸುವಲ್ಲಿ ಪೌರೋಹಿತ್ಯವನ್ನು ವಹಿಸುವುದು ಬ್ರಾಹ್ಮಣವರ್ಣದ ಧರ್ಮ ಅಥವಾ ಕರ್ತವ್ಯ. ಯಜ್ಞಯಾಗಾದಿಗಳ ಧ್ವಂಸಮಾಡುವುದನ್ನು ತಡೆಯುವುದು, ಉಳಿದ ಧರ್ಮದವರ ಕರ್ತವ್ಯಗಳಿಗೆ ಭಂಗವಾಗದಂತೆ, ಅವರನ್ನು ಭಯಭೀತಿಗಳಿಂದಲೂ ಶಸ್ತ್ರಬಳಸಿ ಹೋರಾಡುವುದು ಕ್ಷತ್ರಿಯರ ಧರ್ಮ. ಯುದ್ಧತರಬೇತಿ ಪಡೆಯುವುದು ಅವರು ಕಲಿಯಬೇಕಾದ ವಿದ್ಯೆ. ವೈಶ್ಯರು ವಾಣಿಜ್ಯೋದ್ಯಮ ಪರಿಜ್ಞಾನ ಸಂಪಾದಿಸುವುದು, ಕೃಷಿ ಮುಂತಾದ ಕರ್ಮಗಳಿಂದ ಸಂಪದ ಅಭಿವೃದ್ಧಿಗೊಳಿಸುವುದು ಇವರ ಕರ್ಮ. ಇವರೆಲ್ಲರ ಸೇವೆಯಲ್ಲಿರುವುದು ಶ್ರಮದ ಕೆಲಸ ಮಾಡುವುದು ಇದರ ಧರ್ಮ ಅಥವಾ ಕರ್ತವ್ಯ ಕರ್ಮ

೪. Dr. R. G. Bhandarkar, 'Vaisnavism. Saivism and other minor cults, P.107.

೫. See 'outlines of Indian philosophy' by Prof. M.Hiriyanna

ಈ ರೀತಿಯಲ್ಲಿ ವ್ಯವಸ್ಥಿತವಾಗಿ ಒಬ್ಬರ ಕರ್ಮ ವಿದ್ಯೆಗಳನ್ನು ಇನ್ನೊಬ್ಬರು ಮಾಡದಂತೆ ಬದುಕುವುದು ವೇದಧರ್ಮ. ಇವುಗಳೆಲ್ಲರ ಜ್ಞಾನವನ್ನೊದಗಿಸುವುದೆ ಶ್ರೌತ ಸಾಹಿತ್ಯ. ಅದೇ ರೀತಿ ಆಶ್ರಮಗಳನ್ನು ಪ್ರಥಮ ಮೂರು ವರ್ಗದವರು ಹೊಂದಿ ಸ್ವರ್ಗಸುಖವನ್ನು ಪಡೆಯುವುದು. ಇಲ್ಲಿ ಪ್ರತಿಯೊಂದು ಆಶ್ರಮವು ಕ್ರಮಕ್ರಮವಾಗಿ ಪರಿಪಾಲಿಸುತ್ತಾ ಹೋಗುವ ವಿಧಿ ಪರಿಪಾಲಿಸಬೇಕು ಇದು ಶ್ರೌತಾಚಾರವೇ.

ಇನ್ನು ಅಶ್ರೌತ ವಿಚಾರದ ವಿಶ್ಲೇಷಣೆ ನೋಡಬೇಕು. ವರ್ಣಗಳನ್ನು ಆಶ್ರಮಗಳನ್ನು, ಕರ್ಮಗಳನ್ನು ತಿರಸ್ಕರಿಸುವುದೇ ಅಶ್ರೌತಾಚಾರ. ಇದು ಅಶ್ರೌತ ಧರ್ಮವು. ಅಶ್ರೌತ ಧರ್ಮದವರು ಬ್ರಹ್ಮಜ್ಞಾನರತರು. ವರ್ಣ ಅಥವಾ ಆಶ್ರಮ ಅವರಿಗೆ ಬೇಕಾಗಿಲ್ಲ. ವೇಶ್ಯೆಯ ಅಥವಾ ಸೇವಾ ವೃತ್ತಿಯ ಹೆಂಗಸಿನಿಂದ ಹುಟ್ಟಿದವನಿಗೂ ಬ್ರಹ್ಮಜ್ಞಾನವನ್ನು ಬೋಧಿಸುವವರಿವರು. ಇದು ಇವರ ಧರ್ಮ. ಯಾವನೂ ಬ್ರಹ್ಮಜ್ಞಾನಿಯಾಗಬಹುದು. ಇದು ಅಶ್ರೌತ ಆಚಾರದವರಿತ್ತ ಸ್ವಾತಂತ್ರ್ಯ. ಇವರ ಸಾಹಿತ್ಯದಲ್ಲಿ ಯಜ್ಞಯಾಗಾದಿಗಳ ವಿಚಾರವಿರುವದಿಲ್ಲ. ಆದ್ದರಿಂದ ಇವರ ಧರ್ಮ ಅತ್ಯಾಶ್ರಮಧರ್ಮ. ಇವರು ಅತ್ಯಾಶ್ರಮಿಗಳು. ಯಜ್ಞ ಯಾಗಾದಿಗಳ ಸುಳಿವೂ ಇಲ್ಲದ ಇವರ ಸಾಹಿತ್ಯದಲ್ಲಿ ಜಪ ತಪ ಧ್ಯಾನ ಭಕ್ತಿ ಮುಂತಾದ ಆಚಾರದ ವಿಚಾರಗಳು ಉಂಟು. ಇವರೇ ಧೀರರು. ಇವರೇ ಮುಕ್ತಾತ್ಮರು. ಕರ್ಮಫಲಭೋಗ ತಾಜ್ಯವೆಂಬುದಿವರ ವಿಧಿ. ಕರ್ಮಫಲಭೋಗ ವೇದಧರ್ಮದ ಅಥವಾ ವರ್ಣಾಶ್ರಮಧರ್ಮ ಗುರಿ. ಈ ಎರಡರ ಚಿತ್ರಣವನ್ನು ಋಗ್ವೇದದ ಮಂತ್ರದಲ್ಲಿಯ ಪಕ್ಷಿ ಪ್ರತಿಮೆಯು ಕೊಡುತ್ತದೆ. ಒಂದೇ ವೃಕ್ಷದಲ್ಲಿರುವ ಎರಡು ಪಕ್ಷಿಗಳಲ್ಲಿಯ ಒಂದು ಆ ವೃಕ್ಷದ ಫಲವನ್ನು ಭೋಗಿಸುವಲ್ಲಿ ತನ್ಮಯ, ಇನ್ನೊಂದು ಇದನ್ನು ಅಲ್ಲಗಳೆಯುವಂತಿರುವ ಪಕ್ಷಿಯು ಆ ಕಡೆಗೆ ಲಕ್ಷವಿಲ್ಲದೆ ತನ್ನೊಳು ತಾನು ಮೈಮರೆತಿರುವುದು. ಈ ವಿಚಾರ ಪ್ರವಾಹವು ವೇದಾದ್ಯಂತ ಅಂದರೆ ಚತುರ್ವೇದಗಳಲ್ಲಿ ಪ್ರವಹಿಸುವುದನ್ನು ನೋಡುತ್ತೇವೆ. ಒಂದೇ ವೇದ ಶ್ರೌತಸಾಹಿತ್ಯವಾಗಿ, ಅಶ್ರೌತ ಸಾಹಿತ್ಯವಾಗಿರುವಂತೆ, ಒಂದೇ ವೇದದಲ್ಲಿ ಶ್ರೌತಧರ್ಮ ಮತ್ತು ಅಶ್ರೌತ ಧರ್ಮಗಳು ರೂಢಿಯಲ್ಲಿರುವುದನ್ನು ನೋಡುತ್ತೇವೆ.

ಈ ಎರಡೂ ಬಗೆಯ ಸಾಹಿತ್ಯವು ಆಗಮಗಳಲ್ಲಿರುವುದನ್ನು ನೋಡುತ್ತೇವೆ. ಸೃಷ್ಟಿಯ ಸಿದ್ಧಾಂತದಲ್ಲಿಯೂ ಶ್ರೌತಾಶ್ರೌತತೆಯನ್ನು ನೋಡುತ್ತೇವೆ. ಯಜ್ಞದಲ್ಲಿ ಪುರುಷನನ್ನು ಆಹುತಿಯನ್ನು ಹಾಕಿ ಸೃಷ್ಟಿರಚನೆಯಾದ ವಿಚಾರ ಪ್ರಣಾಲಿ ಶ್ರೌತ ಸೃಷ್ಟಿ ಸಿದ್ಧಾಂತ ಪ್ರಣಾಲಿ. ಹಗಲು ರಾತ್ರಿಗಳಲ್ಲದಂಥ ಒಂದು ಅವಸ್ಥೆಯು ಇದ್ದದ್ದು ಅದು - That one a void in chaos wrapt, by inward fervour grew 'ತದೇಕಂ' ಎಂಬುದೇ ಸೃಷ್ಟಿಯ ಮೂಲವಸ್ತು. ಅದು ತಪಸ್ಗೈದು ಸೃಷ್ಟಿ ಆಯಿತು ಎಂದು ತಿಳಿಸುವುದು. ಅಶ್ರೌತ ಸೃಷ್ಟಿ ಸಿದ್ಧಾಂತ. ಇವೆರಡೂ ವೇದಪ್ರಣೀತವೆ. ಉಪನಿಷತ್ತುಗಳು ಶುದ್ಧ ಅಶ್ರೌತ ಸಾಹಿತ್ಯ. ಅವುಗಳು ವರ್ಣಧರ್ಮ ಯಜ್ಞ ಯಾಗಾದಿಗಳು ಕ್ಷಣಿಕ ತೂತು ಇರುವ ದೋಣಿ, ಎರಡನೆಯ ದಂಡೆಗೆ ತೆಗೆದುಕೊಂಡು

ಹೋಗುವ ಸಾಮರ್ಥ್ಯ ಅವುಗಳಿಗಿಲ್ಲ. ಎರಡನೆ ದಂಡೆಯಾದರೆ ಮುಕ್ತಿ. ಇದು ಅಶ್ರೌತ ಸಿದ್ಧಾಂತ. ಸ್ವರ್ಗಸುಖ ಎಂಬುದು ಶ್ರೌತಸಿದ್ಧಾಂತ. ಈ ಎರಡೂ ಬಗೆಯ ವಿಚಾರಗಳು, ಆಚಾರಗಳು ಭಾರತೀಯರಲ್ಲಿ ಸಾಮಾಜಿಕ ರಂಗದಲ್ಲಿ ಸದಾವಕಾಲ ಕಾರ್ಯೋನ್ಮುಖ ವಾಗಿರುವುದನ್ನು ನೋಡುತ್ತೇವೆ. ಈ ಪ್ರಣಾಲಿಗಳ ಅಧ್ವರ್ಯುಗಳು ಯುಗಯುಗಗಳಲ್ಲಿ ಆಗುತ್ತಲೇ ಇದ್ದಾರೆ. ಇವರಲ್ಲಿ ಅಶ್ರೌತ ಸಿದ್ಧಾಂತಿಗಳು, ತಪಸ್ವಿಗಳು ಬಹುದೊಡ್ಡ ಸಂಖ್ಯೆಯಲ್ಲಿ ಭಾರತದ ಪ್ರತಿಯೊಂದು ಜನಾಂಗದಲ್ಲಿ, ಮೂಲೆಗಳಲ್ಲಿ ಜನಿಸುತ್ತಲೇ ಇದ್ದಾರೆ. ಉಪನಿಷತ್ಕಾಲಾನಂತರ ಸುಪ್ರಸಿದ್ಧಿಗೆ ಬಂದ ಸಾಹಿತ್ಯವೆಂದರೆ ಆಗಮ ಸಾಹಿತ್ಯ. ಇದು ಶ್ರೌತ ಮತ್ತು ಅಶ್ರೌತಗಳ ವ್ಯಾಖ್ಯೆಯನ್ನೇ ಮಾಡಿ ಸ್ಪಷ್ಟವಾದ ಚಿತ್ರಣವನ್ನೇ ಕೊಟ್ಟು ಊಹೆಗೆ ಅವಕಾಶವನ್ನೇ ಕೊಟ್ಟಿಲ್ಲ, ಶಂಕೆ ಇಲ್ಲಿ ಹುಗಲಿಲ್ಲ.

ವೈಷ್ಣವ ಧರ್ಮಕ್ಕಿಂತಲೂ ಪುರಾತನ ಶೈವಧರ್ಮ. ಒಂದಾನೊಂದು ಕಾಲಕ್ಕೆ ಅದರದೇ ಸಾಮ್ರಾಜ್ಯ ವಿಶ್ವದಾದ್ಯಂತ, ಅನಂತರ ವೈಷ್ಣವ ಧರ್ಮದ ಪ್ರವೇಶವಾಯಿತು. ಶೈವಧರ್ಮ ವೈಷ್ಣವಧರ್ಮಕ್ಕಿಂತಲೂ ಪ್ರಾಚೀನವಾಗಿರುವಂತೆ ಶೈವಾಗಮಗಳು ವೈಷ್ಣವಾಗಮಗಳಾದ ಪಂಚರಾತ್ರಾಗಮಗಳಿಗಿಂತಲೂ ಪುರಾತನ. ಶೈವಾಗಮಗಳಲ್ಲಿ ಶ್ರೌತ ಅಶ್ರೌತ ಭೇದದ ಪ್ರಖ್ಯಾತ ಪಂಚರಾತ್ರಾಗಮಗಳ ಮೇಲೆಯೂ ಆಗಿದೆ. ಅಲ್ಲಿಯೂ ನಾವು ಶ್ರೌತಾಶ್ರೌತ ಭೇದಗಳಿರುವುದನ್ನು ನೋಡುತ್ತೇವೆ. ಪ್ರೊ. ಶಂಕರಮೋಕಾಶಿ ಪುಣ್ಯೇಕರ ಅವರು ಪಂಚರತ್ರಾಗಮ ಎಂಬ ಹೆಸರೇ ಈ ಅಶ್ರೌತತೆಗೆ ಸಾಕ್ಷಿ ಎಂದು ನನ್ನ ಕೂಡ ಈ ವಿಚಾರ ಚಿಂತನೆಯ ಕಾಲಕ್ಕೆ ಹೇಳಿದ್ದು, ಈ ಬಗ್ಗೆ ಒಂದು ಗ್ರಂಥವನ್ನೇ ಪ್ರಕಟಿಸಿದ ವಿಚಾರ ತಿಳಿಸಿದರು. ಶೈವಾಗಮಗಳ ಈ ಪ್ರಣಾಲಿಗಳಲ್ಲಿ ಅಶ್ರೌತ ಪ್ರಣಾಲಿಯು ಪ್ರಭಾವೀಸ್ಥಾನದಲ್ಲಿದ್ದು ಅದು ಮಹತ್ತರವಾದ ಸಾಮಾಜಿಕ ಪ್ರಜ್ಞೆಯಲ್ಲಿ ಕ್ರಾಂತಿಯನ್ನೇ ಮಾಡಿದರೆ, ಶೈವಾಗಮಗಳು ಶ್ರೌತಾಗಮಾಗಳೆಂದೂ ಅಶ್ರೌತಾಗಮಗಳೆಂದೂ ಇಬ್ಬಗೆಯಾಗಿರುವವೆಂಬುದನ್ನು ಆಗಮಾಗಳಂತೆ ಪುರಾಣಗಳೂ ತಿಳಿಸುವುದುಂಟು.

ಶ್ರೌತಾಶ್ರೌತ ವಿಭೇದೇನ ದ್ವಿವಿಧಾಸ್ತು ಶಿವಾಗಮಃ। ಎಂದು ಸನತ್ಕುಮಾರ ಸಂಹಿತೆಯು ಹೇಳುತ್ತಾರೆ. ವಾಯುವೀಯ ಸಂಹಿತೆಯು ಕೂಡ ಈ ವಿಚಾರವನ್ನು ಸಮರ್ಥಿಸಿದ್ದು ಇಂತಿದೆ.

ಶೈವಾಗಮೋಽಪಿ ದ್ವಿವಿಧಃ ಶ್ರೌತಾಶ್ರೌತಶ್ಚ ಸಂಸ್ಕೃತಃ।
ಶ್ರುತಿಸಾರಮಾಯಃ ಶ್ರೌತಃ ಸ್ವತಂತ್ರ ಸ್ವಿತರೋ ಮತಃ॥

ಈ ಪುರಾಣಗಳಿಗೆ ಮೂಲವಿಚಾರ ಕೇಂದ್ರವೆಂದರೆ ಆಗಮಗಳು. ೨೮ ಆಗಮಗಳಲ್ಲಿ ಒಂದಾದ ಚಂದ್ರಜ್ಞಾನಾಗಮವು ವೀರಶೈವವು ಶ್ರುತಿ ಮಂತ್ರ ತಂತ್ರಗಳಲ್ಲಿರುವವು ಎಂದು ಹೇಳಿ ಇಲ್ಲಿರುವ ವೀರಶೈವಗಳು ಶ್ರೌತ ಮತ್ತು ಸ್ವತಂತ್ರ ಎಂದೂ ಅವುಗಳಲ್ಲಿ ಶ್ರೌತವು ವರ್ಣಾಶ್ರಮ ಯುಕ್ತವೆಂದೂ ಅಶ್ರೌತ ಅಥವಾ ಸ್ವತಂತ್ರವು ವರ್ಣಾಶ್ರಮಧರ್ಮ ರಹಿತವೆಂದೂ ಹೇಳುತ್ತದೆ.

ಈ ಅಶ್ರೌತವು ವೇದಕಾಲದ ಯಜ್ಞಭಂಜತ ರುದ್ರನ ಮನೋಧರ್ಮ ಸ್ಮರಣೆಗೆ ತರುತ್ತವೆ. ವರ್ಣಧರ್ಮ ವಿರೋಧ ತೋರಿಸುವ ಮೂಲಕ ರುದ್ರನು ಜನಪ್ರಿಯದೇವತೆಯಾದನು ಅಥವಾ ಆತನ ಧರ್ಮ ಸರ್ವಪ್ರಜಾಸಮ್ಮತ ತಂತ್ರವಾಗಿದೆ. ಆತನು ಕಳ್ಳಕಾಕರ, ಬಡಿಗ ಕಮ್ಮಾರರ, ಬೇಟೆಗಾರರ, ಕೊಲೆಗಡುಕರ ದೇವರಾಗಿರುವಂತೆ ಉಚ್ಚವರ್ಣದವರ ದೇವರು ಆಗಿದ್ದಾನೆ ವೇದದಲ್ಲಿ. ಇದು ಆತನ ಪ್ರಗತಿಪರ ಧೋರಣೆ ಅಶ್ರೌತ ಧೋರಣೆ. ಈ ಪ್ರಸಿದ್ಧವಾದ ಆಚಾರ ಯಜ್ಞಯಾಗಾದಿಗಳನ್ನು ಖಂಡಿಸಿ ತಿರಸ್ಕರಿಸುವ ಮತ್ತು ವರ್ಣಗಳನ್ನು ಆಶ್ರಮಗಳನ್ನು ಮೀರಿರುವುದು ಆತನ ಸಂಪ್ರದಾಯ. ಈ ಸಂಪ್ರದಾಯವು ಬುದ್ಧನಿಗೂ ಜನ್ಮವಿತ್ತಿದೆ. ಈ ಸಂಪ್ರದಾಯಕ್ಕೆ ಸೇರಿದ ರಾಜಮನ್ಯವ್ರಾತ್ಯದಲ್ಲಿ ಜನಿಸಿದ ಬುದ್ಧನು ಈ ಆರ್ಯ ವರ್ಣಧರ್ಮವನ್ನು, ವೇದ ಸಾಹಿತ್ಯವನ್ನು, ಪರಂಪರೆಗಳನ್ನು ಕಂಡಿಸಿ ತ್ಯಜಿಸಿದ. ಆತನು ಕೊನೆಗೆ ವ್ರಾತ್ಯ ಧರ್ಮ ಅಂದರೆ ಶೈವಧರ್ಮವನ್ನೇ ಬಿಟ್ಟು ಹೊಸ ಧರ್ಮಸಂಸ್ಥಾಪನೆಗೆ ಕಾರಣೀಭೂತವಾದನು. ಇದು ರುದ್ರನ ಅಶ್ರೌತ ಪ್ರಣಾಲಿ, ಧರ್ಮಗಳ ಪ್ರತಿಫಲವಾಗಿದೆ.

ಅಶ್ರೌತಾಗಮಗಳನ್ನು ಶಂಕರಾಚಾರ್ಯರು ಧ್ವಂಸಮಾಡಿದರು ಎಂದು ಸಿದ್ಧ ರಾಮಪ್ಪ ಪಾವಟೆಯವರು ಬರೆದಿರುವುದನ್ನು ನೋಡುತ್ತೇವೆ. ಈ ಧ್ವಂಸಗೊಂಡ ಅಶ್ರೌತಾಗಮಗಳನ್ನು ಬಸವಣ್ಣನವರು ಉದ್ಧಾರಮಾಡಿ ಅಂದರೆ ಪ್ರಾಣಪ್ರತಿಷ್ಠೆಮಾಡಿ ಶುದ್ಧ ಅಶ್ರೌತರ 'ದಯವೇ ಧರ್ಮದ ಮೂಲ', 'ಆಚಾರವೇ ಸ್ವರ್ಗ, ಅನಾಚಾರವೇ ನರಕ', 'ಅಂತರಂಗ ಬುದ್ಧಿ ಬಹಿರಂಗ ಶುದ್ಧಿ ಕೂಡಲಸಂಗನೊಲಿಸುವ ಪರಿ' 'ದಂದಣ ದತ್ತಣ ಎಂದು ಕುಣಿ'ದು ನಿನಗೆ ತಿಳಿವಂತೆ ಭಕ್ತಿ ಆಚರಿಸಿ ದೇವರ ಸಾಕ್ಷಾತ್ಕಾರ ಹೊಂದು. ನೀನು ವೇದವನೋದು, ಉಪನಿಷತ್ತುಗಳನ್ನು ಓದು, ಆಗಮಗಳನ್ನು ಓದು, ದೈಹಿಕ ಶ್ರಮವೇ ಮುಕ್ತಿಯ ಮಾರ್ಗ, ಮನುಷ್ಯಮಾತ್ರನಾದವನು ದೈಹಿಕಶ್ರಮದಿಂದ ಮುಕ್ತಿಹೊಂದಲು ಅರ್ಹನು ಎಂದು ಹೇಳಿ ಬಸವಣ್ಣನವರು ಆಚಾರ ವಿಚಾರ ಸ್ವಾತಂತ್ರ್ಯದ ಬಾಗಿಲ ತೆರೆದರು. ಇವರ ಕಾಲದಲ್ಲಿ ರುದ್ರರ ವಿವಿಧ ಕೆಲಸಗಾರರು ಮಹಾತ್ಮರಾದರು. ಜನರಿಗೆ ಮುಕ್ತಿಮಾರ್ಗವನ್ನು ಆಚರಣೆಯಿಂದ ತೋರಿಸಿದರು. ವಿಚಾರಗಳ ಬೋಧೆಯನ್ನು ಮಾಡಿದರು. ಇಡೀ ಭಾರತವೇ ಈ ಸ್ವತಂತ್ರ ಆಗಮ ಅಥವಾ ಧರ್ಮದ ಬೋಧೆಯ ಮೋಡಿಗೆ ಒಳಗಾಯಿತು. ಅಶ್ರೌತ ಧರ್ಮದ ಹೊಸಯುಗಳೇ ಪ್ರಾರಂಭವಾಯಿತು. ಇದರ ಪ್ರಭಾವ ವೈಷ್ಣವ ಪಂಥದ ಮೇಲೆಯೂ ಆಗಿರುವುದನ್ನು ಕರ್ನಾಟಕದಲ್ಲಿ ನೋಡುತ್ತೇವೆ. ಅಶ್ರಾತ ಆಚಾರ ವಿಚಾರಗಳನ್ನು ವೈಷ್ಣವದಾಸರು ಪ್ರಚಾರ ಮಾಡಿದರು. ಬ್ರಾಹ್ಮಣರಾದಿಯಾಗಿ ಅಂತ್ಯಜರ ಪರ್ಯಂತ ಇವರ ಭಕ್ತಿಯ ಆಂದೋಲನದಲ್ಲಿ ಭಾಗಿಗಳಾದರು. ಅದೇ ರೀತಿ ಬಸವಣ್ಣನವರು ಪ್ರಸಿದ್ಧಪಡಿಸಿದ ಅಶ್ರೌತ ಪ್ರಣಾಲಿ ಮಹಾರಾಷ್ಟ್ರದ ಸಂತರ ಮೇಲೆಯೂ ಆಗಿದೆ. ವಚನ ಸಾಹಿತ್ಯದ ಪ್ರಭಾವವನ್ನು ಸಂತರ ಅಭಂಗಗಳಲ್ಲಿ ಆಗಿರುವುದನ್ನು ಆಧುನಿಕ ಮರಾಠಿ ಸಾಹಿತ್ಯ ವಿದ್ವಾಂಸರು ಗುರುತಿಸಿದ್ದಾರೆ. ಜ್ಞಾನದೇವಾದಿಯಾಗಿ ಅನೇಕ ಪ್ರಮುಖ ಸಂತರ ಗುರುಗಳು ನಾಥಪಂಥ

ಮೊದಲಾದ ಶೈವ ಅಶ್ರೌತ ಪಂಗಡಕ್ಕೆ ಸೇರಿದವರು. ವೇದಕ್ಕೆ ಒರೆಯ ಕಟ್ಟುವೆ, ಶಾಸ್ತ್ರಕ್ಕೆ ನಿಗಳವನಿಕ್ಕುವೆ, ತರ್ಕದ ಬೆನ್ನ ಬಾರನೆತ್ತುವೆ, ಆಗಮದ ಮೂಗ ಕೊಯಿವೆ ಎಂಬ ಕ್ರಾಂತಿಕಾರರ ಧ್ವನಿ ಶ್ರೌತದ ಧ್ವನಿಯಲ್ಲ. ವೇದವನು ನಾಯಿಯ ಬಾಯಿಂದ ಹೇಳಿಸುವುದು ಶ್ರೌತದ ಧೈರ್ಯವಲ್ಲ. ವೇದವೆಂಬ ಅಜ್ಞಾನದ ಹಗ್ಗವನು ಮಾಯೆ ತೊಟ್ಟಿಲಕ್ಕೆ ತಟ್ಟಿಜಗವನು ತೂಗುತ್ತಿಹಳು ಎಂದು ಘೋಷಿಸುವುದು ಬುದ್ಧನಿಗೂ ಕೂಡ ಆರ್ಯಧರ್ಮವಾದ ಬ್ರಹ್ಮಮತ ದಲ್ಲಿದ್ದುಕೊಂಡು ಹೇಳುವುದು ಸಾಧ್ಯವಾಗಲಿಲ್ಲ. ಆದರೆ ಶಿವಶರಣರು ತಮ್ಮ ಅಶ್ರೌತದ ವೀರಧ್ವನಿಯನ್ನು ಭಾರತದಾದ್ಯಂತ ಕೇಳುವಂತೆ ಎತ್ತಿದರು. ಆಧುನಿಕ ಬುದ್ಧನೇ ಎಂದು ಸುಪ್ರಸಿದ್ಧನಾದ ಜೆ. ಕೃಷ್ಣಮೂರ್ತಿಯು ಕೂಡ ಇಂಥದೇ ದನಿಯನ್ನು ವೇದಗಳ, ಧರ್ಮಗಳ, ಪರಂಪರೆಗಳ, ಗುರುಗಳ, ಆಚಾರಗಳ ವಿರುದ್ಧ ವಿಶ್ವವೇ ಕೇಳುವಂತೆ ಜಗತ್ತಾದ್ಯಂತ ವಿದ್ವದ್ಗೋಷ್ಠಿಗಳಲ್ಲಿ ಎತ್ತಿದ. ಆದರೆ ತಾನು ಹಿಂದೂ ಎಂದಾಗಲೀ, ಕ್ರೈಸ್ತನೆಂದಾಗಲಿ, ಬೌದ್ಧನೆಂದಾಗಲಿ ಆಗಿರದೆ ಹೇಳಿದ್ದರಲ್ಲಿ ಶರಣರ ಧೈರ್ಯ ಕಂಡುಬರಲಿಲ್ಲ. ಹಿಂದೂಧರ್ಮವನ್ನು ತ್ಯಜಿಸದೆ ಅದರ ಮುಂದಾಳು ಆಗಿ ಅದರ 'ಶ್ರೌತ-ಅಂಧತೆ'ಯನ್ನು ಟೊಳ್ಳನ್ನು ಮುಗ್ಧರ ಶೋಷಣೆಯನ್ನು ಧೀರೋದಾತ್ತ ವಿಚಾರ ಮತ್ತು ಆಚಾರಗಳಿಂದ ಮಂಡಿಸಿ ಖಂಡಿಸಿ ವೈಚಾರಿಕ ಕ್ರಾಂತಿಯನ್ನೇ ಗೈದರು ಶರಣರು. ಅವರ ವಚನ ಸಾಹಿತ್ಯ ಶ್ರೌತ ಸಾಹಿತ್ಯ. ಅವರ ಧರ್ಮ ಅಶ್ರೌತ ಧರ್ಮ.

ಬಸವಣ್ಣನವರು ೧೨ನೆಯ ಶತಮಾನದಲ್ಲಿ ನಡೆಸಿದ ಧರ್ಮನೀತಿಗಳ ಪ್ರಚಾರ, ಪ್ರಸಾರಗಳು ಅನೇಕ ಶ್ರೌತ-ವೀರಶೈವರನ್ನು ಆಕರ್ಷಿಸಿತು. ಅಂದರೆ ವರ್ಣಾಶ್ರಮಗಳನ್ನು ಮತ್ತು ವೈದಿಕ ಕರ್ಮಗಳನ್ನು ಆಚರಿಸುತ್ತಿದ್ದ ವೀರಶೈವರು ಮೊದಮೊದಲು ಬಸವಣ್ಣನವರು ಬ್ರಾಹ್ಮಣಾದಿ ಶೂದ್ರರವರೆಗಿನವರೆಲ್ಲರಲ್ಲಿ ಯಾವ ವರ್ಣ ಆಶ್ರಮ ಕರ್ಮ ಅಥವಾ ಕೆಲಸಗಳ ಭೇದವನ್ನೆನಿಸದೆ ಅಪ್ಪ ನಮ್ಮ ಮಾದಾರ ಚನ್ನಯ, ಬೊಪ್ಪ ನಮ್ಮ ಡೋಹಾರ ತಕ್ಕಯ್ಯ ಎಂದು ಅವರಿಗೆ ಗೌರವಸಲ್ಲಿಸುವುದನ್ನು ಕಂಡು ಮೂಗಮುರಿದಿದ್ದರು. ಅವರಲ್ಲಿ ಆಂಧ್ರದೇಶದ ಸುಪ್ರಸಿದ್ಧ ಘನವಿದ್ವಾಂಸನೂ ಆಚಾರ್ಯನೂ ಆದ ಮಲ್ಲಿಕಾರ್ಜುನ ಪಂಡಿತಾರಾಧ್ಯನು ಒಬ್ಬನು. ಬಸವಣ್ಣನವರ ವಿಚಾರವಾದ, ಅವರ ಜನಸಾಮಾನ್ಯರಿಗೂ ಒಪ್ಪಿಗೆಯಾಗುವಂಥ ಸರಳ ಸ್ನಿಗ್ಧಮಯ ಆಚಾರಗಳು ಮಲ್ಲಿಕಾರ್ಜುನಪಂಡಿತಾರಾಧ್ಯನ ದೃಷ್ಟಿಯಲ್ಲಿ ಆಮೂಲಾಗ್ರವಾದ ಬದಲಾವಣೆಯನ್ನು ಮಾಡಲಾಗಿ ಬಸವಣ್ಣನವರ ದರ್ಶನಾರ್ಥಿಯಾಗಿ ಹೊರಟು ಅರ್ಧದಾರಿಬದಲು ಬರಲು ಬಸವಣ್ಣನವರು ಲಿಂಗೈಕ್ಯರಾದ ವಿಚಾರವು ಗೊತ್ತಾಯಿತು. ದುಃಖಿತನಾಗಿ ಹಿಂದಿರುಗಿ ಹೋದ. ಇದು ಬಸವಣ್ಣನವರ ಸಮಕಾಲೀನ ಶ್ರೌತವೀರಶೈವ ಮುಖಂಡರ ಮೇಲೆ ಅಶ್ರೌತ ಅಥವಾ ಶುದ್ಧವೀರಶೈವದ[೧] ವಿಜಯವಾಗಿದೆ.

---

೧. ಸಿದ್ಧರಾಮಪ್ಪ ಪಾವಟೆಯವರು ಬಸವಾದಿ ಶರಣರು ಆಚರಿಸಿದ ವೀರಶೈವವು ಪರಿಶುದ್ಧ ಕರ್ಮಮಿಶ್ರಿತವಲ್ಲದ ವೀರಶೈವ ಎಂದು ಕರೆದಿದ್ದಾರೆ.

ಈ ಪ್ರಣಾಳಿ ಅಂದರೆ ವೇದಗಳನ್ನು ಅಥವಾ ವರ್ಣಾಶ್ರಮ ವಿಚಾರ ಆಚಾರ ಪರಂಪರೆ ಕರ್ಮಗಳಿಂದಾದ ಸಾಮಾಜಿಕ ಒಡಕಿನ ದುಷ್ಪರಿಣಾಮ ಮುಂತಾದುವುಗಳನ್ನು ವಿರೋಧಿಸುವ ಧೋರಣೆಯ ಪ್ರೇರಣೆಯು ಅನೂಚಾನವಾಗಿ ವೇದಕಾಲದಿಂದ ಪ್ರಾರಂಭವಾಗಿ ಹರಿಗಡಿಯದೆ ಬಂದಿದೆ. ಶಿವಶರಣರ ನಂತರ ಅದರ ಶುದ್ಧಸ್ವರೂಪವು ಮಸತಾಗುತ್ತ ಬಂದಿದೆ. ಅವರ ಅನುಯಾಯಿಗಳಲ್ಲಿ ಆ ವಿಚಾರ ವ್ಯವಸ್ಥೆ ಮತ್ತು ಆಚಾರ ವ್ಯವಸ್ಥೆಗಳು ತಮ್ಮ ಉತ್ಸಾಹ, ಉತ್ಕಟತೆ, ಸ್ಪಷ್ಟಧೋರಣೆಗಳು ಸತ್ವಹೀನವಾಗತೊಡಗಿದವು. ದಾಸರ ನಂತರ ಪಂಚರಾತ್ರಾಗಮ ಅನುಯಾಯಿಗಳಲ್ಲಿಕೂಡ ವಿಚಾರ ಸ್ವಾತಂತ್ರ್ಯ, ಆಚಾರ ಸ್ವಾತಂತ್ರ್ಯಗಳಲ್ಲಿ ರಕ್ತಗತವಾಗಿ ಬಂದ ತಲ್ಲೀನತೆ ಅನುಲೋಮ ಪ್ರತಿಲೋಮದ ವಿರುದ್ಧದ ಅಭಿಪ್ರಾಯ, ಕರ್ಮಠತೆ, ಮಡಿಮೈಲಿಗೆಗಳ ಭಾವನೆಗಳು ತೀವ್ರವಾದವು. ಇದಕ್ಕೆ ೧೯ನೆಯ ಮತ್ತು ೨೦ನೆಯ ಶತಮಾನಗಳಲ್ಲಿಯ ಸಮಾಜಸುಧಾರಕ ಆವಿರ್ಭಾವವೇ ಸಾಕ್ಷಿಯಾಗಿದೆ. ರಾಜಾರಾಮ ಮೋಹನರಾಯನ ಬ್ರಹ್ಮಸಮಾಜ, ರಾಮಕೃಷ್ಣಪರಮಹಂಸರು, ವಿವೇಕಾನಂದರ ಭಕ್ತಿ ಜ್ಞಾನಪ್ರಚಾರ, ದಯಾನಂದ ಸರಸ್ವತಿಯ ಆರ್ಯಸಮಾಜ ಅದೇ ರೀತಿ ಪ್ರಾರ್ಥನಾ ಸಭೆ, ಬಹುಜನ ಸಮಾಜವಾದದ ಸಂಘಟನೆಗಳು, ಹಾನಗಲ್ಲ ಕುಮಾರ ಸ್ವಾಮಿಗಳ ಹಾಗೂ ಗುರುಲಿಂಗ ಜಂಗಮ ಮಹಾರಾಜರ ಸುಧಾರಣಾ ಚಳುವಳಿಗಳು, ಮುಂತಾದವುಗಳು ಅಶ್ರೌತ ಪ್ರಣಾಲಿ ಪ್ರೇರಿತವೇ ಆಗಿವೆ.

ಇದೇ ಸಮಯದಲ್ಲಿ ಭಾರತದಲ್ಲಿ ರಾಷ್ಟ್ರೀಯ ಭಾವನೆ, ಸ್ವಾತಂತ್ರ್ಯಕ್ಕಾಗಿ ಹೋರಾಟಗಳು ಜನ್ಮತಾಳಿದವು. ವಿಶ್ವದಾದ್ಯಂತದ ರಾಷ್ಟ್ರೀಯವಾದದ ಪ್ರಚಾರ ಮತ್ತು ಜಾಗೃತಿಯು ಉಂಟಾದರೂ ಸಾಂಸ್ಕೃತಿಕ ಸಮಗ್ರ ಆಂದೋಳನವು ಭಾರತದಲ್ಲಿ ಪ್ರಾರಂಭವಾದದ್ದು ಶೂದ್ರ ಸಮಾಜದಲ್ಲಿಯ ಸಾಧುಸಂತರಿಂದ ಉಂಟಾದ ಜಾತಿಮತಪಂಥಗಳ ಗೋಡೆಗಳ ಧ್ವಂಸಕ್ಕೆ ನಾಂದಿಯಾಗಿ ಗಾಂಧೀಜಿಯವರ ಮುಖಂಡತ್ವದಲ್ಲಿ ಈ ಕ್ಷೇತ್ರದಲ್ಲಿ ಹೊಸಯುಗವೇ ಪ್ರಾರಂಭವಾಯಿತು. ಹಿಂದಿನ ಹಲವು ಯುಗಗಳಲ್ಲಿ ಕಾರ್ಯೋನ್ಮುಖವಾದ ಅಶ್ರೌತ ವಿಚಾರವಾದದ ಕೃಷಿಯಿಂದ ಭಾರತದಾದ್ಯಂತ ಚಿಕ್ಕಪುಟ್ಟ ವಿಜಾರವಾದಿಗಳ ಕಾರ್ಯಗಳು ಗಾಂಧಿಯವರು ಕೈಕೊಂಡ ದುಶ್ಚಟ ವಿರೋಧದ ಚಳುವಳಿ, ಜಾತಿವಾದದ ವಿರೋಧದ ಕಾರ್ಯಕ್ರಮಗಳು, ಸಾಕ್ಷರತಾ ಪ್ರಸಾರ, ಅಂತ್ಯಜನ ವಿರುದ್ಧದ ದೌರ್ಜನ್ಯ ವಿರೋಧ ಮುಂತಾದ ಕಾರ್ಯಕ್ರಮಗಳು ಶ್ರೌತ ವಿದ್ವಾಂಸರಿಂದ ಧರ್ಮಗುರುಗಳಿಂದ ಎಂದೂ ಕಂಡರಿಯದಂಥವು ೧೨ನೆಯ ಶತಮಾನದ ನಂತರ ೨೦ನೆಯ ಶತಮಾನದ ಪೂರ್ವಾರ್ಧದಲ್ಲಿ ಹಳ್ಳಿಯಿಂದ ದಿಳ್ಳಿಯಾದ್ಯಂತ ಅನುಷ್ಠಾನಕ್ಕೆ ಬಂದವು. ಆರ್ಥಿಕ ಸ್ವಾವಲಂಬನದ, ಗ್ರಾಮಾಂತರ ಬದುಕಿನಲ್ಲಿ, ಕಾರ್ಯಕ್ರಮಗಳು ಆತ್ಮಾಭಿಮಾನ ಗೌರವಗಳ ಜಾಗ್ರತಿಯನ್ನುಂಟುಮಾಡಿದವು. ಈ ಯುಗದಲ್ಲಿ ಪ್ರಕಟವಾದ ಸಾಪ್ತಾಹಿಕಗಳು, ದೈನಂದನಿಕ ಪತ್ರಿಕೆಗಳು ಅಶ್ರೌತ ಸಾಹಿತ್ಯದ ಜನಜಾಗೃತಿಯ ಸಾಧನಗಳಾದವು. ಗಾಂಧೀಜಿಯವರಿಂದ ಸೃಷ್ಟಿಗೊಂಡ ಸಾಹಿತ್ಯವು ಈ ಆಚಾರ ವಿಚಾರ

ಸ್ವಾತಂತ್ರ್ಯಗಳ ದಾಖಲೆಯ ದೊಡ್ಡ ಭಂಡಾರವೇ ಆಗಿದೆ. ಇವರನ್ನು ಅನುಸರಿಸಿದ ಬ್ರಾಹ್ಮಣಾದಿ ಅಂತ್ಯಜರ ವರೆಗಿನ ಸುಶಿಕ್ಷಿತ ಕಾರ್ಯಕರ್ತರು ಗಾಂಧೀಜಿಯವರ ವಿಚಾರ ಪ್ರಚಾರದಲ್ಲಿ ಪ್ರಾದೇಶಿಕ ಭಾಷೆಗಳಲ್ಲಿ ಪತ್ರಿಕೆಗಳನ್ನು ನಡೆಸುವ ಮೂಲಕ ಆಶ್ರಮಗಳನ್ನು ಸ್ಥಾಪಿಸುವ ಮೂಲಕ ತೊಡಗಿ ಅಶ್ರೌತ ವಿಚಾರಗಳು ಸಾಮಾಜಿಕ ಧಾರ್ಮಿಕ ಕ್ಷೇತ್ರಗಳಲ್ಲಿ ನಡೆದ ಆಂದೋಳನದ ಮಹಾಪೂರಕ್ಕೆ ತಮ್ಮ ತಮ್ಮ ಕೊಡುಗೆಗಳನ್ನು ನೀಡಿದ್ದುಂಟು. ಇದರ ಪರಿಣಾಮವಾಗಿ ಸ್ತ್ರೀಯರಿಗೆ ಸ್ವಾತಂತ್ರ್ಯದೊರೆಯಿತು. ಸ್ತ್ರೀಶಿಕ್ಷಣದ ಪ್ರಚಾರ ಪ್ರಾರಂಭವಾಯಿತು. ರಾಷ್ಟ್ರೀಯ ಚಳವಳಿಯ ಅಂಗಗಳಾಗಿ ಈ ವಿವಿಧ ಕಾರ್ಯಕ್ರಮಗಳು ಪ್ರಚಾರ ಪಡೆದವು. ಇಂಥ ರಾಷ್ಟ್ರೀಯ ಪ್ರೇಮದ ಸ್ಪರ್ಶದಿಂದ ಅಶ್ರೌತ ದೃಷ್ಟಿಕೋನದಲ್ಲಿ ಬದಲಾವಣೆಯೇ ಆಯಿತು. ವೇದಕಾಲದಲ್ಲಿ ಪ್ರಾರಂಭವಾದಂಥ ಅಂದರೆ ರುದ್ರನಿಂದ ಪ್ರಾರಂಭವಾದಂಥ ಈ ಅಶ್ರೌತ ಚಳುವಳಿಯ ಯುಗ ಯಾತ್ರೆಯ ಉತ್ಕೃಷ್ಟಫಲವನ್ನು ಈ ಶತಮಾನದಲ್ಲಿ ನೋಡುತ್ತೇವೆ. ಇದು ಒಂದು ಮತಧರ್ಮದ ಸೊತ್ತಾಗಿ ಉಳಿಯಲಿಲ್ಲ. ಇದರಿಂದ ರಾಷ್ಟ್ರಧರ್ಮವು ಹೊಸಹುಟ್ಟನ್ನು ಪಡೆಯಿತು. ನಾವೆಲ್ಲರು ಕೂಡಿ ಬದುಕೋಣ, ಕೂಡಿ ವಿಚಾರ ಮಾಡೋಣ, ಕೂಡಿ ಭೋಜನ ವಿವಾಹಗಳನ್ನು ಭಿನ್ನಭಾವರಹಿತರಾಗಿ ಮಾಡೋಣ, ಜಗತ್ತಿನ ಮೂಲೆಮೂಲೆಗಳಿಂದ ಸುವಿಚಾರಗಳನ್ನು ಸ್ವಾಗತಿಸೋಣ ಮುಂತಾದ ವಿಚಾರಗಳು ಈ ಯುಗದಲ್ಲಿ ಹುಲುಸಾಗಿ ಬೆಳೆದುದನ್ನು ನೋಡುತ್ತೇವೆ. ಇದು ಜಾತ್ಯಾತೀತತೆಯ ಯುಗವಾಯಿತು. ಅಂದರೆ ಗಾಂಧಿಯವರ ಮುಖಂಡತ್ವ ಹಿಂದೆಂದೂ ಭಾರತವು ಆ ಮೂಲಕ ಉಳಿದ ವಿಶ್ವವು ಭಾರತದಲ್ಲಿಯ ಜನಸಾಮಾನ್ಯರ ಸಮೂಹಗಳು ಭಾರತೀಯತೆಯ ಸಾತ್ವಿಕ ಶುದ್ಧ ಉದಾರ ಬದುಕಾಗಿ ಪರಿವರ್ತಿತ ವಾಗುವಂತೆ ಮಾಡಿತು. ಇದಕ್ಕೆ ಕಾರಣ ಆತನ ನೈತಿಕ ಶಕ್ತಿ, ಆತನು ಅವರ ಆಸೆ ಆಕಾಂಕ್ಷೆಯ ಚೇತನವಾಗಿ ಅವರನ್ನು ವಿಶ್ವಾಸದಲ್ಲಿ ತೆಗೆದುಕೊಂಡು ಪರಿಶುದ್ಧಿಯನ್ನುಂಟುಮಾಡುವ ಆತನ ನಿಸ್ವಾರ್ಥ ಕಳಕಳಿಯ ಅಪೇಕ್ಷೆಯ ಪ್ರಾಮಾಣಿಕ ಪ್ರಯತ್ನದಲ್ಲಿ ತೊಡಗಿರುವುದು ಅಹರ್ನಿಶಿಕೆಯಲ್ಲಿ, ಆತನ ಆತ್ಮಶಕ್ತಿಯಲ್ಲಿ ಇದೆ. ಭಕ್ತಿ ಮತ್ತು ಪೂಜೆಗಳೇ ಭಾರತದ ಗತಕಾಲದ ಆತ್ಮಶಕ್ತಿ ಇದನ್ನು ಈ ಅಶ್ರೌತ ವಿಚಾರವಾದಿ ಗಾಂಧಿಯವರು ರಾಷ್ಟ್ರಜೀವನದಲ್ಲಿ ಪುನಾ ಇಂದ್ರಜಾಲಿಕ ರೀತಿಯಲ್ಲಿ ಪ್ರವೇಶಮಾಡಿಸಿ ಹುದುಗಿನ ನೈತಿಕ ಆಧ್ಯಾತ್ಮಿಕ ಶಕ್ತಿಯ ವಿದ್ಯುತ್ತನ್ನು ಭಾರತೀಯ ತರುಣರಲ್ಲಿ ಸಂಚಾರಗೊಳಿಸಿ ರಾಷ್ಟ್ರಕ್ಕೆ ಹೊಸ ಚೇತನವನ್ನಿತ್ತ ಹೊಸಸೋದರಭಾವವು ಗಾಂಧೀಜಿಯಿಂದ ವಿವಿಧ ಧರ್ಮಗಳ ಅನುಯಾಯಿಗಳಲ್ಲಿ ಜಾಗೃತವಾಯಿತು. ಸಿ. ಎಫ್. ಆಂಡ್ರೋಜ ಈ ಸುಧಾರಣೆಯ ಪ್ರಭಾವ ಕುರಿತು ಬರೆದಿರುವುದು ಚೇತೋಹಾರಿಯಾಗಿದೆ - While dealing directly with these evils, Mahatma Gandhiji's personal moral sway among the masses has reached wider and wider circles. I have gone out often to meet him on his tours and have with him in different parts of India. Wherever he

passed along the country side his influence has been paramount and unique... this whole movement of social reform which he has thus started has seen carried forward by eager men and women, who have cought spirit of their leader. In this way things which might have taken centuries to achieve are likely to be accomplished in a single generation. It would be land to find a parallel to the moral influence of this one single personality over vast bodies of people, or a more heroic record of sacrifice on behalf of a great and noble cause.

Scenes like those I have described are frequently occuring, and their effect is manifest among the people. Changes and upheavels, amounting to nothing has than a social and moral revolution, are happening before our eyes. ಇಂಥ ಅಭೂತಪೂರ್ವ ಬದಲಾವಣೆಯ ಬಿರುಗಾಳಿಯನ್ನು ಎಬ್ಬಿಸಿದ್ದು ಗಾಂಧಿಯವರಲ್ಲಿದ್ದ ಅಶ್ರೌತ ವಿಚಾರ ಮತ್ತು ಆಚಾರಗಳೇ ವಿನಃ ಶ್ರೌತ ವಿಚಾರ ಮತ್ತು ಆಚಾರಗಳಲ್ಲ. ಈ ವಿಚಾರ ಅಥವಾ ಧರ್ಮಪ್ರಣಾಲಿಯನ್ನು ಜಗತ್ತಿನ ಸಕಲ ಸಾಧುಸಂದರಲ್ಲಿ ಕಾಣುತ್ತೇವೆ. ಇಂಥ ವಿಚಾರವಾದ ಆಚಾರವಾದ ಸಕಲ ಧಾರ್ಮಿಕ, ಆರ್ಥಿಕ, ಕಾರ್ಮಿಕ ಒಳಸಂಗಡಗಳ ಭದ್ರಕೋಟೆಯನ್ನು ಧ್ವಂಸಮಾಡಬಲ್ಲದು. ಇಂಥ ವಿಚಾರ ಮತ್ತು ಆಚಾರ ಪ್ರಣಾಲಿಯು ಜಾಗ್ರತಿಕ ವಿಚಾರ ಆಚಾರ ಪ್ರಣಾಲಿಯಾಗಿ ಸದಾಕಾಲ ಕೆಲಸ ಮಾಡಿದೆಯೋ ಆ ವ್ಯಕ್ತಿ, ಆ ಜನಾಂಗ, ಆ ನಾಡು ಮಾನವ ಚರಿತ್ರೆಯ ಸುವರ್ಣ ಪುಟವಾಗಿದೆ. ಇಂದು ಇದರ ಅವಶ್ಯಕತೆ ಹೆಚ್ಚಿದೆ. ಅನಿವಾರ್ಯತೆ ಅಧಿಕವಾಗುತ್ತಿದೆ. ರವೀಂದ್ರನಾಥ ಟ್ಯಾಗೂರರ ಗೀತಾಂಜಲಿಯ ಪದ್ಯವೊಂದು ಈ ಆದರ್ಶವನ್ನು ಚಿತ್ರಿಸಿದಂತಿದೆ. -

Where the mind is without fear and the head is held high,
Where knowledge is free,
Where the world has not been broken up into fragments by narrow domestic walls
Where words come out from the depth of truth
Where tireless striving stretches its arms towards perfection,
Where the clearstrean of reason has not lost its way into the dreary desert sand of dead habit
Where the mind is led forward by thee into ever-widening thought and action
Into that heven of freedom, my father, let my country awake.

ಅಶ್ರೌತ ಸಾಹಿತ್ಯದ ಉಗಮವು ರುದ್ರನಿಂದ, ರುದ್ರನ ಭಕ್ತರಿಂದ ಸೃಷ್ಟಿಗೊಂಡಿತು. ಆತನು ಮಹಾಭೇಷಜ, ಯೋಧ, ಪದಾವಿದ್ಯಾ - ಯೋಗವಿದ್ಯಾಅಜ್ಞ ಪಶುಪತಿಯಾಗಿ, ಕೃಷಿಕನಾಗಿ, ಜನಜೀವನದ ವಿವಿಧ ಸ್ತರಗಳ ಜನಾಂಗಗಳನ್ನು ಪ್ರೀತಿಸುವ ಮೂಲಕ ಅವರನ್ನೆಲ್ಲ ಭಕ್ತರನ್ನಾಗಿ ಪರಿವರ್ತಿಸಿದವನಾಗಿ ಕೊಲೆಗಡುಕನಿಂದ ತನ್ನೊಳು ತಾನಿದ್ದು ಆತ್ಮ ಸಾಕ್ಷಾತ್ಕಾರಾಭಿಲಾಷೆಯವರಲ್ಲಿ ಸಕಲ ವೃತ್ತಿಯ ಜನರಲ್ಲಿ ಆಧ್ಯಾತ್ಮಿಕ ಪರಿವರ್ತನೆಗೆ ಕಾರಣನಾಗಿ, ಔಷಧಿ ತಜ್ಞನಾಗಿ, ಪ್ರಜಾಪ್ರಣಾಲಿಪ್ರಜ್ಞಾನಿಯಾಗಿ ಅಶ್ರೌತಾಚಾರ್ಯನಾಗಿದ್ದನು. ನಾಲ್ಕುವೇದಗಳ, ಬ್ರಾಹ್ಮಣಗಳ, ಅರಣ್ಯಕಗಳ, ಉಪನಿಷತ್‌ಗಳ ಯುಗಗಳಲ್ಲಿ ಈತನೇ ಧರ್ಮಸಾಮ್ರಾಟ. ಏಕೇಶ್ವರ, ಪರಬ್ರಹ್ಮನಾಗಿ ಎರಡೂ ಬಗೆಯ ಸಾಹಿತ್ಯ ಸೃಷ್ಟಿಗೆ ಕಾರಣನಾದರೂ ಅಶ್ರೌತ ಸಾಹಿತ್ಯವಾದ ಉಪನಿಷತ್ತುಗಳು ಇಂದಿಗೂ ಪ್ರಾಜ್ಞರ ಗಮನವನ್ನು ವಿಶ್ವದಾದ್ಯಂತ ಸೆಳೆಯುತ್ತಿದೆ. ಈ ಪ್ರಣಾಲಿ ಭಾರತದ ಎಂದೆಂದೂ ಹರಿಗಡಿಯದ ಮಹಾಗಂಗಾಪ್ರವಾಹವಾಗಿದೆ. ಇದಕ್ಕೆ ಸಾಕ್ಷಿಯೆಂದು ಫ್ರೆಂಚ್-ಕೋವಿದನ ಮಾತುಗಳನ್ನುದ್ಧರಿಸಬೇಕು.

Man must rest, get hsi breath, refresh himself at the great living wells, which keeps the freshness of the eternal. Where they to be found, if not in the craddle of our race, on the sacred heights, when flow on the oneside the Indus and the Gauges, on the ether the torrents of persia, the rivers of paradise ? The west is too narrow. Greece is small. I shiffle there. India is dry. I pant there. Let me look towards Asia and the profound East for a little while. There lies my great poem, as vast as the Indian ocan, blessed, guided with us sun, the book of divine harmony wherein is no dissoname. A serene peace reigns there and in the midst of conflict an infinite sweetness, a boundless fraternity, which spreads over all living things, an ocean (without bottom or bound) of love, of piety, of clemency. I found the Bible of kindness - Michelet. ಇದು ಅಶ್ರೌತ ಸಾಹಿತ್ಯದ ರಮಣೀಯತೆ. ಈ ಸಾಹಿತ್ಯದ ಬೋಧೆ ಬುದ್ಧನಿಗೆ ಜನ್ಮವಿತ್ತು. ಆಗಮದ ಅಶ್ರೌತ ಪ್ರವಾಹಕ್ಕೆ ಮಾತೆಯಾಯಿತು. ವೃಷಭತೀರ್ಥಂಕರ ಇದರ ಮಧ್ಯದಿಂದ ಎದ್ದುಬಂದ, ಬಸವಣ್ಣನವರು, ಗಾಂಧೀಜಿಯವರು ಅಶ್ರೌತ ಆರಾಧ್ಯರು. ಈ ಅದ್ವಿತೀಯ ಅಶ್ರೌತ ವಿಚಾರವಾದಿಗಳ ಮಧ್ಯಂತರ ಅವಧಿಯಲ್ಲಿ ಅನೇಕ ಶರಣರು ಸಾಧು ಸತ್ಪುರುಷರು ಅಶ್ರೌತ ಆಚಾರ ವಿಚಾರಗಳನ್ನು ಬದುಕಿ ಸಾಹಿತ್ಯ ಸೃಷ್ಟಿಸಿದರು. ಇವರಲ್ಲಿ ಸರ್ವಶ್ರೇಷ್ಠರು ಪರಮಹಂಸರು, ಅವರ ಶಿಷ್ಯ ಸ್ವಾಮಿ ವಿವೇಕಾನಂದರು. ಗಾಂಧೀಜಿ ನಂತರದ ಹೆಸರೆಂದರೆ ಜೆ. ಕೃಷ್ಣಮೂರ್ತಿ. ಇದು ಅಶ್ರೌತ ಸಾಹಿತ್ಯ ಮತ್ತು ಧರ್ಮದ ಅಲ್ಪಪರಿಚಯ.

# ತಂತ್ರಶಾಸ್ತ್ರ ಪರಿಚಯ

ಹೆಚ್. ಗಂಗಾಧರನ್

---

## ತಂತ್ರಶಾಸ್ತ್ರದ ಪ್ರಾಚೀನತೆ

ತಂತ್ರ ಶಾಸ್ತ್ರವು ವೇದ ಕಾಲದ ನಂತರ ಬಂದ ಸಂಸ್ಕೃತಿಯೆಂದು ಕೆಲವರು ವಾದಿಸುವುದು ಉಂಟು. ಆದರೆ ತಂತ್ರಶಾಸ್ತ್ರದ ಅನುಸಂಧಾನದ ರೀತಿನೀತಿಗಳನ್ನು ಗಮನಿಸಿದರೆ ಈ ಸಂಸ್ಕೃತಿಯು ಹರಪ್ಪ -ಮಹೆಂಜೋದಾರೊ ಸಂಸ್ಕೃತಿಯಲ್ಲಿ ವ್ಯಕ್ತವಾಗಿದೆಯೆಂದು ಪ್ರಸಿದ್ಧ ಸಂಶೋಧಕರಾದ ಸರ್. ಜಾನ್. ಮಾರ್ಷಲ್‌ರವರು ತಮ್ಮ ಗ್ರಂಥದಲ್ಲಿ ಉಲ್ಲೇಖಿಸಿದ್ದಾರೆ. ಅಲ್ಲಿ ದೊರೆತ ಅವಶೇಷಗಳು ಶಿವ ಮತ್ತು ಶಾಕ್ತಉಪಾಸನೆಯ ಸಂಕೇತಗಳಾಗಿರುವುದನ್ನು ಶ್ರೀ ಮಾರ್ಷಲ್‌ರವರಂತೆ ಮೆಕೆ ಮತ್ತು ಬೆನರ್ಜಿ ಎಂಬ ಸಂಶೋಧಕರು ಸಹ ಪ್ರತಿಪಾದಿಸಿದ್ದಾರೆ. ಆದರೆ ಹರಪ್ಪ ಸಂಸ್ಕೃತಿಯ ಕಾಲದ ಕೃತಿಗಳು ಯಾವುವೂ ನಮಗೆ ಲಭ್ಯವಿಲ್ಲದ ಪ್ರಯುಕ್ತ ವೇದವೇ ಭಾರತ ಸಂಸ್ಕೃತಿಯ ಆದಿಗ್ರಂಥವೆಂದು ಅನಿವಾರ್ಯವಾಗಿ ಒಪ್ಪಿಕೊಳ್ಳಲಾಗಿದೆ. ಆದರೆ ವಿದೇಶವಲ್ಲಿ ಉಕ್ತವಾಗಿರುವ ಅನೇಕ ಮಹರ್ಷಿಗಳು ತಂತ್ರಶಾಸ್ತ್ರದಲ್ಲಿ ಪರಿಣತರು ಪ್ರವರ್ತಕರು ಆಗಿದ್ದರು ಎಂಬುದನ್ನು ಇತಿಹಾಸವು ತೋರಿಸಿಕೊಡುತ್ತದೆ. ವೇದವು ಸೃಷ್ಟಿ ಆದ ಕಾಲಕ್ಕೆ ಸಮಾನಾಂತರವಾಗಿಯೇ ತಾಂತ್ರಿಕಸಂಸ್ಕೃತಿಯು ಇದ್ದಿತ್ತೆಂದು ಮತ್ತು ಬೆಳೆಯುತ್ತ

ಬಂದಿತೆಂದು ಹೇಳಲು ಸಾಧ್ಯವಿದೆ. ಇತ್ತೀಚಿನ ವಿದ್ವಾಂಸರು ವೈದಿಕ ಸಂಸ್ಕೃತಿಯಲ್ಲಿ ಕಂಡುಬರುವ ಹಲವಾರು ಆಚರಣೆಗಳಿಗೆ ವೇದಪೂರ್ವ ಸಂಸ್ಕೃತಿಯಾದ ತಂತ್ರಸಾಹಿತ್ಯದ ವಿಧಾನಗಳೇ ಆದರ್ಶ. ನಿಗಮಶಾಸ್ತ್ರದಲ್ಲಿ ಅವಲಂಬನೆಯಾದ ಆರ್ಯನ್ನರು ಹೋಮ, ಪೂಜೆ ಇತ್ಯಾದಿ ಸತ್ಕಾರ್ಯಗಳನ್ನು ತಾಂತ್ರಿಕ ಸಂಸ್ಕೃತಿಯಿಂದಲೇ ಅಂದರೆ ದ್ರಾವಿಡ ಸಂಸ್ಕೃತಿಯಿಂದಲೇ ಪಡೆಯಬೇಕೆಂದು ವಿಮರ್ಶಿಸಿದ್ದಾರೆ. ವಿದ್ವಾಂಸರಾದ ಎಸ್. ಕೆ. ಚಟರ್ಜಿಯವರು ತಮ್ಮ ''ದಿ ವೇದಿಕ್ ಏಜ್'' ಎಂಬ ಗ್ರಂಥದಲ್ಲಿ ಹೀಗೆ ಹೇಳಿದ್ದಾರೆ.

The characteristic offerings in the pujarite, viz. flower, leaves, fruits, water etc. are not known to the homa rite, except in instances, where it has been influenced by the puja. It has been suggested with good reason that puja is the pre-Aryan : in all likelihood the Dravidian, form of worship, while homa is the Aryan : and throughout the entire early vedic literature, the puja ritual with flowers etc. offered to an image or symbol is unknown. Thus injunction of offering puja in the flowers leaves etc. found in the puranas and the tantras ultimately from the pre Aryan sources. This shows that the tantras were deriving their materials also from diverse sources pre-Aryan and even extra Indian. The injunction of the Tantras belonging to the kubijika school that the goddess Kubjika is to be worshipped in the house of the weavers and potter class show that some of the tantrik practices came from the lower strata of the Hindu Society.

ಶಕ್ತಿಸಾಧನೆಯೇ ತಂತ್ರಶಾಸ್ತ್ರದ ಪರಮ ಗುರಿ. ಶಕ್ತಿಉಪಾಸನೆಯ ಮೂಲಕ ಶಿವ ಸಾಕ್ಷಾತ್ಕಾರ ಮಾಡಿಕೊಳ್ಳುವುದು ಆಗಮಶಾಸ್ತ್ರದ ಉದ್ದೇಶ. ಆದುದರಿಂದ ಶಕ್ತಿ ಸಮನ್ವಿತವಾದ ಬ್ರಹ್ಮ, ವಿಷ್ಣು, ಇಂದ್ರ, ಚಂದ್ರ, ಸ್ಕಂದ, ವೀರಭದ್ರ, ಈಶ್ವರ, ಮಹಾಕಾಲ ಇತ್ಯಾದಿ ದೇವತೆಗಳು ಸಹ ಶ್ರೀಮಾತಾ ಉಪಾಸಕರೆಂದು ಉಲ್ಲೇಖಿಸಿದೆ. ಬ್ರಹ್ಮಯಾಮಲ ತಂತ್ರದಲ್ಲಿ ಶಿವಜ್ಞಾನ ಪ್ರವರ್ತಕರಾದ ಉಸನಾ, ದಧೀಚಿ, ಬೃಹಸ್ಪತಿ, ಸನತ್ಕುಮಾರ, ನಕುಲೀಶ ಮುಂತಾದವರ ಹೆಸರುಗಳನ್ನು ಉಲ್ಲೇಖಿಸಿದೆ. ಜಯದ್ರಥ ಯಾಮಲ ತಂತ್ರದ ಮಂಗಳಾಷ್ಟಕ ಪ್ರಕರಣದಲ್ಲಿ ತಂತ್ರಶಾಸ್ತ್ರ ಪ್ರವರ್ತಕರೂ, ಮಹರ್ಷಿಗಳೂ ಆದ ದುರ್ವಾಸ, ಸನಕ, ವಿಷ್ಣು, ಕಶ್ಯಪ, ವಿಶ್ವಾಮಿತ್ರ, ಸಂವರ್ತ, ಕಾಲಿಕ, ಗೌತಮ, ಯಾಜ್ಞವಲ್ಕ್ಯ, ಶಾತತಪ, ಆಪಸ್ತಂಭಾ, ಕತ್ಯಾಯನಾ, ಸ್ವಹಸ್ತ ಮುಂತಾದ ಮಹರ್ಷಿಗಳ ಉಲ್ಲೇಖವಿದೆ. ತಂತ್ರಸಾಹಿತ್ಯದಲ್ಲಿ

ದುರ್ವಾಸರು ಕ್ರೋಧ ಭಟ್ಟಾರಕರೆಂದೇ ಖ್ಯಾತರಾಗಿದ್ದಾರೆ. ಅವರು ಶ್ರೀ ಕೃಷ್ಣನಿಗೆ ೬೪ ಅದ್ವೈತ ತಂತ್ರತತ್ತ್ವವನ್ನು ಬೋಧಿಸಿದ ಗುರುವೆಂದು ಕೆಲವು ಗ್ರಂಥಗಳಲ್ಲಿ ಉಲ್ಲೇಖಿಸಿದೆ. ನೇಪಾಳದ ದರ್ಬಾರ ಗ್ರಂಥಾಗಾರದಲ್ಲಿರುವ ಮಹಿಮ್ನಸ್ತೋತ್ರದ ಮುನ್ನುಡಿಯಲ್ಲಿ ಹೀಗೆ ಹೇಳಿದೆ :

*'ಸರ್ವಾಸಾಮುಪನಿಷದಾಮಂ ದುರ್ವಾಸ ಜಯತಿ ದೇಶಿಕಃ*
*ಪ್ರಥಮತಃ'* ಎಂದಿದೆ.

ಬಹುತೇಕ ತಂತ್ರಗ್ರಂಥಗಳಲ್ಲಿ ದುರ್ವಾಸ ಮತದ ಪ್ರಭಾವವಿರುವುದನ್ನು ನೇಪಾಳದ ಗ್ರಂಥಾಗಾರದಲ್ಲಿರುವ ಪಿಂಗಳಾಗಮ ಗ್ರಂಥದಲ್ಲಿ ಉಲ್ಲೇಖಿಸಲಾಗಿದೆ. ದುರ್ವಾಸರು ಶ್ರೀ ಮಾತ ಹಾಗೂ ಷಡಕ್ಷರಿ ಉಪಾಸಕರೆಂದು ತ್ರಿಪುರ ತಾಪಿನಿ ಉಪನಿಷತ್ತಿನಿಂದ ವ್ಯಕ್ತವಾಗುತ್ತದೆ. ದುರ್ವಾಸರ ಪ್ರಭಾವವನ್ನು ಕುರಿತು ಅನೇಕ ತಂತ್ರಗ್ರಂಥಗಳಲ್ಲಿ ಉಲ್ಲೇಖಿತವಾಗಿದೆ. ಪ್ರಾಚೀನ ಗ್ರಂಥ ಒಂದರಲ್ಲಿ ಹೀಗೆ ಹೇಳಿದೆ :

*'' ಷಡ್ದರ್ಶನಾತಿರಿಕ್ತೋರ್ಥೇ ಸೂತ್ರಧಾರೋ ಭುವಂ ಶ್ರೀ ತಃ*
*ರುದ್ರಾವತಾರೋ ದುರ್ವಾಸಾಃಸ್ತೂ ಯತೆ ಸ್ಪರ್ಶ ಕಾಲಧುಕ್ ॥*
*ಮತ್ತು ತ್ರಿಪುರಸುಂದರಿ ಮಹಿಮ್ನಸ್ತೋತ್ರದ ಟೀಕಾಕಾರರಾದ*
*ನಿತ್ಯಾನಂದ ನಾಥರು ಸಕಲಾಗಮಾಚಾರ್ಯ ಚಕ್ರವರ್ತಿ ಸಾಕ್ಷಾತ್ ಶಿವಯೇವ*
*ಅನಸೂಯಾ ಗರ್ಭಸಂಭೂತಃ ಕ್ರೋಧ ಭಟ್ಟಾರಕಾಖ್ಯೋ*
*ದುರ್ವಾಸ ಮಹಾಮುನಿಃ ॥* ಎಂದಿದ್ದಾರೆ.

**ತಂತ್ರ ತತ್ವದರ್ಶನ**

ಭಾರತ ಅನಾದಿಕಾಲದಿಂದ ಒಂದು ಭವ್ಯವಾದ ಚೇತನವುಳ್ಳಂಥ ಸಾಂಸ್ಕೃತಿಕ ಬೃಹತ್ ರಾಷ್ಟ್ರ. ಈ ರಾಷ್ಟ್ರದ ಸಂಸ್ಕೃತಿಯ ಸ್ತೋತ್ರಗಳು ಎರಡು ವಿಧ. ಒಂದು ವೈದಿಕ ಮತ್ತೊಂದು ತಾಂತ್ರಿಕ. ಭಾರತದ ಇಂದಿನ ಎಲ್ಲಾ ಸಾಂಸ್ಕೃತಿಕ ವ್ಯವಹಾರದ ಹಿನ್ನೆಲೆಯಲ್ಲಿ ತಾಂತ್ರಿಕ ರೀತಿನೀತಿಗಳು, ವಿಧಿವಿಧಾನಗಳು ಆಚರಣೆಯಲ್ಲಿವೆ. ಪ್ರತಿಯೊಂದು ಜನಾಂಗವು ಅದರ ಅಂತರಾರ್ಥವನ್ನು ಅರಿತೋ ಅರಿಯದೆಯೋ ತಾಂತ್ರಿಕ ವಿಧಾನವನ್ನು ಅನುಸರಿಸುತ್ತಲೆ ಬಂದಿವೆ. ಸಾಂಸ್ಕೃತಿಕ ವಿಚಾರಧಾರೆಯಲ್ಲಿ ಅನೇಕ ರೀತಿಯ ಪರಿವರ್ತನೆಗಳು, ಪ್ರತಿರೋಧಗಳು ಸಂಭವಿಸಿವೆ. ಆದರೆ ತಾಂತ್ರಿಕ ಸಿದ್ಧಾಂತಗಳಲ್ಲಿ ಗುಪ್ತರೀತಿನೀತಿಗಳ ಆಚರಣೆಮಾಡುವವರ ಅಜ್ಞಾನ ಮತ್ತು ಅವ್ಯವಹಾರದಿಂದ ಅರ್ಥಹೀನವಾದ ಸಂದರ್ಭಗಳು ಸಂಭವಿಸಿವೆ. ಅದೇ ಪರಿಸ್ಥಿತಿಯನ್ನು ವೈದಿಕ ಸಂಸ್ಕೃತಿಯ ಸ್ತ್ರೋತದಲ್ಲೂ ಕಾಣುತ್ತೇವೆ. ಆದರೆ ವೈದಿಕ ಸಂಸ್ಕೃತಿಯ ಪ್ರಚಾರ ಪ್ರಭಾವ, ಪ್ರಾಬಲ್ಯದಿಂದ ತಾಂತ್ರಿಕ ಸಂಸ್ಕೃತಿಯು ತನ್ನ ವೈಶಾಲ್ಯವನ್ನು ಪ್ರಭಾವವನ್ನು ಕ್ಷೀಣಿಸಿಕೊಂಡ ಪರಿಸ್ಥಿತಿಯನ್ನು ಇತಿಹಾಸದಲ್ಲಿ ಕಾಣುತ್ತೇವೆ. ಸಾಂಸ್ಕೃತಿಕ ಸಂಪನ್ನತೆಯನ್ನು

ಸದ್ಗತಿಯನ್ನು ಪಡೆಯ ಬಯಸುವ ಜನರು ತಮ್ಮ ಗುರಿ ಯಾವುದು ಎಂಬುದನ್ನು ಮರೆತು ದಾರಿಯಾವುದು ಎಂಬುದನ್ನು ಚರ್ಚಿಸುವುದರಲ್ಲಿ ಹೆಚ್ಚು ಕಾಲವನ್ನು, ಬುದ್ಧಿಯನ್ನು, ಶಕ್ತಿಯನ್ನು ತಪೋಬಲವನ್ನು ವೆಚ್ಚಮಾಡಿಕೊಂಡು ಕೊನೆಗೆ ಸಾಂಸ್ಕೃತಿಕ ಕ್ಷೇತ್ರವನ್ನು ವ್ಯಕ್ತಿಯ ದ್ವೇಷಾಸೂಯೆಯ ಯುದ್ಧರಂಗವನ್ನಾಗಿ ರೂಪಿಸಿಕೊಂಡಿರುವುದು ಕಂಡುಬರುತ್ತದೆ. ವೈದಿಕ ಸಂಸ್ಕೃತಿಯನ್ನು ಸಾಕಷ್ಟು ಪ್ರಚುರಗೊಳಿಸಬಲ್ಲ ಪುರುಷೋತ್ತಮರು ತತ್ತ್ವವೇತ್ತರು ಹೆಚ್ಚಾಗಿ ಬಂದಕಾರಣ ವೈದಿಕಸಂಸ್ಕೃತಿಯು ಭಾರತದ ಇಂದಿನ ಜನಜೀವನದಲ್ಲಿ ಹಾಸುಹೊಕ್ಕಾಗಿರುವುದನ್ನು ಕಾಣುತ್ತೇವೆ. ಆದರೆ ಅದಕ್ಕೆ ಹಿನ್ನೆಲೆಯಾಗಿರುವ ತಾಂತ್ರಿಕ ಸಂಪತ್ತನ್ನು ಮಾತ್ರ ಸಾಕಷ್ಟು ಪರಿಚಯಿಸಿಕೊಳ್ಳಲು ಪ್ರಯತ್ನಿಸಿಲ್ಲ. ವೈದಿಕ ಸಾಹಿತ್ಯದಂತೆ ತಾಂತ್ರಿಕ ಸಾಹಿತ್ಯವು ಒಂದುಕಾಲದಲ್ಲಿ ಭಾರತದಲ್ಲಿ ಮಾತ್ರವಲ್ಲ ಇಡೀ ಜಗತ್ತಿನಲ್ಲಿ ವಿಪುಲವಾಗಿತ್ತು. ತಂತ್ರಶಾಸ್ತ್ರದ ಸಂಸ್ಕೃತಿಯು ಸಹಾ ವೈದಿಕ ಸಂಸ್ಕೃತಿಯಷ್ಟೇ ಪವಿತ್ರವೂ ಭವ್ಯವೂ ಆಗಿದೆ.

## ನಿಗಮ-ಆಗಮ

ವೈದಿಕ ಸಾಹಿತ್ಯವನ್ನು ನಿಗಮ ಸಾಹಿತ್ಯವೆಂದು, ತಾಂತ್ರಿಕ ಸಾಹಿತ್ಯವನ್ನು ಆಗಮ ಸಾಹಿತ್ಯವೆಂದು ಶಾಸ್ತ್ರದಲ್ಲಿ ವಿಶ್ಲೇಷಿಸಿದ್ದಾರೆ. ನಿಗಮ ಶಾಸ್ತ್ರದಲ್ಲಿ ವೇದ, ಉಪನಿಷತ್ತು, ಬ್ರಾಹ್ಮಣಗಳು, ಆರಣ್ಯಕಗಳು, ಸೂತ್ರಗಳು, ಪುರಾಣಗಳು ಗೀತೆ ಇತ್ಯಾದಿ ಎಲ್ಲವೂ ಒಳಗೊಂಡಿರುತ್ತವೆ. ಆಗಮ ಶಾಸ್ತ್ರದಲ್ಲಿ ಕೇವಲ ತಂತ್ರಸಾಹಿತ್ಯ ಮಾತ್ರವೇ ಒಳಗೊಂಡಿರುತ್ತದೆ. ವೈದಿಕ ಅಥವಾ ನಿಗಮ ಶಾಸ್ತ್ರದಲ್ಲಿ ಷಡ್ದರ್ಶನ ಭೇದಗಳಿರುವಂತೆ ಆಗಮ ದರ್ಶನದಲ್ಲೂ ಪ್ರಭೇದಗಳಿವೆ. ಪ್ರಮುಖವಾಗಿ ಅವುಗಳನ್ನು ಶೈವ, ಶಾಕ್ತ, ವೈಷ್ಣವ ಎಂಬುದಾಗಿ ಮೂರು ಭಾಗವಾಗಿ ವಿಂಗಡಿಸಿದ್ದಾರೆ. ಈ ಮೂರು ಭಾಗಗಳಿಗೆ ಪ್ರತ್ಯೇಕವಾದ ತಂತ್ರಸಾಹಿತ್ಯ ಲಭ್ಯವಿದೆ. ಶೈವತಂತ್ರ ಶಿವನನ್ನು ಪ್ರಧಾನವಾಗಿಯೂ ಪರಮಗುರಿಯಾಗಿಯೂ ಭಾವಿಸಿದಂತೆ, ಶಾಕ್ತ ತಂತ್ರಗಳಲ್ಲಿ ದೇವಿಯನ್ನು, ವೈಷ್ಣವೀ ತಂತ್ರಗಳಲ್ಲಿ ವಿಷ್ಣುವನ್ನು ಅವಲಂಭಿಸಿರುವುದು ಆ ಕೃತಿಗಳಿಂದ ವ್ಯಕ್ತವಾಗುತ್ತದೆ. ವೇದಗಳಿಗಿಂತಲೂ ತಂತ್ರಶಾಸ್ತ್ರಕ್ಕೆ ಕಲಿಯುಗದಲ್ಲಿ ಹೆಚ್ಚು ಅವಕಾಶವಿದೆ ಎಂಬುದನ್ನು ಕುಲಾರ್ಣವ ತಂತ್ರದಲ್ಲಿ ಹೀಗೆ ಹೇಳಿದೆ.

*''ಕೃತೇ ಶ್ರುತ್ಯುಕ್ತ ಆಚಾರತ್ರೇತಾಯಾಂ ಸ್ಮೃತಿ ಸಂಭಾವಃ |*
*ದ್ವಾಪರೇತು ಪುರಾಣೋಕ್ತಂ ಕಲಾ ಆಗಮ ಕೇವಲಂ ||*

ಅಂದರೆ ಕೃತಯುಗದಲ್ಲಿ ಶ್ರುತಿಗಳಿಗೆ ಅಂದರೆ ವೇದ, ಉಪನಿಷತ್ತುಗಳಿಗೆ ತ್ರೇತಾಯುಗದಲ್ಲಿ ಸ್ಮೃತಿ ಎಂದರೆ ಧರ್ಮಶಾಸ್ತ್ರಗಳಿಗೆ ದ್ವಾಪರಯುಗದಲ್ಲಿ ಪುರಾಣಗಳಿಗೆ ಮತ್ತು ಕಲಿಯುಗದಲ್ಲಿ ತಂತ್ರ ಶಾಸ್ತ್ರಗಳಿಗೆ ಪ್ರಾಧಾನ್ಯವಿರುವುದಾಗಿ ಈ ತಂತ್ರದಲ್ಲಿ ಹೇಳಿದೆ.

ವೈದಿಕ ಸಂಸ್ಕೃತಿಯನ್ನು ಅವಲಂಬಿಸಿದವರು ಕಾಲಾನಂತರದಲ್ಲಿ ತಾಂತ್ರಿಕ ಸಂಸ್ಕೃತಿಯನ್ನು ಅತ್ಯಂತ ನಿಕೃಷ್ಟವಾಗಿ ಕಂಡ ಸಂದರ್ಭಗಳು ಇವೆ. ಈ ಎರಡು ಸಂಸ್ಕೃತಿಗಳು ಪರಸ್ಪರ ಪೂರಕವಾಗಿವೆಯೇ ಹೊರತು ಮಾರಕವಲ್ಲವೆಂದು ಪ್ರತಿಪಾದಿಸಿದ ಸಂದರ್ಭಗಳು ಉಂಟು. ಮನುಸ್ಮೃತಿಯ ಮೇಲೆ ಅಧಿಕೃತ ಭಾಷ್ಯವನ್ನು ಬರೆದ ಕುಲ್ಲುಕಭಟ್ಟನು ಶ್ರುತಿಯು ವೈದಿಕ ಮತ್ತು ತಾಂತ್ರಿಕವೆಂದು ಎರಡು ವಿಧವೆಂದು ಹೇಳಿದ್ದಾರೆ. (ವೈಧಿಕೀ ತಾಂತ್ರಿಕೀ ಚೈವ ದ್ವಿವಿಧಾ ಶ್ರುತಿ ಕೀರ್ತಿತಾ) ತಂತ್ರಶಾಸ್ತ್ರವು ಸಹ ವೇದ ಉಪನಿಷತ್ತಿನಂತೆ ಜೀವಾತ್ಮ ಪರಮಾತ್ಮನಲ್ಲಿ ಅವಿನಾಭಾವಸಂಬಂಧವನ್ನು ಪ್ರತಿಪಾದಿಸುವುದಾಗಿದೆ. ಈ ಗುರಿ ಸಾಧಿಸಲು ಕಲಿಯುಗದ ಜನರಿಗೆ ಕೃತಾ, ತ್ರೇತಾ ಮತ್ತು ದ್ವಾಪರ ಯುಗದಲ್ಲಿ ಇದ್ದಷ್ಟು ಆಯಸ್ಸು ಇಲ್ಲದಿರುವ ಪ್ರಯುಕ್ತ ಕಲಿಯುಗದಲ್ಲಿ ಶೀಘ್ರಸಿದ್ಧಿಯನ್ನು ಪಡೆಯುವುದಕ್ಕಾಗಿ ತಂತ್ರಶಾಸ್ತ್ರ ಅತ್ಯಂತ ಸಹಕಾರಿಯೆಂದು ಶಾಸ್ತ್ರಜ್ಞರು ಅಭಿಪ್ರಾಯ ಪಟ್ಟಿದ್ದಾರೆ. ಅದರಂತೆ ಲಲಿತಾ ಸ್ತವರತ್ನ, ಪರಶಿವ ಮಹಿಮ್ನಸ್ತೋತ್ರ ಮತ್ತು ಪರಶಿವಂಭೂಸ್ತುತಿ ಗ್ರಂಥದಲ್ಲಿ ಶ್ರೀ ದೂರ್ವಾಸ ಮಹರ್ಷಿಗಳು ದೇವಿಉಪಾಸಕರು ಎಂಬುದನ್ನು ವಿಪುಲವಾಗಿ ವಿಮರ್ಶಿಸಿದೆ. ಅದರಂತೆ ಕಾಳಿಸುಧಾನಿಧಿ ಗ್ರಂಥದಲ್ಲಿ ಅವರನ್ನು ಕಾಳಿ ಉಪಾಸಕರು ಎಂದು ಹೇಳಿದೆ.

ಭಾರತೀಯ ಸಂಸ್ಕೃತಿಯಲ್ಲಿ ಅಗಸ್ತ್ಯ ಮಹರ್ಷಿಗಳ ವಿಷಯ ವ್ಯಾಪಕವಾಗಿದೆ. ಅಗಸ್ತ್ಯರು ವೈದಿಕ ಮಹರ್ಷಿಗಳೆಂದೇ ಖ್ಯಾತರಾಗಿದ್ದಾರೆ. ಆದಾಗ್ಯೂ ಪಂಚರಾತ್ರ ಮತ್ತು ಶಾಕ್ತ ಆಗಮಗಳಲ್ಲಿ ಅಗಸ್ತ್ಯರ ವಿಷಯವಾಗಿ ಚರ್ಚೆ ನಡೆದಿದೆ. ರಾಮಾಯಣ, ಮಹಾಭಾರತ ಮತ್ತು ಅಷ್ಟಾದಶ ಪುರಾಣಗಳಲ್ಲೂ ಅಗಸ್ತ್ಯರ ವೈಶಿಷ್ಟ್ಯದ ವಿವರಣೆ ಇದೆ. ಅಗಸ್ತ್ಯರ ಧರ್ಮಪತ್ನಿ ಲೋಪಾಮುದ್ರ ಎಂಬುವರು ವಿದರ್ಭ ರಾಜಕುಮಾರಿ. ಆಕೆಯು ಸಹಾ ವೈದಿಕ ಋಷಿಯೆಂದೇ ಪ್ರಖ್ಯಾತರು. ರಾಮಾಯಣದ ಅರಣ್ಯಖಾಂಡದಲ್ಲಿ ಸುತೀಕ್ಷ್ಣ ಮುನಿಗಳು ಶ್ರೀರಾಮನಿಗೆ ಗೋದಾವರಿ ದಡದಲ್ಲಿರುವ ಅಗಸ್ತ್ಯಾಶ್ರಮಕ್ಕೆ ದಾರಿತೋರಿಸಿದರೆಂದು ಶ್ರೀರಾಮರು ಅಲ್ಲಿ ಹೋದಾಗ ಅವರಿಗೆ ವೈಷ್ಣವ ಧನುಸ್ಸು, ಬ್ರಹ್ಮದಂಡ, ಅಕ್ಷಯತುಮೀರಾ ಇತ್ಯಾದಿ ಅಸ್ತ್ರಗಳನ್ನು, ಖಡ್ಗಗಳನ್ನು ಕೊಟ್ಟರು ಎಂದು ಉಲ್ಲೇಖಿಸಿದೆ.

ದಕ್ಷಿಣ ಭಾರತದಲ್ಲಿ ಅಗಸ್ತ್ಯ ಮಹರ್ಷಿಗಳು ಒಂದು ವಿಶಿಷ್ಟ ಸಂಸ್ಕೃತಿಯ ಪ್ರವರ್ತಕರೆಂದು ವಿವರಿಸಿದೆ. ಅವರು ಶಾಕ್ತಸೂತ್ರಗ್ರಂಥವನ್ನು ಬರೆದರೆಂದು ಅದು ಬ್ರಹ್ಮಸೂತ್ರ ಮತ್ತು ಶಿವಸೂತ್ರಸಮವೆಂದು ಪ್ರಸಿದ್ಧ ವಿದ್ವಾಂಸರು ಅಭಿಪ್ರಾಯ ಪಟ್ಟಿರುವರು. ಈ ಗ್ರಂಥವು ನಾಲ್ಕು ಅಧ್ಯಾಯಗಳಿಂದ ಕೂಡಿದ 302 ಸೂತ್ರಗಳ ಶಾಸ್ತ್ರ ಕೃತಿ. ಅಲ್ಲದೆ, ಅವರು ಶ್ರೀವಿದ್ಯಾಕೃತಿಗೆ ಭಾಷ್ಯ ಬರೆದಿದ್ದಾರೆ. ದಂಪತಿಗಳಿಬ್ಬರೂ ಶ್ರೀ ವಿದ್ಯಾಉಪಾಸಕರೆಂದು ತಿಳಿದುಬರುತ್ತದೆ.

ಬ್ರಹ್ಮಸೂತ್ರಕ್ಕೆ ವೀರಶೈವಪರ ಭಾಷ್ಯ ಬರೆದ ಶ್ರೀಪತಿ ಪಂಡಿತರ ಶ್ರೀಕರಭಾಷ್ಯವು ಅಗಸ್ತ್ಯರು ಬರೆದ ಬ್ರಹ್ಮಸೂತ್ರಭಾಷ್ಯವನ್ನು ಅವಲಂಬಿಸಿದೆ ಎಂದು ಡಾ॥ ಗೋಪಿನಾಥ್ ಕವಿರಾಜರವರು

ಅಭಿಪ್ರಾಯ ಪಟ್ಟಿದ್ದಾರೆ. (ತಾಂತ್ರಿಕ ಸಾಧನ ಔರ್‌ಸಿದ್ಧಿಯಾ) ಅಗಸ್ತ್ಯರು ಶ್ರೇಷ್ಠ ವೈದಿಕ ಋಷಿ ಎನಿಸಿದವರು, ಶಾಕ್ತದೀಕ್ಷೆಯನ್ನು ಪಡೆಯದಿದ್ದ ಕಾರಣ ಅವರಿಗೆ ಶ್ರೀ ಮಾತಾ ದರ್ಶನ ಭಾಗ್ಯ ದೊರೆತಿರಲಿಲ್ಲವೆಂದು ತ್ರಿಪುರ ರಹಸ್ಯದ ಮಹಿಮಾ ಖಂಡದಲ್ಲಿ ವಿವರಿಸಿದೆ. ಅದಕ್ಕಾಗಿ ಅವರು ದೇವೀಮಹಾತ್ಮೆಯ ಪಠನಮಾಡಿ ಶಾಕ್ತದೀಕ್ಷೆಯನ್ನು ಪಡೆದು ದಂಪತಿಗಳಿಬ್ಬರೂ ತದನಂತರ ಶ್ರೀವಿದ್ಯಾ ಉಪಾಸಕರಾದರೆಂದು ಮಾನಸೋಲ್ಲಾಸ ಗ್ರಂಥದಲ್ಲಿ ಹೇಳಿದೆ.

ಹಿಂದೂಸಂಸ್ಕೃತಿಯಲ್ಲಿ ಪ್ರಖ್ಯಾತವಾಗಿರುವ ಭಗವಾನ್‌ದತ್ತಾತ್ರೇಯನು ಸಹ ಶ್ರೀವಿದ್ಯೆಯ ಪ್ರಧಾನ ಉಪಾಸಕರಾಗಿದ್ದರು ಎಂದು ಅವರು ದತ್ತಸಂಹಿತಾ ಕೃತಿಯನ್ನು ರಚಿಸಿದ್ದಾರೆಂದು ತಿಳಿದು ಬರುತ್ತದೆ. ಅವರ ಶಿಷ್ಯರಾದ ಪರಶುರಾಮರು ಆ ಕೃತಿಯ ಆರು ಸಾವಿರ ಸೂತ್ರಗಳನ್ನು ಐವತ್ತು ಖಂಡವಲ್ಲಿ ಸಂಕ್ಷೇಪಗೊಳಿಸಿದರೆಂದು ಮತ್ತು ಅವರ ಶಿಷ್ಯರಾದ ಹರತಾಯನರು ಹತ್ತು ಖಂಡವಲ್ಲಿ ಸಂಕ್ಷೇಪಗೊಳಿಸಿದರೆಂದು ಉಲ್ಲೇಖಿಸಿದೆ. ಜಗತ್ ಪ್ರಸಿದ್ಧವಾದ ಆದಿಶಂಕರಾಚಾರ್ಯ ಪರಂಪರೆಯು ವೈದಿಕ ಸಂಸ್ಕೃತಿಯ ಪ್ರವರ್ತಕರು ಎಂದು ಪರಿಗಣಿಸಲ್ಪಟ್ಟಿದ್ದಾರೆ. ಅವರು ತಮ್ಮ ಅದ್ವೈತಸಿದ್ಧಾಂತದ ಪ್ರತಿಪಾದನೆಗೆ ಶ್ರೀ ಗೌಡಪಾದಾಚಾರ್ಯರ ಮಾಂಡೂಕ್ಯಕಾರಿಕ ಕೃತಿಯನ್ನು ಆಧಾರಭೂತವಾಗಿ ಬಳಸಿಕೊಂಡಿದ್ದಾರೆ. ಅವರು ಗೌಡಪಾದಾಚಾರ್ಯರು ಬರೆದ ಶ್ರೀ ವಿದ್ಯಾಸೂತ್ರ ತಂತ್ರಗ್ರಂಥಕ್ಕೆ ಟೀಕೆ ಬರೆದಿದ್ದಾರೆ. ಅಲ್ಲದೆ ಅವರೇ ಬರೆದ ಪ್ರಪಂಚಸಾರ ಎಂಬ ತಂತ್ರಗ್ರಂಥಕ್ಕೆ ಅವರ ಶಿಷ್ಯರಾದ ಪದ್ಮಪಾದಾಚಾರ್ಯರು ಟೀಕೆ ಬರೆದಿದ್ದಾರೆ. ಗೌಡಪಾದಾಚಾರ್ಯರು ಭಾರತೀಯ ವೇದಾಂತಿಗಳು ಮಾತ್ರವಲ್ಲದೆ ಮಾಧ್ಯಮಿಕ ಅದ್ವಯವಾದ ಮತ್ತು ಯೋಗಾಚಾರದ ಸಿದ್ಧಾಂತದಲ್ಲಿ ಪ್ರಸಿದ್ಧವಾದ ವಿದ್ವಾಂಸರೆನಿಸಿದ್ದರು. ಆಗಮ ಸಿದ್ಧಾಂತದಲ್ಲಿ ಪರಿಣಿತರು ಎನಿಸಿದ್ದರು. ದೇವಿ ಕಾಲೋತ್ತರ ತಂತ್ರದ ಕೆಲವು ಸೂತ್ರಗಳು ಅವರ ಕಾರಿಕಾ ಗ್ರಂಥದಲ್ಲಿ ಉಲ್ಲೇಖಿಸಲ್ಪಟ್ಟಿವೆ. ಅವರು ರಚಿಸಿದ ಸುಭಗೋದಯಸ್ತುತಿ ಎಂಬ ಸ್ತೋತ್ರ ಗ್ರಂಥವು ಪ್ರಾಚೀನ ಸ್ತುತಿ ಗ್ರಂಥವಲ್ಲಿ ಪ್ರಖ್ಯಾತವಾಗಿದೆ. ಅದರ ಮೇಲೆ ಶಂಕರಾಚಾರ್ಯರು ಸೇರಿದಂತೆ ಅನೇಕ ವಿದ್ವಾಂಸರು ಬರೆದ ವ್ಯಾಖ್ಯಾನಗಳು ಪ್ರಚಲಿತವಾಗಿವೆ. ಶ್ರೀ ಗೌಡಪಾದಾಚಾರ್ಯರು ಶ್ರೀ ವಿದ್ಯಾರತ್ನ ಸೂತ್ರ ಗ್ರಂಥವನ್ನು ಬರೆದಿದ್ದಾರೆ. ಅದರ ಮೇಲೆ ಅನೇಕರು ಟೀಕೆಗಳನ್ನು ಬರೆದಿದ್ದಾರೆ. ಅಲ್ಲದೆ ದೇವಿಮಹಾತ್ಮೆಗೆ ಭಾಷ್ಯವನ್ನು ಬರೆದಿರುವರೆಂದು ತಿಳಿದುಬರುತ್ತದೆ. (ತಾಂತ್ರಿಕ ಸಾಧನ ಔರ್‌ಸಿದ್ಧಿಯಾ : ಸಂ|| ಗೋಪೀನಾಥ ಕವಿರಾಜ್)

ಶ್ರೀ ಶಂಕರಾಚಾರ್ಯರ ಬಗೆಗೆ ಬರೆದ ಕೆಲವು ತಂತ್ರಗ್ರಂಥಗಳ ಪ್ರಸ್ತಾಪವು ಅನೇಕ ಗ್ರಂಥಗಳಲ್ಲಿ ಬರುತ್ತದೆ. ಶ್ರೀಕ್ರಮೋತ್ತಮ ಎಂಬ ಗ್ರಂಥವನ್ನು ಬರೆದವರು ಅದರಲ್ಲಿ ಅವರ ಗುರು ಪರಂಪರೆಯನ್ನು ಹೇಳಿರುವುದಾಗಿಯೂ ಅದರಂತೆ ಆದಿಗುರು ಶಿವನಿಂದ ಪ್ರಾರಂಭವಾಗಿ ಪರಾಶರ, ವ್ಯಾಸದೇವ, ಗೌಡಪಾದ, ಗೋವಿಂದಪಾದ ಮತ್ತು

ಶಂಕರಾಚಾರ್ಯರ ವರೆಗೆ ಗುರುಪರಂಪರೆಯನ್ನು ಹೇಳಿದೆ. ಅದರಲ್ಲಿ ಶಂಕರಾಚಾರ್ಯರ ಶಿಷ್ಯರು ವಿಶ್ವದೇವನೆಂಬವರು ಅವರ ನಂತರ ಬೋಧಘನ ಮತ್ತು ಈ ಗ್ರಂಥವನ್ನು ಬರೆದ ಮಲ್ಲಿಕಾರ್ಜುನ ಎನ್ನುವವರೆಗೆ ಗುರುಪರಂಪರೆಯ ಉಲ್ಲೇಖವಿದೆ. ಈ ಗ್ರಂಥ ಸಂಪೂರ್ಣವಾಗಿ ಶ್ರೀ ವಿದ್ಯೆಯ ವಿವರಣೆಗೆ ಸಂಬಂಧಪಟ್ಟುದಾಗಿದೆ.

ಎರಡನೆಯದಾಗಿ ಶ್ರೀ ಶಂಕರಚಾರ್ಯರ ಪರಂಪರೆಗೆ ಸೇರಿದ ಸುಂದರಾನಂದರ ಶಿಷ್ಯ ಶಂಕರಾಚಾರ್ಯರು ಹಿಂದಿನ ಗ್ರಂಥದಲ್ಲಿ ಹೇಳಿದಂತೆ ಆದಿಗುರು ಶಿವನಿಂದ ಪ್ರಾರಂಭವಾಗಿ ಗೋವಿಂದಪಾದರ ವರೆಗೂ, ಭೋದಘನನಿಂದ ಪ್ರಾರಂಭವಾಗಿ ಜ್ಞಾನಘನ ಮುಂತಾದವರ ಹೆಸರುಗಳನ್ನು ಹೇಳಿ ಭಾರತೀ ತೀರ್ಥರವರವರೆಗೂ ವಿವರಿಸಿದೆ. ಅವರ ಬಗೆಗೆ ಬರೆದ ಮತ್ತೊಂದು ಗ್ರಂಥ ಶ್ರೀವಿದ್ಯಾರ್ಣವ ಇಂದಿಗೂ ಅತ್ಯಂತ ಪ್ರಸಿದ್ಧವಾಗಿದೆ. ಇದರಲ್ಲಿ ಶಂಕರಾಚಾರ್ಯರ ಐದು ಜನ ಭಿಕ್ಷುಶಿಷ್ಯರನ್ನೂ ಒಂಬತ್ತು ಜನ ಗೃಹಸ್ತಶಿಷ್ಯರನ್ನೂ ವರ್ಣಿಸಿದೆ. ಇದೂ ಸಹ ಶ್ರೀವಿದ್ಯಾ ವಿವರಣಾತ್ಮಕ ಗ್ರಂಥವಾಗಿದೆ.

ನಾಲ್ಕನೆಯದಾಗಿ ಶಂಕರಾಚಾರ್ಯರ ಶಿಷ್ಯರಾದ ಪೃಥ್ವೀಧರ ಎಂಬುವರು ಭುವನೇಶ್ವರಿ ರಹಸ್ಯ ಎಂಬ ತಂತ್ರಗ್ರಂಥ ಬರೆದಿದ್ದಾರೆ. ಈ ಗ್ರಂಥಗಳನ್ನು ಪರಿಶೀಲಿಸಿದರೆ ಶ್ರೀ ಶಂಕರಾಚಾರ್ಯರು ಶ್ರೀವಿಷ್ಣು ಮತ್ತು ಮಾತಂಗಿತತ್ತ್ವದ ಉಪಾಸಕರಾಗಿದ್ದರೆಂದು ವ್ಯಕ್ತವಾಗುತ್ತದೆ. ಶಂಕರಾಚಾರ್ಯರ ಶಿಷ್ಯರಾದ ಪದ್ಮಪಾದಾಚಾರ್ಯರು ಪಂಚಪಾದಿಕ ಎಂಬ ತಂತ್ರಗ್ರಂಥವನ್ನು ರಚಿಸಿದ್ದಾರೆ. ಅದಕ್ಕೆ ಶಂಕರಾಚಾರ್ಯರ ಪ್ರಪಂಚಸಾರ ಕೃತಿ ಪ್ರೇರಣೆಯಾಗಿದೆಯೆಂದು ವಿದ್ವಾಂಸರ ಅಭಿಪ್ರಾಯವಾಗಿದೆ. ಸೌಂದರ್ಯಲಹರಿ ಶಂಕರಾಚಾರ್ಯರ ಕೃತಿ ಎಂಬುದು ನಿರ್ವಿವಾದ ಮತ್ತು ಅವರ ಆನಂದಲಹರಿಯ ಸೌಭಾಗ್ಯವರ್ಧಿನಿ ಟೀಕೆಯಲ್ಲಿ ಶ್ರೀ ಶಂಕರಾಚಾರ್ಯ ಕೃತಕ್ರಮಸ್ತುತಿಯ ಉಲ್ಲೇಖವಿದೆ.

ಅದರಂತೆ ಅವರು ಅದ್ವೈತ ಸಿದ್ಧಾಂತದ ಪ್ರತಿಪಾದನೆಗೆ ಸೂಚಿಸಿದ ಮಾಯಾವಾದವು ಭಗವತಿ ಪರಾಶಕ್ತಿಯ ಹೆಸರೆಂದೇ ಅಭಿಪ್ರಾಯಪಡಲಾಗಿದೆ. ಕಾಶ್ಮೀರಶೈವದರ್ಶನ ಪ್ರವರ್ತಕರಾದ ಅಭಿನವ ಗುಪ್ತರವರ ಪರಾತ್ರಿಂಶಿಕ ಗ್ರಂಥದಲ್ಲಿ ಬರುವಂಥ ಕ್ರಮಸ್ತೋತ್ರಕ್ಕೂ ಶ್ರೀ ಶಂಕರಾಚಾರ್ಯರು ಮೇಲೆ ಹೇಳಿದ ಕ್ರಮಸ್ತೋತ್ರಕ್ಕೂ ಸಾಮ್ಯತೆಯು ಕಂಡುಬರುತ್ತದೆ.

## ತಂತ್ರಶಬ್ದ ವಿವರಣೆ

ಷಡ್‌ದರ್ಶನಗಳಂತೆಯೇ ತಂತ್ರಗಳ ದಾರ್ಶನಿಕ ವಿಚಾರವು ಉದಾತ್ತ ಹಾಗೂ ಪ್ರಾಂಜಲವಾಗಿದೆ. ವೇದಗಳಂತೆಯೆ ಅವುಗಳ ಸಾಧನ ಪದ್ಧತಿಯು ಪವಿತ್ರ ಹಾಗೂ ಉಪಾದೇಯವಾಗಿದೆ. ಆದರೆ ತಂತ್ರಗಳ ಉದಾತ್ತವಾದ ಭಾವನೆಗಳು ಮತ್ತು ವಿಶುದ್ಧ ಆಚಾರ

ಪದ್ಧತಿಗಳಲ್ಲಿನ ಅರಿವು ಇಲ್ಲದೆ ಅನೇಕರು ತಂತ್ರಗಳ ವಿಷಯದಲ್ಲಿ ಅನಂತ ಭ್ರಾಂತ ಮನೋಭಾವನೆಯನ್ನುಳ್ಳವರಾಗಿದ್ದಾರೆ (ಭಾರತೀಯ ದರ್ಶನ - ಬಲದೇವ ಉಪಾಧ್ಯಾಯ) ಹೀಗೆ ತಂತ್ರಶಾಸ್ತ್ರದ ಮೇಲೆ ಪ್ರಚಲಿತವಾದ ಅಪಪ್ರಚಾರದಿಂದಾಗಿ ಇಂತಹ ಅಮೂಲ್ಯವಾದ ಜ್ಞಾನಸಂಪತ್ತು ನಮಗೆ ಸಿಲುಕದೆ ನಾವು ಆ ಉದಾತ್ತತತ್ತ್ವದ ಅರಿವಿನಿಂದ ವಂಚಿತರಾಗಿದ್ದೇವೆ.

ತಂತ್ರ ಶಬ್ದವು ವಿಸ್ತಾರಾರ್ಥಕವಾದ ತನ್‌ಧಾತುವಿಗೆ ಔಣಾದಿಕ ಪ್ರತ್ಯಯವಾದ ಷ್ಟನ್ (ಸರ್ವಧಾತುಬಲಃ ಷ್ಟನ್ - ಉಣಾದಿಸೂತ್ರ ೬೦೮) ಎಂಬುದನ್ನು ಸೇರಿಸಿರುವುದರಿಂದ ಉಂಟಾಗುತ್ತದೆ ಎಂದು "ಕಾಶಿಕಾವೃತ್ತಿ" ಯಲ್ಲಿ ಹೇಳಿದೆ. ಅಂದರೆ " ತನ್ಯತೆ, ವಿಸ್ತಾರ್ಯತೆ, ಜ್ಞಾನಮನೇನಾ ಇತಿ ತಂತ್ರಂ" ಎಂಬ ವ್ಯಾಖ್ಯಾನದಿಂದ ಶಾಸ್ತ್ರಮುಖೇನಾ ಯಾವ ತತ್ತ್ವ ಜ್ಞಾನದ ವಿವರಣೆ ದೊರೆಯುವುದೋ ಮತ್ತು ಯಾವುದು ಸಾಧಕನನ್ನು ರಕ್ಷಿಸುತ್ತದೆಯೋ ಅದಕ್ಕೆ ತಂತ್ರವೆಂದು ಕರೆಯುತ್ತಾರೆ. ಅದನ್ನು ಶೈವ ಸಿದ್ಧಾಂತದ ಕಾಮಿಕಾಗಮದಲ್ಲಿ

*ತನೋತಿ ವಿಪುಲಾನರ್ಥಾನ್ ತತ್ತ್ವ ಮಂತ್ರ ಸಮನ್ವಿತಾನ್ ।*
*ತ್ರಾಣಂ ಚ ಕುರುತೇಯಸ್ಮಾತ್ ತಂತ್ರಮಿತ್ಯಭಿಧೀಯತೇ ॥*

ಎಂದು ವಿವರಿಸಿದೆ. ತಂತ್ರಗಳಿಗೆ ಆಗಮಗಳು ಎಂದು ಕರೆಯುತ್ತಾರೆ. ಯಾವ ಶಾಸ್ತ್ರ ಮುಖೇನಾ ಮೋಕ್ಷಕ್ಕೆ ಯುಕ್ತವಾದಂಥ ಸಾಧನಾ ಮಾರ್ಗವು ಬುದ್ಧಿಯಲ್ಲಿ ಉಂಟಾಗುತ್ತದೋ ಅದಕ್ಕೆ ಆಗಮ ಶಾಸ್ತ್ರವೆಂದು ಕರೆಯುತ್ತಾರೆ. ವಾಚಸ್ಪತಿಯು ತಮ್ಮ ತತ್ತ್ವ ವೈಶಾರದಿಯಲ್ಲಿ ವ್ಯಾಖ್ಯಾನ ಮಾಡಿ,

*ಆಗಚ್ಛಂತಿ ಬುದ್ಧಿಮಾರೋಹಂತಿ ಯಸ್ಮಾದಭ್ಯುದಯಃ*
*ನಿಃಶ್ರೇಯ ಸೋಪಾಯಾಃ ಸ ಆಗಮಃ*

ಎಂದಿದ್ದಾರೆ.

ಯುಗಯುಗಗಳಿಗೆ ಮೋಕ್ಷಸಾಧನ ಮಾರ್ಗದಲ್ಲಿ ವೈವಿಧ್ಯವಿರುವುದನ್ನು ಈಗಾಗಲೇ ಹೇಳಿದೆ. ಮಹಾ ನಿರ್ವಾಣ ತಂತ್ರದಲ್ಲಿ ಆಚಾರವಿಹೀನರಾದ ಮತ್ತು ಅಶುದ್ಧರಾದ ಮಾನವರ ಕಲ್ಯಾಣಾರ್ಥವಾಗಿ ಶಂಕರನು ಸ್ವತಃ ಪಾರ್ವತಿಗೆ ತಂತ್ರಗಳನ್ನು ಉಪದೇಶ ಮಾಡಿದನೆಂದು ಹೇಳಿದೆ. ಅದನ್ನು ಮತ್ತಷ್ಟು ವಿಸ್ತಾರವಾಡಿ ಕುಲಾರ್ಣವ ತಂತ್ರವು ಕೃತಯುಗದಲ್ಲಿ ವೇದ ಹಾಗೂ ವೈದಿಕ ಉಪಾಸನಗಳು, ತ್ರೇತ್ರಾಯುಗದಲ್ಲಿ ಸ್ಮೃತಿ ಹಾಗೂ ಸ್ಮಾರ್ತ ಪೂಜೆಗಳು ದ್ವಾಪರ ಯುಗದಲ್ಲಿ ಪುರಾಣ ಹಾಗೂ ಪುರಾಣ ಸಮ್ಮತವಾದ ಪದ್ಧತಿಯು ಕಲಿಯುಗದಲ್ಲಿ ತಂತ್ರ ಹಾಗೂ ತಾಂತ್ರಿಕ ಉಪಾಸನೆಗಳಿಗೆ ಮಹತ್ವವಿರುವುದಾಗಿ ವಿವರಿಸಿದೆ.

*ವಿನಾ ಹ್ಯಾಗಮ ಮಾರ್ಗೇಣ ಕಲಾನಾಸ್ತಿಗತಿಃ ಪ್ರಿಯೇ ॥ (ಮಹಾನಿರ್ವಾಣತಂತ್ರ)*
*ಮಹಾನಿರ್ವಾಣತಂತ್ರ ಕೃತೇ ಶ್ರುತ್ಯಕ್ತ ಆಚಾರಃ*
*ತ್ರೇತಾಯಾಂ ಸ್ಮೃತಿ ಸಂಭವಃ ॥*
*ದ್ವಾಪರೇತು ಪುರಾಣೋಕ್ತಃ ಕಲಾವಾಗಮ ಸಮ್ಮತಃ ॥ (ಕುಲಾರ್ಣವತಂತ್ರ)*

ಕುಲಾರ್ಣವ ತಂತ್ರದಲ್ಲಿ ಇಂದಿನ ವೈದಿಕ ಉಪಾಸನೆಯ ಪದ್ಧತಿಯಲ್ಲಿ ಉಕ್ತವಾಗಿರುವ ಪಂಚಾಂಗ ಸೇವೆ ಅಂದರೆ ಪಟಲ, ಪದ್ಧತಿ, ಕವಚ, ಸಹಸ್ರನಾಮ ಮತ್ತು ಸ್ತೋತ್ರ ಇವುಗಳನ್ನು ವ್ಯಕ್ತಗೊಳಿಸುವ ಗ್ರಂಥಗಳೇ ತಂತ್ರಗಳು ಎಂದು ಹೇಳಿದೆ. ಇದನ್ನು ಗಮನಿಸಿದಾಗ ತಂತ್ರ ಹಾಗೂ ಆಗಮ ಎಂಬ ಹೆಸರುಗಳು ಸರ್ವಜನರಿಗೆ ಉಪಾಸನ ಸಾಧನವಾದ ತಾತ್ತ್ವಿಕ ಮಾರ್ಗಗಳನ್ನು ಸೂಚಿಸುವ ಪವಿತ್ರ ಧರ್ಮಗ್ರಂಥಗಳೆಂದು ಅರ್ಥವಾಗುತ್ತದೆ. ಜಗತ್ತಿನ ಎಲ್ಲ ಧರ್ಮಶಾಸ್ತ್ರಗಳು ಪ್ರತಿಯೊಬ್ಬ ಮಾನವನ ಅಭ್ಯುದಯಕ್ಕಾಗಿ ಮಹಾನುಭಾವರಿಂದ ಪ್ರೇರಿತವಾದ ಪುಣ್ಯಕೃತಿಗಳಾಗಿರುತ್ತವೆ. ಕಾಲಾಂತರದಲ್ಲಿ ಅವು ವಿಚಿತ್ರ ವ್ಯಾಖ್ಯಾನ ಮತ್ತು ವಿರೋಧ ಅನುಸಂಧಾನಗಳಿಂದ ಅಪಕೀರ್ತಿ ಪಡೆದ ಸಂದರ್ಭಗಳಿವೆ. ಅದರಂತೆ ತಾಂತ್ರಿಕ ಉಪಾಸನ ಮಾರ್ಗಗಳ ಬಗೆಗೆ ತಪ್ಪು ಕಲ್ಪನೆಗಳು ಬೆಳೆದು ಬಂದು ಅದರಲ್ಲಿ ಉಪೇಕ್ಷೆಯು ಬೆಳೆಯಿತು. ಆಗಮಗಳಿಗೆ ಏಳು ಲಕ್ಷಣಗಳು ಇರುವುದಾಗಿಯೂ ಅವುಗಳನ್ನು ಶಾಂತಿ, ವಶೀಕರಣ, ಸ್ತಂಭನ, ವಿದ್ವೇಷಣ, ಉಚ್ಚಾಟಣ ಮತ್ತು ಮಾರಣ ಇವುಗಳ ಸಾಧನ ಹಾಗೂ ಧ್ಯಾನಯೋಗ ಎಂಬ ಏಳು ಲಕ್ಷಣಗಳಿಂದ ಕೂಡಿರಬೇಕೆಂದು ವಾರಾಹಿ ತಂತ್ರದಲ್ಲಿ ಹೇಳಿದೆ :

*ಸೃಷ್ಟಿಶ್ಚ ಪ್ರಳಯಶ್ಚೈವ ದೇವತಾನಾಂ ಯಥಾರ್ಚನಮ್ ॥*
*ಸಾಧನಂ ಚೈವ ಸರ್ವೇಷಾಂ ಪುರಶ್ಚರಣಮೇವ ಚ ॥*
*ಷಟ್‌ಕರ್ಮ ಸಾಧನಂ ಚೈವ ಧ್ಯಾನಯೋಗಶ್ಚತುರ್ವಿಧಃ ।*
*ಸಪ್ತಭಿರ್ಲಕ್ಷಣೈರ್ಯುಕ್ತಮಾಗಮಂ ತದ್ ವಿದುರ್ಬುಧಾಃ ॥ ಎಂದಿದೆ.*

ಮೇಲ್ಕಂಡ ವಾರಾಹಿತಂತ್ರದ ಆಗಮಲಕ್ಷಣಗಳಲ್ಲಿ ನಾವು ಆಗಮಗಳಿಂದ ಅರಿಯಬೇಕಾದುದು ಸೃಷ್ಟಿ, ಪ್ರಳಯ, ದೇವತಾರ್ಚನೆ, ಮೋಕ್ಷಸಾಧನೆ, ಪುರಶ್ಚರಣ, ಧ್ಯಾನಯೋಗದ ನಾಲ್ಕು ವಿಧಾನಗಳು ಎಂದು ತಿಳಿದುಬರುತ್ತದೆ. ವೈದಿಕ ಸಾಹಿತ್ಯವು ನಮಗೆ ಈ ಮಹತ್ವದ ತತ್ತ್ವವನ್ನು ತಿಳಿಸುತ್ತದೆ. ತಂತ್ರಶಾಸ್ತ್ರದಲ್ಲಿ ಪರಿಣತರಾದ ವಿದ್ವಾಂಸರು ಅದರಲ್ಲಿ ವೈದಿಕ ಸಂಸ್ಕೃತಿಯ ಸ್ವರೂಪಗಳಿವೆ ಎಂಬುದನ್ನು ಒಪ್ಪಿದ್ದಾರೆ. ಇತ್ತೀಚಿನ ವಿದ್ವಾಂಸರಾದ ಶ್ರೀ ನಳಿನೀಕಾಂತಬ್ರಹ್ಮರವರು ತಂತ್ರತತ್ವವನ್ನು ಕುರಿತು:

The Tantras offered themselves to the people at this stage, containing within them the essentials of the vedic sacrifices and oblations and the essence of the monotheistic philosophy of the Upanishads, of the Bhakti

cult preached by the puranas, of the Yoga method propounded by patanjali, and of the mantra element of the Atharva Veḍa.

(Phylosophy of Hindu Sadana, By Nalinikantha Bramha)

ಎಂದಿದ್ದಾರೆ.

ಆಗಮ ಅಥವಾ ತಂತ್ರಗ್ರಂಥಗಳಲ್ಲಿ ಉಕ್ತವಾದ ಉಪಾಸನಾ ರಹಸ್ಯ ಮತ್ತು ಸಿದ್ಧಾಂತವನ್ನು ಇಲ್ಲಿ ಪ್ರಸ್ತಾಪಿಸದೆ ಅದರ ಬಾಹ್ಯ ಪರಿಚಯವನ್ನು ಮಾತ್ರ ಈ ಲೇಖನದಲ್ಲಿ ಮಾಡಿಕೊಡಲಾಗುತ್ತದೆ. ಇದರ ಪರಿಚಯದ ದೃಷ್ಟಿಯಿಂದ ಅದರ ವಿಪುಲತೆಯನ್ನು ಅರಿಯುವ ಅಗತ್ಯವಿದೆ.

## ತಂತ್ರಸಾಹಿತ್ಯದ ವೈಶಾಲ್ಯ

ತಂತ್ರ ಅಥವಾ ಆಗಮಶಾಸ್ತ್ರದಲ್ಲಿ ಹದಿನಾಲ್ಕು ಸಹಸ್ರಗ್ರಂಥಗಳು ಇದ್ದವು ಎಂದು ಉಲ್ಲೇಖವಿರುವುದಾದರೂ ಈಗ ನಮಗೆ ಲಭ್ಯವಾಗಿರುವ ಗ್ರಂಥಗಳು ಅತ್ಯಲ್ಪ. ತಂತ್ರಗ್ರಂಥದಲ್ಲಿ ಸಂಪ್ರದಾಯಗಳನುಸಾರ ಸದ್ಯಕ್ಕೆ ದೊರೆತ ಗ್ರಂಥಗಳನ್ನು ಶಾಸ್ತ್ರಜ್ಞರು ಹೀಗೆ ವಿಭಜನೆ ಮಾಡಿದ್ದಾರೆ. ವೈಷ್ಣವ ಆಗಮಗಳು ೧೦೮, ಶೈವ ಆಗಮಗಳು ೨೮, ಶಾಕ್ತ ಆಗಮಗಳು ೬೪, ಕೌಲ ಗ್ರಂಥಗಳು ೮, ಮಿಶ್ರ ಮತ್ತು ಸಮಯ ಆಗಮಗಳು ೫, ಈ ಸಂಪ್ರದಾಯಗಳಲ್ಲೂ ಸಹ ಅನೇಕ ವಿಭಾಗಗಳಿರುತ್ತದೆ. ಇವೆಲ್ಲವೂ ಹಿಂದೂ ಸಂಸ್ಕೃತಿಯ ಪೋಷಕವಾದ ಕೃತಿಗಳೇ ಆಗಿವೆ. ಬೌದ್ಧ ಸಂಪ್ರದಾಯದ ತಂತ್ರಗ್ರಂಥವು ವಿಪುಲವಾಗಿದೆ. ಈ ಸಂಪ್ರದಾಯದ ವಿವರಣೆ ಮತ್ತು ವಿಶ್ಲೇಷಣೆ ಇಲ್ಲಿ ಅಪ್ರಸ್ತುತ. ಶೈವಸಂಪ್ರದಾಯಕ್ಕೆ ಸೇರಿದ ಆಗಮಗಳ ಸೂಕ್ತಪರಿಚಯವನ್ನು ಮಾಡಿಕೊಡಲು ಇಲ್ಲಿ ಯತ್ನಿಸಲಾಗಿದೆ. ವಾರಾಹಿ ತಂತ್ರದಲ್ಲಿ ೫೫ ಶಿವನಿಂದ ಉಪದಿಷ್ಟವಾದ ತಂತ್ರಗಳ ಹೆಸರು ಬರುವುದಲ್ಲದೆ ಅವುಗಳಲ್ಲಿ ೯,೬೭,೯೪೯ ಶ್ಲೋಕಗಳು ಇರುವುವು ಎಂದು ಹೇಳಿದೆ. ಆಗಮತತ್ತ್ವವಿಲಾಸ ಎಂಬ ಗ್ರಂಥದಲ್ಲಿ ಇಂದಿಗೂ ೨೦೮ ತಂತ್ರ ಗ್ರಂಥಗಳು ಉಪಲಬ್ಧವಿರುವುದಾಗಿ ಹೇಳಿದೆ. ಶಂಕರಾಚಾರ್ಯಕೃತ ಸೌಂದರ್ಯಲಹರಿಯ ೩೧ನೇ ಶ್ಲೋಕದ ವ್ಯಾಖ್ಯಾನ ಮಾಡುತ್ತಾ ಲಕ್ಷ್ಮೀಧರ ಎಂಬುವರು ೧) ವಶಿಷ್ಠ ಸಂಹಿತ ೨) ಸನಕ ಸಂಹಿತ ೩) ಶುಕ ಸಂಹಿತ ೪) ಸನಂದನ ಸಂಹಿತ ೫) ಸನತ್ಕುಮಾರ ಸಂಹಿತ ಈ ಐದು ಕೃತಿಗಳನ್ನು ಶುಭಾಗಮ ಪಂಚಕಗಳೆಂದು ಕರೆದಿದ್ದಾರೆ. ಲಲಿತಾ ಸಹಸ್ರನಾಮದ ಸೌಭಾಗ್ಯ ಭಾಸ್ಕರ ಭಾಷ್ಯದಲ್ಲಿ ೮೮ನೇ ಶ್ಲೋಕದ ಟೀಕೆಯಲ್ಲಿ ಕಾಮಿಕ, ಯೋಗಜ, ಕಾರಣ, ಪ್ರಸೃತಾಗಮ, ಅಜಿತಾಗಮ, ದೀಪ್ತಾಗಮ, ಅಂಶುಮಾನಾಗಮ, ಸುಪ್ರಭೇದಾಗಮ, ವಿಜಯಾಗಮ, ನಿಶ್ವಾಸಾಗಮ, ವಿಮಲಾಗಮ, ಸ್ವಾಯಂಭುವ ಆಗಮ, ಅನಲಾಗಮ, ವೀರಾಗಮ, ರೌರವಾಗಮ, ಮುಕುಟಾಗಮ. ಚಂದ್ರಜ್ಞಾನಾಗಮ, ಬಿಂಬಾಗಮ, ಪ್ರೋದ್ಗೀತ ಲಲಿತಾಗಮ, ಸಿದ್ಧಾಗಮ,

ಸಂತಾನಾಗಮ, ಕಿರಣಾಗಮ, ವಾತುಲಾಗಮ, ಸೂಕ್ಷ್ಮಾಗಮ, ಸಹಸ್ರಾಗಮ, ಸರ್ವೋತ್ತರಾಗಮ, ಪರಮೇಶ್ವರಾಗಮ ಎಂಬ ೨೮ ಆಗಮಗಳ ಹೆಸರುಗಳನ್ನು ಉಲ್ಲೇಖಿಸಿದ್ದಾರೆ. ಇವು ಶೈವತಂತ್ರಗಳು ಎಂದು ಪ್ರಸಿದ್ಧವಾಗಿವೆ.

## ಶೈವತಂತ್ರಗಳ ಉತ್ಪತ್ತಿ

ಯಜುರ್ವೇದದಲ್ಲಿರುವ ಶತರುದ್ರೀಯ ಅಧ್ಯಾಯ ತೈತ್ತರೀಯ ಅರಣ್ಯಕ ಮತ್ತು ಶ್ವೇತಾಶ್ವತರ ಉಪನಿಷತ್ ಇವುಗಳಲ್ಲಿ ರುದ್ರ ತತ್ತ್ವ, ಶಿವನ ವಿಶ್ವವ್ಯಾಪಕತ್ವವನ್ನು ಉಲ್ಲೇಖಿಸಿದೆ. ಶಿವಾಗಮಗಳು ಶಿವನ ಪಂಚಮುಖಗಳಿಂದ ಪಾರ್ವತಿಗೆ ಬೋಧಿಸಲ್ಪಟ್ಟ ಗ್ರಂಥಗಳು ಎಂದು ಜಯವ್ರಥನ ತಂತ್ರಾಲೋಕವ ಭಾಷ್ಯದಲ್ಲಿ ಹೇಳಿದೆ. ಅದರ ವಿವರಣೆಯ ಪ್ರಕಾರ ಶಿವನ ಸದ್ಯೋಜಾತ ಮುಖದಿಂದ ಕಾಮಿಕ, ಯೋಗಜ ಚಿಂತ್ಯಾ, ಕಾರಣ, ಅಜಿತ ಆಗಮಗಳು ವಾಮದೇವ ಮುಖದಿಂದ ದೀಪ್ತಿ, ಸೂಕ್ಷ್ಮ, ಸಹಸ್ರ, ಅಂಶುಮಾನ, ಸುಪ್ರಭೇದ ಆಗಮಗಳು ಅಘೋರ ಮುಖದಿಂದ ವಿಜಯ, ನಿಶ್ವಾಸ, ಸ್ವಾಯಂಭುವ, ಅನಲ, ವೀರಾಗಮಗಳು. ತತ್ಪುರುಷ ಮುಖದಿಂದ ರೌರವ, ಮುಕುಟ, ವಿಮಲ, ಚಂದಜ್ಞಾನ, ಬಿಂಬಾಗಮಗಳು, ಈಶಾನ್ಯ ಮುಖದಿಂದ ಪ್ರೋದ್ಗೀತ, ಲಲಿತ ಸಿದ್ಧಾ, ಸಂತಾನ, ಸರ್ವೋತ್ತರ, ಪರಮೇಶ್ವರ, ಕಿರಣ, ವಾತುಲ ಆಗಮಗಳು ಉದಿಸಿದವೆಂದು ಉಲ್ಲೇಖಿಸಿದೆ. ಈ ಆಗಮ ಸಾಹಿತ್ಯವನ್ನು ಅವಲಂಬಿಸಿ ಅನೇಕ ವಿದ್ವಾಂಸರು ಶೈವದರ್ಶನದ ಕೃತಿಗಳನ್ನು ರಚಿಸಿದ್ದಾರೆ. ಅಪ್ಪಯ್ಯದೀಕ್ಷಿತರ ಶಿವಾರ್ಕಮಣಿ ದೀಪಿಕ, ಸದ್ಯೋಜ್ಯೋತಿ ಯೋಗಿಗಳ ಮೋಕ್ಷಕಾರಿಕ, ಯೋಗಕಾರಿಕಾ, ತತ್ತ್ವಸಂಗ್ರಹ, ಸತ್ತ್ವತ್ರಯ, ನರೇಶ್ವರ ಪರೀಕ್ಷಾ, ಪರಮೋಕ್ಷನಿರಾಶಕಾರಿಕಾ, ರೌರವಾಗವ ವೃತ್ತಿ, ಸ್ವಯಂಭುವಾಗಮ ಭಾಷ್ಯ ಇವು ಉಲ್ಲೇಖನೀಯ ಕೃತಿಗಳು. ಕಾಶ್ಮೀರದ ರಾಮಕಂಠನು ಸದ್ಯೋಜ್ಯೋತಿ ಅವರ ಕೃತಿಗಳ ಮೇಲೆ ಬರೆದ ಪರಮೋಕ್ಷ ನಿರಾಶಕಾರಿಕ ವೃತ್ತಿ, ಮಾತಂಗ ವೃತ್ತಿ, ನಾದಕಾರಿಕಾ, ಮೋಕ್ಷಕಾರಿಕಾವೃತ್ತಿ, ನರೇಶ್ವರ ಪರೀಕ್ಷಾ ಟೀಕಾ ಕೃತಿಗಳು, ಹರದತ್ತ ಶಿವಾಚಾರ್ಯರ ಶ್ರುತಿಸೂಕ್ತಮಾಲ ಚತುರ್ವೇದ ತಾತ್ಪರ್ಯ ಸಂಗ್ರಹ ಮತ್ತು ಭೋಜರಾಜನ ತತ್ತ್ವಪ್ರಕಾಶಿಕ ಗ್ರಂಥದ ಮೇಲೆ ಅಘೋರ ಶಿವಾಚಾರ್ಯರು ಬರೆದ ವೃತ್ತಿಯು ಮತ್ತು ಅವರೇ ಬರೆದ ನಾರದಕಾಶಿಕವೃತ್ತಿ ಆಗಮಗಳಿಂದ ಪ್ರಚೋದಿತವಾದ ಪ್ರಸಿದ್ಧ ಗ್ರಂಥಗಳೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಅದರಂತೆ ವೀರಶೈವ ದರ್ಶನಕ್ಕೆ ಪ್ರಮುಖವಾದ ಗ್ರಂಥವೆನಿಸಿದ ಸಿದ್ಧಾಂತ ಶಿಖಾಮಣಿಯು ತಂತ್ರಗ್ರಂಥ ಆಧಾರಿತವೆಂದೇ ಪ್ರಸಿದ್ಧವಾಗಿದೆ.

ಸಿದ್ಧಾಂತ ಶಿಖಾಮಣಿಯಲ್ಲಿ :

*ಸರ್ವೇಷಾಂ ಶೈವತಂತ್ರಾಣಾ ಮುಕ್ತ ರತ್ನಾನ್ನಿರುತ್ತರಂ ।*
*ನಾಮ್ನಾಪ್ರತೀಯತೇ ಲೋಕೇಯಕ್ಷಿದ್ಧಾಂತ ಶಿಖಾಮಣಿಃ*

*ಅನುಗತಸಕಲಾರ್ಥೇಃಶೈವ ತಂತ್ರೈಃ ಸಮಸ್ತೈಃ*
*ಪ್ರಕಟಿತ ಶಿವಬೋಧಾದ್ವೈತಭಾವ ಪ್ರಸಾದೇ*
*ವಿದಧತು ಮತಿಮಸ್ಮಿನ್ ವೀರಶೈವಾ ವಿಶಿಷ್ಟಾಃ*
*ಪಶುಪತಿಮತಸಾರೋ ಪಂಡಿತಶ್ಲಾಘನೀಯೇ //* ಎಂದಿದೆ.

ಮೇಲಿನ ಶ್ಲೋಕಗಳಲ್ಲಿ ವೀರಶೈವ ಮಹಾತಂತ್ರ ಸರ್ವ ಶೈವತಂತ್ರಗಳಲ್ಲಿ ಶ್ರೇಷ್ಠವಾದುದರಿಂದ ಅದನ್ನು ಸಿದ್ಧಾಂತಶಿಖಾಮಣಿಯೆಂದು ಕರೆಯಲಾಗಿದೆ ಎಂದು ಮತ್ತು ಸಮಸ್ತ ಶಿವಾಗಮಗಳನ್ನನುಸರಿಸುತ್ತಿರುವ ರಹಸ್ಯಾರ್ಥವನ್ನು ಪ್ರತಿಪಾದಿಸತಕ್ಕುದೂ, ಶಿವಜ್ಞಾನದಿಂದುಂಟಾಗುವ ಶಿವಾದ್ವೈತ ಭಾವರೂಪ ಪ್ರಸಾದವನ್ನು ಪ್ರಕಟಿಸತಕ್ಕುದೂ, ಶಿವಮತಸಾರವುಳ್ಳದೂ, ಪಂಡಿತ ಮಂಡಲಿಯಿಂದ ಶ್ಲಾಘನೀಯವಾದುದು ಆಗಿರುವ ಈ ಸಿದ್ಧಾಂತಶಿಖಾಮಣಿಯಲ್ಲಿ ವೀರಶೈವೋತ್ತಮರು ಪೂಜ್ಯಬುದ್ಧಿಯನ್ನಿಡಬೇಕು ಎಂದಿದೆ. (ಸಿದ್ಧಾಂತ ಶಿಖಾಮಣಿ 1 - 31, 32)

ಇದಲ್ಲದೆ ವೀರಶೈವ ಧರ್ಮವನ್ನು ಕುರಿತು ಇತ್ತೀಚಿನ ವಿದ್ವಾಂಸರು ಬರೆದ ಸಂಸ್ಕೃತ ಕೃತಿಗಳಾದ ವೀರಶೈವಾನಂದ ಚಂದ್ರಿಕೆ, ಲಿಂಗಧಾರಣ ಚಂದ್ರಿಕೆ ವೀರಶೈವಧರ್ಮ ಶಿರೋಮಣಿ, ಮಗ್ಗೆಮಾಯಿದೇವರ ಶಿವಾನುಭವ ಸೂತ್ರಗಳು ಇವುಗಳಲ್ಲಿ ಆಗಮ ಪ್ರತೀತವಾದ ಅಂಶಗಳನ್ನು ಉದಾಹರಿಸಿರುವುದು ಕಂಡುಬರುತ್ತದೆ. ಅಂತೆಯೇ ನೀಲಕಂಠ ಶಿವಾಚಾರ್ಯರ ಕ್ರಿಯಾಸಾರ, ಶ್ರೀಪತಿಪಂಡಿತಾರಾಧ್ಯರ ಶ್ರೀಕರಭಾಷ್ಯ ಇವುಗಳಲ್ಲಿ ಆಗಮಗಳನ್ನು ಅನೇಕ ಸಂದರ್ಭಗಳಲ್ಲಿ ಉದಾಹರಿಸುವುದು ಅದರಿಂದ ಪ್ರೇರಣೆಯನ್ನು ಪಡೆದಿರುವುದು ಕಂಡುಬರುತ್ತದೆ. ೧೨ನೇ ಶತಮಾನದ ಶರಣರು ಆಗಮಗಳ ಪ್ರಾಚೀನತೆಯನ್ನು ಮತ್ತು ಅವುಗಳ ಮಹತ್ವವನ್ನು ಪ್ರಶಂಸೆ ಮಾಡಿದ್ದಾರೆ. ಅವುಗಳಿಂದ ಪ್ರೇರಣೆ ಪಡೆದಿದ್ದಾರೆ ಹಾಗೂ ಅವರ ವಚನಗಳಲ್ಲಿ ಆಗಮಗಳನ್ನು ಧಾರಾಳವಾಗಿ ಉದಾಹರಿಸಿರುವುದು ಕಂಡುಬರುತ್ತದೆ.

ಕಾಶ್ಮೀರಶೈವ ಸಿದ್ಧಾಂತವು ಸಂಪೂರ್ಣವಾಗಿ ಆಗಮಶಾಸ್ತ್ರವನ್ನು ಅವಲಂಬಿಸಿದೆ ಎಂಬುದು ಆ ಗ್ರಂಥಗಳ ಅವಲೋಕನಗಳಿಂದ ವ್ಯಕ್ತವಾಗುತ್ತದೆ. ಈ ಸಿದ್ಧಾಂತದ ಪ್ರವರ್ತಕರಾದ ಅಭಿನವ ಗುಪ್ತರವರನ್ನು ತಂತ್ರಾಚಾರ್ಯರೆಂದು ಕರೆಯಲಾಗಿದೆ. ಅವರ ಕೃತಿಗಳಾದ ತಂತ್ರಾಲೋಕ, ಪರಮಾರ್ಥಸಾರ, ಈಶ್ವರ ಪ್ರತ್ಯಾಭಿಜ್ಞ ವಿಮರ್ಶಿನಿ, ಮಾಲಿನಿ ವಿಜಯವಾರ್ತಿಕ, ಪರಿತ್ರಿಂ ಶಿಖಾವೃತ್ತಿ ಇತ್ಯಾದಿ ಕೃತಿಗಳು ಆಗಮ ತತ್ತ್ವದಿಂದ ಪ್ರೇರಿತವಾಗಿದೆ ಎಂಬುದು ನಿರ್ವಿವಾದ. ಅವರ ಶಿಷ್ಯರಾದ ಕ್ಷೇಮರಾಜರ ಕೃತಿಗಳಾದ ಪ್ರತ್ಯಭಿಜ್ಞಾಹೃದಯ, ಸ್ವಚ್ಛಂದತಂತ್ರ ವಿಜ್ಞಾನಭೈರವ, ನೇತ್ರ ತಂತ್ರ, ಸ್ಪಂದ ಸಂದೋಹ, ಶಿವಸೂತ್ರ ವಿಮರ್ಶಿನಿ ಇವು ತಂತ್ರ ಗ್ರಂಥಗಳ ಸಮುದಾಯದಲ್ಲಿ ಅತ್ಯಂತ ಮಹತ್ವದ ಕೃತಿಗಳು ಎಂದು ಪರಿಗಣಿಸಲ್ಪಟ್ಟಿವೆ.

ಶೈವದರ್ಶನದಲ್ಲಿ ಪ್ರಚಲಿತವಾಗಿರುವ ಪ್ರಭೇದಗಳಾದ ಪಾಶುಪತ, ಲಕುಲೀಶ, ಕಾಳಾಮುಖ ರಸೇಶ್ವರಶೈವ. ಇತ್ಯಾದಿ ದರ್ಶನಗಳು ಆಗಮ ಗ್ರಂಥಗಳನ್ನೇ ತಮ್ಮ ಸಿದ್ಧಾಂತದ ಪ್ರತಿಪಾದನೆಗೆ ಆಧಾರವಾಗಿಟ್ಟುಕೊಂಡಿರುವುದು ಸರ್ವವಿದಿತವಾಗಿದೆ. ಶೈವದರ್ಶನದ ಮತ್ತೊಂದು ಪ್ರಭೇದವಾದ ಸಿದ್ಧಾಂತಶೈವ ದರ್ಶನವು ದಕ್ಷಿಣಭಾರತದ ತಮಿಳುನಾಡಿನಲ್ಲಿ ಪ್ರಚಲಿತವಾಗಿದೆ. ಈ ಸಿದ್ಧಾಂತ ದರ್ಶನಕ್ಕೂ ಸಹ ತಂತ್ರಗ್ರಂಥಗಳೇ ಆಧಾರವಾಗಿವೆ.

ತಮಿಳುನಾಡಿನ ಶೈವಸಿದ್ಧಾಂತದ ಪ್ರವರ್ತಕರಾದ ತಿರುಮೂರವರು ತಮ್ಮ ತಿರುಮಂತಿರಂ ಎಂಬ ಗ್ರಂಥದಲ್ಲಿ ವೇದ ಮತ್ತು ಆಗಮಗಳೆರಡು ಭಗವಂತನಿಂದಲೇ ಬೋಧಿಸಲ್ಪಟ್ಟಿವೆ ಎಂದು ಅದರಲ್ಲಿ ವೇದವು ಸಾಮಾನ್ಯವೆಂದು ಶಿವಾಗಮಗಳು ವಿಶೇಷವೆಂದು ಹೇಳಿದ್ದಾರೆ. ಈ ಅಭಿಪ್ರಾಯವನ್ನು ಶಿವಜ್ಞಾನ ಸಿದ್ಧಿಯಾರ್ ಗ್ರಂಥವು ಸಹ ಸಮರ್ಥಿಸಿದೆ. ವೇದಗಳಲ್ಲಿ ಮಾನವರಿಗೆ ಆಗತ್ಯವಾದ ದೇವತೆಗಳನ್ನು ಪೂಜಿಸಿರುವುದರಿಂದ ಮತ್ತು ಮಾನವರ ಅಂತಸ್ತಿಗೆ ಅನುಗುಣವಾಗಿ ಧಾರ್ಮಿಕ ದಿವ್ಯತೆಯನ್ನು ಹೇಳುವುದರಿಂದ ಅವು ಸಾಮಾನ್ಯವೆಂದು ಹೇಳಿದೆ. ಶಿವಾಗಮಗಳಲ್ಲಿ ಶಿವನೊಬ್ಬನನ್ನು ಪರವಸ್ತುವೆಂದು ಆ ಪರಮಾತ್ಮನ ತತ್ತ್ವವೇ ಸರ್ವಗ್ರಾಹ್ಯವಾದ ತತ್ತ್ವವೆಂದು ಭಾವಿಸಿರುವುದರಿಂದ ಶಿವಾಗಮಗಳು ವಿಶೇಷವೆಂದು ಮೇಯಿಕಂಡ ಶಾಸ್ತ್ರದ ಕರ್ತೃಗಳು ತಮ್ಮ ಶಿವಜ್ಞಾನ ಸಿದ್ಧಿಯಾರ್ ಗ್ರಂಥದಲ್ಲಿ ಹೇಳಿದ್ದಾರೆ ಮತ್ತು ಅವರು ವೈದಿಕ ವಿಚಾರಧಾರೆಯನ್ನು ಪೂರ್ವಪಕ್ಷವೆಂದು ಆಗಮ ವಿಚಾರಧಾರೆಯನ್ನು ಅಂತಿಮ ಸಿದ್ಧಾಂತ ಪಕ್ಷವೆಂದು ಕರೆದಿದ್ದಾರೆ. (ಶೈವ ಸಿದ್ಧಾಂತ - ವಿ. ಪರಂಜ್ಯೋತಿ, ಪು - 18, 19)

ಈ ಹಿಂದೆ ಶೈವಪರವಾದ 28 ಶಿವಾಗಮಗಳಿರುವ ಸಂಗತಿಯನ್ನು ಪ್ರಸ್ತಾಪಿಸಿದೆ. ಇವುಗಳಿಂದ ಅನೇಕ ಉಪಆಗಮಗಳು ಶೈವದರ್ಶನಕ್ಕೆ ಪ್ರೇರಕವಾಗಿವೆ. ಮೈಸೂರು ಜಿಲ್ಲೆಯಲ್ಲಿ ಕ್ರಿ.ಶ. 1500 ರಲ್ಲಿ ಇದ್ದ ಶ್ರೀ ನಿಜಗುಣ ಶಿವಯೋಗಿಗಳು ತಮ್ಮ ವಿವೇಕ ಚಿಂತಾಮಣಿಯಲ್ಲಿ ಶಿವಾಗಮಗಳು ಮತ್ತು ಉಪಾಗಮಗಳನ್ನು ವಿವರಿಸಿದ್ದಾರೆ. ಈ ವಿವರಣೆಯು ಕಾಮಿಕ ಮತ್ತು ಕಾರಣ ಆಗಮದ ತಂತ್ರವಾತಾರ ಪಟಲದಲ್ಲಿ ಹೇಳಿರುವುದಕ್ಕೆ ಸಮನಾಗಿದೆ.

### ಉಪಾಗಮಗಳು

ಪ್ರಧಾನವಾದ 28 ಶಿವಾಗಮಗಳ ಬಾಹುಳ್ಯದಂತೆ ಉಪಾಗಮಗಳು ವಿಪುಲವಾಗಿದ್ದು ಅವು ಸಹ ಶೈವದರ್ಶನದ ಪ್ರೇರಕ ಗ್ರಂಥಗಳಾಗಿವೆ. ಅವು ಯಾವುವು ಎಂದರೆ.

1) ಭೈರವ 2) ಉತ್ತರ 3) ನರಸಿಂಹ 4) ಪಿನಾಸಿಕೋತ್ತರ 5) ತಾರಾ 6) ಶಾಂತ 7) ಸಂಖ್ಯಾ 8) ಸಂತತ 9) ಸಾಂತ್ಯಾ 10) ಆತ್ಮಯೋಗ 11) ಸುಚಿಂತ್ಯಾ 12) ಸುಭಗ 13) ವಾಮ 14)

ಪಾಪನಾಶನ 15) ಪರೋದ್ಭವ 16) ಅಮೃತ 17) ಕರ್ಣ 18) ಪಾವನ 19) ದೌರ್ಗ 20) ಮಹೇಂದ್ರ 21) ಭೀಮ 22) ಮಾರಣ 23) ಶ್ರೇಷ್ಠ 24) ಈಶಾನ 25) ಪ್ರಭುತ 26) ಪರೋದ್ಭೃತ 27) ಪಾರ್ವತಿ 28) ಪದ್ಮ 29) ಅಮೇಯಾ 30) ಶಬ್ದ 31) ಅಚಾದ್ಯ 32) ಅಸಂಖ್ಯಾ 33) ಅಸಿತೌಜಸ 34) ಆನಂದ 35) ಮಾಧವ 36) ಅದ್ಭುತ 37) ಶಾತ್‌ಶತ್ 38) ಅಪ್ರತಿಮ 39) ಅಪ್ಯಾಗಮ 40) ಅಮೃತ 41) ಸೂಕ್ಷ್ಮ 42) ಅತೀತ 43) ಅಮಲ 44) ಮಂಗಳ 45) ಶುದ್ಧ 46) ಅಪ್ರಮೇಯ 47) ಜ್ಯೋತಿರ್ ಬಾಜ 48) ಪ್ರಭುದ್ಧ 49) ವಿಬುದ್ಧ 50) ಹಸ್ತ 51) ಅಲಂಕಾರ 52) ಸುಬೋಧ 53) ವಿದ್ಯಾಪುರಾಣ 54) ವಾಸವ 55) ನೀಲಲೋಹಿತ 56) ಪ್ರಕರಣ 57) ಭೂತ ತಂತ್ರ 58) ಆತ್ಮಾಲಂಕಾರ 59) ಕಾಶ್ಯಪ 60) ಗೌತಮ 61) ಐಂದ್ರ 62) ಬ್ರಾಹ್ಮ್ಯ 63) ವಶಿಷ್ಠ 64) ಐಶಾನಾ 65) ಶುಬೋಧ 66) ಪ್ರಬೋಧ 67) ಧೂವಾಂಕುರ 68) ವಿಜಯ 69) ಉದ್ಭವ 70) ಸೌಮ್ಯ 71) ಅಘೋರ 72) ಮೃತ್ಯುನಾಶನ 73) ಕುಬೇರ 74) ಮಹಾಘೋರ 75) ವಿಮಲ 76) ನಿಶ್ವಾಸ 77) ಉತ್ತರ ನಿಶ್ವಾಸ 78) ನಿಶ್ವಾಸಮುಖ 79) ನಿಶ್ವಾಸ ನಯನ 80) ನಿಶ್ವಾಸ ಕಾರಿಕಾ 81) ಕ್ರೋಧ ಸಂಹಿತ 82) ಸುಸಾಂಖ್ಯಾ 83) ಯಮ 84) ಗುಹ್ಯಾ 85) ಪ್ರಜಾಪತಿ ಮತ 86) ಸ್ವಾಯಂಭುವ 87) ಪದ್ಮ 88) ಆಗ್ನೇಯಾ 89) ಪ್ರಸಾರ 90) ಪುಲ್ಲಮಲ್ಲ 91) ಪ್ರಬೋಧ 92) ಬೋಧ 93) ಬೋಧಕ 94) ಅಮೋಹ 95) ಮೋಹ ಸಮಯ 96) ಅಕಟ 97) ಶಾಕಟಾಧಿಕ 98) ಫಲ 99) ವಿಲೇಖನಾ 100) ಭದ್ರ

101) ವೀರ 102) ಕಾಲಜ್ಞಾನ 103) ಕಾಲಾತೀತ 104) ರೌರವ 105) ರೌರವೋತ್ತರ 106) ಮಹಾಕಾಲ ಮತ 107) ಐಂದ್ರ 108) ಕಾಲದಹನ 109) ಕೌಮಾರ 110) ಕಲ 111) ಮುಕುಟೋತ್ತರ 112) ಮಕುಟ 113) ಅನಂತ 114) ಭೋಗ 115) ಅಕ್ರಾಂತ 116) ವೃಷಲಿಂಗ 117) ವೃಷೋಧರ 118) ವೃಷಾದ್ಭುತ 119) ಸುದತ್ತ 120) ರೌದ್ರ 121) ಭದ್ರವಿದ 122) ಆರೇವತ 123) ಅತಿಕ್ರಾಂತ 124) ಅಟ್ಟಹಾಸ 125) ಅಲಂಕೃತ 126) ಅಚ್ಯುತ 127) ಧಾರಣ 128) ವಿಮಲ 129) ಸ್ಥಿರ 130) ಸ್ಥಾಣು 131) ಮಹತ್ 132) ವರುಣ 133) ನಂದಿಕೇಶ್ವರ 134) ಏಕಪಾದ 135) ಸಂಕರ 136) ನೀಲರುದ್ರ 137) ಶಿವಭದ್ರ 138) ಕಲ್ಪಭೇದ 139) ಶ್ರೀಮುಖ 140) ಶಿವಶಾಸನ 141) ಶಿವಶೇಖರ 142) ದೇವಿಮತ 143) ಚತುರ್ಮುಖ 144) ಮಾಲಾ 145) ಯೋಗ 146) ಸಮಸ್ತೋಭಾ 147) ಪ್ರತಿಬಿಂಬ 148) ಐಮಾಲಂಕಾರ 149) ವಾಯುವ್ಯ 150) ತೌಟಕ 151) ತುತಿನೀರಕ 152) ಕಲಾತ್ರಯ 153) ತುಲಾಯೋಗ 154) ಕುಟ್ಟಿಮ 155) ಪಟ್ಟಶೇಖರ 156) ಮಹಾವಿದ್ಯಾ 157) ಮಹಾಸಾರ 158) ಕವಚ 159) ವರಾಹ 160) ಪಿಂಗಳ 161) ರಸಬಂಧ 162) ದಂಡಧರ 163) ಅಂಕುಶ 164) ಧನುರ್ಧರ 165) ಶಿವಜ್ಞಾನ 166) ವಿಜ್ಞಾನ 167) ಶ್ರೀಕಾಲಾಜ್ಞಾನ 168) ಜ್ಞಾನ 169) ಆಯುರ್ವೇದ 170) ಧನುರ್ವೇದ 171) ಸರ್ಪದಂಷ್ಟ್ರ ವಿಭೇದ 172) ಗೀತಾ 173) ಲಲಿತ

174) ಲಲಿತೋತ್ತರ 175) ಕುಮಾರ 176) ವಿಷ್ಣೇಶ್ವರ 177) ಸಾರೋತ್ತರ 178) ದೇವೇಶೋತ್ತರ 179) ಸಾಲಭೇದ 180) ಶಶಿಮಂಡಲ 181) ಲಿಂಗಾಧ್ಯಕ್ಷ 182) ಸುರಾಧ್ಯಕ್ಷ 183) ಸಂಕರ 184) ಅಮಲೇಶ್ವರ 185) ಅಸಂಖ್ಯಾ 186) ಅನಿಲ 187) ದ್ವಂದ 188) ಶಿವಧರ್ಮೋತ್ತರ 189) ವಾಯುಪ್ರೋಕ್ತ 190) ದಿವ್ಯಪ್ರೋಕ್ತ 191) ಈಶಾನ 192) ಸರ್ವೋದ್ಗೀತ 193) ಉತ್ತರಾಗಮ 194) ತತ್ವೋತ್ತರಾಗಮ 195) ವಿಷಯೋತ್ತರಾಗಮ 196) ಮಾತಂಗ 197) ಯಕ್ಷಿಣಿ 198) ಪದ್ಮ 199) ಪರಮೇಶ್ವರ 200) ಪೌಷ್ಕರ

201) ಸುಪ್ರಯೋಗ 202) ಹಂಸ 203) ಗರುಡ 204) ನೈರಟ 205) ನೀಲಾ 206) ರುಕ್ಷ 207) ಭಾನುಕ 208) ಧೇನುಕಾ 209) ಪ್ರಬೋಧ 210) ಬೋಧ 211) ಬೋಧಕ 212) ಕಾಲ 213) ವಾತುಲ 214) ಉತ್ತರ 215) ಕಾಲಜ್ಞಾನ 216) ಪುರೋಹಿತ 217) ಸರ್ವಾಗಮ 218) ಶ್ರೇಷ್ಠ 219) ನಿತ್ಯಾ 220) ಶುದ್ಧ 221) ಮಹಾ 222) ವಿಶ್ವ 223) ವಿಶ್ವಾತ್ಮಕ 224) ಧರ್ಮಾತ್ಮಕ ಇವು ಸದ್ಯಕ್ಕೆ ಲಭ್ಯವಿರುವ ಶೈವ ಪರ ಉಪಆಗಮಗಳು ಇವುಗಳಲ್ಲಿ ಎಲ್ಲಾ ವಿಧವಾದ ಶೈವ ದರ್ಶನದ ಸ್ವರೂಪಗಳ ತಾತ್ತ್ವಿಕ ವಿವೇಚನೆ ಇದೆ. ಈ ಎಲ್ಲಾ ಉಪ ಆಗಮಗಳ ಕೃತಿಯನ್ನು ಕರ್ನಾಟಕದ ಪ್ರಸಿದ್ಧ ವಿದ್ವಾಂಸರಾದ ಡಾ ॥ ಎಸ್. ಸಿ. ನಂದಿಮಠ್ ಅವರು ಅವಲೋಕಿಸಿದ್ದುದು ಮತ್ತು ಅದರ ವಿವರಣೆಯನ್ನು ನೀಡಿರುವುದು ಒಂದು ಸೌಭಾಗ್ಯದ ಸಂಗತಿ.[೧]

ಕನ್ನಡವಲ್ಲಿ ಮಹತ್ತರವಾದ ವಿಶ್ವಕೋಶದಂತಿರುವ ವಿವೇಕ ಚಿಂತಾಮಣಿ ಗ್ರಂಥ ಕರ್ತೃವಾದ ನಿಜಗುಣ ಶಿವಯೋಗಿಗಳು ಈ ಆಗಮಗಳನ್ನು ಗಮನಿಸಿರುವುದೂ ಅತ್ಯಂತ ಸಂತೋಷದ ಸಂಗತಿಯಾಗಿದೆ. ಈ ಎಲ್ಲಾ ಆಗಮಗಳನ್ನು ಕ್ರಿ. ಶ. 8ನೇ ಶತಮಾನದ ತಮಿಳು ಶೈವ ಸಂತರಾದ ತಿರುಮೂಲರವರು ಕ್ರಿ. ಶ. 9ನೇ ಶತಮಾನದ ರಮಾಕಾಂತರವರು, ಕ್ರಿ.ಶ. 1158ರಲ್ಲಿ ಇದ್ದ ಅಘೋರ ಶಿವಾಚಾರ್ಯರವರು, ಕ್ರಿ.ಶ. 1313ರಲ್ಲಿ ಇದ್ದ ಉಮಾಪತಿಶಿವಾಚಾರ್ಯರು. ಕ್ರಿ.ಶ.11ನೇ ಶತಮಾನದಲ್ಲಿ ಇದ್ದ ಈಶಾನ ಶಿವಗುರುಗಳವರು 14ನೇ ಶತಮಾನದ ನಿಗಮ ಜ್ಞಾನದೇವರವರು, 15ನೇ ಶತಮಾನದ ಗುಬ್ಬಿಮಲ್ಲಣಾರ್ಯರವರು, 16ನೇ ಶತಮಾನದ ಬಸವ ಪುರಾಣದ ಮಲ್ಲಣಾರ್ಯರವರು, 17ನೇ ಶತಮಾನದ ಸಂಪಾದನೆ ಸಿದ್ಧವೀರಣ್ಣಾಚಾರ್ಯರು, 18ನೇ ಶತಮಾನದ ನಿಷ್ಠುರ ಸಂಜಣ್ಣಾಚಾರ್ಯರು, ಮತ್ತು ವಿಜಯನಗರ ಸಾಮ್ರಾಜ್ಯದ ಸ್ಥಾಪಕರ ಗುರುಗಳಾದ ಕ್ರಿಯಾಶಕ್ತಿಯವರು, ಮೇಲ್ಕಂಡ ಶಿವಾಗಮಗಳಲ್ಲಿ ಪರಿಣಿತರಾಗಿದ್ದರು ಎಂಬುದು ಮತ್ತು ಅವರು ತಮ್ಮ ಕೃತಿಗಳಲ್ಲಿ ಅನೇಕ ಆಗಮಗಳನ್ನು ಉದಾಹರಿಸಿರುವುದು ಆಗಮ ಶಾಸ್ತ್ರದ ಹಿರಿಮೆ ಗರಿಮೆ, ಪ್ರಾಚೀನತೆ, ಪ್ರೌಢಿಮೆ, ಪ್ರಾಂಜಲತೆ ಇವುಗಳನ್ನು ವ್ಯಕ್ತಪಡಿಸುತ್ತದೆ. ಇಂತಹ ಮಹತ್ವಪೂರ್ಣವಾದ

(Journal of the Karnataka University Shivagamas, their Literature and Theology Vo. 6 & 7)

ಸಾಹಿತ್ಯ, ವೈದಿಕ ಸಾಹಿತ್ಯಕೃತಿಗಳಂತೆ ಸರ್ವರಿಗೂ ಸುಲಭವಾಗಿ ದೊರೆಯುವಂತೆ ವೈಜ್ಞಾನಿಕವಾಗಿ ಸಂಶೋಧಿಸಲ್ಪಟ್ಟು ಪ್ರಕಟವಾಗದಿರುವುದು ವಿಷಾದದ ಸಂಗತಿ ಎನ್ನಬೇಕು. ಅನೇಕ ವಿಶ್ವವಿದ್ಯಾನಿಲಯಗಳು ಧಾರ್ಮಿಕ ಸಂಸ್ಥೆಗಳು, ಸರ್ಕಾರಗಳು, ವೈದಿಕ ಸಾಹಿತ್ಯದ ಪ್ರಕಟಣೆಗೆ ಕೊಟ್ಟ ಪ್ರೋತ್ಸಾಹ ಮತ್ತು ಪ್ರೇರಣೆ ಆಗಮ ಗ್ರಂಥಗಳಿಗೆ ದೊರೆಯಲಿಲ್ಲ. ಕೆಲವು ಆಗಮಗಳ ಖಂಡ ಭಾಗಗಳನ್ನು ಕರ್ನಾಟಕದ ಕೆಲವು ವಿದ್ವಾಂಸರು ಪ್ರಕಟ ಪಡಿಸಿದ್ದಾರೆ. ಆಗಮ ಶಾಸ್ತ್ರದ ಬಗೆಗೆ ವಿಶೇಷ ಅಧ್ಯಯನವನ್ನು ನಡೆಸಿದ ಮೈಸೂರು ಪ್ರಾಚ್ಯ ವಿದ್ಯಾ ಸಂಶೋಧನ ಸಂಸ್ಥೆಯ ನಿರ್ದೇಶಕರಾಗಿದ್ದ ವಿದ್ವಾನ್ ಡಾ|| ಹೆಚ್. ಪಿ. ಮಲ್ಲೇದೇವರು ಅವರು ತಮ್ಮ ಪರಿಶ್ರಮದಿಂದ ಪ್ರಾಚ್ಯಸಂಶೋಧನೆ ಸಂಸ್ಥೆಯ ಮೂಲಕ ಕೆಲವು ಆಗಮಗಳನ್ನು ಪ್ರಕಟಿಸಲು ಸಿದ್ಧಪಡಿಸಿದ್ದು ಅವರಲ್ಲಿ ವಾತುಲಾಗಮ ಮತ್ತು ವೀರಾಗಮ ಮಾತ್ರ ಪ್ರಕಟವಾಗಿದೆ. ಅವರು ಅಪೇಕ್ಷಿಸಿದ ಮತ್ತು ಸಿದ್ಧಪಡಿಸಿದ ಇನ್ನಿತರ ಆಗಮಗಳು ಪ್ರಕಟವಾದರೆ ಜಗತ್ತಿನ ಸಾರಸ್ವತ ಪ್ರಪಂಚಕ್ಕೆ ಮಹೋನ್ನತ ಕೊಡುಗೆಯನ್ನು ನೀಡಿದಂತೆ ಆಗುತ್ತದೆ.

ಈ ಲೇಖನದಲ್ಲಿ ಆಗಮ ಶಾಸ್ತ್ರದ ಕೇವಲ ಬಾಹ್ಯದ ಸೂಕ್ಷ್ಮಪರಿಚಯವನ್ನು ಮಾತ್ರ ಮಾಡಿಕೊಡಲಾಗಿದೆ. ಆಗಮಶಾಸ್ತ್ರದ ಸಿದ್ಧಾಂತ ಸ್ವರೂಪ ಮತ್ತು ಅಂತರಾರ್ಥವನ್ನು ವಿಶ್ಲೇಷಿಸುವ ಕಾರ್ಯವನ್ನು ಕೈಗೊಂಡರೆ ಅವೇ ಪ್ರತ್ಯೇಕವಾದ ವಿಸ್ತೃತವಾದ ಲೇಖನ ಗಳಾಗುತ್ತವೆ.

ಶೈವದರ್ಶನದ ಪರವಾದ ಮತ್ತು ಇಂದು ಲಭ್ಯವಿರುವ ಮೇಲೆ ಹೇಳಿದ ಆಗಮಗಳ ಮತ್ತು ಉಪಾಗಮಗಳ ವಿಶಾಲತೆಯೇ ಇಷ್ಟು ಭವ್ಯವಾಗಿದೆ. ಆದರೆ ಅದಕ್ಕಿಂತಲೂ ಇನ್ನು ಹೆಚ್ಚು ಬೃಹತ್ತಾದ ಮತ್ತು ಮಹತ್ತಾದ ತಾಂತ್ರಿಕ ಸಾಹಿತ್ಯಸಂಪತ್ತನ್ನು ಶಾಕ್ತ ತಂತ್ರಗಳು, ವೈಷ್ಣವ ತಂತ್ರಗಳು ಮತ್ತು ಬೌದ್ಧತಂತ್ರಗಳಲ್ಲಿ ಕಾಣುತ್ತೇವೆ. ಆಯಾಯಾ ವಿಭಾಗದಲ್ಲಿರುವ ಆಗಮಗಳ ಪರಿಚಯವನ್ನು ಮಾಡಿಕೊಡಲು ಪ್ರತ್ಯೇಕ ಲೇಖನಗಳು ಅವಶ್ಯವಿರುವುದರಿಂದ ಇಲ್ಲಿ ಶಿವಾಗಮಗಳ ಸೂಕ್ಷ್ಮ ಪರಿಚಯವನ್ನು ಮಾತ್ರ ಮಾಡಿಕೊಡಲಾಗಿದೆ.

■

# ಸರ್ಪಭೂಷಣರ ತತ್ತ್ವಪದಗಳಲ್ಲಿ ನೀತಿ

ಬಿ.ಸಿ. ವೀರಪ್ಪ

೧೯ನೆಯ ಶತಮಾನದ ಆದಿಭಾಗದಲ್ಲಿದ್ದ ಶ್ರೀಸರ್ಪಭೂಷಣ ಶಿವಯೋಗಿಗಳ ಏಕೈಕ ಕನ್ನಡದ ಕೃತಿ 'ಕೈವಲ್ಯ ಕಲ್ಪವಲ್ಲರಿ'. ನಿಜಗುಣ ಶಿವಯೋಗಿಗಳ 'ಕೈವಲ್ಯಪದ್ಧತಿ'ಯನ್ನು ಅನುಸರಿಸಿ ರಚಿತವಾದ ದೇಶೀಯ ಹಾಡುಗಬ್ಬವಿದು. ಸಂಗೀತ ಪ್ರಾಧಾನ್ಯವುಳ್ಳ ತತ್ತ್ವಪದಗಳ ಈ ಗ್ರಂಥದಲ್ಲಿ ಐದು ಸ್ಥಲಗಳಿವೆ.[೧] ಇವುಗಳಲ್ಲಿ ಪ್ರಮುಖವಾಗಿ 'ನೀತಿ ಕ್ರಿಯಾಚರ್ಯ ಪ್ರತಿಪಾದನಾ ಸ್ಥಲ'ವನ್ನು ಮಾತ್ರ ಆಧಾರವಾಗಿಟ್ಟುಕೊಂಡು ಪ್ರಸ್ತುತ ಲೇಖನವನ್ನು ವಿವೇಚಿಸಲಾಗಿದೆ.

ಪ್ರಪಂಚದ ಯಾವುದೇ ಧರ್ಮಗಳನ್ನು ಪರಿಶೀಲಿಸಿದರೂ ಈ ಧರ್ಮ ಮತ್ತು ನೀತಿ ಪರಸ್ಪರ ಅವಿಭಾಜ್ಯ ಅಂಗಗಳಾಗಿ ಹೊಂದಾಣಿಕೆ ಸಾಧಿಸಿವೆ. 'ದಯವಿಲ್ಲದಾ ಧರ್ಮವಾವುದಯ್ಯಾ' ಎಂಬ ಬಸವಣ್ಣನ ಮಾತಿನಂತೆ ಧರ್ಮದ ಅಂತಃಸತ್ವ 'ದಯೆ' ಎಂಬುದು ಸ್ಪಷ್ಟ. ಇಂತಹ ದಯಾಭಾವನೆ 'ನೀತಿ' ಕನ್ನಡ ನಿಘಂಟುಕಾರರು ನೀತಿಯನ್ನು ಕುರಿತು

೧. (೧) ಶಿವಕಾರುಣ್ಯಸ್ಥಲ, (೨) ಜೀವಸಂಬೋಧನಾಸ್ಥಲ (೩) ನೀತಿ ಕ್ರಿಯಾಚರ್ಯ ಪ್ರತಿಪಾದನಾಸ್ಥಲ, (೪) ಯೋಗ ಪ್ರತಿಪಾದನಾ ಸ್ಥಲ, (೫) ಜ್ಞಾನ ಪ್ರತಿಪಾದನಾ ಸ್ಥಲ.

‘ಅದೊಂದು ಬಗೆಯ ಮಾರ್ಗದರ್ಶನ, ಒಳ್ಳೆಯ ನಡತೆ, ಸಚ್ಚಾರಿತ್ರ್ಯ, ಶಿಷ್ಟಾಚಾರ’[1], ಇತ್ಯಾದಿ ಮಾತುಗಳಿಂದ ಅರ್ಥೈಸಿದ್ದಾರೆ. ಹಾಗಾಗಿ ನೀತಿಯು ಒಂದು ನಿಯಮಾನುಸರಣೆಗೆ ಒಳಪಟ್ಟ ನೈತಿಕ ತಿಳುವಳಿಕೆಯೆ ಸರಿ. ಕನ್ನಡದ ಪ್ರಸಿದ್ಧ ಗಾದೆ ‘ನೀತಿಯುಳ್ಳವನ ಮನೆದೀಪವಲ್ಲಿ ಜಾತಿಭೇದವುಂಟೆ’ ಎಂಬಂತೆ ನೀತಿ ಎಂಬ ಮಾತು ಜಾತ್ಯಾತೀತ, ಧರ್ಮಾತೀತ ಕಲ್ಪನೆಗಳನ್ನುಳ್ಳದ್ದು.

ಧರ್ಮದ ನಿಜವಾದ ತಳಹದಿ ನೀತಿ. ವಿಶ್ವದ ಎಲ್ಲಾ ಧರ್ಮಗಳೂ ಹಾಗೂ ದಾರ್ಶನಿಕರೂ ತಮ್ಮ ಧಾರ್ಮಿಕ ತತ್ತ್ವಪ್ರತಿಪಾದನೆಗೆ ನೀತಿಯನ್ನು ಪ್ರಧಾನ ಮಾಧ್ಯಮವನ್ನಾಗಿ ಬಳಸಿಕೊಂಡಿದ್ದಾರೆ. ಬುದ್ಧನ ಬೋಧನೆಗಳಿರಲಿ, ಜೈನರ ತತ್ತ್ವಗಳಿರಲಿ, ಬಸವಾದಿ ಶರಣರ ಆಚಾರ ಸಂಹಿತೆಗಳಿರಲಿ ಎಲ್ಲವೂ ಈ ನೈತಿಕ ನೆಲೆಗಟ್ಟಿನಿಂದ ಹೊರತಾಗೇನಿಲ್ಲ. ಒಟ್ಟಾರೆ ಮನುಕುಲದ ಒಳಿತಿಗಾಗಿ ಸಮಾಜದ ಹಿತಚಿಂತನೆಗೋಸ್ಕರವೇ ರೂಪುಗೊಂಡ ದಾಸರು, ಶರಣರು, ಜೈನರು ಇತ್ಯಾದಿ ಯಾವುದೇ ಪಂಥಗಳ ಒಳತಿರುಳು, ನೀತಿಯೆ ಸರಿ. ಹೀಗಾಗಿ ನೀತಿಯು ಈ ಪ್ರಪಂಚದಲ್ಲಿ ಮನುಜಕುಲದ ಇತಿಹಾಸದಷ್ಟೇ ಪ್ರಾಚೀನ ಕಲ್ಪನೆಯುಳ್ಳದ್ದು ಎಂಬ ಮಾತು ಸತ್ಯ. ಪ್ರಸ್ತುತ ಹಿನ್ನಲೆಯಲ್ಲಿ ವೀರಶೈವ ಮತತತ್ತ್ವ ಪರಂಪರೆಯಲ್ಲಿ ವಚನಕಾರರ ನಂತರ ಅನೇಕ ಪುರಾಣ ಪ್ರತಿಪಾದಕರು ಆಗಿಹೋಗಿದ್ದಾರೆ. ಇವರೆಲ್ಲರಿಗೂ ಭಿನ್ನ ನೆಲೆಯಲ್ಲಿ ನಿಂತ ಮತ ಪ್ರವರ್ತಕರೂ, ವಾಗ್ಗೇಯಕಾರರುಗಳಾಗಿದ್ದ ಶಿವಯೋಗಿ ತ್ರಯರುಗಳ[2] ಸ್ಥಾನ ಅವಿಸ್ಮರಣೀಯವಾದದ್ದು.

ಕನ್ನಡ ಸಾಹಿತ್ಯ ಶರಧಿಯಲ್ಲಿ ಧಾರ್ಮಿಕ ಜಾಗೃತಿಯ ಹಿನ್ನೆಲೆಯಿಂದ ಜನಸಾಮಾನ್ಯರ ನಾಡಿಯನ್ನು ಮಿಡಿಯಿಸಿದ ಪ್ರಥಮ ಕೀರ್ತಿ ವಚನಕಾರರಿಗೆ ಸಲ್ಲತಕ್ಕದ್ದು. ಅನಂತರ ಇದೇ ಕೆಲಸವನ್ನು ಮುಂದುವರೆಸಿದ ದಾಸ ಪರಂಪರೆಯ ದಾರ್ಶನಿಕರು ತಮ್ಮದೇ ಆದ ವಿಶಿಷ್ಟ ತತ್ತ್ವಪದ ಪ್ರಯೋಗಳಿಗೆ ಹೆಸರಾಗಿ ಗಮನಾರ್ಹರೆನಿಸಿದರು. ಈ ಉಭಯತತ್ತ್ವ ಪ್ರವರ್ತಕರುಗಳ ಮೂಲ ಉದ್ದೇಶ ಧಾರ್ಮಿಕ ಹಾಗೂ ಸಾಮಾಜಿಕ ಪರಿವರ್ತನೆಯಾಗಿತ್ತಾದರೂ, ನೈತಿಕ ಮೌಲ್ಯಗಳೇ ಮೂಲಸೂತ್ರಗಳಾಗಿದ್ದುವು ಎಂಬುದನ್ನು ಮರೆಯುವಂತಿಲ್ಲ. ಮುಂದೆ ೧೮ ಮತ್ತು ೧೯ನೆಯ ಶತಮಾನಗಳ ಆಸುಪಾಸಿನಲ್ಲಿ ಇಂಥದೇ ಪರಂಪರೆಯನ್ನು ತಮ್ಮ ತತ್ತ್ವಪದಗಳ ಮೂಲಕ ಮುಂದುವರೆಸಿದ ಶಿವಯೋಗಿ ತ್ರಯರುಗಳಲ್ಲಿ ಒಬ್ಬರಾದ ಸರ್ಪಭೂಷಣ ಶಿವಯೋಗಿಗಳ ಸಾಧನೆ ಅದ್ವಿತೀಯ. ಸ್ವತಃ ವಾಗ್ಗೇಯಕಾರರೂ, ಕನ್ನಡ-ಸಂಸ್ಕೃತ ಪಾಂಡಿತ್ಯವುಳ್ಳವರೂ, ಅನುಭಾವಿಗಳೂ, ಯೋಗಿವರೇಣ್ಯರೂ ಆಗಿದ್ದ ಸರ್ಪಭೂಷಣರ ತತ್ತ್ವಪದಗಳು, ಕೇವಲ ಸಂಗೀತ ಪ್ರಾಧಾನ್ಯವುಳ್ಳವು ಮಾತ್ರವಲ್ಲ; ಧಾರ್ಮಿಕ ನೆಲೆಗಟ್ಟಿನ ಅಂತರ್ ಶಿಸ್ತಿನೊಳಗೆ ರೂಪುಗೊಂಡ ಮಾರ್ಗದರ್ಶಕ ನೀತಿ ಸೂತ್ರಗಳೂ ಆಗಿವೆ.

೧. ಕನ್ನಡ ನಿಘಂಟು ಸಂ-೫. ಕ.ಸಾ.ಪ. ಪು-೪೭೬.

೨.(೧) ನಿಜಗುಣ ಶಿವಯೋಗಿಗಳು, (೨) ಸರ್ಪಭೂಷಣ ಶಿವಯೋಗಿಗಳು, (೩) ಬಾಲಲೀಲಮಹಾಂತ ಶಿವಯೋಗಿಗಳು.

ಸರ್ಪಭೂಷಣರ 'ಕೈವಲ್ಯ ಕಲ್ಪವಲ್ಲರಿ'ಯ ನೀತಿ ಕ್ರಿಯಾಚರ್ಯ ಪ್ರತಿಪಾದನಾ ಸ್ಥಲದಲ್ಲಿ ಒಟ್ಟು ೨೫ ಪದ್ಯಗಳಿವೆ. ಪ್ರಸ್ತುತ ಲೇಖನದ ವಿಶ್ಲೇಷಣೆಯ ದೃಷ್ಟಿಯಿಂದ ಇವುಗಳನ್ನು ನಾಲ್ಕು ಭಾಗಗಳಾಗಿ ವಿಂಗಡಿಸಿಕೊಳ್ಳಲಾಗಿದೆ.

(೧) ಪೌರಾಣಿಕ ದೃಷ್ಟಾಂತಗಳ ಹಿನ್ನೆಲೆಯುಳ್ಳ ನೀತಿಪದಗಳು.
(೨) ಪ್ರಾಪಂಚಿಕ ವ್ಯವಹಾರಗಳ ಹಿನ್ನೆಲೆಯುಳ್ಳ ನೀತಿಪದಗಳು.
(೩) ಗುಣಾವಗುಣ ನಿರ್ಣಯದ ಹಿನ್ನೆಲೆಯುಳ್ಳ ನೀತಿಪದಗಳು.
(೪) ಪರಮಾರ್ಥ ಹಿತಚಿಂತನೆಯ ಹಿನ್ನೆಲೆಯುಳ್ಳ ನೀತಿಪದಗಳು.

ಮುಂದೆ ಈ ವರ್ಗೀಕೃತ ಪಟ್ಟಿಗೆ ಒಳಪಡಿಸಿರುವ ಪದ್ಯಗಳು ಮೇಲುನೋಟಕ್ಕೆ ಪರಸ್ಪರ ಪೂರಕಾಂಶಗಳನ್ನು ಒಳಗೊಂಡವಾಗಿ ಕಂಡರೂ ಕೂಡ, ಅವುಗಳ ವಸ್ತುವಿನ್ಯಾಸದ ಹಿನ್ನೆಲೆ ಯಿಂದ ಹಾಗೂ ಕವಿಮನೋಭಾವಕ್ಕೆ ಅನುಗುಣವಾಗಿ ಇಂತಹ ಕ್ರಮ ಅಧ್ಯಯನ ಯೋಗ್ಯ.

### (೧) ಪೌರಾಣಿಕ ದೃಷ್ಟಾಂತಗಳ ಹಿನ್ನೆಲೆಯುಳ್ಳ ತತ್ತ್ವ (ನೀತಿ) ಪದಗಳು :

ನೀತಿ ಕ್ರಿಯಾಚರ್ಯ ಪ್ರತಿಪಾದನಾ ಸ್ಥಲದಲ್ಲಿ ಬರುವ ಸುಮಾರು ಆರು ಪದ್ಯಗಳ ಪ್ರಮುಖ ವಸ್ತು ಪೌರಾಣಿಕ ಸಂಗತಿಗಳ ಮೂಲಕ ನೀತಿ ಪ್ರತಿಪಾದನೆ ಮಾಡುವುದು. ಇಲ್ಲಿ ಬರುವ ಕಥನಾತ್ಮಕ ಸಂಗತಿಗಳು ಆಯಾ ವ್ಯಕ್ತಿಗಳ ನೈತಿಕ ಔನ್ನತ್ಯದ ಪ್ರತೀಕಗಳಾಗಿವೆ. ಧರ್ಮಾತೀತ ವ್ಯಕ್ತಿಗಳ, ಗುಣಾತೀತ ವ್ಯಕ್ತಿತ್ವದ ಪ್ರತಿಬಿಂಬ ಈ ತತ್ತ್ವಪದಗಳಲ್ಲಿದೆ. ಇಲ್ಲಿ ಪ್ರಮುಖವಾಗಿ 'ನಂಬು ನಂಬೆಲೆ ಮನವೆ'.. (೨೨)*, ಎಂಬ ಪದ್ಯದಲ್ಲಿ ಹರಭಕ್ತಿಯ ಭರದಿಂದ, ಮರಳ ಲಿಂಗವನೊದೆದ ತಂದೆಯ ಶಿರವನ್ನೇ ಹರಿದ ಚಂಡೇಶ; ಧಾನ್ಯವನ್ನು ಅಳೆಯುವ ಬಳ್ಳವನ್ನೇ ಶಿವಲಿಂಗವನ್ನಾಗಿ ಪೂಜಿಸಿದ ಬಳ್ಳೇಶ; ಪರವೆನಾಚಿಯ ಕುಚವನ್ನೇ ಶಿವಲಿಂಗವನ್ನಾಗಿ ಅರ್ಚಿಸಿದ ಸೌಂದರ ನಂಬಿ; ಹಾಗೂ ಸಿಟ್ಟಾದ ಗುರು ಕೈಗಿಟ್ಟ ಕಲ್ಲನ್ನೇ ಪರಶಿವನೆಂದು ಆರಾಧಿಸಿದ ಉರಿಲಿಂಗ ಪೆದ್ದಿ ಇವರ ದೃಷ್ಟಾಂತಗಳಿವೆ. ಇಲ್ಲಿ ಒಬ್ಬ ಪ್ರಮಥನೂ ಸೇರಿದಂತೆ ಮೂವರು ಪುರಾತನರುಗಳ ಭಕ್ತಿಸಂಘರ್ಷದ ಚಿತ್ರಣಗಳನ್ನು ಕೊಡುವ ಕವಿ, ದುಂಬಿಯಿಂದ ಹಿಡಿಯಲ್ಪಟ್ಟ ಹುಳು ಅದನ್ನೇ ನೋಡಿ ನೋಡಿ ತಾನೂ ದುಂಬಿಯಾದಂತೆ; ಪರಶಿವನ ವಿಭಿನ್ನ ಕುರುಹುಗಳನ್ನು ಹಿಡಿದ ಭಕ್ತರು ತಾವೂ ಪರಶಿವರಾಗುವರು ಎಂಬ ದರ್ಶನ ನೀತಿಯನ್ನು ಎತ್ತಿ ಹಿಡಿದಿದ್ದಾರೆ.

'ನಿನ್ನ ಗುಣಗಳ ನೀನೆ ನುತಿಸಿ ..., (೩-೨೨) ಎಂಬ ಈ ಪದ್ಯದಲ್ಲಿ ಅತಿರಥ ಮಹಾರಥರ ಅದ್ವಿತೀಯ ಸಾಧನೆಗಳನ್ನೇ ಅರಿಯದ ಕ್ಷುದ್ರ ಮಾನವರು ತಮ್ಮದೇ ಕ್ಷುಲ್ಲಕ ಹೆಗ್ಗಳಿಕೆಗಳಿಂದ ಬೀಗುವ ರೀತಿಯನ್ನು ಪ್ರಶ್ನಿಸಲಾಗಿದೆ. ಇಲ್ಲಿ ತ್ರಿಲೋಕ ವೀರನ ಕೀರ್ತಿ, ಬಲ ಭೀಮನ

* ಇಲ್ಲಿ ಬರುವ ಎಲ್ಲಾ ತತ್ತ್ವಪದಗಳನ್ನೂ ಕೈವಲ್ಯಕಲ್ಪವಲ್ಲರಿಯ ನೀತಿಕ್ರಿಯಾಚರ್ಯ ಸ್ಥಲದಿಂದ ಆಯ್ದುಕೊಳ್ಳಲಾಗಿದೆ.

ಶೌರ್ಯ, ಧರ್ಮರಾಯನ ದಯೆ, ಕರ್ಣನ ದಾನಶೀಲಗುಣ, ಶ್ರೀರಾಮಚಂದ್ರನ ಪರಾಕ್ರಮ., ಸತ್ಯಹರಿಶ್ಚಂದ್ರನ ಸತ್ಯನಿಷ್ಠೆ ಇಂತಹ ಮಹಾನ್ ಸದ್ಗುಣಗಳ ಆದರ್ಶ, ಕೇವಲ ನರನಿಗೆ ಸಾಧ್ಯವೇ ? ಇದ್ದಿರಬಹುದಾದ ಕಿಂಚಿತ್ ಗುಣಗಳಿಗೆಲ್ಲಾ ನನಗಿನ್ನಾರು ಸಮನೆಂದು ಮೆರೆಯುವ ಮಂದಮತಿಗಳಿಗೆ ಇದೊಂದು ಆದರ್ಶ ನೀತಿಪಾಠ. ಇಲ್ಲಿ ಮೇಲಿನ ಪದ್ಯ ಶಿವಭಕ್ತರ ಸದ್ಭಕ್ತಿಯ ಪ್ರತೀಕವಾದರೆ ಇನ್ನೊಂದು ಅತಿರಥ ಶ್ರೇಷ್ಠರ ಅತಿಶಯ ಕೀರ್ತಿಯ ಪ್ರತಿಬಿಂಬವಾಗಿದೆ.

ಈ ವಿಭಾಗಕ್ಕೆ ಬರುವ ಇನ್ನುಳಿದ ನಾಲ್ಕೂ ಪದ್ಯಗಳಲ್ಲೂ ಹೆಚ್ಚು ಕಡಿಮೆ ಒಂದೇ ಬಗೆಯ ಸಮಾನ ಮನೋಧರ್ಮವಿರುವುದನ್ನು ನಾವು ಸುಲಭವಾಗಿ ಗುರುತಿಸಬಹುದು. ಕಾರಣ ಇವುಗಳಲ್ಲಿ ಒಂದು ಬಗೆಯ ದೈವ ನಿಯಮವನ್ನು ಅಥವಾ ವಿಧಿಲಿಖಿತವನ್ನು ಅಳಿಸುವವರುಂಟೆ ಎಂಬ ಪ್ರಶ್ನಾತೀತ ಸಂಗತಿಗಳನ್ನು ಪ್ರತಿಪಾದಿಸುವ ಪದ್ಯಗಳಾಗಿವೆ.

ಮೊದಲು 'ನರರು ಪ್ರಾರಬ್ಧವನೆ ಗೆಲ್ಲಬಲ್ಲರೆ..' (೩-೧೫). ಈ ಪದ್ಯದಲ್ಲಿ ಸನಾತನ ಭಾರತೀಯ ಪುರಾಣ ಪರಂಪರೆಯೊಳಗೆ ಬರುವ, ಪರೀಕ್ಷಿತರಾಜನ ಸಾವು, ಶೂದ್ರಿಕನ ದುರ್ಮರಣ, ಕಾಳಿಂಗಭೂಪನ ಪ್ರಾಣಹರಣ, ದಶಮುಖನ ಸೀತಾಮುಖದ ಕೇಡು, ಈ ತೆರನಾದ ಹರನಾಜ್ಞೆಯ ಸಂದಿಗ್ಧತೆಗಳನ್ನು ಮೀರುವರುಂಟೆ ಎಂಬ ತತ್ತ್ವವಿಲ್ಲಿದೆ. ಇದೇ ಗತಿಯಲ್ಲಿ ಮುಂದುವರೆಯುವ ಇನ್ನೊಂದು ಪದ್ಯ 'ಬರಲುಳ್ಳ ದುಃಖವನು ಮೀರಲಾರಿಂದಹುದು..' (೩-೨೩). ಇಲ್ಲಿಯೂ ಕೂಡ ಶ್ರೀಹರಿಯು ಭೃಗು ಮಹರ್ಷಿಯ ಕೊಲ್ಲಬೇಕೆಂದಿದ್ದನೇ ? ದೇವಾನುದೇವತೆಗಳು ದಕ್ಷನ ಯಜ್ಞಕ್ಕೆ ಹೋಗಬಯಸಿದ್ದರೇ ? ಬಲಿಚಕ್ರವರ್ತಿಯ, ದಾನಸಮಯಕ್ಕೆ ಗುರುಶುಕ್ರಾಚಾರ್ಯ ಕಣ್ಣು ಕಳೆದು ಕೊಳ್ಳಬಯಸಿದ್ದನೇ ? ಹೀಗೆ ಸುರಾಸುರರಾದಿಯಾಗಿ ಯಾರೂ ವಿಧಿಯ ದುರ್ವಿಪಾಕದಿಂದ ವಿಮುಕ್ತರಾಗಲಾರರು ಎಂಬ ನೀತಿ ಇಲ್ಲಿದೆ.

'ಸುಖವಳಿದು ಕಷ್ಟವಾಯ್ತೆಂದಳಲದಿರು ..' (೩-೭) ಎಂಬ ಈ ಪದ್ಯದಲ್ಲಿ ಅಖಂಡ ಭೂಮಂಡಲದ ಒಡೆಯನೆನಿಸಿದ್ದ ಹರಿಶ್ಚಂದ್ರ ಕೊನೆಗೆ ಹೊಲೆಯನ ಆಳಾದದ್ದು; ಹದಿನಾರು ಸಾವಿರ ನಾರಿಯರ ಗಂಡ, ಅರವತ್ತು ಸಹಸ್ರ ಮಕ್ಕಳನ್ನುಳ್ಳ ಭೋಗಾಧಿಪತಿ ಶ್ರೀಕೃಷ್ಣ ಕೊನೆಗೆ ಕಾಡಡವಿಯ ಗಿಡವಡಿ ಪ್ರಾಣಬಿಟ್ಟದ್ದು; ಅಷ್ಟೈಶ್ವರ್ಯಗಳ ಅಧಿಪತಿಯಾಗಿದ್ದ ನಳಮಹಾರಾಜ ಕೊನೆಗೆ ಸರ್ವಸ್ವವನ್ನೂ ಕಳೆದುಕೊಂಡದ್ದು; ಪಂಚಪಾಂಡವರು ದಾಯಾದಿ ಮತ್ಸರದಿಂದ ಭಿಕ್ಷಾಪಾತ್ರೆಯನ್ನಿಡಿದು ವನವಾಸಗಳನ್ನು ಅನುಭವಿಸಿದ್ದು, ಹೀಗೆ ಅರಸೊತ್ತಿನ ಉಪ್ಪರಿಗೆಯ ಅಂತಸ್ತಿನಲ್ಲಿದ್ದವರಿಗೂ ದೌರ್ಭಾಗ್ಯದ ವಿಧಿ ಬಿಡದೆ ಕಾಡಿರುವಾಗ ಹುಲುನರರ ಪಾಡಿನ್ನೆಂತು ಎಂಬ ವಿಸ್ಮಯಕರ ಸತ್ಯಸಂಗತಿಯನ್ನು ವಿವರಿಸಲಾಗಿದೆ. ಇದೇ ವಿಭಾಗದಲ್ಲಿ ಬರತಕ್ಕ ಕೊನೆಯ ಪದ್ಯವಾಗಿ 'ಸುರನರೋರಗನೆಲ್ಲರ ತಿಕ್ಕಿನೆಕ್ಕಿದೆ...' (೩-೯). ಇಲ್ಲೂ ಕೂಡ ಮೇಲಿನಂತೆಯೇ

ಪೌರಾಣಿಕ ಹಿನ್ನೆಲೆಯ ಕಟುವಾಸ್ತವ ಸಂಗತಿಗಳ ಪ್ರತಿಪಾದನೆ ಮುಂದುವರೆಯುತ್ತದೆ. ಪಾಪಿ ವಿಧಿಯಿಂದಾಗಿ ಹರಿ ಹಂದಿಯ ಬಸುರಿಂದ ಬರಬೇಕಾಯ್ತು, ಬ್ರಹ್ಮ ತನ್ನ ಪಂಚತಲೆಗಳಲ್ಲಿ ಒಂದನ್ನು ತೆರಬೇಕಾಯ್ತು, ಅಹಲ್ಯಾ ಶಾಪನಿಮಿತ್ತ ಇಂದ್ರನ ಮೈ ಸಹಸ್ರಯೋನಿಯಾಯ್ತು, ಮನ್ಮಥನ ದೇಹ ಫಾಲಾಕ್ಷನ ಉರಿಗಣ್ಣಿಂದ ಬೂದಿಯಾಯ್ತು, ದೇವದಾನವರ ಕೈಗೆ ಆದಿಶೇಷ ಹಗ್ಗವಾಗಬೇಕಾಯ್ತು, ಹೀಗೆ ಮುಂದುವರೆಯುವ ಈ ಪದ್ಯ ಜಗನ್ನಿಯಾಮಕನ ಚಿತ್ರ ವಿಚಿತ್ರ ಲೀಲೆಗಳು ಸುರನರರಾದಿಯಾಗಿ ಸಕಲರನ್ನೂ ಮಥನಗೊಳಿಸುವುದೆಂಬ ತತ್ತ್ವವನ್ನು ಸಾರುತ್ತದೆ. ಒಟ್ಟಾರೆ ಪೌರಾಣಿಕ ಹಿನ್ನೆಲೆಯುಳ್ಳ ಎಲ್ಲಾ ಪದ್ಯಗಳಲ್ಲೂ ಎದ್ದು ಕಾಣುವ ಮುಖ್ಯ ತತ್ತ್ವ ಒಂದೆ. ಈ ಜಗತ್ತು ಸುಖ-ದುಃಖಗಳ ಆಗರ. ಯಾರಿಗೂ ಯಾವುದೂ ಶಾಶ್ವತವಲ್ಲ. ಹರಿ-ಹರ-ಬ್ರಹ್ಮಾದಿಗಳಾದಿಯಾಗಿ ಹುಲು ಮಾನವರವರೆಗೆ ವಿಧಿಲಿಖಿತ, ದೈವಲೀಲೆ ಎಲ್ಲರನ್ನೂ ಜಾಲಾಡಿಯೇ ತೀರೀತು ಎಂಬ ಮಾರ್ಮಿಕ ನೀತಿಯನ್ನು ಸಾರುವುದೆ ಕವಿಗಳ ಆಶಯ.

## (೨) ಪ್ರಾಪಂಚಿಕ ವ್ಯವಹಾರಗಳ ಹಿನ್ನೆಲೆಯುಳ್ಳ ನೀತಿ ಪದಗಳು:

ಪ್ರಸ್ತುತ ವಿಭಾಗಕ್ಕೆ ಸಂಬಂಧಪಟ್ಟಂತೆ ಸಮಾನ ಸಂಗತಿಗಳನ್ನು ಒಳಗೊಂಡ ಆರು ಪದ್ಯಗಳನ್ನು ಇಲ್ಲಿ ಪರಿಶೀಲಿಸಲಾಗಿದೆ. ಇಲ್ಲಿ ಬರುವ ಪದ್ಯಗಳಲ್ಲಿ ಸಾಮಾನ್ಯವಾಗಿ ಎದ್ದುಕಾಣುವ ಅಂಶ ಪ್ರಾಪಂಚಿಕ ವ್ಯಾಮೋಹಿಗಳ ತೊಳಲಾಟ. ಮೊದಲಿಗೆ 'ಶಶಿಕಲಾಧರ ನಿನ್ನ ವಿಕೃತಿ...' (೩-೨). ಈ ಪದ್ಯದಲ್ಲಿ ಸಕಲ ಮಾನವರಿಗೂ ಪ್ರಿಯವಾದ ಇಂದ್ರಿಯ ತೃಷೆಗಳನ್ನು ತಣಿಸುವ ಚಿತ್ರದ ಮೂಲಕವೇ ಅಷ್ಟೇ ಸೈಜವಾಗಿ ಪರಮಾತ್ಮನ ಅನುಸಂಧಾನವನ್ನು ಹೇಗೆ ಸಾಧಿಸಿಕೊಳ್ಳಬಹುದೆಂಬ ಸರಳ ಸತ್ಯವನ್ನು ಎತ್ತಿ ತೋರಲಾಗಿದೆ. ಇಂತಹುದೇ ರೀತಿಯಲ್ಲಿ ಇಂದ್ರಿಯಗಳ ಮೇಲಿನ ಹತೋಟಿಯಿಂದ ಭಕ್ತನಾದವನು ಶಿವಾನುಭವ ಜ್ಞಾನವನ್ನು ಹೇಗೆ ಸಂಪಾದಿಸಬಹುದು ಎಂಬುದಕ್ಕೆ 'ಬೇಡಿಕೊಂಬುವೆನಭವ ನಿನ್ನಂಘ್ರಿಯನು ...' (೩-೪) ಎಂಬ ಪದ್ಯ ಉತ್ತಮ ಉದಾಹರಣೆಯಾಗಿದೆ. ಈ ಎರಡೂ ಪದ್ಯಗಳ ತತ್ತ್ವ ಪ್ರತಿಪಾದನೆಯ ಮೂಲಮಾಧ್ಯಮ ಪಂಚೇಂದ್ರಿಯಗಳೇ ಆದರೂ, ಅವುಗಳ ಹಿಂದಿರುವ ನೀತಿ ಬೋಧನೆಯ ವೈಖರಿ ವಿಶಿಷ್ಟವಾದುದಾಗಿದೆ. ಇಹ-ಪರಗಳೆರಡರ ಸಮನ್ವಯ ಸಾಧನೆಗೂ ಈ ಇಂದ್ರಿಯಗಳೇ ಹೇಗೆ ನೆರವಾಗಬಲ್ಲುವೆಂಬ ಸರಳ ನೀತಿಯನ್ನು ಕವಿ ಹೃದಯಂಗಮವಾಗಿ ಚಿತ್ರಿಸಿದ್ದಾರೆ.

'ಕರಣ ಮೂರರಲ್ಲಿಯೂ ಕೊಟ್ಟೆಂತು...', (೩-೧೧) ಎಂಬ ಈ ಪದ್ಯವಲ್ಲಿ ಭಕ್ತನಾದವ ತನ್ನ ತ್ರಿಕರಣಗಳಾದ ದೇಹ, ಮಾತು, ಮನಸ್ಸು ಇವುಗಳ ಮೂಲಕ ಸದಾ ಪರಶಿವನೊಲುಮೆಗೆ ಹೇಗೆ ಸಾಧನೆಗೈಯಬಹುದು ಎಂಬ ನೀತಿ ಇಲ್ಲಿದೆ. ಮಾನವರಿಗೆ ಸಹಜ ದೈಹಿಕ ಪ್ರಕ್ರಿಯೆಗಳಾದ ಹಸಿವು, ತೃಷೆ, ನಿದ್ರೆ, ನೀರಡಿಕೆ ಇವು ಎಷ್ಟು ಮುಖ್ಯವೋ ಹಾಗೆಯೆ ಭಕ್ತಿ, ಜ್ಞಾನ, ವೈರಾಗ್ಯ,

ಜಪ-ತಪಗಳೂ ಅಷ್ಟೇ ಪ್ರಮುಖವಾದವು ಎಂಬ ತತ್ತ್ವಪ್ರತಿಪಾದನೆ ಇಲ್ಲಿದೆ. ಇದೇ ಪ್ರತಿಪಾದನೆಯ ತಂತುಗಳನ್ನು ಹಿಡಿದು ಮನ್ನಡೆಯುವ ಇನ್ನೊಂದು ಪದ್ಯ 'ಮುಕ್ತಿರಾಜ್ಯದ ಸೆರೆ ಸೂರೆ ಮಾಡಿದ...', (೩-೧೮). ಇಲ್ಲಿ ಮುಕ್ತಿಸಾಮ್ರಾಜ್ಯವನ್ನು ಸೂರೆಗೊಳ್ಳಬೇಕಾದರೆ ಇಹಲೋಕದ ಬದುಕಿನಲ್ಲಿ ರೂಢಿಸಿಕೊಳ್ಳಬೇಕಾದ ಸುಜ್ಞಾನ, ದಯೆ, ಶಾಂತಿ, ಶೀಲ ಇತ್ಯಾದಿ ಗುಣಗಳನ್ನು ಒಳಗೊಂಡ ತ್ರಿಕರಣ ಶುದ್ಧಿಗಳೆಂಬ ಸೇನಾಸನ್ನದ್ಧತೆಯಿರಬೇಕು. ವ್ಯಕ್ತಿಯ ಇಂದ್ರಿಯಗಳು ಅತೀಂದ್ರಿಯವಾಗಿ ವರ್ತಿಸಬೇಕಾದ ಯೋಗಸಾಧನೆಯ ಪ್ರತಿಪಾದನೆ ತತ್ತ್ವ ಇಲ್ಲಿನ ಮುಖ್ಯವಸ್ತು. ಮುಂದಿನ 'ಇಂದು ನಾಳೆಯು ಎನ್ನದೀಗಲೆ...',(೩-೨೪). ಈ ಪದ್ಯವು ಮೇಲಿನ ಎಲ್ಲ ಸಾಧನೆಗಳು ಕೇವಲ ಸಮಾಲೋಚನೆಯಲ್ಲೆ ಪರ್ಯವಸಾನವಾಗುವುದು ಬೇಡ. 'ನಾಳೆ ಬಪ್ಪುದು ನಮಗಿಂದೇ ಬರಲಿ' ಎಂಬಂತೆ ಸಂಸಾರದೊಳಗೆ ಮೇಲೆರಗಿ ಬರುವ ಎಲ್ಲಾ ಚಾಂಚಲ್ಯ-ವಾಂಛಲ್ಯಗಳನ್ನೂ ಅಂಕಿತದಲ್ಲಿ ಇರಿಸಿಕೊಂಡು 'ತ್ಯಾಗ-ಭೋಗಗಳ ಸಮಯೋಗ' ಸಮನ್ವಯವನ್ನು ಆದಷ್ಟು ಶೀಘ್ರವಾಗಿ ರೂಢಿಸಿಕೊಳ್ಳಬೇಕೆಂಬ ನೀತಿ ಇಲ್ಲಿದೆ. ಇಹ-ಪರಗಳ ಸಾರ್ಥಕ ಬದುಕಿಗಾಗಿ ವ್ಯಕ್ತಿಯ ಸಾಧನೆ ಮುಖ್ಯ ಎಂಬ ತತ್ತ್ವಗಳನ್ನು ಸಾರುವ ಮಾಲಿಕೆಯ ಕೊನೆಯ ಪದ್ಯ 'ಕಾಯ ಕಾಂತಾರವ ಹೊಕ್ಕು ...', (೩-೨೫). ಮೇಲಿನ ಎಲ್ಲಾ ಪದ್ಯಗಳ ಸತ್ವಗಳಿಗೆ ಕಳಸವಿಟ್ಟಂತೆ ಇಲ್ಲಿ ದೇಹವೆಂಬ ಗೊಂಡಾರಣ್ಯದಲ್ಲಿ ಅಡಗಿರುವ ಮಾಯಾ ಮೋಹದ ಮೃಗಗಳಂತಿರುವ ಅರಿಷಡ್ವರ್ಗ, ಅಷ್ಟಮದ, ಇಂದ್ರಿಯ ಚಾಪಲ್ಯ ಇತ್ಯಾದಿಗಳನ್ನು ಅರಿವೆಂಬ ಆಯುಧದಿಂದ ನಿಗ್ರಹಿಸಿ ಸುಕೃತಿಯನ್ನು ಪಡೆಯಬೇಕೆಂಬ ನೀತಿ ಮನನೀಯವಾಗಿದೆ. ಈ ದಿಸೆಯಲ್ಲಿ ಬಂದಿರುವ ಎಲ್ಲಾ ಪದ್ಯಗಳ ಮುಖ್ಯತತ್ತ್ವ ಕಾಯ ವಿಕಾರಗಳನ್ನು ಅಳಿಸುವುದೆ ಆಗಿದೆ.

## (೩) ಗುಣಾವಗುಣ ನಿರ್ಣಯದ ಹಿನ್ನೆಲೆಯುಳ್ಳ ನೀತಿ ಪದಗಳು:

ನೀತಿ ಕ್ರಿಯಾಚರ್ಯ ಪ್ರತಿಪಾದನಾ ಸ್ಥಲದಲ್ಲಿ ಈ ವಿಭಾಗಕ್ಕೆ ಒಳಪಡುವ ಪದ್ಯಗಳ ಸಂಖ್ಯೆ ಐದು. ಇವುಗಳ ಸಾಮಾನ್ಯ ಲಕ್ಷಣ ಕೇವಲ ಮಾನವನಾಗಿದ್ದೇವೆ, ಮಹೋನ್ನತಿಯ ಹಂತವನ್ನೂ ತಲುಪಲಿಕ್ಕಾಗಿ ಮೈಗೂಡಿಸಿಕೊಳ್ಳಬೇಕಾದ ಗುಣಾವಗುಣಗಳ ನಿರ್ಣಯ. ಭಕ್ತನಾದವ ತನ್ನ ಇಹಲೋಕದ ಬದುಕಿನುದ್ದಕ್ಕೂ ಅನುಸರಿಸಿದ ರೀತಿ-ನೀತಿ, ನಡೆ-ನುಡಿ, ಆಚಾರ-ವಿಚಾರ ಇತ್ಯಾದಿ ಅಂಶಗಳ ತೌಲನಿಕ ವಿವೇಚನೆ ಈ ಪದ್ಯಗಳ ಮುಖ್ಯ ತಿರುಳು. ಮೊದಲನೆಯದಾಗಿ 'ಜ್ಞಾನಿಯೊತ್ತಿನಲ್ಲಿ ದುಃಸಂಸಾರಿ ಇದ್ದರೂ...', (೩-೧). ಈ ಪದ್ಯ ದುರ್ಗುಣಿಗಳಾದವರು ಸುಜ್ಞಾನಿಗಳ ನೆರಳಲ್ಲಿದ್ದರೂ ತಮ್ಮ ದುರ್ಗುಣ ಬಿಡಲಾರರೆಂಬುದಕ್ಕೆ ಉತ್ತಮ ಪ್ರತೀಕವಾಗಿದೆ. ಪ್ರಕೃತಿ ಜನ್ಯವಾದ ಕಮಲದ ಮಧುವನ್ನು ದುಂಬಿ ಸವಿಯಬಲ್ಲುದೇ ಹೊರತು, ಕೊಳದೊಳಗಿನ ಕಪ್ಪೆಗೆ ಸಾಧ್ಯವೆ. ಇಂತಹ ಉಪಮೆಗಳಿಂದ ಸಜ್ಜನ-ದುರ್ಜನರುಗಳ ಸಾದೃಶ ಅಂತರಂಗಗಳನ್ನು ಎತ್ತಿ ತೋರಿಸುವ ಪ್ರಾಕೃತಿಕ ದೃಷ್ಟಾಂತದ ಏಕೈಕ ಪದ್ಯವಿದು. 'ಎಲೆ ಮಗನೇ ಬಾ ನಿತ್ಯಮುಕ್ತಿ...', (೩-೫) ಈ ಪದ್ಯದಲ್ಲಿ ಚಿರನೂತನವಾದ ಚಿರಂತನವಾದ ಮುಕ್ತಿ

ಸಂಪದವನ್ನು ಪಡೆಯಬೇಕಾದರೆ ಅಗತ್ಯವಾದ ಸಾಧಕ ಸದ್ಗುಣಗಳನ್ನು ಅನುಕ್ರಮವಾಗಿ ವಿವರಿಸಲಾಗಿದೆ. ಈ ಸಂಸಾರದ ನಡುವೆ ಹುಟ್ಟಿದಾರಭ್ಯ ಅಂತಿಮ ಬದುಕಿನವರೆಗೆ, ಸದ್ಗತಿಯನ್ನು ಪಡೆಯಲಿಕ್ಕಾಗಿ ಪರಿಪಾಲಿಸಬೇಕಾದ ಸತ್ಚಾರಿತ್ರ್ಯಗಳ ಸುನೀತಿಗಳಿಲ್ಲಿವೆ. ಇದೊಂದು ಉಪದೇಶಾತ್ಮಕ ನೀತಿಬೋಧನೆಯ ಪದ್ಯವಾಗಿದ್ದು ಹಿಂದಿನ ಪದ್ಯಕ್ಕಿಂತ ಭಿನ್ನವಾಗಿದೆ. ಮೇಲಿನ ಈ ಎರಡೂ ಪದ್ಯಗಳಿಗೂ ಭಿನ್ನವಾದದ್ದು 'ಎನ್ನಯ ಕರಣ ತ್ರಯಗಳ...', (೩-೬) ಇಲ್ಲಿ ಜನ್ಮಜನ್ಮಾಂತರಗಳ ಪಾಪಕರ್ಮಗಳನ್ನು ತೊಳೆದು ಸದ್ಬುದ್ಧಿಯನ್ನು ಕೊಟ್ಟು ಕಾಪಾಡುವಂತೆ ಪರಶಿವನಲ್ಲಿ ಮೊರೆಯಿಡಲಾಗಿದೆ. ಇಹ-ಪರಗಳೆರಡರ ಸಾಮರಸ್ಯ ಸಾಧನೆಗೆ ಪೂರಕವಾದ ಸಾತ್ವಿಕ ಚಿಂತನೆಯ ನೀತಿ ಇಲ್ಲಿನ ಮುಖ್ಯ ತತ್ತ್ವ. ಇದೇ ಜಾಡಿನಲ್ಲಿ ಮುನ್ನಡೆಯುವ ಮತ್ತೊಂದು ಪದ್ಯ 'ಏಕೆ ಯಾತ್ರೆಯ ಮಾಡತಿರ್ಪರಲ್ಲೇನಿಸುದು ...', (೩-೧೭). ಇಲ್ಲಿ ಪ್ರಮುಖವಾಗಿ ಸ್ವರ್ಗ-ನರಕ, ಪಾಪ-ಪುಣ್ಯಗಳ ಕಲ್ಪನೆ ನಮ್ಮೊಳಗೇ ಇರುವವಾದ ಕಾರಣ ಯೋಗಿಗಳಾದವರಿಗೆ ಯಾತ್ರೆ-ಜಾತ್ರೆಗಳ ಗೊಂದಲ ಕೇವಲ ಆಡಂಬರ. ದುರ್ಗುಣಗಳಿಂದ ದೂರವಾಗಿ ಅಂತರಂಗ-ಬಹಿರಂಗಗಳ ಶುದ್ಧಿಯನ್ನು ಸಾಧಿಸಿದರೆ ಸದ್ಗತಿ ಖಂಡಿತವೆಂಬ ನೀತಿ ಇಲ್ಲಿ ನಿರ್ಣಾಯಕವಾಗಿದೆ.

ಹೀಗೆ ಹರಿದು ಬರುವ ಗುಣಾವಗುಣಗಳ ನಿರ್ಣಯವು ' ಅಧಿಕವಹ ಸಕಲ ಗುಣಗಳನಿಲ್ಲಿ ವರ್ಣಿಸುವೆ ...; (೩-೧೯) ಎಂಬ ಪದ್ಯದೊಂದಿಗೆ ಅಂತ್ಯಗೊಳ್ಳುತ್ತದೆ. ಈ ಪದ್ಯದಲ್ಲಿ ಸದ್ಗತಿಗೆ ಪೂರಕವಾದ ಅತ್ಯುತ್ಕೃಷ್ಟ ಸಕಲ ಸದ್ಗುಣಗಳ ಪಟ್ಟಿಯನ್ನೇ ಮಾಡಲಾಗಿದೆ. ವ್ಯಕ್ತಿ ತನ್ನ ತ್ರಿಕರಣ ಪೂರ್ವಕವಾಗಿ ಈ ಪ್ರಾಪಂಚಿಕ ಬಂಧನಗಳನ್ನು ಜಯಿಸಿದಾಗ ಶಕ್ತಿಪಡೆತ್ತಾನೆ. ಇಂತಹ ಸಮಷ್ಟಿ ಪ್ರಜ್ಞೆಯ ಸಾಕ್ಷಾತ್ಕಾರ ಸ್ವರೂಪದ ಸಿದ್ಧಿಗೆ ಪೋಷಕವಾದ ನೀತಿ ಸೂತ್ರಗಳು ಇಲ್ಲಿವೆ.

### (೪) ಪರಮಾರ್ಥ ಹಿತಚಿಂತನೆಯ ಹಿನ್ನೆಲೆಯುಳ್ಳ ನೀತಿ ಪದಗಳು :

ಈ ವಿಭಾಗ ಕ್ರಮಕ್ಕೆ ಒಳಪಡುವ ಏಳು ಪದ್ಯಗಳ ಮುಖ್ಯ ತಿರುಳು ಪರಮಾರ್ಥ ಚಿಂತನೆಯೆ ಆಗಿದೆ. ನರ ಹರನಾಗಬಯಸಿದಾಗ ತನ್ನ ಸಂಸ್ಕಾರ ಬಲದಿಂದ ಐಹಿಕ ಬಂಧನಗಳನ್ನೆಲ್ಲಾ ಕಡಿದು, ಪಾರಮಾರ್ಥಿಕ ಪದವಿಯನ್ನು ಹೇಗೆ ಸಂಪಾದಿಸಬಲ್ಲನೆಂಬ ತತ್ತ್ವ ಪ್ರತಿಪಾದನೆ ಇಲ್ಲಿದೆ. 'ಬಿಡು ಬಾಹ್ಯದೊಳು ಡಂಭವ ...; (೩-೮) ಎಂದು ಆರಂಭವಾಗುವ ಈ ಪದ್ಯದಲ್ಲಿ ಮರುಳ ಮನುಜಾ ಒಣಹೆಮ್ಮೆ, ಪ್ರತಿಷ್ಠೆ ಅಹಂಕಾರಗಳನ್ನು ಬದಿಗಿರಿಸಿ ಶಿವಸಂಕಥಾಚಿಂತಿತನಾಗೆಂದು ಸಂಬೋಧಿಸಲಾಗಿದೆ. ಜನ ಮೆಚ್ಚಿಸುವುದಕ್ಕಿಂತ ಮನ ಮೆಚ್ಚುವಂತೆ ನಡೆಯಬೇಕು. ಅಂತರ್ಮುಖಿ ಬಹಿರ್ಮುಖಿಗಳ ಸಮನ್ವಯವಾಗಬೇಕು, ಇಹ-ಪರಗಳ ಸಾರ್ಥಕ ಸಿದ್ಧಿಗೈಯಬೇಕು, ಆಗ ಮಾತ್ರ ಪರಮಾರ್ಥಪದವಿಗೆ ಯೋಗ್ಯರೆಂಬ ತತ್ತ್ವವಿಲ್ಲಿದೆ.

'ದ್ವೈತ ಭಾವವಳಿಯಿತೆಂದು...; (೩-೧೦) ಎಂಬ ಈ ಪದ್ಯದಲ್ಲೂ ಕೂಡ ಭಕ್ತ, ಮಹೇಶ್ವರನಾಗಬೇಕಾದರೆ ಬರಿ ಬಾಯಿಮಾತಿನ ಬೊಬ್ಬೆಯಷ್ಟೇ ಸಾಲದು; ವ್ಯಕ್ತಿಯ ತನು-ಮನ-ಧನಗಳ ವ್ಯಾಮೋಹಗಳು ಅಳಿಯಬೇಕು.ಭ್ರಾಂತಿ-ಭ್ರಮೆಗಳನ್ನು ತೊರೆಯಬೇಕು. ಕ್ಷಮೆ-ದಮೆಗಳನ್ನು ಧರಿಸಿ, ಕಾಯವಿಕಾರಗಳಿಂದ ಮುಕ್ತರಾಗಬೇಕು. ಸ್ತುತಿ-ನಿಂದೆಗಳಿಂದ ಹೊರತಾಗಿ ವೇದಾತೀತ ಪರಮೋನ್ನತಿಯನ್ನು ಸಾಧಿಸುವುದೆ ಪಾರಮಾರ್ಥಿಕ ಬದುಕಿನ ಸೋಪಾನಗಳು ಎಂಬುದಾಗಿ ಸಾರುವ ನೀತಿಯಿಲ್ಲಿದೆ. ಇಂಥವೇ ಭಾವನೆಗಳನ್ನು ಉಳ್ಳ ಇನ್ನೊಂದು ಪದ್ಯ 'ಏತಕ್ಕೆ ಚಿಂತೆಯನು ಮಾಡುವಿ ಮೂಢ...; (೩-೧೨). ಈ ಪ್ರಪಂಚದಲ್ಲಿ ಹುಟ್ಟಿ ಕೇವಲ ಜೀವನಕ್ಕಾಗಿ ಚಿಂತಿಸುವುದು ವ್ಯರ್ಥ. ಸಕಲವನ್ನೂ ಸೃಷ್ಟಿಸಿದ ಪರಮೇಶ್ವರನ ಕೆಲಸವಿದು. ಈ ಸಾಂಸಾರಿಕ ಭವ-ಬಂಧನಗಳ ಭಾರದಿಂದ ತೊಳಲಾಡುವ ಗೋಜಲು ಕೇವಲ ಪರಶಿವನಿರವನ್ನು ಅರಿಯದ ಮೂಢಾತ್ಮರಿಗೇ ಹೊರತು, ಶಿವಸಾಯುಜ್ಯವನ್ನು ಅರಿತವರಿಗಲ್ಲ. ಪಶು ಪಕ್ಷಿಗಳಿಗೆ ಇಲ್ಲದ ಚಿಂತೆ ಸೃಷ್ಟಿ ಸಮಷ್ಟಿಯ ನಡುವೆ ಇವನೊಬ್ಬನಿಗೆ ಏಕೆ? ಇದೇ ಧಾಟಿಯಲ್ಲಿ ಮುಂದುವರೆಯುವ 'ಗುಣಗಳೆ ಭೂಷಣವಲ್ಲದೆ ...; (೩-೧೩) ಈ ಪದ್ಯವಲ್ಲಿ ಕೇವಲ ವ್ಯಾಮೋಹಿ ಮಾನವರು ಸಕಲ ಸಂಮೃದ್ಧಮಯ ಜೀವನಕ್ಕಾಗಿ ಹೆಣಗಾಡುವುದು ಸತ್ಕರ್ಮವಲ್ಲ; ಬರಿಯ ಡಂಭಾಚಾರಗಳಿಂದ ಸದ್ಗತಿ ಸಲ್ಲದು. ಸತ್ಯ, ಧರ್ಮ, ಅಹಿಂಸಾ ಪರಿಪಾಲನೆಗಳಿಂದ ಮಾತ್ರ ಇಹ-ಪರಗಳೆರಡರಲ್ಲೂ ಸದ್ಗತಿ ದೊರಕೀತು ಎಂಬ ಪಾರಮಾರ್ಥಿಕ ಚಿಂತನೆ ಮುಂದುವರೆಯುತ್ತದೆ.

ಮುಂದಿನ 'ಬರಿದೆ ಸಿರಿಯನು ಬಯಸಿ ..; (೩-೧೪) ಮತ್ತು 'ಮರವೆಯಂಶವನೆಲ್ಲ ತೊಡೆದು ...; (೩-೨೦). ಈ ಎರಡೂ ಪದ್ಯಗಳೂ ಮೇಲಿನ ತತ್ತ್ವಗಳಿಗೆ ಭಿನ್ನವಾಗೇನಿಲ್ಲ. ಆದರೆ 'ನಾಳೆ ಬಪ್ಪುದು ನಮಗಿಂದೇ ಬರಲಿ' ಎಂಬ ಶರಣತತ್ತ್ವಕ್ಕೆ ಹೊರತಾದ ನಿಲುವು ಇಲ್ಲಿದೆ. ಜನ್ಮಜನ್ಮಾಂತರಗಳ ಸುಕೃತಿಯ ಫಲಾಫಲಗಳನ್ನು ಗಣಿಸಲಾಗಿದೆ. ಬಡತನ-ಸಿರಿತನಗಳ ಭ್ರಾಂತಿಯರಿದು, ಸಕಲ ಜೀವರಲ್ಲೂ ದಯೆಯುಳ್ಳವರಾಗಿ, ಆಸೆ-ಆಮಿಷ-ರೋಷಗಳಿಂದ ಮುಕ್ತರಾಗಿ, ಮರಣವೂ ಮಹಾನವಮಿ ಎಂದು ಪರಿಭಾವಿಸುವಷ್ಟು ಶಾಸ್ತ್ರ ಚಿಂತಕರಾಗಬೇಕು ಎಂಬ ಪರಮಾರ್ಥ ತತ್ತ್ವಪ್ರತಿಪಾದನೆ ಈ ಪದ್ಯಗಳಲ್ಲಿದೆ.

'ಶರೀರವೆಂಬುವ ಹೊಲನ ...; (೩-೨೧). ಈ ಪದ್ಯ ಪರಮಾರ್ಥ ಹಿತಚಿಂತನೆಯಲ್ಲಿ ಕೊನೆಯದು. ನಮ್ಮ ಶರೀರವೆಂಬ ಹೊಲವನ್ನು ಕಲ್ಮಶಗಳ ಕಸ ತೆಗೆದು ಸ್ವಚ್ಛಗೊಳಿಸಿ ಮೋಕ್ಷಸಿದ್ಧಿ ಎಂಬ ಬೆಳೆಯನ್ನು ಬೆಳೆದುಣ್ಣಿರಿ ಎಂಬ ಸಾತ್ವಿಕ ರೂಪದ ಆತ್ಮ ಸಾಕ್ಷಾತ್ಕರದ ಪರಮೋಚ್ಚ ನೀತಿ ಇಲ್ಲಿ ಮನೋಜ್ಞವಾಗಿ ಮೂಡಿ ಬಂದಿದೆ. ಇಂದ್ರಿಯ ನಿಗ್ರಹ, ನಿರ್ಮಲ ಮನಸ್ಸು, ಇವುಗಳನ್ನೇ ವ್ಯವಸಾಯೋಪಕರಣಗಳನ್ನಾಗಿಸಿ, ವ್ಯಾಮೋಹಗಳೆಂಬ ಗರಿಕೆ ಕಿತ್ತು, ಚಿತ್ತಸ್ವಾಸ್ಥ್ಯವೆಂಬ ಗೊಬ್ಬರವ ಹಾಕಿ, ಮೋಕ್ಷದ ಬೆಳೆಯನ್ನು ಬೆಳೆದುಣ್ಣಬೇಕಾಗಿದೆ.

ಗುರುಮುಖದ ಉಪದೇಶ ಬೀಜವನ್ನು ಬಿತ್ತಿ, ಜ್ಞಾನ ಸಂಸ್ಕಾರದ ಮಳೆಯನ್ನು ಹಸಿಯಿಸಿ, ಅರಿವೆಂಬ ಪೈರನ್ನು ನೆಟ್ಟು, ಪಾಪದ ಕಳೆಯನ್ನು ಕಿತ್ತು, ವೈರಾಗ್ಯದ ಬೆಳೆಯನ್ನು ಬೆಳೆದುಣ್ಣಬೇಕಾಗಿದೆ. ಶಾಶ್ವತವಾದ ಮೋಕ್ಷವೆಂಬ ಧಾನ್ಯಗಳನ್ನು ಬೆಳೆದು, ಚಿರಶಾಂತಿಯಲಿ ತಣಿದು ಪರಶಿವನ ಪಾದಪದ್ಮಗಳಿಗೆ ಶಿರಬಾಗಿ ಪರತತ್ತ್ವದ ಬೆಳೆಯನ್ನು ಬೆಳೆದುಣ್ಣಬೇಕಾಗಿದೆ. ಹೀಗೆ ಲೌಕಿಕ ಬದುಕಿನ ನಡುವೆಯೂ ಪರಮಾರ್ಥ ಸಿದ್ಧಿಯ ಭೂಮಿಕೆಯನ್ನು ಹೇಗೆ ರೂಪಿಸಿಕೊಳ್ಳಬೇಕೆಂಬ ಶಿವಯೋಗಿಗಳವರ ಈ ಪರತತ್ತ್ವದ ವಿಚಾರ ಅನುಭವ ಜನ್ಯವೂ ವಿಚಾರಪೂರ್ಣವೂ ಆಗಿದೆ.

ಕೊನೆಯದಾಗಿ ಈ ಮೇಲಿನ ನಾಲ್ಕೂ ವರ್ಗಗಳಿಗೆ ಹೊರತಾದ ಒಂದು ಒಗಟಿನ ರೂಪದ ಪದ್ಯವಿದೆ. 'ಎಂಥ ಸೋಜಿಗವಾಯಿತೆಲೆ ...; (೩-೧೬) ಎಂಬ ಈ ಪದ್ಯ ಸಂಪೂರ್ಣ ಸೋಜಿಗಮಯ ಸಂಗತಿಗಳಿಂದಲೇ ತುಂಬಿದೆ. ಇಲ್ಲಿ ಪ್ರಾಣಿ ಪ್ರಪಂಚದ ಕೌತುಕಮಯ ಅಸಂಗತ ಸಂಗತಿಗಳನ್ನು ಹೇಳತೊಡಗುತ್ತಾ, ಅಂತಿಮ ಹಂತದಲ್ಲಿ ಸಂಕಲಸೃಷ್ಟಿಯ ವೈಚಿತ್ರ್ಯಕಾರನ ಗಾರುಡಿಗ ನೀತಿಯನ್ನು ಸಾರುವುದು ಒಂದು ವಿಶೇಷವಾಗಿದೆ.

**ಕೆಲವು ವಚನಗಳೊಂದಿಗೆ ಹೋಲಿಕೆ:**

ಸರ್ಪಭೂಷಣರು ಸಾಕಷ್ಟು ವಿಚಾರಗಳಲ್ಲಿ ವಚನಕಾರರಿಂದ ಪ್ರಭಾವಿತರಾಗಿರಬೇಕು. ಪುನರ್ಜನ್ಮ, ಹೆಣ್ಣು ಇತ್ಯಾದಿ ಸೈದ್ಧಾಂತಿಕ ವಿಚಾರಗಳಲ್ಲಿ ವಚನಕಾರರಿಗಿಂತ ವಿರುದ್ಧ ಮನೊಭಾವವುಳ್ಳರಾಗಿರುವುದನ್ನು ಒಂದೆರಡು ಕಡೆ ಗುರುತಿಸಬಹುದು. ಆದರೆ ಇವರೀರ್ವರ ತತ್ತ್ವನಿರೂಪಣಾ ಕ್ರಮದಲ್ಲಿ ಅನೇಕ ಸಾಮ್ಯತೆಗಳು ಎದ್ದು ಕಾಣುವುದನ್ನು ನಾವು ಮರೆಯುವಂತಿಲ್ಲ. ಸರ್ಪಭೂಷಣರ ಈ ನೀತಿ ಕ್ರಿಯಾಚರ್ಯ ಪ್ರತಿಪಾದನಾ ಸ್ಥಲದ ಕೆಲವೊಂದು ಚರಣಗಳೊಂದಿಗೆ ಕೆಲವೇ ಪ್ರಮುಖ ವಚನಕಾರರ ವಚನಗಳನ್ನು ಸಂವಾದಿಯಾಗಿಟ್ಟು ಮುಂದೆ ಪರಿಶೀಲಿಸಲಾಗಿದೆ.

ಮೊದಲಿಗೆ ಸರ್ಪಭೂಷಣರ-

*'ಬೇಡಿಕೊಂಬುವೆನಭವ ....*
*ಮನದೊಳು ನಿನ್ನ ಸಂಸ್ಮರಣೆಯನು ನಾಲಗೆಯ*
*ಕೊನೆಯಲ್ಲಿ ಪಂಚಾಕ್ಷರಿಯನೆ ನುಡಿವುದನು ।*
*ತನುವಿನೊಳು ನಿನ್ನ ಸೇವೆಯ ಮಾಳ್ಪುದನು ಕಿವಿಯೊ*
*ಳನು ದಿನವು ಪ್ರಣವನಾದವನೆ ಕೇಳ್ವುದನು ....". (೩-೪).*

ಈ ಪದ್ಯಕ್ಕೆ ಸಂವಾದಿಯಾಗಿ ಬಸವಣ್ಣನವರ -

"ವಚನದಲ್ಲಿ ನಾಮಾಮೃತ ತುಂಬಿ,
ನಯನದಲಿ ಮೂರುತಿ ತುಂಬಿ,
ಮನದಲ್ಲಿ ನಿಮ್ಮ ನೆನಪು ತುಂಬಿ,
ಕಿವಿಯಲ್ಲಿ ಕೀರುತಿ ತುಂಬಿ, ....".

ಈ ವಚನ ಹೆಚ್ಚು ಹೊಂದಾಣಿಕೆ ಯುಳ್ಳದ್ದಾಗಿದೆ. ಇದೇ ರೀತಿ ಸಕಲೇಶ ಮಾದರಸನ ಒಂದು ವಚನ -

" ಸರವರದ ಮಂಡೂಕನು ತಾವರೆಯ ನೆಳಲ ಸಾರಿದಡೆ
ಪರಿಮಳವದಕೆ ಅಯ್ಯಾ? ಆಆಆಆ ಅರಿಯಬಾರದು ಪರಿಮಳವದಕೆ ಅಯ್ಯಾ,
ಆಆಆಆ ಅರಿಯಬಾರದು ಮದಾಳಿಗಲ್ಲದೆ ...".

ಇದು ಸರ್ಪಭೂಷಣರ -

ದೂರದಿಂದೈತಂದು ತುಂಬಿ ಪದ್ಮಗರ್ಭದ / ಪುಷ್ಪ
ಸಾರವನೀಂಟಿ ಸುಖಿಸಿ ಪೋಗಲದರ ನೆರಳೊಳೆ
ಸೇರಿಕೊಂಡು ದುರ್ದುಶಂ ತನ್ಮಧುವರಿಯದೇ ಪೊಂಡ
ನೀರಗುಡಿದು ಕಾಲವನ್ನು ಕಳೆಯುವಂದದಿ ....

ಈ ತತ್ತ್ವಪದದೊಂದಿಗೆ ಸಮಾನ ಗುಣಧರ್ಮಗಳ ಹಿನ್ನೆಲೆಯಲ್ಲಿ ಗುರುತಿಸಬಹುದು. ಎರಡುಕಡೆಯೂ ಪ್ರಕೃತಿಜನ್ಯವಾದ ಸೃಷ್ಟಿಯ ವೈಪರೀತ್ಯ ನೀತಿಗಳನ್ನು ಪ್ರತಿಪಾದಿಸಲಾಗಿದೆ. ಕೊನೆಯದಾಗಿ ಅಲ್ಲಮಪ್ರಭುವಿನ ಒಂದು ವಚನ-

"ತನುವ ತೋಂಟವ ಮಾಡಿ ಮನವ ಗುದ್ದಲಿ ಮಾಡಿ,
ಅಗೆದು ಕಳೆದೆನಯ್ಯಾ,
ಭ್ರಾಂತಿಯ ಬೇರ ಒಡೆದು, ಸಂಸಾರದ ಹೆಂಟೆ ಒಡೆದು,
ಬಿತ್ತಿದೆನಯ್ಯಾ ಬ್ರಹ್ಮಬೀಜವ ...".

ಇದಕ್ಕೆ ಸಂವಾದಿಯಾಗಿ ಸರ್ಪಭೂಷಣರ ಬಹುಜನಪ್ರಿಯವಾದ ಪದ -

"ಶರೀರವೆಂಬ ಹೊಲನ ಹಸನ ಮಾಡಿ,
ಪರತತ್ತ್ವ ಬೆಳೆಯನೆ ಬೆಳೆದುಣ್ಣಿರೋ ॥
ಶಮೆದಮೆಯೆಂದೆಂಬುವೆರಡೆತ್ತುಗಳ ಹೂಡಿ,
ವಿಮಲ ಮಾನಸವ ನೇಗಿಲನೆ ಮಾಡಿ ...

ಗುರುವರನುಪದೇಶವೆಂಬ ಬೀಜವ ಬಿತ್ತಿ ...
ದುರಿತ ದುರ್ಗುಣವೆಂಬ ಕಳೆಯ ಕಿತ್ತು
ಸ್ಥಿರಮುಕ್ತಿಯೆಂದೆಂಬ ....''

ಇದು ಇವೆರಡರ ನಡುವಿನ ಸದ್ಭಕ್ತರ ಸಾಧನೆಯ ಸಮಾನ ಹಿತಚಿಂತನೆಗೆ ಉತ್ತಮ ದೃಷ್ಟಾಂತವೆನ್ನಬಹುದು. ಒಟ್ಟಾರೆ ಅನೇಕ ವಚನಗಳ ಛಾಯೆ ಸರ್ಪಭೂಷಣರ ಹಲವಾರು ತತ್ತ್ವಪದಗಳಲ್ಲಿ ಎದ್ದು ಕಾಣುವುದು ಸಹಜ. ಸಮಾನ ಗುಣಧರ್ಮ, ಸಮಾನ ನೀತಿಪ್ರತಿಪಾದನೆ, ಪರಮಾರ್ಥಸಾಧನೆಯ ಸಾಮರಸ್ಯ ನಿಲುವು ಇತ್ಯಾದಿ ಅಂಶಗಳ ಹಿನ್ನೆಲೆಯಿಂದ ಹನ್ನೆರಡನೆಯ ಶತಮಾನದ ಶರಣರಿಗೂ ಸರ್ಪಭೂಷಣರಿಗೂ ಪರಸ್ಪರ ಬಹಳಷ್ಟು ಸಾಮ್ಯವಿರುವುದನ್ನು ಅಲ್ಲಗಳೆಯುವಂತಿಲ್ಲ.

ಪ್ರಸ್ತುತ ವಿವೇಚನೆಯಿಂದ ಸರ್ಪಭೂಷಣರ ನೀತಿನಿರೂಪಣಾ ಕ್ರಮವು ಹರಿದು ಬಂದ ವಿಭಿನ್ನ ಶೈಲಿಯ ಆಂಶಿಕ ಲಕ್ಷಣಗಳು ವಿಸ್ತೃತಗೊಂಡಿದೆ. ತಮ್ಮ ಗೇಯಪ್ರಧಾನರಾದ ತತ್ತ್ವಪದಗಳಿಂದ ಆಗಿನ ಬಹುತೇಕ ವರ್ಗದ ಜನಮನವನ್ನು ಸೂರೆಗೊಂಡಿದ್ದ ಶಿವಯೋಗಿಗಳು ವೀರಶೈವತತ್ತ್ವ ಪರಂಪರೆಗೆ ಅನುಗುಣವಾಗಿ, ಶರಣರ ಪ್ರತೀತಿಗನುಸಾರವಾಗಿ, ನೀತಿಬೋಧೆ ನಡೆಸಿದ್ದಾರೆ. ಇದರೊಳಗೆ ಬಹುತೇಕ ಪುರಾಣ ಪ್ರಪಂಚದ ಪ್ರತೀಕಗಳ ಜೊತೆಗೆ, ತಾವು ಸ್ವತಃ ಸಾಧಕರಾಗಿದ್ದು ತಮ್ಮ ಸಿದ್ಧಿಗೆ ನಿಲುಕಿದ ಎಲ್ಲಾ ಉನ್ನತ ವೈಚಾರಿಕ ದೃಷ್ಟಾಂತಗಳನ್ನು ಬಳಸಿರುವುದೇ ಒಂದು ವಿಶೇಷ. ಒಟ್ಟಾರೆ ಅವರ ದೇಶ-ಕೋಶಾಧ್ಯಯನಗಳ ಪ್ರತಿಫಲರೂಪದ ಸಮಗ್ರ ರೀತಿಯ ನೀತಿ ನಿರೂಪಣಾತತ್ತ್ವ ಶರಣಸಾಹಿತ್ಯ ವಲಯದಲ್ಲಿಯೆ ಒಂದು ವಿಶಿಷ್ಟವಾದ ಹಾಗೂ ಅಪೂರ್ವ ಕೊಡುಗೆ. ಈ ಹಿನ್ನೆಲೆಯಲ್ಲಿ ಇವರ ನೀತಿಯುಕ್ತ ತತ್ತ್ವಪದಗಳನ್ನು ಜಂಗಮಜಗತ್ತಿನ ಜಾಗೃತಿ ಮಂತ್ರಗಳೆಂದರೂ ಒಪ್ಪುತ್ತದೆ.

ಆಕರ ಗ್ರಂಥಗಳು

೧. ಕೈವಲ್ಯ ಕಲ್ಪವಲ್ಲರಿ

೨. ಕನ್ನಡ ನಿಘಂಟು ಸಂ. ೫. ಕ.ಸಾ.ಪ

೩. ಸಕಲ ಪುರಾತನರ ವಚನಗಳು ಭಾಗ - ೧.೨

೪. ವಚನ ಧರ್ಮಸಾರ - ಎಂ. ಆರ್. ಶ್ರೀ

ಕರ್ನಾಟಕ ಸಂಸ್ಕೃತಿ ಸಮೀಕ್ಷೆ - ಡಾ. ಎಚ್. ತಿಪ್ಪೇರುದ್ರಸ್ವಾಮಿ.

# ಶತಕಗಳ ರಚನೆಯ ಉದ್ದೇಶ ಹಾಗೂ ಪ್ರಯೋಜನ

ಡಾ|| ಶ್ರೀಕೃಷ್ಣಭಟ್ ಅರ್ತಿಕಜೆ

---

ಕನ್ನಡದಲ್ಲಿ ಚಂಪೂ ಕಾವ್ಯಗಳು ಹೆಚ್ಚು ಪ್ರಚಲಿತವಾಗಿದ್ದ ಕಾಲದಲ್ಲಿಯೇ ಶತಕಗಳ ರಚನೆ ಆರಂಭವಾಯಿತು. ಮೊದಮೊದಲು ಚಂಪೂಕಾವ್ಯಗಳಂತಹ ಪ್ರೌಢಕಾವ್ಯಗಳ ಮಧ್ಯೆ ಕಿರಿದಾದ, ಹೆಚ್ಚು ಪ್ರೌಢವಲ್ಲದ ಮತ್ತು ಬೋಧಪ್ರದವಾದ ಈ ಕಾವ್ಯಪ್ರಕಾರಕ್ಕೆ ಹೆಚ್ಚಿನ ಮನ್ನಣೆ ದೊರೆಯಲಿಲ್ಲ. ಲಾಕ್ಷಣಿಕರು ಯಾರೂ ಶತಕದ ಬಗ್ಗೆ ಏನೂ ಹೇಳಿಲ್ಲ. ಆಗ ಹೆಚ್ಚಿನ ಜನಮನ್ನಣೆ ದೊರೆಯದಿದ್ದುದರಿಂದಲೇ ಆ ಕಾಲದಲ್ಲಿ ಶತಕಗಳ ರಚನೆ ಹೆಚ್ಚಾಗಿ ಆಗಿಲ್ಲವೆಂದೂ ಊಹಿಸಬಹುದು. ಆದರೂ ಕ್ರಮೇಣ ಶತಕಸಾಹಿತ್ಯ ಪ್ರಕಾರವೂ ತನ್ನ ಗುಣಗಳಿಂದ ಜನರ ಮನಸ್ಸನ್ನಾಕರ್ಷಿಸಿ ಸಾಹಿತ್ಯದಲ್ಲಿ ತನಗೂ ಒಂದು ಸ್ಥಾನವಿದೆಯೆಂಬುದನ್ನು ತೋರಿಸಿಕೊಟ್ಟಿತು. ಸುದೀರ್ಘವಾದ ಕಥಾವಸ್ತು, ಪಾತ್ರರಚನೆ, ಬಹುಮುಖವಾದ ವರ್ಣನೆಗಳೇ ಪ್ರಧಾನವಾದ ಚಂಪೂಕಾವ್ಯಗಳ ಕಾಲದಲ್ಲಿಯೇ ಶತಕ ಪ್ರಬಂಧದಂತಹ ಲಘುಕೃತಿಗಳ ಅವಶ್ಯಕತೆ ತೀವ್ರವಾಗಿದ್ದಿರಬೇಕು. ಆ ಕಾರಣವೇ ಬಹುಮಟ್ಟಿಗೆ ಚಂಪೂಕಾವ್ಯಗಳನ್ನು ರಚಿಸುತ್ತಿದ್ದ ಕೆಲವು ಕವಿಗಳು ಶತಕವನ್ನು ರಚಿಸತೊಡಗಿರಬೇಕು. ಮುಕ್ತಿಸಾಧನೆಯ ಮೂಲವಾದ ಈ ಭಕ್ತಿ, ಜ್ಞಾನ ಮತ್ತು ವೈರಾಗ್ಯಗಳ ನಿರೂಪಣೆಯೇ ಶತಕ ರಚನೆಯ ಮೂಲೋದ್ದೇಶ.

"ಶತಕ ಪ್ರಬಂಧ ಶುದ್ಧಸಾಹಿತ್ಯದಂತೆ ಕೇವಲ ರಸಾನಂದಕ್ಕಾಗಿ ಮೀಸಲಾಗದಿದ್ದರೂ ನಿರ್ದಿಷ್ಟವಾದ ತನ್ನ ತತ್ತ್ವೋದ್ದೇಶವನ್ನು ಆ ರಸಪಥದ ಮೂಲಕವೇ ಸಾಧಿಸಿದೆ ಎಂಬುದರಲ್ಲಿ ಸಂದೇಹವಿಲ್ಲ. ಓದುಗನನ್ನು ತನ್ನ ಕವಿ ಚಮತ್ಕಾರದಿಂದ ಮಾರುಹೋಗುವಂತೆ ಮಾಡುವುದು ಆತನ ಉದ್ದೇಶವಲ್ಲ. ಆತ್ಮಾನುಭವದ, ಸತ್ಯದ ಔನ್ನತ್ಯಕ್ಕೆ ಕೈಹಿಡಿದು ಕರೆದೊಯ್ಯುವ ಯತ್ನ ಆತನದು. ಆಧ್ಯಾತ್ಮಿಕ ಮೌಲ್ಯದತ್ತ ಮಾನವನ ಮನಸ್ಸನ್ನು ಸೆಳೆದು ಅದರಲ್ಲಿ ನೆಲೆಗೊಳಿಸುವುದರಲ್ಲಿಯೇ ಆತನ ಶಕ್ತಿ ಅಡಗಿದೆ. ತನ್ನ ಅನುಭವದ ಮಹದೈಶ್ವರ್ಯದಲ್ಲಿ ತನ್ನಂತೆ ಇತರರೂ ಪಾಲ್ಗೊಳ್ಳುವಂತೆ ಮಾಡಬೇಕೆಂಬುದೇ ತಾತ್ತ್ವಿಕನಾದ ಶತಕಕಾರನ ಬಯಕೆ. ಮುಕ್ತಿಯೇ ಆತನ ಚರಮೋದ್ದೇಶ". (ಶಂಕರ ಶತಕ ಪೀಠಿಕೆ ೧೯೬೫, ಪು-೬.) ಶತಕಕಾರನು ಆಸಕ್ತನಾದ ಓದುಗನಲ್ಲಿ ಉತ್ಸಾಹವನ್ನುಂಟುಮಾಡಿ ಆತ್ಮವಿಶ್ವಾಸವನ್ನೂ ಪರಮಾತ್ಮ ನಿಷ್ಠೆಯನ್ನೂ ಹೊಂದುವಂತೆ ಮಾರ್ಗದರ್ಶನ ಮಾಡುತ್ತಾನೆ. ಶತಕಗಳು ಒಂದು ರೀತಿಯಲ್ಲಿ ಕಾವ್ಯದ ಲೇಪವನ್ನು ಹೊಂದಿದ ಶಾಸ್ತ್ರಗಳಾದುದರಿಂದ ಕೆಲವೊಮ್ಮೆ ಪ್ರಭುಸಮ್ಮತದಂತೆಯೂ ಕೆಲವೊಮ್ಮೆ ಮಿತ್ರಸಮ್ಮತದಂತೆಯೂ ನೀತಿಬೋಧೆ ಮಾಡುತ್ತವೆ. ಇತರ ಕಾವ್ಯಗಳಂತೆ ಕಥಾವಸ್ತುವನ್ನು ಹೊಂದಿ ವಿವಿಧ ವರ್ಣನೆಗಳು, ಪಾತ್ರಚಿತ್ರಣ, ರಸನಿರೂಪಣೆಗಳಿಂದ ಕೂಡಿ ಕಾವ್ಯಾನಂದವನ್ನುಂಟುಮಾಡುವುದು ಶತಕಗಳ ಉದ್ದೇಶವಲ್ಲ. ಕಾವ್ಯದ ಇತರ ಪ್ರಕಾರಗಳಲ್ಲಿ ಹಾಗೂ ನಾಟಕಗಳಲ್ಲಿ ಸ್ವಾಭಿಪ್ರಾಯ ಪ್ರಕಟಣೆಗೆ ನಿರ್ಬಂಧ ಹೆಚ್ಚು. ಆದರೆ ಶತಕಗಳಲ್ಲಿ ಅಂತಹ ನಿರ್ಬಂಧವಿಲ್ಲವಾದ್ದರಿಂದ ತನ್ನ ಸ್ವಂತ ಅನುಭವ ಅಭಿಪ್ರಾಯಗಳನ್ನು ನೇರವಾಗಿ ವ್ಯಕ್ತಮಾಡಬಹುದಾಗಿದೆ. ಹರಿಹರನ ಹಾಗೂ ರತ್ನಾಕರವರ್ಣಿಯ ಶತಕಗಳು ಇದಕ್ಕೆ ಉತ್ತಮ ನಿದರ್ಶನ.

ಶತಕ ರಚನೆಯ ಉದ್ದೇಶವನ್ನು ಕುರಿತು ಬಿ.ನಂ. ಚಂದ್ರಯ್ಯ ಅವರು ಕೆಲವು ವಿಚಾರಗಳನ್ನು ಹೇಳಿದ್ದಾರೆ. (ಸಂಕ್ಷಿಪ್ತ ಕನ್ನಡ ಸಾಹಿತ್ಯ ಚರಿತ್ರೆ, ಸಂಪುಟ-೪, ಭಾಗ-೧, ೧೯೭೭, ಪುಟ-೧೬೭) ಅವರು ಹೇಳಿದ ವಿಚಾರಗಳನ್ನು ಹೀಗೆ ಸಂಗ್ರಹಿಸಬಹುದು - ಚಂಪೂ ಕಾವ್ಯಗಳು ಪ್ರೌಢವಾಗಿದ್ದುದರಿಂದ ಜನಸಾಮಾನ್ಯರಿಗೆ ಸುಲಭಗ್ರಾಹ್ಯವಾಗಿರಲಿಲ್ಲ. ಅಲ್ಲದೆ ಚಂಪೂಕಾವ್ಯಗಳಲ್ಲಿ ಕವಿಗೆ ತನ್ನ ಸ್ವಂತ ವಿಷಯವನ್ನು ಪ್ರಕಟಿಸುವ ಸ್ವಾತಂತ್ರ್ಯವಿರಲಿಲ್ಲ. ಇದರಿಂದ ಜನಸಾಮಾನ್ಯರಿಗೆ ಎಟಕುವ ರೀತಿಯಲ್ಲಿ ಸರಳವಾದ ಶೈಲಿಯಲ್ಲಿ ಹೆಚ್ಚು ದೀರ್ಘವಾಗಿರದೆ ನೂರುಪದ್ಯಗಳಲ್ಲಿ ಸಹಜಸ್ಫೂರ್ತವಾಗಿ ಮೂಡಿಬಂದ ಭಾವಗಳನ್ನು ನಿರೂಪಿಸಲು ಪ್ರಾರಂಭಿಸಿದರು. ಅರ್ಥವಾಗದ ಸುದೀರ್ಘ ಕಾವ್ಯಗಳನ್ನು ಓದಲಾಗದ ಜನಕ್ಕೆ ಈ ರೀತಿಯ ಶತಕಗಳಂತಹ ಪುಟ್ಟಕಾವ್ಯಗಳ ಅವಶ್ಯಕತೆ ಉಂಟಾಗಿರಬೇಕು. ಆದುದರಿಂದಲೇ ಮಾರ್ಗಕಾವ್ಯಗಳ ಮಧ್ಯೆ ಉದಿಸಿದ ಈ ಹೊಸಸಾಹಿತ್ಯ ಪ್ರಕಾರ ತನ್ನ ವಸ್ತು, ಶೈಲಿ, ಛಂದೋವೈವಿಧ್ಯ ಹಾಗೂ ಸುಲಭಗ್ರಾಹ್ಯತೆಯಿಂದ ಜನಪ್ರಿಯತೆಯನ್ನು ಪಡೆಯಿತು. ಶತಕಗಳಲ್ಲಿ ಕಾಂತಾಸಮ್ಮಿತ ಗುಣವಿಲ್ಲ. ನೇರವಾಗಿ ಮೋಕ್ಷಮಾರ್ಗದ ದರ್ಶನ

ಮಾಡಿಸುವುದೇ ಇಲ್ಲಿ ಕವಿಯ ಮುಖ್ಯ ಉದ್ದೇಶವಾಗಿರುತ್ತದೆ. ವ್ಯಕ್ತಿಜೀವನವನ್ನು ತಿದ್ದಿ ಉತ್ತಮ ಸಂಸ್ಕೃತಿಯನ್ನುಂಟುಮಾಡುವ ಪ್ರಾಮಾಣಿಕ ಪ್ರಯತ್ನವನ್ನು ಇಲ್ಲಿ ಕವಿ ಮಾಡುತ್ತಾನೆ. ಹೀಗಾಗಿ ಶತಕಸಾಹಿತ್ಯ ಶ್ರೀಸಾಮಾನ್ಯನ ಉದ್ಧಾರದ ಸಾಧನವಾಗಿ ಪರಿಣಮಿಸಿದೆ. ಜನಪ್ರಿಯವಾಗಿ ಬೆಳೆದಿದೆ. ಜೀವನದ ನೇರದರ್ಶನವನ್ನು ಮಾಡಿಸಿದೆ.

ಕನ್ನಡದ ಹೆಚ್ಚಿನ ಶತಕಗಳು ನೀತಿ, ವೈರಾಗ್ಯ, ವ್ಯವಹಾರ, ಭಕ್ತಿ ಮುಂತಾದವುಗಳನ್ನು ಬೋಧಿಸುವುದೇ ಮುಖ್ಯ ಗುರಿಯಾಗಿ ಉಳ್ಳವುಗಳು. ಕಾಂತಾಸಮ್ಮಿತ ಹಾಗೂ ಪ್ರಭುಸಮ್ಮಿತ ರೀತಿಗಳಿಂದ ನೀತಿಬೋಧನೆ ಮಾಡಿ ಯಶಸ್ವಿಯಾದ ಶತಕಗಳು ಕವಿಗಳ ಅನುಭವ ದರ್ಶನಗಳ ಕೈಪಿಡಿಗಳಾಗಿವೆ. ಜನತೆಗಾಗಿ, ಜನಮನದ ಉದ್ಧಾರಕ್ಕಾಗಿ ಕಾವ್ಯರಚನೆ ಮಾಡಿದ ನಮ್ಮ ಕವಿಗಳು ಜನರ ಮನಮುಟ್ಟುವಂತೆ ವೈರಾಗ್ಯ ಪಾಪಭೀರುತ್ವಗಳನ್ನು ಶತಕಗಳಲ್ಲಿ ನಿರೂಪಿಸಿದ್ದಾರೆ. ಕಾವ್ಯಾನಂದವನ್ನು ನೀಡುವುದಕ್ಕಿಂತಲೂ ಬೋಧನೆಯೇ ಶತಕಗಳ ಮುಖ್ಯ ಉದ್ದೇಶವಾಗಿದೆ. [illegible] ಕೀರ್ತಿಗಾಗಿಯೋ, ಧನಕನಕ ವಸ್ತುವಾಹನಗಳಿಗಾಗಿಯೋ, ಪ್ರಬಂಧಾದಿಗಳನ್ನು ರಚಿಸದೆ, ಮೋಕ್ಷಸಾಧನೆಗಾಗಿ ಪರಮಾತ್ಮನನ್ನು ಆಶ್ರಯಿಸಿ ಶತಕಗಳನ್ನು ರಚಿಸಿದ್ದಾರೆ. ಉದಾಹರಣೆಗೆ, ತೆಲುಗಿನ ಪ್ರಸಿದ್ಧ ಕವಿಯಾದ ಧೂರ್ಜಟಿಯು ಧನಾರ್ಥಿಯಾಗಿ ಕಾಳಹಸ್ತಿ ಮಾಹಾತ್ಮ್ಯವನ್ನು, ಮೋಕ್ಷಾರ್ಥಿಯಾಗಿ ಶ್ರೀಕಾಳಹಸ್ತೀಶ್ವರ ಶತಕವನ್ನೂ ಬರೆದನೆಂದು ಹೇಳುತ್ತಾರೆ. ಸಂಸ್ಕೃತದಲ್ಲಿ ಬಾಣನ ಸಮಕಾಲೀನನಾದ ಮಯೂರನೆಂಬ ಕವಿ ಸೂರ್ಯಶತಕವನ್ನು ಏಕೆ ಬರೆದನೆಂಬುದಕ್ಕೆ ಒಂದು ಐತಿಹ್ಯವಿದೆ. ಈ ಕವಿಯು ಮಯೂರಾಷ್ಟಕವನ್ನು ಬರೆದ ನಂತರ ಸೂರ್ಯಶತಕವನ್ನು ಬರೆದುದಾಗಿಯೂ, ಮಯೂರಾಷ್ಟಕವನ್ನು ಬರೆಯಲು ಇವನ ತಂಗಿಯೇ ಕಾರಣಳೆಂದೂ ಪ್ರಣಯಕುಪಿತೆಯಾದ ತನ್ನ ಅಂತರ್ಯವನ್ನು ಹೊರಗೆಡವಿದ ಮಯೂರನ ಮೇಲೆ ಕೋಪಿಸಿಕೊಂಡು ಕುಷ್ಠ ಶರೀರನಾಗೆಂದು ಬಾಯಲ್ಲಿದ್ದ ತಂಬುಲವನ್ನು ಉಗಿದಂತೆಯೂ ಮಯೂರನು ಕುಷ್ಠರೋಗಿಯಾಗಿ ತನ್ನಿವಾರಣಾರ್ಥವಾಗಿ ಸೂರ್ಯಶತಕವನ್ನು ಬರೆದು ಗುಣ ಹೊಂದಿದಂತೆಯೂ ಜೈನಕಥೆಗಳು ಹೇಳುವುವು. (ಎಂ.ಎಸ್. ಶ್ರೀನಿವಾಸ ಅಯ್ಯಂಗಾರ್, ಸಂಸ್ಕೃತ ಕವಿಚರಿತೆ, ಸಂಪುಟ-೧, ೧೯೨೮, ಪು-೧೯೫). ಆದುದರಿಂದ ಶತಕಗಳಾದರೋ ಭಾವಗೀತೆಗಳಿಗೆ ಅತೀತವಾದ ಆತ್ಮಾನಂದವನ್ನುಂಟುಮಾಡುತ್ತ ಪುರುಷಾರ್ಥವನ್ನು ಪಡೆಯುವುದಕ್ಕೆ ಸಾಧನಗಳಾಗಿರುವುವು. ಇವು ಸಾಮಾನ್ಯವಾಗಿ ಭಕ್ತಿಯೋಗವನ್ನು ಪ್ರತಿಪಾದಿಸುವುದಾಗಿದ್ದು ಮೋಕ್ಷ ಪ್ರಾಪ್ತಿಯೇ ಇವುಗಳ ಪ್ರಯೋಜನ.

“ಶತಕಕಾರನು ಆತ್ಮಾನಂದದ ಕೇವಲೋದ್ದೇಶದಿಂದ ಪ್ರೇರಿತನಾಗದೆ ಜನಸಮುದಾಯಕ್ಕೆ ಬೋಧಕನೂ ಆಗಿದ್ದಾನೆ. ತನ್ನ ಸುತ್ತಲಿನ ಪ್ರಕೃತಿವ್ಯಾಪಾರ, ಅನುಭವದ ಅಪಾರಜ್ಞಾನ, ಬಹುಶ್ರುತ ಮಥನದಿಂದ ಮೂಡಿದ ಸ್ವಾನುಭವ ನವನೀತವನ್ನು ನಿರ್ವಂಚನೆಯಿಂದ

ನಿಸ್ವಾರ್ಥತೆಯಿಂದ ಹಂಚುವ ಕೆಲಸ ಮಾಡಿದ್ದಾನೆ. ಸಾಮಾನ್ಯನಲ್ಲೂ ಭಕ್ತಿ ಜ್ಞಾನ ವೈರಾಗ್ಯವೇ ಮೊದಲಾದ ಪ್ರಮುಖ ಜೀವನ ಮೌಲ್ಯಗಳನ್ನು ನಿತ್ಯಜೀವನದ ಉಪಮಾನಗಳ ಮೂಲಕ ತಿಳಿಸುತ್ತ ಬ್ರಹ್ಮಜ್ಞಾನಿಯ ಮಟ್ಟಕ್ಕೆ ಏರಿಸುವುದಾಗಿದೆ''. (ಕಾಶಿವಿಶ್ವನಾಥಶೆಟ್ಟಿ, ಕನ್ನಡ ಶತಕ ಸಾಹಿತ್ಯ ೧೯೭೬ ಪುಟ ೫೨)

ಪುಲಿಗೆರೆ ಸೋಮ ಕವಿಯ ಸೋಮೇಶ್ವರ ಶತಕದಲ್ಲಿ ಹೇಳಿರುವ ಕೆಳಗಿನ ಪದ್ಯವು ಶತಕಗಳ ಮಹತ್ವವನ್ನು ತಿಳಿಸುತ್ತದೆ.

*ಮತಿಯಂ ಬುದ್ಧಿಯ ಜಾಣ್ಮೆಯಂ ಗಮಕಮಂ ಗಾಂಭೀರ್ಯಮಂ ನೀತಿಯಾ*
*ಯತಮಂ ನಿಶ್ಚಲಚಿತ್ತಮಂ ನೃಪವರಾಸ್ಥಾನೋಚಿತಾರ್ಥಂಗಳಂ*
*ಅತಿಮಾಧುರ್ಯ ಸುಭಾಷಿತಂಗಳ ಮಹಾಸತ್ಕೀರ್ತಿಯಂ ಬಾಳ್ಕೆಯಂ*
*ಶತಕಾರ್ಥಂ ಕೊಡದಿರ್ಪುದೇ ಹರಹರಾ ಶ್ರೀಚೆನ್ನಸೋಮೇಶ್ವರಾ*

*(ಸೋಮೇಶ್ವರ ಶತಕ, ಪದ್ಯ ೧೦೨)*

ಮಾತ್ರವಲ್ಲದೆ, ನೀತಿಯೆ ಸಾಧನಂ ಸಕಲ ಲೋಕಕ್ಕಾಗಬೇಕೆಂದು ಹೇಳಿದ ಕೃತಿ 'ತನ್ನದು' ಎಂದು ಹೇಳಿಕೊಂಡಿದ್ದಾನೆ ಕವಿ.

ಮುಕ್ತಿಸಾಧನೆಯ ಮೂಲವಾದ ಭಕ್ತಿಜ್ಞಾನ ವೈರಾಗ್ಯಗಳನ್ನಷ್ಟೇ ಅಲ್ಲದೆ ತಮ್ಮ ತಮ್ಮ ಮತತತ್ತ್ವಗಳನ್ನೂ, ನೀತಿಯನ್ನೂ ಶತಕಗಳ ಮೂಲಕ ಕವಿಗಳು ಪ್ರಕಟಪಡಿಸಿದರು. ಆತ್ಮತತ್ತ್ವ ವಿಚಾರವನ್ನು ಪ್ರತಿಪಾದಿಸಿ ಮಾನವ ಜೀವಿಯನ್ನು ಆತ್ಮಾನುಭವದ ಸತ್ಯದ ಔನ್ನತ್ಯಕ್ಕೆ ಈ ಶತಕಗಳು ಕರೆದೊಯ್ಯುವುವು. ಆತ್ಮನ ವಿಕಾಸಕ್ಕೆ ನೀತಿಯ ನೆಲೆಗಟ್ಟು ಭದ್ರವಾಗಿರಬೇಕಾದ ಕಾರಣ ನೀತಿತತ್ತ್ವಗಳನ್ನೂ ಶತಕಗಳ ಮೂಲಕ ಕವಿಗಳು ಪ್ರಸ್ತಾಪಿಸಿ ಬದುಕಿನ ಅಮೃತತತ್ತ್ವಕ್ಕೆ ಮಾರ್ಗದರ್ಶಿಗಳಾದರು.

ಕಾವ್ಯ ಪ್ರಯೋಜನವನ್ನು ಕುರಿತು ಮಮ್ಮಟ ಭಟ್ಟನು ತನ್ನ ಕಾವ್ಯಪ್ರಕಾಶದಲ್ಲಿ ಈ ರೀತಿ ಹೇಳಿದ್ದಾನೆ.

*''ಕಾವ್ಯಂ ಯಶಸೇಽರ್ಥಕೃತೇ ವ್ಯವಹಾರವಿದೇ ಶಿವೇತರಕ್ಷತಯೇ*
*ಸದ್ಯಃ ಪರನಿರ್ವೃತಯೇ ಕಾಂತಾಸಮ್ಮಿತ ತಯೋಪದೇಶ ಯುಜೇ*
*(ಕಾವ್ಯಪ್ರಕಾಶ ೧-೨)*

ಕಾವ್ಯವು ಕೀರ್ತಿಗಾಗಿ, ಧನಾರ್ಜನೆಗಾಗಿ, ವ್ಯವಹಾರಜ್ಞಾನಕ್ಕಾಗಿ, ಅಮಂಗಳ ನಿವಾರಣೆಗಾಗಿ, ತತ್ಕಾಲದಲ್ಲೇ ಪರಮಾನಂದ ಹೊಂದುವುದಕ್ಕಾಗಿ, ಕಾಂತೆಯಂತೆ ಉಪದೇಶಿಸುವುದಕ್ಕಾಗಿ ಕಾವ್ಯದಿಂದ ಪಡೆಯಬಹುದೆಂದು ತೋರಿರುವ ಫಲಗಳನ್ನೆಲ್ಲಾ ಇಲ್ಲಿ

ಮಮ್ಮಟನು ಒಟ್ಟುಮಾಡಿ ಹೇಳಿದ್ದಾನೆ. ಕಾವ್ಯದ ಪ್ರಯೋಜನಗಳಲ್ಲಿ ಮುಖ್ಯವಾದುದು ರಸಾಸ್ವಾದದಿಂದ ಉಂಟಾಗುವ ಆನಂದವೆಂಬುದರಲ್ಲಿ ಸಂದೇಹವಿಲ್ಲ. ಹೇಮಚಂದ್ರನು 'ಕಾವ್ಯಂ ಆನಂದಾಯ ಯಶಸೇ ಕಾಂತಾ ತುಲ್ಯತಯಾ ಉಪದೇಶಾಯಾ' ಎಂದು ಕಾವ್ಯ ಪ್ರಯೋಜನಗಳಿಗೂ ಸಾರಭೂತವಾದುದು ಆನಂದ. ಇದನ್ನು ಕವಿ, ಸಹೃದಯರಿಬ್ಬರೂ ಅನುಭವಿಸುವರು. ಕೀರ್ತಿ ಕವಿಗೆ - ಉಪದೇಶ ಸಹೃದಯರಿಗೆ, ಧನಾರ್ಜನೆಯಾದಲ್ಲಿ ಅದು ಕವಿಗೆ. ವ್ಯವಹಾರಜ್ಞಾನ ಸಹೃದಯರಿಗೆ. ಆದರೆ ಶತಕ ಕಾವ್ಯಗಳಿಂದುಂಟಾಗುವ ಪ್ರಯೋಜನಗಳಲ್ಲಿ ಆನಂದವಂತೆಯೇ ವ್ಯವಹಾರ ಜ್ಞಾನ, ಅಮಂಗಳ ನಿವಾರಣೆ ಮತ್ತು ಉಪದೇಶಗಳೂ ಮುಖ್ಯವಾದುವು. ಕೆಲವೊಮ್ಮೆ ಶತಕಗಳು ಕಾವ್ಯಕ್ಕಿಂತ ಹೆಚ್ಚಾಗಿ ಶಾಸ್ತ್ರಗಳಾಗುತ್ತವೆ. ಆದುದರಿಂದ ಕವಿರಾಜಮಾರ್ಗದಲ್ಲಿ ಪ್ರತಿಪಾದಿತವಾದ -

*ಪಾಪಮಿದು ಪುಣ್ಯಮಿದು ಹಿತ*
*ರೂಪಮಿದಹಿತ ಪ್ರಕಾರಮಿದು ಸುಖಮಿದು ದುಃ*
*ಖೋಪಾತ್ತಮಿದೆಂದರಿವುಗು*
*ಮಾ ಪರಮ ಕವಿಪ್ರಧಾನರಾ ಕಾವ್ಯಂಗಳ್*
*(ಕವಿರಾಜಮಾರ್ಗ ಪ್ರಥಮ ಪರಿಚ್ಛೇದ, ಪದ್ಯ-೧೮)*

ಎಂಬ ಕಾವ್ಯ ಪ್ರಯೋಜನಗಳು ಶತಕ ಸಾಹಿತ್ಯಕ್ಕೆ ಸರಿಯಾಗಿ ಅನ್ವಯವಾಗುತ್ತವೆ.

ಶತಕಗಳ ಪ್ರಯೋಜನವನ್ನು ಕುರಿತು ಸಿ. ಮಹಾದೇವಪ್ಪನವರು ತಮ್ಮ ಶಂಕರ ಶತಕದ ಪೀಠಿಕೆಯಲ್ಲಿ ಕೆಲವು ವಿಚಾರಗಳನ್ನು ಹೇಳಿದ್ದಾರೆ. (೧೯೬೫ ಪುಟ ೬,೭) ''ಆತ್ಮವಿಕಾಸದಿಂದ ಆತ್ಮೋನ್ನತಿಯನ್ನು ಹೊಂದುವಕಾರಣ ಭಕ್ತಿ, ಜ್ಞಾನ, ವೈರಾಗ್ಯ ಪ್ರಧಾನವಾದ ಶತಕಗಳು ಸಮಾಜದಲ್ಲಿ ಆಧ್ಯಾತ್ಮಿಕ ದೃಷ್ಟಿಯನ್ನು ಮೂಡಿಸಲು ಇರುವ ಸುಲಭಸಾಧನಗಳೆಂದು ಹೇಳಬಹುದು. ಜನಾಂಗವನ್ನು ನೀತಿಮಾರ್ಗದಲ್ಲಿ ಕರೆದೊಯ್ದು ಅವರಲ್ಲಿ ಸತ್ಯ, ಧರ್ಮ, ಅಹಿಂಸೆ, ನಿಸ್ವಾರ್ಥ ಸೇವಾತತ್ಪರತೆ - ಇವುಗಳನ್ನು ಮೂಡಿಸುವುದರಿಂದ, ಆ ಶತಕಗಳು ಸಮಾಜದ ಆತ್ಮಪ್ರಗತಿಗೆ ನೇರವಾದ ಸೋಪಾನವೆನ್ನಬಹುದು. ಜನತೆಯಲ್ಲಿ ದೈವೀದೃಷ್ಟಿ ದೂರವಾದಾಗ, ಜೀವನದ ಮೌಲ್ಯಕ್ಕೆ ಕುಂದೊದಗಿದಾಗ, ಪ್ರೀತಿವಾತ್ಸಲ್ಯ, ದಯೆ, ವಿಶ್ವಾಸಗಳು ಹೃದಯದಲ್ಲಿ ಬತ್ತಿಹೋಗುವುವೊ ಎನ್ನುವಾಗ, ಅಜ್ಞಾನ, ಅಹಂಕಾರ ಅಂಧಕಾರದಲ್ಲಿ ಮುಳುಗಿ ಹೋಗುವಾಗ ಜೀವನವನ್ನು ಮೇಲೆತ್ತಿ ಬೆಳಕುಕಾಣಿಸಿ ದಾರಿತೋರುವ ಶತಕ ಸಾಹಿತ್ಯ ಸಮಾಜದ ಸಮರಸ ಜೀವನದ ಸಾಧನ. ವ್ಯಕ್ತಿಗೆ ಮುಕ್ತಿಮಾರ್ಗವನ್ನು ತೋರುವ ಶತಕಗಳು ಸಮಾಜಕ್ಕೆ ಶತಮುಖವಾಗಿ ಸಹಬಾಳ್ವೆಯ ಸನ್ಮಾರ್ಗವನ್ನು ಕಾಣಿಸಿಕೊಡುವ ಕಾರಣ ಅವು ನಿಜವಾದ ಹಿತೈಷಿಗಳು. ಈ ಸಾಹಿತ್ಯ ಸಮಾಜದ ಒಳಿತಿನ ದೃಷ್ಟಿಯಿಂದ ಹೆಚ್ಚು ಪರಿಣಾಮಕಾರಿಯೂ ಆಗಿದೆ. ವ್ಯಕ್ತಿ ತನ್ನ ಸಮಸ್ಯೆಯ ಪರಿಹಾರವನ್ನು ಕಂಡುಕೊಳ್ಳಲು

ಬೇಕಾದ ವಿವೇಚನೆಯನ್ನು ಮೂಡಿಸುವುದರಿಂದ ಶತಕದ ಅಭ್ಯಾಸ ಅಗತ್ಯ". ಇಲ್ಲಿ ಅವರು ಶತಕಗಳಿಂದ ಸಮಾಜದ ಉದ್ಧಾರ ಸಾಧ್ಯ ಎಂದೂ ಶತಕಗಳು ಸಮಾಜದ ಜನರಿಗೆ ಕೈದೀವಿಗೆಗಳೆಂದೂ ಹೇಳಿ ಶತಕಗಳು ಮುಕ್ತಿಮಾರ್ಗಕ್ಕೆ ಸಾಧನ ಎಂಬುದನ್ನು ಒತ್ತಿಹೇಳಿದ್ದಾರೆ.

ಕಾವ್ಯ, ಶಾಸ್ತ್ರ, ಪುರಾಣಗಳು ಎಲ್ಲರ ಮನಸ್ಸನ್ನೂ ಆಕರ್ಷಿಸುವುದಿಲ್ಲ. ಆದರೆ ಪಂಡಿತಪಾಮರ ಹೃದಯರಂಜಕವಾದ ಶತಕಗಳು ಎಲ್ಲರ ಮನವನ್ನೂ ಸೆಳೆಯುತ್ತವೆ. ಅವರಿಗೆ ಉಪದೇಶ ನೀಡುತ್ತವೆ. ಆದುದರಿಂದಲೇ ಹಿಂದೆ ಶಾಲೆಗಳಲ್ಲಿ ಪ್ರಸಿದ್ಧವಾದ ಶತಕಗಳ ಪದ್ಯಗಳನ್ನು ಕಲಿಸುವ ಪರಿಪಾಠವಿತ್ತು. ಈ ಪದ್ಧತಿ ತೆಲುಗಿನಲ್ಲಿಯೂ ಬಳಕೆಯಲ್ಲಿತ್ತು. ಆದರೆ ಈಗ ಕಾಗೆ, ನಾಯಿ, ಬೆಕ್ಕು, ನರಿ ಮೊದಲಾದವುಗಳ ಕಥೆ, ಪದ್ಯಗಳಿಗೆ ಪ್ರಾಶಸ್ತ್ಯ ದೊರಕಿ ಶತಕ ಪದ್ಯಗಳನ್ನು ಕಲಿಸುವ - ಕಲಿಯುವ ಪದ್ಧತಿ ದೂರವಾಗಿದೆ. ಬಿ.ವಿ. ಗುಂಜೆಟ್ಟಿ ಅವರು ಕನ್ನಡದಲ್ಲಿ ಶತಕ ಸಾಹಿತ್ಯ ಎಂಬ ಕೃತಿಯಲ್ಲಿ (೧೯೭೨ ಪು ೧೦೨-೧೦೩) "ಪ್ರಾಪಂಚಿಕ ತಾಪತ್ರಯಗಳಲ್ಲಿ ಸಿಕ್ಕು ಅಜ್ಞಾನದ ಬೇಕಿಯಲ್ಲಿ ಬೆಂದು ದೈವೀದೃಷ್ಟಿಯನ್ನು ಕಳೆದುಕೊಂಡು ಮಾನವ ಜೀವನ ಮೌಲ್ಯಕ್ಕೆ ರಾಡಿಯನ್ನು ಬಳಿದು ಜನನ - ಮರಣ ರಾಟಳದಲ್ಲಿಯೇ ಸಿಲುಕಿ ಅಹಂಕಾರದಲ್ಲಿ ಕುದಿದು ಕೋಟಲೆಗೊಂಬ ಮಾನವನನ್ನು ಮುಕ್ತಿಮಾರ್ಗದತ್ತ ಕರೆದೊಯ್ಯಲು ಈ ಶತಕಗಳು ಕೈದೀವಿಗೆಗಳಾಗಿವೆ ಎಂದು ಹೇಳಬಹುದು" ಎಂದು ಅಭಿಪ್ರಾಯ ಪಟ್ಟಿದ್ದಾರೆ. ಕಾಶಿ ವಿಶ್ವನಾಥಶೆಟ್ಟಿ ಅವರು (ಕನ್ನಡ ಶತಕ ಸಾಹಿತ್ಯ ೧೯೭೬, ಪು-೫೨) "ಸಮಾಜದಲ್ಲಿಯು ಸಹ ನ್ಯಾಯ, ನೀತಿ, ಧರ್ಮ ಅಹಿಂಸೆ ನಿಸ್ವಾರ್ಥಬುದ್ಧಿಗಳು ಲುಪ್ತವಾದಾಗ, ವೈರಾಗ್ಯದ ಸೋಗು ಹೆಚ್ಚಿದಾಗ, ದೈವ ಗುರುಹಿರಿಯರಲ್ಲಿ ಭಕ್ತಿ ವಾತ್ಸಲ್ಯಗಳು ಲುಪ್ತವಾದಾಗ, ಇಲ್ಲವೇ ಧಕ್ಕೆಯೊದಗಿದಾಗ ಸಮಾಜಸುಧಾರಕರು ಮಾಡಲಾರದ ಸಾಮೂಹಿಕ ಸುಧಾರಣೆಯನ್ನು ಶತಕಕಾರರು ಶತಕಗಳ ಮೂಲಕ ಮಾಡಿದ್ದಾರೆ. ಶತಕ ಸಾಹಿತ್ಯದ ಬಿಡಿಪದ್ಯಗಳು ಮನಸ್ಸು ಬುದ್ಧಿಗಳಿಗೆ ಜೀವಸತ್ವದ ಗುಳಿಗೆಗಳಿದ್ದ ಹಾಗೆ. ವ್ಯಕ್ತಿ ಅವುಗಳ ಅಧ್ಯಯನದಿಂದಾಗಿ ಇಲ್ಲವೆ ಕಂಠಪಾಠ ಮಾಡುವುದರಿಂದಾಗಿ ಕಷ್ಟಕಾಲದಲ್ಲಿ ಸಮಯ ಸಂದರ್ಭಗಳಲ್ಲಿ ಆತ್ಮಮಿತ್ರನೊಬ್ಬನನ್ನು ಜೊತೆಯಲ್ಲಿ ಹೊಂದಿದ ಲಾಭವಿದೆ. ಗಾದೆಯ ಮಾತುಗಳಂತೆ ಶತಕದ ಪದ್ಯಗಳನ್ನು ವ್ಯವಹಾರ ವಿಚಾರ ಉಪಚಾರಗಳಲ್ಲಿ ನಿರರ್ಗಳವಾಗಿ ಬಳಕೆ ಮಾಡಬಹುದು. ಕೆಲವೊಂದು ಸಮಸ್ಯೆಗಳಿಗೆ ಪರಿಹಾರವನ್ನು ಕಂಡುಕೊಳ್ಳಬಹುದು" ಎಂದು ಬೋಧಪ್ರದವೂ, ಭಕ್ತಿ ನೀತಿ ಪ್ರಧಾನವೂ ಆದ ಶತಕಗಳ ಮಹತ್ವವನ್ನು ಸ್ಪಷ್ಟಪಡಿಸಿದ್ದಾರೆ. ಈ ರೀತಿ ಶತಕಗಳ ಉದ್ದೇಶ ಹಾಗೂ ಪ್ರಯೋಜನ ಕುರಿತು ನೀಡಿದ ಕೆಲವರ ಅಭಿಪ್ರಾಯಗಳು ಸ್ವಲ್ಪ ಉತ್ಪ್ರೇಕ್ಷೆಯಂತೆ ಕಂಡುಬಂದರೂ ಇತರ ಸಾಹಿತ್ಯ ಪ್ರಕಾರಗಳಿಗಿಂತ ಶತಕ ಸಾಹಿತ್ಯ ರಚನೆಯ ಉದ್ದೇಶ ಹಾಗೂ ಪ್ರಯೋಜನಗಳು ಸ್ವಲ್ಪ ಮಟ್ಟಿಗಾದರೂ ಭಿನ್ನವಾಗಿದೆ ಎಂಬುದನ್ನು ಒಪ್ಪಿಕೊಳ್ಳಬಹುದು. "ಶತಕಗಳು ಸಾಮಾನ್ಯವಾಗಿ ಮಾನವನ ಮನೋಪಟಲದ ಮೇಲೆ ಮುಸುಕಿದ ಅಜ್ಞಾನದ ತೆರೆಯನ್ನು ತೆರೆಯಲು ಪ್ರಯತ್ನಿಸಿವೆ. ಮಾನವರನ್ನು ಸನ್ಮಾರ್ಗಕ್ಕೆ

ತರಲು ಬಯಸಿದೆ. ಯೌವನ ಮದದಿಂದ ಮತ್ತರಾದವರಲ್ಲಿ ವಿಚಾರ ಕ್ರಾಂತಿಯನ್ನೆಬ್ಬಿಸಲು ಪ್ರಯತ್ನಗೈದಿದೆ. ಬಾಳಿನಲ್ಲಿ ಉದಾಸೀನರಾದವರಿಗೆ ಸ್ಫೂರ್ತಿಯನ್ನೀಯಲು ಶ್ರಮಿಸಿದೆ". (ಎಂ. ಮಾಧವ ಪೈ, ಜೀವನ - ಸಂಪುಟ ೨೧, ಸಂಚಿಕೆ೧೨, ೧೯೬೧) ಎಂಬ ಅಭಿಪ್ರಾಯ ಸಮಂಜಸವಾದುದಾಗಿದೆ.

ಕುಮಾರವ್ಯಾಸ ಮೊದಲಾದ ಕವಿಗಳು ತಮ್ಮ ಕಾವ್ಯಗಳನ್ನೋದುವುದರಿಂದ ಉಂಟಾಗುವ ಪ್ರಯೋಜನದ ಬಗ್ಗೆ ಹೇಳಿಕೊಂಡಂತೆ ಅನೇಕ ಶತಕಕವಿಗಳೂ ತಮ್ಮ ಶತಕಗಳನ್ನೋದುವುದರಿಂದ ಉಂಟಾಗುವ ಫಲಗಳೇನು ಎಂಬ ಬಗ್ಗೆ ಹೇಳಿದ್ದಾರೆ. ನಾಗವರ್ಮಾಚಾರ್ಯನು ತನ್ನ ಚಂದ್ರಚೂಡಾಮಣಿ ಶತಕವನ್ನು ಓದುವುದರಿಂದ ಭಕ್ತಿ ಮುಕ್ತಿ ಫಲವು ದೊರಕುವುದೆಂದು ಹೇಳಿದ್ದಾನೆ.

ಇದನಾವಂ ನಿಜಭಕ್ತಿವಾವರಿಸದಿಂ ಪೇಳ್ದಾತನಾವಂ ಮನೋ
ಮುದದಿಂದಂ ಸ್ತುತಿಯಿಪ್ಪನಾವಕವಿಗಂ ಮಾಹೇಶ್ವರೀಶಂ ವರ
ಪ್ರದಹಸ್ತಮದಾವಲೋಕನ ಸುಖಾನಂದಾಶ್ರು ಕೋಟ್ಯರ್ಕ ಸಂ
ಪದ ತೇಜೋನಿಧಿ ಮಾಡಭೀಷ್ಟಫಲಮಂ ಶ್ರೀಚಂದ್ರಚೂಡಾಮಣೀ

(ಚಂದ್ರಚೂಡಾಮಣಿ ಶತಕ. ಪದ್ಯ-೧೦೪)

ಹರಿಹರನು ರಕ್ಷಾಶತಕದಲ್ಲಿ ತನ್ನ ಕೃತಿಯನ್ನೋದುವವರಿಗೆ ಪಂಪೆಯ ವಿರೂಪಾಕ್ಷನು ಸಂತೃಪ್ತನಾಗಿ ಸಕಲ ಸಿರಿಸಂಪತ್ತನ್ನು ನೀಡಿ ಕಾಪಾಡು ಎಂದಿದ್ದಾನೆ -

ಭರದಿಂ ಕೇಳ್ದೋದುವಾನಂದೊಳತಿಶಯದಿಂ ಮೆಚ್ಚಿ ಬಾಲಿಪ್ಪವರ್ಗಾ
ವರದಿಂ ನಿತ್ಯಾಯುವಂ ಸಂಪದವನಭವನೀಯುತ್ತುಮಿರ್ಕೆಂದನೂನಂ
ಧರೆಯೊಳ್ ಕೈಕೊಂಡು ರಕ್ಷಾಶತಕವನೊಲವಿಂ ಪ್ರೇಮದಿಂ ನಚ್ಚಿಪೇಳ್ದಂ
ಹರಿದೇವಂ ದೇವ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ

(ರಕ್ಷಾಶತಕ - ಪದ್ಯ ೧೦೦)

ಹರಿಹರನು ತನ್ನ ಪಂಪಾಶತಕವು ಸಕಲ ಇಷ್ಟಪ್ರದಾಯಕವಾದುದೆಂದು ಹೇಳಿಕೊಂಡಿದ್ದಾನೆ-

ಜಯ ಜಯ ಪುಣ್ಯಮಾರ್ಗಮಿದು ಸಾತ್ವಿಕ ಲಕ್ಷಣಮಿಂತಿದಾಶ್ರಯ
ಸ್ವಯಮಿದನೂನ ಭಕ್ತರಸಪೂರಮಿದುತ್ತಮಶೀಲ ಭಕ್ತರಾ-
ಶ್ರಯಮಿದು ತಪ್ಪದೆಂದು ಶರಣರ್ ಮಿಗೆ ಬಣ್ಣಿಸೆ ಪೇಳ್ದನಾಹ ಪಂ
ಪೆಯ ಹರಿದೇವನೀ ಶತಕಮಂ ಸಕಲೇಷ್ಟಫಲಪ್ರದಾತ್ಮವಂ

(ಪಂಪಾಶತಕ - ಪದ್ಯ ೧೦೦)

ಮಗ್ಗೆಯ ಮಾಯಿದೇವನು ತನ್ನ ಶಿವಾವಲ್ಲಭ ಶತಕದಲ್ಲಿ -

*ಇದನಾರೋದಿದವರ್ಗೆ ಕೇಳ್ದವರಿಗುಜ್ವಲಭಕ್ತಿಯೋಗ ಕ್ರಿಯಾ*
*ಸದ ಸಮ್ಯಕ್ ಪರಮ ಪ್ರಸನ್ನ ಪರಿಪೂರ್ಣೈಕಾಗ್ರನಿಷ್ಠಾನು ಭೂ*
*ತಿದ ಸಚ್ಚಿತ್ಸುಖರೂಪ ನಿಷ್ಕಳ ಮಹಾಲಿಂಗೈಕ್ಯ ನಿರ್ವಾಣ ಸಂ*
*ಪದ ನಿತ್ಯತ್ವಮನೀವುದಯ್ಯ ಕೃಪೆಯಿಂ ನೀನೇ ಶಿವವಲ್ಲಭಾ*

*(ಶಿವಾವಲ್ಲಭ ಶತಕ ಪದ್ಯ ೧೦೩)*

ಎಂದು ತನ್ನ ಈ ಶತಕವನ್ನು ಓದುವವರಿಗೆ, ಓದಿದುವನ್ನು ಆಲಿಸಿದವರಿಗೆ ಉನ್ನತವೂ ಉಜ್ವಲವೂ ಆದ ಭಕ್ತಿಯೋಗವನ್ನು ಪರಮಪ್ರಸನ್ನತೆಯನ್ನು, ಪರಿಪೂರ್ಣ ಏಕಾಗ್ರನಿಷ್ಠೆಯನ್ನು, ಅನುಭೂತಿಯನ್ನು ಶಿವಾವಲ್ಲಭನು ನೀಡುವನೆಂದು ಹೇಳಿದ್ದಾನೆ. ಕೇಶವನು ತಿರುವೇಂಗಡಾಚಾರ್ಯ ಶತಕ ಪಂಚಕದ ಮೊದಲ ಶತಕದ ಕೊನೆಯಲ್ಲಿ -

*ಧರಣಿಯಮರರ್ಗೆ ಷೋಡಶಮಹಾದ್ದಾನಮಂ*
*ಕರದಿತ್ತಫಲ ದಿವ್ಯಕ್ಷೇತ್ರಯಾತ್ರಾದಿಗಳ*
*ಚರಿಸಿದತಿಫಲ ತುರಗಮೇಧಮಂ ಗೈದಫಲ ವಿಷ್ಣು ಗುರುಪೂಜೆಯ ಫಲಂ*
*ತಿರುವೇಂಗಡಾಚಾರ್ಯ ಶತಕದೊಳಗೊಂ(ದು) ಅ*
*ಕ್ಷರವ ಬರದೋದಿ ಕೇಳ್ದವರಿಗವನು ಸದಾ*
*ಗುರು ಸುತೋದ್ಧಾರ ಆದಿಕೇಶವನಮೋಘಮಿದು ಸತ್ಯಮಿದು ಶಾಶ್ವತಮಿದೂ*
*(ಸದಾಚಾರ್ಯಮಹಿಮ್ನ ಪ್ರಥಮ ಶತಕ ಪದ್ಯ ೧೩೪)*

ಎಂದೂ, ಐದನೆಯ ಶತಕದ ಕೊನೆಯಲ್ಲಿ -

*ಧರೆಯೊಳಾರಾದಡೇನೀ ಶತಕಮೈದುವನು*
*ಬರದೋದಿ ಕೇಳಿ ಗುರುಮುಖದಿಂದ ತತ್ಸಾರ*
*ವರಿತು ನಡವರಿಗಾಯುರಾರೋಗ್ಯಮೈಶ್ವರ್ಯ ಸತಿಸುತರ್ ಧನ ಧಾನ್ಯವೂ*
*ಪಿರಿದು ವೃದ್ಧಿಗಳಾಗಿಯಿಹದಿ ಶಶಿಧರ ತರಣಿ*
*ಯಿರುವನ್ನೆಬರ ಪರದಿ ಹರಿಯ ಸಾಮೀಪ್ಯ ಕೈಂ*
*ಕರಿಯ ಸುಖತೃಪ್ತಿಯೊಳಗಿಪರೈಯ್ಯ ತಿರುವೇಂಗಡಾಚಾರ್ಯ ಮೌನಿವರ್ಯಾ*

*(ಪದ್ಯ ೧೦೬)*

ಎಂದೂ ತನ್ನ ಶತಕವನ್ನು ಬರೆವವರಿಗೆ, ಓದುವವರಿಗೆ, ಕೇಳುವವರಿಗೆ ಇಹದಲ್ಲಿ ಆಯುರಾರೋಗ್ಯಾದಿ ಸಕಲ ಸಂಪತ್ತುಗಳು ದೊರಕುವುವೆಂದೂ ಪರದಲ್ಲಿ ಹರಿಪದದ ಸೌಖ್ಯವು ಸಿದ್ಧಿಸುವುದೆಂದೂ ಹೇಳಿದ್ದಾನೆ.

ಗುಮ್ಮಟಾರ್ಯನು ತನ್ನ ಶತಕವನ್ನು ಆಸಕ್ತಿಯಿಂದ ಓದಿದಲ್ಲಿ ಸರ್ಪಗಳು ವಿಷವನ್ನೂ, ಹುಲಿಸಿಂಹಗಳು ರೌದ್ರವನ್ನೂ, ಉಗ್ರವ್ಯಾಸರವು ಕ್ರೂರತೆಯನ್ನೂ, ಜಡರು ಜಾಡ್ಯವನ್ನೂ, ವೈರಿಗಳು ವೈರವನ್ನೂ, ರಾಜರು ಅನ್ಯಾಯವನ್ನೂ ಬಿಟ್ಟು ಬಿಡುವರೆಂದೂ ತನ್ನ ಶತಕವನ್ನು ಬರೆಯಿಸುವುದರಿಂದ ಹಾಗೂ ಬರೆಯಿಸಿದ್ದನ್ನು ಓದುವುದರಿಂದ ಬುಧಜನರಿಗೆ ಆಯುರಾರೋಗ್ಯ ಸೌಖ್ಯ ಸೌಭಾಗ್ಯಗಳುಂಟಾಗುತ್ತವೆಂದೂ, ನಿತ್ಯ ಪಠಿಸುವವರಿಗೆ ವಿಶಿಷ್ಟಾರ್ಥ ಸೌಖ್ಯವುಂಟಾಗುವುದೆಂದೂ ಹೇಳಿದ್ದಾನೆ. (ಗುಮ್ಮಟಶತಕ, ಪದ್ಯ ೧೦೬, ೧೦೭).

ಸಂಗವಿಭುವು ತನ್ನ ಪುಷ್ಪಾಶತಕದಲ್ಲಿ "ಸಂಗವಿಭು ಸೂರ್ಪದ್ಯಂಗಳಂ ಭಕ್ತಿಯಿಂ ತಾನುಂ ಬುದ್ಧಿಗೆ ತೋರಿದಂದದವೊಳೊಡರ್ಚಲ್ಪಲ್ಲ ಸರ್ವಜ್ಞರಿನ್ನೀ ಸೂರ್ಪದ್ಯಗಳಿಂ ನಿಜೈಕ್ಯಪಡೆವರ್" ಎಂದು ಹೇಳಿದ್ದಾನೆ. (ಪದ್ಯ ೧೦೧) ಚಿಕ್ಕುಪಾಧ್ಯಾಯನು ನೀತಿಶತಕ ಸಾಂಗತ್ಯದಲ್ಲಿ "ಸಾಂಗತ್ಯವಿದ ಕೇಳ್ವ ಪೇಳ್ವರ್ಗೆ ಸಕಲ ಸುಖವ ರಂಗನೀವ" ಎಂದಿದ್ದಾನೆ.(ಪದ್ಯ ೧೦೧)

ಈ ರೀತಿ ಅನೇಕ ಶತಕ ಕವಿಗಳು ಶತಕಗಳನ್ನು ಪಠಿಸುವುದರಿಂದ ಭಕ್ತಿ, ಜ್ಞಾನ, ವಿರಕ್ತಿ, ನಿಷ್ಠೆ ಧೈರ್ಯ, ಸಂಪತ್ತು, ವಿವೇಚನೆ, ಭಕ್ತಿ, ಮುಕ್ತಿಗಳುಂಟಾಗುತ್ತವೆಂದೂ ಆದರಿಂದ ಕಲಿಯುಗದ ಮಲಿನವಾದ ವರ್ತನೆ ತೊಲಗುವುದೆಂದೂ ಹೇಳಿ ಶತಕಗಳ ಮಹತ್ವ ಹಾಗೂ ಪ್ರಯೋಜನಗಳನ್ನು ತಮ್ಮ ಶತಕಗಳಲ್ಲಿ ಸ್ಪಷ್ಟಪಡಿಸಿದ್ದಾರೆ. ಶತಕಗಳು ಆಕಾರದಲ್ಲಿ ಕಿರಿಯವಾದರೂ ಪುರುಷಾರ್ಥ ಪ್ರತಿಪಾದನೆಯನ್ನು ಮಾಡುವುವು. ಸತ್ಯ, ನೀತಿ, ಭಕ್ತಿ, ವೈರಾಗ್ಯಗಳನ್ನು ಸಾರುವುವು. ಅನುಭವಪೂರ್ಣವಾದ ವ್ಯವಹಾರಜ್ಞಾನವನ್ನು ತಿಳಿಸುವುವು ಮಾತ್ರವಲ್ಲ "ಭಕ್ತಿ, ಜ್ಞಾನ, ವೈರಾಗ್ಯಬೋಧಕಗಳಾದ ಶತಕಗಳು ಭಾಷಾಭೂಷಣಗಳಾಗಿ ಪೂಜಾರ್ಹಗಳು, ಪಠನಾರ್ಹಗಳು, ಸ್ಮರಣಾರ್ಹಗಳು, ಮನನಾರ್ಹಗಳು. ಶತಕಗಳು ಹೆಚ್ಚಾಗಿ ನಿತ್ಯಸತ್ಯವನ್ನು ಸಾರುವುದರಿಂದ ದೈವಪರವಾಗಿ ಮೋಕ್ಷಕಾರಣಗಳು" (ಎಂ. ಮರಿಯಪ್ಪ ಭಟ್, ಕನ್ನಡ ಸಂಸ್ಕೃತಿ ೧೯೬೭ ಪು.೧೯೪) ಈ ಮೊದಲಾದ ಲಕ್ಷಣ, ಗುಣ ಹಾಗೂ ಉದ್ದೇಶಗಳಿಂದ ಶತಕಗಳು ಇತರ ಎಲ್ಲ ಕಾವ್ಯಪ್ರಕಾರಗಳಿಗಿಂತ ಸ್ವಲ್ಪಮಟ್ಟಿಗೆ ಭಿನ್ನವಾಗಿವೆಯೆಂದು ಹೇಳಬಹುದು.

"ಅತ್ಯಲ್ಪಕಾಲದಲ್ಲಿ ಅತಿಮಹತ್ವದ ಸಂಗತಿಗಳನ್ನು ನೇರವಾಗಿ ತಿಳಿಸಬಲ್ಲ ಕಾವ್ಯಪ್ರಕಾರವೆಂದರೆ ಶತಕಗಳು. ಶತಕಗಳ ಪಠನದಿಂದ ಹಲವಾರು ವಿಷಯಗಳು ಒಮ್ಮೆಗೇ ಲಭ್ಯವಾಗುತ್ತವೆ. ಆದುದರಿಂದಲೇ ಅಂದಿನಿಂದ ಇಂದಿನವರೆಗೂ ಶತಕ ಸಾಹಿತ್ಯ ರಚನೆ ಅವ್ಯಾಹತವಾಗಿ ನಡೆದುಕೊಂಡು ಬರುತ್ತಿದೆ" ಎಂದು ಎಸ್. ಬಸವಾರಾಧ್ಯರು ಶತಕದ ಮಹತ್ವವನ್ನು ಸಂಗ್ರಹಿಸಿ ಹೇಳಿದ್ದಾರೆ. (ಪಂಚಶತಕ, ಮುನ್ನುಡಿ ೧೯೬೯). ಕವಿಗಳು ಭಾವಗೀತೆಗಳನ್ನು ರಚಿಸಿದಂತೆ ಶತಕಗಳನ್ನು ಆತ್ಮಾನಂದಕ್ಕಾಗಿ ಅಥವಾ ಆತ್ಮತೃಪ್ತಿಗಾಗಿ ರಚಿಸಿಲ್ಲ. ಅವುಗಳನ್ನು ಅವರು ರಚಿಸಿರುವುದು ಲೋಕಪ್ರಯೋಜನಾರ್ಥವಾಗಿ.

ಬೋಧನೆಯೇ ಆದರ ಉದ್ದೇಶ. ಎಸ್. ವಿಮಲ ಸುಮತೀಕುಮಾರ್ ಅವರು ಸಂಕ್ಷಿಪ್ತ ಕನ್ನಡ ಸಾಹಿತ್ಯ ಚರಿತ್ರೆ (ಸಂಪುಟ-೪, ಭಾಗ-೩, ೧೯೭೮ ಪುಟ.೫೭೫)ಯಲ್ಲಿ "ಕನ್ನಡ ಶತಕಗಳೆಲ್ಲವೂ ನೀತಿ,ವೈರಾಗ್ಯ, ವ್ಯವಹಾರ ಮುಂತಾದವುಗಳ ಬೋಧನೆಯನ್ನೇ ತಮ್ಮ ಮುಖ್ಯಗುರಿಯಾಗಿಟ್ಟು ಕೊಂಡಿರುವುವೆನ್ನಬಹುದು. ಕಾಂತಾಸಮ್ಮಿತದಿಂದಲೂ ಪ್ರಭುಸಮ್ಮಿತ ದಿಂದಲೂ ನೀತಿಬೋಧನೆ ಮಾಡುವುದರಲ್ಲಿ ಶತಕಗಳು ಯಶಸ್ವಿಯಾಗಿವೆ. ಈ ದೃಷ್ಟಿಯಿಂದ ನೋಡಿದಾಗ ಶತಕಗಳು ಕವಿಗಳ ಅನುಭವ, ದರ್ಶನಗಳ ಕೈಪಿಡಿಯಂತೆ ಕಂಡುಬರುತ್ತವೆ. ಜನತೆಗಾಗಿ ಜನಮನದ ಉದ್ಧಾರಕ್ಕಾಗಿ ಕಾವ್ಯರಚನೆ ಮಾಡಿದ ನಮ್ಮ ಕವಿಗಳು ಜನತೆಯ ಮನಮುಟ್ಟಿ ಹೃದಯ ತಟ್ಟುವಂತೆ ವೈರಾಗ್ಯ - ಪಾಪಭೀರುತ್ವಗಳನ್ನು ಶತಕಗಳಲ್ಲಿ ನಿರೂಪಿಸಿರುವುದನ್ನು ನಾವು ಕಾಣಬಹುದು" - ಎಂದಿದ್ದಾರೆ. ಕೇಶಿರಾಜನು ಶಬ್ದಮಣಿದರ್ಪಣದಲ್ಲಿ ವ್ಯಾಕರಣಾಭ್ಯಾಸದ ಪ್ರಯೋಜನವನ್ನು ಕುರಿತು -

*ವ್ಯಾಕರಣದಿಂದೆ ಪದಮಾ*
*ವ್ಯಾಕರಣದ ಪದದಿನರ್ಥಮರ್ಥದೆ ತತ್ವಾ*
*ಲೋಕಂ ತತ್ವಾಲೋಕದಿ*
*ನಾಕಾಂಕ್ಷಿಪ ಮುಕ್ತಿಯಕ್ಕುಮದೆ ಬುಧರ್ಗೆಫಲಂ (ಸೂತ್ರ - ೩)*

ಎಂದು ಹೇಳಿದ್ದಾನೆ. ವ್ಯಾಕರಣಾಭ್ಯಾಸದಿಂದಲೇ ಮುಕ್ತಿದೊರೆಯುವುದೆಂದ ಮೇಲೆ ಬೋಧಪ್ರದವಾದ ಭಕ್ತಿ, ಜ್ಞಾನ, ವೈರಾಗ್ಯ ನೀತಿನಿರೂಪಕ ಶತಕಗಳನ್ನು ಓದುವುದರಿಂದ ಮುಕ್ತಿಯುಂಟಾಗದೆ ಇರಲಾರದು.

■

# ವೀರಶೈವ ಗೋತ್ರಪುರುಷರು ಮತ್ತು ಸೂತ್ರಗಳು

**ವಿದ್ವಾನ್ ಜಿ.ವಿ. ಶಿವಸ್ವಾಮಿ**

---

ವೀರಶೈವ ಧರ್ಮಪರಂಪರೆಯಲ್ಲಿ ಪ್ರಾಚೀನಕಾಲದಿಂದಲೂ ವೀರ, ನಂದಿ, ಭೃಂಗಿ, ವೃಷಭ ಮತ್ತು ಸ್ಕಂದ ಇವರು ಗೋತ್ರಪುರುಷರೆಂದು, ವೀರಶೈವ ಸಿದ್ಧಾಂತ ಗ್ರಂಥಗಳಾದ ಶಿವಾಗಮಗಳು, ಪಾಶುಪತ ತಂತ್ರ, ಕ್ರಿಯಾಸಾರ, ಸದಾಚಾರಸಂಗ್ರಹ, ಋಗ್ವೇದ, ಸ್ಕಾಂದ ಪುರಾಣ, ವೀರಶೈವಪ್ರಯೋಗ, ಷಟ್‌ಸ್ಥಲಜ್ಞಾನ ಸಾರಾಮೃತ, ವೀರಶೈವಾನಂದಚಂದ್ರಿಕೆ, ವೀರಶೈವ ಮಹಾಪುರಾಣ, ವೀರೇಶ ಚರಿತ್ರೆ - ಮುಂತಾದ ಅನೇಕ ಗ್ರಂಥಗಳು ವಿವರಣೆಯನ್ನು ನೀಡುತ್ತವೆ. ಸೃಷ್ಟಿಯ ಆದಿಯಲ್ಲಿ ಪರಬ್ರಹ್ಮನು (ಪರಶಿವನು) ಚತುರ್ಮುಖ ಬ್ರಹ್ಮನಿಗೆ ಸೃಷ್ಟಿಯ ವಿಚಾರವನ್ನು ತಿಳಿಸಿಕೊಡಲು ತಾನೇ ಶಿವಗಣಗಳನ್ನು ಸೃಷ್ಟಿಸಿದನು. ಆ ಶಿವಗಣ ಸಮೂಹದಲ್ಲಿ ವೀರ, ನಂದಿ, ಭೃಂಗಿ, ವೃಷಭ, ಸ್ಕಂದರೆಂಬ - ಈ ಐದು ಜನ ಶಿವಗಣರೇ ವೀರಶೈವರ ಮೂಲಗೋತ್ರಪುರುಷರು. 'ಗೋತ್ರ' ಪದಕ್ಕೆ ಅನೇಕ ಅರ್ಥಗಳಿವೆ. ವಂಶ, ಪರಂಪರೆ, ಜಾತಿ, ಸಂತತಿ, ಕುಲ, ಮನೆತನ ಎಂಬ ಅರ್ಥಗಳಿವೆ. ಪ್ರಾಚೀನ ಗ್ರಂಥಗಳಲ್ಲಿ:

*ಈಶಾನ ಮುಖ ಸಂಜಾತಾ ವೀರಶೈವಾ ಮಹೌಜಸಃ /*
*ವೀರೋ ನಂದೀ ತಥಾಭೃಂಗೀ ವೃಷಭಃ ಸ್ಕಂದಏವಚ //* *(ಪಾಶುಪತ//ತಂತ್ರ)*

*ಅತಿ ವರ್ಣಾಶ್ರಮಾಃ ಪೂರ್ವೇ ನಂದ್ಯಾದಿಪ್ರಮಥಾಸ್ಮೃತಾಃ।*
*ತತ್ಸಂತತಿ ಸಮಾಯಾತಾ ವೀರಶೈವಾ ಇತಿಶ್ರುತಾಃ॥*
*(ವೀರಶೈವ ಸದಾಚಾರ ಸಂಗ್ರಹ)*
*ಈಶಾನಂ ಪಂಚಮಂ ಪ್ರೋಕ್ತಂ ಮುಖಾನಿ ಮಮಸರ್ವಶಃ।*
*ತಾನ್ಯಾನನಾನಿ ಗೋತ್ರಾಣಿ ವೇದೋಕ್ತಾನಿ ನಸಂಶಯಃ॥*
*ವೀರೋ ನಂದೀ ವೃಷಭಶ್ಚೈವ ಭೃಂಗೀ ಸ್ಕಂದಸ್ತಥೈವಚ।*
*ಮತ್ಸ್ವರೂಪಾಃ ಸಮುತ್ಪನ್ನಾಃ ಪಂಚಗೋತ್ರಾಧಿಕಾರಿಣಃ॥ (ವೀ.ಸ.ಸಂ.)*

ಶಿವನು "ಗೌರಿಯೇ! ಕೇಳು, ನನಗೆ ಐದು ಮುಖಗಳಿವೆ. ಐದನೆಯ ಮುಖವೇ ಈಶಾನ, ಅವುಗಳಿಂದ ಹುಟ್ಟಿದವರು ಗೋತ್ರಪುರುಷರು, ಅವು ವೇದದಲ್ಲಿ ಪ್ರತಿಪಾದಿತವಾಗಿವೆ. ಇವರು ನನ್ನ ಸ್ವರೂಪಿಗಳಾಗಿ ಉತ್ಪನ್ನರಾದ ವೀರ, ನಂದಿ, ಭೃಂಗಿ, ವೃಷಭ, ಸ್ಕಂದರೆಂಬ ಐದು ಜನರೂ ಪಂಚಗೋತ್ರ ಪುರುಷರೆಂದು ನಿರೂಪಿಸಿರುತ್ತಾನೆ.

ನಂದೀ ಭೃಂಗೀ ತಥಾ ವೀರೋ ವೃಷಭಃ ಸ್ಕಂದ ಏವಚ
ಏತಸ್ತೈವ ಮಯಾ ಸೃಷ್ಟಾಸ್ತಸ್ಮಾನ್ಮುಕ್ತಾ ಭವಂತಿ ತೇ
ಮತ್ಜ್ಞಾನಮೇವ ನಂದೀ ಸ್ಯಾತ್, ಭೃಂಗೀ ವೈರಾಗ್ಯಮೇವಚ
ಪ್ರತಾಪೋ ವೀರಭದ್ರಃ ಸ್ಯಾತ್ ಸದ್ಧರ್ಮೋ ವೃಷಭಃ ಸ್ಮೃತಃ
ಕೀರ್ತಿಃ ಸ್ಕಂದ ಇತಿ ಪ್ರೋಕ್ತಃ ಪಂಚೈತೇ ಮತ್ಸ್ವರೂಪಿಣಃ
ಮತ್ ಸ್ವರೂಪಾಃ ಸಮುತ್ಪನ್ನಾಃ ಪಂಚಗೋತ್ರಾಧಿಕಾರಿಣಃ
ದಾರುಕಃ ಶಂಕುಕರ್ಣಶ್ಚ ರೇಣುಕೋ ಧೇನು ಕರ್ಣಕಃ
ವಿಶ್ವಕರ್ಣಶ್ಚ ಪಂಚೈತೇ ಪಂಚಗೋತ್ರ ಸಮುದ್ಭವಾಃ ! (ಪಾಶುಪತಾಗಮ)

ವೀರಶೈವ ಪರಂಪರೆಯಿಂದ ಬಂದ ಗೋತ್ರ ಪುರುಷರ ಮತ್ತು ಪಂಚಾಚಾರ್ಯರ ಬಗ್ಗೆ ಪಾಶುಪತಾಗಮವು ಈ ರೀತಿ ವಿವರಣೆ ನೀಡುತ್ತದೆ. ನಂದಿ, ಭೃಂಗಿ, ವೀರ, ವೃಷಭ, ಸ್ಕಂದ ಇವರು ಐವರು ಗೋತ್ರಪುರುಷರು. ಶಿವನ ಅಪ್ರಾಕೃತ ಸೃಷ್ಟಿಯಿಂದ ಬಂದವರು. ನಿತ್ಯಮುಕ್ತರು, ಶಿವಗಣರು, ಶಿವಜ್ಞಾನಿಗಳು. ಇವರಲ್ಲಿ ನಂದಿಯು ಶಿವಜ್ಞಾನ ಸಂಪನ್ನನು, ಭೃಂಗಿಯು ವೈರಾಗ್ಯ ಪುರುಷನು, ವೀರಭದ್ರನು ಮಹಾಪರಾಕ್ರಮಶಾಲಿ, ವೃಷಭನು ಸದ್ಧರ್ಮಿ, ಸ್ಕಂದ (ಷಣ್ಮುಖ) ಯಶೋವಂತ, ಈ ಗೋತ್ರಪುರುಷರ ರಕ್ಷಕರಾಗಿ ದಾರುಕ, ಶಂಕುಕರ್ಣ, ರೇಣುಕ, ಧೇನುಕರ್ಣ ವಿಶ್ವಕರ್ಣರಾದಿಯಾಗಿ ಈ ಐದು ಜನ ಆಚಾರ್ಯರು ಭೂಮಿಯಲ್ಲಿ ಅವತರಿಸಿದರು. ಈ ಪಂಚಆಚಾರ್ಯರು ಭಾರತದ ಪುಣ್ಯಭೂಮಿಯಲ್ಲಿ ಧರ್ಮಪ್ರಚಾರ ಮಾಡಲು, ರಂಭಾಪುರಿ (ಬಾಳೆ ಹೊನ್ನೂರು), ಉಜ್ಜಯಿನಿ, ಕೇದಾರ, ಶ್ರೀಶೈಲ, ಕಾಶಿಗಳಲ್ಲಿ ತಮ್ಮ ಮಹಾಪೀಠಗಳನ್ನು ಸ್ಥಾಪಿಸಿ, ರಂಭಾಪುರಿ ಪೀಠಕ್ಕೆ - ವೀರ, ಉಜ್ಜಯಿನಿ ಪೀಠಕ್ಕೆ - ನಂದಿ.

ಕೇದಾರ ಪೀಠಕ್ಕೆ - ಭೃಂಗಿ, ಶ್ರೀಶೈಲ ಪೀಠಕ್ಕೆ - ವೃಷಭ, ಕಾಶೀಪೀಠಕ್ಕೆ - ಸ್ಕಂದ (ಷಣ್ಮುಖ) ಎಂಬ ಐದು ಜನ ಗೋತ್ರಪುರುಷರೂ, ಈ ಗೋತ್ರ ಪುರುಷರ ರಕ್ಷಣೆ ಮಾಡುತ್ತಾ ವೀರಶೈವ ಷಟ್‌ಸ್ಥಲಸಿದ್ಧಾಂತವನ್ನು ಮಾನವ ಕೋಟಿಗೆ ಬೋಧಿಸಿದ ಮಹಾಚಾರ್ಯರೂ ಆಗಿರುತ್ತಾರೆ.

ವೀರಶೈವ ಗೋತ್ರಪುರುಷರು ವಿವಾಹಿತರು. ಗೋತ್ರ ಅಂದರೆ ಪರಂಪರೆ, ವೀರಶೈವ ಪರಂಪರೆ ಗೋತ್ರ ಪುರುಷರಿಂದ ಪ್ರಾರಂಭವಾಗುತ್ತದೆ. ವೀರಶೈವಗೋತ್ರ ಪುರುಷರಿಗೆ ಪತ್ನಿಯರಿದ್ದರು (ಎಂಬುದನ್ನು ಕ್ರಿಯಾಸಾರ - ೨ನೇ ಭಾಗ ಪ್ರಾಚ್ಯ ಸಂಶೋಧನಾ ಸಂಸ್ಥೆ - ಮೈಸೂರು) ಅವರ ಪತ್ನಿಯರ ಹೆಸರನ್ನು ಉಲ್ಲೇಖಿಸಲಾಗಿದೆ.

*1. ನಂದೀಶ್ವರನಿಗೆ - ಕುಂಡಲಿನಿ*
*2. ಭೃಂಗೀಶ್ವರನಿಗೆ - ಆಹ್ಲಾದಿನಿ*
*3. ವೃಷಭೇಶ್ವರಿಗೆ - ಭದ್ರಾ*
*4. ಸ್ಕಂದನಿಗೆ - ದೇವಯಾನಿ*
*5. ವೀರೇಶ್ವರನಿಗೆ - ಭದ್ರಕಾಳಿ*

*''ವೀರಭದ್ರೋ ಮಹಾತೇಜಾ ಹಿಮಕುಂದೇಂದು ಸನ್ನಿಭಃ।*
*ಭದ್ರಕಾಳೀಪ್ರಿಯೋ ನಿತ್ಯಂ ಮಾತೄಣಾಭಿರಕ್ಷಕಃ ॥*
*ರುದ್ರಸ್ಯ ತನಯೋ ರೌದ್ರ, ಶ್ಯೂಲಾಸಕ್ತ ಮಹಾಕರಃ।-(ಲಿಂಗಪುರಾಣ)*

ಗೋತ್ರಪುರುಷನಾದ ವೀರಭದ್ರನು ಮಹಾತೇಜಸ್ವಿ, ಹಿಮದಂತೆ, ಮಲ್ಲಿಗೆಯಂತೆ, ಚಂದ್ರನಂತೆ, ಪರಿಶುಭ್ರನಾದವನು. ಭದ್ರಕಾಳೀಪ್ರಿಯನು, ನಿತ್ಯ ಮಾತೃಕಾಶಕ್ತಿಯರ ರಕ್ಷಕನು, ರುದ್ರನ ಮಗನು, ರೌದ್ರನಾಯಕನು, ಶೂಲಧರನು, ಗಣರಿಗೆ ಗಣ್ಯನು ಆಗಿದ್ದನು. ಈ ಮೇಲೆ ತಿಳಿಸಿದ ಆಧಾರದಿಂದ ಗೋತ್ರಪುರುಷನಾದ ವೀರಭದ್ರನಿಗೆ ಭದ್ರಕಾಳಿ ಎಂಬ ಪತ್ನಿ ಇರುವುದು ಸ್ಪಷ್ಟವಾಗಿ ತಿಳಿದುಬರುತ್ತದೆ.

ಈ ಗೋತ್ರಪುರುಷರ ಪರಂಪರೆಯೇ ಇಂದಿನ ವೀರಶೈವ ಸಮಾಜ. ಅಂದರೆ ಶಿವನ ಆದಿಸೃಷ್ಟಿಯಲ್ಲಿ ಬಂದವರು; ಚತುರ್ಮುಖ ಬ್ರಹ್ಮನ ಸೃಷ್ಟಿಯಲ್ಲಿ ಬಂದವರಲ್ಲ. ಈ ಐದು ಜನ ಗೋತ್ರಪುರುಷರು ಚಿರಂಜೀವಿಗಳು. ಇವರು ಜನನ ಮರಣ ರಹಿತರು, ದಿವ್ಯ ದೇಹಧಾರಿಗಳು. ಮಾನವರ ವಂಶ ಮುಂದುವರಿಯಬೇಕಾದರೆ ತಂದೆ-ತಾಯಿಗಳು ಹೇಗೆ ಕಾರಣ ಪುರುಷರಾಗುತ್ತಾರೆಯೋ ಹಾಗೆಯೇ ಸಮಾಜ ಮುಂದುವರಿಯಲು ಗೋತ್ರ ಪುರುಷರು ಕಾರಣೀಭೂತರಾಗುತ್ತಾರೆ. ಪಾರ್ವತಿಗೆ ಗೋತ್ರಪುತ್ರಿ ಎಂಬ ಹೆಸರಿದೆ. ಪಾರ್ವತಿಯು ದಕ್ಷಯಾಗಕ್ಕೆ ಹೋಗುವಾಗ ಶಿವನು ನಂದೀಶ್ವರನನ್ನು ಅಂಗರಕ್ಷಕನನ್ನಾಗಿ ಕಳುಹಿಸಿದ ವೃತ್ತಾಂತ ಸ್ಕಾಂದಪುರಾಣದಲ್ಲಿ ದೊರೆಯುತ್ತದೆ. 'ಗೋತ್ರ ಪುರುಷನಾಗಿ ಜಗದಿ ಮೆರೆದ ವೀರಭದ್ರ' ಎಂದು ಅವನ ನೂರೆಂಟು ನಾಮಾವಳಿಯಲ್ಲಿ ಉಲ್ಲೇಖ ಬರುತ್ತದೆ.

ಗೋತ್ರಪುರುಷನಾದ 'ವೃಷಭ'[೧] ಮಹಾಪಂಡಿತ, ಪ್ರತಿಭಾನ್ವಿತ, ಆತನ ಬಗ್ಗೆ ಶ್ರುತಿ ಹೀಗೆ ಹೇಳುತ್ತದೆ: ''ವೃಷಭೋ ವಿಶ್ವರೂಪಃ'' ರುದ್ರನೇ ವೀರನಾಗಿ, ವೃಷಭನಾಗಿ ಅವತರಿಸಿದನು. ವೃಷಭದೇವ ರುದ್ರದೇವನ ಮೂರನೇ ಅವತಾರ. ಋಷಭಸೂಕ್ತವು 'ಋಷಭಂ ಮಾ ಸಮಾನಾನಾಂ ಸಪತ್ನಾನಾಂ ವಿಷಾಸಹಿಮ್' ವೃಷಭನಿಗೆ ಪತ್ನಿ ಇದ್ದಳೆಂದು ವಿವರಿಸುತ್ತದೆ. (ಋಗ್ವೇದ ಮಂ. 10.113 ಸೂಕ್ತ)

ವೀರಶೈವ ಮತದ ಪರಂಪರೆಯಲ್ಲಿ ಕೆಲವು ಆಚರಣೆಗಳನ್ನು ಆಚರಿಸುವಾಗ ನಂದ್ಯಾದಿ ಪ್ರಮಥಗಣರನ್ನು ಆಹ್ವಾನಿಸಿ ಪೂಜಿಸುವ ಪರಂಪರೆ ಬಂದಿರುತ್ತದೆ. ವಿವಾಹ, ಜಾತಕರ್ಮ, ದೀಕ್ಷೆ, ಪಟ್ಟಾಧಿಕಾರ, ಶೋಭನ, ಗೃಹಪ್ರವೇಶ, ದೇವಾಲಯ ಪ್ರತಿಷ್ಠಾಪನೆ ಮತ್ತು ಶಾಂತಿ ಕರ್ಮಗಳನ್ನು ಆಚರಿಸುವಾಗ ಗೃಹಸ್ಥಾಶ್ರಮಿಗಳು ನಂದ್ಯಾದಿ ಚತುರ್ವಿಂಶತಿ ಮಹೇಶ್ವರರಾಧನೆಯನ್ನು ಆಚರಿಸುತ್ತಾರೆ. ಅವರ ಹೆಸರುಗಳಲ್ಲಿ ಗೋತ್ರ ಪುರುಷರು ಬರುತ್ತಾರೆ.

ಶ್ರೀನಂದಿ, ಭೃಂಗಿ, ವೀರಕ, ವೀರಭದ್ರ, ಪುಷ್ಪದಂತ, ದಾರುಕ, ರೇಣುಕ, ವಿಕರ್ಣ .. ಗೌತಮಾದಿ ಪ್ರಮಥ ಗಣಗಳನ್ನು ಆಹ್ವಾನಿಸಿ ಪೂಜಿಸುವ ಸಂಪ್ರದಾಯವಿದೆ. '' ... ಭೋ ನಂದ್ಯಾದಿ ಮಹಾಗಣಸ್ಸಾಯುಧಾಸ್ಸಶಕ್ತಿಯಸ್ಸಪರಿವಾರಾಸ್ಸಮಾಗತ್ಯಾಽತ್ರ ಮದೀಯಾಂ ಪೂಜಾಂ ಸ್ವೀ ಕುರ್ವಂತು ಭವಂತಃ''.

ಈ ಮೇಲ್ಕಂಡ ಮಂತ್ರವು ನಂದ್ಯಾದಿ ಪ್ರಮಥ ಗಣಾಧೀಶ್ವರರು ಪತ್ನಿ ಪರಿವಾರ ಹೊಂದಿದ್ದರೆಂದು ವಿವರಿಸುತ್ತದೆ.

ನಮ್ಮ ಮೂಲ ಪುರುಷನಾದ ಪರಮಶಿವನು ಶಕ್ತಿಯುತನಾಗಿರುತ್ತಾನೆ. ಅವನಿಂದ ಸೃಷ್ಟಿಯಾದ ಗೋತ್ರ ಪುರುಷರಿಗೆ ಪತ್ನಿಯರಿರುವುದು ಸಕಾರಣವು, ಆಧಾರವೂ ಆಗಿರುತ್ತದೆ.

ವಚನಕಾರರಲ್ಲಿ ಒಬ್ಬರಾದ ತೋಂಟದ ಸಿದ್ಧಲಿಂಗೇಶ್ವರರ ಒಂದು . ವಚನದಲ್ಲಿ ಶಿವಾಗಮೋಕ್ತ ಗಣಾಧೀಶ್ವರರ ಹೆಸರುಗಳನ್ನು ಉಲ್ಲೇಖಿಸಿರುವುದು ಕಂಡು ಬರುತ್ತದೆ.

*ನಂದೀಶ್ವರ, ಭೃಂಗೀಶ್ವರ, ವೀರಭದ್ರ*
*ದಾರುಕ, ರೇಣುಕ, ಶಂಕುಕರ್ಣ, ಗೋಕರ್ಣ*
*ಏಕಾಕ್ಷರ, ತ್ರಯಾಕ್ಷರ, ಪಂಚಾಕ್ಷರ, ಷಡಕ್ಷರ*
*ಸದಾಶಿವ, ಈಶ್ವರ, ಮಹೇಶ್ವರ, ರುದ್ರ*
*ಘಂಟಾಕರ್ಣ, ಗಜಕರ್ಣ*
*ಏಕಮುಖ, ಶತಮುಖ, ಸಹಸ್ರಮುಖ ಮೊದಲಾದ*

೧. ವೃಷಭ - ಎತ್ತು ಅಲ್ಲ. ಈಶ್ವರನ ವಾಹನ ನಂದಿ, ವೃಷಭ ಬೇರೆ. ಗೋತ್ರಪುರುಷರು ಬೇರೆ.

*ಗಣಾಧೀಶ್ವರರು ಇವರು ...*
*ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೆ*

*(ಷಟ್‌ಸ್ಥಲಜ್ಞಾನ ಸಾರಾಮೃತ)*

ಈ ಎಲ್ಲಾ ಗಣಾಧೀಶ್ವರರು ಮಾನವರಂತೆ ದೇಹಧಾರಿಗಳು ಶಿವಾಂಶಸಂಭೂತರು, ಭಾರತೀಯರು ಧರ್ಮಾಚರಣೆಗಳನ್ನು ಆಚರಿಸುವಾಗ ತಮ್ಮ ತಮ್ಮ ಗೋತ್ರ ಸೂತ್ರಗಳನ್ನು ಹೇಳಿಕೊಳ್ಳುವುದು ಸಂಪ್ರದಾಯವಾಗಿದೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯರು, ತಮ್ಮ ತಮ್ಮ ಶಾಖೆಯ ಋಷಿಗಳ ಗೋತ್ರಗಳನ್ನು ಹೇಳುತ್ತಾರೆ. ಹಾಗೆಯೇ ವೀರಶೈವರೂ ಸಹ ವಿವಾಹ, ದೀಕ್ಷೆ ಮುಂತಾದ ಸಂದರ್ಭಗಳಲ್ಲಿ ಸದಾಶಿವ ಮತ್ತು ಶಿವಗಣಾಧೀಶ್ವರರ ಗೋತ್ರಗಳನ್ನು ಹೇಳುವುದು ಸಂಪ್ರದಾಯವಾಗಿದೆ. ಇವರನ್ನು ವೀರಶೈವ ಋಷಿಗಳು, ಶಿವಾಚಾರ್ಯರು, ಮೂಲಪುರುಷರು ಎಂದು ಕರೆಯುತ್ತಾರೆ. ಈ ಆಚಾರ್ಯರ ಮೂಲಪೀಠಗಳಿಗೆ ಹನ್ನೆರಡು ಉಪಗೋತ್ರಗಳಿವೆ.

**ಉಪಗೋತ್ರಗಳು:-**

ಪಂಚಪೀಠಾಧೀಶ್ವರರು ಸಮಸ್ತವೀರಶೈವರ ಧಾರ್ಮಿಕ ಆಗು-ಹೋಗುಗಳನ್ನು ನಿರ್ಣಯಿಸುತ್ತಾರೆ. ವೀರಶೈವರ ಎಲ್ಲಾ ಮಠಾಧೀಶ್ವರರು ಒಂದಲ್ಲ ಒಂದು ಪೀಠಕ್ಕೆ ಸಂಬಂಧಿಸಿರುತ್ತಾರೆ. ವೀರಶೈವರು ಐದು ಪೀಠಗಳಲ್ಲಿ ಒಂದಲ್ಲ ಒಂದು ಪೀಠದ ಶಿಷ್ಯರಾಗಿರುತ್ತಾರೆ.

ಪಂಚಾಚಾರ್ಯರು ಮತ್ತು ಅವರ ಪೀಠಗಳು ಭರತ ಖಂಡದ ಐದು ಭಾಗಗಳಲ್ಲಿ ಇರುತ್ತವೆ. ಇಪ್ಪತ್ತು ರಾಜ್ಯಗಳಲ್ಲಿ ಇರುವ ವೀರಶೈವರು ಇವರ ಶಿಷ್ಯರಾಗಿರುತ್ತಾರೆ. ಈ ಐದು ಜನ ಆಚಾರ್ಯರು ಎಲ್ಲಾ ಕಡೆ ಸಂಚರಿಸಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಭಾರತದ ಬೇರೆ ಬೇರೆ ರಾಜ್ಯಗಳಲ್ಲಿ ಸಾವಿರಾರು ವೀರಶೈವ ಮಠಗಳನ್ನು ಸ್ಥಾಪಿಸಿ ಆ ಮಠಗಳಿಗೆ ಗುರುಗಳನ್ನು (ಉಪಾಚಾರ್ಯರನ್ನು) ನೇಮಿಸಿ ಅವರುಗಳ ಮುಖೇನ ವೀರಶೈವರ ಧಾರ್ಮಿಕ ಸಂಸ್ಕಾರಗಳನ್ನು ನಿರ್ವಹಿಸುತ್ತಿರುತ್ತಾರೆ. ಗುರುವರ್ಗದ ಉಪಾಚಾರ್ಯರು ಪಂಚಪೀಠಾಧೀಶ್ವರರ ಪ್ರತಿನಿಧಿಗಳಾಗಿ ಪಂಚಾಚಾರ್ಯರಿಂದ ಹೊರಟ ಒಂದಲ್ಲ ಒಂದು ಉಪಗೋತ್ರಕ್ಕೆ ಸೇರಿದವರಾಗಿರುತ್ತಾರೆ. ಈ ಪೀಠಗಳ ಶಾಖಾಮಠಗಳ ಅಧಿಪತಿಗಳಾಗಿರುತ್ತಾರೆ. (ಆಡಳಿತದ ದೃಷ್ಟಿಯಿಂದ ಈ ಮಠಗಳು ಸ್ವತಂತ್ರವಾಗಿವೆ)[೧] ದೀಕ್ಷೆ, ವಿವಾಹ, ಪಟ್ಟಾಧಿಕಾರ, ಗೃಹಪ್ರವೇಶ ಮುಂತಾದ ಶುಭ ಸಂದರ್ಭಗಳಲ್ಲಿ ಪಂಚಾಚಾರ್ಯರ ಸಂಕೇತವಾಗಿ ಪಂಚಕಲಶಗಳನ್ನು ಸ್ಥಾಪಿಸಿ ಪೂಜಿಸುವ

---

೧. ಈ ಗೋತ್ರ ಸೂತ್ರಾನು ವರ್ತಿಗಳಾದ ಹಿರೇಮಠದವರು, ಗುರುಮಠದವರು, ಪುತ್ರವರ್ಗದ ಮಠದವರು, ಪಟ್ಟಾಧಿಕಾರಿಗಳು ಪೀಠಾಧೀಶ್ವರರ ಆದೇಶದಂತೆ ತಮ್ಮ ತಮ್ಮ ಭಾಗಗಳಲ್ಲಿನ ಧಾರ್ಮಿಕ ವಿಧಿ ವಿಧಾನಗಳನ್ನು ನೆರವೇರಿಸುತ್ತಾರೆ.

ವಿಧಿವತ್ತಾದ ಸಂಪ್ರದಾಯವಿರುತ್ತದೆ. ಒಂದಲ್ಲ ಒಂದು ರೀತಿಯಲ್ಲಿ ಆಚಾರ್ಯರ ಸಾಕ್ಷಿಯಾಗಿ ಶುಭಕಾರ್ಯಗಳನ್ನು ವೀರಶೈವರು ನೆರವೇರಿಸುವ ಸಂಪ್ರದಾಯ ಹಿಂದಿನಿಂದಲೂ ಇಲ್ಲಿಯವರೆಗೂ ಅನೂಚಾನವಾಗಿ ನಡೆದುಕೊಂಡು ಬಂದಿರುತ್ತದೆ.

**ಪೀಠಾಚಾರ್ಯರ ಉಪಗೋತ್ರಗಳು:-**

1. ಶ್ರೀ ರೇವಣಾರಾಧ್ಯರ ಪಡುವಿಡಿ ಮಹಾಸೂತ್ರದಿಂದ ಹೊರಟ ಉಪಸೂತ್ರಗಳು ಹನ್ನೆರಡು. ಪುರಾಣ, ಪಂಚ ಕಂಥಾ, ಷಡಂಗ, ಸುರಗಿ, ಮಹಿಷೀ, ದಿಗಂಬರ, ವೇಣೀ, ಛತ್ರಿ, ಮೋರಟ, ನಾಟೀ, ಶೌರೀ, ಮುಸುಡಿ (ಸೂತ್ತ್ರ)
2. ಶ್ರೀ ಮರುಳಾರಾಧ್ಯರ ವೃಷ್ಟಿ (ಮಳೆ) ಮಹಾಸೂತ್ರದಿಂದ ಹೊರಟ ಉಪಸೂತ್ರಗಳು ಹನ್ನೆರಡು; ಲೋಹಕಂಥಾ, ಸ್ವರ್ಣಕಂಥಾ, ಶೃಂಗಿ, ಮಸಣೀ, ಕುಠಾರ, ಛೈತ್ರಿ, ಕಠಾರ, ಚಾಮುಂರೀ, ಕವಾಟ, ಕುಕ್ಷಕಂಥಾ, ಜಲತ್ಕಂಥಾ. ಓಷೇಓ.
3. ಶ್ರೀ ಏಕೋರಾಮಾರಾಧ್ಯರ ಲಂಬನ ಮಹಾಸೂತ್ರದಿಂದ ಹೊರಟ ಉಪಸೂತ್ರಗಳು ಹನ್ನೆರಡು : ಗೋಣಿಕಂಥಾ, ದಂತೀ, ಜಠರ, ತ್ರಿಗುಣ, ಕೇಶಕಂಥಾ, ಲಲಾಟ, ವ್ಯಾಘ್ರಕಂಥಾ, ಲೋಚನ, ಭಗಿನೀ, ಜಾಲಕಂಥಾ, ನಟನ, ಬಡವಿ.
4. ಶ್ರೀ ಪಂಡಿತಾರಾಧ್ಯರ ಮುಕ್ತಾಗುಚ್ಛ (ಮುಕ್ತಿನಕಂಥಾ) ಮಹಾಸೂತ್ರದಿಂದ ಹೊರಟ ಉಪಸೂತ್ರಗಳು ಹನ್ನೆರಡು :- ತ್ರಿಪುಟೀ, ರಜ್ಜುಕಂಥಾ, ಭಸ್ಮೀ, ಶಿಖರೀ, ರೌಪ್ಯಕ, ಚಂದ್ರಗುಂಡ, ಮೃತ್ಕಂಥಾ, ಕಾಷ್ಟಕ, ಪವನ, ರಾಮಗಿರಿ, ಖಡ್ಗೀ, ಅಲಕ (ಇವುಗಳಲ್ಲದೆ ಪರ್ಯಾಯವಾಗಿ ಕಾರ್ಪಾಸ, ಕೌಪೀ, ಕಾರ್ಬೋಣ್ಣ ಕೆಲವು ಕಡೆ ಉಲ್ಲೇಖ ದೊರೆಯುತ್ತವೆ)[೧]
5. ಶ್ರೀ ವಿಶ್ವಾರಾಧ್ಯರ ಪಂಚವರ್ಣದ ಮಹಾಸೂತ್ರದಿಂದ ಹೊರಟ ಉಪಸೂತ್ರಗಳು ಹನ್ನೆರಡು :- ಪಂಚವರ್ಣ, ಕಂಬಲಿ, ವೃಷಭ, ದಶವಕ್ತ್ರ, ಜರತ್ಕಂಥಾ, ಪಂಚಮುಖಿ, ಗುಹಾಗ್ರ, ಗೋಚರ, ಗಗನ, ಮುಸಲೀ, ಲಗುಡ, ಶಿಥಿಲೀ, (ಇವಲ್ಲದೆ ಪರ್ಯಾಯವಾಗಿ ದಶಮುಖಿ, ಪಶುಪತಿ, ಪೀಟಿ ಕೆಲವು ಕಡೆ ಉಲ್ಲೇಖ ದೊರೆಯುತ್ತವೆ)

ವೀರಶೈವರು ಪ್ರಾಚೀನಕಾಲದಿಂದ ಪರಂಪರಾಗತವಾಗಿ ಬಂದ ಈ ಗೋತ್ರ-ಸೂತ್ರಗಳನ್ನು ತಿಳಿದು, ತಮ್ಮ ತಮ್ಮ ಗೋತ್ರ-ಸೂತ್ರ ಮತ್ತು ಪೀಠಗಳ ಬಗ್ಗೆ ತಿಳಿದುಕೊಳ್ಳುವುದು ಅವಶ್ಯಕವಾಗಿರುತ್ತದೆ. ಆದ್ದರಿಂದ ಲೇಖನದ ಕೊನೆಯ ಪುಟದಲ್ಲಿ ವಿವರಣೆಯನ್ನು ಕೊಡಲಾಗಿದೆ.

---

೧. ವೀರಶೈವ ವಿಚಾರ ಸಂಕಿರಣ ಡಾ|| ಎಂ. ಚಿದಾನಂದಮೂರ್ತಿ ವೀರಶೈವ ಗುರುಮಠಗಳು ಮತ್ತು ವಿರಕ್ತ ಮಠಗಳು, ಪುಟ. ೧೨೯.

# ವೀರಶೈವ ಪಂಚಾಚಾರ್ಯರು
# ಗೋತ್ರ, ಸೂತ್ರ ಮತ್ತು ಪ್ರವರಗಳು

| ಪರಶಿವನ | | | | |
|---|---|---|---|---|
| ಪಂಚಮುಖಿಗಳು:ಸದ್ಯೋಜಾತ | ವಾಮದೇವ | ಅಘೋರ | ತತ್ಪುರುಷ | ಈಶಾನ |
| ಆಚಾರ್ಯರ ಹೆಸರುಗಳು : ರೇಣುಕ | ದಾರುಕ | ಘಂಟಾಕರ್ಣ (ಶಂಕುಕರ್ಣ) | ಧೇನು ಕರ್ಣ | ವಿಶ್ವ ಕರ್ಣ |
| ಕಲಿಯುಗದ ಆಚಾರ್ಯರು : ರೇವಣಾರಾಧ್ಯ | ಮರುಳಾರಾಧ್ಯ | ಏಕೋರಾಮರಾಧ್ಯ | ಪಂಡಿತಾ ರಾಧ್ಯ | ವಿಶ್ವರಾಧ್ಯ |
| ಉತ್ಪತ್ತಿ ಸ್ಥಾನ, ಪೀಠಸ್ಥಾಪನೆ : ಕೊಲಿ ಪಾಕಿ ಸೋಮೇಶ್ವರ ಲಿಂಗ ರಂಭಾಪುರಿ (ಬಾಳೆಹೊನ್ನೂರು) | ವಟಕ್ಷೇತ್ರ, ಸಿದ್ದೇಶ್ವರ ಲಿಂಗ ಉಜ್ಜಯಿನಿ | ದ್ರಾಕ್ಷಾರಾಮ ಕ್ಷೇತ್ರ ರಾಮನಾಥಲಿಂಗ ಹಿಮವತ್ಕೇದಾರ | ಶ್ರೀಶೈಲ ಮಲ್ಲಿಕಾರ್ಜುನಲಿಂಗ ಶ್ರೀಶೈಲ | ಕಾಶೀ ಕ್ಷೇತ್ರ ವಿಶ್ವನಾಥ ಲಿಂಗ ಕಾಶಿ |
| ಗೋತ್ರ : ವೀರ | ನಂದಿ | ಭೃಂಗಿ | ವೃಷಭ | ಸ್ಕಂದ (ಷಣ್ಮುಖ) |
| ಪತ್ನಿಯರು : ಭದ್ರಕಾಳಿ | ಕುಂಡಲನಿ | ಆಹ್ಲಾದಿನಿ | ಭದ್ರಾ | ದೇವಯಾನಿ |
| ಸೂತ್ರ : ಪಡವಿಡಿ | ವೃಷ್ಟಿ | ಲಂಬನ | ಮುಕ್ತಾಗುಚ್ಛ | ಪಂಚವರ್ಣ |
| ವೇದಗಳು : ಋಗ್ವೇದ | ಯಜುರ್ವೇದ | ಸಾಮವೇದ | ಅಥರ್ವಣವೇದ | ಶೈವಾಗದಮ |
| ದಂಡಗಳು ಅಶ್ವಥ (ಅರಳಿ) | ಪಾಲಾಶ (ಮುತ್ತುಗ) | ವೇಣು(ಬಿದರು) | ನ್ಯಗ್ರೋಥ(ಆಲ) | ಬಿಲ್ವ |
| ಕಮಂಡಲ/ ಹರಿದ್ವರ್ಣ | ತಾಮ್ರ | ಲೋಹ(ಕಬ್ಬಿಣ) | ಕಾಂಸ್ಯ(ಕಂಚು) | ಸುವರ್ಣ |
| ಕಲಶಗಳು/ ಹರಿದ್ವರ್ಣ | ತಾಮ್ರ | ಲೋಹ(ಕಬ್ಬಿಣ) | ಕಾಂಸ್ಯ(ಕಂಚು) | ಸುವರ್ಣ |
| ಕಂಥಾ/ ವಸ್ತ್ರ ಹಸಿರು | ಕೆಂಪು | ನೀಲಿ | ಬಿಳಿ | ಹಳದಿ |
| ಮಂತ್ರಗಳು ಪ್ರಸಾದ ಪಂಚಾಕ್ಷರಿ | ಮಾಯಾ ಪಂಚಾಕ್ಷರಿ | ಸೂಕ್ಷ್ಮ ಪಂಚಾಕ್ಷರಿ | ಸ್ಥೂಲ ಪಂಚಾಕ್ಷರಿ | ಮೂಲ ಪಂಚಾಕ್ಷರಿ |
| ಬೀಜಾಕ್ಷರಗಳು : 'ನ'ಕಾರ | 'ಮ'ಕಾರ | 'ಶಿ' ಕಾರ | 'ವಾ' ಕಾರ | 'ಯ' ಕಾರ |
| ಜಟಾಮಕುಟ : ಷಟ್‌ತ್ರಿಂಶತ್ | ಏಕಾದಶ | ಏಕ | ಪಂಚ | ಅಪರಿಮಿತ |
| ಉಪಸೂತ್ರಗಳು *ಹನ್ನೆರಡು | ಹನ್ನೆರಡು | ಹನ್ನೆರಡು | ಹನ್ನೆರಡು | ಹನ್ನೆರಡು |

**ಸೂಚನೆ**

¤ ಸುಪ್ರಬೋಧಾಗಮಾಂತರ್ಗತ ಪಂಚಾಚಾರ್ಯೋತ್ಪತ್ತಿ ಗೋತ್ರಾದಿ ಮಾಲಿಕಾ, ಸದಾಚಾರ ಸಂಗ್ರಹ, ಸೋಲ್ಲಾಪುರ ಮುದ್ರಣ ೧೯೦೫.

¤ ಉಪಗೋತ್ರಗಳು ಹನ್ನೆರಡು, ಇವುಗಳನ್ನು ಈ ಹಿಂದಿನ ಪುಟದಲ್ಲಿ ವಿವರಿಸಲಾಗಿದೆ.

¤ ೧ ಗೋತ್ರ ಪುರುಷರ ಪತ್ನಿಯರು : ಕ್ರಿಯಾಸಾರ ಭಾಗ-೨. ಪು-೨೭೮-೭೯

# ಶರಣರು ಮತ್ತು ಆಚಾರ

ಪ್ರೊ. ಆರ್. ರಾಚಪ್ಪ

---

ಜಗತ್ತಿನ ಇತಿಹಾಸದಲ್ಲಿ ಬೆಳಗುತ್ತಿರುವ ದಾರ್ಶನಿಕ ಸಾಹಿತ್ಯ ವಚನ ಸಾಹಿತ್ಯ ಹನ್ನೆರಡನೆಯ ಶತಮಾನದಲ್ಲಿ ಕರ್ನಾಟಕದಲ್ಲಿ ಜನಿಸಿದ ಶಿವಶರಣರು ತಮ್ಮ ಅನುಭವ ಹಾಗೂ ಅನುಭಾವದ ಮೂಸೆಯಿಂದ ದರ್ಶನ ತತ್ತ್ವ ಬಂಗಾರವನ್ನು ಜಗತ್ತಿಗೆ ನೀಡಿದರು. ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರೆಂದು ಸಾರಿ, ಇಲ್ಲಿ ಸಲ್ಲುವಂತೆ ಒಪ್ಪುವಂತೆ ಇಹದ ಬದುಕನ್ನು ಸಾಗಿಸಬೇಕು, ತನ್ಮೂಲಕ ಪರಾತ್ಪರ ವಸ್ತುವಿನಲ್ಲಿ ಐಕ್ಯವನ್ನು ಗಳಿಸಬೇಕೆಂದು ಸಾಧಿಸಿ ತೋರಿದ ಧೀಮಂತರು ಶರಣರು. ಮಾನವ ಮಹಾನುಭಾವನಾಗಬೇಕೆಂದುದಲ್ಲದೆ ಶಿವೈಕ್ಯವನ್ನು ಸಾಧಿಸಬೇಕೆಂದು ಸಾರಿದರು ಶರಣರು. ಶಿವೈಕ್ಯಸಾಧನೆಗೆ ಇಹದಲ್ಲಿನ ಜೀವನ ಶುದ್ಧವಿರಬೇಕು ಆಚಾರ ಪೂರ್ಣವಾಗಿರಬೇಕೆಂದು ಹೇಳಿದರು. 'ಆಚಾರ' ಎಂದರೇನು ? ಆಚಾರವನ್ನು ಕುರಿತು ಶರಣರು ಏನು ಹೇಳಿದ್ದಾರೆಂದು ವಿವೇಚಿಸುವ ಉದ್ದೇಶವನ್ನು ಈ ಲೇಖನದಲ್ಲಿ ತಳೆಯಲಾಗಿದೆ.

'ಆಚಾರ' ಸಂಸ್ಕೃತ ಶಬ್ದ. ಶ್ರೇಷ್ಠವಿದ್ವಾಂಸರಾದ ಮೋನಿಯರ್‌ವಿಲಿಯಮ್ಸ್ ಅವರು ಇದಕ್ಕೆ Conduct, Manner of Action, behaviour, good behaviour, good conduct,

custom, practice ಇತ್ಯಾದಿ ಅರ್ಥಗಳನ್ನು ಹೇಳಿದ್ದಾರೆ. ಫಾದರ್ ಕಿಟೆಲ್ ಅವರು Conduct, Manner of action, good behaviour, custom, usage, practice ಎಂಬೆಲ್ಲ ಅರ್ಥಗಳನ್ನು ಹೇಳಿ "an established rule of conduct" ಎಂದು ಅರ್ಥ ಹೇಳಿದ್ದಾರೆ. ಈ ಎಲ್ಲಾ ಅರ್ಥಗಳನ್ನು ವಿವೇಚಿಸಿದರೆ ವ್ಯಕ್ತಿಯು ಧಾರ್ಮಿಕ ಜೀವನದಲ್ಲಿ ಅನುಸರಿಸಬೇಕಾದ ಮತಸಂಬಂಧವಾದ ನಿಯಮ, ಕಟ್ಟುಪಾಡುಗಳು, ಸಂಪ್ರದಾಯ, ನಡತೆ, ಒಳ್ಳೆಯನಡತೆ ಎಂದು ಅರ್ಥ ಹೊಳೆಯುತ್ತದೆ. ಧಾರ್ಮಿಕ ಅಷ್ಟೇ ಅಲ್ಲದೆ ಒಬ್ಬ ಮನುಷ್ಯ ಮನುಷ್ಯನಾಗಿ ಹೇಗೆ ಬದುಕಬೇಕು ಎಂಬ ಕ್ರಮವನ್ನು 'ಆಚಾರ' ಎಂದು ಶರಣರು ಗುರುತಿಸಿರುವುದು ಸ್ಪಷ್ಟವಾಗುತ್ತದೆ.

'ಆಚಾರ' ವೀರಶೈವ ಧರ್ಮದ ಪಾರಿಭಾಷಿಕ ಪದವೂ ಹೌದು. ಆಚಾರದಿಂದ ಅಂತರಂಗ - ಬಹಿರಂಗ ಶುದ್ಧಿಯನ್ನು ಹೊಂದಿ ಆ ಮೂಲಕ ವ್ಯಕ್ತಿ ತನ್ನಲ್ಲಿರುವಂತಹ ಪರಮಾತ್ಮ ಚೈತನ್ಯವನ್ನು ಕಾಣುವುದು ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. ಈ 'ಆಚಾರ'ಕ್ಕೆ ಅರಿವು ಆಧಾರ. ಪರಮಾತ್ಮನ ಇರುವಿಕೆಯನ್ನು ತಿಳಿದು, ತಾನು ಆ ಪರಮಾತ್ಮನ ಒಂದಂಶ ಎಂದು ಅರಿದು ಆ ಪರಮಾತ್ಮ ಸ್ಥಿತಿಯನ್ನು ಸಾಧಿಸುವ ಮಾರ್ಗ ಆಚಾರ, ಎಂದು ಶರಣರು ಅಭಿಪ್ರಾಯ ಪಡುತ್ತಾರೆ.

ವೀರಶೈವ ಧರ್ಮವು ಲಿಂಗಾಚಾರ, ಸದಾಚಾರ, ಶಿವಾಚಾರ, ಗಣಾಚಾರ ಮತ್ತು ಭೃತ್ಯಾಚಾರ ಎಂದು ಐದು ಆಚಾರಗಳನ್ನು ಹೇಳಿದೆ. ಈ ಪಂಚಾಚಾರಗಳು 'ಅಂಗ'ನಾದ ಜೀವಿಯು, ಸಾಧನೆಯ ಮಾರ್ಗದಲ್ಲಿ ನಡೆದು 'ಲಿಂಗ' ನಾಗುವುದಕ್ಕೆ ಅವಶ್ಯಕ ಎಂಬಂಶವನ್ನು ನಾವು ಮರೆಯುವಂತಿಲ್ಲ. ವೀರಶೈವ ಧರ್ಮಕ್ಕೆ ಉತ್ತಮ ಚಾಲನೆಯನ್ನು ಕೊಟ್ಟ ಬಸವಣ್ಣನವರು ಈ ಪಂಚಾಚಾರಗಳ ಬಗೆಗೆ ಹೆಚ್ಚು ಗಮನ ಹರಿಸಿದ್ದಾರೆ.

ಧರ್ಮವಿವೇಚನೆ ಪೂರ್ಣಗೊಳ್ಳಲು, ತಾತ್ತ್ವಿಕ ವಿವೇಚನೆ, ಧಾರ್ಮಿಕ ಆಚರಣೆ, ನೈತಿಕ ನಿಯಮಗಳು ಅವಶ್ಯ. ವೀರಶೈವ ಧರ್ಮದ ತಾತ್ತ್ವಿಕ ಚಿಂತನೆ ಮತ್ತು ಧಾರ್ಮಿಕ ಮಾರ್ಗಗಳಿಗೆ ಪೂರಕವಾಗಿ ನೈತಿಕ ನಿಯಮಗಳು ಬೆಳೆದು ನಿಂತಿವೆ. ಈ ನೈತಿಕ ನಿಯಮಗಳನ್ನು ಪಂಚಾಚಾರ ಎಂದು ಕರೆಯಲಾಗಿದೆ. ಪಂಚಾಚಾರಗಳ ಬಗೆಗೆ ಶರಣರು ವ್ಯಾಪಕವಾಗಿ ವಿಚಾರ ಮಾಡಿದ್ದಾರೆ. ಚೆನ್ನಬಸವಣ್ಣನವರು "ಅಷ್ಟಾವರಣವೆ ಅಂಗವಾಗಿ ಪಂಚಾಚಾರವೆ ಪ್ರಾಣವಾಗಿ ನಡೆದು ಕಡೆಗೆ ಚಿರಸುಖಿಯಾಗುತಿರ್ಪನು ನೋಡಾ" ಎಂದಿದ್ದಾರೆ. ಧಾರ್ಮಿಕ ಆಚರಣೆಯಲ್ಲಿ ನೀತಿಗೆ ಮಹತ್ವದ ಸ್ಥಾನವಿದೆ. ನೈತಿಕವಾದ ನಿಷ್ಠೆಯಿಲ್ಲದ ಧಾರ್ಮಿಕ ಆಚರಣೆ ಯಾವ ವ್ಯಕ್ತಿಗಾಗಲೀ, ಸಮಾಜಕ್ಕಾಗಲೀ ಹಿತವನ್ನುಂಟುಮಾಡದು. ಹಾಗಾಗಿ "ಪಂಚಾಚಾರವೇ ಪ್ರಾಣ" ಎಂಬುದು ನೈತಿಕ ನಿಲವಿಗೆ ವ್ಯಾಪಕತೆಯನ್ನು ತಂದಿತ್ತಿದೆ. ಅಷ್ಟಾವರಣಗಳಿಗೆ ಚೇತನವನ್ನು ಕೊಡುವ ಶಕ್ತಿ ಪಂಚಾಚಾರಗಳಿಗಿದೆ. ಪಂಚಾಚಾರ ಎಂದರೆ ನೈತಿಕ ಜೀವನ

ನೀತಿಯ ನೆಲಗಟ್ಟಿಲ್ಲದ ಅಪ್ಪಾವರಣಗಳು ಜಡಸಂಪ್ರದಾಯ ಇಲ್ಲವೆ ಆಡಂಬರದ ಆಚರಣೆಗಳಾಗಿ ಬಿಡುತ್ತವೆ. ಈ ದೃಷ್ಟಿಯಲ್ಲಿ ವೀರಶೈವ ಧರ್ಮ ನೈತಿಕ ಜೀವನಕ್ಕೆ ಹೆಚ್ಚಿನ ಬೆಲೆಕೊಟ್ಟಿರುವುದು ಸ್ಪಷ್ಟ.

ಜೀವನದಲ್ಲಿ ಕೆಲವು ಶಾಶ್ವತ ಮೌಲ್ಯಗಳಿವೆ. ಈ ಮೌಲ್ಯಗಳನ್ನು ಅವಲಂಬಿಸಿ ಜೀವನದ ಅಚಲವಾದ ಗುರಿಯನ್ನು ಕಂಡುಕೊಳ್ಳುವ ಪ್ರಯತ್ನ ಧರ್ಮದ ಉಗಮಕ್ಕೆ ಕಾರಣ. ಈ ದೃಷ್ಟಿಯಲ್ಲಿ ಧರ್ಮ-ನೀತಿ ಇವುಗಳ ಸಂಬಂಧ ಅನಿವಾರ್ಯ ಒಳಿತು - ಕೆಡಕುಗಳ ತಾರತಮ್ಯವನ್ನು ಹೇಳುವ ನೈತಿಕ ದೃಷ್ಟಿ ಧರ್ಮದ ಅವಿಭಾಜ್ಯ ಅಂಗ. "Religion must not be reduced to mere obidience of Law. It is vasty more than mere morality" ಎಂದು ಜಾರ್ಜ್ ಆಲ್ಪರ್ಟ್ ಕೋ ಎಂಬ ವಿದ್ವಾಂಸ ಅಭಿಪ್ರಾಯ ಪಡುತ್ತಾನೆ. ನೀತಿ - ನಿಯಮಗಳಿಂದ ಧಾರ್ಮಿಕ ಆಚರಣೆ ಬೆಳೆಯಬೇಕು. ನೀತಿ ಬೀಜವಾದರೆ, ಧರ್ಮ ಆ ಬೀಜದಿಂದ ತೆಗೆದ ಫಲ. ಹೀಗಾಗಿ ಧರ್ಮ ಮತ್ತು ನೀತಿಗಳು ಅವಿನಾಭಾವ ಸಂಬಂಧ ಹೊಂದಿವೆ. ಈ ನಿಲವನ್ನೇ ಶರಣರು 'ಆಚಾರ' ಎಂದಿದ್ದಾರೆ. ಆಚಾರ ಕೇವಲ ನೈತಿಕ ನಿಯಮಗಳ ಪಾಲನೆಯಲ್ಲ. ನೈತಿಕ ನಿಷ್ಠೆ, ಧಾರ್ಮಿಕ ಸಾಧನೆಗಳೆರಡನ್ನೂ ಒಳಗೊಂಡ ಪೂರ್ಣ ದೃಷ್ಟಿ; 'ಆಚಾರ' ಪದದಲ್ಲಿದೆ. "The highest good is not reached until one gets beyond relative morality to the level of life marked by 'anandamaya kosa' where all moral strife ceases once for all" ಎಂದು ಹೇಳುವಲ್ಲಿ ಪ್ರೊ॥ ಹಿರಿಯಣ್ಣನವರು ಸಾಪೇಕ್ಷವಾದ ನೈತಿಕ ನಿಯಮಗಳನ್ನು ದಾಟಿ ಮೇಲೇರದಿದ್ದಲ್ಲಿ ಶಾಶ್ವತ ಮೌಲ್ಯಸಾಧನೆ ಅಸಾಧ್ಯ ಎಂಬ ಅರ್ಥಕ್ಕೇ ಹೆಚ್ಚು ಪ್ರಾಧಾನ್ಯತೆ ನೀಡಿರುವಂತಿದೆ

'ಆಚಾರ' ಎಂದರೆ ಯಾಂತ್ರಿಕ ನಿಯಮಪಾಲನೆಯಲ್ಲ. ಅಂಗಕ್ರಿಯೆಗಳನ್ನು ಲಿಂಗ ಕ್ರಿಯೆಯಾಗಿಸುವ ಕ್ರಿಯಾಲಾಪ ಸ್ವತಂತ್ರ ಸಿದ್ಧಲಿಂಗೇಶ್ವರನು -

*ಆಚಾರವೆ ಭಕ್ತಂಗೆ ಅಲಂಕಾರವು*
*ಆಚಾರವೆ ಭಕ್ತಂಗೆ ಸರ್ವಪೂಜ್ಯವು,*
*ಇಂತೀ ಆಚಾರವುಳ್ಳವನೆ ಭಕ್ತನು*
*ಆಚಾರವುಳ್ಳವನೆ ಯುಕ್ತನು, ಆಚಾರವುಳ್ಳವನೆ ಮುಕ್ತನು,*
*ನಿಜಗುರುಸ್ವತಂತ್ರ ಸಿದ್ಧಲಿಂಗೇಶ್ವರ*

ಎಂದು ಭಕ್ತನಿಗೆ ಆಚಾರ ಎಷ್ಟು ಪ್ರಮುಖವಾದುದು ಎಂಬುದನ್ನು ವಿವರಿಸಿದ್ದಾನೆ. ಜೇಡರ ದಾಸಿಮಯ್ಯ -

*ಆಚಾರ ಸಹಿತವಿದ್ದಡೆ ಗುರುವೆಂಬೆ*
*ಆಚಾರ ಸಹಿತವಿದ್ದಡೆ ಲಿಂಗವೆಂಬೆ*

ಆಚಾರ ಸಹಿತವಿದ್ದಡೆ ಜಂಗಮವೆಂಬೆ
ಸದಾಚಾರಸಹಿತವಿರದೆ ಅನ್ಯದೈವ
ಭವಿ ಮಾಟವ ಮಾಡುವ ಮನೆಯಲ್ಲಿ
ಲಿಂಗಾರ್ಚನೆಯ ಮಾಡಿದೆನಾದಡೆ
ನಿಮಗಂದೇ ದೂರವಯ್ಯ ರಾಮನಾಥ

ಎಂದು ಗುರು ಲಿಂಗ - ಜಂಗಮಕ್ಕೂ ಆಚಾರದ ಅವಶ್ಯಕತೆಯನ್ನು ಒತ್ತಿ ಹೇಳಿದ್ದಾನೆ. ಸದಾಚಾರವಿಲ್ಲದೆ ಬರಿಯ ಮನೆಯಲ್ಲಿ ಲಿಂಗಾರ್ಚನೆ ಮಾಡಿದರೆ ಅವನು ಶಿವನಿಗೆ ದೂರ ಎಂದು ಹೇಳಿದ್ದಾನೆ. ಶರಣರಾದ ಸ್ವತಂತ್ರ ಸಿದ್ಧಲಿಂಗೇಶ್ವರರು -

ಆಚಾರವಿಲ್ಲದವರಿಗೆ ಜ್ಞಾನವಿಲ್ಲ,
ಜ್ಞಾನವಿಲ್ಲದವರಿಗೆ ಭಾವಶುದ್ಧವಿಲ್ಲ,
ಭಾವಶುದ್ಧವಿಲ್ಲದವರಿಗೆ ಧ್ಯಾನವಿಲ್ಲ,
ಧ್ಯಾನವಿಲ್ಲದವರಿಗೆ ಪ್ರಸಾದವಿಲ್ಲ,
ಪ್ರಸಾದವಿಲ್ಲದವರಿಗೆ ಮುಕ್ತಿಯಿಲ್ಲ,
ಇದು ಕಾರಣ
ಆಚಾರ ಜ್ಞಾನ ಭಾವ ಧ್ಯಾನ ಉಳ್ಳವರಿಗೆ ಪ್ರಸಾದವುಂಟು
ಪ್ರಸಾದವುಳ್ಳವರಿಗೆ ಮುಕ್ತಿಯುಂಟು
ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರ

ಎಂದು - ಜ್ಞಾನ - ಭಾವ - ಧ್ಯಾನ - ಪ್ರಸಾದ - ಮುಕ್ತಿಗಳು ಹೇಗೆ ಆಚಾರ ಮೂಲವಾದವೆಂದು ಸಾರಿದರು.

ಬೌದ್ಧಿಕ ಸಿದ್ಧಾಂತ ಪ್ರಧಾನವಾದ ಧರ್ಮ - ಧರ್ಮವಲ್ಲ. ಸಿದ್ಧಾಂತಗಳು ಆಚರಣೆಯಲ್ಲಿ ಪರ್ಯವಸಾನವಾದಾಗ ಮಾತ್ರ ಸಾರ್ಥಕ. ಈ ಅರ್ಥದಲ್ಲಿ ಷಟ್‌ಸ್ಥಲ, ಅಷ್ಟಾವರಣಗಳನ್ನು ಶರಣರು ಆಚಾರಗಳೆಂದೇ ಕರೆದಿದ್ದಾರೆ. "ಸರ್ವಾಚಾರ ಸಂಪತ್ತು" ಎಂಬ ಮಾತಿನಲ್ಲಿ ಪಂಚಾಚಾರಗಳೊಂದಿಗೆ ಸಿದ್ಧಾಂತಗಳು, ಅಷ್ಟಾವರಣಗಳು, ಪಂಚಾಚಾರಗಳು ಸಮಾವೇಶಗೊಳ್ಳುತ್ತವೆ. ನೈತಿಕ ನಿಯಮಗಳ ಪಾಲನೆಯಿಂದ ಧಾರ್ಮಿಕ ಸಾಧನೆಯನ್ನು ಬೆಳೆಸಿಕೊಂಡು ದೇಹದ ದುರ್ಗುಣಗಳನ್ನು ಅಳಿದು ಸತ್ ಶಕ್ತಿಗಳನ್ನು ಜಾಗೃತಗೊಳಿಸುವುದು ಆಚಾರದ ಮುಖ್ಯ ಉದ್ದೇಶ. ಆಚಾರದ ಮೂಲಕ ದುರ್ಗುಣಗಳನ್ನು ದೌರ್ಬಲ್ಯ, ದೋಷಗಳನ್ನು ಗೆದ್ದು ಶಿವಪರವಾದ ಗುಣವನ್ನು ಸಾಧಕನಾದವನು ಸಂಪಾದಿಸಿಕೊಳ್ಳಬೇಕು.

ಆಚಾರವೇ ಲಿಂಗರೂಪು ಎಂಬುದು ಅಲ್ಲಮ ಪ್ರಭುವಿನ ಅಭಿಪ್ರಾಯ. 'ಆಚಾರವಿಲ್ಲದ ಶರಣರಿಗೆ ಲಿಂಗವಿಲ್ಲ' ಅಂತರಂಗದ ಅರಿವಿಗೆ ಆಚಾರವೇ ಕಾಯ' ಎಂದು ಶುದ್ಧ ಆಚಾರವಿದ್ದಲ್ಲಿ ಶಿವ ಒಲಿವನು ಎಂಬುದನ್ನು 'ಆಚಾರ'ಕ್ಕೆ ಆಳಾಗಿ ಗುಹೇಶ್ವರನು ನಿನ್ನ ಕೈವಶಕ್ಕೆ ಒಳಗಾದನು ಎಂದು ಹೇಳುವನು. ಈ ಆಚಾರ ವ್ಯಕ್ತಿಯ ಸರ್ವತೋಮುಖ ಬೆಳವಣಿಗೆಗೆ ಆವಶ್ಯಕ ಆದಕ್ಕೆಂದೇ ಪ್ರಭುವು ''ಆಚಾರವೇ ಸ್ವಾಯತ ಆಚಾರವೇ ಪ್ರಾಣ, ಗುಹೇಶ್ವರ ಲಿಂಗದಲ್ಲಿ ನಿನ್ನ ಆಚಾರ ಭಿಕ್ಷವನಿಕ್ಕಾ ಚೆನ್ನಬಸವಣ್ಣ'' ಎಂದು ಹೇಳುವನು. ''ಆಚಾರವೇ ಲಿಂಗ, ಆಚಾರದರಿವೆ ಜಂಗಮ' ಎಂದು ಲಿಂಗ - ಜಂಗಮವೂ 'ಆಚಾರವೇ ಎಂದು ವಿಶಿಷ್ಟ ಪರಿಕಲ್ಪನೆಯನ್ನು ಹೊಂದಿದ್ದಾನೆ.ಅಲ್ಲಮ 'ಆಚಾರವಂಗಲೇಪ', 'ಅವಯವಂಗಳೆಲ್ಲವೂ ಆಚಾರ' 'ಅಂತರಂಗದ ಅಜಿ ವಿಂಗೆ ಆಚಾರವೆ ಕಾಯ' ಎಂದು ಮುಂತಾಗಿ ಹೇಳಿ ಆಚಾರದ ಮಹತ್ವವನ್ನು ಅಲ್ಲಮ ಸ್ಪಷ್ಟಗೊಳಿಸಿದ್ದಾನೆ.

ಬಸವಣ್ಣನವರು ವ್ಯಕ್ತಿಯ ಜೀವನದಲ್ಲಿ ಪ್ರಮುಖವಾದ ಆಚಾರವನ್ನು ಅತ್ಯಂತ ಗೌರವದಿಂದ ಕಂಡಿರುವುದಲ್ಲದೆ ಆಚಾರಕ್ಕೆ ಹೆಚ್ಚು ಪ್ರಾಮುಖ್ಯ ನೀಡಿದ್ದಾರೆ. ಆದರ್ಶ ಮತ್ತು ಋಜುಜೀವನಕ್ಕೆ ಆಚಾರ ಮೊದಲು ಎಂಬುದು ಅಣ್ಣನವರ ದೃಷ್ಟಿ. 'ಆಚಾರವೇ ಸ್ವರ್ಗ, ಅನಾಚಾರವೇ ನರಕ' ಎಂದು ಆಚಾರ ಶಿವಸಾಕ್ಷಾತ್ಕಾರ ಎಂಬರ್ಥ ಬರುವಂತೆ ಹೇಳಿದ್ದಾರೆ. ಮುಂದುವರೆದು-

*ಅಯ್ಯಾ ನಿಮ್ಮ ಶರಣನ ಮರ್ತ್ಯಕ್ಕೆ ತಂದೆಯಾಗಿ*
*ನೆನೆದು ಸುಖಿಯಾಗಿ ಆನು ಬದುಕಿದೆನಯ್ಯಾ*
*ಅದೇನು ಕಾರಣ ತಂದೆಯೆಂದರಿದೆನಯ್ಯಾ*
*ಎನ್ನ ಕಾರಣ ತಂದೆಯೆಂದರಿದೆನಯ್ಯಾ*
*ಅರಿದದು ನಿಮ್ಮ ಶರಣನು ಆಚರಿಸುವ ಆಚರಣೆಯ ಕಂಡು*
*ಕಣ್ದೆರೆದನಯ್ಯಾ ಕೂಡಲ ಸಂಗಮದೇವಾ*
*ಅರಿದರಿದು ನಿಮ್ಮ ಶರಣನು ಆಚರಿಸುವ ಆಚರಣೆ ಯಕಂಡು*
*ಕಣ್ದೆರೆದನಮ್ಮಾ ಕೂಡಲ ಸಂಗಮದೇವಾ*

ಎಂದು ಹೇಳುತ್ತಾ ಶರಣನ ನಡತೆ ತಮಗೆ ಆದರ್ಶ, ಶರಣನಾಗಲು ಶುದ್ಧಚಾರಿತ್ರದ ಅವಶ್ಯಕತೆಯನ್ನು ಒತ್ತಿ ಹೇಳಿದ್ದಾರೆ. ಅಲ್ಲದೆ ಶುದ್ಧ ಚಾರಿತ್ರ ಅನುಕರಣೀಯ ಅದನ್ನು ಅರಿತು ತಾನು ಕಣ್ದೆರೆಮುದಾಗಿ ಹೇಳಿದ್ದಾರೆ.

*ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲಕಾಣಿರೋ*
*ಸತ್ಯವ ನುಡಿವುದೇ ದೇವಲೋಕ ಮಿಥ್ಯವ ನುಡಿವುದೇ ಮರ್ತ್ಯಲೋಕ*

ಆಚಾರವೇ ಸ್ವರ್ಗ, ಅನಾಚಾರವೇ ನರಕ
ಕೂಡಲಸಂಗಮದೇವಾ ನೀವೇ ಪ್ರಮಾಣು

ಈ ವಚನವಲ್ಲಿ ನಮ್ಮ ಕಲ್ಪನೆಯ ಸ್ವರ್ಗ - ನರಕಗಳ ಸ್ಪಷ್ಟ ಚಿತ್ರ ನೀಡಿದ್ದಾರೆ. ಸತ್ಯ ಶುದ್ಧವಾದ ಆಚರಣೆಯ ಫಲ ಸ್ವರ್ಗ ಎಂಬ ಅಭಿಪ್ರಾಯವನ್ನು ನೀಡಿದ್ದಾರೆ.

ತೊತ್ತಿಂಗೇಕೆ ಲಕ್ಷಣ? ಬಂಟಗೇಕೆ ಆಚಾರ?
ಆಗುವವೇಕೆ ಡಿಂಗರಿಗಂಗೆ, ಒಕ್ಕುದನುಂಬುವಂಗಯ್ಯಾ
ಕೂಡಲಸಂಗಮದೇವಾ
ನಿಮ್ಮ ನಂಬುವುದಾಚಾರವಯ್ಯಾ

ದೈವದ ಅಸ್ತಿತ್ವವನ್ನು ಒಪ್ಪಿ, ನಂಬುವುದೇ ಆಚಾರ ಎಂಬ ನಿಲವನ್ನು ತಳೆದ ಬಸವಣ್ಣನವರು ತಾವು ಬಂಟ, ಡಿಂಗರಿಗ, ತೊತ್ತು ಮೊದಲಾಗಿ ಹೇಳಿಕೊಂಡು ಪರಮಾತ್ಮನ ಇರವನ್ನು ಅರಿಯುವುದೇ ಆಚಾರ ಎಂದು ಹೇಳಿದ್ದಾರೆ.

ಆಪ್ಯಾಯನಕ್ಕೆ ನೀಡುವೆ, ಲಾಂಛನಕ್ಕೆ ಶರಣೆಂಬೆ
ಲಾಂಛನಕ್ಕೆ ಪಕ್ಕ ಆಚರಣೆ ಇಲ್ಲದಿರ್ದಡೆ
ಕೂಡಲಸಂಗಮದೇವಾ
ನೀ ಸಾಕ್ಷಿಯಾಗಿ 'ಛೀ' ಎಂಬೆನು

ಎನ್ನುವಲ್ಲಿ ಆಚಾರಕ್ಕೆ ಹೆಚ್ಚು ಒತ್ತುಕೊಟ್ಟಿರುವುದು ಸ್ಪಷ್ಟ. ಭಕ್ತ ಲಾಂಛನವನ್ನು ಹೊತ್ತು ಅದಕ್ಕೆ ತಕ್ಕ ಆಚರಣೆ ಇಲ್ಲದಿದ್ದರೆ ಅವನು ಭಕ್ತನಲ್ಲ ಅವನಿಗೆ ತಾವು ಮಾನ್ಯ ಮಾಡುವುದಿಲ್ಲ ಎಂದು ಅಭಿಪ್ರಾಯಪಡುತ್ತಾರೆ. ಮುಂದುವರೆದು -

ಅಂದಂದಿನ ಹೊಂದಿಗೆಯ ಬಿಂದುಮಂತ್ರದಲಾದ
ಅಂದವ ಕೆಡಿಸಲಱಿಯದ ಅಂಧಕರ ನೋಡಾ
ಸಮರಸವಿಲ್ಲದೆ ನೆರಹಿಮಾಡಿ ಭಕ್ತರಾದರೆಂಬವರನೇನೆಂಬೆ
ಆಚಾರ ವಂಚಕರ ಎನಗೆ ತೋಱದಿರು
ಕೂಡಲಸಂಗಮದೇವಾ ನಿಮ್ಮ ಧರ್ಮ

ಎಂದು ಹೇಳುವಲ್ಲಿ ಆಚರಣೆ ತಪ್ಪಬಾರದು. ಅದು ಆಚಾರ ವಂಚನೆಯಾಗುವುದು ಅಂತಹ ಆಚಾರ ವಂಚಕರ ಮುಖವನ್ನು ತನಗೆ ತೋರಬಾರದೆಂದು ದೈವದಲ್ಲಿ ಮೊರೆ ಇಡುತ್ತಾರೆ.

ಆಚಾರ ಎಂದರೇನು ಎಂಬುದಕ್ಕೆ ಬಸವಣ್ಣನವರು ನೀಡಿರುವ ವಿವರಣೆ ಶ್ರೇಷ್ಠವಾದುದು.

*ಕಳಬೇಡ ಕೊಲಬೇಡ ಹುಸಿಯ ನುಡಿಯಲುಬೇಡ*
*ಮುನಿಯಬೇಡ ಅನ್ಯರಿಗೆ ಅಸಹ್ಯಪಡಬೇಡ*
*ತನ್ನ ಬಣ್ಣಿಸಬೇಡ ಇದಿರ ಹಳಿಯಲು ಬೇಡ*
*ಇದೇ ಅಂತರಂಗ ಶುದ್ಧಿ ಇದೇ ಬಹಿರಂಗ ಶುದ್ಧಿ*
*ಇದೇ ನಮ್ಮ ಕೂಡಲಸಂಗಮದೇವರನೊಲಿಸುವ ಪರಿ*

ಪರಮಾತ್ಮನ ಅಂಶವಾದ ಜೀವನು ಗುರುದೀಕ್ಷೆಯಿಂದ 'ಅಂಗ'ನೆನಿಸಿ ಷಟ್‌ಸ್ಥಲಂಚಾರಣೆಯಲ್ಲಿ ಆಚರಿಸಿ 'ಲಿಂಗ'ನಾಗುವ ಪರಿಯನ್ನು ಈ ವಚನದಲ್ಲಿ ಹೇಳಲಾಗಿದೆ. ಪರಮಾತ್ಮನು ಒಲಿದರೆ ಮಾತ್ರ ನಾವು 'ಐಕ್ಯ'ವನ್ನು ಸಾಧಿಸಲು ಸಾಧ್ಯ, ಇಲ್ಲವಾದರೆ ಇಲ್ಲ. ಆದ್ದರಿಂದ ಆತನ ಒಲವನ್ನು ಪಡೆಯುವುದು 'ಅಂಗ'ನ ಆದ್ಯ ಕರ್ತವ್ಯ. ಅದಕ್ಕಾಗಿ ಕಳ್ಳತನ ಮಾಡದ, ಜೀವಹತ್ಯೆಮಾಡದ, ಹುಸಿಯದ, ಮುನಿಯದ, ಅಸಹ್ಯಪಡದ, ಇದಿರ ಹಳಿಯದ; ತನ್ನ ಬಣ್ಣಿಸದ - ಸಪ್ತ ಆಚಾರಗಳನ್ನು ಹೇಳಿ, ಇವು ಅಂತರಂಗ - ಬಹಿರಂಗಗಳೆರಡನ್ನೂ ಶುದ್ಧಗೊಳಿಸುವುವು. ಆಗ 'ದೈವ' ಒಲಿಯುವುದು ಎಂದು ಸೂಚಿಸಿದ್ದಾರೆ. ಇಷ್ಟಾದರೆ ಸಾಕೆ ಎಂದರೆ ಬಸವಣ್ಣನವರು ಮುಂದುವರೆದು -

*ಛಲಬೇಕು ಶರಣಂಗೆ ಪರಧನವನೊಲ್ಲೆನೆಂಬ*
*ಛಲಬೇಕು ಶರಣಂಗೆ ಪರಸತಿಯನೊಲ್ಲೆನೆಂಬ*
*ಛಲಬೇಕು ಶರಣಂಗೆ ಪರದೈವವನೊಲ್ಲೆನೆಂಬ*
*ಛಲಬೇಕು ಶರಣಂಗೆ ಲಿಂಗ ಜಂಗಮ ಒಂದೆಂಬ*
*ಛಲಬೇಕು ಶರಣಂಗೆ ಪ್ರಸಾದ ದಿಟವೆಂಬ*
*ಛಲವಿಲ್ಲದವರ ಮೆಚ್ಚ ನಮ್ಮ ಕೂಡಲಸಂಗಮದೇವ*

ಎಂದು ಹೇಳುವಲ್ಲಿ 'ಆಚಾರ'ಕ್ಕೆ ಹೊಸ ಆಯಾಮವನ್ನೇ ತಂದಿತ್ತಿದ್ದಾರೆ. ಪರಧನಕ್ಕೆ ಆಸೆ ಮಾಡದೆ, ಪರಸತಿಗೆ ಅಳುಪದೆ, ಪರದೈವವನ್ನು ಆಶ್ರಯಿಸದೆ, ಸಾಧನೆಯ ಮಾರ್ಗದಲ್ಲಿ ಸಾಗಬೇಕು. ಹಾಗೆ ಸಾಗುವಾಗ ಲಿಂಗ - ಜಂಗಮದಲ್ಲಿ ಭೇದವನೆಣಿಸಬಾರದು. ಪ್ರಸಾದ ನಮ್ಮನ್ನು ಉದ್ಧರಿಸುವ ಶಿವಕೃಪೆ ಎಂದರಿತು ಆಚಾರ ನಿಯುಕ್ತರಾಗಬೇಕೆಂದು ಹೇಳಿದ್ದಾರೆ.

ಆಚಾರ ಕೇವಲ ಹೇಳಿಕೆಯಲ್ಲ, ನಡೆ-ನುಡಿಗಳು ಶುದ್ಧವಿರಬೇಕು. ಆಗ ಮಾತ್ರ ಅದು 'ಆಚಾರ' ಎಂದು ಹೇಳುವಲ್ಲಿ -

*ಎನ್ನನಡೆಯೊಂದು ಪರಿ ಎನ್ನ ನುಡಿಯೊಂದು ಪರಿ*
*ಎನ್ನೊಳಗೇನೂ ಶುದ್ಧವಿಲ್ಲ ನೋಡಯ್ಯಾ*

*ನುಡಿಗೆ ತಕ್ಕ ನಡೆಯ ಕಂಡಡೆ*
*ಕೂಡಲಸಂಗಮದೇವನೊಳಗಿಪ್ಪನಯ್ಯಾ*
*ನುಡಿಯಲ್ಲಿ ಎಚ್ಚೆತ್ತು ನಡೆಯಲ್ಲಿ ತಪ್ಪಿದಡೆ*
*ಹಿಡಿದಿರ್ದ ಲಿಂಗವು ಘಟಸರ್ಪವಯ್ಯಾ.*
*ನೂಱನೋಡಿ ನೂಱ ಕೇಳಿದಡೇನು*
*ಆಸೆ ಹಱ ರಿಯದು ರೋಷ ಬಿಡದು*
*ಮಜ್ಜನಕ್ಕೆಱ ದು ಫಲವೇನು?*
*ಮಾತಿನಂತೆ ಮನವಿಲ್ಲದ ಜಾತಿ ಡೊಂಬರ ನೋಡಿ*
*ನಗುವ ನಮ್ಮ ಕೂಡಲ ಸಂಗಮದೇವ*
*ಆಗಮವ ನಿದಿರಿಂಗೆ ತೋಱುವುದು ಆಚಾರವೇ ಅಯ್ಯಾ*
*ಅವರ ನಡೆಯೊಂದು ನುಡಿಯೊಂದಾದಡೆ*
*ಶಿವಾಚಾರಕ್ಕವರು ಸಲ್ಲರಯ್ಯಾ*

ಎಂದು ನಾನಾ ರೀತಿ ಹೇಳುತ್ತಾ ನಡೆ-ನುಡಿಗಳ ಸಮರಸವೇ ಆಚಾರ ಎಂದಿದ್ದಾರೆ.

ಎಲ್ಲವನ್ನು ಲಿಂಗಾರ್ಪಿತವ ಮಾಡುವುದು. ಲಿಂಗಒಕ್ಕುಮಿಕ್ಕುದ (ಪ್ರಸಾದ) ಕೊಂಬುದು ಆಚಾರ. ಹಾಗೆ ಪ್ರಸಾದ ಕೊಳ್ಳುವಲ್ಲಿ ತುತ್ತಿಗೊಮ್ಮೆ ಶಿವಶರಣೆನ್ನುತ್ತಿರಬೇಕು. ಅದು ಆಚಾರ, ಎಂದು ಒತ್ತಿ ಹೇಳಿದ್ದಾರೆ. ಹೀಗೆ ಆಚರಣೆಯನ್ನು ರೂಢಿಸಿ ಶಿವನಲ್ಲಿ ಸಾಮರಸ್ಯ ಸಾಧಿಸಿದ ಮಾದಾರ ಚೆನ್ನಯ್ಯ, ದಾಸಿಮಯ್ಯ, ಸಿರಿಯಾಳಸೆಟ್ಟಿ, ಮೊದಲಾದ ಶುದ್ಧಚಾರಿತ್ರವುಳ್ಳ ಮಹಾನುಭಾವವನ್ನು ಕೊಂಡಾಡಿ ಆಚಾರ ನಮ್ಮ ಏಳಿಗೆಯ ಮೂಲ; ನಮ್ಮ ಐಕ್ಯಕ್ಕೆ ಸಾಧಕ ಎಂದು ಹೇಳಿದ್ದಾರೆ.

ಇನ್ನೊಬ್ಬರ ತಪ್ಪುಗಳನ್ನು ಬೆಟ್ಟುಮಾಡಿ ತೋರಿಸಿ ಮಾತನಾಡುವುದು ಮನುಷ್ಯ ಸ್ವಭಾವ. ಆದ್ದರಿಂದ ಬಸವಣ್ಣನವರು -

*ಲೋಕದ ಡೊಂಕ ನೀವೇಕೆ ತಿದ್ದುವಿರಿ*
*ನಿಮ್ಮ ನಿಮ್ಮ ಮನವ ಸಂತೈಸಿ ಕೊಳ್ಳಿ*
*ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ*

ಎಂದು ಹೇಳುವಲ್ಲಿ ಇನ್ನೊಬ್ಬರ ತಪ್ಪುಗಳನ್ನು ಬೆದಕಿ ನೋಡದೆ ನಮ್ಮ ನಮ್ಮಲ್ಲಿರುವ ತಪ್ಪುಗಳನ್ನು ತಿದ್ದಿಕೊಂಡು ಬದುಕುವುದು ಶುದ್ಧ ಆಚಾರ ಎಂದು ಸಾರಿದ್ದಾರೆ.

ಭಕ್ತನ ಆಚಾರ ಹೇಗಿರಬೇಕು ಎಂಬಲ್ಲಿ -

*ಕಂಡ ಭಕ್ತರಿಗೆ ಕೈಮುಗಿವಾತನೆ ಭಕ್ತ*
*ಮೃದುವಚನವೆ ಸಕಲ ಜಪಂಗಳಯ್ಯ*
*ಮೃದುವಚನವೆ ಸಕಲ ತಪಂಗಳಯ್ಯ*
*ಸದುವಿನಯವೆ ಸದಾಶಿವನೊಲುಮೆಯಯ್ಯಾ*
*ಕೂಡಲಸಂಗಯ್ಯನಂತಲ್ಲದೊಲ್ಲನಯ್ಯಾ* - ಎಂದು ಸೂಚಿಸಿದ್ದಾರೆ.

*ಹೃದಯ ಕತ್ತರಿ ತುದಿನಾಲಗೆ ಬೆಲ್ಲಂಬೋ*
*ಆಡಿಹೆನು ಎಂಬೋ, ಹಾಡಿಹೆನು ಎಂಬೋ*
*ನಿಚ್ಚನಿಚ್ಚ ಶಿವರಾತ್ರಿಯ ಮಾಡಿಹೆನುಎಂಬೋ*
*ಆನು ಎನ್ನಂತೆ, ಮನಮ್ಮನದಂತೆ*
*ಕೂಡಲಸಂಗಮದೇವ ತಾನು ತನ್ನಂತೆ'*

ಎಂಬಲ್ಲಿ ''ಶುದ್ಧಚಾರಿತ್ರ'' ಸೋಗಲಾಡಿ ಜೀವನ ನಡೆಸದೆ, ನೇರನಡೆಯನ್ನು ಹೊಂದಿರುವುದು. ಮಾತಿನಲ್ಲಿ ಬೆಲ್ಲ ತುಂಬಿ, ಮನದಲ್ಲಿ ದ್ರೋಹ ಚಿಂತನೆ ಮಾಡುವ ಬೂಟಾಟಿಕೆ ಶುದ್ಧ ಚಾರಿತ್ರವಲ್ಲ. ನೇರ ಆಚಾರ ಅಲ್ಲ ಎಂದು ತಿಳಿಸಿದ್ದಾರೆ.

ನಮ್ಮ ಬದುಕು ಆದರ್ಶವಾಗುವುದು, ಶುದ್ಧಚಾರಿತ್ರ ಹೊಂದುವುದು ಹೇಗೆ ಎಂಬುದಕ್ಕೆ ಅಣ್ಣನವರು -

*ಹೊನ್ನಿನೊಳಗೊಂದೊಡ ರಿಯ, ಸೀರೆಯೊಳಗೊಂದೆಳೆಯ*
*ಅನ್ನದೊಳಗೊಂದಗುಳ,*
*ಇಂದಿಂಗೆ ನಾಳಿಂಗೆ ಬೇಕೆಂದೆನಾದಡೆ*
*ನಿಮ್ಮಾಣೆ ನಿಮ್ಮ ಪುರಾತನರಾಣೆ*
*ನಿಮ್ಮ ಶರಣರಿಗಲ್ಲದೆ ಮತ್ತೊಂದನಱ ರಿಯೆ*
*ಕೂಡಲಸಂಗಮದೇವಾ*

ಎಂದು ಹೇಳುತ್ತಾ 'ಕಾಯಕದ' ಹಿರಿಮೆ ಸೂಚಿಸಿ, ಸಂಗ್ರಹ ಬುದ್ಧಿಯನ್ನು ಟೀಕಿಸಿ ಇಂದಿಗೆ , ನಾಳೆಗೆ, ನನ್ನ ಮೊಮ್ಮಗನಿಗೆ, ಮರಿಮಗನಿಗೆ ಎಂದು ಸಂಗ್ರಹಿಸುವುದು ಶುದ್ಧಚಾರಿತ್ರವಲ್ಲ 'ಆಚಾರ'ವಲ್ಲ ಎಂದು ಹೇಳಿದ್ದಾರೆ.

ಚೆನ್ನಬಸವಣ್ಣನವರು -

*ಆಚಾರವೆಂಬುದು ಕೂರಲಗು, ತಪ್ಪಿಬಂದೆಡೆ ಪ್ರಾಣವ ತಗಲುವುದು.....*
*ಪರರ ಹೆಣ್ಣಗೆ ಕಣ್ಣಡದಿಹುದೆ ಒಂದನೆಯ ಆಚಾರ*

*ಪರರದ್ರವ್ಯದ ಅಪಹಾರ ಮಾಡದಿಹುದೆ ಎರಡನೆಯ ಆಚಾರ*
*ಸುಳ್ಳಾಡದಿರುವುದೆ ಮೂರನೆಯ ಆಚಾರ*
*ವಿಶ್ವಾಸಘಾತವ ಮಾಡದಿಹುದೆ ನಾಲ್ಕನೆಯ ಆಚಾರ*
*ಪ್ರಾಣಹಿಂಸೆಯ ಮಾಡದಿಹುದೇ ಐದನೆಯ ಆಚಾರ.....*
*ಇಂತಿಪ್ಪ ಆಚಾರಂಗಳ ಕಡೆಮುಟ್ಟಿಸುವುದೆ ಕೂಡಲ ಚೆನ್ನಸಂಗಮದೇವರಲ್ಲಿ*
*ಐವತ್ತನೆಯ ಆಚಾರನೋಡಾ ಸಿದ್ಧರಾಮಯ್ಯ*

ಎಂದು ಐವತ್ತು ಆಚಾರಗಳನ್ನು ಹೇಳಿದ್ದಾರೆ. ಮತ್ತೊಂದು ಕಡೆ - ಕ್ರಿಯಾಚಾರ, ಜ್ಞಾನಾಚಾರ, ಭಾವಾಚಾರ, ನಿತ್ಯಾಚಾರ, ಧರ್ಮೋಚಾರ, ಸರ್ವಾಚಾರ, ಸಂಪತ್ತಿನ ಆಚಾರಗಳೆಂಬ ಸಪ್ತಆಚಾರಗಳನ್ನು ಹೇಳಿದ್ದಾರೆ. ಅಲ್ಲದೆ ಪಂಚಾಚಾರಗಳ ಬಗೆಗೆ ಹೇಳುತ್ತಾ

*ಲಿಂಗವಲ್ಲದೆ ಅನ್ಯವನ್ನು ತಿಳಿಯದಿರುವುದು ಲಿಂಗಾಚಾರ*
*ಸಜ್ಜನಕಾಯಕದಲ್ಲಿ ತಂದು ಗುರು - ಲಿಂಗ - ಜಂಗಮಕ್ಕೆ ನೀಡಿ*
*ಸತ್ಯಶುದ್ಧನಾಗಿರುವುದು ಸದಾಚಾರ*

*ಶಿವಭಕ್ತರಲ್ಲಿ ಕುಲಗೋತ್ರ ಜಾತಿ ವರ್ಣಾಶ್ರಮವನ್ನು ಹುಡುಕದೆ*
*ಅವರು ಒಕ್ಕುದನ್ನು ಸ್ವೀಕರಿಸುವುದು ಶಿವಾಚಾರ*
*''ಶಿವಾಚಾರದನಿಂದೆಯನ್ನು ಕೇಳದಿರುವುದು ಗಣಾಚಾರ''*
*ಶಿವಶರಣರೇ ಹಿರಿಯರಾಗಿ ತಾನು ಕಿರಿಯನಾಗಿ ಭಯಭಕ್ತಿಯಿಂದ*
*ಆಚರಿಸುವುದು ಭೃತ್ಯಾಚಾರ* - ಎಂದು ವಿವರಣೆ ನೀಡಿದ್ದಾರೆ.

*ಆಚಾರವು ಅಗೋಚರ ನೋಡಯ್ಯಾ*
*ಮಾಡಿದಲ್ಲದೆ ಇಲ್ಲ ಒಡಲುವಿಡಿದಾಡಿದರೆ ಹಿಡಿಯಲಿಲ್ಲಯ್ಯಾ*
*ಇವನೀಸುವ ಕಳೆದು ಕೂಡಲಚೆನ್ನಸಂಗಾ*
*ಬಸವಣ್ಣ ಬಲ್ಲ, ನೋಡಯ್ಯಾ*

ಎಂಬಲ್ಲಿ ಇಹಲೋಕದ ಆಸೆ - ಆಮಿಷಗಳಿಗೆ ಒಳಗಾಗಿ ಏನು ಮಾಡಿದರೂ ಆಚಾರ ಅಳವಡದು ಅದು ಅಗೋಚರ. ನಾವು ಲೌಕಿಕ ಚಿಂತನೆಯಲ್ಲಿ ಮುಳುಗದೆ ಪರಮಾರ್ಥವನ್ನು ಕುರಿತು ವಿಚಾರಿಸುವುದು ಆಚಾರ ಎಂದಿದ್ದಾರೆ. ಹಾಗೆಯೆ ಆಚಾರ ಸಹಿತ ಲಿಂಗಭಕ್ತನಾದರೆ, ದೈವವೆಂಬುದ ತನ್ನಲ್ಲಿಯೆ ಅರಿಯಬೇಕು, ಆಚಾರವುಳ್ಳಡೆ ಗುರು, ಆಚಾರವುಳ್ಳಡೆ ಲಿಂಗ, ಆಚಾರವುಳ್ಳಡೆ ಜಂಗಮ; ಎಂದೂ, ಆಚಾರವಿಲ್ಲದಿದ್ದಡೆ ಗುರುವಲ್ಲ ನರನು, ಆಚಾರವಿಲ್ಲದಿದ್ದಡೆ ಲಿಂಗವಲ್ಲ ಶಿಲೆ, ಆಚಾರವಿಲ್ಲದಿದ್ದಡೆ ಜಂಗಮನಲ್ಲ ವೇಷಧಾರಿ; ಆಚಾರವಿಲ್ಲದಿದ್ದಡೆ ಪಾದೋದಕವಲ್ಲ ನೀರು, ಆಚಾರವಿಲ್ಲದವರಿಗೆ ನಾಯಕ ನರಕ ತಪ್ಪದು

ಎಂದು ಹೇಳಿ ಆಚಾರದ ಹಿರಿಮೆಯನ್ನು ಸ್ಪಷ್ಟಗೊಳಿಸಿದ್ದಾರೆ ಚನ್ನಬಸವಣ್ಣನವರು. 'ಆಚಾರ' ಅರಿವನ್ನು ಅವಲಂಬಿಸಿದೆ. ಆಚಾರಕ್ಕೆ ಅರಿವೇ ಆಧಾರ. ಚೆನ್ನಮಲ್ಲಿಕಾರ್ಜುನನರಿಯದವರಿಗೆ ಆಚಾರವಿಲ್ಲ ಎಂದು ಅಕ್ಕಮಹಾದೇವಿ ಹೇಳಿದ್ದಾಳೆ. ದೈವದ ಅಸ್ತಿತ್ವವನ್ನು ಅರಿಯುವುದೇ ಆಚಾರ ಎಂದೂ ಆ ದೈವದ ಅಸ್ತಿತ್ವವನ್ನು ಅರಿಯದಿದ್ದರೆ ಆ ಆಚಾರಕ್ಕೆ ಬೆಲೆಯಿಲ್ಲ ಎಂಬುದು ಅಕ್ಕನ ನಿಲವು.

ಅಕ್ಕನಾಗಮ್ಮ -

*ಆಚಾರವೆಂಬುದು ಅಗೋಚರನೋಡಯ್ಯಾ*
*ಮರ್ತ್ಯಲೋಕಲ್ಲಿ ಆ ಸದಾಚಾರದ ಬೆಳವಿಗೆಯ*
*ಮಾಡಲೆಂದು ಬಸವಣ್ಣ ಬಂದು ಭಕ್ತಿಸ್ಥಲವ ಹರಹಿದ*
*ಗುರು ಲಿಂಗ ಜಂಗಮ ದಾಸೋಹ ಪಾದೋದಕ ಪ್ರಸಾದದ*
*ಹಾದಿಯನೆಲ್ಲರಿಗೆ ತೋರಿದ*
*ಶಿವಾಚಾರದ ಬೆಳವಿಗೆಯ ಘನವನಹುದಲ್ಲವೆಂದು*
*ಬಿಜ್ಜಳ ತರ್ಕಿಸಲು ಅನಂತ ಮುಖದಿಂದ ಒಡಂಬಡಿಸಿ ಅಹುದೆನಿಸಿದ*

ಎಂದು ಹೇಳುವಲ್ಲಿ ಆಚಾರ ಅಗೋಚರ! ಅದು ನಮ್ಮ ವರ್ತನೆ. ಆ ವರ್ತನೆಗೆ ಮನವೇ ಮೂಲ. ಮಾನಸಿಕ ಆಚರಣೆ ಬಹುಮುಖ್ಯ. ಸದಾಚಾರ, ಶಿವಾಚಾರಗಳು ಪ್ರಮುಖ ಎಂಬುದನ್ನು ವಿವರಿಸಿ ಹೇಳಿದ್ದಾಳೆ.

*ಆವಕುಲವಾದಡೇನು ಅಂಗದಮೇಲೆ*
*ಲಿಂಗವುಳ್ಳವರೆಲ್ಲರು ಆಚಾರವುಳ್ಳವರೆಂಬೆ*

ಎಂಬ ಅಮುಗೆರಾಯಮ್ಮನ ಮಾತುಗಳಲ್ಲಿ ಆಚಾರ ಬಹುಮುಖ್ಯ. ಲಿಂಗಧರಿಸಿದ ಬಳಿಕ ಆತನಲ್ಲಿ ಆಚಾರವಿರಲೇಬೇಕು. ಲಿಂಗಧಾರಿಯಾದ ಮೇಲೆ ಕುಲವಿಲ್ಲದ ಕಾರಣ ಅವನು ಸದಾಚಾರಿ, ಶಿವಾಚಾರಿಯಾಗಿರುವನು ಎಂಬ ಅರ್ಥ ಸ್ಫುರಿಸುತ್ತದೆ. ಆದ್ದರಿಂದ ಆಚಾರದಲ್ಲಿ ಶ್ರದ್ಧೆಯುಳ್ಳವರನ್ನು 'ಪರಶಿವ' ಎಂದೇ ರಾಯಮ್ಮ ಹೇಳುವಳು.

*ಆಚಾರ ಅನುಸರಣೆಯಾದಲ್ಲಿ*
*ಅಲ್ಲ ಅಹುದೆಂದು ಎಲ್ಲರ ಕೂಡುವಾಗ*
*ಗೆಲ್ಲಸೋಲದ ಕಾಳಗವೇ?*
*ಶ್ರುತದಲ್ಲಿ ಕೇಳಿ, ದೃಷ್ಟದಲ್ಲಿ ಕಂಡು, ಅನುಮಾನದಲ್ಲಿ ಅರಿದು*
*ಸಂದೇಹವ ಬಿಟ್ಟು ಕಂಡ ಮತ್ತೆ*

*ಆತನಂಗನವಕಂಡಡೆ, ಸಂಗದಲ್ಲಿ ನುಡಿದಡೆ*
*ಈ ಗುಣಕ್ಕೆ ಹಿಂಗದಿದ್ದನಾದಡೆ ಲಿಂಗಕ್ಕೆ ಸಲ್ಲ,*
*ಜಂಗಮಕ್ಕೆ ದೂರ, ಅದು ಕುಂಭೀನರಕ*
*ಆಚಾರವೇ ಪ್ರಾಣವಾದ ರಾಮೇಶ್ವರ ಲಿಂಗಕ್ಕೆ ಸಲ್ಲದ ನೇಮ*

*ಆಚಾರತಪ್ಪಿದಲ್ಲಿ ಪ್ರಾಯಶ್ಚಿತ್ತ ಉಂಟೆಂಬ*
*ಅನಾಚಾರಿಗಳ ಮುಖವ ನೋಡಬಹುದೆ?*
*ಆಚಾರವಟ್ಟದ ಹೊನ್ನೇ? ಮೊತ್ತದ ಮಡಕೆಯೆ? ಸಂತೆಯ ಬೆವಹಾರವೆ?*
*ಜೂಜಿನ ಮಾತೆ? ವೇಶ್ಯೆಯ ಸತ್ಯವೆ? ಪೂಸರವಾಚವೆ*
*ತನ್ನಾಚಾರಕ್ಕೆ ಬಂದವರು ತನ್ನವರೆಂದು ಭಾವಿಸಬೇಕು*

ಎಂಬ ಅಕ್ಕಮ್ಮನ ಮಾತುಗಳಲ್ಲಿ 'ಆಚಾರ'ದ ಪ್ರಾಮುಖ್ಯತೆ ತಿಳಿಯುತ್ತದೆ. ಆಚಾರವೇ ದೈವದ ಪ್ರಾಣವೆಂಬುದು ಅಕ್ಕಮ್ಮನ ಅಚಲ ನಿಲವು. ಹಾಗಾಗಿ ಆಕೆಯ ವಚನಾಂಕಿತವೇ "ಆಚಾರವೇ ಪ್ರಾಣವಾದ ರಾಮೇಶ್ವರ ಲಿಂಗ" ಎಂದಾಗಿದೆ. ಆಚಾರ ರಹಿತನಾದವರೆ ಲಿಂಗ - ಜಂಗಮಕ್ಕೆ ದೂರ. ಕುಂಭೀನರಕ ಪ್ರಾಪ್ತಿ. ಆಚಾರ ಸಂತೆಯ ವ್ಯಾಪಾರವಲ್ಲ, ಜೂಜಿನ ಮಾತಲ್ಲ. ವೇಶ್ಯೆಯ ಸತ್ಯವಲ್ಲ. ಹುಸಿಯಾಡುವವರ ಮಾತಲ್ಲ. ಅದು ಅಚಲ, ಅಗೋಚರ, ಅಪ್ರಮಾಣ. ಅದು ದೈವತ್ವವನ್ನು ಒದಗಿಸುವ ಆತ್ಯಂತಿಕ ಮೌಲ್ಯ ಎಂಬುದು ಅಕ್ಕಮ್ಮನ ನಿಲವು.

ಹೀಗೆ ಶರಣರು ಇಹದಲ್ಲಿ ಸಲ್ಲುವಂತೆ ಬದುಕಿ ಪರದಲ್ಲಿ ಸಲ್ಲುವ ಜೀವನ ಮೌಲ್ಯಗಳನ್ನು ಸಾರಿದ ಮಹಾಧೀಮಂತರು. ಇಲ್ಲಿ ಸಲ್ಲುವಂತೆ ವರ್ತಿಸುವ 'ಆಚಾರ'ಕ್ಕೆ ಹೆಚ್ಚು ಗಮನ ನೀಡಿ ಮಹವ ಸಾಧಿಸಿದ ಧೀಮಂತರು.

■

# ಅಕ್ಕನಾಗಾಯಿಯ ಬದುಕನ್ನು ಅರ್ಥೈಸುವ ಒಂದು ಪ್ರಯತ್ನ

ಡಾ|| ಎಸ್. ವಿದ್ಯಾಶಂಕರ

---

ಅಕ್ಕನಾಗಾಯಿ[೧], ನಾಗಾಯಿ[೨], ಅಕ್ಕ ನಾಗಿತಿ[೩], ಅಕ್ಕ ನಾಗಲಾಂಬಿಕೆಯಮ್ಮ[೪], ನಾಗಲದೇವಿ[೫], ನಾಗಲಾಂಬಿಕೆ[೬] - ಎಂದೆಲ್ಲಾ ಕರೆಯಲ್ಪಟ್ಟಿರುವ ಚೆನ್ನಬಸವಣ್ಣನ ತಾಯಿ-ಬಸವಣ್ಣನ ಸೋದರಿ-ಅಕ್ಕನಾಗಮ್ಮ ವಚನಸಾಹಿತ್ಯದಲ್ಲಿ ಪ್ರಮುಖಳಾಗಿರುವ ಮಹಿಳೆ. ಚೆನ್ನಬಸವಣ್ಣನ ತಾಯಿ ಈಕೆ ಎಂದಷ್ಟೇ ಮುಖ್ಯಳಾಗಿರದೆ ಬಸವಣ್ಣನ ಬದುಕನ್ನು ಅವನ ನೆರಳಾಗಿ ಹಿಂಬಾಲಿಸಿ ರೂಪಿಸಿದ ಮಹಾನ್ ಚೇತನ. ಬಹುಶಃ ವಚನ ಚಳುವಳಿ ಕಲ್ಯಾಣದಲ್ಲಿ ಸಂಘಟಿತವಾಗಿ ವ್ಯಾಪಕವಾಗಿ ಹರಡುತ್ತಿದ್ದ ಕಾಲಘಟ್ಟದಲ್ಲಿ, ಇಡೀ ಶರಣ ಬಳಗಕ್ಕೆ ಸೋದರಿಯಾಗಿ, ತಾಯಿಯಾಗಿ ಅದನ್ನು ಮುನ್ನಡೆಸಿರಬೇಕು.

ಸ್ವತಃ ಚೆನ್ನಬಸವಣ್ಣನೇ ತನ್ನ ತಾಯಿಯನ್ನು ಅಕ್ಕನಾಗಾಯಿ, ಅವ್ವೆ ನಾಗಾಯಿ ಎಂದು ಕರೆದಿರುವನು (ವ.೧೪೮೪, ೧೫೦೧); ಸಿದ್ಧರಾಮನು ತನ್ನ ಮಿಶ್ರಸ್ತೋತ್ರದ ತ್ರಿವಿಧಿಯಲ್ಲಿ

---

೧. ಚೆನ್ನಬ.ವ. ೧೪೮೪; ೨. ಚೆನ್ನಬ.ವ.೧೫೦೧; ೩. ಸಿದ್ಧರಾ.ಮಿಶ್ರಸ್ತೋ.ತ್ರಿ. ೮೬; ೪. ಘಟ್ಟಿವಾ.ವ ೭೫;
೫. ಭೀಮ.ಬಸಪು.೪.೪೯; ೬. ಚೆನ್ನಬ.ಪು.೪. ೧೬

(ತ್ರಿವಿಧಿ ೮೯, ೧೦೩) ಅಕ್ಕನಾಗಿಲೆಯ ಸ್ತುತಿಮಾಡಿರುವನು, ಘಟ್ಟಿವಾಳಯ್ಯನು 'ಅಕ್ಕನಾಗಲಾಂಬಿಕೆಯಮ್ಮನವರ ಬಸುಱಲ್ಲಿ ಬಂದರೆನ್ನಬಹುದೇ ಚೆನ್ನಬಸವೇಶ್ವರನು ? (ವ.೭೫) ಎಂದಿರುವನು. ಭೀಮಕವಿಯ ಬಸವ ಪುರಾಣ ಹಾಗೂ ಶಿವಗಣಪ್ರಸಾದಿ ಮಹಾದೇವಯ್ಯಗಳ ಶೂನ್ಯಸಂಪಾದನೆ ಇವೆರಡು ಕೃತಿಗಳ ಹೊರತಾಗಿ ಇಡೀ ವೀರಶೈವ ಸಾಹಿತ್ಯದಲ್ಲಿ ನಾಗಾಯಿ (ನಾಗ + ಆಯಿ = ನಾಗಾಯಿ- ಆಯಿ = ಅಮ್ಮ, ತಾಯಿ- ನಾಗಮ್ಮ) ಅಥವಾ ನಾಗಲಾಂಬಿಕೆಯನ್ನು ಅಕ್ಕ ನಾಗಾಯಿ, ಅಕ್ಕನಾಗಿತಿ, ಅಕ್ಕನಾಗಲಾಂಬಿಕೆ ಎಂದೇ ಕರೆಯಲಾಗಿದೆ. ''ಬಹುಶಃ ತಂಗಿಯಾಗಿರುವ ಅವಳನ್ನು ಪ್ರೀತಿ ಗೌರವ ಕಾರಣವಾಗಿ 'ಅಕ್ಕ' ಎಂಬ ವಿಶೇಷಣ ಬಳಸಿ ಅಕ್ಕ + ನಾಗಮ್ಮನೆಂದೇ ಕರೆಯುತ್ತಿರಬಹುದು. ಮಹಾದೇವಿಯನ್ನು ಅಕ್ಕ + ಮಹಾದೇವಿ ಎಂದು ಕರೆದಂತೆ. ಆದರೆ ೧೫ನೆಯ ಶತಮಾನದ ತರುವಾಯ ಬಂದ ಲಕ್ಕಣ್ಣ ದಂಡೇಶ, ಚಾಮರಸ, ಸಿಂಗಿರಾಜ ಮೊದಲಾದವರು ಇಲ್ಲಿಯ 'ಅಕ್ಕ' ಎಂಬ 'ವಿಶೇಷಣ' ವನ್ನು ವಾಚ್ಯಾರ್ಥದಲ್ಲಿ ಸ್ವೀಕರಿಸಿ, ಅವಳನ್ನು ಬಸವಣ್ಣನವರ ಅಕ್ಕನೆಂದೇ ತಪ್ಪಾಗಿ ಭಾವಿಸಿರಬಹುದೇ ?' ಎಂಬ ಸಂದೇಹವನ್ನು ಡಾ|| ಎಂ.ಎಂ. ಕಲಬುರ್ಗಿ ವ್ಯಕ್ತಪಡಿಸಿರುವರು.[೧] ಡಾ|| ಎಂ.ಎಂ. ಕಲಬುರ್ಗಿ ಅವರ ಊಹೆ ಸರಿಯಲ್ಲ. ನಾಗಾಯಿ ಬಸವಣ್ಣನ ತಂಗಿ ಎನ್ನುವುದಕ್ಕೆ ಅವರಿಗೆ ಇರುವ ಬಲವಾದ ಆಧಾರ ಭೀಮಕವಿ ಹಾಗೂ ಶಿವಗಣಪ್ರಸಾದಿಗಳ ಕೃತಿಗಳು. ಭೀಮಕವಿಯ ಬಸವ ಪುರಾಣವು ಪಾಲ್ಕುರಿಕೆ ಸೋಮನ ತೆಲುಗು ಬಸವಪುರಾಣದ ಕನ್ನಡ ರೂಪಾಂತರ. ಪಾಲ್ಕುರಿಕೆ ಸೋಮನಾಥನು ಬಸವಣ್ಣನ ಬಗೆಗೆ ತಿಳಿದಿದ್ದು ವಾಗ್ಪರಂಪರೆಯ (Oral Tradition)ಮೂಲಕ. ಬಹುಶಃ ಅವನಿಗೆ ತಪ್ಪು ಮಾಹಿತಿ ದೊರೆತಿರಬಹುದು. ಶಿವಗಣಪ್ರಸಾದಿ ಮಹಾದೇವಯ್ಯಗಳೂ ಕಾಲದ ದೃಷ್ಟಿಯಿಂದ ದೂರದವರು. ಅವರೂ ತಪ್ಪಾಗಿ ನಾಗಮ್ಮನನ್ನು ಬಸವಣ್ಣನ ತಂಗಿ ಎಂದು ಭಾವಿಸಿ ಹೇಳಿರಬಹುದು. ಇವರಿಬ್ಬರನ್ನು ಬಿಟ್ಟರೆ ಇಡೀ ವೀರಶೈವ ಸಾಹಿತ್ಯ ನಾಗಮ್ಮನನ್ನು ಬಸವಣ್ಣನ 'ಅಕ್ಕ' ಎಂದೇ ಸಂಬೋಧಿಸಿದೆ. ವಿರೂಪಾಕ್ಷ ಪಂಡಿತನ (೧೫೮೫) ಚೆನ್ನಬಸವಪುರಾಣ '...ಬಲುದಣನಾಯಕ ಬಸವನಕ್ಕ...' ನಾಗಲಾಂಬಿಕೆ ಎಂದೇ ಕರೆಯಲಾಗಿದೆ (೮.೧೬). ಮೇಲೆ ತಿಳಿಸಿರುವ ಚೆನ್ನಬಸವಣ್ಣ, ಸಿದ್ಧರಾಮ, ಘಟ್ಟಿವಾಳಯ್ಯಗಳ ಉಲ್ಲೇಖಗಳಲ್ಲಿ ನಾಗಮ್ಮನನ್ನು 'ಅಕ್ಕ'ನಾಗಾಯಿ ಎಂದೇ ಕರೆದಿರುವುದು ಲಕ್ಷಿಸಬೇಕಾದ ಸಂಗತಿ. ಉಪಲಬ್ಧವಿರುವ ಆಧಾರಗಳ ಮೇಲೆ ನಾಗಮ್ಮ ಬಸವಣ್ಣನ ತಂಗಿಯಲ್ಲ, ಅಕ್ಕ ಎಂದು ನಿಸ್ಸಂಶಯವಾಗಿ ಹೇಳಬಹುದು.

ಹರಿಹರ ಚೆನ್ನಬಸವಣ್ಣನನ್ನು ಕುರಿತು ಒಂದು ರಗಳೆ ಬರೆದಿರುವ ಸಾಧ್ಯತೆಯಿದೆ. ಆದರೆ ಇಂದು ಅದು ಉಪಲಬ್ಧವಿಲ್ಲವೆನ್ನುವುದು ದುರ್ದೈವದ ಸಂಗತಿ. 'ಬಸವರಾಜದೇವರ

೧. ಚೆನ್ನಬಸವಣ್ಣನವರ ಷಟ್ಸ್ಥಲವಚನ ಮಹಾಸಂಪುಟ, ಪ್ರಸ್ತಾವನೆ, ಪು.iii (೧೯೬೦).

ರಗಳೆ'ಯಲ್ಲೂ ಚೆನ್ನಬಸವಣ್ಣ ಹಾಗೂ ಅವನ ತಾಯಿಯ ಬಗ್ಗೆ ಉಲ್ಲೇಖವಿಲ್ಲ[೨]. ಹರಿಹರ ಉಲ್ಲೇಖಿಸದಿದ್ದರೂ ಬಸವ ಸಮಕಾಲೀನ ವಚನಕಾರರಲ್ಲಿ ಒಬ್ಬನಾದ ಸಿದ್ಧರಾಮ "ಹೆತ್ತವ್ವೆ ನೀಲಮ್ಮ ಮುತ್ತವ್ವೆ ಮಹದೇವಿ! ಎತ್ತಿ ಸಲಹಿಹಳಕ್ಕ ನಾಗಿತಿಯು ತಾಯಿ ...." ಎಂದು ಹೇಳುವಲ್ಲಿ (ಮಿಶ್ರಸ್ತೋತ್ರದ ತ್ರಿವಿಧಿ ೮೭) ನೀಲಮ್ಮ, ಮಹದೇವಿ, ಅಕ್ಕನಾಗಿಲೆ-ಇವರ ಬಗೆಗೆ ತನಗಿರುವ ಪ್ರೀತಿ-ಗೌರವಗಳನ್ನು ವ್ಯಕ್ತಪಡಿಸಿರುವನು. ಇದೇ ಪ್ರೀತಿ-ಗೌರವ ಮಿಶ್ರಸ್ತೋತ್ರದ ತ್ರಿವಿಧಿ ೧೦೩ರಲ್ಲೂ ಪ್ರಕಟಗೊಂಡಿದೆ. ಸ್ವತಃ ಚೆನ್ನಬಸವಣ್ಣನೇ ತನ್ನ ಹೆತ್ತ ತಾಯಿ ನಾಗಲಾಂಬಿಕೆ, ಸೋದರಮಾವ ಬಸವಣ್ಣ-ಇವರ ಬಗೆಗೆ ಎರಡು ವಚನಗಳಲ್ಲಿ (ವ.೧೪೮೪, ೧೫೦೧) ಹೇಳಿಕೊಂಡಿರುವನು. ಮೊದಲನೆ ವಚನದಲ್ಲಿ ಕಲ್ಯಾಣದ ಕಾಳಯ್ಯ, ಚೌಡಯ್ಯ, ಕೋಲ ಶಾಂತಯ್ಯ, ಮೊಗವಾಡದ ಕೇಶಿರಾಜಯ್ಯ, ಬಂಡೆಯ ಬೊಮ್ಮಣ್ಣ, ಮಿಂಡ ಮಲ್ಲಿನಾಥ, ಹಡಪದ್ಪಪಣ್ಣ, ಮಡಿವಾಳ ಮಾಚಯ್ಯ , ಅಕ್ಕನಾಗಾಯಿಗಳು ಲಿಂಗೈಕ್ಯರಾದುದನ್ನು ಪ್ರಸ್ತಾಪಿಸಿರುವನು. ಎರಡನೆ ವಚನದಲ್ಲಿ ತನ್ನ ಗುರು ಹಾಗೂ ಸೋದರಮಾವ ಬಸವಣ್ಣ ಲಿಂಗೈಕ್ಯನಾದಾಗ ಹೃದಯ ತುಂಬಿಬಂದು ತನ್ನ ಸಂಕಟವನ್ನು ವಚನ ಮುಖೇನ ತೋಡಿಕೊಂಡಿರುವನು. ಬಹುಶಃ ಬಸವಣ್ಣ ಲಿಂಗೈಕ್ಯನಾದ ಸ್ವಲ್ಪ ದಿವಸಗಳಲ್ಲೇ ಅವ್ವೆ ನಾಗಾಯಿಯೂ ಲಿಂಗೈಕ್ಯಳಾಗಿರಬಹುದು. ಈ ದುಃಖ ಮತ್ತಷ್ಟು ಹೆಚ್ಚಿನದು. 'ನಿನ್ನ ಒಕ್ಕುಮಿಕ್ಕ ಶೇಷವನಿಕ್ಕಿ ಆಗುಮಾಡಿ, ನಿನ್ನಂತರಂಗದಲ್ಲಿ ಅವ್ವೆ ನಾಗಾಯಿಯ ಇಂಬುಗೊಂಡಡೆ, ಎನ್ನ ಮನ ನಿಮ್ಮ ಪಾದದಲ್ಲಿ ಕರಗಿ ಕೊರಗಿತ್ತಯ್ಯ ಸಂಗನಬಸವಣ್ಣ! ಎಂದು ಚೆನ್ನಬಸವಣ್ಣ ದುಃಖಿಸುವನು.

ನಾಗಮ್ಮ ಅಥವಾ ನಾಗಲಾಂಬಿಕೆಯ ಬದುಕನ್ನು ಅರ್ಥಮಾಡಿಕೊಳ್ಳಲು ಅವಳು ಬರೆದಿರುವ ಹದಿನೈದು ವಚನಗಳು ಸ್ವಲ್ಪಮಟ್ಟಿಗೆ ನೆರವಾಗುತ್ತವೆ. ಅವಳ ವಚನಗಳ ಅಂಕಿತ 'ಬಸವಣ್ಣಪ್ರಿಯ ಚೆನ್ನಸಂಗಯ್ಯ'. ಗುಬ್ಬಿಯ ಮಲ್ಲಣ್ಣನ (೧೫೩೦) ವೀರಶೈವಾಮೃತ ಮಹಾಪುರಾಣದಲ್ಲಿ ಏಳನೆಯ ವರ್ಷದಲ್ಲಿ ಬಸವಣ್ಣನಿಗೆ ಮುಂಜಿಗಟ್ಟಲು ತಂದೆ-ತಾಯಿಗಳು ಹೊರಟಾಗ ಅದನ್ನು ತಡೆದ ಬಸವಣ್ಣ ಅವರೊಡನೆ ಘರ್ಷಣೆಗಿಳಿದು ಅದರ ಫಲವಾಗಿ ಮನೆಯನ್ನು ಬಿಟ್ಟು ಹೊರಡುವನು. ಆಗ ಅವನ ಜೊತೆ ಅಕ್ಕ ನಾಗಾಂಬೆಯೂ ಹೊರಟಳೆಂದೂ ಅಲ್ಲಿ ನಿರೂಪಿಸಲಾಗಿದೆ (ಕಾಂಡಲ ಸಂಧಿ ೧ ಪದ್ಯ ೧೦-೧೧). ಕೂಡಲಸಂಗಮಕ್ಕೆ ಬಸವಣ್ಣನೊಡನೆ ಅಕ್ಕನಾಗಾಂಬೆ ಹೊರಟಾಗ ಅವಳಿಗೆ ಮದುವೆಯಾಗಿದ್ದಿತೆ ?ಮದುವೆಯಾಗಿತ್ತೆಂಬುದರ ಸೂಚನೆಯನ್ನು ಸಿಂಗಿರಾಜ (ಸು.೧೫೦೦) ಕೊಡುವನು. ನಾಗಾಯಿಯ ಪತಿ ಶಿವಸ್ವಾಮಿ ಎಂದು ಮೊದಲಿಗೆ ಹೇಳಿದವನು ಅವನೇ.

೨ 'ಬಸವರಾಜದೇವರ ರಗಳೆ' ದೊರೆತಿರುವುದು ಸದ್ಯಕ್ಕೆ ೧೨ $\frac{1}{3}$ ಸ್ಥಲ. ಅಪ್ರಿಯವಾದ ಅನೇಕ ಸಂಗತಿಗಳು ಅಲ್ಲಿ ಬಂದಿದ್ದು, ಸಂಪ್ರದಾಯವಾದಿಗಳಿಗೆ ಅದು ಸರಿಕಾಣಿಸಿದೆ ಉತ್ತರಾರ್ಧವನ್ನು ನಾಶಪಡಿಸಿರಬಹುದೆಂದು ವಿದ್ವಾಂಸರು ಅಭಿಪ್ರಾಯಪಡುವರು. ಅಪ್ರಿಯಸಂಗತಿಗಳಲ್ಲಿ ಚೆನ್ನಬಸವಣ್ಣನ ಬದುಕಿಗೆ ಸಂಬಂಧಪಟ್ಟದ್ದೂ ಇರಬಹುದೇನೋ!

ಬಸವಣ್ಣನ ಪ್ರಗತಿಪರ ಆಲೋಚನೆಗಳಿಗೆ ಬಹುಶಃ ಬಾಲ್ಯದಿಂದಲೂ ಪ್ರೋತ್ಸಾಹಕೊಟ್ಟವಳು, ಬೆಂಬಲಿಸಿದವಳು ಅಕ್ಕ ನಾಗಾಯಿಯೆ. ತಮ್ಮನ ಕನಸುಗಳಿಗೆ ಒಂದು ರೂಪಕೊಡಲು ಅವನ ನೆರಳಾಗಿ ಹಿಂಬಾಲಿಸಿದವಳು ಅಕ್ಕನಾಗಾಯಿಯೆ. ಸಿಂಗಿರಾಜನ ಪ್ರಕಾರ, ಕೂಡಲಸಂಗಮದಲ್ಲಿ ಬಸವೇಶನು ನೆಲೆಸಿದಾಗ ಅವನನ್ನು ನೋಡಲು ಇಂಗಳೇಶ್ವರ ಬಾಗೆವಾಡಿಯಿಂದ ಮಾದರಸ-ಮೊದಲಾಂಬಿಕೆಯರು ಬಂದು ಬಸವಣ್ಣನನ್ನು ಕಂಡು 'ಮನೆಗೆ ಬಾ' ಎಂದು ಕರೆಯುವರು. ಎಷ್ಟು ಬೇಡಿಕೊಂಡರೂ ಮನೆಗೆ ಮಗನು ಹಿಂತಿರುಗಿ ಬರಲು ಒಪ್ಪಲಿಲ್ಲ. ಆಗ ಅವರು ನಿರ್ವಾಹವಿಲ್ಲದೆ '**ಸಂಸಾರ ಭ್ರಾಂತಳಿಯದಳಿಯ**' ಶಿವದೇವನನ್ನೂ ಮಗಳು ನಾಗಾಯಿಯನ್ನೂ ಬಸವಣ್ಣನ ಸೇವೆಗೆ ಬಿಟ್ಟು ಬರುವರು (ಸಂ.೫ ಪ.೧೧೫-೧೧೭). ಮುಂದೆ, ಬಸವಣ್ಣ ಬಿಜ್ಜಳನ ಭಂಡಾರಿಯಾದಾಗ ಅವನ ಜೊತೆ ಶಿವದೇವ-ನಾಗಾಯಿ ದಂಪತಿಗಳು ಬಹಳ ದಿವಸ ಜೊತೆಯಲ್ಲೇ ಇದ್ದು, ಬಸವರಾಜನ ಕಾರ್ಯಯೋಜನೆಗಳಲ್ಲಿ ನೆರವಾಗುತ್ತಿದ್ದರೆಂದು ಸಿಂಗಿರಾಜ ಹೇಳುವನು (ಸಂ ೩೧. ಪ ೨೧).

ಸಿಂಗಿರಾಜನಿಗಿಂತ ಪೂರ್ವದವನಾದ ಲಕ್ಕಣ್ಣದಂಡೇಶನಲ್ಲಿ (1450) ಬಸವಣ್ಣ ಹಾಗೂ ಅಕ್ಕ ನಾಗಾಂಬಿಕೆಗಿದ್ದ ಮಧುರ ಸೋದರ ಸಂಬಂಧದ ಎಳೆ ನಮಗೆ ಸಿಗುತ್ತದೆ. ಬಸವಣ್ಣನ ಜನನವಾದಾಗ ತಂದೆಯ ಮನೆಯಲ್ಲಿಯೇ ಇದ್ದ ನಾಗಾಂಬಿಕೆ ಆ ಸಂತೋಷದ ಸಂದರ್ಭದಲ್ಲಿ ಜೋಗುಳವಾಡಿದ್ದು ಒಂಭತ್ತು ಪದ್ಯಗಳಲ್ಲಿ ಬಂದಿದೆ (ಸಂ.೩೦ ಪ.೩೬-೪೪). ಬಸವಣ್ಣನು ಗೃಹತ್ಯಾಗ ಮಾಡಿದ ಪ್ರಸಂಗ ಇಲ್ಲಿ ಬೇರೆಯಾಗಿ ಬರುತ್ತದೆ. ಬ್ರಾಹ್ಮಣರ ಬಾಲಕನನ್ನು ಬಾವಿಗೆ ತಳ್ಳಿ ಕೊಂದ ಅಪವಾದ ಬಾಲ ಬಸವನ ಮೇಲೆ ಬರಲು ಅವನು ಕೂಡಲಸಂಗಮಕ್ಕೆ ಹೆದರಿ ಓಡಿ ಬರುವನು. ಬಸವಣ್ಣನನ್ನು ಹಿಂಬಾಲಿಸಿ ಬಂದ ಬ್ರಾಹ್ಮಣರಿಗೆ ಬಸವಣ್ಣನು ಸಂಗಮನಾಥನ ಮೂಲಕ 'ಜನಾರ್ದನನ ಮಗ ಕೃಷ್ಣನು ಕೊಂದವನು' ಎಂದು ಏಳುದಿನ ಪರ್ಯಂತ ನುಡಿಯಿಸುವನು (ಸಂ.೩೦ ಪ.೫೩). ಬಸವಣ್ಣ ಕೂಡಲಸಂಗಮದಲ್ಲೇ ನೆಲೆಸಿದಾಗ ಅವನನ್ನು ನೋಡಲು ಬಂದ ಮಾತಾಪಿತರು 'ನಾಗಾಂಬಿಕೆಯ ಕೈಯೊಳಪ್ಪಣೆಗೊಟ್ಟು ಮುದದೊಳಿಹುದೆಂದು ಬುದ್ಧಿಯ ಪೇಳ್ದು ತಿರುಗಿದರು' ಎಂದು ಲಕ್ಕಣ್ಣದಂಡೇಶ ನಿರೂಪಿಸುವನು (ಸಂ.೩೦ ಪ.೫೩). ಇಲ್ಲಿ ಶಿವಸ್ವಾಮಿಯ ಪ್ರಸ್ತಾಪವಿಲ್ಲ. ಮುಂದೆ, ಮಂತ್ರಿ ಬಲದೇವನ ಮಗಳು ಗಂಗಾಂಬಿಕೆಯೊಡನೆ ಬಸವನ ವಿವಾಹಯಾಗುತ್ತದೆ. ಆಗ ಬಲದೇವನು ನಾಗಾಂಬಿಕೆಯೊಡನೆ 'ಕುಲತಿಲಕನಪ್ಪ ಬಸವೇಶ ಸಹಿತಂ ನೀವು ಕೆಲವು ದಿನವಿದ್ದು ನಮ್ಮಿಚ್ಛೆಯಂ ಸಲಿಸುವುದು' ಎಂದು ಕೇಳಿಕೊಳ್ಳುವನು (ಸಂ.೩೧ ಪ.೩೦). ಒಸಗೆಯ ಮೇಲೆ ಒಸಗೆ ಎನ್ನುವಂತೆ ಬಸವಣ್ಣನ ಸದ್ಗುಣಗಳಿಗೆ ಮೆಚ್ಚಿದ ಬಿಜ್ಜಳ ತನ್ನನುಜ ಕನ್ನರಿಯಿಂದ (=ಕರ್ಣದೇವ) ಕಿರಿಯಳಾದ ನೀಲಾಂಬಿಕೆಯನ್ನು ಬಸವನಿಗೆ ವಿವಾಹಮಾಡಿ ಕೊಡುವನು (ಸಂ.೩೧ ಪ.೬೭). ಕಲ್ಯಾಣದಲ್ಲಿ ಬಸವಣ್ಣನ ಮನೆಯಲ್ಲಿ ಅವನಿಗೆ ನೆರವಾಗುತ್ತ ನಾಗಾಂಬಿಕೆ ಇದ್ದಳೆಂಬ ಸೂಚನೆಯನ್ನು ಲಕ್ಕಣ್ಣ ದಂಡೇಶ ಕೊಡುವನು. ಬಸವಣ್ಣನು ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮರಿಗೆ ನಿತ್ಯವೂ ಪರಿಚರಿಯ ಮಾಡುತ್ತಿದ್ದು, ಅವರ

ಉಸ್ತುವಾರಿಯನ್ನು ನಾಗಾಂಬಿಕೆ ನೋಡಿಕೊಳ್ಳುತ್ತಿದ್ದಳೆಂದು ಲಕ್ಕಣ್ಣ ದಂಡೇಶ ಹೇಳುವನು. ಅದೃಶ್ಯನ (೧೬೦೦) ಪ್ರೌಢರಾಯನ ಕಾವ್ಯವು ಅಕ್ಕನಾಗಮ್ಮನಿಗೆ ವಿವಾಹವೇ ಆಗಿರಲಿಲ್ಲವೆಂದು ಹೇಳುತ್ತದೆ (ಸಂ.೧೯ ಪ.೨).

ನಾಗಾಂಬಿಕೆಯ ಪುತ್ರ ಚೆನ್ನಬಸವಣ್ಣನ ಜನನ ಪ್ರಸಂಗ ಜಟಿಲ ಸಮಸ್ಯೆಯಾಗಿದೆ. ನಮ್ಮ ಕವಿಗಳ ನಿರೂಪಣೆಯಲ್ಲಿ ಒಮ್ಮತವಿಲ್ಲ. ಚೆನ್ನಬಸವಣ್ಣನು ನಾಗಾಯಿ ಹಾಗೂ ಶಿವಸ್ವಾಮಿಯರ ಮಗನೆಂದು ಸಿಂಗಿರಾಜ (ಸು.೧೫೦೦) ಹೇಳಿದರೆ, ಕಕ್ಕಯ್ಯನ ಪ್ರಸಾದದಿಂದ ಎಂದು ವೀರಶೈವಾಮೃತ ಮಹಾಪುರಾಣ (ಕಾಂಡ ೮ ಸಂಧಿ ೧ ಪದ್ಯ ೧೨-೧೩), ಪ್ರೌಢರಾಯನ ಕಾವ್ಯ (ಸಂಧಿ ೧೯), ಗುರುರಾಜ ಚಾರಿತ್ರ (ಸಂಧಿ ೮), ಹಲಗೆದೇವರ ಶೂನ್ಯಸಂಪಾದನೆ, ಭೈರವೇಶ್ವರಕಾವ್ಯದ ಕಥಾಮಣಿಸೂತ್ರರತ್ನಾಕರ-ಇವೇ ಮೊದಲಾದ ಕೃತಿಗಳು ಹೇಳುತ್ತವೆ. ಬಸವಣ್ಣನು ಕೊಟ್ಟ ಕರುಣಪ್ರಸಾದವನ್ನು ಸೇವಿಸಿ ಅಕ್ಕನಾಗಾಯಿ ಚೆನ್ನಬಸವಣ್ಣನನ್ನು ಪಡೆದಳೆಂದು ಚಾಮರಸ ಹೇಳುವನು (ಸಂ.೯ ಪ.೨೩). ನಾಗಲಾಂಬಿಕೆಯನ್ನು 'ಗಿರಿಸುತಾರೂಪು' (ಸಂ.೩ ಪ.೩೩) ಎಂದು ಬಣ್ಣಿಸುವ ವಿರೂಪಾಕ್ಷ ಪಂಡಿತನು ಶಿವನೇ ನಾಗಲಾಂಬಿಕೆಯ ಕನಸಿನಲ್ಲಿ ಬಂದು ಪ್ರಸಾದವನ್ನು ಅನುಗ್ರಹಿಸಲು ಚೆನ್ನಬಸವಣ್ಣನು ಜನಿಸಿದನೆಂದು ಹೇಳುವನು (ಸಂಧಿ ೪). ಚೆನ್ನಬಸವಣ್ಣನ ಜನನದ ಕಥೆ ಕಾಲದಿಂದ ಕಾಲಕ್ಕೆ ಹೇಗೆ ರೆಕ್ಕೆಪುಕ್ಕ ಹಚ್ಚಿಕೊಂಡು ಬೆಳೆಯಿತು ಎನ್ನುವುದು ಕುತೂಹಲದ ಸಂಗತಿ. ಈ ಎಲ್ಲ ಕಥೆಗಳಲ್ಲಿ ಧ್ವನಿತವಾಗುವ ಒಂದು ಅಂಶವೆಂದರೆ, ಚೆನ್ನಬಸವಣ್ಣ ಲೌಕಿಕ ನೆಲೆಯಲ್ಲಿ ಜನಿಸಿದನೆಂದು ಹೇಳದೆ, ಪ್ರಸಾದ ಮಹಿಮೆಯಿಂದ ಜನಿಸಿದನೆಂದು ಅಲೌಕಿಕ ನೆಲೆಯಲ್ಲಿ ಹೇಳುತ್ತಿರುವುದು. ನಾಗಲಾಂಬಿಕೆಯೇ ತನ್ನ ವಚನವೊಂದರಲ್ಲಿ 'ಪ್ರಸಾದದಿಂದುದಯ ವಾದಾತ ನೀನಲ್ಲವೆ ಚೆನ್ನಬಸವಯ್ಯ' ಎಂದು ಹೇಳಿರುವುದು (ವ.1)* ಗಮನಿಸಬೇಕಾದ ಸಂಗತಿ.

ಅಕ್ಕನಾಗಾಯಿ ಅಥವಾ ನಾಗಲಾಂಬಿಕೆಯ ವ್ಯಕ್ತಿತ್ವ ಅಪೂರ್ವವಾದುದು. ಬಸವಣ್ಣನ ಜೀವನದುದ್ದಕ್ಕೂ ಅವನನ್ನು ನೆರಳಿನಂತೆ ಹಿಂಬಾಲಿಸಿದ ನಾಗಾಯಿ ಅವನ ಸಮಾಜೋ ಧಾರ್ಮಿಕ ಚಳವಳಿಯ ಹಿನ್ನಲೆಯಲ್ಲಿ ಸ್ಫೂರ್ತಿಯ ಸೆಲೆಯಾಗಿದ್ದಳು. ತಮ್ಮನಿಗೆ ಸಲಹೆ-ಸಹಕಾರ ನೀಡಿದ್ದಷ್ಟೇ ಅಲ್ಲದೆ, ಮಹಾಮನೆಯ ಜೀವ ಜೀವಾಳವಾಗಿದ್ದಿರಬಹುದಾದ ಅವಳು ಶರಣರೆಲ್ಲರ ಪ್ರೀತಿಗೆ ಪಾತ್ರಳಾಗಿದ್ದಳು. ಚೆನ್ನಬಸವನಂತಹ ಬಾಲಪ್ರತಿಭೆಗೆ (Child geneous) ತಾಯಿಯಾಗಿ ಅವನ ಸರ್ವಾಂಗೀಣ ಬೆಳವಣಿಗೆಗೆ ಸೂಕ್ತ ವಾತಾವರಣ ಕಲ್ಪಿಸಿದ ಶ್ರೇಯಸ್ಸು ನಾಗಾಯಿಯದು. ಬಸವಣ್ಣನ 'ವಿಚಾರಪತ್ನಿ'ಯಾದ ನೀಲಲೋಚನೆ,

---

* ಮುಂದೆ ಉದಾಹರಿಸುವ ನಾಗಲಾಂಬಿಕೆಯ ವಚನಗಳ ಸಂಖ್ಯೆ ಸಮಗ್ರ ವಚನ ಸಂಪುಟ-೫ ಜನಪ್ರಿಯ ಆವೃತ್ತಿಯ ಶಿವಶರಣೆಯರ ವಚನ ಸಂಪುಟದ್ದು.

'ಆಚಾರಪತ್ನಿ'ಯಾದ ಗಂಗಾಂಬಿಕೆಯರ ಜೊತೆಗೂಡಿ ಬಸವಣ್ಣನ ನಿತ್ಯದಾಸೋಹದ ಕಾರ್ಯದಲ್ಲಿ ಸಡಗರದಿಂದ ಪಾಲ್ಗೊಳ್ಳುತ್ತಿರುವ ನಾಗಲಾಂಬಿಕೆಯ ಚಿತ್ರ ಕಲ್ಪಿಸಿಕೊಳ್ಳುವುದೇ ಆನಂದದ ಸಂಗತಿ.

ಬಸವಣ್ಣ ಲಿಂಗದೊಡನೆ ಬೆರೆತಾಗ ನಾಗಲಾಂಬಿಕೆ ಅತಿಶಯವಾಗಿ ದುಃಖಿಸುವಳು. ಅವಳ ಮನದಾಳದ ಸಂಕಟ ಹಾಡಾಗಿದೆ. ಬಸವಣ್ಣ ನಾಗಾಯಿಯ ಪ್ರಕಾರ, ಮರ್ತ್ಯಮಾನವನಲ್ಲ, ಕಾರಣಿಕ; ಮರ್ತ್ಯಲೋಕದಲ್ಲಿ ಸದಾಚಾರದ ಬೆಳವಿಗೆಯ ಮಾಡಲೆಂದು ಬಂದವನು; ಭಕ್ತಸ್ಥಲವನ್ನು ಎಲ್ಲೆಡೆ ಹರಡಿದವನು; ಗುರು ಲಿಂಗ ಜಂಗಮ ದಾಸೋಹ ಪಾದೋದಕ ಪ್ರಸಾದದ ಹಾದಿಯನ್ನು ಎಲ್ಲರಿಗೂ ತೋರಿದವನು; ಶಿವಾಚಾರದ ಬೆಳವಿಗೆಯು ವಿಶೇಷವೇನಲ್ಲವೆಂದು ಬಿಜ್ಜಳ ತರ್ಕಿಸಲು ಹಲವು ಪವಾಡಗಳ ಮೂಲಕ ಅವನನ್ನು ಒಡಂಬಡಿಸಿ ಅವನಿಂದ ಅಹುದೆನಿಸಿದವನು; ತನ್ನ ಲೋಕವನ್ನುದ್ಧರಿಸುವ ಕಾರ್ಯ ಮುಗಿದ ಬಳಿಕ ಲಿಂಗದೊಳಗೆ ಬಯಲಾದವನು; ತನ್ನ ನಂತರ ಲೋಕ ಬದುಕಬೇಕೆಂದು ಸೆರಗ ಕೊಟ್ಟವನು; ನಾನು ಹಿಂದೆ ಉಳಿಯುವೆನೆಂದು ನನಗೆ ಮುಂದಣ ಗತಿಯ ತೋರಿದವನು ಬಸವಣ್ಣ. ಹೀಗೆ ಭಾವಪರವಶಳಾಗಿ ನುಡಿಯುವ (ವ.೪) ನಾಗಾಯಿ ಇನ್ನೊಂದು ವಚನದಲ್ಲಿ ಬಸವಣ್ಣನು ಮರ್ತ್ಯಕ್ಕೆ ಬಂದದ್ದರಿಂದ ಭಕ್ತಿಯ ಬೆಳವಿಗೆ ದೆಸೆದೆಸೆಗೆ ಪಸರಿಸಿ, ಸ್ವರ್ಗ ಮರ್ತ್ಯ ಪಾತಾಳದೊಳಗೆಲ್ಲಾ ಪ್ರಸಿದ್ಧಿಯನ್ನು ಪಡೆಯಿತು; ಬಸವಣ್ಣ ಲಿಂಗೈಕ್ಯನಾಗಲು ಅವನೊಡನೆ ಅವನ ಭಕ್ತಿಯೂ ಹೋಯಿತು; ಅವನು ತಿಳಿಯಹೇಳಿದ ಸದಾಚಾರವೂ ಹೋಯಿತು; ಅವನೊಡನೆ ಅಸಂಖ್ಯಾತ ಮಹಾಗಣಗಳೂ ಹೋದರು, ಅದರ ಫಲವಾಗಿ ಮಹಾಮನೆ ಶೂನ್ಯವಾಯಿತು. ನನ್ನನ್ನು ನಿನ್ನೊಡನೆ ಕರೆದೊಯ್ಯದೆ ಹೋದೆಯಲ್ಲಾ ಎಂದು ಬಸವಣ್ಣ ಲಿಂಗೈಕ್ಯನಾದಾಗ ಮನದುಂಬಿ, ಕಂಠ ಗದ್ಗದಿತಳಾಗಿ ನುಡಿಯುವಳು (ವ.೧೦).

ಬಸವಣ್ಣನ ಒಕ್ಕುದ ಕೊಂಡೆನಾಗಿ 'ಎನ್ನ ಭವದ ಬಳ್ಳಿಯ ಬೇರು ಹರಿಯಿತ್ತಯ್ಯಾ' ಎನ್ನುವ ನಾಗಾಯಿ, 'ಬಸವನ ಬೆಸಲಾದ ಬಾಣತಿ ನಾನಯ್ಯಾ' ಎಂದು ಒಂದು ಘಟ್ಟದಲ್ಲಿ ಹೇಳುವಳು. ಬಸವಣ್ಣನನ್ನು ದೈವಸ್ವರೂಪವಾಗಿ ಕಂಡ ಆಕೆ 'ಬಸವನೆ ಮುಖಸಜ್ಜೆ, ಬಸವನೆ ಅಮಳೋಕ್ಯ. ಬಸವನ ನಾನೆತ್ತಿ ಮುದ್ದಾಡಿಸುವೆನು. ಬಸವಾ, ಸಂಗನಬಸವಿದೇವಾ ಜಯತು. ಬಸವಾ, ಸಂಗನ ಬಸವಲಿಂಗಾ ಜಯತು' ಎಂದು ಸಂಕೀರ್ತಿಸುವಳು. ತನಗೂ ಸೋದರ ಬಸವಣ್ಣನಿಗೂ ಇರುವ ರಕ್ತಸಂಬಂಧಕ್ಕೂ ಮೀರಿದ ಅಲೌಕಿಕ ಸಂಬಂಧವನ್ನು 'ಬಸವಗೂ ಎನಗೂ ಭಾವಭೇದವಿಲ್ಲ; ಬಸವಗೂ ಎನಗೂ ರಾಸಿಕೂಟವುಂಟು' ಎಂದು ಹೀಗೆ ಗುರುತಿಸುವಳು. ಆತ್ಮೀಯ ವಸ್ತುವೊಂದನ್ನು ಕಳೆದುಕೊಂಡ ಸಂದರ್ಭದಲ್ಲಿ ನಾಗಾಯಿಯ ದುಃಖಾರ್ದ್ರ ಮನಸ್ಸು ಸಂಕೀರ್ಣವೂ ಸಮ್ಮಿಶ್ರವೂ ಆದ ಭಾರ ತುಮುಲಗಳಿಗೆ ಈಡಾದುದನ್ನು ಅವಳ ಒಂದು ವಚನವಲ್ಲಿ (೧೧) ನಾವು ಕಾಣಬಹುದು.

ಬಸವಣ್ಣನ ಬಗೆಗಿನ ಅವಳ ಮನದಾಳದ ಪ್ರೀತಿ, ಗೌರವ, ಅಭಿಮಾನಗಳು ಅವಳ ಈ ಮಾತುಗಳಲ್ಲಿ ಎರಕಗೊಂಡಿದೆ:

*ಬಸವ ಮಾಡಿದಡಾಯ್ತು ಭುವಿಗೆ ಭಕ್ತಿಯ ಬೆಳಕು.*
*ಬಸವ ಮಾಡಿದಡಾಯ್ತು ಗುರು-ಲಿಂಗ-ಜಂಗಮ ಪೂಜೆ.*
*ಬಸವ ಮಾಡಿದಡಾಯ್ತು ಲಿಂಗಾಂಗ ಸಾಮರಸ್ಯದ ಸುಧೆಯು.*
*ಬಸವ ಮಾಡಿದಡಾಯ್ತು ಭಕ್ತ ಭಕ್ತರಲಿ ಸಮಭಾವ*
*ಎನ್ನ ಕಂಗಳೊಳಗಿಂಬಾದ ಬಸವ,*
*ಎನ್ನ ಮನ ಭಾವಂಗಳೊಳಗಾದ ಬಸವ,*
*ಎನ್ನಂತರಂಗ ತುಂಬಿ ನಿಂದಾತ ಬಸವ.*
*ಹೊರಗೆ ಬಸವನ ಕೀರುತಿ.*
*ಬಸವನ ಮಣಿಹವೆ ಎನ್ನ ಪ್ರಾಣವಿಂದಿಂಗೆ*
*ಬಸವಣ್ಣಪ್ರಿಯ ಚೆನ್ನಸಂಗಯ್ಯ ಸಾಕ್ಷಿಯಾಗಿ*
*ಬಸವಾ ಬಸವಾ ಜಯತು*
*ಗುರುಸಂಗನಬಸವಾ ಜಯತು.* (೧೨)

ನನ್ನ ಆರು ಬಗೆಯ ಸೂತಕಗಳನ್ನು (ಕುಲ, ಛಲ, ತನು, ಮನ, ನೆನಹು, ಭಾವ ಸೂತಕಗಳು) ಕಳೆದಾತ; ನನ್ನ ಅರುಹು ಮರಹಿನ ಸಂದು ಸಂಶಯವ ಬಿಡಿಸಿದಾತ; ನನ್ನನ್ನು ತನ್ನೊಳಗೆ, ತನ್ನ ಎನ್ನೊಳಗೆ ಇಂಬಿಟ್ಟುಕೊಂಡಾತ; ನಿಜದ ನಿರ್ವಯಲ ಬಾಗಿಲ ನಿಜವ ತೋರಿದಾತ ಬಸವಣ್ಣನೆಂದು ಹೃದಯತುಂಬಿ ನುಡಿಯುವಳು (೬).

ಬಸವಣ್ಣನ ಅಗಲಿಕೆಯ ನೋವು ಅವಳ ಅಂತರಂಗವನ್ನು ಅಲುಗಿಸಿಬಿಟ್ಟಿದೆ. ಬಸವಣ್ಣನ ವ್ಯಕ್ತಿಮತ್ವಾದ ಚಿತ್ರವನ್ನು ಕಲ್ಪಿಸಿಕೊಳ್ಳುತ್ತಾ ಭಾಷ್ಪಲೋಚನೆಯಾಗಿ

*ಭಕ್ತಿಯ ತವನಿಧಿಯೆ, ಮುಕ್ತಿಯ ಮೂರುತಿಯೆ,*
*ಲಿಂಗ ಜಂಗಮದ ಚೈತನ್ಯವೆ*
*ನಿಮ್ಮಗಲಿ ಎಂತು ಸೈರಿಸುವೆನು?*
*ಎಲೆ ಅಯ್ಯಾ ಪರಮ ಗುರುವೆ,*
*ಆಹಾ ಎನ್ನ ಅಂತರಂಗದ ಜ್ಯೋತಿಯೆ,*
*ನಿಮ್ಮ ಒಕ್ಕ ಶೇಷ ಪ್ರಸಾದವನಿಕ್ಕಿ*
*ಎನ್ನ ಪಾವನವ ಮಾಡಿ ಉಳುಹಿದೆಯಯ್ಯಾ.*
*ಲಿಂಗವೆ ಎನಗಿನ್ನಾರು ಹೇಳಯ್ಯಾ ನೀವಲ್ಲದೆ?*

*ಬಸವಣ್ಣಪ್ರಿಯ ಚೆನ್ನಸಂಗಯ್ಯಾ,*
*ನೀವಗಲಿದಡೆ ಎನ್ನ ಪ್ರಾಣ ನಿಮ್ಮೊಳಗಲ್ಲದೆ ಅಗಲಬಲ್ಲುದೆ?* (೧೭)

ಎಂದು ದುಃಖಿಸುವಳು. ದುಃಖದ ಈ ತೀವ್ರತೆಯನ್ನು ಲಕ್ಷಿಸಿದಾಗ ಬಸವಣ್ಣ ಹಾಗೂ ನಾಗಾಯಿಯ ಮಧುರ ಮೈತ್ರಿಯ ನೆನಪಾಗುತ್ತದೆ. ಅದು ಎಷ್ಟು ಗಾಢವಾದುದೆಂದರೆ, ಬಸವಣ್ಣನ ನಿರ್ಗಮನ ಅವಳ ಬದುಕಿನಲ್ಲಿ ತುಂಬಲಾಗದ ಶೂನ್ಯತೆಯನ್ನು ಕವಿಸಿಬಿಟ್ಟಿದೆ. ಅವಳ ಹೃದಯದ ಚೀತ್ಕಾರ ಈ ವಚನದಲ್ಲಿ ಪಡಿಮಿಡಿದಿದೆ:

*ಅಯ್ಯಾ, ನಾನಧವೆ, ಅಯ್ಯಯ್ಯ ಕೈಯ ಕೋಲ ಕೊಂಬರೆ?*
*ಅಯ್ಯಾ, ಎಳೆಗರುವಿನ ಎಳೆಗಂತಿಯನೆಳೆದೊಯ್ವರೆ ಭಕ್ತರು?*

*ಅಯ್ಯೋ ಅಯ್ಯೋ ಎನಲೊಯ್ವರೆ,*
*ಬಸವಣ್ಣಪ್ರಿಯ ಚೆನ್ನಸಂಗಯ್ಯಾ?* (೨)

ಅಧವೆ, ಕೈಯ ಕೋಲು, ಎಳೆಗರು, ಎಳಗಂತಿ-ಈ ನುಡಿಚಿತ್ರಗಳು ತುಂಬು ಶಕ್ತಿಯುಳ್ಳವೂ, ಧ್ವನಿಪೂರ್ಣವೂ, ಅರ್ಥಪ್ರಚುರತೆಯಿಂದ ಕೂಡಿದವೂ ಆಗಿವೆ. ಬಸವಣ್ಣ ಲಿಂಗೈಕ್ಯನಾದ ಮೇಲೆ ನಾಗಲಾಂಬಿಕೆಗೆ ದಿಕ್ಕಿಲ್ಲದಂತಾಗಿರುವುದು. ಬದುಕಿಗೆ ಊರೆಗೋಲಾಗಿದ್ದುದನ್ನು ಸೆಳೆದುಕೊಂಡಾಗ ಆಧಾರತಪ್ಪಿದಂತಾಗಿರುವುದು, ತಾಯಿ-ಮಗುವಿನ ಸಂಬಂಧದಲ್ಲಿ ತಾಯಿಯ ಅಗಲಿಕೆ ಮಗುವಿಗೆ ತುಂಬಲಾಗದ ನಷ್ಟವಾಗಿರುವುದು (ಎಳೆಗರು ಮತ್ತು ಹೊಸದಾಗಿ ಕರುಹಾಕಿರುವ ಹಸುವಿನ ಸಂಬಂಧದ ಪ್ರತಿಮೆ ಎಷ್ಟು ಅರ್ಥವತ್ತಾದುದು !) ಇಲ್ಲಿಯ ಕೇಂದ್ರ ನೆಲೆ. ಬಸವಣ್ಣ ಅಕ್ಕ ನಾಗಾಯಿಯ ಬದುಕಿನಲ್ಲಿ ಎಂತಹ ಮಹತ್ತರ ಪಾತ್ರವನ್ನು ವಹಿಸಿದ್ದನೆಂಬುದನ್ನು ನಾಗಲಾಂಬಿಕೆಯ ವಚನಗಳು ತಿಳಿಯಪಡಿಸುತ್ತವೆ. ಅವರಿಬ್ಬರ ಸಂಬಂಧ ಮಾತಿಗೆ ಮೀರಿದ ಸೋದರ ಸಂಬಂಧ. ಅವಳ ಕಣ್ಣು-ಮನ-ಭಾವ-ಅಂತರಂಗಗಳಲ್ಲಿ ಬಸವಣ್ಣ ತುಂಬಿ ನಿಂತಿರುವನು. ಅವನು ಅವಳ ಅಂತರಂಗದ ಜ್ಯೋತಿ; ಪ್ರಾಣ. ಇಂತಹ ಮಧುರ ಮೈತ್ರಿ ಅನನ್ಯವಾದುದು. ಇಂತಹ ವಿಶಿಷ್ಟ ವ್ಯಕ್ತಿತ್ವದ ನಾಗಲಾಂಬಿಕೆಯನ್ನು ಅರ್ಥೈಸಿಕೊಳ್ಳುವಲ್ಲಿ ನಮ್ಮ ಪುರಾಣಕವಿಗಳು ಹಾದಿ ತಪ್ಪಿರುವರು. ಚೆನ್ನಬಸವಣ್ಣನ ಜನನ ವಿಚಾರದಲ್ಲಿಯಂತೂ ಪರಂಪರೆ ಒದಗಿಸಿದ ಕಪೋಲಕಲ್ಪಿತ ವಿಕೃತ ಸಂಗತಿಯಿಂದ ನಮ್ಮ ಕವಿಗಳು ನಗೆಗೀಡಾಗಿರುವರು. ಕಕ್ಕಯ್ಯನ ಪ್ರಸಾದದಿಂದ, ಬಸವಣ್ಣನ ಒಕ್ಕುಮಿಕ್ಕದ್ದರಿಂದ, ಶಿವನ ಪ್ರಸಾದದಿಂದ ಚೆನ್ನಬಸವಣ್ಣ ಜನಿಸಿದನು ಎಂದು ವಾಚ್ಯವಾಗಿ ಹೇಳುವ ನಮ್ಮ ಕವಿಗಳ ಬುದ್ಧಿಗೇಡಿತನಕ್ಕೆ ಬೇರೆ ಉದಾಹರಣೆ ಬೇಕೆ ?'ಪ್ರಸಾದದಿಂದುದಯವಾದಾತ ನೀನಲ್ಲವೆ ಚೆನ್ನಬಸವಯ್ಯ' (೧) ಎಂಬ ಮಾತು 'ನಿಮ್ಮ ಒಕ್ಕ ಶೇಷ ಪ್ರಸಾದವನಿಕ್ಕಿ ಎನ್ನ ಪಾವನವ ಮಾಡಿ ಉಳುಹಿದೆಯಯ್ಯಾ'

ಎಂಬ ಮಾತು ಪರಸ್ಪರ ಪೂರಕವಾಗಿವೆ. ಅಕ್ಕ ನಾಗಾಯಿ ತನ್ನ ಜೀವಿತದ ಕೊನೆಯವರೆವಿಗೂ ಬಸವಣ್ಣನ ಮನೆಯಲ್ಲಿದ್ದವಳು; ಚೆನ್ನಬಸವಣ್ಣನ ಜನನವಾದುದು ಪಾಲನೆ - ಪೋಷಣೆ - ವಿದ್ಯಾಭ್ಯಾಸ ಎಲ್ಲವೂ ಆದುದು ಇಲ್ಲಿಯೇ. ಬಸವಣ್ಣ ಬೆಳೆದುದು ಅಕ್ಕನಾಗಾಯಿಯ ಕಟ್ಟೆಕ್ಕರೆಯಲ್ಲಿ, ಚೆನ್ನಬಸವಣ್ಣ ಬೆಳೆದುದು ಬಸವಣ್ಣನ ಪ್ರೀತಿಯ ಕಣ್ಕಾಪಿನಲ್ಲಿ! ಇಲ್ಲಿ ಪ್ರಸಾದವು ದೈಹಿಕ-ಮಾನಸಿಕ ಬೆಳವಣಿಗೆಗೆ ಪೋಷಕವಾಗಿದೆ. ಇದು ಸೂಚ್ಯಾರ್ಥ. ಕಕ್ಕಯ್ಯ ಬಸವಣ್ಣನ ಹಿರಿಯ ಸಮಕಾಲೀನ, ವಯಸ್ಸಿನಲ್ಲಿ ಹಿರಿಯ. ಅವನ 'ಪ್ರಸಾದ'ವೆಂದರೆ, ಅವನ ಪ್ರೀತಿ, ವಾತ್ಸಲ್ಯಗಳ ಜೀವಸತ್ವದಿಂದ ನಾಗಾಯಿ ಹಾಗೂ ಚೆನ್ನಬಸವಣ್ಣ ಬೆಳೆದರು ಎಂಬ ಧ್ವನಿತಾರ್ಥದಲ್ಲಿ ಆ ಮಾತನ್ನು ಸ್ವೀಕರಿಸಬೇಕು. 'ಪ್ರಸಾದ'ಎನ್ನುವುದು ವಿಶಿಷ್ಟ ಅರ್ಥವುಳ್ಳ ವೀರಶೈವ ಪಾರಿಭಾಷಿಕ ಪದ.

ನಾಗಲಾಂಬಿಕೆಯದು ಘನವಾದ ವ್ಯಕ್ತಿತ್ವ. 'ಬಸವನ ಬೆಸಲಾದ ಬಾಣತಿ' ಎಂದು ಹೇಳುವಲ್ಲಿ ಅವಳ ತಾಯ್ತನದ ಮಧುರ ಸೆಲೆ ನಮ್ಮ ಮನಸ್ಸನ್ನು ತಟ್ಟುತ್ತದೆ. ಅವಳ ವಚನಗಳಲ್ಲಿ ಬಸವಣ್ಣನ ವ್ಯಕ್ತಿತ್ವ ದಳದಳ ಅರಳಿದೆ, ಭವ್ಯವಾಗಿ ಮೂಡಿದೆ. ಕೆಳಗಿನ ಈ ಒಂದು ವಚನ (೧೫) ಅವಳ ದಿವ್ಯ ವ್ಯಕ್ತಿತ್ವವನ್ನು ಗ್ರಹಿಸಲು ನೆರವಾಗುತ್ತದೆ:

*ಶ್ರೀಗುರುವೆ ತಾಯಿ-ತಂದೆಯಾಗಿ, ಲಿಂಗವೆ ಪತಿಯಾಗಿ,*
*ಜಂಗಮವೆ ಅತ್ತೆ-ಮಾವಂದಿರಾಗಿ, ಶಿವಭಕ್ತರೆ ಬಾಂಧವರಾಗಿ,*
*ಸತ್ಯಸದಾಚಾರವೆಂಬ ಮನೆಗೆ ಕಳುಹಿದರಾಗಿ,*
*ಶರಣಸತಿ ಎಂಬ ನಾಮ ನಿಜವಾಯಿತ್ತು.*
*ಆದಂತೆ ಇರುವೆ, ಹಿಂದುಮುಂದರಿಯದೆ ನಡೆವೆ.*
*ಮನಕ್ಕೆ ಮನ ಸಾಕ್ಷಿಯಾಗಿ ಮಾಡುವೆ,*
*ಬಸವಣ್ಣಪ್ರಿಯ ಚೆನ್ನಸಂಗಯ್ಯಾ ನಿಮ್ಮಡಿಗಳಿಗೆ.*

■

# ಪ್ರಾಚೀನ ಸಾಹಿತ್ಯ : ದೈವಸಮನ್ವಯದೃಷ್ಟಿ

ಡಾ॥ ಟ.ವಿ. ವೆಂಕಟಾಚಲಶಾಸ್ತ್ರೀ

---

ಲೋಕವನ್ನು ಸೃಷ್ಟಿಸಿರುವ, ಅದನ್ನು ನಿಯಂತ್ರಿಸುತ್ತಿರುವ ಒಂದು ಅಲೌಕಿಕಶಕ್ತಿ ಇದೆ ಎಂದೂ ಆ ಶಕ್ತಿಯ ಸ್ವರೂಪವನ್ನೂ ಪ್ರಭಾವವನ್ನೂ ತಿಳಿಯಲು ಪ್ರಯತ್ನಿಸುವುದೇ ನಮ್ಮ ಬದುಕಿನ ಗುರಿ ಎಂದೂ ಹೇಳುವವರಿದ್ದಾರೆ ; ಆ ಶಕ್ತಿಗೆ ಬ್ರಹ್ಮ, ಸತ್ಯ, ಪುರುಷ, ದೇವರು, ಪರಮಾತ್ಮ ಎಂದು ಬಗೆಬಗೆಯಾಗಿ ಹೆಸರು ಕೊಟ್ಟು, ಬದುಕಿನ ಹುಟ್ಟು-ಸಾವು, ಕಷ್ಟ-ಕಾರ್ಪಣ್ಯಗಳಲ್ಲಿ ಅವರ ಪಾತ್ರವನ್ನು ತಿಳಿಯುವ ಪ್ರಯತ್ನಗಳ ಸಮುಚ್ಚಯವೇ ವಿದ್ಯೆ ಎಂಬುದಾಗಿ ತಿಳಿದವರೂ ಇದ್ದಾರೆ. ಈ ವಿದ್ಯೆಯ ಸಾಧನೆಯನ್ನು ತಮತಮಗೆ ತೋರಿದ ರೀತಿ ನೀತಿಗಳಲ್ಲಿ ನಡೆಸಿದವರು ಇತರರಿಗೆ ಮಾರ್ಗದರ್ಶಕರೆನ್ನಿಸಿ, ಅವರ ಮತಿಯ ಚಿಂತನೆಗಳೇ ಮತಗಳಾಗಿ, ಹಿಡಿದ ದಾರಿಗಳೇ ಪಂಥಗಳಾಗಿ, ಇಂದು ಲೋಕಸಮಸ್ತವೂ ನೂರು ಮತ ಸಾವಿರಪಂಥಗಳ ಹೆಬ್ಬೀಡಾಗಿದೆ; ಅಜ್ಞಾನಿಗಳ, ಅರ್ಧಜ್ಞಾನಿಗಳ ಗ್ರಹಿಕೆಗಳಿಂದ ಗೊಂದಲದ ಗೊಂಡಾರಣ್ಯವಾಗಿ ಪರಿಣಮಿಸಿದೆ. ಸೀಳುಗಳು ಹೆಚ್ಚಿದಷ್ಟೂ ಗೋಜಲೂ ಹೆಚ್ಚುವುದು ಸಹಜವೇ. ಬೇರೆಯ ಮತ ಪಂಥಗಳಿಗಿಂತ ತನ್ನ ಮತ ಪಂಥಗಳೇ ಸರಿಯೆಂದೂ ಹೆಚ್ಚೆಂದೂ ವಾದಿಸುವವರು, ಹೋರಾಡುವವರ ವಿಜೃಂಭಣೆ ಬೆಳೆದು, ಲೋಕದ ಸಾಮಾಜಿಕ ಸಾಂಸ್ಕೃತಿಕ

ಜೀವನಗಳಲ್ಲಿ ಪ್ರತ್ಯೇಕತೆ ವಿಷಮತೆಗಳ ಗೋಡೆಗಳು ಮೇಲೇಳುತ್ತವೆ ; ಸಂಘರ್ಷಗಳಿಂದ ತಲೆಗಳು ಹಾರುತ್ತಿವೆ; ದರ್ಪ ಡಾಂಭಿಕತೆಗಳು ಮೇಲುಕೀಳುಗಳ ಮೆಟ್ಟಿಲುಗಳನ್ನು ಕಟ್ಟುತ್ತಿವೆ.

ಈ ಅವನತಿಯಿಂದ ಲೋಕಜೀವನ ಪಾರಾಗುವುದು ಹೇಗೆ? ಇದರ ಉತ್ತರ, ವೇದೋಪನಿಷತ್ತುಗಳ ಕಾಲದಿಂದ ತೊಡಗಿ, ನಮ್ಮ ಕಾಲದಲ್ಲಿ ನಮ್ಮಂತೆಯೇ ಬಾಳಿ ಬದುಕಿದ ರಾಮಕೃಷ್ಣ ವಿವೇಕಾನಂದರ, ಗಾಂಧಿ ಅರವಿಂದರವರೆಗೆ ಹಿರಿಯ ಜೀವರ ಜೀವನ ಸಾಧನೆಗಳಲ್ಲಿ ಹುದುಗಿಕೊಂಡಿದೆ. ಮತಸಾಮರಸ್ಯ, ಧರ್ಮಸಹಿಷ್ಣುತೆ ಮತ್ತು ದೈವ ಸಮನ್ವಯಗಳೆಂಬವೇ ಆ ಉತ್ತರ. ಈಗ ದೈವಸಮನ್ವಯ ಎಂಬುದರ ವಿಚಾರವನ್ನು ನೋಡೋಣ.

ಬಹು ಪೂರ್ವಕಾಲದಲ್ಲಿಯೇ ಎಂದರೆ ಋಗ್ವೇದ ಸಂಹಿತೆಯ ಕಾಲದಲ್ಲಿಯೇ, ದೇವರು ಒಬ್ಬನೇ, ಅವನನ್ನು ಹಲವು ಹೆಸರುಗಳಿಂದ ಕರೆಯುತ್ತಾರೆ ಎಂಬ ಭಾವನೆ ಉಂಟಾಗಿದ್ದಿತು. ದೀರ್ಘತಮಸ್ ಎಂಬ ಋಷಿಯ ಸೂಕ್ತವಿದು :

*ಇಂದ್ರಂ ಮಿತ್ರಂ ವರುಣಮಗ್ನಿಮಾಹುರಥೋ*
*ದಿವ್ಯಃ ಸುಪರ್ಣೋ ಗರುತ್ಮಾನ್*
*ಏಕಂ ಸತ್ ವಿಪ್ರಾ ಬಹುಧಾ ವದಂತ್ಯಗ್ನಿ*
*ಯಮಂ ಮಾತರಿಶ್ವಮಿಮಾಹುಃ//*

(ಅವನನ್ನು ಇಂದ್ರ ಮಿತ್ರ ವರುಣ ಅಗ್ನಿ ಎಂದು ಕರೆಯುತ್ತಾರೆ; ಹೀಗೆಯೇ ಇವನು ಒಳ್ಳೆಯ ರೆಕ್ಕೆಗಳುಳ್ಳ ಗರುಡನೂ ಆಗಿದ್ದಾನೆ. ಇರುವವನು ಒಬ್ಬನೇ; ಬಲ್ಲವರು ಅವನನ್ನು ಅಗ್ನಿ, ಯಮ, ಮಾತರಿಶ್ವ ಎಂಬುದಾಗಿ ಅನೇಕ ಹೆಸರುಗಳಿಂದ ಕರೆಯುತ್ತಾರೆ)

''ಕಸ್ಮೈ ದೇವಾಯ ಹವಿಷಾ ವಿದೇಮ'' ಎಂಬುದಾಗಿ ಪ್ರಶ್ನೆಹಾಕಿಕೊಂಡ ಆರ್ಯರು ತಮ್ಮನ್ನು ರಕ್ಷಿಸುವ, ಉದ್ಧರಿಸುವ ಪರಮೋಚ್ಚ ಶಕ್ತಿಯನ್ನು ಕಂಡುಹಿಡಿಯಲು ನಡೆಸಿದ ಅವಿಶ್ರಾಂತ ಶೋಧನೆಯ ಫಲವೆಂದರೆ, ಹೆಸರುಗಳು ಬೇರೆಯೇ ಹೊರತು ದೈವತತ್ವ ಒಂದೇ ಎಂಬ ಘನಸತ್ಯದ ದರ್ಶನ. ಇದರ ಮನವರಿಕೆ ಮಾನವ ಸಮಾಜದಲ್ಲಿ ಸರಿಯಾಗಿ ಆಗದಿದ್ದುದರಿಂದಲೇ, ಮುಂದೆ ಮತಭ್ರಾಂತಿಯೆಂಬುದು ದಟ್ಟೈಸಲು ಕಾರಣವಾಯಿತು. ಈ ಭ್ರಾಂತಿಯ ಕಾರ್ಮೋಡಗಳನ್ನು ಚದುರಿಸಲು ಹೂಡಿದ ಪ್ರಯತ್ನಗಳು ಹಲವಾರು.

ಜನಸ್ವಭಾವ ವಿಲಕ್ಷಣವಾದುದು. ಯಾವುದನ್ನು ನಂಬಬೇಕು, ನೆಚ್ಚಬೇಕು ಎಂಬ ವಿಷಯದಲ್ಲಿ ಅದು ಸ್ಥಿರಚಿತ್ತತೆಯಿಂದ ವರ್ತಿಸುವ ಸಂದರ್ಭಗಳು ತೀರ ಕಡಮೆ. ನಂಬುಗೆ ನೆಚ್ಚಿಕೆಗಳಿಗೆ ಬೇಕಾಗಿರುವುದು ಮನೋದಾರ್ಢ್ಯದೊಂದಿಗೆ ಪ್ರವರ್ತಿಸುವ ತಾದಾತ್ಮ್ಯ ವಿವೇಚನೆ, ಭಕ್ತಿಭಾವಗಳಲ್ಲದೆ ಬೇರೆಯಲ್ಲ ಎನ್ನುವುದು ಮೊದಲು ಖಚಿತವಾದರೆ ಉಳಿದುವು

ತಮ್ಮಿಂದ ತಾವೇ ಸಿದ್ಧವಾಗುತ್ತವೆ. ಶ್ರದ್ಧಾವಂತನಿಗೆ ವಸ್ತುವಿನ ಅರಿವು ನಿಶ್ಚಿತ, ದುರ್ಬಲ, ಚಂಚಲಚಿತ್ತನಿಗೆ ವಸ್ತುವಿನ ಅರಿವು ಎಂದೂ ಸಂದೇಹಗ್ರಸ್ತ. ಶ್ರದ್ಧಾವಂತನು ಹಲವನ್ನು ನಂಬಿ, ನೆಚ್ಚಿ ನೋಯಲು ನರಳಲು ಎಂದೂ ಪ್ರಯತ್ನಿಸುವುದಿಲ್ಲ; ಅವನು ನಂಬುವುದು, ನಚ್ಚುವುದು ಒಂದು ಶಕ್ತಿಯನ್ನು, ಒಂದು ದೈವವನ್ನು. ಅದು ಪರಮಾರ್ಥವೆಂದು ಅವನು ಬಲ್ಲನು. ಆ ಒಂದು ಶಕ್ತಿ, ಒಂದು ದೈವ ಹಲವಾಗಿ ರೂಪಗೊಂಡಿದೆ, ಹೆಸರು ತಳೆದಿದೆ ಎಂಬುದು ಅವನಿಗೆ ಮನವರಿಕೆಯಾಗಿರುವುದರಿಂದ, ಆ ಹಲವು ಸಹ ಅವನಿಗೆ ಒಂದೇ ಆಗಿ ಕಾಣಿಸುತ್ತದೆ; ಕರುಣಿಸುತ್ತದೆ. ಪ್ರಸ್ಥಾನಭೇದಗಳೆಂಬವು ಆಗ ಸಂಘರ್ಷಗಳನ್ನು ಹುಟ್ಟಿಸುವುದಿಲ್ಲ. ಸತ್ಯದರ್ಶನದ ವಿವಿಧ ಪಥಗಳಾಗಿ ಪರಿಣಮಿಸುತ್ತವೆ ಎನ್ನುವುದು ವಿದಿತ.

ಆಚಾರ್ಯ ಅಕಲಂಕರು (ಕ್ರಿ.ಶ. 7-8ನೆಯ ಶತ) ರಚಿಸಿದ ಅಕಲಂಕ ಸ್ತೋತ್ರದೊಳಗಿನ ಈ ನುಡಿಯನ್ನು ನೋಡಿ :

*ಯೋ ವಿಶ್ವಂ ವೇದವೇದ್ಯಂ ಜನನಜಲನಿಧೇರ್ಭಂಗಿನಃ ಪಾರದೃಶ್ವಾ*
*ಪೌರ್ವಾಪರ್ಯಾವಿರುದ್ಧಂ ವಚನಮನುಪಮಂ ನಿಷ್ಕಲಂಕಂ ಯದೀಯಂ*
*ತಂ ವಂದೇ ಸಾಧುವಂದ್ಯಂ ಸಕಲಗುಣನಿಧಿಂ ಧ್ವಸ್ತದೋಷದ್ವಿಷಂತಂ*
*ಬುದ್ಧಂ ವಾ ವರ್ಧಮಾನಂ ಶತದಲನಿಲಯಂ ಕೇಶವಂ ವಾ ಶಿವಂ ವಾ ॥*

(ಯಾವಾವನು ಜ್ಞಾನದ ಎಲ್ಲೆಯನ್ನು ನೋಡಿರುವನೋ ಯಾವಾತನು ಸಂಸಾರಸಾಗರವನ್ನು ಭಂಗಿಸುವವನೋ ಯಾವಾತನ ರಾಣಿ ಸಮಸ್ತವ್ಯಾಪಕವೂ ವೇದವೇದ್ಯವೂ ಪೌರ್ವಾಪರ್ಯವಿರುದ್ಧವೂ ಅನುಪಮವೂ ನಿಷ್ಕಳಂಕವೂ ಆಗಿದೆಯೋ ಆ ಸಾಧುವಂದ್ಯನೂ ಸಕಲಗುಣನಿಧಿಯೂ ದೋಷವೆಂಬ ವೈರಿಯನ್ನು ಧ್ವಂಸಮಾಡುವವನೂ ಆದವನು ಬುದ್ಧನಿರಲಿ ವರ್ಧಮಾನನಿರಲಿ ಬ್ರಹ್ಮನಿರಲಿ ಕೇಶವನಿರಲಿ ಶಿವನಿರಲಿ ಅವನಿಗೆ ನಾನು ವಂದಿಸುತ್ತೇನೆ).

ಈ ಉಕ್ತಿಯಲ್ಲಿ ಪ್ರಕಟವಾಗಿರುವ ಸರ್ವಸಂಗ್ರಾಹ್ಯವಾದ ಸಂದೇಶ ಗಮನಿಸತಕ್ಕದ್ದು. ದೈವಾಸ್ತಿಕ್ಯವನ್ನು ಒಪ್ಪದ ಜೈನಧರ್ಮ ಸಹ ಹೇಗೆ ಪ್ರಮುಖವಾದ ಎಲ್ಲ ಪಂಥಗಳನ್ನೂ ಆರಾಧ್ಯಮೂರ್ತಿಗಳನ್ನೂ ಸಮಾನಭಾವದಿಂದ ಕಂಡಿದೆಯೆಂಬುದನ್ನು ಗಮನಿಸಿದಾಗ, ಪ್ರಾಚೀನರಾದ ಆಚಾರ್ಯರಿಗೆ ಸಾಮರಸ್ಯದ ದೃಷ್ಟಿ ತರುವ ವಿಶ್ವಭ್ರಾತೃತ್ವದ ಪ್ರಯೋಜನ ಪರಿಣಾಮಗಳು ಚೆನ್ನಾಗಿ ಮನವರಿಕೆಯಾಗಿದ್ದುವೆಂದು ತಿಳಿಯುತ್ತದೆ.

ಇಂತಹ ತಿಳುವಳಿಕೆಯೇ ಭರತಖಂಡದಲ್ಲಿ ''ಭಿನ್ನತೆಯಲ್ಲಿ ಏಕತೆ'' ಎಂಬ ದೃಷ್ಟಿಯನ್ನು ಉದ್ದಕ್ಕೆ ಪೋಷಿಸಿಕೊಂಡು ಬಂದಿರುವುದಾಗಿದೆ. ಈ ತಿಳುವಳಿಕೆಗೆ ಇಂಬುಗೊಟ್ಟಿರುವ ಇಂತಹ ಕೆಲವು ಆರ್ಯೋಕ್ತಿಗಳನ್ನು ಮುಂದೆ ಗಮನಿಸೋಣ :

ಕಾಶ್ಮೀರದ ಪುಷ್ಪದಂತ ಕವಿಕೃತವಾದ (ಸು. ೮೦೦) 'ಮಹಿಮ್ನ ಸ್ತವ'ದ ಆಶಯವನ್ನು ಇಲ್ಲಿ ಗಮನಿಸಬೇಕು :

*ತ್ರಯೀ ಸಾಂಖ್ಯಂ ಯೋಗಃ ಪಶುಪತಿಮತಂ ವೈಷ್ಣವಮಿತಿ*
*ಪ್ರಭಿನ್ನೇ ಪ್ರಸ್ಥಾನೇ ಪರಮಿದಮದಃ ಪಥ್ಯಮಿತಿ ಚ*
*ರುಚೀನಾಂ ವೈಚಿತ್ರ್ಯಾತ್ ಋಜುಕುಟಿಲ ನಾನಾ ಪಥ ಜುಷಾಮ್*
*ನೃಣಾಮೇಕೋಗಮ್ಯಃ ತ್ವಮಸಿ ಪಯಸಾಮರ್ಣವ ಇವ //*

(ಹೇ ಸ್ವಾಮಿ ! ವೇದಗಳು, ಸಾಂಖ್ಯ, ಯೋಗ ಪಾಶುಪತ ಮತ್ತು ವೈಷ್ಣವ ಇತ್ಯಾದಿ ಮತಗಳು ಇದು ಸರಿ, ಅದು ಸರಿ ಎಂಬ ವಿಭಿನ್ನ ಪ್ರಸ್ಥಾನಗಳನ್ನು ತೋರಿಸಿವೆ. ಜನರು ರುಚಿಭೇದದಿಂದ ಇವುಗಳಲ್ಲಿ ನೇರವಾದ, ಬಳಸಾದ ಹಲವು ಮಾರ್ಗಗಳನ್ನು ಹಿಡಿಯುತ್ತಾರೆ. ವಿಭಿನ್ನ ನದಿಗಳ ನೀರಿಗೆ ಸಮುದ್ರ ಹೇಗೋ ಹಾಗೆ, ಅವರೆಲ್ಲರಿಗೂ ನೀನೇ ಗಮ್ಯಸ್ಥಾನ)

''*ಏಕೋ ಗಮ್ಯಃ ತ್ವಮಸಿ*'' ಎಂಬುದು ದೈನಂದಿನ ಸಂಧ್ಯಾವಂದನೆಯ ಮಂತ್ರ
*ಆಕಾಶಾತ್ ಪತಿತಂ ತೋಯಂ ಯಥಾ ಗಚ್ಛತಿ ಸಾಗರಮ್*
*ಸರ್ವದೇವ ನಮಸ್ಕಾರಃ ಕೇಶವಂ ಪ್ರತಿಗಚ್ಛತಿ //*

(ಆಕಾಶದಿಂದ ಬಿದ್ದ ನೀರು ಹೇಗೆ ಸಾಗರವನ್ನು ಹೋಗಿ ಸೇರುತ್ತದೆಯೋ ಹಾಗೆಯೇ ಯಾವುದೇ ದೇವರಿಗೆ ಮಾಡಿದ ನಮಸ್ಕಾರವೂ ಕೇಶವನಿಗೇ ಹೋಗಿ ಮುಟ್ಟುತ್ತದೆ) - ಎಂಬುದಾಗಿ ಸಾರುತ್ತದೆ. ಇಲ್ಲಿ ಕೇಶವ ಎನ್ನುವುದು ದೈವಸತ್ವದ ಒಂದು ಸಂಕೇತವೇ ಆಗಿದೆ. ಸ್ಕಾಂದೋಪನಿಷತ್ತು ಕೇಶವ ಶಿವರನ್ನು ''ಏಕೋ ದೇವಃ ಕೇಶವೋ ವಾ ಶಿವೋವಾ'' ಎಂದು ಏಕೀಕರಿಸಿದೆ.

ಕರ್ನಾಟಕದ ಶಾಸನಗಳಲ್ಲಿ ಸು.೧೧ನೆಯ ಶತಮಾನದಿಂದ ಈ ದೃಷ್ಟಿಯನ್ನು ಮನಗಾಣಬಹುದು. ಬೇಲೂರು ಶಾಸನವೊಂದರ (ನಂ.೫೮; ೧೧೧೭) ಪ್ರಾರ್ಥನಾ ಶ್ಲೋಕದಲ್ಲಿ

*ಶ್ರೀಮತ್ತ್ರೈಲೋಕ್ಯ ಪೂಜ್ಯಾಯ ಸರ್ವಕರ್ಮಸುಸಾಕ್ಷಣೇ*
*ಫಲದಾಯ ನಮೋ ನಿತ್ಯಂ ಕೇಶವಾಯ ಶಿವಾಯಚ //*

ಎಂಬುದಾಗಿ ತಿಳಿಸಿದರೆ ತ್ರೈಪುರುಷ ಸಮಾವೇಶವನ್ನು ಇನ್ನೊಂದು ಪ್ರಾರ್ಥನಾಶ್ಲೋಕ

*ಶ್ರೀವಾಣೀ ಗಿರಿಜಾಧಿಪರ್ ಗರುಡ ಹಂಸೋಕ್ಷಾಸನರ್ ವಾರ್ಧಿರಾ*
*ಜೀವಾದ್ರೀಂದ್ರನಿವಾಸಿಗಳ್ ಮಧುಪ ರಕ್ತಾಂಭೋರುಹೇಂದು ಪ್ರ*

*ಭಾವರ್ ಸತ್ತ್ವರಜಸ್ತಮೋಗುಣಯುತರ್ ದೃಷ್ಟ ತ್ರಿಣೇತ್ರೋತ್ಪಲರ್*
*ಗೋವಿಂದಾಬ್ಜಶಂಕರ ತ್ರಿಪುರುಷರ್ ಪಾಳಿಕ್ಕೆ ನಮ್ಮಂ ಚಿರಂ ॥*

ಎಂಬುದಾಗಿ ಸುಂದರವಾಗಿ ನಿರೂಪಿಸುತ್ತದೆ. ಅಷ್ಟು ಮಾತ್ರವಲ್ಲ "....ಶಿವಾಯಧಾತ್ರೇ ಸುಗತಾಯ ವಿಷ್ಣವೇ ಜಿನಾಯ ತಸ್ಮೈ ಸಕಳಾತ್ಮನೇ ನಮಃ " ಎಂದು ಶಿವ, ಬ್ರಹ್ಮ, ಬುದ್ಧ, ವಿಷ್ಣು ಮತ್ತು ಜಿನರ ಅಭೇದವನ್ನು ಎತ್ತಿ ಹೇಳಿದೆ (ಎಕ.xii, ಟಿಎಂ. ೯, ೧೧೫೧).

ಹಾಗೆಯೇ ಕನ್ನಡಕವಿ ದೇವಚಂದ್ರನ (೧೭೭೦-೧೮೪೧) 'ರಾಜಾತಳೀಕಥಾಸಾರ' ದೊಳಗಿನ ಈ ಸಾರೋಕ್ತಿ ಸಹ ಆ ಸಮಾವೇಶವನ್ನು ಸುಂದರವಾಗಿ ಗರ್ಭೀಕರಿಸಿಕೊಂಡಿದೆ :

*ಕಾರ್ಯೋ ವಿಷ್ಣುಃ ಕ್ರಿಯಾ ಬ್ರಹ್ಮಾ ಕಾರಣಂತು ಮಹೇಶ್ವರಃ*
*ಏಕಯೂರ್ತೇ ಸ್ತ್ರಯೋಭಾಗಾಃ ಬ್ರಹ್ಮಾ ವಿಷ್ಣು ಮಹೇಶ್ವರಾಃ ॥ (೨-೧೮)*

ಯಾರೋ ಒಬ್ಬ ವಜ್ರಬಾಹುವೆಂಬರಸನ ಸಭೆಯಲ್ಲಿ ಭಾರದ್ವಾಜ ಕಾಶ್ಯಪಾದಿ ಋಷಿಗಳು ನಡೆಸಿದ ಸಂವಾದದಲ್ಲಿ, ಒಬ್ಬೊಬ್ಬನೇ ಶ್ರೇಷ್ಠನೆಂದು ಮೊದಲು ಉಗ್ಗಡಿಸಿದರೆಂದೂ ಬಳಿಕ "ಎಲ್ಲರುಂ ಸಮ್ಮತಿಸಿ ಮೂವರುಂ ಸಮನೆಂದರ್" ಎಂದೂ ಕವಿ ನಿರೂಪಿಸಿದ್ದಾನೆ.

ಶಿವಕೇಶವರು ಏಕಸತ್ವದ ಭಿನ್ನ ನಾಮರೂಪಗಳೆಂಬ ಉದಾರದೃಷ್ಟಿಯ ಸೃಷ್ಟಿಯೇ ಹರಿಹರೇಶ್ವರ.

ಪೋಲಾಳ್ವ ದಂಡನಾಥನ ದಾವಣಗೆರೆ ಶಾಸನದಲ್ಲಿ (ಎಕxi-೨೫; ೧೨೨೪) ಹೇಳಿರುವುದು ನೋಡಿ :

*ಹರಿಯಿಂದಂ ಬಿಟ್ಟು ದೈವಂ ಧರಣೀತಳದೊಳಿಲ್ಲೆಂದು ಪೇಳ್ವರ್ ಕೆಲಂಬರ್*
*ಹರನಿಂದಂ ಬಿಟ್ಟು ದೈವಂ ಧರಣೀತಳದೊಳಲ್ಲೆಂದು ಪೇಳ್ವರ್ ಕೆಲಂಬರ್*
*ನರರಾ ಸಂದೇಹಮಂ ಪಿಂಗಿಸಲತಿಶಯದಿಂ ಕೂಡಲೂರಲ್ಲಿ ಶೋಭಾ*
*ಕರಮಪ್ಪಂತೊಂದೆರೂಪಂ ತಳೆದ ಹರಿಹರಂ ಕೂರ್ತ ರಕ್ಷಿಕ್ಕೆ ನಮ್ಮಂ ॥*

ಮುಂದುವರಿದು ಇದೇ ಆಶಯ ಹೀಗೆ ನಿರೂಪಣೆಗೊಂಡಿದೆ :

*ಸಂದ ಶಿವಂಗೆ ವಿಷ್ಣುವಿನ ರೂಪಮದಾದುದು ವಿಷ್ಣುವಿಂಗೆ ಪೆಂ*
*ಪೊಂದಿ ನೆಗಳ್ತೆವೆತ್ತ ಶಿವರೂಪಮದಾದುದು ವೇದವಾಕ್ಯದಿಂ*
*ದೆಂದದನೆಯ್ದೆ ನಿಶ್ಚಯಿಸುವಂತಿರೆ ಕೂಡಲೊಳೇಕಮೂರ್ತಿಯಿಂ*
*ನಿಂದ ಜಗನ್ನುತಂ ಹರಿಹರಂ ಪರಿರಕ್ಷಿಸುತಿರ್ಕೆ ಧಾತ್ರಿಯಂ॥*

ಈ ಶಾಸನದ ಮಾತಿನ ಧೋರಣೆಯಲ್ಲಿ ಹರಿ-ಹರರಲ್ಲಿ ದೊಡ್ಡವನು ಯಾರು ಎಂಬ ವಾದವೈಖರಿ ಆಯಾ ದೇವರ ಭಕ್ತರ ನಡುವೆ ನಡೆಯುತ್ತಿದ್ದ, ಏಕದೇವೋಪಾಸನೆಯ

ವೀರವ್ರತವನ್ನು ಹಿಡಿದಿದ್ದವರು ತಮ್ಮ ತಮ್ಮಲ್ಲಿ ವಾಗ್ಯುದ್ಧಗಳನ್ನು ನಡೆಸುತ್ತಿದ್ದ ಸಾಧ್ಯತೆಗಳೂ ಇದ್ದುವೆಂಬುದರ ಸೂಚನೆಯನ್ನು ಕಾಣಬಹುದಾಗಿದೆ. ಆದರೆ ಆ ವಾದವೈಖರಿ ವಾಗ್ಯುದ್ಧಗಳ ನಡುವೆಯೇ ಹರಿಹರಾಭೇದದ ಕಲ್ಪನೆಯೂ ಹುಟ್ಟಿತೆಂಬುದು ಸ್ವಾರಸ್ಯದ ಸಂಗತಿ. ಈ ಕಲ್ಪನೆ ಎಂದೇ ಹುಟ್ಟಿರಲಿ, ಹರಿಹರನ ಮೂರ್ತಿಕಲ್ಪನೆ ವಿಚಾರವಂತ ಭಾರತೀಯ ಮನಸ್ಸು ಮತಸಾಮರಸ್ಯ ದೈವಸಮನ್ವಯಗಳ ಬಗೆಗೆ ಗಾಢವಾಗಿ ಚಿಂತಿಸಿದ ಫಲ ; ಒಂದು ಬಗೆಯಲ್ಲಿ ಹೀಗೆ ಪರಿಹಾರವನ್ನು ಕಂಡುಕೊಂಡುದನ್ನು ನಾವು ಮೆಚ್ಚಲೇಬೇಕು !

ಸಹಜಾಭಿವ್ಯಕ್ತಿಯ ಮೇಲಿನ ಎರಡು ವೃತ್ತಗಳನ್ನು ವ್ಯಾಖ್ಯಾನಿಸುವ ಅಗತ್ಯವೇನಿಲ್ಲ. ಅವುಗಳಲ್ಲಿ ಎರಡನೆಯದು ಈ ಜನಪ್ರಿಯ ಶ್ಲೋಕವನ್ನು ನಮ್ಮ ನೆನಪಿಗೆ ತರುತ್ತದೆ:

*ಶಿವಾಯ ವಿಷ್ಣುರೂಪಾಯ ಶಿವರೂಪಾಯ ವಿಷ್ಣವೇ*
*ಶಿವಸ್ಯ ಹೃದಯ ವಿಷ್ಣುಃ ವಿಷ್ಣೋಶ್ಚ ಹೃದಯಂ ಶಿವಃ ॥*

(ವಿಷ್ಣುರೂಪನಾದ ಶಿವನಿಗೆ, ಶಿವರೂಪನಾದ ವಿಷ್ಣುವಿಗೆ ಹಾಗೂ ಶಿವನ ಹೃದಯವಾದ ವಿಷ್ಣುವಿಗೆ, ವಿಷ್ಣುವಿನ ಹೃದಯವಾದ ಶಿವನಿಗೆ ನಮಸ್ಕಾರ)

ಸ್ಕಾಂದಪುರಾಣದ ಕಾಶೀಖಂಡದ ೮ನೆಯ ಅಧ್ಯಾಯದಲ್ಲಿ ಧರ್ಮರಾಜ ಕೃತವಾದ ಹರಿಹರಸ್ತುತಿಯೊಂದು ಬಂದಿದ್ದು, ಅದು ಮೇಲಿನ ಆಶಯವನ್ನು ಇನ್ನೂ ಹಿಗ್ಗಿಸಿದೆ. ಹಾಗೆ ಸದಾಶಯವನ್ನು ಹಿಗ್ಗಿಸಿದ ಈ ಮಧುರಭಾವನೆಯ ಹಲವು ವಸಂತತಿಲಕ ವೃತ್ತಗಳಲ್ಲಿ ಒಂದನ್ನು ನೋಡಿ:

*ಗೋವಿಂದ ಮಾಧವ ಮುಕುಂದ ಹರೇ ಮುರಾರೇ*
*ಶಂಭೋ ಶಿವೇಶ ಶಶಿಶೇಖರ ಶೂಲಪಾಣೇ*
*ದಾಮೋದರಾಚ್ಯುತ ಜನಾರ್ದನ ವಾಸುದೇವ*
*ತ್ಯಾಜ್ಯಾ ಭಟಾ ಯ ಇತಿ ಸಂತತಮಾಮನಂತಿ ॥*

(ಯಮ ತನ್ನ ಭಟರಿಗೆ ಹೇಳುವನಂತೆ :"ಗೋವಿಂದ ಮಾಧವ ಮುಕುಂದ ಹರಿ ಮುರಾರಿ ಎಂಬುದಾಗಿ ಪರಿಣಾಮವನ್ನೂ ಶಂಭು ಶಿವ ಈಶ ಶಶಿಶೇಖರ ಶೂಲಪಾಣಿ ಎಂಬುದಾಗಿ ಹರನಾಮವನ್ನು ಯಾರು ಮನನ ಮಾಡುವರೋ ಅವರನ್ನು ಎಲೈ ಭಟರೇ, ಮುಟ್ಟದೆ ಬಿಟ್ಟುಬಿಡಿ.)

ಅದ್ವೈತ ಪಂಥದ ಮಧುಸೂದನ ಸರಸ್ವತಿಗಳು ತಮ್ಮ ಸಾಮರಸ್ಯತೆಯ ಈ ಭಾವನನ್ನು ಎಷ್ಟು ಸರಸವಾಗಿ ತಿಳಿಸಿದ್ದಾರೆಂಬುದನ್ನು ನೋಡಿ:

*ಶೈವಾ ವಯಂ ನ ಖಲು ತತ್ತ್ವ ವಿಚಾರಣೀಯಂ*
*ಪಂಚಾಕ್ಷರೀ ಜಪಪರಾ ನಿತರಾಂ ತಥಾಪಿ*
*ಚೇತೋ ಮದೀಯಮತಸೀ ಕುಸುಮಾವಭಾಸಂ*
*ಸೇರಾನನಂ ಸ್ಮರತಿ ಗೋಪವಧೂ ಕಿಶೋರಮ್ ॥*

(ನಾವು ಶೈವರು ಅದರಲ್ಲಿ ಸಂದೇಹವಿಲ್ಲ. ನಾವು ವಿಶೇಷವಾಗಿ ಪಂಚಾಕ್ಷರಿಯನ್ನು ಜಪಿಸತಕ್ಕವರು. ಆದರೂ ನನ್ನ ಮನಸ್ಸು ಅಗಸೆಹೂವಿನಂತೆ ಶ್ಯಾಮಲವರ್ಣನೂ ಸ್ಮಿತಮುಖನೂ ಆದ ಗೋಪವಧೂಕುಮಾರನಾದ ಶ್ರೀಕೃಷ್ಣನನ್ನು ಸ್ಮರಿಸುತ್ತದೆ)

ಎಂತಹ ಸರಸ ಸುಂದರವಾದ ದೈವಸಮನ್ವಯದೃಷ್ಟಿಯಿದು. ಇಂತಹ ಉದಾರವಾದ ಆಶಯವನ್ನು ಕರ್ನಾಟಕದ ಜೈನಕವಿಗಳು ಸಹ ಕೆಲವು ಸಲ ಪ್ರಕಟಿಸಿರುವುದುಂಟು.

ಸುಜನೋತ್ತಂಸ ಎಂಬ ಬಿರುದಿನ ಬೊಪ್ಪಣ ಪಂಡಿತನು (ಸು.೧೧೮೦) ತನ್ನ 'ನಿರ್ವಾಣ ಲಕ್ಷ್ಮೀಪತಿ ನಕ್ಷತ್ರಮಾಲಿಕೆ'ಯಲ್ಲಿ ತಾನು ಪರಿಭಾವಿಸಿದ ಪರಮಾರ್ಥವನ್ನು ಹೀಗೆ ಕುರಿತಿದ್ದಾನೆ:

*ಪರಮೇಶಂ ಪರಮೇಷ್ಠಿ ಶಂಭುವಭವಂ ಬ್ರಹ್ಮಂ ಶಿವಂ ಶಂಕರಂ*
*ಸ್ಮರ ಸಂಹಾರಕನಚ್ಯುತಂ ಪುರಹರಂ ಬುದ್ಧಂ ಜಿನಂ ವಿಷ್ಣುವೇ*
*ದರಹಸ್ಯಂ ಪ್ರಭು ಶುದ್ಧನೆಂದು ನೆಗಳ್ದಿರ್ದಂತಪ್ಪ ನಾಮಾಳಿಯಿಂ*
*ಪರಮಾರ್ಥಂಗಳ ದತ್ತಮಪ್ಪುದು ತಾಂ ನಿರ್ವಾಣಲಕ್ಷ್ಮೀಪತಿ ॥ (೨೭)*

ಎಂದರೆ, ಪರಮೇಶ ಪರಮೇಷ್ಠಿ ಮುಂತಾದ ನಾನಾ ದೇವತಾಭಿಧಾನಗಳಿಂದಲೇ ಪರಮಾರ್ಥವೆನ್ನುವುದು ಲಭಿಸುತ್ತದೆ ಎಂಬುದು ಇಲ್ಲಿಯ ಆಶಯವಾಗಿರಬೇಕೆಂದು ತೋರುವುದು.

ಇದೇ ಕವಿ ಮೇಲುಜಾತಿ-ಕೀಳುಜಾತಿಗಳು, ಗಂಡು-ಹೆಣ್ಣುಗಳು ಎಂಬ ಭೇದಭಾವ ಅನುಚಿತವಾದುದು ಎನ್ನುವುದನ್ನು ಹೀಗೆ ಹೃದಯಂಗಮವಾಗಿ ತಿಳಿಸಿದ್ದಾನೆ :

*ವಿದಿತಂ ಭಾವಿಸೆ ಜಾತಿಲಿಂಗಮೆರಡುಂ ದೇಹಾಶ್ರಿತಂ ದೇಹಮ*
*ಪ್ಪೊಡೆ ಜೀವಕ್ಕೆ ಭವಪ್ರಬಂಧಮದಱಿಂದಂ ಜಾತಿ ಲಿಂಗಂಗಳೊ*
*ಳ್ಪಿಡೆಗೊಂಡಾಗ್ರಹಮುಳ್ಳವರ್ ಬವಣೆ ಪಿಂಗರ್ ಪಿಂಗುವರ್ ಶುದ್ಧ ಚಿ*
*ತ್ಪದಮೊಂದಲ್ಲದದೆಲ್ಲವಂ ಬಿಸುಟವರ್ ನಿರ್ವಾಣಲಕ್ಷ್ಮೀಪತೀ ॥ (೧೯)*

ಹೀಗೆ ಬೊಪ್ಪಣಪಂಡಿತನು ಯಾವುದನ್ನು ಪರಮಾರ್ಥವೆಂದೂ ಚಿತ್ಪದವೆಂದೂ ಕರೆದನೋ, ಅದನ್ನೇ ವೈದಿಕಕವಿಕಲ್ಪನೆ 'ಕೇಶವ'ನೆಂದು ಹೇಳುತ್ತದೆ. ಈ ಕವಿಗೆ ಈಚಿನ

ಕಾಲದಲ್ಲಿ, ಎಂದರೆ ವಿಜಯನಗರದ ಇಮ್ಮಡಿ ಹರಿಹರನ ಕಾಲದಲ್ಲಿ, ಹುಟ್ಟಿದ ಬೇಲೂರು ಶಾಸನದ (೧೨೯೭) ಸುಪ್ರಸಿದ್ಧವಾದ ವೃತ್ತದಲ್ಲಿ ಈ ಕಲ್ಪನೆ ಹೇಗೆ ಪಲ್ಲವಿಸಿದೆಯೆಂಬುದನ್ನು ನೋಡಬಹುದು :

*ಯಂ ಶೈವಾಸ್ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿನೋ*
*ಬೌದ್ಧಾ ಬುದ್ಧ ಇತಿ ಪ್ರಮಾಣಪಟವಃ ಕರ್ತೇತಿ ನೈಯಾಯಿಕಾಃ*
*ಅರ್ಹನ್ನಿತಿ ಹ ಜೈನಶಾಸನಮತಿಃ ಕರ್ಮೇತಿ ಮೀಮಾಂಸಕಾಃ*
*ಸೋಽಯಂ ವೋ ವಿದಧಾತು ವಾಂಛಿತಫಲಂ ಶ್ರೀ ಕೇಶವೇಶಸ್ಸದಾ* //

(ಶೈವರು ಶಿವನೆಂದೂ ವೇದಾಂತಿಗಳು ಬ್ರಹ್ಮನೆಂದೂ ಬೌದ್ಧರು ಬುದ್ಧನೆಂದೂ ನೈಯಾಯಿಕರು ಕರ್ತನೆಂದೂ ಜೈನರು ಅರ್ಹಂತನೆಂದೂ ಮೀಮಾಂಸಕರು ಕರ್ಮವೆಂದೂ ಯಾವನನ್ನು ಉಪಾಸಿಸುವರೋ ಆ ಕೇಶವನು ನಮ್ಮ ಇಷ್ಟಾರ್ಥಗಳನ್ನು ಪೂರೈಸಲಿ).

ಈಗ್ಗೆ ಒಂದು ನೂರು ವರ್ಷಗಳ ಹಿಂದೆಯೇ (೧೮೯೧) ಅರಮನೆ ವಿದ್ವಾಂಸ ನರಹರಿ ಜಯರಾಯಾಚಾರ್ಯರು ತಮ್ಮ 'ಕರ್ಣಾಟಕ ಭಾಷಾಕರಂ' ಎಂಬ ಕನ್ನಡ ನಿಘಂಟುವಿನಲ್ಲಿ ಒಂದೆಡೆ ಈ ಸೊಗಸಾದ ಪದ್ಯದ ಭಾಷಾಂತರವನ್ನು ತಾವೇ ಹೀಗೆ ಮಾಡಿ ಪ್ರಕಟಿಸಿದ್ದಾರೆ.

*ಶಿವನೆಂದಾವನ ಶೈವರಾಶ್ರಯಿಪರೋ ನೈಯಾಯಿಕರ್ ಕರ್ತನೆಂ*
*ದು ವಲಂ ಬೊಮ್ಮಮೆನುತ್ತೆ ವೇದವಿದರರ್ಹನ್ನೆಂದು ಜೈನರ್ಕಳು*
*ತ್ಸವದಿಂ ಬುದ್ಧನೆನುತ್ತೆ ಬೌದ್ಧಮತಸಂಜಾತರ್ಕಳೊಲ್ದಾ ರಮಾ*
*ಧವಗೆಲ್ಲಾ ಜಗದಾಣ್ಮನೆಮ್ಮನನಿಶಂ ಪಾಲಿಕ್ಕೆ ನಾರಾಯಣಂ* //

"ಈ ಮೇಲಾದ ಹಾರೈಕೆಯಲ್ಲಿ ವೈದಿಕರ ಪೂಜಾರ್ಹವಾದ ಸತ್ತ್ವವೂ ಮೂರ್ತರೂಪಗಳೂ ವೈದಿಕೇತರವಾದ ಪಂಥಗಳ ಸತ್ತ್ವವೂ ಮೂರ್ತರೂಪಗಳೂ ಸಮಾನವಾಗಿ ಪೂಜಾರ್ಹಗಳೆಂಬ ಉದಾತ್ತಭಾವನೆ ವ್ಯಕ್ತವಾಗಿದೆ. ನಾಮರೂಪಗಳನ್ನು ಕಳೆದುಕೊಂಡು ಈ ಜಗತ್ತು ಯಾವುದರಲ್ಲಿ ಅಡಗುತ್ತದೆಯೋ ಅದನ್ನು ಕೆಲವರು ಪ್ರಕೃತಿಯೆಂದೂ ಕೆಲವರು ಮಾಯೆಯೆಂದೂ ಕೆಲವರು ಅಣುವೆಂದೂ ಕರೆಯುತ್ತಾರೆ" ಎಂಬ ಬೃಹತ್ ವಾಶಿಷ್ಟದ ಮಾತಿನಲ್ಲಿ ಸಹ ಏಕಂ ಸತ್ ಎಂಬ ಭಾವನೆಯನ್ನೇ ನಾವು ಗುರುತಿಸಬಹುದಾಗಿದೆ.

ತೆಲುಗಿನ ಸಂತಕವಿ ವೇಮನ ಹೇಳುವುದು ಹೀಗೆ : "ಹಸುಗಳು ವಿವಿಧ ಬಣ್ಣದವು; ಆದರೆ ಹಾಲೆಲ್ಲಾ ಒಂದೇ. ಹೂಗಳು ವಿವಿಧ ಬಣ್ಣದವು; ಆದರೆ ನಡೆಸುವ ಅರ್ಚನೆ ಒಂದೇ. ಮತಗಳು ಭಿನ್ನವಾದವು, ಆದರೆ ದೇವರು ಒಬ್ಬನೇ". ಈ ಮತಸಾಮರಸ್ಯದ ಗುಟ್ಟು ಅಶೋಕನಿಗೆ ತಿಳಿದಿದ್ದುದರಿಂದಲೇ ಅವನು ತನ್ನ ೧೨ನೆಯ ಶಾಸನದಲ್ಲಿ "ಸರ್ವಪ್ರಕಾರಗಳಲ್ಲೂ ಪರಮತದವರನ್ನು ಗೌರವಿಸಲೇಬೇಕು. ಹೀಗೆ ನಡೆದುಕೊಂಡರೆ, ತನ್ನ

ಮತ ವೃದ್ಧಿಸುತ್ತದೆ'' ಎಂಬುದಾಗಿ ಸಾರಿದ್ದಾನೆ. ''ಅವರವರ ದರುಶನಕೆ ಅವರವರ ವೇಷದಲಿ ಅವರವರಿಗೆಲ್ಲ ಗುರು ನೀನೊಬ್ಬನೇ'' ಎಂಬುದಾಗಿ ಶಿವನನ್ನು ಸ್ತುತಿಸಿದ ಮುಪ್ಪಿನ ಷಡಕ್ಷರಿಗೆ ಸಹ ಈ ಗುಟ್ಟು ಗೊತ್ತಿದ್ದಿತು. ''ಹೋರಾಟವಿಕ್ಕಿಸಲು ಬೇರಾದೆಯಲ್ಲದಲೆ ಬೇರುಂಟೆ ಜಗದೊಳಗೆ ಎಲೆ ದೇವನೇ'' ಎಂಬುದಾಗಿ ಆತನೇ ಮುಂದುವರಿದು ಹೇಳುತ್ತಾನೆ. ತಾನೇ ಇಕ್ಕಿಸಿದ ಈ ಹೋರಾಟವನ್ನು ಆ ಶಿವ ಎಂದು ಉಪಸಂಹರಿಸುವನೋ, ಬಲ್ಲವರು ಯಾರು ? ಮತ್ತೆ ಋಗ್ವೇದಸಂಹಿತೆಯ ಕೊನೆಯ ಸೂಕ್ತದಲ್ಲಿ ಉಕ್ತವಾಗಿರುವ ಈ ಸಂದೇಶವನ್ನು ಸ್ಮರಿಸಿ ಮನನ ಮಾಡುವುದೊಂದೇ ನಮಗಿರುವ ಮಾರ್ಗ.

*ಸಂ ಗಚ್ಛಧ್ವಂ ಸಂ ವದಧ್ವಂ ಸಂ ವೋ ಮನಾಂಸಿ ಜಾನತಾಂ*
*ದೇವಾ ಭಾಗಂ ಯಥಾ ಪೂರ್ವೇಸಂಜಾನಾನಾ ಉಪಾಸತೇ*

(''ನೀವು ಯಾವಾಗಲೂ ಜೊತೆಯಲ್ಲಿಯೇ ಇರಿ, ಜತೆಯಲ್ಲಿಯೇ ನಡೆಯಿರಿ. ಪರಸ್ಪರ ವಿರೋಧಭಾವವನ್ನು ಬಿಟ್ಟು ಒಂದೇ ವಿಧವಾಗಿ ಮಾತಾಡಿರಿ. ನಿಮ್ಮ ಮನಸ್ಸುಗಳು ಭಿನ್ನಾಭಿಪ್ರಾಯಗಳನ್ನು ತ್ಯಜಿಸಿ ಒಂದೇ ವಿಧವಾದ ಮಾರ್ಗಗಳಲ್ಲಿ ಪ್ರವೃತ್ತವಾಗಲಿ. ಪುರಾತನರಾದ ದೇವತೆಗಳು ಯಾವ ಪ್ರಕಾರ ಐಕಮತ್ಯದಿಂದ ಕೂಡಿ ತಮ್ಮ ಹವಿರ್ಭಾಗವನ್ನು ಸ್ವೀಕರಿಸುತ್ತಾರೆಯೋ ಆ ಪ್ರಕಾರವೇ ನೀವೂ ಐಕಮತ್ಯದಿಂದ ಧನಾದಿಗಳನ್ನು ಸ್ವೀಕರಿಸಿ'')

*ಸಮಾನೋ ಮಂತ್ರಃ ಸಮಿತಿಃ ಸಮಾನೀ ಸಮಾನಂ ಮನಃ ಸಹ ಚಿತ್ತಮೇಷಾಂ।*
*ಸಮಾನಂ ಮಂತ್ರಮಭಿ ಮಂತ್ರಯೇವಃ ಸಮಾನೇನ ವೋ ಹವಿಷಾ ಜುಹೋಮಿ ॥*

(ಮಂತ್ರವು ಒಂದೇ ವಿಧವಾಗಿರಲಿ; ಅದರಿಂದ ಲಭಿಸುವ ಫಲವು ಹೆಚ್ಚು ಕಡಮೆಗಳಾಗದೆ ಒಂದೇ ವಿಧವಾಗಿರಲಿ. ಮನಃಪ್ರವೃತ್ತಿಯೂ ವಿವೇಕಜ್ಞಾನವೂ ಐಕಮತ್ಯದಿಂದ ಒಂದೇ ವಿಧವಾಗಿರಲಿ. ಎಲೈ ದೇವತೆಗಳೇ, ನಿಮಗೋಸ್ಕರ ಒಂದೇ ವಿಧವಾದ ಮಂತ್ರವನ್ನು ಪಠಿಸಿ ಹವಿರಾದಿಗಳನ್ನು ಸಂಸ್ಕಾರ ಮಾಡುತ್ತೇನೆ. ಒಂದೇ ವಿಧವಾದ ರೀತಿಯಲ್ಲಿ ಆಹುತಿಯರ್ಪಿಸುತ್ತೇನೆ)

*ಸಮಾನೀ ವ ಆಕೂತಿಃ ಸಮಾನಾ ಹೃದಯಾನಿ ವಃ*
*ಸಮಾನಮಸ್ತು ವೋ ಮನೋ ಯಥಾ ವಃ ಸುಸಹಾಸತಿ*

(ನಿಮ್ಮಲ್ಲಿ ಪರಸ್ಪರ ಐಕಮತ್ಯವಿರುವುದಕ್ಕಾಗಿ ನಿಮ್ಮ ಉದ್ದೇಶವು ಒಂದೇ ವಿಧವಾಗಿರಲಿ, ನಿಮ್ಮ ಮನಸ್ಸಿನ ಅಪೇಕ್ಷೆಗಳು ಒಂದೇ ವಿಧವಾಗಿರಲಿ. ನಿಮ್ಮ ಅಂತರಂಗದ ಆಲೋಚನೆಯೂ ಒಂದೇ ವಿಧವಾಗಿರಲಿ)

ಇದಕ್ಕಿಂತ ಇಂದು ನಾವು ಮತ್ತೇನನ್ನು ತಾನೇ ಆಶಿಸಬಹುದು ?

■

# 'ಶತಕತ್ರಯಿ' - ಬಸವಪ್ಪಶಾಸ್ತ್ರಿಗಳ ಅನುವಾದ

ಡಾ॥ ಪ್ರಧಾನ್ ಗುರುದತ್ತ

---

ಸಾಹಿತ್ಯೇತಿಹಾಸದಲ್ಲಿ ಸುವಿಖ್ಯಾತರಾಗಿ ಉಳಿಯುವುದಕ್ಕೆ ಕಾರಣವಾಗುವಂಥ ಕೃತಿಗಳನ್ನು ರಚಿಸಿದ್ದರೂ, ತಮ್ಮ ಬಗ್ಗೆ ಏನನ್ನೂ ಹೇಳಿಕೊಳ್ಳದೆ ಇರುವ, ಯಾವ ಸಾಕ್ಷ್ಯಾಧಾರಗಳನ್ನೂ ಉಳಿಸಿಹೋಗದೆ ಇರುವ ನಿರಭಿಮಾನಿ ಕವಿಶ್ರೇಷ್ಠರ ಪಂಕ್ತಿಗೇ ಭರ್ತೃಹರಿಯೂ ಸೇರುತ್ತಾನೆ. ಅವನ ಬಗ್ಗೆ ಇತರರು - ಅದರಲ್ಲಿಯೂ ವಿದೇಶೀಯರು ಹೇಳಿರುವುದನ್ನು ನಂಬಲಾಗದಂಥ ಸ್ಥಿತಿಯಲ್ಲಿ ನಾವಿದ್ದೇವೆ ಎಂಬುದಾಗಿ ಹಲವು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಚೀಣೀ ಯಾತ್ರಿಕ ಇತ್ಸಿಂಗ್ ಈತನನ್ನು ಬೌದ್ಧಧರ್ಮೀಯನೆಂದೂ, ವೈಯಾಕರಣನೆಂದೂ ವರ್ಣಿಸಿರುವುದಲ್ಲದೆ, ತಾನು ಭಾರತಕ್ಕೆ ಬರುವುದಕ್ಕೆ ೪೦ ವರ್ಷಗಳ ಹಿಂದೆ ಭರ್ತೃಹರಿ ತೀರಿಕೊಂಡಿದ್ದನೆಂದು ಹೇಳಿದ್ದಾನೆ. ಅಷ್ಟೇ ಅಲ್ಲ, ಏಳು ಬಾರಿ ಗೃಹಸ್ಥ ಮತ್ತು ಸಂನ್ಯಾಸ ಆಶ್ರಮಗಳನ್ನು ಅದಲು ಬದಲು ಮಾಡಿಕೊಂಡಿದ್ದನೆಂದೂ ಅವನು ಹೇಳಿದ್ದಾನೆ. ಆದರೆ ಅವನ ಶತಕಗಳು ವೈದಿಕ ಧರ್ಮದ ಬಗ್ಗೆ, ಅದ್ವೈತ ಸಿದ್ಧಾಂತದ ಬಗೆಗಿನ ಅವನ ಬದ್ಧತೆಯ ಬಗ್ಗೆ ಸಾಕ್ಷ್ಯ ನುಡಿಯುತ್ತವೆ. ಕಥೆ ಪುರಾಣಗಳನ್ನು ಕಟ್ಟಿಹೇಳುವುದರಲ್ಲಿ ನಿಪುಣರಾಗಿದ್ದ ನಮ್ಮ ಪ್ರಾಚೀನರು ಇವನನ್ನು ಶಕವರ್ಷ ಸಂಸ್ಥಾಪಕನಾದ ವಿಕ್ರಮಾಂಕನ ಅಣ್ಣನನ್ನಾಗಿಸಿದ್ದಾರೆ, ರಾಜನನ್ನಾಗಿಸಿದ್ದಾರೆ! ಆದರೆ ಇದಕ್ಕೂ ಇವನ ಕೃತಿಗಳಲ್ಲಿ ಆಧಾರಗಳು

ಕಾಣ ದೊರೆಯುವುದಿಲ್ಲ - ಅದರಲ್ಲಿಯೂ ನೀತಿ ವೈರಾಗ್ಯ ಮತ್ತು ಶೃಂಗಾರ (ಅದರಲ್ಲಿಯೂ ಅದರ ನಿಸ್ಸಾರತೆಯನ್ನು) ಕುರಿತು ಶತಕಗಳನ್ನು ಬರೆದಿರುವ ವ್ಯಕ್ತಿ! ಇತ್ಸಿಂಗನ ಹೇಳಿಕೆಯನ್ನು ನಂಬುವುದಾದರೆ, ಭರ್ತೃಹರಿ ತೀರಿಕೊಂಡಿದ್ದು ಕ್ರಿ.ಶ. ೬೫೧ರಲ್ಲಿ. ಆದರೆ ಕ್ರಿ.ಶ. ೬೫೦ರಲ್ಲಿ ಇದ್ದ 'ಕಾಶಿಕಾ'ವೃತ್ತಿಕಾರ ತನ್ನ ಗ್ರಂಥದಲ್ಲಿ ಭರ್ತೃಹರಿಯನ್ನು ಪ್ರಮಾಣವಾಗಿ ಉಲ್ಲೇಖಿಸಿದ್ದಾನೆ. ತೆಲಂಗ್ ಮತ್ತು ಕುನ್ಹನ್‌ರಾಜಾ ಅವರು ಕ್ರಿ.ಶ. ೧-೨ನೆಯ ಶತಮಾನದಲ್ಲಿ ಇವನು ಇದ್ದಿರಬೇಕೆಂದು ಭಾವಿಸಿದ್ದಾರೆ. ಅಂತೆಯೇ, ವಾಕ್ಯಪದೀಯವೆಂಬ ವ್ಯಾಕರಣ ಶಾಸ್ತ್ರ ವಿಷಯಕವಾದ ಗ್ರಂಥವನ್ನು ರಚಿಸಿದ ಭರ್ತೃಹರಿಯೇ ಬೇರೆ, ಶತಕತ್ರಯದ ಕರ್ತೃವಾದ ಭರ್ತೃಹರಿಯೇ ಬೇರೆ ಎಂಬ ವಾದವೂ ಇದೆ. ಈ ವಿವಾದ ಭೂಮಿಯನ್ನು ಇಲ್ಲಿಗೇ ಬಿಡಬಹುದು. "The poems are facts; and Homer is a hypothersis to account for them" ಎಂದು ಹೋಮರನ ವಿಷಯದಲ್ಲಿ ಹೇಳುವಂತೆಯೇ, ಭರ್ತೃಹರಿಯ ವಿಷಯದಲ್ಲಿಯೂ ಹೇಳಿ ಮುಂದೆ ಹೋಗಬಹುದು.

'ಅಭಿನವ ಕಾಳಿದಾಸ' ಎಂಬ ಪ್ರಶಸ್ತಿ ಬಸವಪ್ಪಶಾಸ್ತ್ರಿಗಳ ವಿಷಯದಲ್ಲಿ ಎಷ್ಟು ಅರ್ಥಪೂರ್ಣವಾಗಿದೆ ಎಂಬುದನ್ನು ವಿದ್ವಾಂಸವರೇಣ್ಯರೆಲ್ಲ ಬಗೆಬಗೆಯಾಗಿ ವಿಶದವಾಗಿ ವಿವರಿಸಿದ್ದಾರೆ. ಉಭಯ ಭಾಷೆಗಳ ಮತ್ತು ವಿವಿಧ ಛಂದೋಪ್ರಕಾರಗಳ ಮೇಲೆ ಅವರಿಗೆ ಇದ್ದ ಪ್ರಭುತ್ವ ಹಾಗೂ ಭಾಷಾಂತರ ಕಲೆಯಲ್ಲಿ ಅವರಿಗೆ ಲಭಿಸದ್ದ ಸಿದ್ಧಿ ಇವುಗಳಿಗೆ ಅವರ ಶತಕ್ರಯದ ಅನುವಾದವೂ ನಿದರ್ಶನಗಳನ್ನು ಒದಗಿಸುತ್ತದೆ. ಸದ್ಯಕ್ಕೆ ಅವರ ಕೃತಿಗಳ ಕಾಲಾನುಕ್ರಮಣಿಕೆ ದೊರೆಯದೆ ಇರುವುದರಿಂದ, 'ಶಾಕುಂತಲ'ದ ಅನುವಾದದ ಮಹಾಸಿದ್ಧಿಗೆ ಇವು ಪೋಷಕವಾದುವೋ ಅಥವಾ ಆ ಸಿದ್ಧಹಸ್ತದ ಕುಶಲಕಲೆ, ಇವುಗಳಲ್ಲಿಯೂ ಮೈದೋರಿದೆಯೋ ಎಂಬುದನ್ನು ಖಚಿತವಾಗಿ ಹೇಳಲು ಸಾಧ್ಯವಿಲ್ಲವಾಗಿದೆ. ಆದರೆ ಇದಕ್ಕೆ ತಮಗೆ ಪ್ರೇರಣೆ ಎಲ್ಲಿಂದ ದೊರೆಯಿತು ಎಂಬುದನ್ನು, ಕನ್ನಡಿಸುವಲ್ಲಿ ತಾವು ಇರಿಸಿಕೊಂಡಿದ್ದ ಧ್ಯೇಯೋದ್ದೇಶಗಳು ಯಾವುವು ಎಂಬುದನ್ನು ಅವರು ಸ್ಪಷ್ಟವಾಗಿ ತಿಳಿಸಿದ್ದಾರೆ: "ಚಾಮಮಹೀಪತಿ ಮತಿ ಸಚಿವ ನೃಸಿಹ್ಮವರ್ಯನುತ್ಸಾಹಿಸೆ ಸಂಸ್ಕೃತ ಭರ್ತೃಹರಿ ಸುಭಾಷಿತ ಕೃತಿಯಂ ಬಸವಪ್ಪಶಾಸ್ತ್ರಿ ಕನ್ನಡಿಸಿದಪಂ (ಪೀಠಿಕೆ, ೨) ಮುನ್ನಿನ ಸಂಸ್ಕೃತ ಕೃತಿಗಿದು ಕನ್ನಡಿಯಯೆನೆ ಕನ್ನಡಿಪ್ಪುದುಚಿತಂ ಕವಿಗಳ್! ಎನ್ನರಿವುಳ್ಳನಿತರಿಂದಾಂ ಕನ್ನಡಿಸಿರ್ಪೆಂ ಗುಣಜ್ಞರಭಿಮತಿಪುದಿದಂ॥" ಎಂಬುದೆಲ್ಲ ಅವರ ಮಾತುಗಳೆ. ಸಂಸ್ಕೃತಕ್ಕೆ ಕನ್ನಡಿ ಎಂಬಂತೆ ಈ ಅನುವಾದ ಹೇಗೆ ಅಳವಟ್ಟಿದೆ ಎಂಬುದು ಹಾಗು ಓದುಗರಿಗೆ ಅದು ಎಷ್ಟರಮಟ್ಟಿಗೆ ಪ್ರಿಯವಾಗುತ್ತದೆ ಎಂಬುದು ವಾಸ್ತವವಾಗಿ ಅನುವಾದದ ಯಶಸ್ಸನ್ನು ಅಳೆಯುವ ಒರೆಗಲ್ಲುಗಳೇ ಆಗಿರುತ್ತವೆ. ಈ ದೃಷ್ಟಿಗಳಿಂದ ಶತಕತ್ರಯದ ಈ ಅನುವಾದವನ್ನು ಪರಿಶೀಲಿಸಬಹುದು.

ಪೃಥ್ವೀವೃತ್ತದಲ್ಲಿರುವ ಭರ್ತೃಹರಿಯ ಸುಭಾಷಿತವೊಂದು ಮೂಲದಲ್ಲಿ ಹೀಗಿದೆ :

*ಲಭೇತ ಸಿಕತಾಸು ತೈಲಮಪಿ ಯತ್ನತಃ ಪೀಡಯನ್*
*ಪಿಬೇಚ್ಚ ಮೃಗತೃಷ್ಣಿಕಾಸು ಸಲಿಲಂ ಪಿಪಾಸಾರ್ದಿತಃ ।*
*ಕದಾಚಿದಪಿ ಪರ್ಯಟನ್ ಶಶ ವಿಷಾಣಮಾಸಾದಯೇ*
*ನ್ನತು ಪ್ರತಿನಿವಿಷ್ಟಮೂರ್ಖಜನ ಚಿತ್ತಮಾರಾಧಯೇತ್॥ ನೀ.ಶ. ೫॥*

ಇದನ್ನು ಶಾಸ್ತ್ರಿಗಳು ಕಂದದ ರೂಪದಲ್ಲಿ ಹೀಗೆ ಅಳವಡಿಸಿಕೊಂಡಿದ್ದಾರೆ.

*ಹಿಳಿಯಲ್ಬರ್ಕುಂ ತೈಲವ*
*ಮಳಲೊಳಗಂ ಮೊಲದ ಕೋಡ ಕಾಣಲುಮಕ್ಕುಂ ।*
*ಪೊಳೆವ ಬಿಸಿಲ್ಗೊರೆಯೊಳ್ನೀ*
*ರ್ಗ್ಗೊಳಲಕ್ಕುಂ ಮೂರ್ಖಜನವನೊಲಿಪುದಶಕ್ಯಂ ॥*

'ಯತ್ನತಃ ಪೀಡಯನ್ ಎಂಬುದನ್ನು 'ಅರ್ಥದ್ಯೋತನಿಕಾ ವಾಖ್ಯೆ' (ನಾರಾಯಣ ರಾಮ ಆಚಾರ್ಯ ಕಾವ್ಯತೀರ್ಥ)ಯಲ್ಲಿ 'ಯತ್ನತಃ = ತೈಲಸಿಷ್ಕಾಸನೋಪಾಯೇನ, ಪಿಡಯನ್= ಮರ್ದಯನ್'' ಎಂದು ವಿವರಿಸಲಾಗಿದೆ. ಇದಕ್ಕೆ ಕನ್ನಡದಲ್ಲಿ 'ಹಿಳಿ' ಎಂಬ ಅರ್ಥಪೂರ್ಣಕ್ರಿಯಾಪದವೇ ಇದೆ. ಹಿಳಿ ಎಂಬುದನ್ನು ''ಹಿಸುಕಿ ದ್ರವವಿಲ್ಲದಂತೆ ಮಾಡು; ರಸವನ್ನು ತೆಗೆ'' (ಪು೨೮೨ 'ರತ್ನಕೋಶ') ಎಂದು ಅರ್ಥೈಸಲಾಗಿದೆ; ಇತ್ತ ಪರ್ಯಟನ್ ಎಂಬುದನ್ನು ಹಾಗೂ 'ಪಿಪಾಸಾರ್ದಿತಃ' ಅಂದರೆ ಬಾಯಾರಿದವನು - ಎಂಬುದನ್ನು ಅಂತೆಯೇ 'ಪ್ರತಿನಿವಿಷ್ಟ' - ಅಂದರೆ ನೆಲೆಗೊಂಡ ಅಥವಾ ಬದ್ಧಮೂಲವಾದ ಎಂಬುದನ್ನು ಕೈಬಿಡುವುದರ ಮೂಲಕ ಅವರು ಔಚಿತ್ಯ ಪ್ರಜ್ಞೆಯನ್ನೂ ಮೆರೆದಿದ್ದಾರೆ. ಏಕೆಂದರೆ, ಈ ಸಂದರ್ಭದಲ್ಲಿ ಇವೆಲ್ಲವೂ ಸ್ವತಃ ಸಂಭವಿಯಾಗಿರುವಂಥ ಅಥವಾ ಅಧ್ಯಾಹಾರ ಯೋಗ್ಯವಾಗಿರುವಂಥ ಶಬ್ದಗಳೇ. ಹೀಗೆ, ಕಂದಪದ್ಯದ ಕಿರಿದಾದ ಒಡಲಿಗೆ ಪೃಥ್ವೀವೃತ್ತವನ್ನು ಅಳವಡಿಸುವ ಮೂಲಕ ಅವರು ಸಂಗ್ರಹಗುಣವನ್ನು ಮೆರೆದಿದ್ದಾರೆ.

ಈಗ ಶಿಖರಿಣಿ ವೃತ್ತದ ಒಂದು ಸುಭಾಷಿತವನ್ನು ನೋಡೋಣ. ಮೂಲ ಹೀಗೆ ಸಾಗುತ್ತದೆ:

*ಯದಾ ಕಿಂಚಿದಜ್ಞೋಽಹಂ ದ್ವಿಪ ಇವ ಮದಾಂಧಃ ಸಮಭವಂ*
*ತದಾ ಸರ್ವಜ್ಞೋಽಸ್ಮೀತ್ಯಭವದವಲಿಪ್ತಂ ಮಮ ಮನಃ ।*

*ಯದಾ ಕಿಂಚಿತ್ಕಿಂಚಿತ್ + ಬುಧಜನ ಸಕಾಶಾದವಗತಂ*
*ತದಾ ಮೂರ್ಖೋಽಸ್ಮೀತಿ ಜ್ವರ ಇವ ಮದೋ ಮೇವ್ಯಪಗತಃ ॥ನೀ.ಶ.೮॥*

ಇದನ್ನು ಮತ್ತೇಭವಿಕ್ರೀಡಿತ ವೃತ್ತಕ್ಕೆ ಅಳವಡಿಸಿರುವ ಅವರು ಛಂದೋ-ರಸಜ್ಞತೆಯನ್ನು ಮೆರೆದಿದ್ದಾರೆ ಎಂದೇ ಹೇಳಬೇಕು ಆದರಲ್ಲಿ ಮದಾಂಧದ್ವಿಪದ ಅಂದರೆ, ಮದವೇರಿದ ಆನೆಯ ವರ್ಣನೆ ಇಲ್ಲಿ ಬಂದಿರುವುದನ್ನು ಗಮನಿಸಬೇಕು. ಕನ್ನಡ ವೃತ್ತ ಹೀಗೆ ಸಾಗುತ್ತದೆ :

ಇನಿಸಂ ತಾಂ ತಿಳಿದಂದು ಗರ್ವಭರಮಂ ತಾಳ್ದಿಲ್ಲಮಂ ಬಲ್ಲೆನೆಂ
ದೆನುತಂ ಬಿರ್‍ರನೆ ಬೀಗುತಿರ್ದೆನಕಟಾ ಮತ್ತದ್ವಿಪಂಬೋಲ್ ವಲಂ
ಜನಿಸಲ್ಕೆನ್ನೊಳೆ ಮೆಲ್ಲಮೆಲ್ಲನರಿವಾ ವಿದ್ವತ್ಸಹಾವಾಸದಿಂ
ಮನಕಂಟಿರ್ದ ಮಹಾಮಧಂ ಜ್ವರದ ವೋಲೋಯ್ತಿಗಳೇನೆಂದಪೆಂ ॥ ನೀ.ಶ.೮॥

ಮೂಲದ ಎಲ್ಲ ಛಾಯೆಗಳೂ ಇಲ್ಲಿಯ ಮತ್ತೇಭ ವಿಕ್ರೀಡಿತದಲ್ಲಿ ಹೇಗೆ ಸಾರವತ್ತಾಗಿ ಮೈದಳೆದಿವೆ ಎಂಬುದನ್ನು ಗಮನಿಸಬಹುದು. 'ಮೂರ್ಖ' ಎಂಬ ಮಾತು ಜನಿಸಲ್ಕೆ ಅರಿವು ಎಂಬ ರೂಪವನ್ನು ಪಡೆದುಕೊಂಡಿದೆ. ಹಾಗೂ ಬಿರ್‍ರನೆ ಬೀಗು ಎಂಬ ಕನ್ನಡದ ನುಡಿಗಟ್ಟು ಇಲ್ಲಿ ಬಂದು ಸೇರಿಕೊಂಡಿದೆ. ಇದರಿಂದಾಗಿ ಮೂಲದ ಭಾವನೆಗೆ ಆಪೋಹವೇನೂ ಬಂದಿಲ್ಲ; ಮೇಲಾಗಿ, ಸಹಜತೆಗೆ ಎಡೆದೊರೆತು ಮೂಲದ ಭಾವ ಮತ್ತಷ್ಟು ಉಜ್ವಲವಾಗಿದೆ ಎಂದೆನ್ನಿಸದೆ ಇರದು. ಇಲ್ಲಿ ಮುದ್ರಾರಾಕ್ಷಸ ವಿನೋದವೊಂದನ್ನು ಮೆರೆದಿದ್ದಾನೆ ಎಂಬುದನ್ನೂ ನಾನಿಲ್ಲಿ ಹೇಳಲೇಬೇಕು. ಮದೋ ಮೇ ವ್ಯಪಗತಃ ಎಂಬುದು ಕನ್ನಡದಲ್ಲಿ ಮಹಾಮುದಂ ಎಂಬುದಾಗಿ ಅಚ್ಚಾಗಿದೆ. ಶಾಸ್ತ್ರಿಗಳು ಮದವನ್ನೇ 'ಮುದ'ವೆಂದು ಭ್ರಮಿಸಿರುವ ಸಂಭವವಂತೂ ಇಲ್ಲವಷ್ಟೆ ! (ಅಹಂಕಾರಮೂಲವಾದ ಸ್ವಾನುರಕ್ತಿ ಎಂಬ ಅರ್ಥದಲ್ಲಿ ಈ ಸಂದರ್ಭದಲ್ಲಿ ಇದನ್ನು ಅರ್ಥೈಸಿಕೊಳ್ಳಬಹುದಾಗಿದೆಯಾದರೂ ಜ್ವರದೊಡನೆ ಇರುವ ಹೋಲಿಕೆ ಇಂಥ ವಿವರಣೆಯನ್ನು ಸಮರ್ಥನೀಯವಾಗಿಸುವುದಿಲ್ಲವೆಂದೇ ಹೇಳಬೇಕು.)

ವಿದ್ಯೆಯ ಹಿರಿಮೆಯನ್ನೇ ಹಾಡಿ ಹೊಗಳುವ ಈ ಸುಭಾಷಿತ ತುಂಬ ಜನಪ್ರಿಯವಾಗಿರುವಂಥದು :

ವಿದ್ಯಾನಾಮನರಸ್ಯ ರೂಪಮಧಿಕಂ ಪ್ರಚ್ಛನ್ನಗುಪ್ತಂ ಧನಂ
ವಿದ್ಯಾಭೋಗಕರೀಯಶಃಸುಖಕರೀ ವಿದ್ಯಾಗುರೂಣಾಂ ಗುರುಃ
ವಿದ್ಯಾ ಬಂಧುಜನೋ ವಿದೇಶಗಮನೇ ವಿದ್ಯಾಪರಂ ದೈವತಂ
ವಿದ್ಯಾರಾಜಸುಪೂಜಿತಾ ನತು ಧನಂ ವಿದ್ಯಾವಿಹೀನಃ ಪಶುಃ ॥ ನೀ.ಶ.೨೦॥

ಶಾರ್ದೂಲವಿಕ್ರೀಡಿತ ವೃತ್ತದಲ್ಲಿರುವ ಈ ಸುಭಾಷಿತವನ್ನು ಶಾಸ್ತ್ರಿಗಳು ಕನ್ನಡದಲ್ಲಿ ಉತ್ಪಲಮಾಲಾವೃತ್ತಕ್ಕೆ ಅಳವಡಿಸಿದ್ದಾರೆ. ಅದು ಹೀಗಿದೆ :

ವಿದ್ಯೆಯೆ ರೂಪ ವಿದ್ಯೆಯೆ ನಿಗೂಢ ಸುರಕ್ಷಿತಮಾದ ವಿತ್ತಮುಂ
ವಿದ್ಯೆಯೆ ಕೀರ್ತಿ ಭೋಗಕರಿ ವಿದ್ಯೆಯೆ ದೇಶಿಕರ್ಗೆಲ್ಲಂ ದೇಶಿಕಂ
ವಿದ್ಯೆಯೆ ಬಂಧುವಪ್ಪುದು ವಿದೇಶದೆ ವಿದ್ಯೆಯೆ ರಾಜಪೂಜ್ಯಮುಂ
ವಿದ್ಯೆಯದಿಲ್ಲದಿರ್ಪ್ಪ ಮನುಜಂ ಬಗೆಯಲ್ಪಶುವಲ್ತೆ ಧಾತ್ರಿಯೋಳ್ ॥ ನೀ.ಶ.೧೭॥

ಇವೆರಡನ್ನೂ ಹೋಲಿಸಿನೋಡಿದಾಗಿ ಪ್ರಚ್ಛನ್ನ (= ಮರೆಮಾಡಿದ; ಗುಪ್ತವಾದ ರತ್ನಕೋಶ; ಪುಟ ೧೫೨) ಗುಪ್ತ (= ಗುಟ್ಟಾದ - ರತ್ನಕೋಶ, ಪು.೭೧) ಎಂಬ ಒಂದೇ ಅರ್ಥದ ಎರಡು ಶಬ್ದಗಳ ಬಳಕೆ ಮೊದಲಿಗೆ ನಮ್ಮಲ್ಲಿ ಆಶ್ಚರ್ಯವನ್ನುಂಟುಮಾಡಬಹುದು; ಒಂದನ್ನು 'ನಿಗೂಢ' ಎಂದೂ, ಇನ್ನೊಂದನ್ನು ಸುರಕ್ಷಿತ ಎಂದೂ ಅರ್ಥೈಸಿಕೊಳ್ಳುವ ಅಗತ್ಯವಾದರೂ ಏನು ಎಂದೆನ್ನಿಸಬಹುದು. ಆದರೆ, ವ್ಯಾಖ್ಯಾನಕಾರರು ''ಪ್ರಚ್ಛನ್ನಂ ಸ್ವಾಂತಸ್ಥಿತತ್ವೇನ + ಇತರಾನಪಹಾರ್ಯಂ, ಗುಪ್ತಂ ಚ ಬಾಹ್ಯಸಾಧನಪೇಕ್ಷಮನನಾದಿನಾ ರಕ್ಷಿತಂ ಚ'' ಎಂದು ಮೊದಲಾಗಿ ನೀಡಿರುವ ವ್ಯಾಖ್ಯಾನ, ಶಾಸ್ತ್ರಿಗಳು ಅನುವಾದದ ಸಂದರ್ಭದಲ್ಲಿ ವಹಿಸುವ ಎಚ್ಚರವನ್ನು ನಮಗೆ ಮನವರಿಕೆ ಮಾಡಿಕೊಡುತ್ತದೆ. ಮೂಲದಲ್ಲಿನ ಇತರ ಭಾವಗಳು ಸರಿಯಾಗಿವೇ ಮೈದಳೆದಿವೆ ಎಂದೂ ಅನ್ನಿಸುತ್ತದೆ. ಆದರೆ, ಈ ಅನುವಾದದಲ್ಲಿ ''ಯಶಃ ಸುಖಕರೀ'' ಎಂಬುದನ್ನು ''ವಿದ್ಯಾಭೋಗಕರೀ'' ಎಂಬುದರೊಂದಿಗೆ ಬೆಸೆದು ವಿದ್ಯೆಯೆ ಕೀರ್ತಿ ಭೋಗಕರಿ ಎಂದಾಗಿಸಿಬಿಟ್ಟಿರುವುದು ಅಪೇಕ್ಷಣೀಯವೆಂದೇನೂ ಅನ್ನಿಸುವುದಿಲ್ಲ. ಮೇಲಾಗಿ 'ವಿದ್ಯಾ ಪರಂ ದೈವತಂ' ಎಂಬ ಮುಖ್ಯವಾದ ಮಾತು ಬಿಟ್ಟುಹೋಗಿರುವುದು ಆಶ್ಚರ್ಯವನ್ನುಂಟುಮಾಡುತ್ತದೆ. (ಅಂತೆಯೇ ''ನತುಧನಂ'' ಎಂಬ ಅವಧಾರಣದ ಲೋಪವೂ !) ಇದು ಛಂದಸ್ಸಿನ ಅಗತ್ಯಗಳಿಂದಾಗಿ ಏರ್ಪಟ್ಟಿರುವ ನಿರ್ಬಂಧವೇನೂ ಅಲ್ಲ; ಏಕೆಂದರೆ, ಪಾದಪೂರಣಕ್ಕಾಗಿಯೇ 'ಬಗೆಯಲ್ 'ಧಾತ್ರಿಯೊಳ್ ಎಂಬ ಮಾತುಗಳನ್ನು ಶಾಸ್ತ್ರಿಗಳು ಹೆಚ್ಚಾಗಿ ಸೇರಿಸಿದ್ದಾರೆ ಎಂಬುದನ್ನು ನಾವು ನಿರ್ಲಕ್ಷಿಸಲು ಸಾಧ್ಯವಾಗುವುದಿಲ್ಲ. ಆದ್ದರಿಂದ 'ಲೋಪ ಲೋಪವೆ' ಎನ್ನುಬೇಕಾಗುತ್ತದೆ. ಜೊತೆಗೆ, 'ಗುರೂಣಾಂ ಗುರುಃ' ಎಂಬ ಮಾತುಗಳಿಗೆ ಪರ್ಯಾಯವಾಗಿ ''ದೇಶಿಕರ್ಗೆಲ್ಲಂ ದೇಶಿಕಂ'' ಎಂಬ ಅಷ್ಟೇನೂ ಪರಿಚಿತವಲ್ಲದ ಮಾತುಗಳನ್ನು ಬಳಸಿರುವುದೂ ಹಿತವಾಗುವುದಿಲ್ಲ.

ಹೀಗೆ ಹೋಲಿಸಿನೋಡದಿದ್ದರೂ, ಓದುಗರಿಗೆ ಆನಂದವನ್ನುಂಟುಮಾಡುವ ರೀತಿಯಲ್ಲಿರುವ ಇಲ್ಲಿಯ ಬಹುತೇಕ ಅನುವಾದಗಳು ಸಹಜ ಸೌಂದರ್ಯದಿಂದ ಕಂಗೊಳಿಸುತ್ತಿವೆ. ಅವುಗಳಲ್ಲಿನ ಅಚ್ಚಕನ್ನಡತನ ಹಾಗೂ ಕನ್ನಡ ಮತ್ತು ಸಂಸ್ಕೃತ ಶಬ್ದಗಳ ಹಿತಮಿತವಾದ ಬಳಕೆ ನಮ್ಮ ಮನಸ್ಸನ್ನು ಸೂರೆಗೊಳ್ಳುತ್ತವೆ. ಉದಾಹರಣೆಗೆ,

*ಇರುಳಿದು ಪೋದಿರುಳ್ಗೆ ಸರಿ ಯೀ ಪಗಲಾ ಪಗಲಿಂಗೆ ಸಾಟಿಯೆಂ*
*ದಿರದೊಡನುಜ್ಜುಗಂಬಡುತಮುಂಡುದನುಂಡು ನಿರೀಕ್ಷಿಸಿದ್ದುದಂ*
*ನಿರುಕಿಸಿ ಭೋಗಿಸಿದ್ದುದನೆ ಭೋಗಿಸಿ ಗೆಯ್ದುದ ಗೆಯ್ದುಮೋವೊ ಬೆ*
*ಸರಿಸಿದುದಿಲ್ಲ ಸಂಸ್ಕೃತಿಯೊಳೆಮ್ಮ ವಿಮೋಹಕದೇನನೆಂಬೆವೈ ॥ ವೈ.ಶ; ೪೪॥*

*ಬಿಡಿಸಲ್ಮಂತ್ರಕೆ ಗಮ್ಯಮಲ್ತು ಪಲವುಂ ಮದ್ದಿಂದೆ ಬಾರಿಪ್ಪೆನೆಂ*
*ದೊಡೆ ತಾಂ ಸಾಧ್ಯಮದಲ್ತು ಶಾಂತಿಶತದಿಂದುಂ ಪೋಪುದಲ್ತಕ್ಕಟಾ ।*
*ನುಡಿಯಲಾಗದ ಭಂಗಮಂ ತನುವಿನೊಳ್ಮೈಧಾಗಳುಂ ಬೇವಸಂ*
*ಬಡಿಕುಂ ಸುತ್ತಿಸುತಕ್ಷಿಯಂ ಸ್ಮರಮಹಾಪಸ್ಮಾರಮೇಗೈವೆ ನಾಂ ॥ ಶೃಂ.ಶ ; ೫೬ ॥*

ಈ ಶತಕಗಳ ಅನುವಾದದಲ್ಲಿ ಬೇರೊಂದು ಸಮಸ್ಯೆಯೂ ನಮಗೆ ಎದುರಾಗುತ್ತದೆ. ಇದರ ಶಿಷ್ಟ ಆವೃತ್ತಿಯೊಂದಿಲ್ಲದಿರುವುದೇ ಆ ಸಮಸ್ಯೆ. ಕೆಲವು ಹೆಚ್ಚಿನ ಪದ್ಯಗಳು ಇರುವುದು ಮಾತ್ರವಲ್ಲದೆ, ಒಂದು ಆವೃತ್ತಿಯಲ್ಲಿರುವ ಪದ್ಯ ಇನ್ನೊಂದು ಆವೃತ್ತಿಯಲ್ಲಿ ಇರುವುದಿಲ್ಲ ; ಕೆಲವು ಆವೃತ್ತಿಗಳಲ್ಲಿ ಸುಭಾಷಿತಗಳು ಆಂಶಿಕ ರೂಪದಲ್ಲಿರುವುದು, ಇನ್ನು ಕೆಲವು ಆವೃತ್ತಿಗಳಲ್ಲಿ ಎರಡು ಸುಭಾಷಿತ ಭಾಗಗಳು ಬೆಸೆದುಕೊಂಡಿರುವುದು - ಇವೇ ಮೊದಲಾದ ವ್ಯತ್ಯಾಸಗಳು ಕಾಣಿಸುತ್ತವೆ.

*ಯಾಂ ಚಿಂತಯಾಮಿ ಸತತಂ ಮಯಿ ಸಾವಿರಕ್ತಾ*
*ಸಾಪ್ಯನ್ಯಮಿಚ್ಛತಿ ಜನಂ ಸ ಜನೋಽನ್ಯಸಕ್ತಃ*
*ಅಸ್ಮತ್ಕೃತೇ ಚ ಪರಿತುಷ್ಯತಿ ಕಾಚಿದನ್ಯಾ*
*ಧಿಕ್ ತಾಂ ಚ ತಂ ಚ ಮದನಂ ಚ ಇಮಾಂ ಚ ಮಾಂ ಚ ॥ ನಿ. ಶ., ೨ ॥*

ಎಂಬುದಾಗಲೀ,

*ಜಯಂತಿ ತೇ ಸುಕೃತಿನೋ ರಸಸಿದ್ಧಾಃ ಕವೀಶ್ವರಾಃ*
*ನಾಸ್ತಿ ಯೇಷಾಂ ಯಶಃಕಾಯೇ ಜರಾಮರಣಜಂ ಭಯಮ್ ॥ ನೀ ಶ., ೨೪ ॥*

ಎಂಬುದಾಗಲೀ,

*ಏಕೋ ದೇವಃ ಕೇಶವೋ ವಾ ಶಿವೋವಾ ಹ್ಯೇಕಂ ಮಿತ್ರಂ ಭೂಪತಿರ್ವಾ ಯತಿರ್ವಾ॥*
*ಏಕೋವಾಸಃ ಪತ್ತನೇ ವಾ ವನೇ ವಾಹ್ಯೇಕಾ ಭಾರ್ಯಾ ಸುಂದರೀ ವಾ ದರೀವಾ ॥ ನೀ.ಶ.,೬೦॥*

ಇವು ಯಾವುವೂ ಶಾಸ್ತ್ರಿಗಳ ಆವೃತ್ತಿಯಲ್ಲಿಲ್ಲ. ಇತ್ತ,

*ಕೇಯೂರಾ ನ ವಿಭೂಷಯಂತಿ ಪುರುಷಂ ಹಾರಾನ ಚಂದ್ರೋಜ್ಜ್ವಲಾ*
*ನ ಸ್ನಾನಂ ನ ವಿಲೇಪನಂ ನ ಕುಸುಮಂ ನಾಲಂಕೃತಾ ಮೂರ್ಧಜಾಃ*
*ವಾಣ್ಯೇಕಾ ಸಮಲಂಕರೋತಿ ಪುರುಷಂ ಯಾ ಸಂಸ್ಕೃತಾ ಧಾರ್ಯತೇ*
*ಕ್ಷೀಯಂತೇ ಖಲು ಭೂಷಣಾನಿ ಸತತಂ ವಾಗ್ಭೂಷಣಂ ಭೂಷಣಮ್ ನೀ.ಶ., ೧೯॥*

ಎಂಬ ಸುಪ್ರಸಿದ್ಧ ಸುಭಾಷಿತದ ಉತ್ತರಾರ್ಧಮಾತ್ರವೇ

ಕ್ಷಿತಿಯೊಳಲಂಕರಿಪುದು ಸಂ
ಸ್ಕೃತವಾಣಿಯದೊಂದೆಯುಡಿಗೆ ತೊಡಿಗೆಗಳಿಂದೇಂ।
ಕ್ಷತಿಯಾಂಪುವು ತೊಡವೆಲ್ಲಂ
ಸತತಂ ವಾಗ್ಭೂಷಣಮೆ ಸುಭೂಷಣಮಲ್ತೇ॥ ನೀ. ಶ., ೧೬॥

ಆದ್ದರಿಂದ ಯಾವುದೇ ಒಂದು ಅಥವಾ ಯಾವುದೋ ಒಂದೇ ಆವೃತ್ತಿಯನ್ನು ಆಧಾರವಾಗಿಟ್ಟುಕೊಂಡು ಶಾಸ್ತ್ರಿಗಳ ಅನುವಾದವನ್ನು ಪರಿಶೀಲಿಸುವುದು ಉಚಿತವಾಗುವುದಿಲ್ಲ. ಶಾಸ್ತ್ರಿಗಳು ಯಾವ ಆವೃತ್ತಿಯನ್ನಿರಿಸಿಕೊಂಡು ಅನುವಾದ ಮಾಡಿದ್ದಾರೆಂಬುದನ್ನು ಮೊದಲು ಕಂಡುಕೊಳ್ಳಬೇಕಾಗುತ್ತದೆ. ಆದರೆ, ಯಾವುದೇ ಆವೃತ್ತಿಯನ್ನು ಅವರು ಆಧಾರವಾಗಿರಿಸಿಕೊಂಡಿದ್ದರೂ, ಅತ್ಯಂತ ಉಪಾದೇಯವಾದ ಅನುವಾದವನ್ನು ಅವರು ಕೊಟ್ಟಿದ್ದಾರೆ ಎಂಬುದರಲ್ಲಿ ಅನುಮಾನವೇನೂ ಉಳಿಯುವುದಿಲ್ಲ. ಸಂಸ್ಕೃತಕ್ಕೆ ಸಂವಾದಿಯಾದ ಕನ್ನಡ ಪರ್ಯಾಯಗಳನ್ನು, ಕನ್ನಡದ ನುಡಿಗಟ್ಟನ್ನು ಕಂಡುಕೊಂಡಿರುವ ಬಗೆ, ಸಂಸ್ಕೃತ ಮತ್ತು ಕನ್ನಡದ ಹಿತಮಿತವಾದ ಶಯ್ಯೆಯನ್ನು ಅಳವಡಿಸಿದ ರೀತಿ, ಸಂಸ್ಕೃತದ ವಿವಿಧ ಛಂದಃಪ್ರಭೇದಗಳಿಗೆ ಸರಿದೊರೆಯೆನ್ನುವಂತೆ ಖ್ಯಾತ ಕರ್ನಾಟಕ ವೃತ್ತಗಳನ್ನು ಮಾತ್ರವಲ್ಲದೆ ಸಂದರ್ಭೋಚಿತವಾಗಿ ಕಂದ, ವಸಂತ ತಿಲಕ, ಮಾಲಿನೀ, ಪೃಥ್ವೀ, ತ್ರೋಟಕ, ರತೋದ್ಧತ, ಹರಿಣಿ, ಭುಜಂಗಪ್ರಯಾತ ಮೊದಲಾದ ವೃತ್ತಗಳನ್ನು ಬಳಸಿ ವಸ್ತುವನ್ನು ಮಾತ್ರವಲ್ಲದೆ ಅದರ ಮೂಲಲಯಗಳನ್ನು ತಂದುಕೊಟ್ಟಿರುವ ವಿಧಾನ (not only the matter, but the music has also to be rendered ಎಂಬ ಧ್ಯೇಯವನ್ನು ಕಾರ್ಯರೂಪಕ್ಕೆ ತಂದಿರುವುದು) ಅನುವಾದಕರ ಮುಂದೆ ಒಂದು ಆದರ್ಶವನ್ನೇ ಇರಿಸಿದೆ ಎನ್ನಬೇಕು. ಹೀಗಾಗಿ, ''ಸಕ್ಕದಮೇಂ ಕನ್ನಡಮೇನೊಕ್ಕಣಿಸಿದ ವಿಷಯ ಮೊಂದೆಗಡ'' ಎಂಬ ಅವರ ಮಾತಿನೊಂದಿಗೆ ನಾವೂ ದನಿಗೂಡಿಸಬೇಕಾಗುತ್ತದೆ.

ಶತಕತ್ರಯದ ಇನ್ನೂ ಕೆಲವು ಅನುವಾದಗಳಿವೆ. ಪ್ರೊ॥ ಎಸ್.ವಿ. ಪರಮೇಶ್ವರ ಭಟ್ಟ ಎ. ರಾಮಕೃಷ್ಣ ಮೊದಲಾದವರ ಅನುವಾದಗಳ ಬೆಳಕಿನಲ್ಲಿ ಶಾಸ್ತ್ರಿಗಳ ಅನುವಾದದ ಶ್ರೇಷ್ಠತೆಯನ್ನು ಕಂಡುಕೊಳ್ಳುವುದು ಕಷ್ಟದ ವಿಷಯವೇನಲ್ಲ. ಆದರೆ, ನನಗಿರುವ ಸಮಯದ ಹಿನ್ನಲೆಯಲ್ಲಿ ಆ ಪ್ರಯತ್ನವನ್ನು ಕೈಬಿಡಬೇಕಾಗಿದೆ. ಆದರೆ ಒಂದು ಮಾತನ್ನು ಹೇಳಬೇಕು. ಶಾಸ್ತ್ರಿಗಳು ತಮ್ಮ ಅನುವಾದಕ್ಕೆ ಹಳೆಗನ್ನಡವನ್ನು ಆಶ್ರಯಿಸಿದರಿಂದ ಅದಕ್ಕೆ ತಾವೇ ಕಾಲದ ಹಾಗೂ ಲಕ್ಷ್ಯದ ಆದರೆ ಓದುಗರ ಮಿತಿಗಳನ್ನು ಹಾಕಿಕೊಂಡುಬಿಟ್ಟರು. ಆದ್ದರಿಂದ ಹೊಸ ಅನುವಾದಗಳ ಅಗತ್ಯವೂ ಏರ್ಪಟ್ಟಿತು. ಶಾಕುಂತಲ ನಾಟಕದ ಅವರ ಅನುವಾದಕ್ಕೆ ಅನ್ವಯಿಸುವ ಮಾತು ಅವರ ಶತಕಗಳ ಅನುವಾದಕ್ಕೂ ಅಷ್ಟೇ ಅರ್ಥಪೂರ್ಣವಾಗಿ ಅನ್ವಯಿಸುತ್ತದೆ. ಮಹಾಕೃತಿಗಳು ಚಿರಾಯುಗಳು ; ಭಾಷಾಂತರಗಳು ಅಲ್ಪಾಯುಗಳು

(Classics are ageless, while translations are dated) ಎಂಬ ಮಾತಿಗೆ ಅವರ ಈ ಅನುವಾದ ಹೊರತಾಗುವುದು ಸಾಧ್ಯವಿರಲಿಲ್ಲವಾದರೂ ಅವರು ಆಯ್ದುಕೊಂಡ ಭಾಷಾಮಾಧ್ಯಮ ಆ ಪ್ರಕ್ರಿಯೆಯ ಗತಿಯನ್ನು ಶೀಘ್ರತಮವಾಗಿಸಿಬಿಟ್ಟಿತು.

ಶಾಸ್ತ್ರಿಗಳ 'ನೀತಿಶತ'ಕದ ಅನುವಾದ ಪಠ್ಯವಾಗಿ ಮನ್ನಣೆಯನ್ನು ಗಳಿಸಿದಾಗ ಅಪ್ರಬುದ್ಧರಿಂದ ಟೀಕೆಗೂ ಒಳಗಾಯಿತು. ಶ್ರೀ ಪಂಡಿತಾರಾಧ್ಯರ ವಿಶೇಷ ಪ್ರಯತ್ನದಿಂದಾಗಿ ಲಂಡನ್ ಮ್ಯೂಜಿಯಂ ಲೈಬ್ರರಿಯಿಂದ ಆ ಉಲ್ಲೇಖ ನಮಗಿಂದು ಲಭಿಸಿದೆ. ಬಿ. ಶ್ರೀನಿವಾಸಯ್ಯಂಗಾರ್ ಎಂಬ ಕನ್ನಡ ಪಂಡಿತರೇ ಇಲ್ಲಿಯ (ಹಳಗನ್ನಡ) ಭಾಷೆ ವ್ಯಾಕರಣ ಮತ್ತು ಆಶಯಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳಲಾರದೆ ತಪ್ಪಾಗಿ ಟೀಕಿಸಿದಾಗ ಈ ಟೀಕೆಯನ್ನು ನಂಬಿದ ಅನೇಕ ವಿದ್ಯಾರ್ಥಿಗಳು ಒಡಕು ನಾವೆಯ ಮೇಲೆ ಕುಳಿತು ನದಿಯನ್ನು ದಾಟುವುದಕ್ಕೆ ಪ್ರಯತ್ನಿಸಿದವರ ಫಲವನ್ನು ಹೊಂದುತ್ತಾರಲ್ಲಾ (ಬಸವಪ್ಪಶಾಸ್ತ್ರಿಗಳ ಸಮಗ್ರ ಕೃತಿಗಳು, ಪು.೮೧೨) ಎಂದು ಭಾಷಾಂತರದ ಸಮರ್ಥನೆಯೊಂದನ್ನು ( A defence of translation) ಬರೆಯಬೇಕಾಯಿತು. ಇಂಥ ಇನ್ನೊಂದು ಸಮರ್ಥನೆ ನನ್ನ ಗಮನಕ್ಕೆ ಬಂದಿಲ್ಲ. ಈ ದೃಷ್ಟಿಯಿಂದಲೂ ಶಾಸ್ತ್ರಿಗಳು ಇತಿಹಾಸವನ್ನು ನಿರ್ಮಿಸಿದ್ದಾರೆಂದೇ ಹೇಳಬೇಕು. (ಇದು ನ್ಯೂಮನ್ ಮತ್ತು ಮ್ಯಾಥ್ಯೂ ಅರ್ನಾಲ್ಡರ ನಡುವೆ ಹೋಮರನ ಕಾವ್ಯದ ಅನುವಾದದ ಬಗ್ಗೆ ನಡೆದಂಥ ಐತಿಹಾಸಿಕ ಚರ್ಚೆಯ ದೂರದ, ದುರ್ಬಲ ಪ್ರತಿಧ್ವನಿ 'ಎಂದೆನ್ನಿಸಿಕೊಳ್ಳಬಹುದು).

ನೀತಿಶತಕದ ಒಂದು ಸುಭಾಷಿತ ಹೀಗಿದೆ:

*ಜಲಧಿತಟಸ್ಥಶುಕ್ತಿಯೊಳುರುಳ್ದು ಜಲಂ ಪೊಸಮುತ್ತೆನಿಪ್ಪುದಾ*
*ಜಲಮೆ ಸರೋಜಪತ್ರದೊಳುರುಳ್ದೊಡೆ ಮುಕ್ತಿಕದಂತೆ ತೋರ್ಕುಮಾ*
*ಸಲಿಲಮೆ ಕಾದ ಕರ್ಬುನದ ಮೇಲುರುಳಲ್ ಪೆಸರುಂ ಮಸುಳ್ಗುಮೀ*
*ಯಿಳೆಯೊಳಗಿಂತುಟಾಗಿಸುವುದುತ್ತಮ ಮಧ್ಯಮ ನೀಚರಾಶ್ರಯಂ // ೫೬//*

ಈ ಸುಭಾಷಿತ ಒಂದು ರೀತಿಯಲ್ಲಿ ಶಾಸ್ತ್ರಿಗಳ ಅನುವಾದದ ಬಗೆಗಿನ ಕೊನೆಯ ಮಾತನ್ನು ಹೇಳುತ್ತದೆಂದು ನಾನು ಭಾವಿಸಿದ್ದೇನೆ. ಲೋಕದಲ್ಲಿ ಉತ್ತಮ, ಮಧ್ಯಮ ಮತ್ತು ಅಧಮ ವ್ಯಕ್ತಿಗಳಿರುವಂತೆಯೇ, ಸ್ವತಂತ್ರ ರಚನೆಯ ಕ್ಷೇತ್ರದಲ್ಲೆಂತೋ, ಅನುವಾದದ ಕ್ಷೇತ್ರದಲ್ಲಿಯೂ ಉತ್ತಮ, ಮಧ್ಯಮ ಮತ್ತು ಅಧಮ ಅನುವಾದಕರು ಇರುತ್ತಾರೆ. ಸಂಸ್ಕೃತ ಮತ್ತು ಕನ್ನಡ ಭಾಷೆಗಳ ಆಳವಾದ ಪಾಂಡಿತ್ಯ, ಸಾಹಿತ್ಯದ ತೀವ್ರಸಂವೇದನೆ ಮತ್ತು ಭಾಷಾಂತರದ ಅಸದೃಶ ಸಾಮರ್ಥ್ಯ - ಇವುಗಳಿಂದ ಸಾಗರದ ತೀರದಲ್ಲಿರುವ ಕಪ್ಪೆಯ ಚಿಪ್ಪಿನಂತೆ ಇದ್ದ ಶಾಸ್ತ್ರಿಗಳು ಸಂಸ್ಕೃತದ ಈ ಅನರ್ಘ್ಯಸಾಹಿತ್ಯದ ಸ್ವಾತಿಯ ಹನಿಗಳನ್ನು ಸ್ವೀಕರಿಸಿ, ಅಪೂರ್ವವಾದ ಮುತ್ತುಗಳನ್ನಾಗಿಸಿಕೊಟ್ಟಿದ್ದಾರೆ. ಅದಕ್ಕಾಗಿ ಅವರು ಅಭಿನಂದನೀಯರೂ ಆಗಿದ್ದಾರೆ.

■

# ಸೂಫೀ ಸಂತರು

ಡಾ|| ಅಬ್ದುಲ್ ಹಮೀದ್

---

## ಇಸ್ಲಾಂ ಧರ್ಮ

ಸೂಫೀ ಸಂತರುಗಳ ಬಗ್ಗೆ ತಿಳಿಯುವುದರ ಜೊತೆಗೆ ಇಸ್ಲಾಂ ಧರ್ಮದ ಬಗ್ಗೆ ಸ್ವಲ್ಪ ತಿಳಿದುಕೊಳ್ಳುವುದು ಸೂಕ್ತ.

ಅರಬ್‌ದೇಶದ ಮೆಕ್ಕಾ ನಗರದಲ್ಲಿ ಕ್ರಿ.ಶ. ೫೭೦ ರಲ್ಲಿ ಹ.ಮುಹಮ್ಮದ್ ಪೈಗಂಬರ ಜನ್ಮವಾಯಿತು. ಇವರ ವಯಸ್ಸು ೪೦ ಕ್ಕೆ ಕಾಲಿಡುತ್ತಿದ್ದಂತೆಯೇ ಇವರಿಗೆ ನಬೂವತ್ (ಪ್ರವಾದಿತ್ವ)ವು ಭಗವಂತನಿಂದ ಲಭಿಸಿ ಅಂದಿನಿಂದ ಇವರು ಇಸ್ಲಾಂ ಧರ್ಮದ ಬೋಧನೆಯನ್ನು ಪ್ರಾರಂಭಿಸಿದರು. ಇವರು ಜಗತ್ತಿಗೇ ಒಂದು ಬೆಳಕಾಗಿ ಬಂದರು. ಇವರ ಬೋಧನೆಗಳಿಂದ ತೃಪ್ತರಾದ ಜನ ಬಹಳ ಬೇಗ ಇಸ್ಲಾಂ ಧರ್ಮವನ್ನು ಸ್ವೀಕರಿಸಲಾರಂಭಿಸಿದರು. ಸಾಕಷ್ಟು ವಿರೋಧವಿದ್ದರೂ ಇವರ ಬೋಧನೆಗಳನ್ನು ಸೂಫೀ ಸಂತರುಗಳು ಜಗತ್ತಿನಾದ್ಯಂತ ಪ್ರಚಾರಗೊಳಿಸಲು ಕಟಿಬದ್ಧರಾದರು. ಸೂಫೀಸಂತರುಗಳು ಪ್ರೇಮಮಾರ್ಗಿಗಳಾಗಿದ್ದರಿಂದ ಜಗತ್ತಿನ ಎಲ್ಲ ಭಾಗದ ಜನರೂ ಇವರತ್ತ ಬಹಳ ಬೇಗ ಆಕರ್ಷಿತರಾಗಿ ಹೊಸಧರ್ಮವನ್ನು ಸ್ವೀಕರಿಸುತ್ತಿದ್ದರು.

## ಧಾರ್ಮಿಕ ಪ್ರಗತಿ

ಯಾವುದೇ ಧರ್ಮದ ಸರ್ವತೋಮುಖ ಪ್ರಗತಿ ಅದನ್ನು ಹುಟ್ಟುಹಾಕಿದ ಮಹಾತ್ಮರುಗಳ ಚಾರಿತ್ರ್ಯದ ಮೇಲೆ ಅವಲಂಬಿತವಾಗಿರುತ್ತದೆ. ಧರ್ಮದ ವಿಜಯ, ಅದರ ಮುಖಂಡರುಗಳು ಸಾಹಸ ಮತ್ತು ಸದ್ಗುಣಗಳನ್ನು ಆಧರಿಸಿರುತ್ತದೆ. ಹ.ಮಹಮ್ಮದರ ನಂತರದ ಖಲೀಫಾರ ಸದ್ಗುಣಗಳು, ನಡತೆಗಳು ಇಸ್ಲಾಂ ಧರ್ಮದ ಪ್ರಚಾರ, ದೃಢತೆ, ಹಾಗೂ ಔನ್ನತ್ಯಗಳಿಗೆ ಕಾರಣವಾಗಿದ್ದುವು. ರೋಂ ಸಾಮ್ರಾಜ್ಯವು ಉನ್ನತ ಶಿಖರಕ್ಕೇರಲು ಸುಮಾರು (೬೦೦) ಆರುನೂರು ವರ್ಷಗಳು ಹಿಡಿದಿದ್ದರೆ ಇಸ್ಲಾಂ ಧರ್ಮವು ಆ ಮಟ್ಟವನ್ನು ಕೇವಲ ಅರವತ್ತು (೬೦) ವರ್ಷಗಳಲ್ಲಿ ಮುಟ್ಟಿತ್ತೆಂದರೆ ಅದರ ವೈಚಾರಿಕತೆಯ ಮರ್ಮವು ಪ್ರಶಂಸಾರ್ಹವಾದುದು. ಪಾಶ್ಚಾತ್ಯ ವಿದ್ವಾಂಸ ಎಚ್.ಆರ್. ಗಿಬ್‌ನ ಅಭಿಪ್ರಾಯದಲ್ಲಿ - "of all the religion of East Asia Islam has generally been regarded as the most worldly."[೧] ಎಂದಿದ್ದಾನೆ. ಅಂದರೆ ಪೂರ್ವ ಏಷ್ಯಾ ಖಂಡದ ಎಲ್ಲ ಧರ್ಮಗಳಿಗಿಂತ ಇಸ್ಲಾಂ ಧರ್ಮವು ಹೆಚ್ಚು ಪ್ರಾಪಂಚಿಕವಾಗಿ ನಿರ್ಧರಿಸಲ್ಪಟ್ಟಿದೆ. ಜನಸಾಮಾನ್ಯರ ಹೆಚ್ಚು ಹತ್ತಿರವಾಗಿದ್ದಿತು.

## ಇಸ್ಲಾಂಪೂರ್ವ ಭಾರತದ ಸಾಮಾಜಿಕ ಪರಿಸ್ಥಿತಿ

ಹೀಗಿದ್ದರೂ ಇಸ್ಲಾಂ ಧರ್ಮದ ವಿರೋಧಿಗಳಿಗೇನೂ ಕಡಿಮೆ ಇರಲಿಲ್ಲ. ಭಾರತದಲ್ಲಿ ಈ ಧರ್ಮವು ಪ್ರವೇಶಿಸುವುದಕ್ಕೆ ಮೊದಲು ಶೈವ, ವೈದಿಕ, ಜೈನ, ಬೌದ್ಧಮತಗಳಂತಹ ವಿಚಾರಧಾರೆಗಳಿದ್ದರೂ ಇಲ್ಲಿನ ಜನರು ಎಲ್ಲದರಿಂದಲೂ ಬೇಸತ್ತಿದ್ದರು. ಇವು ಯಾವುವೂ, ಸಾಮಾನ್ಯ ಜನರಿಗೆ, ಅದರಲ್ಲೂ ಕೀಳುಜನರೆಂದು ಪರಿಗಣಿಸಲ್ಪಟ್ಟವರಿಗೆ 'ಮುಕ್ತಿ'ಯನ್ನು ಕೊಡುವ ಮಟ್ಟದಲ್ಲಿ ಇರಲಿಲ್ಲ. 'ಮುಕ್ತಿ' ಕೇವಲ ಉನ್ನತ ವರ್ಗದವರಿಗೆ ಮಾತ್ರ ಮೀಸಲಾಗಿದ್ದಿತು. ಸಾಮಾನ್ಯರು ಎಷ್ಟೇ ಪುಣ್ಯಕಾರ್ಯಗಳನ್ನು ಮಾಡಿದರೂ ಸ್ವರ್ಗ ಅವರಿಗೆ ಸಿಗುವಂತಿರಲಿಲ್ಲ. ಹೀಗಾಗಿ ಭಾರತದ ಹೆಚ್ಚು ಜನಸಂಖ್ಯೆ ಮುಕ್ತಿಯಿಂದ ವಂಚಿತರಾಗಿ, ಬೇರೊಂದು ಮುಕ್ತಿ ಸಿಗುವಂತಹ ಧರ್ಮದ ನಿರೀಕ್ಷೆಯಲ್ಲಿದ್ದರು ಎಂಬುದನ್ನು ಯಾರೂ ನಿರಾಕರಿಸುವಂತಿಲ್ಲ. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಇಸ್ಲಾಂಧರ್ಮವು ಭಾರತಕ್ಕೆ ಕ್ರಿ.ಶ. ೬೩೬ರಲ್ಲಿ ಪ್ರವೇಶಿಸಿತು.

ಇಸ್ಲಾಂ ಧರ್ಮದ ಪ್ರಗತಿಯನ್ನು ಸಹಿಸದ ಕೆಲವು ಕುಹಕಿಗಳು ಈ ಧರ್ಮವನ್ನು ಕತ್ತಿಯಿಂದ ಹರಡಿದ ಧರ್ಮವೆಂದು ಅಪಪ್ರಚಾರಗೊಳಿಸಲಾರಂಭಿಸಿದರು. ಕೇವಲ ಖಡ್ಗವಾದದಿಂದ ಯಾವುದೇ ಒಂದು ಧರ್ಮ ಹರಡಲು ಸಾಧ್ಯವಿಲ್ಲವೆಂಬುದು ತ್ರಿಕಾಲ ಸತ್ಯವಾದುದು. 'ಧರ್ಮ' ಎಂದ ಮೇಲೆ ಸರ್ವಗ್ರಾಹ್ಯವಾಗಿರಬೇಕಾಗುತ್ತದೆ.

೧. ರಾಮಧಾರಿಸಿಂಹ ದಿನಕರ್ - ಸಂಸ್ಕೃತಿಕೆ ಚಾರ್ ಅಧ್ಯಾಯ ಪುಟ - ೨೬೯

ಮುಕ್ತಿದಾಯಕವಾಗಿರಬೇಕು. ಸರ್ವರ ಮನಸ್ಸಿಗೆ ಹಿಡಿಯುವಂತಿರಬೇಕು. ಈ ಧರ್ಮದ ಮರ್ಮವನ್ನರಿತ ಭಾರತೀಯ ಹಿಂದೂ ವಿಭೂತಿಪುರುಷ ಶ್ರೀಸ್ವಾಮಿ ವಿವೇಕಾನಂದರು, ಇಸ್ಲಾಂ ಧರ್ಮದ ಬಗ್ಗೆ ಸ್ಪಷ್ಟ ಹಾಗೂ ದಿಟ್ಟತನದ ಸತ್ಯವನ್ನು ಹೇಳಲು ಹಿಂಜರಿಯಲಿಲ್ಲ.

The Mohammadan conquest of India came as salvation to the down trodden, to the poor, that is why one fifth of our people have become Mohammadans, It was not the sword that did it all[೧] ಎಂದರೆ

Swamy Vivekananda. The future of India

ಹ.ಮುಹಮ್ಮದ್ ಪೈಗಂಬರ ಅನುಯಾಯಿಗಳು ಭಾರತಕ್ಕೆ ಇಲ್ಲಿನ ದಲಿತ ಹಾಗೂ ಬಡವರಿಗೆ ಧಾರ್ಮಿಕ ಮುಕ್ತಿಯನ್ನು ಕೊಡಲು ಬಂದಾಗ ಭಾರತದ ಜನಸಂಖ್ಯೆಯ (1/5)ಐದನೇ ಒಂದು ಭಾಗದಷ್ಟು ಜನರು ಇಸ್ಲಾಂ ಧರ್ಮವನ್ನು ಸಂತೋಷದಿಂದಲೇ ಸ್ವೀಕರಿಸಿದರು. ಇದೆಲ್ಲವೂ ಕತ್ತಿಯಿಂದ ಸಾಧ್ಯವಾಗಲಿಲ್ಲ ಎಂಬುದರಲ್ಲಿನ ಮಾರ್ಮಿಕತೆಯನ್ನು ಪ್ರತಿಯೊಬ್ಬ ಭಾರತೀಯನೂ ಚಿಂತಿಸಬೇಕಾದ ಅವಶ್ಯಕತೆ ಇದೆ. ಇಸ್ಲಾಂ ಧರ್ಮವು ಭಾರತಕ್ಕೆ ಬರುವ ಮುನ್ನ ಇಲ್ಲಿ ಮಾನವೀಯತೆಯ ಅಭಾವವಿತ್ತೆಂಬುದು ತಿಳಿಯುತ್ತದೆ. ಸೂಫೀಸಂತರ ಪ್ರೇಮಪೂರ್ವಕ ವರ್ತನೆ ಇಲ್ಲಿನ ಹೆಚ್ಚು ಜನರನ್ನು ಆಕರ್ಷಿಸಿತು.

ಭಾರತದ ಧಾರ್ಮಿಕ ಪರಿಸ್ಥಿತಿಯ ಬಗ್ಗೆ ಶ್ರೀ ಸ್ವಾಮಿ ವಿವೇಕಾನಂದರು ಮತ್ತೊಂದು ಕಡೆ ಹೀಗೆಂದಿದ್ದಾರೆ -

ಜೀಸಸ್ ಕ್ರಿಸ್ತನು ಭಾರತದ ಜ್ಞಾನವನ್ನರಿಯಲು ಇಲ್ಲಿನ ಉನ್ನತ ವರ್ಗದ ಜನರ ಹತ್ತಿರ ಬಂದನಂತೆ. ಆತನು ಮೊಟ್ಟಮೊದಲು ಭಾರತದ ಜಗನ್ನಾಥ (ಪುರಿ) ಮಂದಿರಕ್ಕೆ ಭೇಟಿಕೊಟ್ಟನು. ಆದರೆ ಅಲ್ಲಿಯ ಪೂಜಾರಿಗಳ ವರ್ತನೆ, ಅಸ್ಪೃಶ್ಯತಾ ಭಾವನೆ, ಮೂರ್ತಿಪೂಜೆ ಇವುಗಳಿಂದ ಬೇಸತ್ತ ಕ್ರಿಸ್ತನು ಅಲ್ಲಿಂದ ಟಿಬೆಟ್ಟಿನ 'ಲಾಮಾ' ಬೌದ್ಧಗುರುಗಳತ್ತ ಸಾಗಿದನು. ಅಲ್ಲಿಯ ವಿಚಾರಗಳಿಂದ ತೃಪ್ತನಾಗಿ ಜೆರೊಸೆಲೆಂಗೆ ವಾಪಸ್ಸಾದನು - The Crist went to the Jagannath Temple to study with the Brahmins, but, became disguested with their exclusiveness and their idols and so he went to the Lamas of Tibet instead, became perfect and went home"[೧]

Sri Swamy Vivekananda, The Message of India.

ಕ್ರಿ.ಶ. ೫ನೇ ಶತಮಾನದ ಹೊತ್ತಿಗೆ ಭಾರತದಲ್ಲಿ ವೇದಪರ ಮತ್ತು ವೇದವಿರೋಧಿಗಳೆಂಬ ಸಮಾಜಗಳಾಗಿ ವಿಭಜಿಸಲ್ಪಟ್ಟಿದ್ದುವು. ಜಾತಿ ಪದ್ಧತಿಗಳು ಹೀನವೆಂದು ತಿಳಿದಿದ್ದರು.

---

೧. ಡಾ|| ರಾಮಧಾರಿಸಿಂಹ ದಿನಕರ - ಸಂಸ್ಕೃತಿಕೆ ಚಾರ್ ಅಧ್ಯಾಯ - ಪುಟ 265

ದೇವಿ-ದೇವತೆಗಳ ಪೂಜೆ, ಸ್ವರ್ಗ, ನರಕ ಮುಂತಾದವುಗಳಲ್ಲಿ ಜನರಲ್ಲಿನ ನಂಬಿಕೆಗಳು ದೂರವಾಗತೊಡಗಿದ್ದುವು. ಉಪನಿಷತ್ಕಾರರಲ್ಲಿ ಮಾನವ ನಿರ್ಮಿತ ದೇವಿ-ದೇವತೆಗಳಲ್ಲಿ ಯಾವ ಶಕ್ತಿಯೂ ಅಡಗಿಲ್ಲವೆಂಬ ಭಾವನೆ ಬೇರೂರತೊಡಗಿತ್ತು. ಯಜ್ಞ, ಹೋಮ, ಉಪವಾಸಗಳಂತ ಕಾರ್ಯಗಳು ಅರ್ಥಹೀನವೆಂಬುವನ್ನು ಮನಗಂಡಿದ್ದರು. ಪಂಡಿತ ಜಯಚಂದ್ರ ವಿದ್ಯಾಲಂಕಾರರ ಅಭಿಪ್ರಾಯದಂತೆ ಭಾರತದಲ್ಲಿ ಚಿಂತನೆ, ಸಂಶೋಧನೆ ಮುಂತಾದ ಕಾರ್ಯಗಳು ಕ್ರಿ.ಶ. ೬ನೇ ಶತಮಾನದತನಕ ಬಹಳ ಚೆನ್ನಾಗಿ ನಡೆದಿದ್ದುವು. ಆದರೆ "೬ನೇ ಶತಮಾನದಿಂದ ೧೯ನೇ ಶತಮಾನದವರೆಗಿನ ಸುಮಾರು 1200 ವರ್ಷಗಳ ಕಾಲವನ್ನು ಈ ದೇಶದವರು ವ್ಯರ್ಥವಾಗಿ ಕಳೆದಿದ್ದಾರೆ" ಎನ್ನುತ್ತಾರೆ. ಒಂದು ರೀತಿಯಲ್ಲಿ ಇದು ಸತ್ಯವೆಂದೇ ಹೇಳಬೇಕಾಗುತ್ತದೆ. ಏಕೆಂದರೆ ಅಷ್ಟುಕಾಲದಲ್ಲಿ ಭಾರತದಲ್ಲಿ ಯಾವ ಹೊಸ ಜ್ಞಾನವೂ ಮೂಲ ವಿಚಾರಗಳೂ ಸೃಷ್ಟಿಯಾಗಿಲ್ಲ. ಕ್ರಿ.ಶ.12ನೇ ಶತಮಾನದಲ್ಲಿ ಭಾರತದಲ್ಲಿ ಅನೇಕ ಸಿದ್ಧಾಂತಗಳ ಸೃಷ್ಟಿ ಆದರೂ ಅವೆಲ್ಲವೂ ಹಿಂದಿನ ದ್ವೈತಾದ್ವೈತಗಳ ಹೊಸ ರೂಪಗಳೇ ಆಗಿದ್ದುವು.

ಆರನೇ ಶತಮಾನಕ್ಕಿಂತ ಹಿಂದಿನ ಭಾರತವು ಧಾರ್ಮಿಕ, ವೈಜ್ಞಾನಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಗಣನೀಯ ಪ್ರಗತಿ ಸಾಧಿಸಿ ಜಗತ್ತನ್ನು ಬೆರಗುಗೊಳಿಸಿತ್ತು. ತನ್ನ ಸುವರ್ಣಯುಗವನ್ನೆ ಕಂಡಿತ್ತು. ನಂತರದ ಕಾಲದಲ್ಲಿ ತಂತ್ರಮಾರ್ಗ, ವಾಮಮಾರ್ಗಗಳ ವೈರುಧ್ಯಸಾಧನೆಯಂತಹ ಕೀಳುಮಾರ್ಗಗಳಿಂದಾಗಿ ಜನ ಬೇಸತ್ತು ಯಾವುದಾದರೂ ಒಂದು ಹೊಸ ಪಂಥದ ಆಹ್ವಾನಕ್ಕೆ ನೂರಾರು ವರ್ಷಗಳಿಂದ ಹಾತೊರೆಯುತ್ತಿದ್ದರು. ಕಾಶ್ಮೀರದ ಒಬ್ಬ ದಾರ್ಶನಿಕ ಜಯಂತಭಟ್ಟನೆಂಬುವನು ಹೀಗೆಂದಿದ್ದಾನೆ -"ಹಂ ಮೆ ನಯೀ ವಸ್ತು ಕಿ ಕಲ್ಪನಾ ಕರ್ನೆಕಿ ಶಕ್ತಿ ಕಹಾಂ ಹೈ" ಎಂದರೆ ನಮ್ಮಲ್ಲಿ ಹೊಸ ವಿಷಯಗಳ ಬಗ್ಗೆ ಕಲ್ಪನೆ ಮಾಡುವ ಶಕ್ತಿ ಎಲ್ಲಿದೆ ? ಎಂಬ ನಿರಾಶೆಯ ಭಾವದಲ್ಲಿ ಇಡೀ ಭಾರತದ ಪರಿಸ್ಥಿತಿಗೆ ಕನ್ನಡಿ ಹಿಡಿದಂತಿದೆ.

ಕ್ರಿ.ಶ. ಏಳನೇ ಶತಮಾನದಲ್ಲಿ ಭಾರತಕ್ಕೆ ಇಸ್ಲಾಂ ಧರ್ಮವು ಸೂಫೀ ಸಂತ 'ಮುಫೈರಾಬಿನ್‌ಷ ಆಬ' ಎಂಬುವರಿಂದ ಮೊಟ್ಟಮೊದಲು ಮಲಬಾರ್ ತೀರದ ಜಾಮೋರಿನ್ ದೊರೆಗಳಿಗೆ ಉಪದೇಶಿಸಲ್ಪಟ್ಟಿತು. ಈ ಧರ್ಮದ ಪರಿಚಯವಾದ ತಕ್ಷಣ ಭಾರತದಲ್ಲಿನ ಉನ್ನತ ವರ್ಗದವರಿಂದ ಪರಿತ್ಯಕ್ತ ಜನ ಸಮುದಾಯವು ಬಹಳ ಬೇಗ ತಮ್ಮ ಧಾರ್ಮಿಕ ಆಸೆ ಆಕಾಂಕ್ಷೆಗಳನ್ನು ಈಡೇರಿಸಿಕೊಳ್ಳಲು ಇಸ್ಲಾಂ ಧರ್ಮದತ್ತ ಸಹಜವಾಗಿಯೇ ಆಕರ್ಷಿತರಾದರು. ಈ ಧರ್ಮದ ಬೋಧನೆಗಳಿಂದ ತೃಪ್ತರಾದ ಜನರು ತಮ್ಮಲ್ಲಿ ಭ್ರಾತೃತ್ವಭಾವವನ್ನು, ಸಮಾನತೆಯನ್ನು, ಮುಕ್ತಿಯ ಉನ್ನತ ವಿಚಾರಗಳನ್ನು ತಿಳಿದು ಅನುಭವಿಸಲಾರಂಭಿಸಿದರು.

ಚಿಂತನ ಪರಂಪರೆಯ ಅಸ್ಥಿರ ಸ್ಥಿತಿಯಲ್ಲಿದ್ದ ಭಾರತವು ಇಸ್ಲಾಂ ಧರ್ಮದ ಪರಿಚಯದಿಂದಾಗಿ ಒಂದು ರೀತಿಯಲ್ಲಿ ಅದು ಜಾಗೃತಗೊಳ್ಳಲಾರಂಭಿಸಿತು.

ಏಕದೇವೋಪಾಸನೆ ಭಾರತಕ್ಕೆ ಹೊಸದಲ್ಲದಿದ್ದರೂ ಅದು ಇಸ್ಲಾಂ ಧರ್ಮದಿಂದಾಗಿ ಪುನಃಶ್ಚೇತನಗೊಂಡು ಏಕದೇವವಾದದಂತಹ ಅನೇಕ ಹೊಸ ಹೊಸ ವೈಚಾರಿಕತೆ, ಧಾರ್ಮಿಕ ಭಾವನೆಗಳಿಗೆ ಪ್ರೇರೇಪಿಸಲ್ಪಟ್ಟಿತು. ಇದರ ಪರಿಣಾಮವೇ ೧೨ನೇ ಶತಮಾನದ ವೀರಶೈವ ಧರ್ಮವು ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತದೊಂದಿಗೆ ಭಾರತದಲ್ಲಿ ಸ್ಪಷ್ಟವಾಗಿ ಹೊರಹೊಮ್ಮಿತು.

ವೀರಶೈವ ಧರ್ಮಕ್ಕೂ ಇಸ್ಲಾಂ ಧರ್ಮದ ಶಾಖಾಮತವಾದ ಸೂಫೀ ಪಥದ ಸಿದ್ಧಾಂತಕ್ಕೂ ತಾತ್ತ್ವಿಕ ದೃಷ್ಟಿಯಲ್ಲಿ ಯಾವ ವ್ಯತ್ಯಾಸವೂ ಇಲ್ಲ.[೧] ಇಂತಹ ಧಾರ್ಮಿಕ ವಿಚಾರಗಳ ತಳಹದಿಯ ಮೇಲೆ ಪ್ರೇಮಭಾವನೆಗಳೊಂದಿಗೆ ಭಾರತದಲ್ಲಿ ಒಂದು ರೀತಿಯ ಹೊಸ ವೈಚಾರಿಕ ಕ್ರಾಂತಿಗಳು ನಡೆಯತೊಡಗಿದವು.

ಭಾರತದಲ್ಲಿ ಹೊಸ ವೈಚಾರಿಕಕ್ರಾಂತಿಗೆ ಕಾರಣರಾದ ಇಸ್ಲಾಂ ಧರ್ಮಗುರುಗಳು, ಸೂಫೀಸಂತರ ಬಗ್ಗೆ ಮುಂದಿನ ಪುಟಗಳಲ್ಲಿ ಸಂಕ್ಷಿಪ್ತವಾಗಿ ತಿಳಿಯೋಣ.

**ಸೂಫೀಸಂತರು**

ಪ್ರಪಂಚದಲ್ಲಿ ಅಲ್ಲಾಹ್ (ಈಶ್ವರ)ನ ಬಗ್ಗೆ ವೈವಿಧ್ಯಮಯ ಭಾವನೆಗಳು, ಕಲ್ಪನೆಗಳು ಹಬ್ಬಿವೆ. ಜಗತ್ತಿನ ಪ್ರಮುಖ ಧರ್ಮಗಳೆಂದರೆ ಕ್ರೈಸ್ತ, ಇಸ್ಲಾಂ, ಯಹೂದಿ, ಮತ್ತು ಹಿಂದೂ ಎಂದು ಗುರ್ತಿಸಬಹುದು. ಕ್ರೈಸ್ತಧರ್ಮವನ್ನು ಬಿಟ್ಟರೆ ಜಗತ್ತಿನಾದ್ಯಂತ ಇಸ್ಲಾಂ ಧರ್ಮವು ಹೆಚ್ಚು ಪ್ರಚಾರದಲ್ಲಿದೆ. 'ಸೂಫೀ' ಎಂಬ ಮತವು ಇಸ್ಲಾಂ ಧರ್ಮದಲ್ಲಿ ಹಾಸುಹೊಕ್ಕಾಗಿದ್ದರೂ ತನ್ನದೇ ಆದ ಸಿದ್ಧಾಂತವನ್ನು ಹೊಂದಿರುವ ಒಂದು ವಿಶಿಷ್ಟ ಅದ್ವೈತಪಥ. ಸೂಫೀ ಸಂತರ ಬಗ್ಗೆ ತಿಳಿದುಕೊಳ್ಳುವುದಕ್ಕೆ ಮೊದಲು ಇದರ ನೆಲೆ, ಹಿನ್ನೆಲೆಯನ್ನು ಅರಿತುಕೊಳ್ಳುವುದು ಉಚಿತ.

**ನೆಲೆ-ಹಿನ್ನಲೆ**

'ಸೂಫೀ' ಶಬ್ದದ ಉತ್ಪತ್ತಿಯನ್ನು ಅನೇಕ ವಿದ್ವಾಂಸರು ಅನೇಕ ರೀತಿಯಲ್ಲಿ ವ್ಯಾಖ್ಯಾನಿಸಿದ್ದಾರೆ. ಕಾಶ್ಮೀರದ ಪ್ರಸಿದ್ಧ ಸಂತ ಅಲಿ ಹುಜ್ವೇರಿಯವರು ತಮ್ಮ ಗ್ರಂಥ ಕಶ್ಫುಲ್ ಮಹಜೂಬ್‌ನಲ್ಲಿ 'ಸಫಾ' ಎಂಬ ಶಬ್ದದಿಂದ 'ಸೂಫಿ' ಎಂದರೆ 'ಪವಿತ್ರ' 'ಸ್ವಚ್ಛ' ಎಂಬ ಅರ್ಥವಿದ್ದು ತಮ್ಮ ಶುದ್ಧ, ಸ್ವಚ್ಛ ಆಚರಣೆಗಳಿಗೆ ಹೆಸರಾಗಿದ್ದ ಅರಬ್ ಜನರಿಂದ ಈ ಶಬ್ದವು ಹುಟ್ಟಿದೆ ಎಂದು ಅಭಿಪ್ರಾಯಿಸಿದ್ದಾರೆ.[೨]

೧. ಹೆಚ್ಚಿನ ವಿವರಗಳಿಗೆ ನೋಡಿ - ಸೂಫಿ ಪಥ ಮತ್ತು ಶರಣ ಪಥ, ಡಾ|| ಅಬ್ದುಲ್‌ಹಮೀದ್.
೨. ಹ, ಅಲಿಹುಜ್ವೇರಿ - ಕಶ್ಫುಲ್ ಮಹಜೂಬ್ - ಪುಟ ೬೦

ಮದೀನಾ ನಗರದ ಮಸೀದಿಯ ಜಗುಲಿಯ ಮೇಲೆ ಯಾವ ಫಕೀರರು ಕುಳಿತುಕೊಳ್ಳುತ್ತಿದ್ದರೋ ಅವರನ್ನು 'ಸೂಫೀ'ಗಳೆಂದು ಕರೆಯುತ್ತಿದ್ದರು. ಅವರಿಂದಲೇ ಮುಂದೆ ನಡೆದು ಸೂಫೀ ಜ್ಞಾನವು ಉದಿಸಿ ಪ್ರೇಮಮಾರ್ಗವು ಆರಂಭವಾಯಿತೆಂದೂ, ಅವರನ್ನು 'ಅಲ್‌ಸುಫ್ಫಾಫ್ ಎಂದು ಕರೆಯಲಾಗುತ್ತಿತ್ತೆಂದೂ ನಂಬಲಾಗಿದೆ.

'ಗಿಯಾಮುಲ್ ಲುಗಾತ್'[೧] ಎಂಬ ಗ್ರಂಥದಲ್ಲಿ ಸೂಫಿ ಎಂಬ ಶಬ್ದವು 'ಸೂಫ್' ಎಂಬ ಶಬ್ದದಿಂದ ಆಗಿದೆ ಎಂದು ಗೊತ್ತಾಗುತ್ತದೆ. 'ಸೂಫ್' ಎಂದರೆ ಅರಬ್ಬೀ ಭಾಷೆಯಲ್ಲಿ ಉಣ್ಣೆ (wool) ಎಂದರ್ಥ. ಯಾವ ಫಕೀರರು ಉಣ್ಣೆರಗ್ಗುಗಳನ್ನು ಹೊದ್ದು, ನಿಲುವಂಗಿಗಳನ್ನು ತೊಟ್ಟು ಏಕೇಶ್ವರವಾದದಲ್ಲಿ ನಿಷ್ಠೆಯನ್ನಿಟ್ಟು ಪ್ರೇಮಪೂರ್ವಕ ವ್ಯವಹಾರದಿಂದ ಜನಮನಗಳನ್ನು ಗೆದ್ದು ಭಗವದ್ಭಕ್ತಿಯಲ್ಲಿ ಲೀನರಾಗಿರುತ್ತಿದ್ದರೋ ಅವರನ್ನು 'ಸೂಫಿ'ಗಳೆಂದು ಕರೆಯಲಾಗುತ್ತಿತ್ತು ಎಂದು ಗೊತ್ತಾಗುತ್ತದೆ.

ಡಾ|| ಅಹಮದ್ ಹುಸೇನ್‌ರ ಅಭಿಪ್ರಾಯದಲ್ಲಿ - The word sufi is an Arabic one, which is derived from the root " Suf" which means wool. Those Fakirs were called 'sufi' is Arabia who used to wear woolen rugs around them and who used to wonder from place to place propagating the religion of Islam.[೨]

ಎಂದರೆ ಸೂಫೀ ಶಬ್ದವು ಅರೇಬಿಯಾ ದೇಶವ್ದಾಗಿದ್ದು, ಯಾವ ಫಕೀರರು ಉಣ್ಣೆ ರಗ್ಗುಗಳನ್ನು ಧರಿಸಿಕೊಂಡು ಒಂದು ಕಡೆಯಿಂದ ಮತ್ತೊಂದು ಕಡೆಗೆ ಅಲೆದಾಡುತ್ತಾ ಸನ್ಯಾಸಿಗಳಾಗಿ ಇಸ್ಲಾಂ ಧರ್ಮವನ್ನು ಪ್ರಚಾರಗೊಳಿಸುತ್ತಿದ್ದರೋ ಅವರೇ ಸೂಫಿ ಸಂತರು ಎಂದು ಕರೆದಿದ್ದಾರೆ.

**ಸೂಫೀಸಂತರ ಸ್ವಭಾವ** : ಮೂಲತಹ ಸೂಫಿ ಸಂತರುಗಳು ಅಲೆಮಾರಿಗಳಾಗಿರುತ್ತಿದ್ದರು. ಸನ್ಯಾಸ ಜೀವನವೇ ಇವರಿಗೆ ಹೆಚ್ಚು ಪ್ರಿಯವಾದದ್ದು. ಏಕೇಶ್ವರ ವಾದದಲ್ಲಿ ಅಪಾರವಾದ ನಂಬಿಕೆ, ಅಲ್ಲಾಹ್‌ನ ಚಿಂತನೆಯಲ್ಲಿ ತಮ್ಮನ್ನು ಯಾವಾಗಲೂ ಸಂಪೂರ್ಣವಾಗಿ ತೊಡಗಿಸಿಕೊಳ್ಳುವ ಸ್ವಭಾವದವರು. ಕಾಡು, ಗುಹೆ ಗಹ್ವರಗಳಲ್ಲಿ ಕುಳಿತು ಸೃಷ್ಟಿಯ ಅನಂತತೆಯನ್ನು ಕುರಿತು ಚಿಂತಿಸುತ್ತಿದ್ದರು. ಅಲ್ಲಿಂದ ಎದ್ದು ಊರು ಕೇರಿಗಳಲ್ಲಿ ಪ್ರವೇಶಿಸಿ ತಮಗೆ ದೊರೆತ ಜ್ಞಾನವನ್ನು ಸಾಮಾನ್ಯರಿಗೆ ತಿಳಿಹೇಳುತ್ತಿದ್ದರು. ಕಾಡಿನ ಗಿಡ, ಮೂಲಿಕೆ, ಸೊಪ್ಪಿನ ಗುಣ ವಿಶೇಷಗಳನ್ನು ಅರಿತು, ಪ್ರಯೋಗಿಸಿ ಔಷಧಗಳನ್ನು ತಿಳಿದು ಸಾಮಾನ್ಯ ಜನರ ಕಷ್ಟಕಾರ್ಪಣ್ಯಗಳನ್ನು ದೂರ ಮಾಡುತ್ತಿದ್ದರು. ಅದಕ್ಕೆ ಪ್ರತಿಯಾಗಿ ಅವರಿಂದ ಏನನ್ನೂ

೧. ಶಿವಸಹಾಯ ಪಾಠಕ್, ಹಿಂದಿ ಸೂಫೀಕಾವ್ಯದ ಸಮಗ್ರ ಅನುಶೀಲನ ಪುಟ -21

೨. Drll Ahamad Hussain - Sufi Bhakthi Growth of Bhakthi, movement in Hindu Literature page -11

ಪಡೆಯದೆ, ಅದು ಭಗವಂತನ ಸೇವೆಯೆಂದು ತಿಳಿದು ತಾವು ಸಂತೋಷಪಡುತ್ತಿದ್ದರು. ಸೂಫಿಗಳು ಮೂರ್ತಿಪೂಜಕರಾಗಿರಲಿಲ್ಲ. ನಿರಾಕಾರ ಭಗವಂತ (ಅಲ್ಲಾಹ್)ನ ಧ್ಯಾನದಲ್ಲಿ ಸದಾ ಮಗ್ನರಾಗಿರುತ್ತಿದ್ದರು. ಭೋಗವಿಲಾಸದಲ್ಲಿ ಇವರಿಗೆ ನಂಬಿಕೆ ಇರಲಿಲ್ಲ. ಈ ಶರೀರವು ನಶ್ವರವಾದದ್ದು ಇದಕ್ಕೆ ಹೆಚ್ಚು ಸುಖವನ್ನು ಕೊಡಬಾರದೆಂದು ಶರೀರವನ್ನು ಒಣಗಿಸುತ್ತಿದ್ದರು. ಸಾಧನೆ, ಮುರಾಖಿಬ (ಯೋಗ)ಕ್ಕೆ ತಮ್ಮ ಶರೀರವನ್ನು ಒಗ್ಗಿಸಿಕೊಳ್ಳುತ್ತಿದ್ದರು.

ಸೂಫೀ ಶಬ್ದವು ಪ್ರಪ್ರಥಮವಾಗಿ ಯಾರಿಂದ ? ಯಾವಾಗ ? ಆಯಿತು ಎಂಬುದಕ್ಕೆ ನಿರ್ದಿಷ್ಟ ವ್ಯಕ್ತಿಯ ಅಥವಾ ಕಾಲದ ಖಚಿತತೆಯನ್ನು ಗುರ್ತಿಸಲು ಸಾಧ್ಯವಿಲ್ಲ. ಖುರಾನಿನಲ್ಲೂ ಸೂಫಿ ಎಂಬ ಶಬ್ದವು ಎಲ್ಲಿಯೂ ಪ್ರಯೋಗವಾಗಿಲ್ಲ. 'ಅವಾರಿಫುಲ್-ಮಾಫ್'ನ ಲೇಖಕರಾದ ಹಜ್ರತ್ ಶೇಖ್ ಶಹಾಬುದ್ದೀನ್ ಸುಹರ್‌ಪರ್ದಿ ಯವರ ಅಭಿಪ್ರಾಯದಲ್ಲಿ ಹಜರತ್ ಮುಹಮ್ಮದ್ ಪೈಗಂಬರರ ಮೃತ್ಯುವಿನ (೨೦೦) ಇನ್ನೂರು ವರ್ಷಗಳ ನಂತರವೇ ಈ ಶಬ್ದವು ಹುಟ್ಟಿಕೊಂಡಿತೆನ್ನುತ್ತಾರೆ. ಅರಬ್ ಇತಿಹಾಸದ ಪ್ರಸಿದ್ಧ 'ಉಮಯ್ಯಾ' ಖಾನಾದಾನ್ (ವಂಶ)ದ ಶಾಸಕರು (ಖಲೀಫರು)ಗಳ ಕಾಲದಲ್ಲಿ ಸೂಫಿ ಶಬ್ದದ ಬಳಕೆ ಅತ್ಯಧಿಕವಾಗಿ ಕಾಣಸಿಗುತ್ತದೆ. 'ಸೂಫೀ' ಶಬ್ದಕ್ಕೆ ಪರ್ಯಾಯವಾಗಿ 'ಅವ್‌ಲಿಯಾ' ಎಂದು ಖುರಾನಿನಲ್ಲಿ ಅವತೀರ್ಣವಾಗಿದೆ.

**ಸೂಫೀವಿಶ್ವಾಸಗಳು :**

ಮಾನವನು ಮೂಲತಹ ಚಿಂತನ ಸ್ವಭಾವವುಳ್ಳ ಪ್ರಾಣಿ. ಈ ಸೃಷ್ಟಿಯಲ್ಲಿ ಆತನು ಜನ್ಮತಾಳಿದಂದಿನಿಂದಲೂ ಇಲ್ಲಿಯ ಅದ್ಭುತ ರಹಸ್ಯಗಳ ಬಗ್ಗೆ ಚಿಂತಿಸುತ್ತಾ ಈ ವಿಶ್ವದ ಸೃಷ್ಟಿಕರ್ತನೊಬ್ಬನು ಯಾರೋ ಇರಬಹುದು ಎಂದು ಖಚಿತಪಡಿಸಿ, ಆ ಮಹಾನ್ ಶಕ್ತಿಶಾಲಿ ಸೃಷ್ಟಿಕರ್ತನನ್ನು ಮೊದಲು ಸ್ತುತಿಸಿ ಪ್ರಾರ್ಥಿಸಿ ಆತನನ್ನು ಸಂತೋಷಪಡಿಸಬೇಕೆಂಬ ಭಾವನೆ ಮಾನವನಲ್ಲಿ ಮೂಡಿರಬಹುದೆಂದು ತಿಳಿದುಬರುತ್ತದೆ. ಈ ಭಾವನೆಯ ವಿಕಾಸವೇ ಇಂದಿನ ನೂರಾರು ಮತ, ಧರ್ಮಗಳ ಉಗಮಕ್ಕೆ ಮೂಲವೆಂದು ಹೇಳಬಹುದು. ಈ ಸೃಷ್ಟಿಯ ಅಗಾಧಶಕ್ತಿಯ ರಹಸ್ಯವನ್ನು ಮಾನವನು ಅರಿಯಲು ಪ್ರಯತ್ನಿಸಿದನು. ಒಂದೊಂದು ಪ್ರದೇಶದ ಸನ್ನಿವೇಶ, ಅವಶ್ಯಕತೆಗಳಿಗನುಸಾರವಾಗಿ ಚಿಂತನೆ, ಶೋಧನೆಗಳು ನಡೆದು ಆಯಾ ಪರಿಸ್ಥಿತಿಗಳಿಗನುಸಾರವಾದ ಜ್ಞಾನಗಳು ದೊರೆತುವು. ಆದ್ದರಿಂದಲೇ ಅನೇಕ ವೈವಿಧ್ಯತೆಗಳು ಹುಟ್ಟಲು ಕಾರಣವಾಗಿ ವಿಶ್ವಾಸಗಳೂ ವೈವಿಧ್ಯಪೂರ್ಣವಾಗಿ ಜನ್ಮತಾಳಿದುವು. ಅನೇಕ ವಾದ, ವಿವಾದಗಳು ಹುಟ್ಟಿಕೊಳ್ಳಲು ಮಾರ್ಗಗಳು ಸಿದ್ಧವಾದುವು. ಕೆಲವರು ಈ ಸೃಷ್ಟಿಗೆಲ್ಲಾ ಒಬ್ಬನೇ ದೈವ ಎಂದರೆ, ಕೆಲವರು ಬಹುದೈವವಾದದಲ್ಲಿ ಸ್ಥಿರತೆಯನ್ನು ಕಂಡರು. ಸಂಘರ್ಷಗಳ ಆರಂಭ

ಮಾನವ ಮಾನವನಲ್ಲಿ ತಿಕ್ಕಾಟಗಳು, ಅನೇಕ ಗುಂಪುಗಳು, ಅನೇಕ ಮತ, ಪಂಥಗಳು, ಹೀಗಾಗಿ ಜಗತ್ತು ಇಂದಿಗೂ ಸಂಘರ್ಷಗಳ ಕೇಂದ್ರವಾಗಿಯೇ ಉಳಿದಿದೆ. ಯಾವ ಒಂದು ಮತವೂ ಸರ್ವಗ್ರಾಹ್ಯವಾಗಲೇ ಇಲ್ಲ.

ಜಗತ್ತಿನಲ್ಲಿ ಎಷ್ಟೇ ವೈರುಧ್ಯಗಳು ಉದ್ಭವಿಸಿದರೂ ಸೂಫೀ ಸಂತರುಗಳು ಮಾತ್ರ ಏಕೇಶ್ವರನಲ್ಲಿ ಅಪಾರ, ಅಚಲವಾದ ಶ್ರದ್ಧೆಯನ್ನಿಟ್ಟ ಪ್ರೇಮೋಪಾಸಕರಾಗಿದ್ದರು. ಇಂತಹ ನಂಬಿಕೆಯುಳ್ಳ ಯಾವುದಾದರೊಂದು ಧರ್ಮದ ಉಗಮಕ್ಕೆ ಹಾತೊರೆಯುತ್ತಿದ್ದ ಈ ಅಲೆಮಾರಿ ಸಂತರಿಗೆ ಕ್ರಿ.ಶ. ಆರನೇ ಶತಮಾನವು ಒಂದು ವರಪ್ರಸಾದವಾಗಿ ಪರಿಣಮಿಸಿತು. ಅಷ್ಟುಹೊತ್ತಿಗೆ ಅರಬ್‌ದೇಶದ ಮೆಕ್ಕಾನಗರದಲ್ಲಿ ಹ.ಮುಹಮ್ಮದ್ ಪೈಗಂಬರರ ಜನ್ಮವಾಯಿತು. ಅವರ ಇಸ್ಲಾಂ ಧರ್ಮವು ಸೂಫಿಸಂತರಿಗೆ ಬಹಳವಾಗಿ ಆಕರ್ಷಿಸಿತು. ಸೂಫಿ ಸಂತರುಗಳು ಇಲ್ಲಿ ತಮ್ಮ ಧಾರ್ಮಿಕನೆಲೆಯನ್ನು ಕಂಡುಕೊಂಡರು. ಅವರು ಹ.ಮುಹಮ್ಮದ್ ಪೈಗಂಬರರನ್ನು ತಮ್ಮ ಪಂಥದ ನಾಯಕರೆಂದು ಸ್ವೀಕಾರಮಾಡಿಕೊಂಡು ಅವರಲ್ಲಿ ಪೂರ್ಣವಿಶ್ವಾಸವನ್ನು ವ್ಯಕ್ತಪಡಿಸಿ, ತಮ್ಮ ಪ್ರಾಣಾರ್ಪಣೆ ಮಾಡಲು ಪಣತೊಟ್ಟು ಇಸ್ಲಾಂಧರ್ಮ ಪ್ರಚಾರದಲ್ಲಿ ತಮ್ಮನ್ನು ತೊಡಗಿಸಿಕೊಂಡರು.

ಇಸ್ಲಾಂ ಧರ್ಮದ ಆವಿರ್ಭಾವಕ್ಕೆ ಮೊದಲು ಸೂಫಿಸಂತರನ್ನು 'ದುರ್ವೇಶ್'ರೆಂದು ಕರೆಯುತ್ತಿದ್ದರು. ಆ ದುರ್ವೇಶರ ವಿಶ್ವಾಸದಂತೆ ಪ್ರಪ್ರಥಮ ಪುರುಷ 'ಆದಂ'ನ ಕಾಲದಿಂದಲೂ ಭಗವಂತನು ಒಬ್ಬನೇ ಎಂಬ ವಾದದಲ್ಲಿ ಅವರು ಪೂರ್ಣವಿಶ್ವಾಸವಿಟ್ಟಿದ್ದರು. ಆ ದುರ್ವೇಶರೇ ಹ.ಮುಹಮ್ಮದ್ ಪೈಗಂಬರರ ನಂತರದಲ್ಲಿ ಸೂಫೀಗಳೆಂದು ಕರೆಯಿಸಿಕೊಂಡು ಏಕೇಶ್ವರವಾದದಲ್ಲಿ ಮಾತ್ರ ಪೂರ್ಣವಾಗಿ ವಿಶ್ವಾಸವನ್ನು ಇಟ್ಟುಕೊಂಡು ಬಂದಿರುವವರಾಗಿದ್ದಾರೆ. ಆದ್ದರಿಂದಲೇ ಸೂಫಿಪಥವು ಬಹಳ ಪ್ರಾಚೀನ ಕಾಲದಿಂದಲೂ ನಡೆದುಬಂದಿರುವ ಏಕೇಶ್ವರವಾದದ ಅವ್ಯಾಹತಧಾರೆ ಎನ್ನಬಹುದು. ಆ ಸಂಪ್ರದಾಯಕ್ಕೆ ಸೂಕ್ತಕಾಲ ಒದಗಿದ ಸಂದರ್ಭವೆಂದರೆ ಇಸ್ಲಾಂ ಧರ್ಮದ ಉಗಮಕಾಲ. ಇಸ್ಲಾಂ ಧರ್ಮದಂತಹ ಹೆಮ್ಮರದಿಂದ ಒಡೆದು ಬೆಳೆದ ಶಾಖೆಯೇ ಸೂಫಿ ಪಥ. ಅಥವಾ ಮತವೆಂದು ಕರೆಯಬಹುದಾಗಿದೆ.

**ಸೂಫೀ ಸಿದ್ಧಾಂತ - ತಸವ್ವಫ್ :**

ಸಾವಿರಾರು ವರ್ಷಗಳಿಂದ ನಂಬಿಕೊಂಡು ಬರುತ್ತಿದ್ದ ಏಕೇಶ್ವರವಾದಿ ಸನ್ಯಾಸಿಗಳಲ್ಲಿ ಯಾವುದೇ ಒಂದು ನಿರ್ದಿಷ್ಟ ಸಂಪ್ರದಾಯವಾಗಲೀ, ಪಥವಾಗಲೀ ಇರಲಿಲ್ಲ. ಅವರಲ್ಲಿ ಯಾವುದೇ ಒಂದು ತಾತ್ತ್ವಿಕ ನೆಲೆಗಟ್ಟು ನೆಲೆಯಾಗಿರಲಿಲ್ಲ. ಇಸ್ಲಾಂ ಧರ್ಮದ ನಂತರ ಈ ದುರ್ವೇಶರು ಯಾವುದೋ ಒಂದು ಪರಿಸ್ಥಿತಿಯ ಒತ್ತಡಕ್ಕೆ ಸಿಕ್ಕಿ, ತಮ್ಮನ್ನು ಸೂಫೀಗಳೆಂದು

ಕರೆಯಿಸಿಕೊಳ್ಳತೊಡಗಿದರು. ಇಸ್ಲಾಂ ಧರ್ಮದಲ್ಲಿ ಪೂರ್ಣವಿಶ್ವಾಸವನ್ನು ಇಟ್ಟರು. ಆದರೂ ತಮ್ಮ ಮೂಲಸಂಪ್ರದಾಯವನ್ನು ಬಿಡಲಾರದಾದರು. ಇಸ್ಲಾಂನ ತಾತ್ತ್ವಿಕ ನೆಲೆಯಲ್ಲಿಯೇ ತಮ್ಮದೇ ಆದ ಕೆಲವು ಪ್ರಣಾಳಿಕೆಗಳನ್ನು ರಹಸ್ಯವಾಗಿ ಪಾಲಿಸಲಾರಂಭಿಸಿದರು. ಅದನ್ನೆ ತಸವ್ವುಫ್ ಜ್ಞಾನವೆಂದು ಕರೆಯಲಾರಂಭಿಸಿದರು. ಅದು ರಹಸ್ಯವಾದ ಸಾಧನೆಯಾಗಿತ್ತು ಇದನ್ನು ಮಿಸ್ಟಿಸಿಸಂ (Mysticism) ಎಂದು ಕರೆಯುತ್ತಾರೆ. ಸೂಫೀಗಳು ಪೂರ್ಣವಾಗಿ ಪ್ರವೃತ್ತಿಮಾರ್ಗಿಗಳಲ್ಲ, ನಿವೃತ್ತಿ ಮಾರ್ಗದಲ್ಲಿ ಹೆಚ್ಚು ವಿಶ್ವಾಸವನ್ನಿಟ್ಟಿರುವವರು. ತಸವ್ವುಫ್ ಎಂದರೆ 'ಪ್ರಪಂಚದಿಂದ ವಿರಕ್ತನಾಗಿ ಪರಮಾತ್ಮನೊಂದಿಗೆ ಪ್ರೇಮ ಹಾಗು ಗಂಭೀರ ಧಾರ್ಮಿಕ ಭಾವನೆಗಳನ್ನು ಪ್ರಕಾಶಿಸುವುದೇ ಆಗಿದೆ' ಎಂದು ಸೂಫೀಗಳ ನಂಬಿಕೆಯಿದೆ. ಪರಮಾತ್ಮನ ಧ್ಯಾನದ ಮೂಲಕ ವ್ಯಕ್ತಿತ್ವವನ್ನು ನಾಶಪಡಿಸಿಕೊಂಡು (ಫನಾತತ್ತ್ವ) ಈಶ್ವರದತ್ತ್ವ ಜಾಗ್ರುತಸ್ಥಿತಿಯಲ್ಲಿ ವಿಹರಿಸುವುದೇ (ಬಖಾತತ್ತ್ವ) ಸೂಫೀಗಳ ಸೌಂದರ್ಯೋಪಾಸನೆಯೇ ಸಾಧನಾಪಥವಾಗಿದೆ.

ಸೂಫೀ ಸಂತನು ಯಾವ ವಸ್ತುವಿನ ಅಧಿಕಾರಿಯೂ ಅಲ್ಲ ಮತ್ತು ಈ ಸೃಷ್ಟಿಯ ಯಾವವ್ಯಕ್ತಿಯ ಅಥವಾ ಯಾವ ವಸ್ತುವಿನ ಅಧಿಕಾರಕ್ಕೂ ಒಳಪಡುವವನಲ್ಲ. ಆತನು ಸರ್ವಸ್ವತಂತ್ರನು. ಆ ಮಹತ್ ಶಕ್ತಿಯ ಉಪಾಸನೆಯಲ್ಲಿ ಸದಾಲೀನನಾಗಿ ಆತನಲ್ಲಿ ತನ್ನನ್ನು ಲೀನಗೊಳಿಸಿಕೊಂಡು ತಾನೇ ತಾನಾಗಿ, ಮಹತ್ ಶಕ್ತಿಯಾಗಿ ಪರಿಣಮಿಸಲು ಹವಣಿಸುವವನು. ಈ ಸೃಷ್ಟಿಯ ಪ್ರತಿಯೊಂದು ವಸ್ತುವೂ ಆ ಮಹತ್ ಶಕ್ತಿಶಾಲಿ ಪರಮಾತ್ಮನಿಂದ ಹೊರಟಿರುತ್ತದೆ. ಆತನಲ್ಲದೆ ಮತ್ತಾವ ಅಸ್ತಿತ್ವವೂ ಈ ಜಗತ್ತಿನಲ್ಲಿ ಇಲ್ಲವೆಂದು ಭಾವಿಸಿ ಕೊನೆಗೆ ಅದರಲ್ಲೇ ಎಲ್ಲವೂ, ಎಲ್ಲರೂ ಸೇರುವರೆಂಬ ಅದ್ವೈತ ಭಾವಕ್ಕೆ ತಲುಪುವವರೇ ಸೂಫೀಗಳು. ಈ ತತ್ತ್ವವೇ ತಸವ್ವುಫ್. ಈಶ್ವರೀಯ ವಿಧಿ ಮತ್ತು ನಿಷೇಧಗಳಲ್ಲಿ ಈಶ್ವರೇಚ್ಛೆಯಿಂದ ಬಂದ ಕೆಲವು ಸಂದರ್ಭಗಳಲ್ಲಿ ಧೈರ್ಯದಿಂದ ಆತ್ಮಸಮರ್ಪಣೆ ಮತ್ತು ಅಂಗೀಕರಣೆಯೇ ಸೂಫೀಮತ ಅಥವಾ ತಸವ್ವುಫ್ ಎಂದು ಆರ್. ಎ. ನಿಕಲ್ಸನ್‌ರು ಅಭಿಪ್ರಾಯಪಟ್ಟಿದ್ದಾರೆ.[೧]

ಸೂಫೀಗಳು ವಿಶ್ವಾತ್ಮವಾದಿಗಳು. ನಿರಂತರ ಚಿಂತನಶೀಲರು. ಶಾಶ್ವತ ಹಾಗು ಅಮೂರ್ತ ಪರಮಾತ್ಮನ ಜ್ಯೋತಿಯದರ್ಶನಾಕಾಂಕ್ಷಿಗಳು. ತಮ್ಮ ಪಥ ಪ್ರದರ್ಶಕ (ಶೇಖ್)ನಿಂದ ನಿರ್ದೇಶಿತರಾದ ಈ ಸಂತರುಗಳು ಪರಮಾತ್ಮ ಸೌಂದರ್ಯದೊಡನೆ ವಿಲೀನದಾನಂದಾ ನುಭವವನ್ನು ಸವಿಯುತ್ತಾ ಹಗಲಿರುಳು ಅಶರೀರ ಪ್ರೇಮೋಪಾಸನೆಯನ್ನು ಮಾಡುವುದೇ ಅವರ ಅಂತಿಮ ಗುರಿ.

ಸೂಫೀ ಸಂತರುಗಳು ಖುರಾನ್ ಧರ್ಮಗ್ರಂಥವನ್ನು ಪರಿಪೂರ್ಣವಾಗಿ ನಂಬುವುದರಿಂದ ಅವರು ಪೂರ್ಣನಿವೃತ್ತಮಾರ್ಗಿಗಳಲ್ಲ. ಗೃಹಸ್ಥಾಶ್ರಮ ಧರ್ಮದಲ್ಲಿಯೂ ಸಹ ಅವರಿಗೆ

೧. ಆರ್.ಎ. ನಿಕಲ್ಸನ್ - ಸ್ಟಡೀಸ್ ಇನ್ ಇಸ್ಲಾಮಿಕ್ ಮಿಸ್ಟಿಸಿಸಂ ಪುಟ-49.

ಪೂರ್ಣನಂಬಿಕೆ ಇದೆ. ಮದುವೆಯಂತಹ ಸ್ತ್ರೀಸಹಜ ಬಂಧನದಲ್ಲಿದ್ದುಕೊಂಡು ತಮ್ಮ ಸಾಧನೆಯ ಮಾರ್ಗದಲ್ಲಿ ಅದು ತೊಡಕಾಗುತ್ತದೆಂದು ಭಾವಿಸದೆ, ಸಾಧನೆಯ ಉನ್ನತ ಶಿಖರಕ್ಕೇರಿರುವಂತಹ ಉದಾಹರಣೆಗಳು ಬಹಳವಾಗಿವೆ. ಅಹಿಂಸಾತ್ಮಕ ಜೀವನವೇ ಅವರಿಗೆ ಹೆಚ್ಚುಪ್ರಿಯ. ಭಿಕ್ಷೆಯನ್ನು ಬೇಡುವುದು ಅವರ ಜೀವನ ಪ್ರಮುಖ ಕರ್ತವ್ಯವಾದರೂ ಗೃಹಸ್ಥರಾಗಿದ್ದಾಗ ಕಾಯಕದಲ್ಲಿ ತೊಡಗುವುದೂ ಪವಿತ್ರವೆಂದೇ ನಂಬಿರುತ್ತಿದ್ದರು. ಸಂಗ್ರಹಬುದ್ಧಿಯಿಂದ ದೂರವಾಗಿ ಅಲಿಪ್ತ ಅರವಿಂದರಂತೆ ಈ ಜಗತ್ತಿನಲ್ಲಿ ಬಾಳುವವರು.

**ಸೂಫೀಗಳಲ್ಲಿ ಎರಡು ವಿಧ** - (೧) ಶುದ್ಧ ಸಂಪ್ರದಾಯಸ್ಥರು (೨) ಸ್ವತಂತ್ರ ವಿಚಾರವಾದಿಗಳು. ಇವರನ್ನು ಅರಬ್ಬೀ ಭಾಷೆಯಲ್ಲಿ (೧) ಸಾಲಿಕ್ (೨) ಆಜಾದ್‌ತರೀಖೆವಾಲೆ ಎನ್ನುತ್ತಾರೆ. ಸಾಲಿಕ್ ಸಂಪ್ರದಾಯಸ್ಥರು ಇಸ್ಲಾಂನ ಷರೀಯತ್ ತತ್ತ್ವಗಳ ಪೂರ್ಣಪಾಲನೆ ಯೊಂದಿಗೆ ತಮ್ಮ ಸಾಧನಾಮಾರ್ಗವನ್ನು ಪ್ರಶಸ್ತಗೊಳಿಸಿಕೊಳ್ಳುವವರು. ಆಜಾದ್ ಪಂಥದವರು ಮುಸಲ್ಮಾನರಾಗಿದ್ದರೂ ಅವರ ಚಿಂತನ ಪರಂಪರೆಯಲ್ಲಿ ನಿಶ್ಚಿತ ಮಾರ್ಗಗಳಿರುವುದಿಲ್ಲ.

ಸೂಫೀ ಸಂತರುಗಳನ್ನು 'ಅವ್‌ಲಿಯಾ'ಗಳೆಂದೂ ಕರೆಯುವುದುಂಟು. ಇವರಲ್ಲಿ ನಾಲ್ಕು ಪ್ರಮುಖ ಪಂಗಡಗಳಿವೆ. ಈ ಪಂಗಡದ ಸಿದ್ಧಾಂತಗಳಲ್ಲಿ ಒಮ್ಮತವಿಲ್ಲದಿದ್ದರೂ ಅಸಹಾಬೆ ಕಿರಾಮ್‌ನ ನಾಲ್ಕನೇ ಖಲೀಫಾ ಹಜ್ರತ್ ಅಲಿ ಮತ್ತು ಅವರ ಮಕ್ಕಳಾದ ಹ. ಹಸನ್ ಮತ್ತು ಹ. ಹುಸೇನ್‌ರ ಕಡೆಗೇ ಎಲ್ಲ ಪಂಗಡ, ವರ್ಗಗಳವರ ಸಾಂಕೇತಿಕ ದೃಷ್ಟಿಯಲ್ಲಿ ಮಾತ್ರ ಒಮ್ಮತವಿದೆ.

'ಚಾರ್‌ಪೀರ್-ಚೌದಹ್ (೧೪) ಖಾನುವಾದೆಗಳೆಂಬ ಮಾತಿನಂತೆ ನಾಲ್ಕುಜನ ಪ್ರಧಾನಗುರುಗಳು. ಅವರುಗಳಲ್ಲಿ (೧) ಖಾದರಿಯಾ, (೨) ಚಿಶ್ತಿಯಾ, (೩) ಸುಹರ್‌ವರ್ದಿಯಾ ಮತ್ತು (೪) ನಕ್ಷಬಂದಿಯಾ ಎಂದು ನಾಲ್ಕು ಸಂಪ್ರದಾಯಗಳಿವೆ.

ಸ್ವತಂತ್ರ ವಿಚಾರಧಾರೆಯ (ಮಿಶ್ರ ಸಂಪ್ರದಾಯ)ವರು ಇಸ್ಲಾಂ ಧರ್ಮದ ಶುದ್ಧ ದ್ವೈತ ಭಾವನೆಯಿಂದ ಸ್ವಲ್ಪ ಬೇರ್ಪಟ್ಟು ತಮ್ಮ ಚಿಂತನೆಯನ್ನು ಈ ರೀತಿ ಮಾಡತೊಡಗಿದರು -

*ಏಕ ಈಶ್ವರನಲ್ಲದೆ ಈಶ್ವರ ಮತ್ತೊಬ್ಬನಿಲ್ಲ*
*ಇದು ಸತ್ಯ, ಸತ್ಯವಿದು ಮನಸ್ಸಿಗಿಂತ ಬೇರೊಬ್ಬ*
*ದೇವದೂತನಿಲ್ಲ, ಅಲೆಯುತಿದೆ ಮನ ಅಂಧಕಾರದಲಿ*
*ಅಪೂರ್ವ ಸ್ವರ್ಗದ ಅನುಸಂಧಾನದಲಿ,*
*ಎಲೆಲೆ - ಸ್ವರ್ಗವಡಗಿಹುದು ನನ್ನ ನಿನ್ನಲಿ*

---

೧. ಹ ಎಂದರೆ ಹಜ್ರತ್ ಎಂದು ತಿಳಿಯಬೇಕು.

ಅಬುಲ್ ಅರಾ - 'ದೀವಾನ್' ಗ್ರಂಥದ ಅನುವಾದ.

ಇಂತಹ ಚಿಂತನೆ ಕ್ರಿ.ಶ. ಹನ್ನೊಂದನೇ ಶತಮಾನದ ಇಸ್ಲಾಮೀ ಮಿಶ್ರ ಸಂಪ್ರದಾಯವಾದಿಗಳಲ್ಲಿ ಕಂಡುಬರತೊಡಗಿತು. ಇದನ್ನು ಅಭಿನವ ಪ್ಲಾಟೊನಿಕ್ ವಿಚಾರಧಾರೆಯ ಪ್ರಭಾವವೆಂದು ಕರೆಯುತ್ತಾರೆ. ಇವರ ಪ್ರಕಾರ ಜೀವವು ಭಗವಂತನಿಂದ ಬೇರ್ಪಟ್ಟು ನಂತರ ಭಗವಂತನನ್ನೇ ಕೂಡಲು ಅಶಾಂತವಾಗಿದೆ ಎನ್ನುವ ಸಂಕೇತವಾಗಿದೆ.

ಪ್ರೇಮವೇ ಭಗವತ್ ಸೌಂದರ್ಯವನ್ನು ಗುರ್ತಿಸುವ ಶಕ್ತಿಶಾಲಿ ಸಾಧನ. ಸರ್ವಾರ್ಪಣ ಭಾವವೇ ಸೌಂದರ್ಯದಲ್ಲಿ ಲೀನವಾಗುವ ಮಂತ್ರ. ವಿರಹಾನುಭೂತಿಯೇ ಪ್ರತ್ಯಕ್ಷೀಕರಣಕ್ಕೆ ಮಾರ್ಗ. ಪ್ರೇಮೋನ್ಮಾದದಲ್ಲಿ ಮಗ್ನರಾದಾಗಲೇ ಜೀವವು ಪರಮಸತ್ತೆಯಲ್ಲಿ ಐಕ್ಯವಾಗಲು ಸಹಕಾರಿ ಎಂಬ ಪ್ರೇಮದ ಚರಮಗುರಿಯನ್ನು ತೋರುವವರಾಗಿದ್ದರು.

ಇಸ್ಲಾಂ ಧರ್ಮಪ್ರವಾದಿಗಳಾದ ಹಜ್ರತ್ ಮೊಹಮ್ಮದ್ ಪೈಗಂಬರರು ಭಗವಂತನು ಸರ್ವಶ್ರೇಷ್ಠನೂ, ಸೃಷ್ಟಿಕರ್ತನೂ, ಸರ್ವಶಕ್ತನೂ ಆಗಿದ್ದು ಮಾನವನು ತನ್ನ ರಚನೆಯಲ್ಲಿನ ಒಂದು ಶ್ರೇಷ್ಠಪ್ರಾಣಿಯೆಂದೂ ಆತನು ಭಗವಂತನ ಮಟ್ಟಕ್ಕೆ ಏರಲಾರನೆಂದೂ ಸ್ಪಷ್ಟವಾಗಿ ವರ್ಗೀಕರಿಸಿದ್ದರೂ, ಸೂಫೀಸಂತರು ಮಾತ್ರ ಮಾನವನು ಭಗವಂತನ ಮಟ್ಟಕ್ಕೆ ಏರಬಲ್ಲನೆಂಬ ನಂಬಿಕೆಯನ್ನು ತಳೆದವರಾಗಿಬಿಟ್ಟರು. ಇವರ ಅದ್ವೈತ ಭಾವನೆಯಿಂದಾಗಿ ಇಸ್ಲಾಮೀ ಷರೀಯತ್ ವಾದಿಗಳ ವಿರೋಧವನ್ನು ಸೂಫೀಗಳು ಕಟ್ಟಿಕೊಳ್ಳಬೇಕಾಯಿತು.

ಸೂಫೀಸಂತರುಗಳು ಇಸ್ಲಾಂಧರ್ಮದ ಶಾಂತಿಪ್ರಿಯಗುಣಗಳನ್ನು ಸರ್ವಸಮಾನತಾ ಭಾವವನ್ನು ಪೂರ್ಣವಾಗಿ ಅಳವಡಿಸಿಕೊಂಡವರಾಗಿರುತ್ತಿದ್ದರು. ಜಾತಿಭೇದಗಳನ್ನು ಎಣಿಸದೆ ಮಾನವಕುಲದ ದುಃಖತಪ್ತ ಪ್ರತಿಯೊಬ್ಬ ವ್ಯಕ್ತಿಯ ಹತ್ತಿರಹೋಗಿ ಅವರ ಪ್ರೇಮವನ್ನು ಸಂಪಾದಿಸುವ ಚಾರಿತ್ರ್ಯವುಳ್ಳವರು. ಮಾನವಸೇವೆಯೇ ಅಲ್ಲಾಹ್‌ನ ಸೇವೆಯೆಂದು ತಿಳಿದಿದ್ದ ಪ್ರೇಮೋಪಾಸಕರು. ಜನರನ್ನು ದೇವರೆಂದೇ ತಿಳಿದು ಗೌರವಿಸುತ್ತಿದ್ದರು. ದೇಶ ವಿದೇಶಗಳೆಂಬ ಗೋಡೆಗಳನ್ನು ಕಿತ್ತೊಗೆದು ರೋಗಿಗಳ ಸೇವೆಯಲ್ಲಿ ಮಗ್ನರಾಗುತ್ತಿದ್ದರು. ಸಾಮಾನ್ಯವಾಗಿ ಇವರು ಜಂಗಮರಾಗಿ ಒಂದು ಕಡೆಯಿಂದ ಮತ್ತೊಂದು ಕಡೆಗೆ ತಿರುಗುವ ಅಭ್ಯಾಸಿಗಳಾದುದರಿಂದ, ಇವರಲ್ಲಿ ಅಪಾರವಾದ ಜ್ಞಾನವಿರುತ್ತಿತ್ತು. ವೈದ್ಯಕೀಯ ಜ್ಞಾನದತ್ತ ಇವರು ಹೆಚ್ಚು ಚಿಂತಿಸುತ್ತಿದ್ದುದರ ಪರಿಣಾಮವಾಗಿ ಅಂದಿನ ಕಾಲದ ವೈದ್ಯರುಗಳೆಂದರೆ ಇವರೇ ಆಗಿರುತ್ತಿದ್ದರು. ''ಸೂಫೀ ಬಾಬಾ'' ಎಂಬ ಹೆಸರಿನಿಂದ ಎಲ್ಲ ಜನಾಂಗದವರಲ್ಲೂ ಗೌರವ ಭಾವನೆಯನ್ನು ಸಂಪಾದಿಸಿಕೊಳ್ಳುವ ಭಗವದ್ಭಕ್ತರಾಗಿದ್ದರು.

ಸೂಫೀ ಸಂತರುಗಳನ್ನು ಕರ್ನಾಟಕದ ವೀರಶೈವ ಧರ್ಮದ ಶರಣರಿಗೆ ಸಮೀಕರಿಸಬಹುದಾಗಿದೆ. ಶರಣರ ಶುದ್ಧ ಶಕ್ತಿ ವಿಶಿಷ್ಟ ಅದ್ವೈತ ಸಿದ್ಧಾಂತದ ರೀತಿಯಲ್ಲಿಯೇ

ಸೂಫೀ ಮತವು ಅದ್ವೈತಸಿದ್ಧಾಂತದ ಪ್ರತಿರೂಪವಾಗಿದೆ. ಸೂಫೀಗಳು ಅಂತಿಮವಾಗಿ ಅಲ್ಲಾಹ್‌ನಲ್ಲಿ ಐಕ್ಯವನ್ನು ಕಾಣುವ ವಿರಹಿಗಳು. ಶರಣರ ಅಂತ್ಯವೂ ಲಿಂಗದಲ್ಲಿ ತಮ್ಮ ಐಕ್ಯವಾಗಿ ನಿರ್ವಾಣದ ಗತಿಯನ್ನು ಕಾಣುವ ವಿರಹಿಗಳು.

ಸೂಫೀ ಸಂತರ ಮತ್ತು ವೀರಶೈವ ಶರಣರ ನೈಜ ಮಾನವ ಪ್ರೇಮದ ವಿಚಾರಗಳನ್ನು ನಾವು ಅರ್ಥಮಾಡಿಕೊಂಡು ಧಾರ್ಮಿಕ ಭೇದಭಾವಗಳನ್ನು ತೊರೆದು ಎಲ್ಲರೂ ಮಾನವರೆಂದು ತಿಳಿದು ಬಾಳಬೇಕು. ಇದಲ್ಲದೆ ಅವರ ವಿಚಾರಗಳನ್ನು ವಿಕೃತವಾಗಿ ಅರ್ಥೈಸಿಕೊಂಡು ಸಮಾಜವನ್ನು ದುಃಖದ ಕೂಪವನ್ನಾಗಿಸುವ ಸ್ವಾರ್ಥಿಗಳಾಗಬಾರದು. ಇದೇ ಮಾನವ ಧರ್ಮ, ವಿಶ್ವಧರ್ಮ.

# ಲಿಂಗ ರಹಸ್ಯ

ಗೋಪಿನಾಥ ಕವಿರಾಜ
ಅನು : ಅಂಗರಾಜು

---

[ಮಹಾಮಹೋಪಾಧ್ಯಾಯ ಗೋಪಿನಾಥ ಕವಿರಾಜ ಅವರು ಆಧುನಿಕ ಭಾರತೀಯ ವಿದ್ವಾಂಸರಲ್ಲಿ ಅಗ್ರಮಾನ್ಯ ಸ್ಥಾನ ಪಡೆದ ಕೆಲವೇ ವ್ಯಕ್ತಿಗಳಲ್ಲಿ ಒಬ್ಬರು. ತಮ್ಮ ಆಳವಾದ ಅಧ್ಯಯನಗಳಿಂದ ತತ್ವಶಾಸ್ತ್ರಕ್ಕೆ ಸಂಬಂಧಿಸಿದ ಹಲವು ವಿಷಯಗಳ ಬಗೆಗೆ ಮೊದಲ ಬಾರಿಗೆ ಅನೇಕ ತೆರನಾದ ಹೊಳಹುಗಳನ್ನು ಬೀರಿದವರು. ತಂತ್ರಾಗಮಗಳ ಬಗೆಗೆ ಮೂಡುತ್ತ ಬಂದಿದ್ದ ನಿರ್ಲಕ್ಷ್ಯವನ್ನು ತೊಡೆಯುವ ಕಾರ್ಯವನ್ನು ತಮ್ಮ ಹಲವಾರು ಲೇಖನ ಮತ್ತು ಪ್ರವಚನಗಳಲ್ಲಿ ನೀಡಿದ ಕವಿರಾಜರು ಭಾರತೀಯ ಅಧ್ಯಾತ್ಮಿಕ ಪರಂಪರೆಗಳ ನೆಲೆಗಳನ್ನು ಇವುಗಳು ಹುದುಗಿಸಿಕೊಂಡಿರುವ ವೈವಿಧ್ಯತೆ, ಸಮೃದ್ಧತೆಗಳ ಮೂಲಕವೇ ತೆರೆದು ತೋರಿ ವಿದ್ವದ್ ಲೋಕದಲ್ಲಿ ವಿಶೇಷವಾದ ಕುತೂಹಲ ಬೆಳೆಸಿದವರು. ಸಾಂಸಾರಿಕ ಜೀವನದಲ್ಲಿದ್ದೂ ಒಬ್ಬ ಸಂತನಂತೆ ಮನ್ನಣೆ ಪಡೆಯುವ ಜೀವಿತವನ್ನು ಬಾಳಿದ ಕವಿರಾಜರು ಲಿಂಗಪೂಜೋಪಾಸನೆಯನ್ನು ಕುರಿತು ಪ್ರವಚನಾತ್ಮಕವಾದ ಈ ಲೇಖನದಲ್ಲಿ ಸರಳ ವಿವರಣೆಯೊಂದಿಗೆ ವಿಷಯದ ನೆಲೆಯನ್ನು ಪರಿಚಯಿಸಿದ್ದಾರೆ. ಸಂವಾದ ರೂಪದಲ್ಲಿರುವ ಈ ಲೇಖನದ ಸಂಗ್ರಹವನ್ನು ಇಲ್ಲಿ ನೀಡಲಾಗಿದೆ - ಲೇಖನ ಆರಂಭವಾಗುವುದು ಶಂಕೆಗಳಲ್ಲಿ ಮುಳುಗಿರುವ ಒಬ್ಬ ಜಿಜ್ಞಾಸು ತನ್ನ ಅನುಮಾನಗಳನ್ನು ದೂರಮಾಡುವಂತೆ ಕವಿರಾಜರನ್ನು ಕೇಳಿಕೊಂಡಿರುವ ಮಾತಿನಲ್ಲಿ.]

**ಈ ಜಿಜ್ಞಾಸುವಿನ ಮಾತುಗಳು ಹೀಗಿವೆ :**

ಆಧುನಿಕ ಶಿಕ್ಷಣಕ್ಕೆ ಒಳಗಾಗಿರುವ ಹೊಸಪೀಳಿಗೆಯ ಇಂದಿನ ಭಾರತೀಯರಲ್ಲಿ ಪಲವರು ಪಾಶ್ಚಾತ್ಯ ವಿದ್ವಾಂಸರ ಹಾಗೂ ಪಾಶ್ಚಾತ್ಯ ವಿಚಾರಗಳ ಪ್ರಭಾವಕ್ಕೆ ಒಳಗಾಗಿದ್ದಾರೆ. ಇವರು ಭಾರತೀಯ ಉಪಾಸನಾಮಾರ್ಗ ಮಾತಿನಲ್ಲಷ್ಟೇ ಹೇಳುವಂಥದು ಎನ್ನುತ್ತಾರೆ. ದರ್ಶನಗಳು ಮತ್ತು ಧರ್ಮತತ್ತ್ವಗಳ ಬಗೆಗೆ ಭಾರತದಲ್ಲಿ ಗಂಭೀರತತ್ತ್ವಗಳು ಆವಿಷ್ಕಾರಗೊಂಡು ಜಗತ್ತೆಲ್ಲ ವಿಸ್ಮಯಗೊಂಡಿರುವಂತೆ ಉಪಾಸನೆಯ ಕುರಿತು ಎಲ್ಲ ಸಂದರ್ಭಗಳಲ್ಲಿಯೂ ಪ್ರಶಂಸೆ ಕೇಳಿ ಬರುವುದಿಲ್ಲ! ಲಿಂಗೋಪಾಸನೆ ಭಾರತಕ್ಕೆ ಒಂದು ಕಳಂಕಪ್ರಾಯದ್ದಾಗಿದೆ ಎನ್ನುತ್ತಾರೆ ಈ ನವಶಿಕ್ಷಿತರು. ಈ ತೆರನಾದ ಅಶ್ಲೀಲ ಹಾಗೂ ಅಸಭ್ಯವಾದ ಬಾಲೋಚಿತವಾಗಿರುವ ಇವರ ವಿಚಾರಗಳು ಇಂದಿನ ವರ್ತಮಾನದಲ್ಲಿ ಪ್ರಾಚೀನ ಉಪಾಸನೆಯೊಂದನ್ನು ಕುರಿತಾಗಿ ಪ್ರಚಲಿತಕ್ಕೆ ಬರುತ್ತಿರುವುದು ಒಳ್ಳೆಯದಲ್ಲ. ಇವರ ಈ ಆಲೋಚನೆಗಳಿಂದ ಲಿಂಗೋಪಾಸನೆಯ ವಿಷಯದಲ್ಲಿ ಧೈರ್ಯದಿಂದ ಮುನ್ನಡೆಯುವಂಥವರಿಗೂ ಸ್ವಾಭಾವಿಕವಾಗಿಯೇ ಹೃದಯದಲ್ಲಿ ಹಲಕೆಲವು ಸಂಶಯಗಳು ಹುಟ್ಟಿಕೊಳ್ಳುತ್ತವೆ. ಬಾಲ್ಯದಿಂದಲೂ ನಾವು ಲಿಂಗರೂಪಿ ಶಿವನ ಉಪಾಸನೆಯನ್ನು ನೋಡುತ್ತ ಬಂದಿದ್ದೇವೆ. ಈ ಸಂಸ್ಕಾರದ ದೃಢತೆಯಿಂದ ನಮ್ಮ ಮನಸ್ಸಿನಲ್ಲಿ ಇಂಥ ಅಶ್ಲೀಲತೆ ಮೂಡಿಕೊಳ್ಳುತ್ತಿಲ್ಲ. ಆದರೆ ಪೂರ್ವಸಂಸ್ಕಾರಗಳನ್ನು ತ್ಯಜಿಸಿರುವವರಿಗೆ ವಿದೇಶಿಯ ಆಲೋಚನೆಗಳು ಸ್ವಾಭಾವಿಕವಾಗಿಯೇ ಪ್ರೇರಣೆನೀಡುತ್ತವೆ. ಹೀಗಾಗಿಯೇ ಈ ಉಪಾಸನೆ ಕುರಿತು ಇಂಥ ನಿಂದನೆಗಳನ್ನು ಮಾಡುತ್ತಾರೆ. ನಾನು ಈ ವಿಷಯದಲ್ಲಿಯೇ ತಮ್ಮನ್ನು ಕೇಳಿಕೊಳ್ಳುತ್ತಿದ್ದೇನೆ. ಕೃಪೆಮಾಡಿ ತಾವು ಲಿಂಗ ರಹಸ್ಯದ ಬಗೆಗೆ ಆದಷ್ಟೂ ಸಂಕ್ಷೇಪವಾಗಿ ತಿಳಿಹೇಳಿದರೆ ನಾನು ತಮಗೆ ತುಂಬ ಕೃತಜ್ಞನಾಗುತ್ತೇನೆ. ನಿಮ್ಮ ವಿವರಣೆಯಿಂದ ನನ್ನ ಸಂಶಯಗಳೆಲ್ಲವೂ ದೂರವಾಗುತ್ತವೆ.

**ಗೋಪಿನಾಥ ಕವಿರಾಜ**

ನಿಮ್ಮ ಸಂಶಯ ಹೋಗಲಾಡಿಸಲು ನಾನು ಅವಶ್ಯವಾಗಿ ಸಾಧ್ಯವಿರುವಷ್ಟನ್ನೂ ನಿಮಗೆ ಹೇಳುತ್ತೇನೆ. ಆದರೆ ಇದನ್ನು ಹೇಳುವ ಮೊದಲು ಒಂದೆರಡು ಮಾತುಗಳನ್ನು ನಿಮಗೆ ಹೇಳಲಿಚ್ಛಿಸುತ್ತೇನೆ. ನೀವು ಪ್ರಾಚೀನ ಇತಿಹಾಸವನ್ನು ಅಧ್ಯಯನ ಮಾಡಿರುವಂಥವರು; ಜಗತ್ತಿನ ಹೆಚ್ಚಿನ ಭಾಗಗಳಲ್ಲಿ ಪ್ರಾಚೀನ ಸಭ್ಯ ಜನಾಂಗಗಳಲ್ಲಿ ಲಿಂಗೋಪಾಸನೆ ಒಂದಲ್ಲ ಒಂದು ರೂಪದಲ್ಲಿ ಪ್ರಚಲಿತವಾಗಿ ಇದ್ದದ್ದು ತಮಗೆ ತಿಳಿದಿರುವಂಥದಲ್ಲವೇನು ? ಭಾರತದಲ್ಲಿಯೂ ಪ್ರಾಗೈತಿಹಾಸಿಕ ಯುಗದಲ್ಲಿ ಲಿಂಗೋಪಾಸನೆ ಪ್ರಚಲಿತದಲ್ಲಿತ್ತು. 'ಮೊಹಂಜೊದಾರೋ'ದಲ್ಲಿ ದೊರೆತಿರುವ ಪ್ರಾಚೀನ ಕುರುಹುಗಳ ಅವಲೋಕನದಲ್ಲಿಯೂ ಅಂದಿನ ಸಮಯದಲ್ಲಿಯೂ ಇಂದು ವಿಶೇಷ ಆಕಾರವಲ್ಲಿ ಜನ ಪೂಜಿಸುತ್ತಿರುವ ಶಿವಲಿಂಗದಂಥದನ್ನೇ ಪೂಜಿಸುತ್ತಿದ್ದರು

ಎನ್ನುವುದು ಸ್ಪಷ್ಟಗೊಳ್ಳುತ್ತದೆ. ಈ ಉಪಾಸನೆ ಅಥವಾ ಸಾಧನೆ ಒಂದು ಕಾಲದಲ್ಲಿ ಜಗದ್ವ್ಯಾಪಕವಾಗಿತ್ತು. ಆನಂತರದ ಯುಗದಲ್ಲಿಯೂ ಭಾರತದಲ್ಲಿ ಶ್ರೀಶಂಕರಾಚಾರ್ಯರಂಥ ಪ್ರಭೃತಿಗಳಿಂದ, ಅಸಂಖ್ಯ ಜ್ಞಾನಿ ಮತ್ತು ಯೋಗಿವರ್ಯ ಮುನಿಗಳಿಂದ ಇದು ಅನುಷ್ಠಿತಗೊಳ್ಳುತ್ತಲೇ ಬರುತ್ತಿದೆ. ಇದನ್ನೆಲ್ಲ ತಿಳಿಯದ ಅಲ್ಪಮತಿಗಳ ಹಾಸ್ಯದ ಮಾತುಗಳಿಗೆ ಇದು ಎಂದಿಗೂ ಒಳಗಾಗುವಂಥ ವಿಷಯವಲ್ಲ. ತೀವ್ರವಾದ ಸಾಧನೆಯಿಲ್ಲದೆ ಯಾವ ತತ್ವವೂ ಸತ್ಯರೂಪದಲ್ಲಿ ತಿಳಿಯುವ ಸಂಭವ ಇರುವುದಿಲ್ಲ. ಆದ್ದರಿಂದ ಇದನ್ನು ನಿಂದನೆ ಮಾಡುವಂಥವರನ್ನು ದೂಷಿಸಿದರೆ ಏನು ಮಾಡಿದಂತಾಗುತ್ತದೆ ?

**ಜಿಜ್ಞಾಸು :**

ಜಿಜ್ಞಾಸುವಿನ ಭಾವದಲ್ಲಿ ನಾನು ತಮ್ಮಲ್ಲಿ ಪ್ರಶ್ನೆ ಕೇಳಿದ್ದೇನೆ. ನಿಂದನೆ ಮಾಡುವ ಉದ್ದೇಶದಿಂದಲ್ಲ. ಲಿಂಗೋಪಾಸನೆಯ ಮೂಲದಲ್ಲಿ ಇರುವ ಅಶ್ಲೀಲ ಭಾವವನ್ನು ತಾವು ಸ್ವೀಕಾರ ಮಾಡುತ್ತೀರೇನು ? ಹೀಗಲ್ಲದಿದ್ದರೆ ಇದನ್ನು ಸಭ್ಯ ಸಮಾಜದಲ್ಲಿ ಯಾವ ರೀತಿಯಿಂದ ಸಮರ್ಥಿಸಬಹುದಾಗಿದೆ ?

**ಗೋಪಿನಾಥ ಕವಿರಾಜ :**

ವತ್ಸ,[೧] ಶ್ಲೀಲ ಹಾಗೂ ಅಶ್ಲೀಲದ ವಿಚಾರ ಹೊಸ ಅಭಿರುಚಿಗಳಲ್ಲಿ ಮುಳುಗಿದ ಯುವಕರ ವಿಕೃತ ದೃಷ್ಟಿಕೋನಕ್ಕೆ ಅನುಸಾರವಾಗಿ ನಿರ್ಣಯವಾಗುವುದಿಲ್ಲ. ವ್ಯಕ್ತಿಗತ ಸಂಸ್ಕಾರ ಮತ್ತು ಸಾಮಾಜಿಕ ಮನೋಭಾವಗಳು ಕೂಡಿಕೊಂಡಿರುವ ಪ್ರಕೃತಿಯನ್ನು ಅನುಸರಿಸಿ ಅಪೇಕ್ಷಿತ ರೂಪದಿಂದ ಶೀಲ ಹಾಗೂ ಅಶ್ಲೀಲದ ನಿರ್ಧಾರವಾಗುತ್ತದೆ. ಬೆತ್ತಲೆ ಶರೀರದ ಪವಿತ್ರ ಚಿತ್ತದ ಪುಟ್ಟ ಶಿಶುವಿನ ದೃಷ್ಟಿಗೆ ಜಗತ್ತಿನಲ್ಲಿನ ಯಾವುದೂ ಅಶ್ಲೀಲವಾಗಿ ಕಾಣುವುದಿಲ್ಲ. ಇದೇ ಮಾತು ಜ್ಞಾನಸಂಪನ್ನರಾದ ಪರಮಹಂಸರ ದೃಷ್ಟಿಗೂ ಅನ್ವಯವಾಗುತ್ತದೆ ಎಂದು ತಿಳಿಯಬೇಕಿದೆ. ಇಂಥ ಕಡೆಗಳಲ್ಲಿ ಯಾವುದಕ್ಕೆ ಯಾವ ರೀತಿಯ ಸಂಸ್ಕಾರವಾಗಿರುತ್ತದೆಯೋ, ಅದೇ ರೀತಿಯಲ್ಲಿ ವಸ್ತುವಿಷಯವೂ ನಿಕಟವಾಗಿ ಕಾಣತೊಡಗಿರುತ್ತದೆ. ಭಗವಂತನ ಸೃಷ್ಟಿಯಲ್ಲಿ ಅಪವಿತ್ರ ಎಂದು ಕರೆಯುವ ಯಾವ ವಸ್ತುವೂ ಇಲ್ಲ. ಆದರೂ ಕಲುಷಿತ ಹೃದಯವುಳ್ಳವನು ತನ್ನೊಳಗಿನ ಕಲ್ಮಶವನ್ನು ಆರೋಪಿಸಿ ವಸ್ತುವಿನ ವಿಶೇಷತೆಯನ್ನು ಅಪವಿತ್ರಗೊಳಿಸುತ್ತಾನೆ. ಈ ದಿಕ್ಕಿನತ್ತ ಶುದ್ಧಚಿತ್ತನಾಗಿ ದೃಷ್ಟಿಯಿಡಿ. (ಆಗ) ಈ ದಿಕ್ಕಿನಲ್ಲಿ ಸತ್ಯದ ಉಜ್ವಲಮೂರ್ತಿ ಕಂಡು ಆನಂದಪ್ರಾಪ್ತಿಯಾಗುತ್ತದೆ. ಆನಂತರ ಯಾವ ಎಡೆಯಲ್ಲಿಯೂ ಸಂಕುಚಿತತೆಗೆ ಕಾರಣ ಉಳಿದುಕೊಳ್ಳುವುದಿಲ್ಲ. ಶಿವ ಮತ್ತು ಶಕ್ತಿ, ಈಶ್ವರ ಮತ್ತು ಮಾಯೆ, ಪುರುಷ ಮತ್ತು ಪ್ರಕೃತಿ

---

೧ ಪ್ರಶ್ನಿಸುತ್ತಿರುವವರು ವಯಸ್ಸಿನಲ್ಲಿ ಕಿರಿಯರಾದ್ದರಿಂದ ಕವಿರಾಜರು ಆತ್ಮೀಯವಾಗಿ 'ವತ್ಸ' ಎಂದು ಸಂಬೋಧಿಸಿದ್ದಾರೆ.

- ಪ್ರಸ್ಥಾನ ಭೇದದಿಂದ ಯಾವ ಹೆಸರಿನಿಂದ ಕರೆದರೂ ಸರಿ - ಎಲ್ಲ ಕಡೆಗಳಲ್ಲಿಯೂ ಎರಡು ಮೂಲಶಕ್ತಿಗಳ ಪರಸ್ಪರ ಸಂಘರ್ಷದಿಂದ ಸೃಷ್ಟಿನಿಯಮ ಕಾರ್ಯ ಪೂರ್ಣಗೊಳ್ಳುತ್ತದೆ.

**ಜಿಜ್ಞಾಸು :**

ತಾವು ಈ ಎರಡು ಶಕ್ತಿಗಳ ಮಾತನ್ನು ಹೇಳಿದಿರಿ. ವಾಸ್ತವವಾಗಿ ಇವೇ ಮೂಲ ಶಕ್ತಿಗಳೋ, ಅಥವಾ ಇವುಗಳ ಹಿಂದೆ ಬೇರೆ ಅದ್ವಿತೀಯ ಶಕ್ತಿಯೊಂದೇನಾದರೂ ಇದೆಯೋ ?

**ಗೋಪಿನಾಥ ಕವಿರಾಜ :**

ಎಲ್ಲಿಯವರೆಗೆ ದ್ವೈತಜಗತ್ತನ್ನು ಅತಿಕ್ರಮಿಸಲು ಸಾಧ್ಯವಾಗುವುದಿಲ್ಲವೋ, ಅಲ್ಲಿಯವರೆಗೆ ಈ ಎರಡು ಶಕ್ತಿಗಳು ಮೂಲಶಕ್ತಿಗಳೆಂದು ಪರಿಗಣಿತವಾಗುತ್ತವೆ. ಕಾರ್ಯಕ್ಷೇತ್ರದಲ್ಲಿ ಮೂಲತಃ ಇದೇ ಪ್ರತೀತಿಯಲ್ಲಿದೆ ಮತ್ತು ಸಾಧನೋಪಾಯದಲ್ಲಿಯೂ ಈ ಮಾತು ಸಿದ್ಧಗೊಳ್ಳುತ್ತದೆ. ಯಹೂದಿ, ಇರಾನಿ ಹಾಗೂ ಮತ್ತಿತರೆ ಪ್ರಾಚೀನ ಧರ್ಮಗಳಲ್ಲಿಯೂ ಮೂಲಸಂಬಂಧಿ ದ್ವೈತ ಸ್ವೀಕೃತಗೊಂಡಿದೆ. ಆದರೆ ಈ ದ್ವೈತದ ಮೂಲದಲ್ಲಿ ವಾಸ್ತವವಾಗಿ ಸದಾಕಾಲವೂ ಬೆರೆತುಕೊಂಡಿರುವ ಅದ್ವೈತ ಸತ್ಯದ ಭಾವವೂ ಇದೆ ಎಂಬುದನ್ನು ನೆನಪಿನಲ್ಲಿ ಇರಿಸಿಕೊಳ್ಳಬೇಕು. ಸೃಷ್ಟಿಯ ಪ್ರಾರಂಭದಲ್ಲಿ ಯಾವಾಗ ಪ್ರಕೃತಿ ಮತ್ತು ಪುರುಷ ಎರಡೂ ಭಿನ್ನ ರೂಪದಲ್ಲಿ ಉಪಲಬ್ಧವಾಗುತ್ತವೆಯೋ, ಹಾಗೆಯೇ ಸೃಷ್ಟಿಯ ಆದಿಸ್ಥಿತಿಯ ಬೀಜಾವಸ್ಥೆಯಲ್ಲಿ ಈ ಎರಡೂ ಶಕ್ತಿಗಳೂ ಅಭಿನ್ನರೂಪದಲ್ಲಿ ವಿರಾಜಮಾನವಾಗಿರುತ್ತವೆ ಎನ್ನುವುದನ್ನೂ ತಿಳಿಯಬೇಕು. ಇದನ್ನು ಈಶ್ವರ ಅಥವಾ ಮಹಾಶಕ್ತಿ ಎಂದು ಕರೆಯಿರಿ, ಇದರಲ್ಲಿ ಅಂಥ ವ್ಯತ್ಯಾಸವೇನೂ ಇಲ್ಲ. ಈ ಅವಸ್ಥೆಯಲ್ಲಿ ಮತ್ತೊಂದು ಪುರುಷ ಹಾಗೂ ಪ್ರಕೃತಿ ಪರಸ್ಪರ ಭೇದರಹಿತವಾಗಿ ಹೇಗೆ ಏಕಾಕಾರವಾಗಿ ಇರುತ್ತದೆಯೋ, ಅದೇ ರೀತಿಯಲ್ಲಿ ಮತ್ತೊಂದು ದಿಕ್ಕಿನಲ್ಲಿ ಅದ್ವೈತ ಈಶ್ವರ ಸತ್ಯವೂ ನಿರಂಜನ ಹಾಗೂ ನಿಷ್ಕಲಸತ್ಯದೊಂದಿಗೆ ಒಂದೇ ಆಗಿರುತ್ತದೆ. ಇದು ಅವ್ಯಕ್ತವಾದ ಅವಸ್ಥೆ. ಇದನ್ನು ಒಂದು ದೃಷ್ಟಿಯಲ್ಲಿ ಮತ್ತೊಂದು ಸೃಷ್ಟಿಯ ಬೀಜ ಎಂದು ಕರೆದರೂ ಸಹ ಇದು ಮತ್ತೊಂದು ದೃಷ್ಟಿಯಲ್ಲಿ ನಿತ್ಯಸೃಷ್ಟಿಗೆ ಅತೀತವಾಗಿ, ಪ್ರಪಂಚಹೀನವಾಗಿ, ಶಾಂತ ಹಾಗೂ ಸ್ಪಂದರಹಿತ ಶಿವಭಾವ ಮಾತ್ರವಾಗಿರುತ್ತದೆ. ಇದರ ಸ್ವತಂತ್ರತೆಯ ಉನ್ಮೇಷ ಸ್ಥಿತಿಯ ಕ್ಷೋಭರಹಿತ ಚಿತ್‌ಸತ್ಯದ ಮೇಲ್ಭಾಗದಲ್ಲಿ ವಾಕ್ ಮತ್ತು ಅರ್ಥಗಳ ರೂಪದಲ್ಲಿ ಸದಾಕಾಲ ಬೆರೆತುಕೊಂಡಿರುವ, ಆದರೆ ಭೇದಯುಕ್ತವಾಗಿರುವ ಪುರುಷ ಮತ್ತು ಪ್ರಕೃತಿರೂಪದ ಎರಡು ತತ್ತ್ವಗಳು ಹುಟ್ಟಿಕೊಳ್ಳುತ್ತವೆ. ಈ ಪುರುಷ ಮತ್ತು ಪ್ರಕೃತಿ ಒಂದೇ ಆಗಿದ್ದರೂ ಕೂಡ ಭಿನ್ನವಾಗಿರುತ್ತವೆ ಮತ್ತು ಭಿನ್ನವಾಗಿದ್ದರೂ ಒಂದೇ ಆಗಿರುತ್ತವೆ. ಏಕೆಂದರೆ ಇವುಗಳಲ್ಲಿ ಒಂದನ್ನು ಬಿಟ್ಟು ಮತ್ತೊಂದು ತಮ್ಮ ಸತ್ಯವನ್ನು ಸಂರಕ್ಷಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಪಾರಮಾರ್ಥಿಕ

ದೃಷ್ಟಿಯಲ್ಲಿ ಇದು ಅವ್ಯಕ್ತ ಅವಸ್ಥೆಯಲ್ಲದಿದ್ದರೂ, ಸಾಂಸಾರಿಕ ದೃಷ್ಟಿಯಲ್ಲಿ ಸೃಷ್ಟಿಯ ಅಭಿವ್ಯಕ್ತಿ ಆಗುವುದಿಲ್ಲವಾದ್ದರಿಂದ ಇದನ್ನು ಒಂದು ರೀತಿಯಲ್ಲಿ ಅವ್ಯಕ್ತ ಎಂದು ಕರೆಯಲಾಗುತ್ತದೆ. ಶಾಸ್ತ್ರದ ದೃಷ್ಟಿಯಲ್ಲಿ ಇದು ಅಲಿಂಗ - ಅವಸ್ಥೆ. ಆದರೆ ಪಾರಮಾರ್ಥಿಕ ದೃಷ್ಟಿಯಲ್ಲಿ ನಿಷ್ಕಲ ಅವಸ್ಥೆ ಅಲಿಂಗವಾಗುತ್ತದೆ; ಆನಂತರ ಇದನ್ನು ಮಹಾಲಿಂಗ ಅವಸ್ಥೆ ಎಂದು ಕರೆಯಲಾಗುತ್ತದೆ. ಲಿಂಗ ಮತ್ತು ಅಲಿಂಗ - ಈ ಎರಡು ಶಬ್ದಗಳ ತಾತ್ಪರ್ಯ ನಿರೀಕ್ಷಕಭಾವದಲ್ಲಿ ಇರುವಂಥದು ಎಂದು ತಿಳಿಯಬೇಕು. ಪರಿಚಯದ ಚಿನ್ಹೆಯನ್ನು 'ಲಿಂಗ' ಎಂದು ಕರೆಯಲಾಗುತ್ತದೆ. ಇದಕ್ಕೆ ಅಭಿವ್ಯಕ್ತಿಯಿರುವುದಿಲ್ಲ. ಇದನ್ನು ನೋಡಲು ಯಾವ ನಿದರ್ಶನವೂ ದೊರೆಯುವುದಿಲ್ಲ. ಆದರೆ ಈ ಅವ್ಯಕ್ತಸತ್ಯದಿಂದ ಯಾವ ತೇಜೋಮಯ ಹಾಗೂ ಜ್ಯೋತಿರ್ಮಯ ತತ್ತ್ವದ ಆವಿರ್ಭೂತವಾಗಿ ಕಾಣತೊಡಗುತ್ತದೆಯೋ, ಅದು ಸ್ವತಃ ತಾನೇ ಆವಿರ್ಭೂತವಾಗಿ ಕಾಣಿಸಿಕೊಳ್ಳುತ್ತದೆ. ಆದ್ದರಿಂದಲೇ ಇದನ್ನು ಸ್ವಯಂಭೂ ಎಂದು ಕರೆಯಲಾಗುತ್ತದೆ. ಇದು ಅವ್ಯಕ್ತ ಅವಸ್ಥೆಯ ಪರಿಚಯ. ಆದುದರಿಂದಲೇ ಇದು ಲಿಂಗಪದವಾಚ್ಯವಾಗಿದೆ.

**ಜಿಜ್ಞಾಸು :**

ತಾವು ಸ್ವಯಂಭೂರೂಪ ಲಿಂಗದ ಪರಿಚಯ ನೀಡಿದ್ದನ್ನು ಕೇಳಿ ನನಗೆ ತುಂಬ ತೃಪ್ತಿಯಾಯಿತು. ಈ ಲಿಂಗಕ್ಕೆ ಅತೀತವಾಗಿ ಅಲಿಂಗ-ಅವಸ್ಥೆಯ ಬಗೆಗೆ ನಾನೀಗ ಏನನ್ನೂ ಕೇಳುವಂತಿಲ್ಲ. ನಾನು ಕೇಳಬೇಕಿರುವುದು ಎಂದರೆ, ಲಿಂಗ ಮತ್ತು ಯೋನಿ ಪರಸ್ಪರ ಸಂಯೋಗಗೊಂಡು ಸಾಂಸಾರಿಕ ಕಾರ್ಯಗಳನ್ನು ಉತ್ಪಾದಿಸುತ್ತವೆ. ಇದರ ಒಂದಂಶ ಲಿಂಗತತ್ತ್ವ; ಆದರೆ ಎರಡನೆ ಅಂಶ ಅಥವಾ ಯೋನಿತತ್ತ್ವದ ಸಿದ್ಧಾಂತವಿಲ್ಲದೆ ಲಿಂಗರಹಸ್ಯ ಸರಿಯಾದ ರೀತಿಯಲ್ಲಿ ತಿಳಿಯಲು ಸಾಧ್ಯವಾಗದಂತಿರುವುದು. ಆದ್ದರಿಂದ ಪ್ರಾಸಂಗಿಕವಾಗಿ ಯೋನಿರಹಸ್ಯದ ಸಂಬಂಧವಾಗಿಯೂ ಸಂಕ್ಷೇಪವಾಗಿ ಒಂದೆರಡು ಮಾತುಗಳನ್ನು ಹೇಳಬೇಕೆಂದು ಪ್ರಾರ್ಥಿಸಿಕೊಳ್ಳುತ್ತೇನೆ. ಇದರಿಂದಾಗಿ ಪ್ರಸ್ತಾಪಿಸಿರುವ ವಿಷಯ ಸರಿಯಾದ ರೀತಿಯಲ್ಲಿ ತಿಳಿದಂತಾಗುತ್ತದೆ.

**ಗೋಪಿನಾಥ ಕವಿರಾಜ :**

ನಿಮ್ಮ ಪ್ರಶ್ನೆ ತುಂಬ ಉಚಿತವಾಗಿದೆ. ಯೋನಿತತ್ತ್ವದ ಸಿದ್ಧಾಂತವಿಲ್ಲದೆ ಲಿಂಗರಹಸ್ಯ ಸರಿಯಾದ ರೀತಿಯಲ್ಲಿ ತಿಳಿಯಲಾಗುವುದಿಲ್ಲ. ಹೀಗಿದ್ದರೂ ಈ ವಿಷಯ ಅತ್ಯಂತ ಜಟಿಲವಾದದ್ದು ಹಾಗೂ ಅಂತರ್ಮುಖೀ ಭಾವದಲ್ಲಿ ಮುಳುಗಿದ ನಿಷ್ಣಾತ ಸಾಧಕರ ಹೊರತು ಬೇರೆಯವರಿಗೆ ವಿಶೇಷವಾಗಿ ಹೇಳಲಾಗದಂಥದು. ಆದರೂ ಆಲೋಚನೆಯ ವಿಷಯವಾಗಿರುವುದರಿಂದ ಸಂಕ್ಷೇಪವಾಗಿ ನಾಲ್ಕಾರು ಮಾತುಗಳನ್ನು ಆವಶ್ಯಕವಾಗಿ ಹೇಳಲಿಚ್ಛಿಸುತ್ತೇನೆ.

ಯಾವ ರೀತಿಯಲ್ಲಿ ಆಧಾರ ಮತ್ತು ಆಧೇಯ (ಆಧಾರಕ್ಕೆ ಆಶ್ರಿತವಾಗಿರುವಂಥದು) ಪರಸ್ಪರ ಸಂಬಂಧವನ್ನು ಒಳಗೊಂಡಿರುತ್ತವೆಯೋ, ಅದೇ ರೀತಿಯಲ್ಲಿ ಮತ್ತೊಂದು ಬಗೆಯಾಗಿ ಲಿಂಗ ಮತ್ತು ಯೋನಿಯನ್ನೂ ತಿಳಿಯಬೇಕಿದೆ. ಆದರೆ ನೆನಪಿನಲ್ಲಿ ಇರಿಸಿಕೊಳ್ಳಬೇಕಿರುವುದು ಈ ಸಾದೃಶ್ಯ ಸರ್ವಾಂಗೀಣ (ಎಲ್ಲ ಸಮಯಕ್ಕೂ ಅನ್ವಯ)ವಾಗುವಂಥದಲ್ಲ. ಆದ್ಯಶಕ್ತಿ ಅಥವಾ ಶ್ರೀ ಭಗವಾನನು ಪರಮ ಸಾಮ್ಯಾವಸ್ಥೆಯಲ್ಲಿ (ಸಮತ್ವ ಭಾವದಲ್ಲಿ) ನೆಲೆಸಿರುವಾಗ, ಇದರಲ್ಲಿ ಲಿಂಗ ಅಥವಾ ಯೋನಿ - ಯಾವುದೇ ರೀತಿಯ ದ್ವೈತ ಭಾವದ ಕಲ್ಪನೆ ಸಂಭವಿಸುವುದಿಲ್ಲ. ಆದರೆ ಅನಾದಿ ದ್ವೈತಭಾವ ಪ್ರಕಾಶಿತಗೊಂಡಾಗ, ಇಲ್ಲಿ ಒಂದರ ಹೊರತು ಎರಡನೆಯದರ ಉಪಲಬ್ಧಿಯಿರುವುದಿಲ್ಲ. ತಂತ್ರಶಾಸ್ತ್ರದಲ್ಲಿ ಯೋನಿಯನ್ನು ತ್ರಿಕೋಣ ರೂಪದಲ್ಲಿಯೂ ಲಿಂಗವನ್ನು ಇದರ ಕೇಂದ್ರಸ್ವರೂಪದಲ್ಲಿ ಅಥವಾ ಮಧ್ಯಬಿಂದುವಿನ ರೂಪದಲ್ಲಿಯೂ ಕರೆಯಲಾಗಿದೆ. ಸೃಷ್ಟಿಯ ಅತೀತ ಅವಸ್ಥೆಯಲ್ಲಿ ಇಲ್ಲಿ ಸರ್ವಶಕ್ತಿಯು ನಿತ್ಯ ಪ್ರಕಾಶಮಾನವಾಗಿ ಅಥವಾ ನಿತ್ಯ ಅವಕುಂಠಿತ (ಮುದುಡಿಕೊಂಡಿರು) ವಾಗಿರುತ್ತದೆ. ಇಲ್ಲಿ ಬಿಂದು, ಮಂಡಲ ಮತ್ತು ಬಿಂದುವಿನಿಂದ ಮಂಡಲ ಪರ್ಯಂತವಾಗಿರುವ ನಿರಂತರ ಕಿರಣಧಾರೆ - ಈ ಮೂರೂ ಸಹ ಅಭಿನ್ನರೂಪವಾಗಿ ಪ್ರಕಾಶಿಸುತ್ತಿರುತ್ತವೆ. ಈ ಅಭೇದಾತ್ಮಕ ಸತ್ಯ (ಸ್ಥಿತಿ ಅಥವಾ ಗುಣ)ದಲ್ಲಿ ಮಂಡಲವನ್ನು ಯೋನಿ ಎಂದೂ, ಬಿಂದುವನ್ನು ಲಿಂಗವೆಂದೂ ಪೂರ್ವರೂಪ ಕಲ್ಪನೆಯನ್ನಾಗಿ ಮಾಡಲಾಗಿದೆ. ಆದರೆ ಸೃಷ್ಟಿಯ ಆದಿಮ ಅವಸ್ಥೆಯ ಸಂದರ್ಭದಲ್ಲಿ - ಈ ಆದಿಮ ಅವಸ್ಥೆ ಅನಾದಿ ಕಾಲದಿಂದಲೂ ವರ್ತಮಾನವೇ ಆಗಿದೆ - ಬಿಂದು ಮತ್ತು ಇದರ ಆವರಣ - ಈ ಎರಡರಲ್ಲಿಯೂ ಒಂದು ಭೇದಾಭಾಸ (ಭಿನ್ನತೆ) ಎಚ್ಚರಗೊಂಡು ಪುಟಿಯುತ್ತದೆ. ಇದರ ಫಲಸ್ವರೂಪವಾಗಿಯೇ ಆವರಣರೂಪ ಮಂಡಲವು ಬಿಂದುವಿನ ಜೊತೆಯಲ್ಲಿ ಅಭಿನ್ನರೂಪವಾಗಿ ವರ್ತಮಾನವಾಗಿರುತ್ತದೆ. ಇದು ಭೇದಸೃಷ್ಟಿಗೆ ಮೊದಲು ತ್ರಿರೇಖಾಂಕಿತ (ಮೂರು ರೇಖೆಗಳೊಂದಿಗೆ) ತ್ರಿಕೋಣ ಸಮನ್ವಿತವಾದ ಕ್ಷೇತ್ರರೂಪದಲ್ಲಿ ಪ್ರಕಟಗೊಳ್ಳುತ್ತದೆ. ಬಿಂದುವಿನಿಂದ ಅನಂತ ಕಿರಣಮಾಲೆಗಳು ಹೇಗೆ ಹರಡಿಕೊಳ್ಳುತ್ತವೆಯೋ ಹಾಗೆಯೇ ಸಂಕುಚಿತ ಅವಸ್ಥೆಯ ಸಂದರ್ಭದಲ್ಲಿ ಸೃಷ್ಟಿಯ ಪ್ರಾರಂಭಕಾಲದಲ್ಲಿ ಮೂರುಕಿರಣಗಳನ್ನು ಮುಖ್ಯವಾಗಿ ಗ್ರಹಿಸಬೇಕಿರುವುದು ಯೋಗ್ಯವಾದದ್ದಾಗಿದೆ. ಈ ಮೂರು ರಶ್ಮಿಗಳು ಸರಳ ರೇಖೆಯ ರೂಪದಲ್ಲಿ ಪರಸ್ಪರ ಸಮಾನ ದೂರದಲ್ಲಿದ್ದು ಮೂರುದಿಕ್ಕುಗಳಾಗಿರುತ್ತವೆ. ಮಹಾಶೂನ್ಯದ ವಕ್ಷಃಸ್ಥಲದಲ್ಲಿ ಈ ವಿಕಿರಣ-ಲೀಲೆ ಕೊನೆಗೊಳ್ಳುತ್ತದೆ. ಆದುದರಿಂದಲೇ ಇದು ಎಲ್ಲೆಡೆಯಲ್ಲಿಯೂ ಸಮಾನಭಾವದಲ್ಲಿ ಇರುತ್ತದೆ; ಏಕೆಂದರೆ ಈ ಸಂದರ್ಭದಲ್ಲಿ ಆಕರ್ಷಣೆ ಅಥವಾ ವಿಕರ್ಷಣೆ ಮಾಡುವಂಥ ಯಾವ ಶಕ್ತಿಯೂ ವರ್ತಮಾನದಲ್ಲಿ ಇರುವುದಿಲ್ಲ; ಆದ್ದರಿಂದಲೇ ಈ ಮೂರು ರೇಖೆಗಳು ಪರಸ್ಪರ ಸಮಭಾವದೊಂದಿಗೆ ನೆಲೆಸಿರುತ್ತವೆ. ಒಂದೇ ಮೂಲಸ್ಥಾನದಲ್ಲಿ ನೆಲೆಸಿರುವ ಕಾರಣದಿಂದ ಈ ಮೂರು ರೇಖೆಗಳು

ಪ್ರಾಥಮಿಕ ಗತಿಯಲ್ಲಿ ನಿರೋಧದಿಂದ ಈ ಸಮಯದಲ್ಲಿ ಸ್ಥಿರತ್ವವನ್ನು ಪಡೆದಿರುತ್ತವೆ. ಅನಂತರ ಇವುಗಳ ಅಗ್ರಭಾಗ ಪರಸ್ಪರ ಕೂಡಿಕೊಳ್ಳಲು ಪುನಃ ಚಲನೆಯನ್ನು ಪಡೆದುಕೊಳ್ಳುತ್ತವೆ. ಇವರ ಫಲವಾಗಿಯೇ ಹೊರಗಿನ ಮೂರುರೇಖೆಗಳು ವಿಕಾಸಗೊಳ್ಳುತ್ತವೆ ಹಾಗೂ ಒಂದು ಸಮಬಾಹು ಮತ್ತು ಸಮಕೋನ ತ್ರಿಭುಜದ ಆವಿರ್ಭಾವವಾಗುತ್ತದೆ. ಈ ಸಮಯದಲ್ಲಿ ಈ ಮೂರುರೇಖೆಗಳನ್ನು ಬಿಂದುವಿನ ಆವರಣವೆಂದು ಪರಿಗಣಿಸಲಾಗುತ್ತದೆ. ಇದೇ ಪ್ರಥಮ ಆವರಣ ಎಂದು ಹೇಳಲಾಗುತ್ತದೆ. ಮೂರು ಸರಳ ರೇಖೆಗಳ ಆವರಣವಿಲ್ಲದೆ ಯಾವ ವಸ್ತುವೂ ಇರುವುದಿಲ್ಲ. ತಂತ್ರಶಾಸ್ತ್ರದಲ್ಲಿ ಈ ತ್ರಿಕೋಣ ಅಥವಾ ತ್ರಿಭುಜವನ್ನು 'ಮೂಲತ್ರಿಕೋಣ' ಎಂದು ಕರೆಯಲಾಗುತ್ತದೆ. ಬಿಂದುವಿನ ಸ್ಪಂದನವಲ್ಲಿನ ತಾರತಮ್ಯದ ಕಾರಣದಿಂದ ಈ ತ್ರಿಕೋಣದ ರೂಪ ಭಿನ್ನ ಭಿನ್ನ ಪ್ರಕಾರಗಳಾಗುತ್ತದೆ. ಏಕೆಂದರೆ ಬಾಹು ಅಥವಾ ಕೋನಗಳು ಪರಸ್ಪರವಾಗಿ ಅಸಂಖ್ಯ ರೀತಿಯಲ್ಲಿ ವೈಷಮ್ಯದೊಂದಿಗೆ ಸಂಘಟಿತಗೊಳ್ಳುತ್ತವೆ. ಆದರೆ ಮೂಲ ತ್ರಿಕೋಣ ಸಾಮ್ಯಭಾವದೊಂದಿಗೆ ಯಾವಾಗಲೂ ಒಂದೇ ರೀತಿಯಲ್ಲಿರುತ್ತದೆ. ಈ ಮೂಲ ತ್ರಿಕೋಣವೇ ವಿಶ್ವದ ಉತ್ಪತ್ತಿಗೆ ಕಾರಣವಾಗಿರುವ ಮಹಾಯೋನಿಸ್ವರೂಪ. ಇದರ ಮಧ್ಯಸ್ಥಳದಲ್ಲಿರುವ ಬಿಂದು ವಿಕ್ಷುಬ್ಧಗೊಂಡು ಊರ್ಧ್ವಗತಿಶೀಲ ಜ್ಯೋತಿರ್ಮಯ ರೇಖೆಯ ರೂಪದಲ್ಲಿ ನೈಪುಣ್ಯತೆ ಪಡೆದಾಗ ಇದರ ಉಜ್ವಲ ಪ್ರಕಾಶಪುಂಜವಾದ ಸ್ತಂಭರೂಪವನ್ನು ಪ್ರತ್ಯಕ್ಷವಾಗಿ ನೋಡಬಹುದು. ಇದನ್ನೇ ಈ ಹಿಂದೆ ವರ್ಣಿಸಿರುವ ಸ್ವಯಂಭೂ ಹೆಸರಿನ ಜ್ಯೋತಿರ್ಲಿಂಗ ಎಂದು ಕರೆಯುವುದು. ಅಂತರ್ದೃಷ್ಟಿ ತೆರೆದ ನಂತರ ಹೊರಗೆ ಮತ್ತು ಒಳಗೆ ಎಲ್ಲ ಸ್ಥಳಗಳಲ್ಲಿಯೂ ಈ ಲೀಲೆ ಪ್ರತ್ಯಕ್ಷವಾಗಿ ನೋಡುವಂಥದಾಗುತ್ತದೆ. ಬೈಬಲ್ ಮತ್ತು ಇತರೆ ಧರ್ಮಗ್ರಂಥಗಳಲ್ಲಿಯೂ ಈ ಅಗ್ನಿಸ್ತಂಭದ ವರ್ಣನೆ ದೊರೆಯುತ್ತದೆ. ಅದೂ ಸಹ ಈ ಲಿಂಗ-ಜ್ಯೋತಿಗೆ ಹೊರತಾಗಿರುವಂಥದಲ್ಲ.

**ಜಿಜ್ಞಾಸು :**

ತಾವು ವರ್ಣನೆ ಮಾಡಿದ ರೀತಿಯಲ್ಲಿ ಯೋನಿಯಿಂದ ಲಿಂಗವ ವಿಕಾಸವಾಗುತ್ತದೆ ಎಂದು ತಿಳಿದು ಬರುತ್ತದೆ. ಇದು ಆಂಶಿಕ ಸತ್ಯವೇ ?

**ಗೋಪಿನಾಥ ಕವಿರಾಜ :**

ನಿಮ್ಮ ಧಾರಣ (ಗ್ರಹಿಕೆ) ನಿರ್ಮಲವಾದುದಾಗಿಲ್ಲ. ಇದುವರೆಗೆ ಲಿಂಗ ಮತ್ತು ಯೋನಿಯ ಪಾರಸ್ಪರಿಕ ಸಂಬಂಧಗಳನ್ನು ನಿಮ್ಮ ಒಳಗಿನ ಹೊಯ್ದಾಟದಲ್ಲಿ ಹೃದಯಸ್ಪರ್ಶಿಯಾಗುವಂತೆ ಸ್ವೀಕರಿಸಿಲ್ಲ. ಆದ್ದರಿಂದಲೇ ಸೂಕ್ಷ್ಮತ್ವವನ್ನು ನೀವು ಈಗಲೂ ಸಹ ಸ್ವೀಕರಿಸಲಾಗಿಲ್ಲ. ನಿಮ್ಮ ಸರಳತೆಗೆ ತಿಳಿಯುವಂತೆ ವಿಷಯವನ್ನು ಇನ್ನೂ ಸ್ವಲ್ಪ ಸ್ಪಷ್ಟಪಡಿಸಲು ಯತ್ನಿಸುತ್ತೇನೆ. ನಾನು

ಯಾವ ಯೋನಿಯ ಸಂಬಂಧವಾಗಿ ತಮಗೆ ಹೇಳಿರುವೆನೋ, ಅದು ಮೂಲತಃ ಒಂದೇ ಆಗಿದ್ದರೂ ಸಹ ದ್ವೈತಜಗತ್ತಿನಲ್ಲಿ ಇದನ್ನು ಎರಡು ವಿಧವಾಗಿ ತಿಳಿದುಕೊಳ್ಳಿರಿ. ಒಂದು ಬಾಹ್ಯಯೋನಿ ಮತ್ತೊಂದು ಮಾತೃಯೋನಿ. ಇದೇ ರೀತಿ ತ್ರಿಕೋಣವೂ ಕೂಡ ಊರ್ಧ್ವಮುಖ ಮತ್ತು ಅಧೋಮುಖ ಭೇದದಲ್ಲಿ ಎರಡು ಪ್ರಕಾರಗಳಲ್ಲಿ ಇದೆ. ಎರಡರ ಕೇಂದ್ರಸ್ಥಳದಲ್ಲಿಯೂ ಬಿಂದು ವರ್ತಮಾನವಾಗಿದೆ. ಬಿಂದು ವಿಕ್ಷುಬ್ಧಗೊಂಡು ರೇಖಾರೂಪದಲ್ಲಿ ಗತಿಶೀಲವಾದಾಗ, ಇದೂ ಕೂಡ ಊರ್ಧ್ವ ಮತ್ತು ಅಧೋಭೇದಗಳಿಂದ ಎರಡು ಪ್ರಕಾರವಾಗುತ್ತದೆ. ಇವುಗಳಲ್ಲಿ ಒಂದರ ಹೆಸರು ಊರ್ಧ್ವಲಿಂಗ ಮತ್ತೊಂದರ ಹೆಸರು ಅಧೋಲಿಂಗ. ಸಾಧಾರಣ ಅವಸ್ಥೆಯಲ್ಲಿ ಜಗತ್ತಿನ ಎಲ್ಲ ಜೀವ-ಜಂತುಗಳೂ ಅಧೋಲಿಂಗ ವಿಶಿಷ್ಟತೆಯನ್ನು ಒಳಗೊಂಡಿರುತ್ತವೆ. ಆದರೆ ಸಾಧನೆಯ ಮಾರ್ಗದಲ್ಲಿ ಕುಂಡಲಿನಿ ಶಕ್ತಿಯನ್ನು ಎಚ್ಚರಗೊಳಿಸಿದಾಗ ಇದು ಊರ್ಧ್ವಲಿಂಗ ರೂಪವಾಗುತ್ತದೆ.

ಬಿಂದುವು ವಿಸರ್ಗ ರೂಪದಲ್ಲಿ ನೈಪುಣ್ಯತೆ ಪಡೆದಾಗ ಅರ್ಥಾತ್ ದ್ವೈತ ಜಗತ್ತಿನ ಮೂಲಭೂತ ದ್ವಂದ್ವದಲ್ಲಿ ಆವಿರ್ಭೂತವಾದಾಗ ಒಂದು ಬಿಂದು ಮೇಲ್ಭಾಗದಲ್ಲಿ ಹಾಗೂ ಎರಡನೆಯದು ಕೆಳಭಾಗದಲ್ಲಿ ನಿಲ್ಲುತ್ತದೆ. ಈ ಎರಡು ಬಿಂದುಗಳನ್ನು ಸಂಯೋಜಿಸುವ ರೇಖೆಯೇ ಅಕ್ಷರೇಖೆ ಅಥವಾ ಬ್ರಹ್ಮಸೂತ್ರ. ಮೇಲಿನ ಬಿಂದುವು ಒಂದು ತ್ರಿಕೋಣದ ಮಧ್ಯಬಿಂದು. ಇದೇ ರೀತಿಯಲ್ಲಿ ಕೆಳಗಿನ ಬಿಂದುವೂ ಸಹ ಎರಡನೆ ತ್ರಿಕೋಣದ ಮಧ್ಯಬಿಂದು. ಊರ್ಧ್ವತ್ರಿಕೋಣ ಹಾಗೂ ಇದರ ಮಧ್ಯಸ್ಥ ಬಿಂದು ವಿಕ್ಷುಬ್ಧಗೊಂಡಾಗ ಇದು ಈ ಬಿಂದುವಿನಿಂದ ಅಧೋಮುಖಿಯಾದ (ಕೆಳಗಿನದರ ಕಡೆಗೆ) ಶಕ್ತಿಧಾರೆಯನ್ನು ಹರಿಸುತ್ತದೆ. ಇದು ಸೃಷ್ಟಿ ಅವಸ್ಥೆಯ ಸೂಚನೆ. ಇದೇ ರೀತಿಯಲ್ಲಿ ಕೆಳಭಾಗದ (ಅಧಃಸ್ಥಿತವಾದ)ಬಿಂದು ಮತ್ತು ತ್ರಿಕೋಣ ವಿಕ್ಷುಬ್ಧಗೊಂಡಾಗ ಬಿಂದುವಿನಿಂದ ಊರ್ಧ್ವಮುಖಿಯಾಗಿ ಶಕ್ತಿಧಾರೆ ಏರಿಕೊಳ್ಳುತ್ತದೆ. ಇದು ಸಂಹಾರದ ಅವಸ್ಥೆ. ಶಕ್ತಿಧಾರೆ ಸೃಷ್ಟಿಯ ಸಮಯದಲ್ಲಿ ಊರ್ಧ್ವಬಿಂದುವಿನಿಂದ ಕೆಳಗೆ ಹರಿದಾಗ ಒಂದು ತ್ರಿಕೋಣ ಕ್ಷೇತ್ರರೂಪದಲ್ಲಿ ಇದನ್ನು ತನ್ನ ವಕ್ಷಸ್ಥಲದಲ್ಲಿ ಧರಿಸುತ್ತದೆ. ಇದರ ಫಲಸ್ವರೂಪದಿಂದಲೇ ಪ್ರಾಕೃತಿಕ ದೇಹ ನಿರ್ಮಾಣಗೊಳ್ಳುತ್ತದೆ. ಹೀಗೆಯೇ ಅಜ್ಞಾನಮಯವಾದ ಪ್ರಪಂಚದ ಆವಿರ್ಭಾವವೂ ಆಗುತ್ತದೆ. ಮತ್ತೊಂದೆಡೆಯಲ್ಲಿ, ಅಧೋಬಿಂದು ಊರ್ಧ್ವಲಿಂಗದ ಅವಸ್ಥೆಯನ್ನು ಪಡೆದುಕೊಂಡು ಊರ್ಧ್ವಮುಖವಾಗಿ ಶಕ್ತಿಸಂಚಾರ ಮೂಡಿದಾಗ ಎರಡನೆಯ ತ್ರಿಕೋಣ ಕ್ಷೇತ್ರಸ್ವರೂಪವನ್ನು ಪಡೆದುಕೊಂಡು ಇದರ ಬೀಜರೂಪವನ್ನು ಧರಿಸುತ್ತದೆ. ಇದರ ಫಲಸ್ವರೂಪವಾಗಿ ಅಪ್ರಾಕೃತಿಕವಾದ ಅಥವಾ ದಿವ್ಯಪ್ರಪಂಚದ ಆವಿರ್ಭೂತವಾಗುತ್ತದೆ. ದೇವತೆಯ ದೇಹನಿರ್ಮಾಣ ಅಥವಾ ಸಾಧಕನಿಗೆ ದಿವ್ಯಭಾವದ ಪ್ರಾಪ್ತಿ ಇದರಿಂದಲೇ ಪ್ರಾಪ್ತವಾಗುವಂಥದು. ದಿವ್ಯಸೃಷ್ಟಿಯ ಮೂಲದಲ್ಲಿ ಪ್ರಕೃತಿಸೃಷ್ಟಿಯ ಸಂಹಾರದ

ಅವಶ್ಯಕತೆಯಿದೆ. ಹೀಗೆಯೇ ಪ್ರಾಕೃತಿಕ ಸೃಷ್ಟಿಯ ಮೂಲದಲ್ಲಿ ದಿವ್ಯಸೃಷ್ಟಿಯ ತಿರೋಭಾವದ ಅವಶ್ಯಕತೆಯಿದೆ. ಹೀಗಿದ್ದರೂ ಸೃಷ್ಟಿ ಮತ್ತು ಸಂಹಾರ ಈ ಎರಡೂ ಕ್ರಿಯೆಗಳು ಪರಸ್ಪರ ಅನುಸ್ಯೂತ (ಎಡೆಬಿಡದಂತೆ ಸದಾ ಕೂಡಿಕೊಂಡಿರುವ)ವಾಗಿರುವಂಥವು ಮತ್ತು ಎರಡರ ಮೂಲದಲ್ಲಿಯೂ ಲಿಂಗ ಹಾಗೂ ಯೋನಿಗಳ ಪರಸ್ಪರ ಸಂಯೋಗ ನಡೆಯುತ್ತಿರುವಂಥವಾಗಿವೆ.

ತಂತ್ರಶಾಸ್ತ್ರದಲ್ಲಿ ದೊರೆಯುವ ಮಧ್ಯಬಿಂದು ವಿಶಿಷ್ಟವಾದ ಷಟ್ಕೋಣದ ವರ್ಣನೆ ಈ ಊರ್ಧ್ವಮುಖ ಮತ್ತು ಅಧೋಮುಖ ತ್ರಿಕೋಣದ ಪರಸ್ಪರ ಸಂಯೋಗದಿಂದ ಉತ್ಪನ್ನವಾಗಿರುವಂಥದು ಎಂದು ತಿಳಿಯಬೇಕು. ಮಧ್ಯಬಿಂದುವು ಎರಡು ತ್ರಿಕೋಣಗಳಿಗೂ ಸಮಾನವಾಗಿದೆ. ಈ ಷಟ್ಕೋಣವೇ ಶಿವಶಕ್ತಿಯರ ಮಿಲನರೂಪ. ಹಿಂದೂ, ಬೌದ್ಧ ಮತ್ತು ಜೈನ - ಎಲ್ಲ ಸಂಪ್ರದಾಯಗಳಲ್ಲಿಯೂ ಉಪಾಸಕರ ಗುಂಪು ಒಂದಲ್ಲ ಒಂದು ರೂಪದಲ್ಲಿ ಇದನ್ನು ಸ್ವೀಕಾರ ಮಾಡದೆ, ನಾನು ಈಗ ಯಾವುದನ್ನು ಯೋನಿ ಮತ್ತು ಲಿಂಗದ ಕುರಿತಾಗಿ ಮಾತಾಡಿರುವೆನೋ, ಇದು ವೈದಿಕ ಸಾಧನೆಯಲ್ಲಿ ಯಜ್ಞಕುಂಡ ಮತ್ತು ಯಜ್ಞಾಗ್ನಿಯ ಸ್ಥಾನದಲ್ಲಿ ದೊರೆಯುತ್ತದೆ. ಆಚಾರ್ಯರುಗಳು ಅನೇಕ ಸ್ಥಳಗಳಲ್ಲಿ ಇದನ್ನು ಸ್ಪಷ್ಟ ನಿರ್ದೇಶನದಲ್ಲಿ ನೀಡಿದ್ದಾರೆ. ಕುಂಡವು ಪ್ರಕೃತಿ ಅಥವಾ ಯೋನಿ. ಹೀಗೆಯೇ ಅಗ್ನಿಯು ರುದ್ರ ಅಥವಾ ಶಿವಜ್ಯೋತಿಯಾಗಿದೆ. ದೇಹತತ್ತ್ವವಿದರಾದ ಯೋಗಿಗಳಿಂದ ವರ್ಣಿತವಾಗಿರುವ ಆಧಾರ-ಚಕ್ರವೂ ಸಹ ಈ ಕುಂಡ ಅಥವಾ ಯೋನಿಸ್ವರೂಪವೇ ಆಗಿದೆ. ಇದರ ಮಧ್ಯಸ್ಥವಾಗಿರುವ ಜ್ಯೋತಿಯು ಪ್ರಕಾಶಿತಗೊಂಡು ಬ್ರಹ್ಮಮಾರ್ಗದಲ್ಲಿ ಸಂಚರಿಸುತ್ತದೆ. ಆಗ ಇದೇ 'ಲಿಂಗ' ಎಂದು ಕರೆಯುವಂಥದಾಗುತ್ತದೆ.

**ಜಿಜ್ಞಾಸು :**

ಲಿಂಗ ಎಷ್ಟು ಪ್ರಕಾರಗಳಲ್ಲಿದೆ ಮತ್ತು ಯೋನಿ ಎಷ್ಟು ಪ್ರಕಾರಗಳಲ್ಲಿದೆ ? ಹೀಗೆಯೇ ಇವುಗಳ ಮೂಲಭೇದಗಳು ಯಾವುವು ?

**ಗೋಪಿನಾಥ ಕವಿರಾಜ :**

ಲಿಂಗ ಒಂದೇ ಆದರೂ ಕೂಡ ಯೋನಿ ಅಥವಾ ಆಧಾರಭೇದದಿಂದ ಅಸಂಖ್ಯ ರೂಪದಲ್ಲಿ ಆವಿಷ್ಕೃತಗೊಳ್ಳುತ್ತದೆ. ಸ್ವಯಂಭೂಲಿಂಗ, ಬಾಣಲಿಂಗ, ಮತ್ತಿತರೆ ಹಲವು ಲಿಂಗಭೇದಗಳು ಕೇವಲ ಒಂದೇ ಲಿಂಗದ ವಿಭಿನ್ನ ಪ್ರಕಾರದಲ್ಲಿ ವಿಕಾಸಗೊಳ್ಳುತ್ತವೆ. ಇದೇ ರೀತಿಯಲ್ಲಿಯೇ ಮೂಲ ಯೋನಿಯೂ ಒಂದೇ ಎನ್ನುವುದು ಸತ್ಯ. ಆದರೆ ಲಿಂಗದ ವಿಚಿತ್ರತೆಯ ಕಾರಣದಿಂದ ಇದೂ ಕೂಡ ಬೇರೆ-ಬೇರೆ ಯೋನಿಗಳ ರೂಪದಲ್ಲಿ ಆವಿರ್ಭೂತಗೊಳ್ಳುತ್ತದೆ. ಶಾಸ್ತ್ರಗಳಲ್ಲಿ ನೀವು ಓದಿರುವ ಎಂಬತ್ತನಾಲ್ಕು ಯೋನಿಗಳ ವರ್ಣನೆ ಲಭ್ಯವಾಗುವುದಕ್ಕೆ ಇದೊಂದೇ

ಏಕಮಾತ್ರ ಕಾರಣವಾಗಿದೆ. ಹೀಗಿದ್ದರೂ ಕೂಡ ಒಂದು ದೃಷ್ಟಿಯಲ್ಲಿ ಲಿಂಗವೂ ಒಂದೇ ಮತ್ತು ಯೋನಿಯೂ ಕೂಡ ಒಂದೇ. ಆದರೆ ಮತ್ತೊಂದು ದೃಷ್ಟಿಯಿಂದ ನೋಡಿದಾಗ ಎರಡರ ವೈಚಿತ್ರ್ಯವೂ ಅನಂತ ಪ್ರಕಾರಗಳಾಗಿವೆ. ಜೀವ ದೇಹದಲ್ಲಿ ಯಾವ ಮೂಲಾಧಾರಾದಿಯಾವ ಷಟ್‌ಸಂಖ್ಯೆಯು ಆಧಾರ ಕಮಲದ ವರ್ಣನೆ ಬರುತ್ತದೆಯೋ ಅದೂ ಸಹ ವಾಸ್ತವವಾಗಿ ಯೋನಿಯ ಪ್ರಕಾರ ಭೇದವಷ್ಟೇ ಆಗಿದೆ. ಎಲ್ಲ ಕಡೆಯಲ್ಲಿಯೂ ಬಿಂದುರೂಪದಲ್ಲಿ ಲಿಂಗ ಅನುಸ್ಯೂತವಾಗಿದೆ. ಇದರ ಅತೀತ ಅವಸ್ಥೆಯಲ್ಲಿ ಬಿಂದುವು ನಿರಾಧಾರಗೊಂಡು ಅವ್ಯಕ್ತವಾಗುತ್ತದೆ. ಲಿಂಗವು ಅಲಿಂಗದಲ್ಲಿ ಪರ್ಯವಸಾನ ಹೊಂದುತ್ತದೆ. ಹೀಗೆ ದ್ವೈತ ಭಾವ ಶಾಂತಗೊಂಡು ಅದ್ವೈತಭಾವ ಆವಿರ್ಭೂತಗೊಳ್ಳುತ್ತದೆ. ಈ ಸಮಯದಲ್ಲಿ ಲಿಂಗ ಮತ್ತು ಯೋನಿಯಲ್ಲಿ ಯಾವುದೇ ರೀತಿಯ ಭಿನ್ನತೆಯ ಅನುಭವವಾಗುವುದಿಲ್ಲ. ಇದು ನಿರಾಲಂಬ ಅಥವಾ ನಿರ್ವಿಕಾರ ಅವಸ್ಥೆ. ವೇದಾಂತ ಸೂತ್ರಕಾರ ಹೇಳಿದ್ದಾನೆ - 'ಯೋನೇಃ ಶರೀರಮ್'. ಇದು ನಿಜವಾಗಿಯೂ ಸತ್ಯವಾಗಿದೆ. ಏಕೆಂದರೆ ಲಿಂಗಜ್ಯೋತಿ ಯೋನಿಯಲ್ಲಿ ಸಂಯೋಗಗೊಂಡು ಪುನಃ ಉತ್ಕರ್ಷಗೊಳ್ಳದಿದ್ದರೆ ಯಾವುದೇ ರೀತಿಯ ದೇಹನಿರ್ಮಾಣ ಕಾರ್ಯ ಸಾಧ್ಯವಾಗುವುದಿಲ್ಲ. ನಾವು ಬೇರೆ ಬೇರೆ ಇಂದ್ರಿಯಗಳ ಸಹಯೋಗದಿಂದ ದರ್ಶನ - ಶ್ರವಣಾದಿ ಭಿನ್ನ - ಭಿನ್ನ ಕಾರ್ಯಗಳ ಸಂಪಾದನೆ ಮಾಡುತ್ತಿರುವುದೂ ಕೂಡ ಸೃಷ್ಟಿಕಾರ್ಯದ ಒಂದು ಅಂಗವೇ ಆಗಿದೆ. ಹೀಗೆ ಇವುಗಳ ಮೂಲದಲ್ಲಿ ಕೂಡ ಲಿಂಗ - ಯೋನಿಗಳ ಸಂಬಂಧ ನಡೆಯುತ್ತಿರುತ್ತದೆ. ಇದರಲ್ಲಿ ಯಾವ ಸಂದೇಹವೂ ಇಲ್ಲ. ಇದೇ ರೀತಿ ಜಗತ್ತಿನ ಸ್ವರೂಪದ ಹಲವು ರೂಪಗಳ ವಿಶ್ಲೇಷಣೆ ಮಾಡಿದಾಗ ಈ ಲಿಂಗ ಮತ್ತು ಯೋನಿತತ್ತ್ವ ಕ್ಷುದ್ರತಮ ಪರಮಾಣುವಿನ ಕಣದಿಂದ ಮೊದಲುಗೊಂಡು ಬೃಹತ್ತಾದ ಬ್ರಹ್ಮಾಂಡ ರಾಶಿಯವರೆಗೆ ಎಲ್ಲೆಡೆಯಲ್ಲಿಯೂ ನೋಡಲು ದೊರೆಯುತ್ತದೆ. ಪಶ್ಯಂತಿ, ಮಧ್ಯಮಾ ಮತ್ತು ವೈಖರೀ - ಈ ಮೂರು ವಿಧದ ಶಬ್ದಗಳೂ ತ್ರಿಕೋಣದ ಮೂರು ರೇಖೆಗಳ ರೂಪದಿಂದ ಕಲ್ಪಿತವಾಗಿರುವಂಥವು. ಇವುಗಳ ಮತ್ತೊಂದು ಹೆಸರೇ ಇಚ್ಛಾಶಕ್ತಿ, ಜ್ಞಾನಶಕ್ತಿ ಮತ್ತು ಕ್ರಿಯಾಶಕ್ತಿ, ಅಥವಾ ಕೆಳಮಟ್ಟದಲ್ಲಿ ಸತ್ತ್ವ, ರಜ ಮತ್ತು ತಮ. ಮಧ್ಯಸ್ಥವಾಗಿರುವ ಬಿಂದು ಪರಾ-ವಾಕ್ ಅಥವಾ ಶಬ್ದದ ತುರೀಯ ಅವಸ್ಥೆಗೆ ನಿದರ್ಶನವಾಗಿದೆ. ಹೀಗೆಯೇ ಬಿಂದುಯುಕ್ತ ತ್ರಿಕೋಣವು ಮಾಯಾಸಹಿತ ಈಶ್ವರನ ಅಥವಾ ಶಕ್ತಿಯುಕ್ತ ಶಿವನ ಹೆಸರಾಗಿದೆ. ಇದೇ ಸಮ್ಮಿಳಿತ ರೂಪದಲ್ಲಿ ನಾಲ್ಕು ವಿಧ ವಾಕ್‌ತತ್ತ್ವದ ಸಮಷ್ಟಿಯಾಗಿದೆ ಅರ್ಥಾತ್ ಶಬ್ದಬ್ರಹ್ಮಸ್ವರೂಪ. ಇದರಲ್ಲಿನ ಯಥಾರ್ಥವಾದ ಅಧಿಕಾರದಿಂದ ಶಬ್ದಾತೀತವಾದ ವೇದಕ್ಕೆ ಅಗೋಚರವಾದ, ಅಪ್ರಮೇಯವಾದ, ನಿಷ್ಕಲ ಮತ್ತು ನಿರಂಜನವಾದ, ತತ್ತ್ವಾತೀತ ಸತ್ಯದ ಸಾಕ್ಷಾತ್ಕಾರವಾಗುತ್ತದೆ. ಯಾವುದನ್ನು ಓಂಕಾರ ಅಥವಾ ಪ್ರಣವ ಎಂದು ಕರೆಯಲಾಗುತ್ತದೆಯೋ ಆ ಅರ್ಧಮಾತ್ರಾಯುಕ್ತವಾಗಿರುವುದು ಈ ತ್ರಿಕೋಣದ ಹೆಸರೇ. ಇದೇ ಯೋಗಶಾಸ್ತ್ರದ ಕುಂಡಲಿನಿ ಅಥವಾ ಶಬ್ದಮಾತೃಕೆ. ಈ ತ್ರಿಕೋಣಾತ್ಮಕ ಯೋನಿಯ

ಮೂರು ರೇಖೆಗಳು ಒಂದು ಸರಳ ರೇಖೆಯಲ್ಲಿ ನಿಲ್ಲುವ ನೈಪುಣ್ಯತೆ ಪಡೆದಾಗ ಈ ರೇಖೆ ಅರ್ಧ (ಮಧ್ಯ)ದಲ್ಲಿಯೇ ಪರ್ಯವಸಾನಗೊಳ್ಳುತ್ತದೆ ಮತ್ತು ಈ ಅರ್ಧವೇ ಬಿಂದುವಿನಲ್ಲಿ ವಿಲೀನಗೊಂಡು ಅವ್ಯಕ್ತವಾಗುತ್ತದೆ. ಆಗ ಮಧ್ಯಸ್ಥವಾದ ಬಿಂದು ಆವರಣದಿಂದ ಮುಕ್ತಗೊಂಡು ಬಿಂದು ಭಾವದಿಂದ ಅತೀತವಾಗಿ, ಎಲ್ಲ ವಿಕಲ್ಪಗಳನ್ನು ಕಳೆದುಕೊಂಡು ಅದ್ವೈತ ಸತ್ಯದಲ್ಲಿ ವಿಲೀನಗೊಳ್ಳುತ್ತದೆ.

ಲಿಂಗ-ರಹಸ್ಯದ ಸಂಬಂಧದಲ್ಲಿ ನಾನು ಸಂಕ್ಷಿಪ್ತವಾಗಿ ನಿಮಗೆ ನಾಲ್ಕಾರು ಮಾತುಗಳನ್ನು ಹೇಳಿದ್ದೇನೆ. ಈ ಸಂದರ್ಭದಲ್ಲಿ ಇದರ ವಿಸ್ತೃತ ಆಲೋಚನೆ ಸಂಭವನೀಯವಾದುದಲ್ಲ. ಆದರೆ ನೀವು ಇದನ್ನು ನಿಶ್ಚಿತವಾಗಿ ತಿಳಿದುಕೊಳ್ಳಬೇಕಿದೆ. ಗೌರೀಪೀಠದಲ್ಲಿ ಶಿವಲಿಂಗದ ಉಪಾಸನೆ ಮಾಡುವುದರಲ್ಲಿ ಅಶ್ಲೀಲತೆಯ ಕಾರಣ ಕಿಂಚಿತ್ತೂ ಸುಳಿದುಕೊಳ್ಳುವುದಿಲ್ಲ. ಇದರ ನಿಜವಾದ ತತ್ತ್ವದ ಅರಿವಿಲ್ಲದ ಅನಭಿಜ್ಞರು ಈ ರೀತಿಯ ಅಶ್ಲೀಲತೆಯನ್ನು ಕಲ್ಪಿಸಿಕೊಂಡು ಸಂತೋಷದಲ್ಲಿ ಮುಳುಗುತ್ತಾರೆ. ನಾನು ಇದುವರೆಗೆ ಹೇಳಿರುವುದರಲ್ಲಿ ಲಿಂಗತತ್ತ್ವದ ತುಂಬ ಅಲ್ಪವಾದ ವಿವೇಚನೆ ಇದೆ. ಸ್ಥೂಲ ಜಗತ್ತಿನಲ್ಲಿ ಈ ಲಿಂಗೋಪಾಸನೆ ಯಾವ ರೀತಿಯಲ್ಲಿ ಹಾಗೂ ಯಾವ ಯಾವ ಪ್ರಾಕೃತಿಕ ನಿಯಮಗಳಲ್ಲಿ ನಡೆಯುತ್ತದೆ ಎನ್ನುವ ವಿಷಯದ ಆಲೋಚನೆ ಇಲ್ಲಿ ನಡೆದಿಲ್ಲ. ಲಿಂಗೋಪಾಸನೆಯಲ್ಲಿ ಮೃತ್ತಿಕೆ (ಮಣ್ಣು) ಸುವರ್ಣ (ಬಂಗಾರ) ಹಾಗೂ ರಜತ (ಬೆಳ್ಳಿ) ಧಾತುಗಳ ಮೂಲಕ ನಡೆಸುವುದರಲ್ಲಿ ಇರುವ ಭೇದಗಳಲ್ಲಿ ಯಾವ ರಹಸ್ಯವಿದೆ ಮತ್ತು ಇವುಗಳ ಪರಸ್ಪರತೆಯ ಆನುಷಂಗಿಕ ಕ್ರಿಯೆಗಳಲ್ಲಿ ಯಾವ ರಹಸ್ಯವಿದೆ, ಹೀಗೆಯೇ ದೈವಜಗತ್ತಿನಲ್ಲಿ ವಿಷ್ಣುಮೂಲ ದೇವತೆಗಳು ಈ ಶಿವ-ತತ್ತ್ವದೊಂದಿಗೆ ಯಾವ ರೀತಿಯ ಘನಿಷ್ಠ ಸಂಬಂಧವನ್ನು ಪಡೆದಿದೆ ಎನ್ನುವುದನ್ನು ಈ ಲೇಖನದಲ್ಲಿ ಎತ್ತಿಕೊಳ್ಳಲಾಗಿಲ್ಲ. ಲಿಂಗರಹಸ್ಯ ಯಥಾರ್ಥರೂಪದಲ್ಲಿ ಬುದ್ಧಿಗೋಚರವಾಗುವಂತಿದ್ದು ಈ ಎಲ್ಲ ಸ್ಥೂಲ ವಿಷಯಗಳು ಸಹಜವಾಗಿಯೇ ತಿಳಿದು ಬರುವಂಥವಾಗಿವೆ. ಇದರಲ್ಲಿ ಯಾವ ಸಂದೇಹವೂ ಇಲ್ಲ.

# ಹಂಪೆಯ ಹರಿಹರ

**ಕೆ. ಎ. ಜಯರಾಜಶೇಖರ್**

---

ಹಂಪೆಯ ಹರಿಹರ ಕನ್ನಡದ ಸೀಮಾಪುರುಷ. ಕನ್ನಡ ಸಾಹಿತ್ಯಕ್ಕೆ ಹೊಸ ತಿರುವನ್ನು ಕೊಟ್ಟ ಯುಗಪುರುಷ. ಜನಸಾಮಾನ್ಯರ ಬಳಿಗೆ ಕಾವ್ಯಭಾಗೀರಥಿಯನ್ನು ಹರಿಸಿ ತಂದ ಭಗೀರಥ. ಭಕ್ತಿಯ ಆವೇಶದಿಂದ ರಚಿಸಿದ ತನ್ನ ಸತ್ಕೃತಿಗಳಿಂದ ಜನಮನವನ್ನು ಸೂರೆಗೊಂಡು, ಶಿವಯೋಗಮಾರ್ಗದಲ್ಲಿ ಜನತೆಯನ್ನು ಕರೆದೊಯ್ಯಬಯಸಿದ ಸತ್ಕವಿ, ಶಿವಕವಿ.

ಹರಿಹರನ ತಂದೆ,ತಾಯಿ ಮತ್ತು ಕಾಲದ ವಿಚಾರ ಚರ್ಚಾಸ್ಪದವಾಗಿಯೇ ಇದೆ. ತಂದೆ ಮಹಾದೇವ - ತಾಯಿ ಶರ್ವಾಣಿ ಎಂದೂ ಕಾಲ ೧೧೭೪ ರಿಂದ ೧೨೭೪ರವರೆಗೆ ಎಂದೂ ಊಹಿಸಿದ್ದಾರೆ. ತನ್ನ ಗುರು ಪರಂಪರೆಯನ್ನು ಹಂಪೆಯ ಶಂಕರದೇವರ ಶಿಷ್ಯ ವಾದಿರಾಜ ಅವರ ಶಿಷ್ಯ ಮಾಯಿದೇವ - ಆ ಮಾಯಿದೇವರ ಕಾರುಣ್ಯದ ಶಿಶು ತಾನು ಎಂದು - ಬಹಳ ಅಭಿಮಾನ ಮತ್ತು ಹೆಮ್ಮೆಯಿಂದ ಹೇಳಿಕೊಂಡಿದ್ದಾನೆ.

ಕಾವ್ಯ, ಶಾಸ್ತ್ರಾಭ್ಯಾಸ ಪರಿಣತನಾಗಿ, ಕೆರೆಯ ಪದ್ಮರಸನ ಆಹ್ವಾನದ ಮೇರೆಗೆ ದೋರಸಮುದ್ರದ ಬಲ್ಲಾಳ ದೊರೆಯಲ್ಲಿ ಹನ್ನೆರಡು ವರ್ಷ ಕರಣಿಕ ವೃತ್ತಿ ಮಾಡಿ, ಪುನಃ ಹಂಪೆಗೇ ಬಂದು ನೆಲಸಿದಂತೆ ತೋರುತ್ತದೆ.

ಕನ್ನಡ ಮಹಾಕವಿಗಳಲ್ಲಿ ಹರಿಹರ ಅತಿಶಯದ ಕವಿ, ಭಕ್ತಕವಿ. ಶಿವಕವಿಗಳಲ್ಲಿ ಅಗ್ರಗಣ್ಯ. "ಈಶ್ವರನಿಗೆ ನನ್ನ ನಾಲಗೆಯನ್ನು ಮಾರಿಕೊಂಡಿದ್ದೇನೆ, ಅವನನ್ನಲ್ಲದೆ ಬ್ರಹ್ಮ, ವಿಷ್ಣು, ದೇವೇಂದ್ರ ಮೊದಲಾದ ಯಾರನ್ನೂ ನಾನು ಹೊಗಳುವುದಿಲ್ಲ" ಎಂದು ಧೀರಘೋಷಣೆ ಮಾಡಿ, ಅದರಂತೆಯೇ ನಡೆದುಕೊಂಡಿದ್ದಾನೆ. ನಂಬಿದ ಇಷ್ಟದೈವದ ಮೇಲೆ ಇನ್ನಿಲ್ಲದ ನಿಷ್ಠೆ.

ದೊರೆತಿರುವ ಇವನ ಗ್ರಂಥಗಳು ಪಂಪಾಶತಕ, ರಕ್ಷಾಶತಕ, ಮುಡಿಗೆಯ ಅಷ್ಟಕ, ಗಿರಿಜಾಕಲ್ಯಾಣ ಮತ್ತು ಶಿವಗಣದ ರಗಳೆಗಳು. ವೀರಶೈವ ಸಾಹಿತ್ಯಕ್ಕೆ ಈತನ ಶತಕಗಳೇ ಮೊದಲನೆಯವು. ಇವುಗಳಲ್ಲಿ ಭಕ್ತಿಯೇ ಪ್ರಧಾನ ವಸ್ತು. ಮುಡಿಗೆಯ ಅಷ್ಟಕದಲ್ಲಿ 'ಕ್ಷ' ಕಾರ ಪ್ರಾಸವನ್ನು ಆಶ್ಚರ್ಯಕರವಾಗಿ ನಿರ್ವಹಿಸಿದ್ದಾನೆ.

'ರಗಳೆ ಕವಿ' ಎಂದು ಕೆಲವರು ಹಾಸ್ಯ ಮಾಡಲು, ತನ್ನ ಸಾಮರ್ಥ್ಯವನ್ನು ತೋರಿಸುವುದಕ್ಕಾಗಿ ಚಂಪೂ ಶೈಲಿಯಲ್ಲಿ "ಗಿರಿಜಾಕಲ್ಯಾಣ" ಗ್ರಂಥವನ್ನು ರಚಿಸಿದನೆಂದು ಒಂದು ಕಥೆ ಇದೆ.

ಅಂದಿನ ವಾಡಿಕೆಯಂತೆ ರಾಜಾಸ್ಥಾನದಲ್ಲಿ ರಾಜನ ಆಶ್ರಯಕ್ಕಾಗಿಯಾಗಲೀ, ಪಂಡಿತರ ಮೆಚ್ಚುಗೆಗೋಸ್ಕರವಾಗಲೀ, ಈತ ಕಾವ್ಯವನ್ನು ರಚಿಸಲಿಲ್ಲ. ಈ ಸ್ವಾತಂತ್ರ್ಯಯಪ್ರಿಯ, ನಿರಂಕುಶಮತಿಗೆ ಹಂಪೆಯರಸನ ವಿನಃ ಬೇರೆಯವರ ಅನುಗ್ರಹವಾಗಲೀ, ಮೆಚ್ಚುಗೆಯಾಗಲೀ ಬೇಕಿಲ್ಲ. ಇಷ್ಟದೈವದ ಬಗೆಗೆ ಇನ್ನಾವ ಕವಿಗೂ ಇವನಂತೆ ಎದೆ ತುಡಿದಿರಲಾರದು.

"ಉರವಣಿಪ ಪರಮ ಭಕುತಿಯ ಸೊಕ್ಕು ತಲೆಗೇರಿ" - ಮಹೋತ್ಸಾಹದಿಂದ ರಚಿಸಿದ ಇವನ ಮಹಾಕೃತಿಗಳಲ್ಲಿ ಹೊಸದೊಂದು ವಿಶ್ವವೇ ರೂಪುಗೊಂಡಿದೆ. ಇದೊಂದು ವಿಸ್ಮಯಕರ ಪ್ರಪಂಚ. ಬಸವಣ್ಣನವರು ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು ಎಂದಂತೆ - "ಇಲ್ಲಿ ಜಗಕ್ಕೆ ಪೂಜಿತರುಂ ಅಲ್ಲಿ ಪರಕ್ಕೆ ವಿಶೇಷ ಪೂಜಿತರ್" ರಗಳೆಗಳಲ್ಲಿ ಇಂತಹ ಶರಣರ ಅಸಂಖ್ಯಾತ ಅಮರಚಿತ್ರಗಳನ್ನು ಸೃಷ್ಟಿಸಿದ್ದಾನೆ. ಇವನ ಕಾವ್ಯಗಳಲ್ಲಿ ವಚನಕಾರರ ಪ್ರಭಾವ ಎದ್ದು ಕಾಣುತ್ತದೆ.

ಹರಿಹರ ಕ್ರಾಂತಿಕಾರಿ. ಸಂಪ್ರದಾಯವನ್ನು ಉಲ್ಲಂಘಿಸಿ ಜಾತಿ, ಕುಳ, ಕ್ಷಳದ ನಿಯಮವನ್ನು ಮುರಿದು ಭಾಷೆಯಲ್ಲಿ ವೈವಿಧ್ಯವನ್ನೂ, ಕ್ವಚಿತ್ತಾಗಿ ಉಪಯೋಗಿಸುತ್ತಿದ್ದ ರಗಳೆಯಲ್ಲಿಯೇ ಪೂರ್ಣಕಾವ್ಯಗಳನ್ನು ಬರೆದು ಛಂದಸ್ಸಿನಲ್ಲಿಯೂ ವೈವಿಧ್ಯವನ್ನು ತಂದನು. ಇವೆಲ್ಲವಕ್ಕಿಂತ ಹೆಚ್ಚಾಗಿ ರಾಜರನ್ನು, ದೇವರುಗಳನ್ನು ಮಾತ್ರ ಕಾವ್ಯದ ಕಥಾನಾಯಕರನ್ನಾಗಿಸುತ್ತಿದ್ದ ಸಂಪ್ರದಾಯಕ್ಕೆ ಒಂದು ದೊಡ್ಡ ಪೆಟ್ಟು ಕೊಟ್ಟು ಜನಸಾಮಾನ್ಯರನ್ನು ತನ್ನ ಕಾವ್ಯದ ಕಥಾನಾಯಕರನ್ನಾಗಿಸಿದ ಧೀರಕವಿ ಈತ.

ಇವನ ಕಾವ್ಯ ಪ್ರಪಂಚದಲ್ಲಿ - ಜೀವನದ ವಿವಿಧ ಸ್ತರದ ವ್ಯಕ್ತಿಗಳ - ಸ್ವಭಾವದ, ಸ್ಥಾನ ಮಾನದ, ವಯಸ್ಸಿನ, ವೃತ್ತಿಗಳ - ನಿರೂಪಣೆಯಲ್ಲಿ ಸಮಾನ ಸ್ಥಾನವಿದೆ, ಮನ್ನಣೆ ಇದೆ. ಈತ ಹಾಡ ಬಯಸಿದ್ದು ಭಿನ್ನರುಚಿ, ಭಿನ್ನಸ್ವಭಾವ. ಆದರೆ ನಿಷ್ಠೆಯಲ್ಲಿ ಯಾರಿಗೂ ಕಡಿಮೆ ಇಲ್ಲದ ಶಿವಭಕ್ತರ ಜೀವನಗಳನ್ನು, ವೈವಿಧ್ಯಮಯ ವ್ಯಕ್ತಿತ್ವಗಳ ರಂಗುರಂಗಿನ ಮೆರವಣಿಗೆಯೇ ರಗಳೆಗಳಲ್ಲಿ ರೂಪುಗೊಂಡಿದೆ. ಭಕ್ತಿಯಲ್ಲಿ ವೈವಿಧ್ಯವಿದ್ದರೂ ಅವರೆಲ್ಲರ ಗುರಿ ಒಂದೇ - ಶಿವಸಾಕ್ಷಾತ್ಕಾರ. ವಿಭಿನ್ನ ವ್ಯಕ್ತಿಗಳ ಈ ಕಥೆಗಳನ್ನು ಒಂದುಗೂಡಿಸುವ ಸೂತ್ರ - ಶಿವಭಕ್ತಿಯೊಂದೇ, ಬಿಡಿ ಹೂಗಳನ್ನು ಒಂದುಗೂಡಿಸುವ ದಾರವಂತೆ. ಆದ್ದರಿಂದಲೇ ಹರಿಹರನ ರಗಳೆಗಳು ಸರದ ಚಿಲುಮೆಗಳು, ಭಕ್ತಿಯ ಬುಗ್ಗೆಗಳು, ಭಕ್ತಜೀವನದ ಅಂತರಂಗದ ಕೈಪಿಡಿಗಳು, ಕನ್ನಡ ಸಾಹಿತ್ಯಾಕಾಶದಲ್ಲಿ ಥಳಥಳಿಸುವ ಧ್ರುವತಾರೆಗಳು.

ಅನಿಮಿಷಯ್ಯನವರಿಂದ ಲಿಂಗಪ್ರಾಪ್ತಿಯಾದ ನಂತರದ ಪ್ರಭುದೇವರನ್ನು ವರ್ಣಿಸುವಾಗ 'ನಡೆದುದೇ ಬಟ್ಟೆಯಾದುದು ಶಿವನ ಮದಕರಿಗೆ'' ಎಂದು ಹರಿಹರ ಹೇಳಿದ್ದಾನೆ. ಹಾಗೆಯೇ ಕಾವ್ಯರಚನಾ ವೈಖರಿಯಲ್ಲಿ ಹರಿಹರನದು ''ನಡೆದುದೇ ಬಟ್ಟೆಯಾದುದು ಶಿವನ ಈ ಮದಕರಿಗೆ'' ಎಂದು ನಾವು ಹೇಳಬೇಕು.

ಈತನು ಬರೆದಿರುವ ಬಸವರಾಜದೇವರ ರಗಳೆ ''ಸಿಕ್ಕಿರುವ ಭಾಗ ಅಪೂರ್ಣವಾಗಿದೆ. ಮಾದಾರ ಚೆನ್ನಯ್ಯ, ಇಳೆಯಾಂಡ ಗುಡಿಮಾರ, ಬೇಡರ ಕಣ್ಣಪ್ಪ, ಬೆಸ್ತ ಅತಿಭಕ್ತ, ಕುಂಬಾರ ಗುಂಡಯ್ಯ, ಮಹದೇವಿಯಕ್ಕ, ಕಾರಿಕಾಲಮ್ಮೆ, ಮಲುಹಣ, ಅಲ್ಲಮಪ್ರಭು, ತಿರುನೀಲಕಂಠರು - ಹೀಗೆ ಇವನು ಬರೆದಿರುವ ರಗಳೆಗಳೆಷ್ಟೊ - ಇನ್ನೂ ನಿರ್ಧಾರವಾಗಬೇಕಾದ ವಿಚಾರ.

ಒಬ್ಬ ಬೆಸ್ತ, ಒಬ್ಬ ಕುಂಬಾರ, ಮಾದಾರ, ಬೇಡ - ಇಂತಹವರು ಕಾವ್ಯದ ಕಥಾನಾಯಕರಾದುದು ಸಾಹಿತ್ಯ ಪ್ರಪಂಚದಲ್ಲಿಯೇ ಹೊಸದು. ಈ ಕೆಲಸವನ್ನು ಸಾಧಿಸಿದ ಕೀರ್ತಿ ಹರಿಹರನದು.

ಈತನ ಕಾವ್ಯಗಳ ಭಾಷೆ, ಬಣ್ಣನೆಯು, ನಿರೂಪಣೆಯ ನಾವೀನ್ಯ, ಉಪಮಾನ, ಉತ್ಪ್ರೇಕ್ಷೆಗಳ ಪರಂಪರೆ - ಇವುಗಳನ್ನು ಕುರಿತು ಕನ್ನಡ ಸಾಹಿತಿಗಳೆಲ್ಲ ಮುಕ್ತಕಂಠದಿಂದ ಹೊಗಳಿದ್ದಾರೆ. ಮಹಾಕವಿ ಷಡಕ್ಷರದೇವ - ''ಅವಂಗೆ ಅತ್ಯಧಿಕ ಶಿವಕವೀಂದ್ರಂಗೆ ಆದಾರ್ ಸಾಟಿಯುಪ್ಪರ್''- ಎಂದಿರುವುದು ಎಷ್ಟೊಂದು ನಿಜ!

ಆತನ ನಿರರ್ಗಳ ಕಾವ್ಯಧಾರೆಯನ್ನು ವರ್ಣಿಸುವ ಶಕ್ತಿ ನಮಗಿಲ್ಲ. ಆದರೂ ಒಂದೆರಡು ರಸಸೃಷ್ಟಿಗಳನ್ನು ನೋಡೋಣ. ಬಾಲಿಕೆ ಮಹದೇವಿಯಕ್ಕನನ್ನು ವರ್ಣಿಸಿರುವುದು ಎಷ್ಟು ಮನೋಹರವಾಗಿದೆ!'' ಅರಳೆಲೆಯ ಸಿರಿವಂತೆ - ಸೂಸಕದ ಸುಮ್ಮಾನಿ - ಭಸಿತದ ಭಾವಕಿ -

ಅಂಜನದ ರಂಜನೆ - ಮಾಗಾಯ ಮುಗುದೆ - ಹೊನ್ನೋಲೆಯ ಚೆನ್ನೆ - ಮೂಕುತಿಯ ಮುಗುಳು - ಪುಲಿಯುಗುರ ಸುಲಲಿತೆ - ನೇವಳದ ನೀರೆ - ರನ್ನದಾಳಿಯ ರಾಜಹಂಸೆ - ತೋಳಬಂದಿಯ ಬಾಲಿಕೆ - ಹೊಂಗಡಗದ ಲಿಂಗವಂತೆ - ಕಂಕಣದ ಕಾಮಧೇನು - ಉಡುಗೆಯ ಬೆಡಂಗಿ - ಅಂದುಗೆಯ ಮಂದಯಾನೆ - ಗೆಜ್ಜೆಗಳ ಸಜ್ಜನೆ" - ಇಂತಹ ಬಾಲಿಕೆ ಮಹಾದೇವಿ "ಸುಖಂ ಸುಳಿವಂತೆ ನಡೆಗಲಿತಳಂತೆ". - "ವೀಣೆ ದನಿಗೊಡುವಂತೆ ನುಡಿಗಲಿತಳಂತೆ"

ತಿರುನೀಲಕಂಠದೇವರ ರಗಳೆ - ಈ ಕಥೆ ನಿಮಗೆಲ್ಲಾ ಗೊತ್ತಿರುವುದೇ - ಶಿವನ ಆಣೆಗಾಗಿ ಸತಿಪತಿಯರು ಒಬ್ಬರನ್ನೊಬ್ಬರು ಮುಟ್ಟದೆ ಜೀವನವನ್ನೆಲ್ಲಾ ಕಳೆದು ಮುದುಕರಾಗುತ್ತಾರೆ. ಅವರಿಗೆ ಮುಪ್ಪು ಬಂತು ಎಂದು ಹೇಳುವ ಸಾಧಾರಣ ಮಾತು ಹರೀಶ್ವರನ ಕಾವ್ಯವಾಣಿಯಲ್ಲಿ ಹೇಗೆ ರೂಪುಗೊಂಡಿದೆ ನೋಡಿ, -

*ಆಣೆ ಪಕ್ವಕ್ಕೆ ಬಂದಂತೆ ಬಂದುದು ಮುಪ್ಪು*
*ಶಿವಭಕ್ತಿ ಸೋಪಾನದಂತೆ ತೆರೆಗಳು ಮಸಗೆ*
*ಶಿವನಲ್ಲದಾರುವಿಲ್ಲೆಂಬಂತೆ ತಲೆ ನಡುಗೆ*
*ಭವಿಗಳಂ ನೋಡೆವೆಂಬಂತೆ ಕಣ್ಮಂಜೊಗೆಯೆ*
*ನಿವುರಿ ತಲೆಗೇರಿತ್ತು ಸುಕೃತವೆನೆ ನರೆನರೆಯೆ*
*ಹಲವು ಕರ್ಮಕ್ಕಡಿಯನಿಡದಂತೆ ನಡೆಯುಡುಗೆ*
*ಉಲಿವ ಮಾಯೆಯ ಕೇರುವಂತೆ ಕೈಗಳು ನಡುಗೆ"-*

ಮುಪ್ಪು ಬಂತಂತೆ - (ಆಲಬಿಕೆ ಬೇಡ)

ಕುಂಬಾರ ಗುಂಡಯ್ಯನ ಮುಂದೆ ಮಾಡಿದ ಶಿವನ ನೃತ್ಯದ ವರ್ಣನೆ ಕನ್ನಡ ಸಾಹಿತ್ಯ ಲೋಕದಲ್ಲೇ ಅದ್ವಿತೀಯವೆಂದು ವಿದ್ವಜ್ಜನರು ಏಕಕಂಠದಿಂದ ಹೊಗಳಿದ್ದಾರೆ.

*ಒಂದು ಪದಂ ಪಾತಾಳವನೊತ್ತಲ್,*
*ಮತ್ತೊಂದು ಪದಂ ಬ್ರಹ್ಮಾಂಡವನೆತ್ತಲ್*

ಕುಂಬರ ಗುಂಡಯ್ಯ ಮಡಕೆಯ ಮೇಲೆ ತಟ್ಟುವ ತಾಳಕ್ಕೆ ಶಿವ ಕುಣಿದನಂತೆ !

ಹೀಗೆ ಹರಿಹರನ ವಾಗ್ಧಾರೆಯನ್ನು ವಾಕ್ಚಾತುರ್ಯವನ್ನು ವರ್ಣಿಸಲು ಸಿಕ್ಕುವ ಉದಾಹರಣೆಗಳು ಒಂದೇ ಎರಡೇ ! - ಬಸವರಾಜದೇವರ ರಗಳೆಯಲ್ಲಿನ "ಶಿವಪೂಜಾಸಂಭ್ರಮದ ಸೊಬಗು" ಭಕ್ತಜನರ ಬಹುಪ್ರಿಯವಾದ ಭಾಗ - ಓದಿಯೇ ಸವಿಯಬೇಕು.

ಈಗ ''ಪುಷ್ಪರಗಳೆ'' ಯತ್ತ ಸ್ವಲ್ಪ ಇಣಿಕಿ ನೋಡೋಣ. ಬಹುಶಃ ಪುಷ್ಪಗಳ ಮೇಲೆಯೇ ಒಂದು ಕಾವ್ಯನಿರ್ಮಾಣ ಹರಿಹರನಿಂದ ಮಾತ್ರ ಅನ್ನಿಸುತ್ತೆ. ಇಲ್ಲಿಯ ಕಥಾವಸ್ತು ಶಿವಭಕ್ತನೊಬ್ಬನು ಹೂದೋಟದಿಂದ ಹೂಕೊಯ್ದು ತರುತ್ತಾನೆ - ಅದೂ ಎಂತಹ ಹೂ ? ''ಅಳಿಯೆರಗದನಿಲನಲುಗದ ರವಿಕರಂ ಪುಗದ'' ಹೂ !

ಹೊಸಸೇವಂತಿಯ ಪನ್ನೀರಿನಿಂದ ಶಿವನ ಮುಖತೊಳೆದು, ಪರಾಗದ ವಿಭೂತಿಯಿಟ್ಟು, ಕೇತಕಿಯ ಎಸಳುಗಳಿಂದ ಶಿವನ ಶಶಿಕಳೆನೋಯದಂತೆ, ಸುರನದಿ ತುಳ್ಕದಂತೆ, ನೀಳಕೆಂಜೆಡೆಯನ್ನು ಬಾಚಿ, ಕೊಯ್ದು ತಂದ ಹೂಗಳಿಂದ ಶಿವನ ಸರ್ವಾಂಗವನ್ನು ಅಲಂಕರಿಸಿ ಸ್ತೋತ್ರಮಾಡುತ್ತಾನೆ. ಪಾಪ ! ತಂದೆ, ತಾಯಿಗಳನ್ನೇ ಕಾಣದ ಶಿವನಿಗೆ ಭಕ್ತನಲ್ಲದೆ ಇನ್ನಾರು ಇಂತಹ ಪ್ರೇಮಪೂರ್ಣ ಸೇವೆ ಮಾಡಿಯಾರು !

ಹೂಗಳು ಹರಿಹರನ ಭಾಗಕ್ಕೆ ನಿರ್ಜೀವ ಕುಸುಮಗಳಲ್ಲ. ಪರಶಿವನ ಸೇವೆಗೆ ಸಿದ್ಧವಾಗಿ ನಿಂತಿರುವ ರಸ ಜೀವಿಗಳು, ಪೂಜ್ಯ ವಸ್ತುಗಳು. ಅವು ಆ ಪರಮನ ಸೇವೆಗೆ ಸಂದಾಗಲೇ ಅವುಗಳ ಜನ್ಮ ಸಾಫಲ್ಯ -

*ಜಾತಿ, ನೀನೆ ಸಕಲ ಪುಷ್ಪಜಾತಿಗೆ ಜಾತಿ,*
*ಭೂತೇಶ್ವರನ ಜಡೆಯ ಮುಡಿಗೇರಿದೊಡೆ ಜಾತಿ, -*

ಇದು ಅವನ ಜೀವನ ದೃಷ್ಟಿ.

ಹೂಗಳನ್ನು ಅವನಂತೆ ಸಂಬೋಧಿಸಿದವರು ಬೇರೆಯಾರು ಇರಲಾರರು. ''ಅಪ್ಪ, ಅಕ್ಕಾ, ಅಮ್ಮಾ, ಹೊನ್ನೆ, ಶಿವನ ಪರಿಮಳದ ಹಬ್ಬ, ಪರಿಮಳದರಸಿ''- ಮುಂತಾದ ಈ ವೈವಿಧ್ಯಮಯ ಆತ್ಮೀಯ ಸಂಬೋಧನೆಗಳನ್ನು ಕೇಳಿದರೇ ಸಹೃದಯರು ರೋಮಾಂಚಿತರಾಗಿ ಹೃದಯ ಮಿಡಿಯುವಂತಾಗುತ್ತದೆ. ಪುಷ್ಪರಾಣಿಯರೆಲ್ಲ ರೂಪ ತಳೆದು ಹೃದಯದಲ್ಲಿ ಸ್ಥಾನ ಪಡೆಯುತ್ತಾರೆ.

ಈ ಹಂಪೆಯ ಹರಿಹರ, ಮಾತೃಹೃದಯಿ. ಹರಿಹರ ನಮ್ಮ ಕರ್ನಾಟಕದವನು, ನಮ್ಮವನು ಎಂಬ ಹೆಮ್ಮೆ ನಮಗೆಲ್ಲ.

■

# ಪಾಲ್ಕುರಿಕೆ ಸೋಮನಾಥ ಮತ್ತು ಭೀಮಕವಿ - ಒಂದು ಹೋಲಿಕೆ

ಡಾ|| ಪಿ. ವಿ. ನಾರಾಯಣ

---

ಬಸವ ಚರಿತೆಗಳನ್ನು ಹೇಳುವ ಕಾವ್ಯಗಳಲ್ಲಿ ಸ್ಪಷ್ಟವಾದ ಎರಡು ಸಂಪ್ರದಾಯಗಳಿವೆ : ಒಂದು, ಹರಿಹರನು ಬರೆದ 'ಬಸವರಾಜದೇವರ ರಗಳೆ'ಯದು, ಎರಡು, ಪಾಲ್ಕುರಿಕೆ ಸೋಮನಾಥನ ತೆಲುಗು 'ಬಸವಪುರಾಣಮು'ವಿನದು. ಇವರಿಬ್ಬರ ಕಾವ್ಯಗಳ ಧೋರಣೆಯನ್ನು ಸಂಗ್ರಹವಾಗಿ ಈ ರೀತಿ ಹೋಲಿಸಬಹುದು. 'ಬಸವ ಪುರಾಣ'ದ ಒಟ್ಟು ಧೋರಣೆಯು 'ಬಸವರಾಜ ದೇವರ ರಗಳೆ'ಯ ಧೋರಣೆಗಿಂತ ತುಂಬ ಭಿನ್ನವಾಗಿದೆಯೆಂಬುದರಲ್ಲಿ ಸಂದೇಹವಿಲ್ಲ. ರಗಳೆಯನ್ನು ರಚಿಸುವಲ್ಲಿ ಹರಿಹರನಿಗೆ ಬಸವನ ಚರಿತ್ರೆ ಮುಖ್ಯವಾಗಿದೆ ; ಆದರೆ ಸೋಮನಾಥನಿಗೆ ವೀರಶೈವ ದರ್ಶನ ಮುಖ್ಯವಾಗಿದೆ. ಬಸವಣ್ಣನ ವ್ಯಕ್ತಿತ್ವದ ವಿವಿಧ ಮುಖಗಳನ್ನು ನೇರವಾಗಿ ಚಿತ್ರಿಸುವುದೇ ಹರಿಹರನ ಉದ್ದೇಶ. ಸೋಮನಾಥನಿಗಾದರೋ ಬಸವನ ಚರಿತ್ರೆಯ ನೆಪದಲ್ಲಿ ಹಾಗೂ ಅನೇಕ ಶಿವಶರಣರ ಕಥೆಗಳ ಮೂಲಕ ವೀರಶೈವದ ಆಧಿಕ್ಯವನ್ನು ಸ್ಥಾಪಿಸುವುದೇ ಮುಖ್ಯೋದ್ದೇಶ. ಹರಿಹರನದು ತದೇಕ ದೃಷ್ಟಿ ; ಸೋಮನಾಥನದು ಸುತ್ತುಮುತ್ತೆಲ್ಲ ಕಣ್ಣುಹಾಯಿಸುವ ರೀತಿ. 'ಬಸವರಾಜ ದೇವರ ರಗಳೆ'ಯಲ್ಲಿ ಬಸವಣ್ಣನಿಗೆ ನೇರವಾಗಿ ಸಂಬಂಧ ಪಡೆದ ಒಂದು ಪ್ರಸಂಗವೂ ಚಿತ್ರಿತವಾಗಿಲ್ಲ.

ಪಾಲ್ಕುರಿಕೆ ಸೋಮನಾಥನ ಕಾವ್ಯದಲ್ಲಿ ಬಸವಣ್ಣನಿಗೆ ಸಂಬಂಧಿಸಿದ ಪ್ರಸಂಗಗಳಿಗಿಂತ ಸಂಬಂಧಪಡದ ಕಥೆಗಳು ಮೂರು, ನಾಲ್ಕು ಪಟ್ಟು ಹೆಚ್ಚಾಗಿವೆ. ಹರಿಹರನು ಬಸವಣ್ಣನಿಗೆ ಸೋಮನಾಥನಿಗಿಂತ ಕಾಲ ಹಾಗೂ ಭೌಗೋಳಿಕತೆಯಲ್ಲಿ ಪ್ರಾಯಶಃ ಹತ್ತಿರವಾದವನು. ಸೋಮನಾಥನೇ ಹೇಳಿಕೊಳ್ಳುವಂತೆ ಅವನು ಬಸವಣ್ಣನ ಚರಿತ್ರೆಯನ್ನು ಹಲವರಿಂದ ಸಂಗ್ರಹಿಸಿದ. ಆದರೆ ಹರಿಹರನಿಗೆ ಬಸವಣ್ಣನ ಬಗೆಗಿನ ಮಾಹಿತಿ ಜನಗಳಿಂದ ತಾನಾಗಿ ನೇರವಾಗಿ ಕಿವಿಗೆ ಬಿದ್ದಿರಬೇಕು. ಬಸವಣ್ಣನಂತೆಯೇ ಇತರ ನೂತನ ಪುರಾತನ, ಶರಣರ ಬಗ್ಗೆ ಹರಿಹರ ರಗಳೆಗಳನ್ನು ಬರೆದ ಮೇಲೆಯೇ ಪ್ರಾಯಶಃ ಸೋಮನಾಥನಿಗೆ ತನ್ನ 'ಬಸವ ಪುರಾಣ'ದ ಕಲ್ಪನೆಯುಂಟಾಗಿರಬೇಕೆನ್ನಿಸುತ್ತದೆ. ಹರಿಹರನು . ಅನೇಕ ಕೃತಿಗಳಲ್ಲಿ ಸಾಧಿಸಿರುವುದನ್ನು ಸೋಮನಾಥನು ಒಂದೇ ಕೃತಿಯಲ್ಲಿ ಸಾಧಿಸುವ ಕಾಣ್ಕೆಯನ್ನು ಕಂಡಿರಬೇಕು. ಏಕೆಂದರೆ ತನ್ನ 'ಬಸವ ಪುರಾಣ'ದಲ್ಲಿಯೇ ಅವನು ಬಸವಣ್ಣನ ಜೀವನ ಚಿತ್ರಣದ ಜೊತೆಗೆ ಇತರ ನೂರಾರು ಶರಣರ ವಿಚಾರವನ್ನು ಹೇಳುತ್ತಾನೆ. ಇಂತಹ ಒಂದು ಸಮಗ್ರದೃಷ್ಟಿ ಹರಿಹರನ ಕೃತಿಗಳ ಪರಿಚಯವನ್ನು ಪಡೆದನಂತರ ಸೋಮನಾಥನಿಗೆ ಉಂಟಾಗಿರಬೇಕು. ಆದರಿಂದ ವೀರಶೈವ ಪುರಾಣದ ಕಲ್ಪನೆ ಸ್ಪಷ್ಟಗೊಂಡಿತು ಎಂಬುದು ನಮ್ಮ ಊಹೆ. ಹೀಗಾಗಿ ಪಾಲ್ಕುರಿಕೆ ಸೋಮನಾಥನೇ ಮೊದಲ ವೀರಶೈವಪುರಾಣದ ಕರ್ತೃ. 'ಬಸವ ಪುರಾಣ'ವೇ ಮೊದಲ ವೀರಶೈವ ಪುರಾಣ ಕಾವ್ಯ - ಮುಂದೆ ಬಹುಸಂಖ್ಯಾಕ ವೀರಶೈವ ಕವಿಗಳು ಅನುಸರಿಸಿದ್ದು ಪಾಲ್ಕುರಿಕೆ ಸೋಮನಾಥನನ್ನೇ ಹೊರತು ಹರಿಹರನನ್ನಲ್ಲ."[೧]

ಈ ಮೇಲಿನ ಮಾತುಗಳಲ್ಲಿ ಹರಿಹರನು ಪಾಲ್ಕುರಿಕೆ ಸೋಮನಾಥನಿಗಿಂತ ಹಿರಿಯ ಎಂಬ ಅಭಿಪ್ರಾಯ ಸ್ಪಷ್ಟವಾಗಿದೆ. ಆದರೆ ಇದಕ್ಕೆ ವ್ಯತಿರಿಕ್ತವಾದ ಅಭಿಪ್ರಾಯವೂ ಇದೆ. ಅದಕ್ಕೆ ಕಾರಣ ಹರಿಹರ - ಸೋಮನಾಥರಿಬ್ಬರ ಕಾಲದ ಬಗ್ಗೆ ನಿಷ್ಕೃಷ್ಟ ಮಾಹಿತಿಯಿಲ್ಲದಿರುವುದು. ಹರಿಹರನ ಕಾಲವು ಹದಿಮೂರನೆಯ ಶತಮಾನದ ಮೊದಲಭಾಗವೆಂದು ವಿದ್ವಾಂಸರು ಸಾಮಾನ್ಯವಾಗಿ ಒಪ್ಪಿದ್ದಾರೆ. ಹರಿಹರಕ್ಷೇತ್ರದಲ್ಲಿ ದೊರೆಯುವ ಶಾಸನಗಳನ್ನು ಆಧರಿಸಿ ಡಾ|| ಚಿದಾನಂದ ಮೂರ್ತಿಯವರು ಹರಿಹರನು ಹರಿಹರಕ್ಷೇತ್ರಕ್ಕೆ ಸುಮಾರು ಕ್ರಿ.ಶ.೧೨೦೦-೨೦ ರಲ್ಲಿ ಹೋಗಿರಬೇಕೆಂದು ವಾದಿಸಿ, ಹರಿಹರನ ಕಾಲವು ಹದಿಮೂರನೆಯ ಶತಮಾನದ ಮೊದಲರ್ಧವೆಂದು ಪುಷ್ಟೀಕರಿಸುತ್ತಾರೆ[೨]. ಆದರೆ ಗಾಜುಲ ವೀರಯ್ಯ ಇದನ್ನು ಅಲ್ಲಗಳೆಯುತ್ತಾರೆ. ಬಸವ ಪುರಾಣವು ಪಾಲ್ಕುರಿಕೆ ಸೋಮನಾಥನ ಕೃತಿಗಳ ಮೊದಲ ಹಂತಕ್ಕೆ ಸೇರಿದುದು. ಅದನ್ನವನು ತನ್ನ ಮೂವತ್ತನೇ ವರ್ಷ ವಯಸ್ಸಿನೊಳಗೆ ಬರೆದಿದ್ದಾನೆ.

---

೧. ಪಿ. ವಿ. ನಾರಾಯಣ : ಪಾಲ್ಕುರಿಕೆ ಸೋಮನಾಥನ ಬಸವ ಪುರಾಣ (ಅನುವಾದ) ಪ್ರಸ್ತಾವನೆ - ಪು. x-xi

೨. ಎಂ. ಚಿದಾನಂದಮೂರ್ತಿ : 'ಹರಿಹರಕ್ಷೇತ್ರ ಮತ್ತು ಹರಿಹರ ಕವಿಯ ಕಾಲ' (ಲಿಂಗಾಯತ ಅಧ್ಯಯನಗಳು : ಪು ೧೭೩-೧೭೭)

ತನಗೆ ಬಸವಣ್ಣನ ಕತೆಯನ್ನು ತಿಳಿಸಿದವರಲ್ಲಿ ಒಬ್ಬಳೆಂದು ಆತ ಹೇಳುವ ಮೋಚಮಾಂಬೆ ಎಂಬಾಕೆಯು ಕ್ರಿ.ಶ. ೧೨೯೦ರ ನೀಲಗಂಗವರ ಶಾಸನದಲ್ಲಿ ಹೆಸರಿಸಲ್ಪಟ್ಟಿದ್ದಾಳೆ. ಈ ಕಾಲದಿಂದ ಆಕೆ ಸುಮಾರು ಇಪ್ಪತ್ತುವರ್ಷವಾದರೂ ಮುಂಚೆಯಿದ್ದಿರಬೇಕು. ಆಗಲೇ ಬಸವ ಪುರಾಣ ರಚಿತವಾಗಿದ್ದಿರಬೇಕು ಎಂದು ವಾದಿಸುವ ಅವರು ಹರಿಹರನು ಪಂಪಾವಿರೂಪಾಕ್ಷ ದೇವಾಲಯದಲ್ಲಿ ತೆರೆಗೆ ಬೆಂಕಿಬಿದ್ದುದನ್ನು ಆರಿಸಿದ ಪವಾಡವು ೧೨೭೭ರಲ್ಲಿ ನಡೆಯಿತೆನ್ನುವ ವಾದವೊಡ್ಡಿ, ಅವನು ಹಂಪೆಗೆ ೧೨೭೭ರ ನಂತರವೇ ಹಿಂತಿರುಗಿ ನೆಲಸಿದನೆಂದೂ, ಆಮೇಲೆ ತನ್ನ ಇಳಿವಯಸ್ಸಿನಲ್ಲಿ 'ಬಸವರಾಜ ದೇವರ ರಗಳೆ'ಯನ್ನು ಬರೆದಿರಬೇಕೆಂದೂ ಹೇಳುತ್ತಾರೆ.[೧] ಆದರೆ ಪವಾಡವನ್ನು ಆಧರಿಸಿ ಕಾಲನಿರ್ಧರಿಸುವುದು ಅಷ್ಟು ಸರಿಯಾಗಲಾರದು. ಪುರಾಣಕವಿಯೊಬ್ಬ ಇಂತಹ ಪವಾಡವು ನಡೆಯಿತೆಂದು ತಿಳಿಸುವ ದಿನಾಂಕವು ಪಂಚಾಂಗರೀತ್ಯಾ ಸರಿಯೆಂದು ಕಂಡುಬಂದರೂ ಅದನ್ನು ಪ್ರಬಲ ಆಧಾರವಾಗಿ ಸ್ವೀಕರಿಸುವುದು ಕಷ್ಟ. ಹಾಗಾಗಿ 'ಬಸವರಾಜ ದೇವರ ರಗಳೆ'ಯು 'ಪಾಲ್ಕುರಿಕೆ ಸೋಮನಾಥನ 'ಬಸವ ಪುರಾಣ'ಕ್ಕೆ ಮೊದಲೇ ರಚಿತವಾಗಿರಬೇಕೆಂಬುದು ನಮ್ಮ ಅಭಿಪ್ರಾಯ.

ಪಾಲ್ಕುರಿಕೆಯ ಸೋಮನಾಥನು ಹರಿಹರನ ಸಮಕಾಲೀನನೆಂದು ಭಾವಿಸಬಹುದು. ಅವರಲ್ಲಿ ಯಾರು ಹಿರಿಯರು ಯಾರು ಕಿರಿಯರು ಎಂದು ನಿರ್ಧರಿಸುವುದು ಕಷ್ಟದ ಕೆಲಸ. ಸೋಮನಾಥನ ಕಾಲವು ೧೧೬೦ ರಿಂದ ೧೩೦೦ರವರೆಗೂ ಓಲಾಡುತ್ತಿದೆ. ಬ್ರೌನ್ ಹಾಗೂ ಕಿಟ್ಟೆಲ್ಲರೂ ಪಾಲ್ಕುರಿಕೆ ಸೋಮನ ಕಾಲವನ್ನು ಕ್ರಿ.ಶ. ೧೩೦೦ ಎಂದು ಹೇಳುತ್ತಾರೆ. ವೀರೇಶಲಿಂಗಂ ಅವರು ಮೊದಲು ಇವನ ಕಾಲವನ್ನು ೧೩೦೦ ಎಂದವರು, ಆನಂತರ ೧೧೯೦ ಎಂದು ಮಾರ್ಪಡಿಸಿಕೊಂಡರು. ಆರ್. ನರಸಿಂಹಾಚಾರ್ ಪ್ರಕಾರ ಇವನ ಕಾಲ ಕ್ರಿ.ಶ. ೧೧೯೫, ಇ.ಪಿ. ರೈಸರೂ ಅದನ್ನು ಸಮ್ಮತಿಸುತ್ತಾರೆ. ಚಿಲಕೂರಿ ವೀರಭದ್ರರಾವ್, ಇವನ ಕಾಲವು ಮೊದಲ ಪ್ರತಾಪರುದ್ರನ ಕಾಲವೆಂದು ಹೇಳುತ್ತಾರೆ. ನಿಡುದವೋಲು ವೆಂಕಟರಾವು ಈತನ ಜೀವನಾವಧಿಯು ೧೧೯೦ ರಿಂದ ೧೨೬೦ ನಡುವೆ ಎಂದು ನಿರ್ಧರಿಸಿದರು [೨]. ಬಂಡಾರು ತಮ್ಮಯ್ಯನವರು ಸೋಮನಾಥನು ೧೧೬೦ರಲ್ಲಿ ಜನಿಸಿ ಸುಮಾರು ೧೧೦೦ ರ ಹೊತ್ತಿಗೆ ತನ್ನ ಮೊದಲ ಕೃತಿಯಾದ 'ಅನುಭವಸಾರ'ವನ್ನೂ, ಎರಡನೆಯ ಕೃತಿಯಾದ 'ಬಸವ ಪುರಾಣ'ವನ್ನು ೧೧೯೨ರಲ್ಲಿಯೂ, 'ಪಂಡಿತಾರಾಧ್ಯ ಚರಿತ್ರೆ'ಯನ್ನು ೧೨೩೦ರಲ್ಲಿಯೂ ರಚಿಸಿ, ೧೨೪೦ರ ಹೊತ್ತಿಗೆ ಮರಣಹೊಂದಿದನೆಂದು ತೀರ್ಮಾನ ಮಾಡುತ್ತಾರೆ[೩]. ಪಾಲ್ಕುರಿಕೆ ಸೋಮನಾಥನು ಎರಡನೆಯ ಪ್ರತಾಪರುದ್ರನ ಕಾಲ (೧೨೯೨-೧೩೨೬)ದವನೆಂದು ಹೇಳಲು ಹೆಚ್ಚು ಆಧಾರಗಳಿವೆಯೆಂದೂ, ಬೆಲಿದೇವಿ

---

೧. ಗಾಜುಲ ವೀರಯ್ಯ : 'ಬಸವ ಪುರಾಣ ಬಸವ ರಾಜ ದೇವರ ರಗಳೆಗಳಲ್ಲಿರುವ ಸಾಮ್ಯ ವ್ಯತ್ಯಾಸಗಳು (ಸಾಧನೆ V-೨ : ಪು. ೩೦-೩೧)

೨. ನಿಡುದವೋಲು ವೆಂಕಟರಾವ್ (ಸಂ.) :'ಬಸವಪುರಾಣಮು' ಪೀಠಿಕೆ : ಪು.೨೮

೩. ಬಂಡಾರು ತಮ್ಮಯ್ಯ (ಸಂ) : 'ಬಸವ ಪುರಾಣಮು' - ಪೀಠಿಕೆ

ವೇಮನಾರಾಧ್ಯರ ಮೊಮ್ಮಗನ ಶಿಷ್ಯನೇ ತಾನೆಂದು ಆತ ಹೇಳಿಕೊಂಡಿರುವುದರಿಂದ ಸೋಮನಾಥನ ಕಾಲವನ್ನು ಹದಿಮೂರನೆಯ ಶತಮಾನವೆಂದೂ, ಆತನ ಜೀವಿತಾವಧಿ ೧೨೪೦-೧೩೧೦ ರ ನಡುವೆ ಎಂದು ಆರ್ವೀಯಸ್ ಸುಂದರಂ ತೀರ್ಮಾನಿಸುತ್ತಾರೆ[೧]. ಒಟ್ಟಾರೆ ಹರಿಹರನೇ ಪಾಲ್ಕುರಿಕೆ ಸೋಮನಾಥನಿಗಿಂತ ಮೊದಲು ಬಸವಚರಿತೆಯನ್ನು ಬರೆದನೆಂದು ತೀರ್ಮಾನಿಸಬಹುದು.

ಹರಿಹರ-ಸೋಮನಾಥರಿಬ್ಬರೂ ಹೊಸಕಾವ್ಯ ಪರಂಪರೆಯನ್ನು ಸೃಷ್ಟಿಸುವ ಮೂಲಕ ತಮ್ಮ ತಮ್ಮ ಭಾಷೆಯಲ್ಲಿ ವಿಶಿಷ್ಟಸ್ಥಾನವನ್ನು ಗಳಿಸಿದ್ದಾರೆ. ಹರಿಹರನು ಕ್ರಾಂತಿಕವಿ ಎನ್ನಿಸಿದವನು, ಮೊದಲ ಬಾರಿಗೆ ಇಡೀ ಕಾವ್ಯವನ್ನು ರಗಳೆಯ ಛಂದಸ್ಸಿನಲ್ಲಿ ಬರೆಯುವ ಮೂಲಕ ಹೊಸಹಾದಿಯನ್ನು ತೆರೆದವನು. ಸೋಮನಾಥನು ಅಂಥದೇ ಕೆಲಸವನ್ನು ತೆಲುಗಿನಲ್ಲಿ ಮಾಡಿದ್ದಾನೆ. ''ದ್ವಿಪದ ಛಂದಸ್ಸನ್ನು ಮಹಾಕಾವ್ಯಕ್ಕೆ ಉಪಯೋಗವಾಗುವಂತೆ ತಿದ್ದಿದ ಗೌರವವು ಇವನಿಗೆ ಸಲ್ಲುತ್ತದೆ.''[೨].

ಇಲ್ಲಿಯೇ ಒಂದು ಸಣ್ಣ ಊಹೆಯನ್ನು ಮಾಡಬಹುದು. ಹರಿಹರ - ಸೋಮನಾಥರಿಬ್ಬರೂ, ಬಸವಣ್ಣ ಮತ್ತವನ ನೇತೃತ್ವದ ಆಂದೋಲನದಿಂದ ಪ್ರಭಾವಿತರಾದವರು, ಹಾಗಾಗಿ ಅವರ ಕಾವ್ಯರಚನೆ ಜನಪರನಿಲುವನ್ನು ತಳೆಯುವಂತಾಯಿತು. ಹಾಗಾಗಿ ಅವರಿಬ್ಬರೂ ತಮ್ಮ ತಮ್ಮ ಭಾಷೆಯಲ್ಲಿ ಅವರೆಗೂ, ಕ್ವಚಿತ್ತಾಗಿ ಬಳಕೆಯಲ್ಲಿದ್ದ ದೇಶೀ ಛಂದಸ್ಸನ್ನು ತಮ್ಮ ಕಾವ್ಯಾಭಿವ್ಯಕ್ತಿಯ ವಾಹಕವನ್ನಾಗಿ ಮಾಡಿಕೊಂಡರು. ಹರಿಹರ ಎಲ್ಲ ಬಗೆಯ ರಗಳೆಗಳನ್ನು ಬಳಸಿಕೊಂಡ ; ಸೋಮನಾಥ 'ದ್ವಿಪದ'ವನ್ನು ದೀರ್ಘರಚನೆಗಳಿಗೂ ಅಳವಡಿಸಿಕೊಂಡ. ದ್ವಿಪದದ ಸ್ವರೂಪವೆಂದರೆ ಪ್ರತಿಪಾದದಲ್ಲಿ ಮೂರು ವಿಷ್ಣುಗಣಗಳೂ ಕೊನೆಗೊಂದು ಬ್ರಹ್ಮಗಣವೂ ಬರುತ್ತದೆ. ಎರಡನೆಯ ಗಣದನಂತರ ಯತಿಯಿರುತ್ತದೆ. ಇದರ ಬಗ್ಗೆ 'ಛಂದೋಂಬುಧಿ'ಯಲ್ಲಿ ಪ್ರಸ್ತಾಪವಿಲ್ಲ. ಈಚಿನ 'ನಂದಿಛಂದೋರ್ಣವ'ದಲ್ಲಿ ಇದರ ಲಕ್ಷಣವನ್ನು ವಿವರಿಸಲಾಗಿದೆ. ದ್ವಿಪದವು ಅಂಶಗಣಘಟಿತವಾದುದು. ಕನ್ನಡದಲ್ಲಿ ದೊರೆಯುವ ರಗಳೆಗಳು ಮಾತ್ರಾಗಣಘಟಿತವಾದವು. ರಗಳೆಯ ಬಗ್ಗೆ ರಂ. ಶ್ರೀ. ಮುಗಳಿಯವರ ಒಂದು ಊಹೆ ಹೀಗಿದೆ. ''ಕನ್ನಡ ಜನಪದ ಸಾಹಿತ್ಯದಲ್ಲಿ ತ್ರಿಪದಿಯ ಹಲವು ಅವಿಷ್ಕಾರಗಳಂತೆ ರಗಳೆಯ ಕೆಲವು ಆವಿಷ್ಕಾರಗಳೂ ಇದ್ದಿರಬಹುದು. ಪಂಪನ ರಚನೆಗಳಲ್ಲಿ ಜಾನಪದ ಪ್ರಭಾವವನ್ನು ನಾವು ಗುರುತಿಸಿದ್ದೇವೆ. ಇದರಿಂದ ಮುಖ್ಯವಾಗಿ ರಗಳೆ ಇದು ಅಚ್ಚಗನ್ನಡ ಜಾನಪದ ಛಂದೋರೂಪವಿರಬೇಕೆಂದೂ ಅದು ಹಲವು ಟಿಸಿಲಾಗಿ ಬೆಳೆಯಿತೆಂದೂ ಮಾರ್ಗಕಾವ್ಯದಲ್ಲಿ ಅದೇ ಶಿಷ್ಟಭಾಷೆಯಲ್ಲಿ ಜನ್ಮತಾಳಿತೆಂದೂ ಹೇಳಬಹುದು.''[೩]. ಕನ್ನಡದ ಜಾನಪದ ಸಾಹಿತ್ಯವೆಂದರೆ ಅಂಶಛಂದಸ್ಸಿನ ರಚನೆಗಳು ದ್ವಿಪದದ ಕೊನೆಯ ಬ್ರಹ್ಮಗಣವೂ

೧. ಆರ್ವೀಯಸ್ ಸುಂದರಂ : ತೆಲುಗು ಭಾಷೆ ಮತ್ತು ಸಾಹಿತ್ಯ : ಪು೪೨-೩

೨. ದಿವಾಕರ್ಲ ವೆಂಕಟಾವಧಾನಿ (ಅನು: ಎಫ್. ಜಿ. ಮಠದ) : 'ಆಂಧ್ರ ವಾಙ್ಮಯ ಚರಿತ್ರೆ' : ಪುಟ.೧೯

೩. ರಂ. ಶ್ರೀ. ಮುಗಳಿ : ಪ್ರಾಚೀನ ಕನ್ನಡ ಸಾಹಿತ್ಯ ರೂಪಗಳು (೧೯೮೫) : ಪು.೧೬೩

(ಮುಂದೆ ಸಹಜ ಯತಿಯಿರುವುದರಿಂದಾಗಿ) ಎಳೆಯಲ್ಪಟ್ಟು ಉಚ್ಚಾರ ಕಾಲದ ದೃಷ್ಟಿಯಿಂದ ವಿಷ್ಣುಗಣದ ಹರಹನ್ನೇ ಪಡೆಯುತ್ತದೆ. ಇದು ರಗಳೆಯ ಓಟವನ್ನೇ ಹೋಲುವಂಥದು. ಕನ್ನಡದ ರಗಳೆಗೆ ಈ ಅಂಶಘಟಿತ ದ್ವಿಪದವೇ ಮೂಲವಾಗಿರಬಹುದೇ ? ಏಕೆಂದರೆ ಅಂಶಗಣ ಘಟಿತವಾದ ಒಂದೇ ಬಗೆಯ ಷಟ್ಪದಿಯು ಮುಂದೆ ನಾನಾ ಬಗೆಯ ಮಾತ್ರಾಷಟ್ಪದಿಗಳಿಗೆ ದಾರಿಮಾಡಿಕೊಟ್ಟಿತು. ಇದಕ್ಕೆ ಕಾರಣ ವಿಷ್ಣುಗಣವು ನಾಲ್ಕರಿಂದ ಆರು ಮಾತ್ರೆಗಳ ವ್ಯಾಪ್ತಿಯನ್ನು ಪಡೆಯುವುದು. ಹಾಗೆಯೇ ವಿಷ್ಣುಗಣಗಳಿಂದಲೇ ಪ್ರಮುಖವಾಗಿ ಕೂಡಿರುವ ಅಂಶದ್ವಿಪದವು ಮಾತ್ರಾರೂಪಕ್ಕೆ ತಿರುಗಿದಾಗ ನಾಲ್ಕು ಮಾತ್ರೆಗಳ (ಮಂದಾನಿಲ) ಐದು ಮಾತ್ರೆಗಳ (ಲಲಿತ) ಹಾಗೂ ಆರು ಮಾತ್ರೆಗಳ ಅಥವಾ ಮೂರು ಮಾತ್ರೆಗಳ ಎರಡು ಘಟಕವನ್ನುಳ್ಳ (ಉತ್ಸಾಹ) ರಗಳೆಗಳಿಗೆ ಅವಕಾಶ ಮಾಡಿಕೊಟ್ಟಿರಬಹುದು. ಈ ಬಗ್ಗೆ ವಿದ್ವಾಂಸರಿಂದ ಇನ್ನೂ ನಿಖರವಾಗಿ ಸಂಶೋಧನೆ ನಡೆಯಬೇಕಾಗಿದೆ"[೧] ಒಟ್ಟಿನಲ್ಲಿ ಹರಿಹರ-ಸೋಮನಾಥರಿಬ್ಬರೂ ಧೋರಣೆ ಯಲ್ಲಿ ಒಂದೇ ಮನೋಭಾವದವರಾದುದರಿಂದ ಅವರ ಕಾವ್ಯವಸ್ತುವಿನ ಆಯ್ಕೆಯಂತೆಯೆ ಛಂದೋಆಯ್ಕೆಯು ಜನಪದದಿಂದ ಪ್ರಭಾವಿತ ವಾಯಿತೆಂದು ಹೇಳಬಹುದು.

ಪಾಲ್ಕುರಿಕೆ ಸೋಮನಾಥನು ತೆಲುಗುಕವಿಯಾದರೂ ಕನ್ನಡದಲ್ಲಿ ಅವನಿಗೆ ಹೆಚ್ಚಿನ ಮಾನ್ಯತೆ ದೊರತಿದೆ. ತೆಲುಗಿನ ಶಿವಕವಿಗಳಲ್ಲಿ ಅವನು ಅಸದೃಶನಾಗಿದ್ದಾನೆ. ಅನೇಕ ಕವಿಗಳು ಮುಂದೆ ಅವನನ್ನು ಸ್ತುತಿಸಿದ್ದಾರೆ, ಅನುಸರಿಸಿದ್ದಾರೆ. ಕೆಲವರು ಅವನನ್ನು ನೇರವಾಗಿ ಅನುಸರಿಸಿಯೂ ಇದ್ದಾರೆ. ಕ್ರಿ.ಶ.೧೫೬೦ರ ಪಿಡುಪರ್ತಿ ಸೋಮನಾಥ ಕವಿಯು ಇವನ ಬಸವ ಪುರಾಣ' ವನ್ನು ಚಂಪುರೂಪದಲ್ಲಿ ರಚಿಸಿದ. ಇನ್ನೂ ಮುಂದೆ ವಿಜಯವಾಡದ ಮಹಾದೇವಾರಾಧ್ಯನು ಇವನ್ನು ಮತ್ತೆ ದ್ವಿಪದರೂಪದಲ್ಲಿ ಬರೆದ. 'ಶ್ರೀನಾಥ ಮಹಾಕವಿಯು ಸೋಮನಾಥನ ಮತ್ತೊಂದು ದ್ವಿಪದ ಕಾವ್ಯವಾದ 'ಪಂಡಿತಾರಾಧ್ಯ ಚರಿತ್ರಮು' ವನ್ನು ಸುಮಾರು ೧೪೦೦ರಲ್ಲಿ ತೆಲುಗು ಕಾವ್ಯರೂಪಕ್ಕೇ ತಿರುಗಿಸಿದ. ತುಮ್ಮನಪಲ್ಲಿ ನಾಗಭೂಷಣಕವಿಯು ಸು.೧೭೫೦ರಲ್ಲಿ 'ಬಸವ ವಿಜಯಮು' ಎಂಬ ಕಾವ್ಯವನ್ನು ರಚಿಸಿದ್ದಾನೆ. ಇದೇ ಕಾಲದಲ್ಲಿಯೇ 'ಬಸವ ವಿಜಯಮು' ಎಂಬ ಹೆಸರಿನಲ್ಲಿಯೇ ನಲ್ಲಗೊಂಡ ನಾಗನಾರಾಧ್ಯನು ದ್ವಿಪದ ಕಾವ್ಯವೊಂದನ್ನು ಬರೆದ. ಅಲ್ಲದೆ ತೆಲುಗಿನಲ್ಲಿ ಅನುಮೋದ ಸನ್ಯಾಸಿ ಕವಿಯು 'ಬಸವ ಕಲ್ಯಾಣಮು'ಎಂಬ ಕಾನೂರಿ ವರವೀರಭದ್ರಕವಿಯು 'ಬಸವ ಮಹಿಮಾಮೃತ ವಿಲಾಸಮ' ಎಂಬ ಯಕ್ಷಗಾನಗಳನ್ನೂ ರಚಿಸಿದ್ದಾರೆ. ಹತ್ತೊಂಬತ್ತನೇ ಶತಮಾನದಲ್ಲೂ ಬಸವನನ್ನು ಕುರಿತ ಅನೇಕ ಗ್ರಂಥಗಳು ತೆಲುಗಿನಲ್ಲಿ ರಚಿತವಾಗಿವೆ.[೨].

---

೧. ಪಿ. ವಿ. ನಾರಾಯಣ (ಅನು);ಪಾಲ್ಕುರಿಕೆ ಸೋಮನಾಥನ 'ಬಸವ ಪುರಾಣ' ಪ್ರಸ್ತಾವನೆ;ಪು.XVI-XVII

2) Bandaru Thammaiah; Basavesvara in Telugu Literature (Sri Basaveswara Commemoration volume, 1967, PP 434-5)

ಬಸವನನ್ನು ಕುರಿತ ತೆಲುಗಿನ ಈ ದೀರ್ಘ ಕಾವ್ಯಪರಂಪರೆಗೆ ಪಾಲ್ಕುರಿಕೆ ಸೋಮನಾಥನು ಆದ್ಯನಾಗಿದ್ದಾನೆ. ಅಷ್ಟು ಮಾತ್ರವಲ್ಲ ಕನ್ನಡದಲ್ಲಿಯೂ ಹರಿಹರನಿಗಿಂತ ಭಿನ್ನವಾದ ಬಸವ ಚರಿತ ಪರಂಪರೆಗೆ ಕಾರಣನಾಗಿದ್ದಾನೆ. ಹಾಗಾಗಿ ಕನ್ನಡದ ಕವಿಗಳು ಇವನ ಬಗ್ಗೆ ಅಪಾರ ಗೌರವವನ್ನು ತೋರಿದ್ದಾರೆ. ತೋಂಟದಾರ್ಯನು 'ಪಾಲ್ಕುರಿಕೆ ಸೋಮೇಶ್ವರ ಪುರಾಣ' ವೆಂಬ ಕಾವ್ಯವನ್ನೇ ಈತನ ಬಗ್ಗೆ ಬರೆದಿದ್ದಾನೆ. ಸಿದ್ಧನಂಜೇಶನು 'ಗುರುರಾಜ ಚಾರಿತ್ರ' ದಲ್ಲಿಯೂ ಇವನ ಬಗ್ಗೆ ಅನೇಕ ವಿಚಾರಗಳನ್ನು ಹೇಳಿದ್ದಾನೆ.[೧]

ಸೋಮನಾಥನು ಇಪ್ಪತ್ತಕ್ಕಿಂತಲೂ ಹೆಚ್ಚಿನ ಸಂಖ್ಯೆಯಲ್ಲಿ ಕೃತಿಗಳನ್ನು ಬರೆದಿದ್ದಾನೆ. ಅನುಭವಸಾರ, ಬಸವಪುರಾಣ, ವೃಷಾಧಿಪ ಶತಕ, ಅಕ್ಷರಾಂತಗದ್ಯ, ಅಕ್ಷರಾಂತ ಪದ್ಯ, ನಮಸ್ಕಾರ ಗದ್ಯ, ಪಂಚ ಪ್ರಕಾರ ಗದ್ಯ, ಶರಣ ಬಸವ ಗದ್ಯ, ಅಷ್ಟೋತ್ತರ ಶತನಾಮ ಗದ್ಯ, ಚತುರ್ವೇದಸಾರ, ಸದ್ಗುರು ರಗಡ, ಗಂಗೋತ್ಪತ್ತಿ ರಗಡ, ಬಸವೋದಾಹರಣ, ಚನ್ನಮಲ್ಲು ಸೀಸಮುಲು, ಸೋಮನಾಥ ಸ್ತವ, ಮಲ್ಲದೇವಿಪುರಾಣ, ಪಂಡಿತಾರಾಧ್ಯ ಚರಿತ್ರೆ - ಈ ತೆಲುಗು ಕೃತಿಗಳನ್ನೂ ಬಸವೋದಾಹರಣ, ಸೋಮನಾಥ ಭಾಷ್ಯ, ರುದ್ರ ಭಾಷ್ಯ, ವೃಷಭಾಷ್ಟಕ - ಎಂಬ ಸಂಸ್ಕೃತ ಕೃತಿಗಳನ್ನೂ ರಚಿಸಿದ್ದಾನೆ. ವೃಷಾಧಿಪ ಶತಕವು ಮುಖ್ಯವಾಗಿ ತೆಲುಗಿನಲ್ಲಿದ್ದರೂ ಅದರಲ್ಲಿ ಸಂಸ್ಕೃತ, ಕನ್ನಡ, ತಮಿಳು, ಮರಾಠಿ ಹಾಗೂ ಮಣಿಪ್ರವಾಳಗಳಲ್ಲಿ ಬರೆದಿರುವ ಪದ್ಯಗಳಿವೆ.

ಪಾಲ್ಕುರಿಕೆ ಸೋಮನಾಥನು ಅಸೀಮ ಬಸವ ಭಕ್ತ. ಅಕ್ಷರಾಂಕ ಗದ್ಯ, ಅಕ್ಷರಾಂಕ ಪದ್ಯ, ಪಂಚ ಪ್ರಕಾರ ಗದ್ಯ, ಶರಣು ಬಸವ ಗದ್ಯ, ಅಷ್ಟೋತ್ತರ ಶತನಾಮ ಗದ್ಯ - ಇವು ಬಸವಣ್ಣನನ್ನು ಸ್ತುತಿಸುವ ಕೃತಿಗಳು. ಶರಣು ಬಸವ ಗದ್ಯವು ರಗಳೆಯಲ್ಲಿದೆ (ಇವನ ಇತರ ಗದ್ಯ ಹೆಸರಿನ ಕೃತಿಗಳೂ ರಗಳೆಯ ಛಂದಸ್ಸಿನಲ್ಲಿ ರಚಿತವಾದುವುಗಳು). ಅಲ್ಲಿನ ಪ್ರತಿಪಾದವೂ 'ಶರಣು ಬಸವ' ಎಂದು ಕೊನೆಗೊಳ್ಳುತ್ತದೆ. ಬಸವೋದಾಹರಣವು ಸಂಸ್ಕೃತ ಹಾಗೂ ತೆಲುಗು ಭಾಷೆಗಳಲ್ಲಿರುವ ಕೃತಿಗಳು. ಇವು 'ಉದಾಹರಣಯುಗ್ಮ' ಎಂಬ ಹೆಸರಿನಿಂದ ಪ್ರಸಿದ್ಧವಾಗಿವೆ. ಇದೂ ಬಸವ ಸಂಕೀರ್ತನೆಯನ್ನು ಧ್ಯೇಯವಾಗಿರಿಸಿಕೊಂಡ ಕೃತಿ. ವೃಷಾಧಿಪಶತಕವು ಉತ್ಪಲಮಾಲೆ ಹಾಗೂ ಚಂಪಕ ಮಾಲಾ ವೃತ್ತಗಳಲ್ಲಿರುವ ಕೃತಿ. ಅದರ ಪ್ರತಿಪದ್ಯವೂ 'ಬಸವಾ ಬಸವಾ ಬಸವಾ ವೃಷಾಧಿಪ' ಎಂದು ಮುಗಿಯುತ್ತದೆ. 'ಚುತರ್ವೇದಸಾರ' ಎಂಬುದು ಸೀಸ ಪದ್ಯಗಳ ರಚನೆ ; ಪ್ರತಿಪದ್ಯದಲ್ಲೂ ಬಸವಲಿಂಗ ಎಂಬ ಮುದ್ರಿಕೆಯಿರುತ್ತದೆ. 'ಬಸವಪುರಾಣ'ವು ಅವನ ಬಸವ ಭಕ್ತಿಪ್ರಕಟನೆಯ ಶೃಂಗಕೃತಿ. ಆದ್ದರಿಂದ ಅವನ ಸಮಕಾಲೀನರು ಅವನನ್ನು 'ಬಸವಣ್ಣ ಮಹಿಮ ಶುಂಭದ್ಭಕ್ತಿಯುಕ್ತಿ' ಎಂದು

೧. ಮರಿತೋಂಟದಾರ್ಯನ 'ಸಿದ್ದೇಶ್ವರ ಪುರಾಣ', ಪರ್ವತೇಶನ 'ಚತುರಾಚಾರ್ಯ ಪುರಾಣ', ಗುಬ್ಬಿ ಮಲ್ಲಣಾರ್ಯನ 'ವೀರಶೈವ ಮಹಾ ಪುರಾಣ', ಶಾಂತಲಿಂಗದೇಶಿಕನ 'ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ' - ಈ ಕೃತಿಗಳಲ್ಲೂ ಸೋಮನಾಥನ ವಿಷಯವಿದೆ.

ಹೊಗಳುತ್ತಿದ್ದರಂತೆ. ಇದನ್ನು ಸೋಮನಾಥನೇ ತನ್ನ 'ಪಂಡಿತಾರಾಧ್ಯ ಚರಿತ್ರೆ'ಯಲ್ಲಿ ಹೇಳಿಕೊಂಡಿದ್ದಾನೆ. 'ಉದ್ಭಟ ಚರಿತೆ'ಯ ಕರ್ತೃವಾದ ಸೋಮರಾಜನು ಅವನನ್ನು 'ಸಮುದಾಂಚದ್ವೃಷಭಸ್ತವಾಮರ ಮಹೀಜಾರಾಮನಂ ಸೋಮನಂ' ಎಂದು ವರ್ಣಿಸುತ್ತಾನೆ.

ಪಾಲ್ಕುರಿಕೆ ಸೋಮನಾಥನು ಆವೇಶಪೂರ್ಣನಾದ ವೀವಶೈವ. ಆತನು ಶಿವೇತರ ದೇವತೆಗಳ ವಿಗ್ರಹಗಳನ್ನು ನೋಡಬಾರದೆಂಬ ಛಲದವನು. ಇದರಿಂದಾಗಿ ಕೋಟೆಯ ಮೇಲಿದ್ದ ಗಜಲಕ್ಷ್ಮಿಯ ವಿಗ್ರಹವು ಮುರಿದು ಬೀಳುವಂತೆ ಪವಾಡ ಮೆರೆದನೆಂಬ ಕತೆಯು 'ಪಾಲ್ಕುರಿಕೆ ಸೋಮೇಶ್ವರ ಚರಿತ ಯಕ್ಷಗಾನಮು' ಎಂಬ ತೆಲುಗು ಕೃತಿಯಲ್ಲಿದೆ. ಇವನು ಆರಾಧ್ಯ ಬ್ರಾಹ್ಮಣನಾಗಿದ್ದವನು. ಆದರೆ ಬಾಲ್ಯದಲ್ಲಿಯೇ ವೀರಶೈವನಾದವನು. ಅವನು ಕಟ್ಟುನಿಟ್ಟಾಗಿ ಅರವತ್ತನಾಲ್ಕು ಶೀಲಗಳನ್ನು ಆಚರಿಸಿದನೆಂದು 'ಪಾಲ್ಕುರಿಕೆ ಸೋಮೇಶ್ವರ ಪುರಾಣ'ದಲ್ಲಿ ವರ್ಣಿತವಾಗಿದೆ. ತನ್ನ 'ಸೋಮನಾಥ ಭಾಷ್ಯ', 'ರುದ್ರ ಭಾಷ್ಯ', 'ಚತುರ್ವೇದಸಾರ', 'ಗಂಗೋತ್ಪತ್ತಿ ರಗಡ' ಈ ಕೃತಿಗಳಲ್ಲಿ ಪರಮತಗಳನ್ನು ಖಂಡಿಸಿ ವೀರಶೈವದ ಬಗ್ಗೆ ಸೂತ್ರಗ್ರಂಥಗಳೆನ್ನಬಹುದಾದ ರೀತಿಯ ರಚನೆ ಮಾಡಿದ್ದಾನೆ[೧]. ಆತನು ತನ್ನ ಕೊನೆಗಾಲದಲ್ಲಿ ಕರ್ನಾಟಕದ ಬೆಂಗಳೂರಿನ ಬಳಿಯಿರುವ ಮಾಗಡಿ ತಾಲ್ಲೂಕಿನ ಕಲ್ಯಕ್ಕೆ ಬಂದು ಅಲ್ಲಿಯೇ ಕೊನೆಯುಸಿರೆಳೆದ ಬಗ್ಗೆ ತೋಂಟದಾರ್ಯನ 'ಪಾಲ್ಕುರಿಕೆ ಸೋಮೇಶ್ವರ ಪುರಾಣ'ದಲ್ಲಿ ವಿವರಗಳಿವೆ. ಹಿಂದೆಯೇ ನೋಡಿದಂತೆ ಸೋಮನಾಥನು ಅರವತ್ತು ನಾಲ್ಕು ಶೀಲಗಳನ್ನು ಚಾಚು ತಪ್ಪದೆ ಅನುಸರಿಸಿದವನು. ಅವನಂತೆಯೇ ವ್ರತಗಳನ್ನು ಅನುಸರಿಸುತ್ತಿದ್ದ ಚನ್ನಮ್ಮನೆಂಬ ಶರಣೆಯು ಕಲ್ಯದಲ್ಲಿದ್ದಳು. ಸೋಮನಾಥನಿಗೆ ಆಕೆಯ ವಿಷಯವಾಗಿ ಆ ಕತೆಯಿಂದ ಬಂದ ಜಂಗಮನೊಬ್ಬನಿಂದ ವಿವರಗಳು ತಿಳಿಯುತ್ತದೆ. ಆಕೆಯನ್ನು ಕಾಣುವ ಉತ್ಸಾಹದಿಂದ ಸೋಮನಾಥನು ಆಂಧ್ರದ ತೆಲಂಗಾಣ ಪ್ರದೇಶದ ಪಾಲ್ಕುರಿಕೆಯಿಂದ ಬಂಡಿಯೇರಿ ಬರುತ್ತಾನೆ. ತನ್ನನ್ನು ಕಂಡ ಆತನಿಗೆ ತಮ್ಮೂರಿನಲ್ಲಿ ಒಂದು ತಿಂಗಳಾದರೂ ಉಳಿಯಬೇಕೆಂದು ಚನ್ನಮ್ಮ ಆಗ್ರಹಪಡಿಸಿದಾಗ ಅವನು ಮೊದಲು ವಾಗ್ದಾನ ಮಾಡುತ್ತಾನೆ. ಆದರೆ ಕೆಲಕಾಲದನಂತರ ಮನಸ್ಸು ಬದಲಾಯಿಸಿ, ತಿಂಗಳಾಗುವ ಮುಂಚೆಯೇ ಊರಿಗೆ ಮರಳಲು ಗಾಡಿ ಕಟ್ಟಿಸುತ್ತಾನೆ. ಎತ್ತುಗಳು ಮಾತ್ರ ಮುಂದೆ ಹೋಗದೆ ಹಾಗೆಯೇ ನಿಂತುಬಿಟ್ಟುವು. ಚನ್ನಮ್ಮನಿಗೆ ತಾನಿತ್ತ ಮಾತನ್ನು ನಡೆಸದೆ ಹೊರಟದ್ದರಿಂದ ಹಾಗಾಯಿತೆಂದು ಮನವರಿಕೆಯಾಗಿ ಸೋಮನಾಥನು ಪ್ರಯಾಣವನ್ನು ರದ್ದುಗೊಳಿಸುತ್ತಾನೆ. ಆದರೆ ಕೆಲವು ದಿನಗಳಲ್ಲಿಯೇ ಅವನು ಅಲ್ಲಿಯೇ ಕಣ್ಣುಮುಚ್ಚಿದ. ಊರಿನ ಭಕ್ತರು ಅವನಿಗೆ ಕಲ್ಲೇಶ್ವರ ದೇವಾಲಯದ ಬಳಿ ಸಮಾಧಿಯನ್ನು ನಿರ್ಮಿಸುತ್ತಾರೆ. ಹೀಗೆ ಆಂಧ್ರದಲ್ಲಿ ಹುಟ್ಟಿದ ಅಸೀಮ ಬಸವಭಕ್ತನಾದ ಸೋಮನಾಥನು ಕನ್ನಡ ನೆಲದಲ್ಲಿ ಸೇರಿಹೋದುದು ಅರ್ಥಪೂರ್ಣವಾಗಿದೆ.

---

೧. ಗಾಜುಲ ವೀರಯ್ಯ : ಬಸವ ಪುರಾಣ ಬಸವರಾಜದೇವರ ರಗಳೆಗಳಲ್ಲಿರುವ ಸಾಮ್ಯ ವ್ಯತ್ಯಾಸಗಳು (ಸಾಧನೆ vi-೨ : ಪು.೩೨)

ಭೀಮಕವಿಯು ತನ್ನ 'ಬಸವ ಪುರಾಣ'ವನ್ನು "ಉಡುದೇವ ನಿಧಿನಯನೇಂದು ಸಂಖ್ಯೆಗಳೊೀವಿ ಶಕವರುಷಂಗಳಾಗಲು ಸೌಮ್ಯವತ್ಸರದ ಶ್ರಾವಣ ಬಹುಳ ಪಕ್ಷ ದಶಮೀ ಜೀವವಾರ"ವಂದು ಬರೆದು ಮುಗಿಸಿದುದಾಗಿ ಹೇಳಿಕೊಳ್ಳುತ್ತಾನೆ.[೧] ಇದು ಕ್ರಿ.ಶ. ೧೩೬೯ಕ್ಕೆ ಸರಿಹೊಂದುತ್ತದೆ. ತನ್ನ ತಂದೆಯ ಹೆಸರು ಶಿವಕವಿದೇವನೆಂದು ಕವಿಯೇ ಹೇಳಿಕೊಳ್ಳುತ್ತಾನೆ. ಭೀಮಕವಿಯ ಬಗ್ಗೆ ಸಿದ್ಧನಂಜೇಶನ 'ರಾಘವಾಂಕ ಚಾರಿತ್ರ'ದಲ್ಲಿ ಕೆಲವು ವಿವರಗಳಿವೆ.[೨] ಭೀಮಕವಿಯ ತಂದೆ ಶಿವಕವಿದೇವ ಶ್ರೀಶೈಲದ ಬಳಿಯ ಸಿದ್ಧವಟಪುರದವನು. ಆತ ಹಂಪೆಗೆ ಒಮ್ಮೆ ಬಂದಾಗ ಹರಿಹರನನ್ನು ಕಾಣುತ್ತಾನೆ. ತನಗೆ ಮಗನು ಹುಟ್ಟಿದರೆ ಹರಿಹರನ ಸೇವೆ ಮಾಡುತ್ತಿರುವ ರಾಘವಾಂಕನಲ್ಲಿ ವಿದ್ಯೆ ಕಲಿಸುತ್ತೇನೆ ಎನ್ನುತ್ತಾನೆ. ಮುಂದೆ ಆತನಿಗೆ ಮಗ ಹುಟ್ಟುತ್ತಾನೆ. ಆ ಮಗು ಭೀಮ ಎಂಬ ಹೆಸರಿನಿಂದ ಬೆಳೆದು ಎಂಟು ವರ್ಷದವನಾದಾಗ ಅವನು ಹಂಪೆಯಲ್ಲಿ ಹರಿಹರನ ವಶಕ್ಕೆ ಒಪ್ಪಿಸುತ್ತಾನೆ. ಹರಿಹರನ ಆಣತಿಯಂತೆ ರಾಘವಾಂಕ ಭೀಮನಿಗೆ ವಿದ್ಯೆ ಕಲಿಸುತ್ತಾನೆ. ಆತನ ಕಾವ್ಯರಚನಾ ಸಾಮರ್ಥ್ಯವು ಕುಡಿವರೆದು ಹರಿಹರನ ಮುಂದೆಯೇ 'ಭೃಂಗಿದಂಡಕ'ವನ್ನು ರಚಿಸುವಂತಾಗುತ್ತದೆ. ಕೆಲಕಾಲಾನಂತರ ಭೀಮಕವಿ ಸ್ವಂತ ಊರಾದ ಸಿದ್ಧವಟಪುರಕ್ಕೆ ಬರುತ್ತಾನೆ. ತಂದೆ ಸಂತೋಷಿಸಿ 'ಭಕ್ತವೃಂದದ ಆಜ್ಞೆಯಂತೆ ನಡೆದುಕೋ' ಎಂದು ಆಶೀರ್ವದಿಸುತ್ತಾನೆ. ಒಮ್ಮೆ ಪಾಲ್ಕುರಿಕೆ ಸೋಮನಾಥನೂ ಶಿವದೇವನೂ ಕನಸಿನಲ್ಲಿ ಬಂದು ಬಸವಪುರಾಣವನ್ನು ರಚಿಸುವಂತೆ ಸೂಚಿಸುತ್ತಾರೆ. ಈ ಸ್ವಪ್ನವಿಚಾರವನ್ನು ಭೀಮಕವಿಯೂ ಹೇಳಿಕೊಂಡಿದ್ದಾನೆ. "ಇಂತು ಜಡಮತಿಯಿಂ ಬಸವರಾಜನ ಕೃತಿಯನಾನೆಂತು ರಚಿಸುವೆನೆನುತೆಣಿಸಿ ಶಿವಯೋಗನಿದ್ರಾಮುದ್ರಿತದೊಳಿರಲು ಅನುನಯದಿ ಪಾಲ್ಕುರಿಕೆ ಸೋಮೇಶನುಮನಘದೇವಾರ್ಯನುಂ ಕನಸಿನೊಳೊಸೆದು ಬಂದು ಪ್ರಸಾದವನಿತ್ತು ನುಡಿಸಿದನು"[೩].

'ರಾಘವಾಂಕ ಚಾರಿತ್ರ'ದ ವಿವರಗಳನ್ನು ಒಪ್ಪಿಕೊಂಡರೆ ಭೀಮನು ರಾಘವಾಂಕನ ಕಿರಿಯ ಸಮಕಾಲೀನ. ಆದರೆ ರಾಘವಾಂಕನ ಕಾಲ ಹದಿಮೂರನೆಯ ಶತಮಾನದ ಪೂರ್ವಾರ್ಧದಲ್ಲಿ ಮುಗಿದಿರಬಹುದಾದ್ದರಿಂದ ೧೩೬೯ರಲ್ಲಿ ಕೃತಿರಚನೆ ಮಾಡಿದ ಭೀಮಕವಿಗೆ ಬಾಲ್ಯದಲ್ಲಿ ವಿದ್ಯಾಭ್ಯಾಸಮಾಡಿಸಿದ ಸಂಗತಿ ಐತಿಹಾಸಿಕ ಸಂಗತಿಯಾಗಿರಲಿಕ್ಕಿಲ್ಲ. ಕೊಂಡಗುಳಿಕೇಶಿ, ಸಿರಿಪತಿ ಪಂಡಿತ, ಶಿವಲೆಂಕ ಮಂಚಣ ಪಂಡಿತ, ಗುರುಮಲ್ಲಿಕಾರ್ಜುನರ ಕೃಪೆಯಿಂದ ತಾನು ಕಾವ್ಯರಚನೆ ಮಾಡಿದೆನೆಂದು ಕವಿ ಹೇಳಿಕೊಳ್ಳುವಂತೆಯೇ, ಉಭಯಕವಿಶರಭಭೇರುಂಡನಾದ ಹರಿಬುಧವರ (ಹರಿಹರ) ಹಾಗೂ ತದ್ವರಸುತನಾದ ರಾಘವನ ಕೃಪೆಯಿಂದ ಕೃತಿರಚಿಸಿರುವಂತೆ ಹೇಳಿಕೊಳ್ಳುತ್ತಾನೆ, ಹಾಗೆಯೇ ಕಾವ್ಯರಚನೆಯ ಮುನ್ನ ಶಿವತತ್ತ್ವವಿದರನ್ನೂ

೧. ಆರ್. ಸಿ. ಹಿರೇಮಠ (ಸಂ) : ಭೀಮಕವಿ ವಿರಚಿತ ಬಸವ ಪುರಾಣ : ಸಂ.೬೦ : ೯೨
೨. 'ರಾಘವಾಂಕ ಚಾರಿತ್ರ'ದ ಹದಿನೈದನೆಯ ಸಂಧಿಯ ಪ್ರಾರಂಭದ ಪದ್ಯಗಳನ್ನು ನೋಡಿ
೩. ಬಸವ ಪುರಾಣ : ಸಂ.೧. ಪದ್ಯ ೧೪

ಸಕಲಾಗಮಜ್ಞಪ್ರವರರನ್ನೂ ಭಾವಿಸುತ್ತಾನೆ.[1] ಹೀಗಾಗಿ ರಾಘವಾಂಕನು ಭೀಮಕವಿಗೆ ವಂದ್ಯರಲ್ಲೊಬ್ಬನೇ ವಿನಾ ಸಮಕಾಲೀನ ಎನ್ನಲು ಬರುವುದಿಲ್ಲ. ಅದು ಪುರಾಣಕಾರನ ಕಲ್ಪನೆಯಾಗಿರುವಂತೆ ತೋರುತ್ತದೆ.

'ಬಸವ ಪುರಾಣ'ವು ಭೀಮಕವಿಯ ಸ್ವತಂತ್ರ ಕೃತಿಯಲ್ಲ, ಅದು ಪಾಲ್ಕುರಿಕೆ ಸೋಮನಾಥನ ತೆಲುಗು 'ಬಸವ ಪುರಾಣಮು'ವಿನ ಭಕ್ತಿಪೂರ್ಣ ಅನುಸರಣೆ. ಒಟ್ಟು ಕಾವ್ಯದ ಬಂಧಕ್ಕೆ ಕಿಂಚಿತ್ತು ಊನ ಅಥವಾ ವ್ಯತ್ಯಾಸ ತಾರದ ಕೆಲವು ವ್ಯತ್ಯಾಸಗಳನ್ನು ಮಾಡಿಕೊಂಡಿದ್ದಾನೆ, ಅಷ್ಟೆ. ಭೀಮಕವಿ ಸ್ವತಂತ್ರ ಕಾವ್ಯರಚನಾ ಶಕ್ತಿಯುಳ್ಳವನೆಂಬುದರಲ್ಲಿ ಸಂಶಯವಿಲ್ಲ. 'ಬಸವ ಪುರಾಣ'ವಲ್ಲದೆ ಅವನು 'ಭೃಂಗಿದಂಡಕ' ಹಾಗೂ 'ಭೀಮಕವೀಶ್ವರ ರಗಳೆ'ಯನ್ನು ಬರೆದಿದ್ದಾನಂತೆ. ಆದರೆ ಅವು ಉಪಲಬ್ಧವಿಲ್ಲ. ಆದರೂ 'ಬಸವ ಪುರಾಣ'ದ ಭಾಮಿನಿ ಷಟ್ಪದಿಯ ಓಟ ಮತ್ತು ಕೆಲವು ಸ್ವತಂತ್ರಭಾಗಗಳ ರಚನೆ - ಇವುಗಳಿಂದ ಭೀಮಕವಿಯು ಶಕ್ತನೆಂದು ಹೇಳಬಹುದು. ಪಾಲ್ಕುರಿಕೆ ಸೋಮನಾಥನ 'ಬಸವ ಪುರಾಣ'ಮು ಹಿಂದೆಯೇ ನೋಡಿದಂತೆ ಹರಿಹರನ ಬಸವಚರಿತ ನಿರೂಪಣೆಗಿಂತ ಭಿನ್ನವಾದುದು. ತನ್ನದನ್ನು 'ಪುರಾಣ'ವೆಂದು ಆತನೇ ಕರೆದುಕೊಂಡಿದ್ದಾನೆ. ಅದೇ ಮೊದಲ ವೀರಶೈವ ಪುರಾಣ. ಆದರೆ ವೀರಶೈವ ಪುರಾಣ ಲಕ್ಷಣಗಳನ್ನು ಎಲ್ಲೂ ಪ್ರಸ್ತಾಪಿಸಿಲ್ಲ. ತನ್ನ ಕಾವ್ಯೋದ್ದೇಶವನ್ನೂ, ಕಾವ್ಯರಚನಾತಂತ್ರವನ್ನೂ ಸೋಮನಾಥ ಈ ರೀತಿ ವಿವರಿಸುತ್ತಾನೆ.

*ಅಲರಿಸಿ ಬಸವನ ನೆನೆವ ನೆನಹನು*
*ಬಲುಹಾಗಿ ಮಾಡಿ ಭಾವಗಳನು ಮೆರೆಸಿ*
*ಯಕಳಂಕಲಿಂಗ ರಹಸ್ಯಸಿದ್ಧಾಂತ*
*ಸಕಲವೇದ ಪುರಾಣ ಸಮ್ಮತವಾದ*
*ಆಸತ ಸಕಲ ಪುರಾತನಭಕ್ತ*
*ಗೀತಾರ್ಥಸಮಿತಿಯೇ ಮಾತೃಕೆಯೆಂಬ*
*ಪೂರಿತವಾಗೊಪ್ಪುವಾ ಮಣಿಗಳಲಿ*
*ದಾರದಂತೆಯೇ ಪುರಾತನಭಕ್ತವಿತತಿ*
*ಚರಿತೆಗಳಲಿ ಸೇರಿಸುತ್ತ ಬಸವನ*
*ಚರಿತೆಯ ವರ್ಣಿಪೆ ಸತ್ಕೃತಿಯೆನಿಸೆ*[2]

ಇದನ್ನೇ ಭೀಮಕವಿಯೂ ಅನುಸರಿಸಿದ್ದಾನೆ. ತನ್ನ ಕಾವ್ಯೋದ್ದೇಶವಿದು.

---

೧. ಬಸವ ಪುರಾಣ : ಸಂ.೧ : ಪು. ೧೦-೧೩

೨. ಪಿ. ವಿ. ನಾರಾಯಣ (ಅನು) : ಪಾಲ್ಕುರಿಕೆ ಸೋಮನಾಥನ ಬಸವ ಪುರಾಣ : ಆಶ್ವಾಸ ೧. ಸಾಲುಗಳು ೧೭೫-೧೮೪

*ಆದಿಲಿಂಗರಹಸ್ಯ ಸಿದ್ಧಾಂ*
*ತಾದಿ ವೇದ ಪುರಾಣ ಸಮ್ಮತ*
*ವಾದ ಬಸವಪುರಾತನರ ಗೀತಾರ್ಥ ಮಾತೃಕವಿ*
*ಕೋದಮಣಿಗಣಸೂತ್ರದಂತಿರೆ*
*ಆದಿಗಣಚರಿತಂಗಳೊಳು ಸಂ*
*ವೇದಿಸಲು ಬಸವನ ಚರಿತೆಯಂ ಬಣ್ಣಿಸುವೆನೊಸೆದು* [೧]

ಈ ಭಾಗದಲ್ಲಿ ಸೋಮನಾಥನು ಬಸವಕಥಾಸೂತ್ರದಿಂದ ಶರಣರ ಕತೆಗಳೆಂಬ ಮಣಿಗಳನ್ನು ಕೋದು ಹೇಳುವ ಉದ್ದೇಶ ಸ್ಪಷ್ಟವಾಗಿದೆ. ಆದರೆ ಅದರಲ್ಲಿ ಏಕತೆಯಿರುವುದರಿಂದಾಗಿಯೇ ಹಾಗೆ ಮಾಡಿರುವುದು. ಪ್ರಾಯಶಃ ಬಸವಣ್ಣನನ್ನು ಕೇಂದ್ರವಾಗಿರಿಸಿ ವಿವಿಧ ವೀರಶೈವ ಪತ್ರಗಳ ಪ್ರತೀಕಗಳಾದ ಬೇರೆಬೇರೆ ಶರಣರ ಕತೆಗಳನ್ನು ಹೇಳುವ ಮೂಲಕ ವೀರಶೈವದ ದರ್ಶನ ಮಾಡಿಸುವುದು ಆತನ ಉದ್ದೇಶ. ಇದು ಮುಂದೆ ಶೂನ್ಯಸಂಪಾದನೆಯ ವಿವಿಧ ಪರಿಷ್ಕರಣಗಳಲ್ಲಿ ಪರಿಪೂರ್ಣತೆಯನ್ನು ಪಡೆಯಿತು.[೨]

ಸೋಮನಾಥನ ಪ್ರಕಾರ ತನ್ನ ಪುರಾಣದ ಲಕ್ಷಣಗಳು ಎರಡು ಮಾತ್ರ, ಬಸವಚರಿತೆ ಮತ್ತು ಆದಿಗಣಚರಿತೆ. ಮುಂದೆ ಇವನ ಕೃತಿಯಲ್ಲಿರುವ ಇತರ ಲಕ್ಷಣಗಳನ್ನು ಗುರುತಿಸಿ, ಹೊಸಲಕ್ಷಣಗಳನ್ನು ಸೇರಿಸಿ ಕವಿಗಳು ವೀರಶೈವ ಪುರಾಣದ ಸ್ವರೂಪವನ್ನು ವಿಸ್ತರಿಸಿದರು. ಲಕ್ಕಣ್ಣದಂಡೇಶನ 'ಶಿವತತ್ತ್ವ ಚಿಂತಾಮಣಿ', ವಿರೂಪಾಕ್ಷ ಪಂಡಿತನ 'ಚೆನ್ನಬಸವ ಪುರಾಣ', ಗುಬ್ಬಿ ಮಲ್ಲಣಾರ್ಯನ 'ವೀರಶೈವ ಮಹಾ ಪುರಾಣ', ಸಿದ್ಧನಂಜೇಶನ 'ಗುರುರಾಜ ಚಾರಿತ್ರ' ಮುಂತಾದ ಕೃತಿಗಳಲ್ಲಿ ವೀರಶೈವ ಪುರಾಣದ ಲಕ್ಷಣಗಳನ್ನು ಆಯಾ ಕವಿಗಳ ಕಲ್ಪನೆಗೆ ಅನುಗುಣವಾಗಿ ವಿವರಿಸಲಾಗಿದೆ[೩]. ವಿವರಗಳಲ್ಲಿ ಏನೇ ವ್ಯತ್ಯಾಸಗಳಿದ್ದರೂ ಒಟ್ಟು ನೋಟದಲ್ಲಿ ನಂತರದ ವೀರಶೈವ ಪುರಾಣಗಳು. ಸೋಮನಾಥನ 'ಬಸವ ಪುರಾಣ'ವನ್ನೇ ಮಾದರಿಯಾಗಿರಿಸಿಕೊಂಡಿವೆ. ಆತನು ಹೇಳಿದಂತೆ ಪುರಾತನ ಭಕ್ತರ ಗೀತಗಳಲ್ಲಿ ಶಿವರಹಸ್ಯ ಸಿದ್ಧಾಂತಗಳೂ, ಸಕಲ ವೇದ ಪುರಾಣ ಸಮ್ಮತವಾದ ವಿಷಯಗಳಿರುವುದರಿಂದ ಆಯಾ ಭಕ್ತರ ಚರಿತ್ರೆಯನ್ನು ವಿವರಿಸುವುದೆಂದರೆ ಅವರು ಪ್ರತಿನಿಧಿಸುವ ತತ್ವಗಳ ವಿವರಣೆಯೆಂದೇ ಸೋಮನಾಥನು ಭಾವಿಸಿದ್ದ. ಈ ಮೂಲ ಸೂಚನೆಯನ್ನು ಮುಂದಿನವರು ತಮ್ಮ ಕಾಣ್ಕೆಗೆ ಅನುಗುಣವಾಗಿ ವಿಸ್ತರಿಸಿದ್ದಾರೆ.

---

೧. ಕನ್ನಡ ಬ.ಪು.೧.೨೩

೨. ನೋಡಿ, ಪಿ. ವಿ. ನಾರಾಯಣ : 'ಶೂನ್ಯಸಂಪಾದನೆಯ ಬಂಧ, ವೈಶಿಷ್ಟ್ಯ' ಎಂಬ ಲೇಖನ, ವಚನ-ನಿರ್ವಚನ (ಪು.೧೭೮-೧೮೬)

೩. ಎಸ್. ವಿದ್ಯಾಶಂಕರ : ವೀರಶೈವ ಪುರಾಣಗಳು : ಪು.೧೨೦-೭

ಸೋಮನಾಥನಿಗೆ ಬಸವಪುರಾಣವನ್ನು ಬರೆಯಲು ಆಸೆ. ಆದಕ್ಕೆ ಶ್ರೀಶೈಲದ ಭಕ್ತರನ್ನು "ಅಸದೃಶವೆನಿಪ ಬಸವ ಪುರಾಣವನು ಅತಿಶಯವೆನೆ ಹೇಳಲಿಷ್ಟವುಳ್ಳೆನಗೆ ವರಕಥಾ ಸೂತ್ರವ ತಿಳಿಸುತಲೆನ್ನ ಚರಿತಾರ್ಥನೆನಿಸಿರಿ ಕರುಣೆಯಿಂದ"[೧] ಎಂದು ಕೇಳಿಕೊಳ್ಳುತ್ತಾರೆ. ಅವರು ಅನುಗ್ರಹಿಸುತ್ತಾರೆ. ಇದಕ್ಕೆ ಸಂವಾದಿಯಾಗಿ, ಹಿಂದೆ ನೋಡಿದಂತೆ, ಭೀಮಕವಿಯ ಕನಸಲ್ಲಿ ಪಾಲ್ಕುರಿಕೆ ಸೋಮನಾಥ ಹಾಗೂ ಶಿವದೇವರು ಕಾಣಿಸಿಕೊಂಡು "ಆವುದಕ್ಕನುಮಾನಿಸದಿರೊಲಿದಾವ ಶಬ್ದಾರ್ಥಮುಮನಾದಡೆ ಭಾವಿಸಲು ನಿನಗಱಿಪಿ ನಿನ್ನಾತ್ಮದೊಳಗಲದಿರ್ದು ನಾವು ರಚಿಸುವೆವೆಸೆವ ಬಸವ ಕಥಾವಿಸರಮಂ ಬರೆದುಕೋಯೆಂದೋವಿದವರಾಜ್ಞೆಯನೆ ಶಿರದೊಳು ಧರಿಸಿ ಮುದವೆತ್ತು ಅಸಮಲಿಂಗೈಕ್ಯಾನುಭಾವ ಪ್ರಸರಮತಿ ಕವಿ ಸೋಮನಾಥನು ರಸಮೊಸ ಮುನ್ನುಸುರ್ದುದನೆ ಕನ್ನಡಿಸಿಪೇಳೆಂದು ಎಸೆವ ಬಸವ ಪುರಾಣಮಂ ಪಸರಿಸುವ ನಿರ್ಮಳ ಬೋಧೆಯಂ ಕರುಣಿಸಿದರು."[೨]

ಸೋಮನಾಥನು ತನ್ನ ಕಾವ್ಯ ಪ್ರಾರಂಭದಲ್ಲಿ ತನಗೆ ಬಸವ ಕತೆಯನ್ನು ತಿಳಿಸಿದ ಕರಸ್ಥಲಿ ಮಲ್ಲಿನಾಥ, ಲೆಂಟಾಲ ಮಲ್ಲಿನಾಥ, ನೀಲಕಂಠಾಗ್ರಜ, ಗೋಡಗಿ ತ್ರಿಪುರಾರಿ ಮುಂತಾದ ಭಕ್ತರನ್ನೂ, ದೋಚಮಾಂಬೆಯೆಂಬ ಭಕ್ತೆಯನ್ನೂ ಸ್ತುತಿಸಿದ್ದಾನೆ. ತನ್ನ ಕಥಾನಿರೂಪಣೆಗೆ ಗೊಬ್ಬೂರಿನ ಸಂಗನಾಮಾತ್ಯನನ್ನು ಶ್ರೋತೃವೆಂದು ಆರಿಸಿಕೊಂಡಿದ್ದಾನೆ. ಹಳೆಯ ಸಂಪ್ರದಾಯದಂತೆ ಕುಕವಿನಿಂದೆ ಇತ್ಯಾದಿಗಳನ್ನು ಸೋಮನಾಥ ಮಾಡಿಲ್ಲ. ಒಂದೇ ಮಾತಿನಲ್ಲಿ "ಕವಯಃ ಕಿಂ ನಪಶ್ಯಂತಿ' ಯೆನುತ ಕುಕವಿಗಳನು ಪರಿಗಣಿಸದೆ ಭರದಿ ನುತಿಸುವೆ"[೩] ಎಂದು ಕಥಾರಂಭ ಮಾಡುತ್ತಾನೆ. ಭೀಮಕವಿಯೂ ಕೊಂಡುಗುಳಿ ಕೇಶಿರಾಜ, ಶ್ರೀಪತಿಪಂಡಿತ, ಶಿವಲೆಂಕ ಮಂಚಣ್ಣ, ಗುರುಮಲ್ಲಿಕಾರ್ಜುನ ಪಂಡಿತರನ್ನು ಸ್ತುತಿಸಿ, ಹರಿಹರ ರಾಘವಾಂಕರನ್ನು, ನೆನೆಸಿಕೊಂಡು, ಕುಕವಿಗಳ ನಿಂದೆ ಮಾಡದೆ "ಕವಯಃ ಕಿಂ ನಪಶ್ಯಂತಿ ಎನೆ ಬಗೆಗಳೊಳು ಕುಕವಿಗಳನನುದಿನವೆಣಿಸದೆ ವಿಮಲ ಮತಿಯಲಿ ವಿನುತಿಸುವೆ"[೪] ಎಂದು ಪ್ರಾರಂಭಿಸುತ್ತಾನೆ. ಭೀಮಕವಿ ತನ್ನನ್ನು 'ಉಭಯಕವಿ ಸಮರ್ಥ' ಎಂದು ಕರೆದುಕೊಂಡಿದ್ದಾನೆ. ಸಾಮಾನ್ಯವಾಗಿ ಉಭಯಕವಿತ್ವವೆಂದರೆ ಸಂಸ್ಕೃತ-ಕನ್ನಡಗಳಲ್ಲಿ ಬರೆಯುವ ಶಕ್ತಿ. ಆದರೆ ಭೀಮಕವಿಯು ತಾನು ಸೋಮನಾಥನ ಕಾವ್ಯವನ್ನು 'ಕನ್ನಡಿಸು'ವೆನೆಂದು ಹೇಳಿಕೊಂಡಿರುವುದರಿಂದ ಉಭಯ ಕವಿತ್ವವೆಂದರೆ ಇಲ್ಲಿ ತೆಲುಗು-ಕನ್ನಡಗಳೆಂದು ಭಾವಿಸುವುದು ಸೂಕ್ತ.

---

೧. ತೆಲುಗು ಬಸವಪುರಾಣ (ಅನುವಾದ) I ಸಾಲು ೯೫-೮

೨. ಕನ್ನಡ ಬಸವ ಪುರಾಣ ಸಂ.೧ ಪದ್ಯ ೧೫-೧೬

೩. ತೆಲುಗು ಬಸವ ಪುರಾಣ : ೧. ೨೬೦-೨

೪. ಕನ್ನಡ ಬಸವ ಪುರಾಣ : ೧೧-೩೭

ಬಸವಾದಿಗಳು ಕನ್ನಡದಲ್ಲಿ ವಚನಗಳನ್ನು ಬರೆಯುವ ಮೂಲಕ ದೇಶಭಾಷೆಗೆ ಗೌರವದ ಸ್ಥಾನವನ್ನು ಒದಗಿಸಿದರು. ಸಾಮಾನ್ಯನ ಮಾತು ಕಡಿಮೆಯದಲ್ಲವೆಂಬ ಭಾವನೆಯನ್ನು ಜನರಲ್ಲಿ ಉಂಟುಮಾಡಿದರು. ಪಾಲ್ಕುರಿಕೆ ಸೋಮನಾಥನು ತಾನು ಜನಭಾಷೆಯಾದ ತೆಲುಗಿನಲ್ಲಿ ಬರೆಯುತ್ತಿದ್ದರೂ, ಅದು ಸಾಧಾರಣ ಭಾಷೆಯಲ್ಲವೆಂದು ಹೇಳುತ್ತಾನೆ.

*"ಉರುತರವಹ ಗದ್ಯಪದ್ಯೋಕ್ತಿಗಿಂತ*
*ಸರಸದಿ ಮೆರೆಯುವ ಜಾನುತೆಲುಗು ವಿ*
*ಚಾರಿಸಲದು ಸರ್ವಸಾಮಾನ್ಯವೆನಿಸಿ*
*ಬರುವ ದ್ವಿಪದಗಳನೀಯೆಡೆ ಬರಿಯ*
*ತೆಲುಗು ಮಾತುಗಳೆನಬಹುದೆ ? ವೇದಗಳ*
*ಸಮವೆನೆ ನೋಡಬೇಕದುವೆಯೆಂತೆನಲು*
*ಅಳತೆಗೆ ಕೊಳಗ ಪ್ರಮಾಣವೆನಿಸಲು*
*ಅಳತೆಯ ಸೊಲಗೆಯು ಪ್ರಮಾಣ ತಾನೆ ?*
*ಅಲ್ಪಾಕ್ಷರಗಳಿಂದನಲ್ಪಾರ್ಥ ರಚನೆ*
*ಯನು ಕಲ್ಪಿಸುವುದಲ್ಲವೆ ಕವಿವಿವೇಕ ?"*[೧]

ಇಲ್ಲಿ 'ಗದ್ಯಪದ್ಯೋಕ್ತಿ'ಯೆಂದು ಹೇಳುತ್ತಿರುವುದು ಚಂಪೂವನ್ನು ಕುರಿತು. 'ಜಾನು ತೆಲುಗು' ದೇಸಿಯನ್ನು ಸೂಚಿಸುತ್ತದೆ. ಇದೇ ಮಾತುಗಳನ್ನು ಭೀಮಕವಿ ಕನ್ನಡಕ್ಕೆ ಅನ್ವಯಿಸಿ ಬರೆಯುತ್ತಾನೆ.

*ಪ್ರಾಸಯತಿ ಗಣ ಗದ್ಯ ಪದ್ಯ ಸ*
*ಮಾಸಯುತ ವಸ್ತುಕದ ಮುಂದೆ ವಿ*
*ಳಾಸಮೇ ಸಾಮಾನ್ಯಮೀ ವರ್ಣಕ ಕವಿತೆಯೆಂದು*
*ಓಸರಿಸದಿರಿ ಬಚ಼ರಿಯ ಕನ್ನಡ*
*ಭಾಷೆಯೆಂದೆನಲಾಗದಿಳೆಗಿದು*
*ಲೇಸೆನಿಪ ವೇದ ಪ್ರಮಾಣವೆನಿಪ್ಪುದೆಂತೆನಲು*
*ಧರೆಯೊಳು ತಡಿಯಾದ ಕೊಳಗದ*
*ಸರಿಯ ಸೊಲ್ಲಿಗೆ ಸಲ್ಲದಿಪ್ಪುದೆ*
*ಪರಿಮಿತಾಕ್ಷರತತಿಯೊಳಪರಿಮಿತಾರ್ಥ ರಚನೆಯಲಿ*
*ವಿರಚಿಸುವುದದು ಕವಿಯ ಚತುರತೆ*[೨]

೧. ತೆಲುಗು ಬಸವ ಪುರಾಣ ೧. ೧೬೫-೧೭೪
೨. ಕನ್ನಡ ಬಸವ ಪುರಾಣ : ೧. ೨೧-೨೨

ಮಾರ್ಗ-ದೇಶಿಗಳೆಂದು ಸೋಮನಾಥ ಕರೆದುದನ್ನು ಭೀಮಕವಿ ವಸ್ತುಕ-ವರ್ಣಕಗಳೆಂದು ಕರೆಯುತ್ತಿದ್ದಾನೆ ಅಷ್ಟೆ. ಹೀಗೆ ಸೋಮನಾಥನ ಜಾಡನ್ನು ಭೀಮಕವಿ ತಪ್ಪದೆ ಅನುಸರಿಸಿದ್ದಾನೆ.

ಸೋಮನಾಥನು ಕಾವ್ಯಪ್ರಾರಂಭವಲ್ಲಿ ಭಕ್ತರನ್ನು ನೆನೆದು ಕಥಾಪ್ರಾರಂಭಕ್ಕೆ ಮುನ್ನ ಬಸವ ಸ್ತುತಿಯನ್ನು ಮಾಡುತ್ತಾನೆ. ಭೀಮಕವಿಯು ಬಹುತೇಕ ಕಡೆ ದ್ವಿಪದಗಳನ್ನು ಕನಿಷ್ಠ ಮಾರ್ಪಡಿಸಿ ಭಾಮಿನಿ ಷಟ್ಪದಿಯಾಗಿಸುತ್ತಾನೆ.

ಬಸವಗೆ ಶರಣೆನ್ನೆ ಪಾಪದ ಕ್ಷಯವು
ಬಸವಗೆ ಶರಣೆನ್ನೆ ಪರಮ ಪಾವನವು
ಬಸವಗೆ ಶರಣೆನ್ನೆ ಪ್ರತ್ಯಕ್ಷ ಸುಖವು
ಬಸವಗೆ ಶರಣೆನ್ನೆ ಭವರೋಗ ನಾಶ
ಬಸವಗೆ ಶರಣೆನ್ನೆ ಭಕ್ತಿವರ್ಧನವು
ಬಸವಗೆ ಶರಣೆನ್ನೆ ಬಂಧಮೋಚನೆಯು
ಬಸವಗೆ ಶರಣೆನ್ನೆ ಭಾಗ್ಯ ಸೇರ್ಪಡೆಯು
ಬಸವಗೆ ಶರಣೆನ್ನೆ ಮೆರೆವುದು ಶೀಲ
ಬಸವಗೆ ಶರಣೆನ್ನೆ ಹರಿವುದಾಪದವು
ಬಸವಗೆ ಶರಣೆನ್ನೆ ಪ್ರಬಲ ಸಂಪದವು
ಬಸವಗೆ ಶರಣೆನ್ನೆ ಅತಿಶಯ ಕೀರ್ತಿ
ಬಸವಗೆ ಶರಣೆನ್ನೆ ಫಲಿಸುವುದಿಚ್ಚೆ
ಬಸವಗೆ ಶರಣೆನ್ನೆಯಹುದು ವಾಕ್ಸಿದ್ಧಿ
ಬಸವಗೆ ಶರಣೆನ್ನೆ ಬುದ್ಧಿ ಭ್ರಾಜಿಪುದು [೧]

ಇದನ್ನೇ ಭೀಮಕವಿಯು ಈ ರೀತಿ ಅನುವಾದಿಸುತ್ತಾನೆ.

ಬಸವ ಶರಣೆನೆ ಪಾಪವಳಿವುಗು
ಬಸವ ಶರಣೆನೆ ತಾಪವಾಱುಗು
ಬಸವ ಶರಣೆನೆ ಪರಮ ಪಾವನ ಭಾತಿ ಸಂಧಿಸುಗು
ಬಸವ ಶರಣೆನೆ ಭಕ್ತಿ ದೊರಕುಗು
ಬಸವ ಶರಣೆನೆ ಸಾಗ್ರ್ಯ ಸುಸ್ಥಿತಿ
ಬಸವ ಶರಣೆನೆ ವಚನ ರಚನಾಸಿದ್ಧಿ ವರ್ಧಿಸುಗು
ಬಸವ ಶರಣೆನೆ ಭವವುಡುಗುವುದು
ಬಸವ ಶರಣೆನೆ ಕೀರ್ತಿಯೆಸೆವುದು

೧. ತೆಲುಗು ಬಸವ ಪುರಾಣ : ೧. ೧೯೬-೨೦೨

*ಬಸವ ಶರಣೆನೆ ದುಃಸ್ಥಿತಿಗಳತ್ತತ್ತಲೋಡುವುವು*
*ಬಸವ ಶರಣೆನೆ ಸೌಖ್ಯಮೊಂದುಗು*
*ಬಸವ ಶರಣೆನೆ ಭಾಗ್ಯವಪ್ಪುಗು*
*ಬಸವ ಶರಣೆನೆ ಕಾಮಿತೋನ್ನತ ಸಿದ್ಧಿಸಿದ್ಧಿಸುಗು* [೧]

ಹೀಗೆ ಭೀಮಕವಿಯ 'ಕನ್ನಡಿಸುವ' ಪ್ರಕ್ರಿಯೆ ಎಂದರೆ ತೆಲುಗು ಮೂಲದ ದ್ವಿಪದಗಳ ಭಾವವನ್ನು ಆದಷ್ಟು ಯಥಾವತ್ತಾಗಿ ಕನ್ನಡದಲ್ಲಿ ಭಾಮಿನಿ ಷಟ್ಪದಿಯ ರೂಪಕ್ಕೆ ತರುವುದು.

ಕೆಲವು ವೇಳೆ ಸೋಮನಾಥನು ಬಳಸುವ, ಪದಸಮುಚ್ಚಯವನ್ನು ತಾನೂ ಅದೇ ರೀತಿಯಲ್ಲಿ ಭೀಮಕವಿ ಉಳಿಸಿಕೊಳ್ಳುತ್ತಾನೆ. ನಾರದನು ಶಿವನನ್ನು ಅವತರಿಸುವಂತೆ ಕೇಳುತ್ತ, ಭಕ್ತಿ ಕಡಿಮೆಯಾಗಿರುವುದರಿಂದ

*"ಅದಕೆ ದೃಷ್ಟಪ್ರತ್ಯಯಂಗಳಿಂದಲೀಗ*
*ಸಂದೇಹಗಳು ತಗ್ಗಿ ಸದ್ಭಕ್ತಿಯುಕ್ತಿ*
*ಸುಸ್ಥಿರವಾಗಿ ಲಿಂಗಸ್ಥಲಜಂಗ*
*ಮಸ್ಥಲ ತತ್ಪ್ರಸಾದಸ್ಥಲಗಳಲಿ*
*ಸಂಪನ್ನರಹ ಜಗಜ್ಜನರೆಲ್ಲ ಭಕ್ತಿ*
*ಸೊಂಪದು ಕೊಳ್ಳಗೆ ಒಳಗಾಗಲೇಕೆ*
*ನೀನೆ ಪ್ರಸನ್ನತೆಯಿಂ ಬಂದು ಲೋಕ*
*ಪಾವನವೆನೆ ಭಕ್ತಿ ಪಾಲಿಸಬೇಕು"* [೨]

ಎಂದು ಪ್ರಾರ್ಥಿಸುತ್ತಾನೆ. ಈ ಭಾಗವನ್ನು ಭೀಮಕವಿ ಹೀಗೆ ಬರೆಯುತ್ತಾನೆ.

*.........ದೃಷ್ಟ ಪ್ರತ್ಯಯಂಗಳಲಿ*
*ಸಂದೆಗಂಗಳನುಳಿದು ಸತತಾ*
*ನಂದಿತಾಮಳ ಭಕ್ತಿಯುಕ್ತಾ*
*ನಂದ ರಸದೊಳಗಾಡುವಂತೆ ಮನುಷ್ಯಲೋಕದಲಿ*
*ಮುಂದೆಯಿದು ಲಿಂಗಸ್ಥಳಂ ತಾ*
*ನೆಂದಿದುವೆ ವರ ಜಂಗಮಸ್ಥಳ*
*ವೆಂದು ತದ್ವಿಮಳ ಪ್ರಸಾದಸ್ಥಳವಿದೆಂದಱುಪಿ*
*ನೀವು ಬಿಜಯಂಗೆಯ್ದು....."* [೩]

೧. ಕನ್ನಡ ಬಸವ ಪುರಾಣ : ಸಂ.೧ ಪ. ೨೫-೨೬
೨. ತೆಲುಗು ಬಸವ ಪುರಾಣ : ಸಂ.೧ ಪ. ೨೯೯-೩೦೭
೩. ಕನ್ನಡ ಬಸವ ಪುರಾಣ : ೧-೫೮-೬೦

'ದೃಷ್ಟಪ್ರತ್ಯಯ' ಎಂಬ ಪದಸಮುಚ್ಚಯವು ಇಲ್ಲಿ ಮುಖ್ಯವೆನ್ನಿಸಿ ಭೀಮಕವಿ ಅದನ್ನು ಹಾಗೆಯೇ ಉಳಿಸಿಕೊಂಡಿದ್ದಾನೆ. ಹಾಗೆಯೇ ಶಿವನು ತನ್ನ ಪರವಾಗಿ ನಂದಿಕೇಶ್ವರನು ಅವತರಿಸುವನೆಂದು ಹೇಳುತ್ತ ತಾನು 'ಭಕ್ತೈಕ ತನು''[೧] ವೆಂದು ಹೇಳುತ್ತಾನೆ. ಅದನ್ನೇ ಭೀಮಕವಿ[೨] ಉಳಿಸಿಕೊಳ್ಳುತ್ತಾನೆ. ಇಂತಹ ಕಡೆಗಳಲ್ಲಿ ತೊಂದರೆಯಿಲ್ಲ. ಆದರೆ ಮೂಲದಲ್ಲಿ ಸಂದಿಗ್ಧವೆನ್ನಿಸಬಹುದಾದ ಪದಸಮುಚ್ಚಯವನ್ನೇ ಕನ್ನಡದಲ್ಲಿಯೂ ಉಳಿಸಿಕೊಳ್ಳುವುದರಿಂದ ಸಂದಿಗ್ಧತೆಯೂ ಉಳಿದೇ ಬಿಡಬಹುದು. ನಂದಿಕೇಶ್ವರನು ಶಿವನ ಆಜ್ಞೆಗನುಗುಣವಾಗಿ ಮಾದಾಂಬೆಯ ಮಗನಾಗಿ ಹುಟ್ಟುವ ಸನ್ನಿವೇಶ ಸೋಮನಾಥನಲ್ಲಿ ಹೀಗಿದೆ :

*ಪ್ರೀತಿಯ ಮಗನು ಮುಗಿದ ಕೈಗಳೊಡನೆ*
*ಆ ತಾಯಗರ್ಭದಿನಂದುದಯಿಸಿದ*
*ನರ್ಧೋದಯದೊಳಗೆ ಆತನಲಿದ್ದ*
*ಅರ್ಧೇಂದುಮೌಳಿ ಗುಪ್ತಾಕೃತಿ ತಳೆದು*
*ಅಂಗದ ಮೇಲೆಲ್ಲ ಕಡುಸಾಂಗವಾಗಿ*
*ಲಿಂಗಸಾಹಿತ್ಯದ ಲೀಲೆಯಿಂಗೈದ*[೩]



ಭೀಮಕವಿಯೂ ಈ ಭಾಗವನ್ನು ಈ ರೀತಿಯಲ್ಲಿ ಅನುವಾದಿಸುತ್ತಾನೆ.

*ಪ್ರೀತಿಯಲಿ ಪುತ್ರನು ಕರಾಂಭೋ*
*ಜಾತಮುಕುಳಿತನಾಗಿ ಮೆಲ್ಲನೆ*
*ಮಾತೆಯುದರದೊಳುದಯಿಸಲು ಅರ್ಧೋದಯದೊಳಾಗ*
*ಆ ತನಯನೊಳಗಿಹ ಶಿವಂ ವಿ*
*ಖ್ಯಾತಗುರುವಾಕಾರಮಂ ತಾ*
*ಳ್ದಾತನಂಗದ ಮೇಲೆ ಲಿಂಗಾಸಂಗಮಂ ಮಾಡಿ*[೪]

ನಂದಿಕೇಶ್ವರನು ಬಸವಣ್ಣನಾಗಿ 'ಅರ್ಧೋದಯ'ದಲ್ಲಿ ಉದಯಿಸಿದನೆಂಬ ಭಾಗವನ್ನು ಅರ್ಧೋದಯವೆಂದೇ ಭೀಮಕವಿ ಉಳಿಸಿಕೊಂಡಿದ್ದಾನೆ. ಈ ಪದವು ಬಸವಣ್ಣನ ಜನನದ ಮುಹೂರ್ತವನ್ನು ಸೂಚಿಸುತ್ತದೆಂದು ಭಾವಿಸುವ ತೆಲುಗು ವಿದ್ವಾಂಸರೊಬ್ಬರು ಈ ಪದವು ಜ್ಯೋತಿಷ್ಯದಲ್ಲಿ ವಿಶಿಷ್ಟ ಮುಹೂರ್ತವನ್ನು ಹೇಳುತ್ತದೆಂದು ವಾದಿಸಿ, ಆ ಪ್ರಕಾರ ಬಸವಣ್ಣನ ಜನನವು "ಸಿದ್ಧಾರ್ಥಿನಾಮ ಸಂವತ್ಸರ ಪುಷ್ಯ ಬಹುಳ ಅಮಾವಾಸ್ಯೆ ಭಾನುವಾರ

---

೧. ತೆಲುಗು ಬಸವ ಪುರಾಣ : ೧-೩೨೭

೨. ಕನ್ನಡ ಬಸವ ಪುರಾಣ : ೧-೬೨

೩. ತೆಲುಗು ಬಸವ ಪುರಾಣ : ೧-೭೫೭-೬೨

೪. ಕನ್ನಡ ಬಸವಪುರಾಣ ಸಂ. ೩ - ೨೪

ಶ್ರವಣನಕ್ಷತ್ರದಲ್ಲಿ ಹಗಲು ೯ ಗಂಟೆಗೆ, ಇಂಗ್ಲಿಷ್ ತಾರೀಖು ೨೧.೧.೧೧೪೦ ಕ್ಕೆ ಸರಿಯಾಗಿ” ಆಯಿತೆಂದು ತೀರ್ಮಾನಿಸುತ್ತಾರೆ[೧] ಮತ್ತೊಬ್ಬ ವಿದ್ವಾಂಸರು[೨] ಇವನ್ನು ಅಲ್ಲಗಳೆದು ಅರವತ್ತನಾಲ್ಕು ಶೀಲಗಳನ್ನು ಆಚರಿಸಿದ ಸೋಮನಾಥನು ತಿಥಿವಾರ ನಕ್ಷತ್ರಗಳ ಲೆಕ್ಕಹಾಕಲಾರನೆಂದು ವಾದಿಸಿ, ‘‘ಬಸವಣ್ಣನ ಹೃದಯದಲ್ಲೇ ಇದ್ದ ಶಿವನು ಗುಪ್ತಾಕೃತಿಯನ್ನು ಧರಿಸಿ ಲಿಂಗಸಾಹಿತ್ಯವನ್ನು ಮಾಡುವುದು ಅರ್ಧೋದಯದಲ್ಲಿಯೇ ಸಾಧ್ಯ” ಎಂದು ಹೇಳುತ್ತಾರೆ. ಈ ವಿಚಾರವನ್ನು ಇಲ್ಲಿ ಚರ್ಚಿಸಿದ ಉದ್ದೇಶವೆಂದರೆ, ಭೀಮಕವಿಯು ಈ ಪದವನ್ನು ವ್ಯಾಖ್ಯಾನಿಸಿ ಅನುವಾದಿಸಿದ್ದರೆ, ಕನಿಷ್ಠಪಕ್ಷ ಬಸವಣ್ಣನ ಜನನದ ಬಗ್ಗೆ, ಅವನ ಕಾಲದಲ್ಲಿದ್ದ ಜನರ ನಂಬಿಕೆಯನ್ನು ತಿಳಿಯಲು ನಮಗೆ ಸಾಧ್ಯವಾಗುತ್ತಿತ್ತು. ಆದರೆ ಆತನಿಗೆ ಪ್ರೇರಣೆ ನೀಡುವವನು ಸೋಮನಾಥನೇ ಆದ್ದರಿಂದ ಏನನ್ನೂ ಬದಲಾಯಿಸಲಾರ.

ಪದಸಮುಚ್ಚಯಗಳಂತೆಯೇ ಸೋಮನಾಥನು ಉಲ್ಲೇಖಿಸುವ ಸಂಸ್ಕೃತೋಕ್ತಿಗಳನ್ನು ಆದಷ್ಟು ಮೂಲರೂಪದಲ್ಲಿಯೇ ಭೀಮಕವಿ ಉಳಿಸಿಕೊಳ್ಳುತ್ತಾನೆ. ‘ಕಪಯಂ ಕಿಂ ನಪಶ್ಯಂತಿ’, ‘ಏಕ ವವ ರುದ್ರೋ’, ‘ಅಣೋರಣೀಯಾನ್’[೩] ಮುಂತಾಗಿ ಹತ್ತಾರು ಉಕ್ತಿಗಳನ್ನು ಭೀಮಕವಿ ಹಾಗೆಯೇ ಅಳವಡಿಸಿಕೊಂಡು ಉಳಿದಂತೆ ಅನುವಾದ ಮಾಡುತ್ತಾನೆ. ಕೆಲವು ವೇಳೆ ತನ್ನ ರಚನೆಗೆ ಆವಶ್ಯಕವಾದಾಗ ಆ ಮಾತುಗಳನ್ನು ಅನುವಾದ ಮಾಡುತ್ತಾನೆ.

*‘‘ಭ್ರಾಂತಿ ಸಂಸರ್ಗಜಾಃ ಪಾಪಗುಣಭ*
*ವಂತಿ’ಯೆಂಬ ನುಡಿಯಾಯಿತು ವಸುಧೆಯಲಿ (IV-೧೬೯೦)*

ಎಂಬ ಸಾಲುಗಳನ್ನು ಭೀಮಕವಿಯು

*ವಿದಿತವಲ್ಲಾ ನಿನ್ನ ಸಂಸ*
*ರ್ಗದೊಳೆಮಗೆ ತಾಂ ದೋಷಗುಣವಾ*
*ದುದುಮದಲ್ಲದೆ.... (೨೫-೬೩)*

ಎಂದು ಅನುವಾದ ಮಾಡುತ್ತಾನೆ.

ಭಾವನೆಗಳನ್ನು ಭೀಮಕವಿ ಚಾಚು ತಪ್ಪದೆ ಸೋಮನಾಥನ ಜಾಡು ಹಿಡಿದೇ ಅನುವಾದ ಮಾಡುತ್ತಾನೆ. ತನ್ನ ಉಪನಯನದ ಮಾತು ಬಂದಾಗ ಬಸವಣ್ಣನು ತನ್ನ ತಂದೆಯೊಡನೆ

---

೧. ಬಾಡಾಲ ರಾಮಯ್ಯ : ಬಸವೇಶ್ವರ ವಚನಾಲು ಸಮಗ್ರ ಸಮೀಕ್ಷೆ : ಪು-೬೨

೨. ಗಾಜುಲ ವೀರಯ್ಯ : ಬಸವಪುರಾಣ ಬಸವರಾಜದೇವರ ರಗಳೆಗಳಲ್ಲಿರುವ ಸಾಮ್ಯ ವ್ಯತ್ಯಾಸಗಳು - (ಸಾಧನೆ ೬-೨ : ಪು. ೩೮-೩೯)

೩. ಕ್ರಮವಾಗಿ ತೆಲುಗು ಬಸವ ಪುರಾಣ I-೨೬೦, vi. ೬೪೧, vi.೭೨೫ ಕನ್ನಡ ಬಸವ ಪುರಾಣ ೧-೩೭, ೫೦-೧೪, ೫೦-೩೧

ವಾದಿಸುತ್ತ ಶಿವಭಕ್ತಿ ಮಾರ್ಗದ ಸ್ವರೂಪವನ್ನು ವಿವರಿಸುವ ಮಾತುಗಳು ಸೋಮನಾಥನಲ್ಲಿ ಹೀಗೆ ಬಂದಿವೆ.

ಅಲ್ಲದೆ ಷಡ್ದರ್ಶನಾತೀತವಾದ

*ಮದನಾರಿ ಸದ್ಭಕ್ತಿಮಾರ್ಗವ ಕೇಳು*
*ಶ್ರುತಿ 'ವಿಶ್ವತಶ್ಚಕ್ಷು ಖುತ' ವೆಂದು ಹೊಗಳೆ*
*ಸ್ತುತಿಯ ಮೀರಿದ ಅತಿಸೂಕ್ಷ್ಮದ ರೂಪ*
*ಆದಿಗೆ ಆದಿ ನಿತ್ಯಾನಂದಮೂರ್ತಿ*
*ಶ್ರೀ ದಿವ್ಯಮೂರ್ತಿಯು ತಾನೆ ಸುದೈವ*
*ಇಂತಹೀಶ್ವರನನಾತ್ಮದಿ ಹೊಂದಿ ಕರದಿ*
*ಹಿಡಿದಿರುವಂತಹ ಪೃಥುದಯಾಮೂರ್ತಿ*
*ಪ್ರಕಟಿಸೆ 'ನಗುರೋರಧಿಕ'ವೆನೆ ಮೆರೆವ*
*ಸಕಲಸ್ವರೂಪ ಮತ್ಸಮಯ ಸದ್ಗುರುವು*
*ಮಂತ್ರಕೆಲ್ಲಕು, ರಾಜಮಂತ್ರವಾಗಿರುವ*
*ಮಂತ್ರವು ತಾನದಕಾ ಷಡಕ್ಷರಿಯು*
*ಭವದೂರವಹ ಜಟಾಭಸಿತರುದ್ರಾಕ್ಷ*
*ಸವಿಶೇಷಮೋಕ್ಷಾನುಸಾರಿ ವೇಷವದು* [೧]

ಇವನ್ನು ತನ್ನ ಷಟ್ಪದಿಗಳಲ್ಲಿ ಭೀಮಕವಿ ಹೀಗೆ ಅನುವಾದಿಸುತ್ತಾನೆ :

*ಇತ್ತ ಕೇಳ್ ಷಡುದರ್ಶನಾತೀ*
*ತೋತ್ತಮದ ಶಿವಭಕ್ತಿಮಾರ್ಗಾ*
*ಯತ್ತವಂ ಶ್ರುತಿ ವಿಶ್ವತಃಚಕ್ಷುರುತವೆಂದೆನುತ*
*ಒತ್ತಿ ಪೊಗಳುವ ನಿಗಮತತಿಗ*
*ಋಮೀತ್ತತ್ತವ ಸೂಕ್ಷ್ಮರೂಪಮ*
*ಪತ್ತರಂ ತಾನಾದಿಗಾದಿಯೆನಿಪ ಪರಂಜ್ಯೋತಿ*
*ಇಂತೆಸೆವ ಶಿವನೆಮಗೆ ದೈವವ*
*ನಂತಮಹಿಮನನೆಮ್ಮ ಚಿತ್ತಾ*
*ಭ್ಯಂತರದೊಳೊಂದಿಸಿ ಕಲಸ್ಥಲದಿಂ ಪಿಡಿಸಲಾಪ*
*ಸಂತತಾಮಳ ಕೀರ್ತಿ ಕರುಣಾ*

೧. ತೆಲುಗು ಬಸವಪುರಾಣ : I-೯೪೯-೯೬೨

ವಂತಮೂರ್ತಿ ಪ್ರಕಟಿಸುವಡ
ತ್ಯಂತ ತೇಜೋವರ್ತಿ ತಾಂ ಮತ್ ಸಮಯಸದ್ಗುರುವು
ಮೂಜಗಕೆ ರುದ್ರಾಕ್ಷಿ ಸಿತರ
ಕ್ಷಾ ಜಟಾವಳಿ ನಿತ್ಯ ಮುಕ್ತಿಗೆ
ನೈಜವಪ್ಪನುಸಾರಿವೇಷವು ಭವನಿವಾರಣವು
ಯೋಜಿಸಲು ಮಾತ್ರಂಗಳಿಗೆ ಮಿಗೆ
ರಾಜಮಂತ್ರವಿದೆಂದೆನಿಸಿ ವಿ
ಭ್ರಾಜಿಸುವವೀ ಮಂತ್ರವಿದಕೆ ಷಡಂಗವೆನಲಿಹುದು [೧]

ಇಲ್ಲಿ ಕಾಣುವ ಅನುವಾದ ರೀತಿಯೆಂದರೆ ಮೂಲದ ಭಾವವನ್ನು ಹಿಡಿದು ಕ್ರಮವನ್ನೂ ಆದಷ್ಟು ಅನುಸರಿಸಿ, ಮುಖ್ಯವಿಷಯಗಳನ್ನು ಬಿಡದೆ, ಅತ್ಯಂತ ಮುಖ್ಯ ಪದಸಮುಚ್ಚಯವನ್ನು ಯಥಾರೀತಿ ಇರಿಸಿಕೊಂಡು ದ್ವಿಪದವನ್ನು ಭಾಮಿನಿ ಷಟ್ಪದಿಯಾಗಿಸುವುದು. ಭೀಮಕವಿಯು ಸಮರ್ಥ ಷಟ್ಪದಿಕಾರನಾದದ್ದರಿಂದಲೂ ಕನ್ನಡದ ದೇಸಿಹಸ್ತಗತವಾಗಿರುವುದರಿಂದಲೂ, ತೆಲುಗಿನಲ್ಲಿರುವ ರಚನೆಯ ಅರ್ಥಕ್ಕೆ ಕುಂದುತಾರದಂತೆ ಸುಲಲಿತವಾಗಿ ಅನುವಾದಿಸುತ್ತಾನೆ. ಅವನು ವಹಿಸುವ ಸ್ವಾತಂತ್ರ್ಯ ಕೆಲವೇಳೆ ಸಣ್ಣಪುಟ್ಟ ವಿವರಗಳಿಗೆ ಸೀಮಿತವಾದಂತಹುದೇ ಹೊರತು ವಿಷಯಕ್ಕೆ ಸಂಬಂಧಿಸಿದಂತೆ ಅಲ್ಲ.

ಬಸವಣ್ಣನು ವಿಷಾರೋಗಣೆ ಮಾಡುವ ಪವಾಡವನ್ನು ವರ್ಣಿಸುವಾಗ ಮೂಲದಲ್ಲಿ ಬಂದ ವಿಷದ ವರ್ಣನೆ ಹೀಗಿದೆ.

ಶಿವನ ಮೂರನೆ ಕಣ್ಣ ರೌದ್ರಾಗ್ನಿಯಂತೆ
ಭುಗಿಭುಗಿಲ್ಲನೆ ಕುದಿಯೆ ಕೆಂಬೊಗೆಯು
ನೆಗೆಯೆ ವಿಷಾನಿಲ ಗಗನವ ಕವಿಯೆ
ಪಟುವಹ್ನಿಯನು ಕೊಂಡು ಕೆಟ್ಟೋಡೆ ಭಾನು
ವಲ್ಲಲ್ಲಿ ಬಿದ್ದವೀರೇಳು ಲೋಕಗಳು [೨]

ಈ ಸಾಲುಗಳನ್ನು ಭೀಮಕವಿ ಎಷ್ಟು ಅಚ್ಚುಕಟ್ಟಾಗಿ ಷಟ್ಪದಿಯ ರೂಪಕ್ಕೆ ಮಾರ್ಪಡಿಸುತ್ತಾನೆಂಬುದನ್ನು ನೋಡಿ.

ನಿಟಿಲನಯನನ ಮೂಱನೆಯ ವಿ
ಸ್ಫುಟತರಾಂಬಕ ಪಾವಕನವೊಲು

೧. ಕನ್ನಡ ಬಸವ ಪುರಾಣ : ೩, ೬೬-೬೮
೨. ತೆಲುಗು ಬಸವ ಪುರಾಣ : VII-೧೨೨೬-೩೦

ಛಿಟಿಛಿಟಿಲು ಭುಗಿಭುಗಿಲೆನುತ ಕೆಂಬೊಗೆ ನೆಗೆವುತಿರಲು
ಚಟುಲ ವಿಷಮ ವಿಷೋಗ್ರಕೀಲಾ
ಪಟಲವಂಬರವಂ ಮುಸುಕಲಾ
ಪಟುದಹನಮಂ ಕಂಡು ಕೆಟ್ಟೋಡಿದನಹಸ್ಕರನು
ಲೋಕವಾಚಿಕ್ಕತ್ತಲಿತ್ತ
ವ್ಯಾಕುಳಿತವಾಯಿತ್ತು......[೧]

ಭಾಮಿನಿಯನ್ನು ಬಂಧಿಸುವ ಲಯ ದ್ವಿತೀಯಪ್ರಾಸ ಇತ್ಯಾದಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಭೀಮಕವಿಯು ಮಾಡಿಕೊಳ್ಳುವ ವ್ಯತ್ಯಾಸವನ್ನು ಸ್ವಾತಂತ್ರ್ಯವೆಂದು ಕರೆಯಲಾಗುವುದಿಲ್ಲ. ಒಂದು ಭಾಷೆಯ ಒಂದು ಛಂದೋಗತಿಯಿಂದ ಮತ್ತೊಂದು ಭಾಷೆಯ ಮತ್ತೊಂದು ಛಂದೋಗತಿಯಲ್ಲಿ ಮೈತಳೆಯುವಾಗಿನ ಅನಿವಾರ್ಯ ರೂಪವ್ಯತ್ಯಾಸವೆಂದು ಮಾತ್ರ ಹೇಳಬಹುದು.

ಬಸವಣ್ಣನು ಕೂಡಲಸಂಗಮನಲ್ಲಿ ಐಕ್ಯವಾದ ರೀತಿಯನ್ನು ಪಾಲ್ಕುರಿಕೆ ಸೋಮನಾಥನು ಹೃದಯಸ್ಪಂದಿಯಾಗಿ ವರ್ಣಿಸುತ್ತಾನೆ. ಅದು ಹೀಗಿದೆ.

ಗಾಳಿಯಿಂದಲೆ ಸುಳಿಗಾಳಿ ತಾ ಹುಟ್ಟಿ
ಗಾಳಿಯಲ್ಲಿಯೆ ಮತ್ತೆ ಬೆರೆಯುವ ರೀತಿ,
ಶರಧಿಯಲಲೆಗಳು ಜನಿಯಿಸಿ ಮತ್ತೆ
ಶರನಿಧಿಯಲ್ಲಿಯೆ ಸವೆಯುವ ರೀತಿ,
ಯುಡುವೀಧಿಯಲ್ಲಿ ವಿದ್ಯುಲ್ಲತೆ ಹುಟ್ಟಿ
ಯುಡುವೀಧಿಯಲ್ಲೆ ತಾನಡಗುವ ರೀತಿ
ನೀರಿನಲ್ಲಿಯೆ ವರ್ಷಾಫಲಗಳು ಹುಟ್ಟಿ
ನೀರಿನಲ್ಲಿಯೆ ತಾವು ಸವೆಯುವ ರೀತಿ
ಸದ್ಗುರು ಕಾರುಣ್ಯ ಸಂಗದಿ ಹುಟ್ಟಿ
ಸದ್ಗುರು ಕಾರುಣ್ಯ ಸಂಪದವಲರೆ
ಸದ್ಗುರು ಗರ್ಭವಿಶ್ರಾಂತಿಯಲಿಂದು
ತದ್ಗತದಲಿ ಲಿಂಗತತ್ವತಾನಾದ
ನಂತುಮಲ್ಲದಲೆ ಗುರ್ವಂಘ್ರಿಯುಗಳವ
ಮುಟ್ಟಿಯೋಲೈಸುತಿರುವ ಭಕ್ತಾಳಿಗಳ

೧. ಕನ್ನಡ ಬಸವ ಪುರಾಣ : ೫೭, ೫೯-೬೦

*ಹೃದಯಾಂಬುಜಗಳಲಿ ಬಸವಯ್ಯನೀಗ*
*ಕದಲದೆ ಹೂವು ಕಂಪುಗಳನ್ನು ಹೋಲಿ*
*ಬೆರೆತಿರುತಿಹನಲ್ಲದೇ ಬೇರೆಯುಂಟೆ ?*[೧]

ಭೀಮಕವಿಯ ಷಟ್ಪದಿಗಳ ಓಘ ಈ ಭಾಗವನ್ನು ಹೀಗೆ ತೇಲಿಸಿಕೊಂಡು ಹೋಗುತ್ತದೆ.

*ಗಾಳಿಯೊಳು ಸುಳಿಗಾಳಿಯೊಗೆದಾ*
*ಗಾಳಿಯೊಳು ತಾ ಮತ್ತೆ ಬೆರಸಿದ*
*ವೋಲುದಧಿಯೊಳು ನೊರೆಗಳೊಗೆದುದಧಿಯೊಳಡಗಿದಂತೆ*
*ಮೇಲೆ ನಭದೊಳೆಸೆದು ತಟಿಲ್ಲತೆ*
*ಮೇಲೆ ನಭದೊಳೆ ಹೊಳೆದಡಂಗಿದ*
*ವೋಲುದಕದಿಂದಾಲಿಕಲ್ಲೊಗೆದಲ್ಲಡಗಿದಂತೆ*
*ಗುರುದಯಾ ಸಂಗತಿಯೊಳುದಯಿಸಿ*
*ಗುರುದಯಾಸಂಪದದಿ ವರ್ಧಿಸಿ*
*ಗುರುಜಹರ ವಿಶ್ರಾಂತಿಯಲಿ ತದ್ಗುರುವೆ ತಾನಾಗಿ*
*ಬೆರಸಿದನು ಶಿವಲಿಂಗತತ್ವದೊ*
*ಳರರೆ ಈಗಳಹಂಗೆಯೆಲ್ಲಾ*
*ಗುರುಚರಣವಂ ಭಜಿಪ ಭಕ್ತರ ಚಿತ್ತಪದ್ಮದಲಿ*

*ಬಸವರಾಜನು ತೊಲಗದಾಗಳು*
*ಕುಸುಮಪರಿಮಳವೆಹಗೆ ಸಂ*
*ಧಿಸಿದ ಹಂಗಿರ್ದಹನದಲ್ಲದೆ ಬಳಿಕ ಗತಿಯುಂಟೆ*[೨]

ಪಾಲ್ಕುರಿಕೆ ಸೋಮನಾಥನು ಬಸವಣ್ಣನ ವಚನಗಳನ್ನು ಚೆನ್ನಾಗಿ ಹಸ್ತಗತ ಮಾಡಿಕೊಂಡಿದ್ದಿರಬೇಕು. ತನ್ನ ಕಾಲಕ್ಕೆ ಪ್ರಚಲಿತವಿದ್ದ ಬಸವಣ್ಣನ ಬಗೆಗಿನ ಕತೆಗಳ ಜೊತೆಗೆ, ಆತನ ವಚನಗಳ ಮೂಲಕ ಅವನ ವ್ಯಕ್ತಿತ್ವ ಗ್ರಹಣವನ್ನು ಆತ ಮಾಡುತ್ತಾನೆ (ಹರಿಹರನೂ ಇದೇ ರೀತಿ ಮಾಡಿದವನೇ). ಹಾಗಾಗಿ ತನ್ನ ನಿರೂಪಣೆಯಲ್ಲಿ ಕವಿ ಬಸವಣ್ಣನ ವಚನಗಳ ಮಾತು, ಧಾಟಿ, ಭಾವವನ್ನು ಬಳಸಿಕೊಂಡಿರುವುದನ್ನು ಕಾಣಬಹುದು. ಇಂತಹ ಕತೆಗಳಲ್ಲಿ ಅನುವಾದ ಮಾಡುವಾಗ ಭೀಮಕವಿಗೆ ಒಂದು ಅನುಕೂಲವುಂಟು. ಬಸವನ ಭಾವಗಳನ್ನು ಸೋಮನಾಥ ತೆಲುಗಿನಲ್ಲಿ ಹೇಳಬೇಕು. ಆದರೆ ಭೀಮಕವಿ ಕಾವ್ಯವನ್ನು ಕನ್ನಡಿಸುವಾಗ

೧. ತೆಲುಗು ಬಸವ ಪುರಾಣ : VII-೨೦೦೯-೨೦೨೬
೨. ಕನ್ನಡ ಬಸವ ಪುರಾಣ : ೬೦. ೬೬-೬೮

ಕನ್ನಡದ ಮೂಲವಚನಗಳಿಗೆ ಹತ್ತಿರವಾಗಬಹುದು. ನಾವು ಇಲ್ಲಿ ಅಂತಹ ಕೆಲವು ಉದಾಹರಣೆಗಳನ್ನು ಒಂದರ ಜೊತೆಯೊಂದನ್ನಿಟ್ಟು ನೋಡಬಹುದು.

*(ಅ) (i) ಮಾವಿನ ಬೀಜವ ಮಹಿಯಲಿ ಬಿತ್ತೆ*
*ಬೆವಹುದೆ ಹೆಚ್ಚು ಕಥೆಗಳವೇಕೆ (ತೆ.ಬ.ವ. I. ೯೯೧-೨)*

*(ii) ಇಳೆಗೆ ಮಾವಿನ ಬೀಜಮಂ ಬಿ*
*ತ್ತಲದು ತಾಂ ಬೇವಹುದೆ ಬಹುಕಥೆ*
*ಗಳನುಸುರಲೇಂ.... (ಕ.ಬ.ಪು.೩.೭೫)*

*(iii) ವ್ಯತ್ಯಸ್ತರೂಪದಲ್ಲಿ ಬಸವಣ್ಣನ ವಚನ*
*ಬೇವಿನ ಬೀಜವ ಬಿತ್ತಿ, ಬೆಲ್ಲದ ಕಟ್ಟೆಯ ಕಟ್ಟಿ*
*ಆಕಳ ಹಾಲನೆರೆದು ಜೇನುತುಪ್ಪವ ಹೊಯ್ದಡೆ*
*ಸಿಹಿಯಾಗಬಲ್ಲುದೆ ಕಹಿಯಾಗಲೊಲ್ಲದೆ ? (ವ.೬೨೫)*[1]

*(ಆ) (i) ಮನುಜೇಶ, ಬಡಗಿಯ ಮಾಚಲದೇವಿ*
*ಯನ್ನು ಉತ್ತಮ ವಂಶ್ಯೆ ಮಾಡುವುವೆನುತ*
*ಸ್ವರ್ಣಧೇನುವಿನಲ್ಲಿ ಸತಿಯನಿರಿಸುತ*
*ನಿರ್ನಿಮಿತ್ತವೆ ಹಾಲು ತುಂಬಲು ಹಾಕಿ*
*ಆ ಹೋಯ್ತು ಪೂರ್ವಾಶ್ರಯವೆನುತ.... (ತೆ.ಬ.ವ.VII.೫೭-೬೧)*

*(ii) ಭೂವರನೆ ಕೇಳ್ ಬಡಗಿ ಮಾಚಲ*
*ದೇವಿಯಂ ಕ್ಷತ್ರಿಯ ಕುಲೀನೆಯ*
*ನೋವಿ ಮಾಡಿಹೆವೆಂದು ವಿಪ್ರರು ಸ್ವರ್ಣಧೇನುವನು*
*ತಾವು ಮಾಡಿಸಿ ಆ ಪಶುವಿನೊಳ*
*ಗಾ ವನಿತೆಯಂ ಪೊಗಿಸಿ ಅದಱಲಿ*
*ತೀವಿ ಹೊನ್ನಂ ಹೊಯ್ಸಿ ಹರುಷಂ ಮಿಕ್ಕಿ ನಲಿವುತ್ತ (ಕ.ಬ.ಪು.೫೪.೧೪)*

*(iii) ಬಡಗಿ ಮಾಚಲದೇವಿಯ ಕುಲಜೆಯ ಮಾಡಿಹೆವೆಂದು*
*ಹೊನ್ನ ಕಪಿಲೆಯ ರಾವಣಶಾಖದ ಉಚ್ಚಿಷ್ಟದ ಹಾಲಿನಿಂದ*
*ಕೂಳನಟ್ಟುಂಬುವರನೇನೆಂಬೆ (ವ. ೫೮೨)*

---

೧. ಇಲ್ಲಿ ಕೊಟ್ಟಿರುವ ವಚನ ಸಂಖ್ಯೆಗಳು ಕರ್ನಾಟಕ ವಿಶ್ವವಿದ್ಯಾಲಯದ ಆರ್.ಸಿ.ಹಿರೇಮಠದಿಂದ ಸಂಪಾದಿತವಾದ ಸಂಕಲನಕ್ಕೆ ಸಂಬಂಧಿಸಿದ್ದು.

(ಇ) (i) ಚನ್ನಯ್ಯನೇ ತಾತ ಚೇರಮ ತಂದೆ
ಚಿಕ್ಕಪ್ಪ ಕಕ್ಕಯ್ಯ ಮಗನು ನಾನೆಂದು (ತೆ.ಬ.ಪು. I.೧೦೧೯-೨೦)

(ii) ಅಯ್ಯನಯ್ಯನು ಚೆನ್ನಯಂ ಚಿ
ಕ್ಕಯ್ಯ ಕಕ್ಕಯನು ತೆಲುಗ ಜೊ
ಮ್ಮಯ್ಯನಯ್ಯನು ನಿಂಬಿ ತಾಯ್ ಚೇರಮನ ಮಗ ನಾನು (ಕ.ಬ.ಪು.೩-೮೨)

(iii) ಹಿರಿಯಯ್ಯ ಶ್ವಪಚಯ್ಯಾ, ಕಿರಿಯಯ್ಯ ಡೋಹರ ಕಕ್ಕಯ್ಯ
ಅಯ್ಯಗಳಯ್ಯನು ನಮ್ಮ ಮಾದಾರ ಚನ್ನಯ್ಯ (ವ.೩೫೦)

(ಈ) (i) ಬೋಯಿತಿಗಲ್ಲವೆ ಹುಟ್ಟಿದ ವ್ಯಾಸ
ಪೂರ್ವದ್ವಿಜಾಚಾರ್ಯನಿಳೆಗೆ ವಸಿಷ್ಠ
ಸೂಳೆಯೂರ್ವಶಿಗುದಯಿಸಲಿಲ್ಲವೇನು ?
ಮಾತಂಗನೆನ್ನುವ ಬ್ರಹ್ಮರ್ಷಿಯೊಬ್ಬ
ಮಾತಂಗಿಗಲ್ಲವೇನುದ್ಭವಿಸಿದುದು (ತೆ.ಬ.ಪು. VII-೮೯೦-೪)

(ii) ಇಳೆಯೊಳೀ ಭೂಸುರರ ಗುರು ಕ
ಬ್ಬಲಿಗನಲ್ಲಾ ವ್ಯಾಸನೊಗೆದನು
ಕುಲಜರೆಲ್ಲರೊಳಗ್ರಜನ್ಮನು ಋಷಿ ವಸಿಷ್ಠನಲಾ
ತೊಳಸಲೇನೂರ್ವಸಿಗೆ ಜನಿಸಿದ
ಅಲಘು ಮುನಿ ಮಾತಂಗನೆಂಬ
ಗ್ಗಳೆಯನುದ್ಭವಿಸಿದನಲಾ ಮಾತಂಗಿಯುದರದಲಿ (ತೆ.ಬ.ಪು.೫೬-೭೨)

(iii) ವ್ಯಾಸ ಬೋಯಿತಿಯ ಮಗ, ಮಾರ್ಕಂಡೇಯ ಮಾತಂಗಿಯ ಮಗ
ಸಾಕ್ಷಾತ್ ಅಗಸ್ತ್ಯ ಕಬ್ಬಿಲ, ದೂರ್ವಾಸ ಮಚ್ಚಿಗ (ವ.೫೮೩)

(ಉ) (i) ಇಷ್ಟೆಲ್ಲ ಹೇಳಲೇತಕೆ ತಾನು ಕೊಂದು
ಜನ್ನಿಕೊಂದಿತು ಎಂಬ ದುರ್ಜಾತರೊಡವೆ
ಪ್ರತಿಮಾತನಾಡಲು ಪಾಪವೊಂದುವುದು (ತೆ.ಬ.ಪು.VII-೯೨೩-೫)

(ii) ಆನು ಕೊಲ್ಲೆನು ನೇಣುಕೊಂದಿತು
ತಾನೆನುತ್ತಿಹ ಪಾರ್ಬರೊಡನಾ
ಸ್ಥಾನದೊಳ್ ಪ್ರತಿನಿಂದು ನುಡಿದಡೆ ದೋಷವೊಂದುವುದು (ಕ.ಬ.ಪು.
V,೫೬-೭೯)

*(iii) ನಾನು ಕೊಲ್ಲೆ, ನೇಣು ಕೊಂದಿತ್ತೆಂಬ ಸೂನೆಗಾಱರನೇನೆಂಬೆ*
*ಕೂಡಲಸಂಗಮದೇವಾ (ವ.೫೭೧)*

*(ಊ) (i) ಅಡರುವ ವೇದ ಭಾರಾಕ್ರಾಂತರಾದ*
*ಕೀಳಾದ ಬ್ರಾಹ್ಮಣ ಗಾರ್ದಭರೊಡನೆ (ತೆ.ಬ.ಪ್ರ.vii ೯೦೯-೧೦)*

*(ii) ವೇದ ಭಾರಾಕ್ರಾಂತರೆನಲಿಹ*
*ಮೇದಿನೀಸುರ ಗಾರ್ದಭಾಧಮ*
*ರಾದವಂದಿರ ಕೊಡೆ..... (ಕ.ಬ.ಪು.೫೬-೭೭)*

*(iii) ಇದು ಕಾರಣ, ಕೂಡಲಸಂಗಮದೇವಾ*
*ವೇದಭಾರಭರಾಕ್ರಾಂತಾ ಬ್ರಾಹ್ಮಣಾಃ ಗಾರ್ದಭಾಃ ಎಂಬೆನು (ವ.೫೮೬)* [1]

ಹೀಗೆ ಭೀಮಕವಿಯು ಭಯಭಕ್ತಿಗಳಿಂದ ಪಾಲ್ಕುರಿಕೆ ಸೋಮನಾಥನನ್ನು ಅನುಸರಿಸಿದ್ದರೂ ಕನ್ನಡ ಬಸವಪುರಾಣದಲ್ಲಿ ಕೆಲವು ವ್ಯತ್ಯಾಸಗಳಿವೆ. ತಮಿಳಿನವರಾದ ಪುರಾತನರ ಹೆಸರುಗಳನ್ನು ಹರಿಹರನು ಹಲವೆಡೆ ಮಾರ್ಪಡಿಸಿಕೊಂಡಿರುವಂತೆಯೇ ತೆಲುಗಿನ ಬಸವ ಪುರಾಣದಲ್ಲಿ ಬರುವ ಹೆಸರುಗಳು ಕೆಲವೊಮ್ಮೆ ಕೊಂಚ ವ್ಯತ್ಯಾಸಗೊಂಡು ಕನ್ನಡದಲ್ಲಿ ಬಂದಿವೆ. ಇರುವದಾಂಡಾರಿ - ಇಜೆ ಭಕ್ತ - ಬಾಹೂರ ಬ್ರಹ್ಮಯ್ಯ - ಬೊಮ್ಮಯ್ಯ, ನರಸಿಂಗನಯನಾರ - ನರಸಿಂಗಮೊನೆಯಾರ - ಮಿಂಡನೈನಾರ - ಮೆಱೆಮಿಂಡನಾರ - ಅರಿವಾಳು ನಾಯನಾರ - ಅರಿವಾಳು ತಾಂಡಿ - ಇರುವದಾಂಡಾರಿ - ಇದಾಂಡಾರಿ - ಅಲ್ಲಯ್ಯ ಮಧುಪಯ್ಯ - ಹರಳಯ್ಯ ಮಧುವಯ್ಯ ಹೀಗೆ. ಈ ಸಂದರ್ಭದಲ್ಲಿ ದೇವರದಾಸಿಮಯ್ಯ, ಜೇಡರದಾಸಿಮಯ್ಯ, ಇವರ ಹೆಸರುಗಳ ಬಗ್ಗೆ ಕೊಂಚ ವಿವೇಚನೆ ನಡೆಸಬೇಕಾಗಿದೆ. ಈಗ ಸಿದ್ಧವಾಗಿರುವ ಅಂಶವೆಂದರೆ ದೇವರದಾಸಿಮಯ್ಯ ಮತ್ತು ಜೇಡರ ದಾಸಿಮಯ್ಯ ಇವರುಗಳು ಬೇರೆ ಬೇರೆ ವ್ಯಕ್ತಿಗಳು; ಪೊಟ್ಟಲಕೆರೆಯವನಾದ ಚಾಲುಕ್ಯ ಇಮ್ಮಡಿ ಜಯಸಿಂಹನ ಹೆಂಡತಿ ಸುಗ್ಗಲದೇವಿಯ ಗುರುವಾದವನು 'ದೇವರ' ದಾಸಿಮಯ್ಯ. ಈತನು ವಚನಕಾರನಲ್ಲ, ಇವನ ಕಾಲ ಹನ್ನೊಂದನೆಯ ಶತಮಾನ. ಶಂಕರದಾಸಿಮಯ್ಯನಿಂದ ಅಹಂಕಾರಮರ್ದನಕ್ಕೊಳಗಾದ, ವಚನಕಾರನಾದ, ದುಗ್ಗಳೆಯ ಪತಿಯಾದ ಜೇಡರ ದಾಸಿಮಯ್ಯನು ನೇಯ್ಗೆ ಕಾಯಕದವನು, ಹನ್ನೆರಡನೆಯ ಶತಮಾನಕ್ಕೆ ಸೇರಿದವನು.[2] ಇವರಿಬ್ಬರ ಮನೆದೇವರೂ ರಾಮನಾಥನೇ ಆಗಿದ್ದುದರಿಂದ ಪಾಲ್ಕುರಿಕೆ ಸೋಮನಾಥನು ಗೊಂದಲಕ್ಕೊಳಗಾಗಿರುವಂತೆ ಕಾಣುತ್ತಾನೆ. ಇಬ್ಬರನ್ನೂ ಒಂದೇ ವಿಶೇಷಣದಿಂದ ಕರೆಯುತ್ತಾನೆ. ವಿಶೇಷಣವನ್ನು ಬಳಸುವ ಕಡೆಯಲ್ಲೆಲ್ಲ

೧. ಪಾಲ್ಕುರಿಕೆ ಸೋಮನಾಥನ ಇತರ ಕೃತಿಗಳಲ್ಲಿಯೂ ಬಸವಣ್ಣನ ವಚನಗಳ ಪ್ರಭಾವವಿರುವುದಕ್ಕೆ ನೋಡಿ, ಬಾಡಾಲ ರಾಮಯ್ಯ : ಬಸವೇಶ್ವರ ವಚನಾಲು : ಸಮಗ್ರ ಸಮೀಕ್ಷ : ಪು. ೪೮೨-೩

೨. ಎಚ್. ದೇವೀರಪ್ಪ, ಆರ್. ರಾಚಪ್ಪ (ಸಂ) : ಜೇಡರ ದಾಸಿಮಯ್ಯನ ವಚನಗಳು : ಪ್ರಸ್ತಾವನೆ : xxii-xxx ಹಾಗೂ ಎಂ. ಚಿದಾನಂದ ಮೂರ್ತಿ : ವಚನ ಸಾಹಿತ್ಯ : ಪು. ೧೩-೧೭

ಇಬ್ಬರನ್ನು 'ಜೇಡರ' ಎಂದೇ ಕರೆಯುತ್ತಾನೆ. ಕರ್ನಾಟಕದಿಂದ ದೂರವಿದ್ದು ಶರಣರ ಕತೆಗಳನ್ನು ಇತರರಿಂದ ಕೇಳಿದ್ದರಿಂದಾಗಿಯೂ ಹೀಗಾಗಿರಬಹುದು. ಆದರೆ ಕನ್ನಡ ನೆಲದ ಭೀಮಕವಿ ಇದನ್ನು ಬಹುಪಾಲು ನಿವಾರಿಸಿಕೊಂಡಿದ್ದಾನೆ. ಶಂಕರ ದಾಸಿಮಯ್ಯನ ಕತೆಯನ್ನು ಹೇಳುವ ಇಪ್ಪತ್ತೆರಡನೇ ಸಂಧಿಯಲ್ಲಿ ಜೇಡರ ದಾಸಿಮಯ್ಯನ ಕತೆಯೂ ಮಿಳಿತವಾಗಿದೆ. ಇಲ್ಲಿ ಸ್ಪಷ್ಟವಾಗಿ 'ಜೇಡರ' ಎಂಬ ವಿಶೇಷಣವನ್ನು ಭೀಮಕವಿ ಬಳಸುತ್ತಾನೆ. ಅದೇ ದೇವರ ದಾಸಿಮಯ್ಯನ ಕತೆಯು ವರ್ಣಿತವಾಗಿರುವ ಐವತ್ತನೆಯ ಸಂಧಿಯಲ್ಲಿ ವಿಶೇಷಣವನ್ನು ಪ್ರಯೋಗಿಸುವ ಕಡೆ, ಒಂದು ಕಡೆ ಹೊರತಾಗಿ (ಪದ್ಯ ೩೬) 'ದೇವರ' ಎಂದೇ ಹೇಳುತ್ತಾನೆ. ಮೂಲದಲ್ಲಿ ಇಲ್ಲೆಲ್ಲ 'ಜೇಡರ' ಎಂದೇ ಇದೆ. ಅದನ್ನು ಭೀಮಕವಿಯು, ವಸ್ತುಸ್ಥಿತಿಯನ್ನು ಬಲ್ಲವನಾಗಿದ್ದುದರಿಂದ, ತಿದ್ದುಕೊಂಡಿದ್ದಾನೆ. ಒಂದು ಕಡೆಯಲ್ಲಿ ಮಾತ್ರ ಬರುವಲ್ಲಿ (ಸಂಧಿ, ೫೦ : ಪ. ೩೬) ಪ್ರತಿಕಾರನ ತಪ್ಪೂ ಇರಬಹುದು.

ಭೀಮಕವಿಯು ಸೋಮನಾಥನನ್ನು ಬಹುತೇಕ ವಿವರಗಳಲ್ಲಿಯೂ ತಪ್ಪದೆ ಅನುಸರಿಸುತ್ತಾನೆ. ಆದರೆ ಗಾತ್ರದಲ್ಲಿ ಕನ್ನಡ ಬಸವ ಪುರಾಣವು ತೆಲುಗು ಬಸವ ಪುರಾಣಕ್ಕಿಂತ ದೊಡ್ಡದು. ತೆಲುಗಿನ ಮೂಲವು ಏಳು ಆಶ್ವಾಸಗಳಲ್ಲಿ ಒಟ್ಟು ಹನ್ನೆರಡು ಸಾವಿರದ ಆರುನೂರ ಹತ್ತು ಸಾಲುಗಳಲ್ಲಿ[೧] ಹರಿಯುತ್ತದೆ. ಭೀಮಕವಿಯ ಬಸವ ಪುರಾಣವು ಎಂಟು ಕಾಂಡಗಳಾಗಿ ವಿಂಗಡಣೆಗೊಂಡಿದೆ. ಒಟ್ಟು ಅರವತ್ತು ಸಂಧಿಗಳಲ್ಲಿ ಮೂರುಸಾವಿರದ ಆರುನೂರ ಇಪ್ಪತ್ತೆಂಟು ಭಾಮಿನೀ ಷಟ್ಪದಿಗಳನ್ನು ಒಳಗೊಂಡಿದೆ. ಮೂಲದ ಆಶ್ವಾಸಗಳನ್ನು ಭೀಮಕವಿ ಅದೇ ಕ್ರಮದಲ್ಲಿ ಕಾಂಡಗಳಾಗಿ ವಿಂಗಡಿಸಿದ್ದರೂ, ಆರನೆಯ ಕಾಂಡವು ಪೂರ್ತಿಯಾಗಿ ಭೀಮಕವಿಯೇ ಸೇರಿಸಿರುವುದು, ಹಾಗೂ ಐದನೆಯ ಕಾಂಡದ ಕೆಲವು ಭಾಗವು ಮೂಲದ ಐದನೆಯ ಆಶ್ವಾಸದ ಅನುವಾದದ ಕೊನೆಗೆ ಹೆಚ್ಚಾಗಿ ಸೇರ್ಪಡೆಯಾದದ್ದು. ಮೂಲದಲ್ಲಿ ಇಲ್ಲದ ಹತ್ತೊಂಬತ್ತು ಪ್ರಸಂಗ ಅಥವಾ ಕತೆಗಳನ್ನು ಭೀಮಕವಿ ಸೇರಿಸಿದ್ದಾನೆ. ಮೂರನೆಯ ಆಶ್ವಾಸದಲ್ಲಿ ಮುಗ್ಧಸಂಗಯ್ಯನ ಕತೆಗಿಂತ ಮೊದಲು ಭೀಮಕವಿಯು ಮಾಮಿದೇವಿಯು ಓಲೆಯನ್ನೀಯುವ ಪ್ರಸಂಗವನ್ನು ಸೇರಿಸಿದ್ದಾನೆ (ಸಂ.೧೦.೪೦-೪೪) ಮೂಲದಲ್ಲಿ ಐದನೆಯ ಆಶ್ವಾಸವು ತೆಲುಗು ಜೊಮ್ಮಯ್ಯನ ಕಥೆಯಿಂದ ಮುಗಿಯುತ್ತದೆ. ಭೀಮಕವಿಯು ತನ್ನ ಕಾವ್ಯದ ಐದನೆಯ ಆಶ್ವಾಸದಲ್ಲಿ ಈ ಕತೆಯಾದನಂತರ ಸಂಧಿ ೩೪ರಲ್ಲಿ ಶಿವಯೋಗ ಸಿದ್ರಾಮುದ್ರೆಯ ಕತೆ, ಸಂಧಿ 35 ರಲ್ಲಿ ಕಿನ್ನರ ಬಸವ ಪ್ರಾಣದಾನದ ಕತೆ, ತಂಗಟೂರಿನ ಮಾರಿದೇವನ ವಿಷಯ, ಮುರಿಯ ಚಂದಯ್ಯನ ವಿಷಯ, ಕೊಂಡಗುಳಿ ಕೇಶಿರಾಜನ ಕತೆ ಹಾಗೂ ಸಂಧಿ 36ರಲ್ಲಿ ಮೇದರ ಕೇತಯ್ಯನ ಕತೆಗಳನ್ನು ಸೇರಿಸಿದ್ದಾನೆ. ಕನ್ನಡ ಬಸವ ಪುರಾಣದ ಇಡೀ ಆರನೆಯ ಕಾಂಡದಲ್ಲಿ ಹನ್ನೊಂದು ಕತೆಗಳನ್ನು ಭೀಮಕವಿ ಸೇರಿಸಿದ್ದಾನೆ. ದಸರಯ್ಯಗಳ ಕತೆ (ಸಂಧಿ ೩೭), ಗುರು ಭಕ್ತಯ್ಯನ ಕತೆ (ಸಂ.೩೮), ಗುರುಭಕ್ತಾಂಡಾರಿಯ ಕತೆ (ಸಂ.೩೯),

---

೧. ಬಂಡಾರು ತಮ್ಮಯ್ಯನವರು ಸಂಪಾದಿಸಿರುವ 'ಬಸವ ಪುರಾಣಮು'

ಶ್ವೇತನ ಕತೆ (ಸಂ.೪೦), ಮಲುಹಣನ ಕತೆ (ಸಂ.೪೧), ಒಹಿಲಯ್ಯನ ಕತೆ (ಸ.೪೨), ಉದ್ಭಟದೇವನ ಕತೆ (ಸಂ.೪೩), ಗುರುತನಯನಾಂಡಾರಿ ಕತೆ (ಸಂ.೪೪), ವೇಮನಾರಾಧ್ಯರ ಕತೆ (ಸಂ.೪೫), ಚಿಕ್ಕಮಾದಣ್ಣನ ಕತೆ (ಸಂ.೪೬) ಹಾಗೂ ಕದಿರ ದೇಮಯ್ಯನ ಕತೆ (ಸಂ.೪೭), ಇವುಗಳು, ಹಾಗೆಯೇ ಮೂಲದ ಏಳನೆಯ ಆಶ್ವಾಸದ ಗುಡ್ಡವ್ವೆಯ ಕತೆಯನಂತರ ತನ್ನ ಎಂಟನೇ ಕಾಂಡದಲ್ಲಿ ಭೀಮಕವಿಯು ಕಜ್ಜಾಯದ ಪವಾಡವನ್ನು (ಸಂಧಿ ೫೬, ೯೦-೯೩) ಸೇರಿಸಿದ್ದಾನೆ. ಹೀಗೆ ಮೂಲದಲ್ಲಿಲ್ಲದ ಕತೆಗಳನ್ನು ಸೇರಿಸುವುದಕ್ಕಾಗಿ ಭೀಮಕವಿಯು ತನ್ನದೇ ಆದ ಸುಮಾರು ೯೦೦ ಷಟ್ಪದಿಗಳನ್ನು ರಚಿಸಿದ್ದಾನೆ. ಆದರೆ ಈ ಸೇರ್ಪಡೆಯಿಂದ ಮೂಲದ ಒಟ್ಟು ಧಾಟಿ, ಧೋರಣೆಗಳಿಗಾಗಲೀ ಬಂಧ ಸ್ವರೂಪಗಳಿಗಾಗಲೀ ಕುಂದೂ ವ್ಯತ್ಯಾಸವೂ ಹೆಚ್ಚು ಬಂದಿಲ್ಲ. ಸೋಮನಾಥನ ಉದ್ದೇಶವೇ ಬಸವಣ್ಣನ ಕಥಾಸೂತ್ರದಲ್ಲಿ ಶರಣರ ಕತೆಗಳ ಮಣಿಗಳನ್ನು ಪೋಣಿಸಿ ಹೇಳುವುದು. ಅಂಥ ಕೆಲವು ಹೆಚ್ಚು ಮಣಿಗಳನ್ನಾಯ್ದು ಭೀಮಕವಿಯು ಸೇರಿಸಿರುವುದರಿಂದ ಸರವು ಕೊಂಚ ದೀರ್ಘವಾಗಿದೆಯೇ ಹೊರತು ಅದರ ಸಮಗ್ರತೆಗೆ ಭಂಗಬಂದಿಲ್ಲ. ಈ ಹೆಚ್ಚು ಕತೆಗಳನ್ನು ಸೇರಿಸಲು ಭೀಮಕವಿಯ ಕಾಲಕ್ಕೆ ಹೆಚ್ಚು ಕತೆಗಳು ಪ್ರಚಲಿತವಾಗಿದ್ದುದ್ದು, ಆತನಿಗೆ ಹೊಸಕತೆಗಳು ತಿಳಿದಿದ್ದುದ್ದು ಕಾರಣವಾಗಿರಬಹುದು. ಅಥವಾ ಶರಣರ ಕತೆಗಳು ಹೆಚ್ಚಾದಷ್ಟು ಉತ್ತಮ ಎಂಬ ಭಾವನೆಯಿಂದ ಆತ ಹೀಗೆ ಮಾಡಿರಬಹುದು. ಪುರಾಣಗಳ ಒಂದು ಲಕ್ಷಣವೆಂದರೆ ಬೆಳೆಯುತ್ತ ಹೋಗುವುದು. ಅಲ್ಲದೆ ಸೋಮನಾಥನು ಶರಣರ ಕತೆಗಳು ವೀರಶೈವದ ವಿವಿಧ ಅಂಶಗಳನ್ನು ಹೊರಗೆಡಹುವುವೆಂಬ ಕಾರಣದಿಂದ ಬಸವಕತೆಗೆ ಅವುಗಳನ್ನು ಪೋಣಿಸಿರಬೇಕು. ಇನ್ನೂ ಕೆಲವು ಭಕ್ತರ ಕತೆಗಳ ಮೂಲಕ ತನ್ನ ಅಭಿಮಾನದ ಮತಕ್ಕೆ ಸಂಬಂಧಪಟ್ಟ ಇನ್ನೂ ಕೆಲವು ಅಂಶಗಳು ತಿಳಿಯಲಿ ಎಂಬ ಕಾರಣದಿಂದ ಭೀಮಕವಿಯು ಹೊಸಕತೆಗಳನ್ನು ಸೇರಿಸಿರಬಹುದು. ಹೀಗೆ ಸೇರಿಸಿದ ಕತೆಗಳನ್ನು ಬಿಟ್ಟರೆ, ಭೀಮಕವಿಯು ಪಾಲ್ಕುರಿಕೆ ಸೋಮನಾಥನನ್ನು ಹೆಜ್ಜೆ ಹೆಜ್ಜೆಗೆ ಅನುಸರಿಸಿದ್ದಾನೆ. ಅವನ ದ್ವಿಪದಗಳ ಭಾವವನ್ನು ಕನ್ನಡದ ಭಾಮಿನಿ ಷಟ್ಪದಿಯ ಬಂಧಕ್ಕೆ ತಿರುಗಿಸಿದ್ದಾನೆ. ಅತ್ಯಂತ ಸುಲಲಿತವಾದ ಶೈಲಿ ಭೀಮಕವಿಯದಾದ್ದರಿಂದ ಅವನ ಬಸವ ಪುರಾಣವು ಸ್ವತಂತ್ರ ಕೃತಿಯೆಂಬಂತೆಯೇ ಕನ್ನಡಿಗರಿಗೆ ಕಾಣುತ್ತದೆ.

# ಬಸವೇಶ್ವರ ಮತ್ತು ಪುರಂದರದಾಸರಲ್ಲಿ ಸಾಮ್ಯತೆ - ಭಿನ್ನತೆ

ಡಾ॥ ಬಸವರಾಜ ಸಬರದ

---

**ಸಾಮ್ಯತೆ**

ಬಸವೇಶ್ವರ ಮತ್ತು ಪುರಂದರದಾಸ ಇವರಿಬ್ಬರಲ್ಲಿ ನಾಲ್ಕು ಶತಮಾನಗಳ ಅಂತರವಿದ್ದರೂ ಅನೇಕ ವಿಷಯಗಳಿಗೆ ಸಂಬಂಧಿಸಿದಂತೆ ಇಬ್ಬರಲ್ಲೂ ಸಾಮ್ಯವಿಚಾರಗಳಿವೆ. ಇವರಿಬ್ಬರೂ ಅನುಸರಿಸಿದ ಭಕ್ತಿಯ ಮಾರ್ಗಗಳು, ನಂಬಿದ ಸಿದ್ಧಾಂತಗಳು ಬೇರೆಯಾದರೂ ಮೂಲಉದ್ದೇಶ ಮಾತ್ರ ಒಂದೇಯಾಗಿದೆ. ಧಾರ್ಮಿಕ - ಸಾಮಾಜಿಕ ವಿಷಯಗಳಿಗೆ ಸಂಬಂಧಪಟ್ಟ ಅನೇಕ ವಿಚಾರಗಳಲ್ಲಿ ಇಬ್ಬರಲ್ಲೂ ಸಾಮ್ಯತೆ ಕಂಡುಬರುತ್ತದೆ. ಇವರಿಬ್ಬರೂ ಕನ್ನಡ ನಾಡು ಕಂಡ ಶ್ರೇಷ್ಠ ಭಕ್ತರು, ಮಹತ್ವದ ಸಾಹಿತ್ಯ ರಚನೆ ಮಾಡಿದವರು, ಸಮಾಜಕ್ಕಾಗಿ ತಮ್ಮನ್ನು ತಾವೇ ಅರ್ಪಿಸಿ ಕೊಂಡವರಾಗಿದ್ದಾರೆ. ಅನೇಕ ವಿಷಯಗಳಲ್ಲಿ ಇಬ್ಬರಲ್ಲೂ ಸಾಮ್ಯತೆ ಇರುವಂತೆ ಅಭಿವ್ಯಕ್ತಿಯಲ್ಲಿಯೂ ಸಾಮ್ಯತೆ ಇದೆ. ಕೆಲವೊಂದು ವಿಷಯಗಳಲ್ಲಿ ಬಸವೇಶ್ವರರನ್ನು ಪುರಂದರದಾಸರು ಬಹುವಾಗಿ ಅನುಕರಿಸಿದ್ದಾರೆಂದೆನಿಸಿವರೆ, ಇನ್ನೂ ಕೆಲವಿಷಯಗಳಲ್ಲಿ ಇಬ್ಬರಲ್ಲೂ ಭಿನ್ನತೆ ಇರುವುದು ಕಂಡುಬರುತ್ತದೆ.

ಬಸವೇಶ್ವರ ಮತ್ತು ಪುರಂದರ ದಾಸ- ಇಬ್ಬರೂ ಶ್ರೇಷ್ಠ ಭಕ್ತರು. ಭಕ್ತ - ಮಹೇಶ - ಪ್ರಸಾದಿ - ಪ್ರಾಣಲಿಂಗಿ - ಶರಣ - ಐಕ್ಯ ಈ ಷಟ್‌ಸ್ಥಲ ಭಕ್ತಿಮಾರ್ಗವನ್ನು ಬಸವೇಶ್ವರರು ಅನುಸರಿಸಿದರೆ, ಶ್ರವಣ - ಕೀರ್ತನ - ಸ್ಮರಣ - ಪಾದಸೇವನ - ಅರ್ಚನ - ವಂದನ - ದಾಸ್ಯ - ಸಖ್ಯ - ಆತ್ಮನಿವೇದನ ಈ ನವವಿಧ ಭಕ್ತಿಮಾರ್ಗದಲ್ಲಿ ಪುರಂದರದಾಸರು ಸಾಗಿದ್ದಾರೆ. ಇಬ್ಬರ ನುಡಿಗಳಲ್ಲಿಯೂ ದಯೆ - ಅನುಕಂಪ - ಮಾನವೀಯತೆ - ವಿನಯ - ಅಂತಃಕರಣ ಈ ಮುಂತಾದ ಗುಣಗಳು ಸಾಮ್ಯವಾಗಿವೆ. ದೇವರನ್ನು ಧ್ಯಾನಿಸುವಲ್ಲಿ ಅಹಂಭಾವ ಹೋಗಿ ಕಿಂಕರ ಭಾವ ಇಬ್ಬರಲ್ಲೂ ವ್ಯಾಪಿಸಿದುದನ್ನು ಕಾಣಬಹುದಾಗಿದೆ. ಇಬ್ಬರೂ ತಮ್ಮನ್ನು ತಾವೇ ಆತ್ಮ ವಿಮರ್ಶೆ ಮಾಡಿಕೊಂಡಿದ್ದಾರೆ, ತಮ್ಮೊಳಗೆ ತಮ್ಮನ್ನು ಕಾಣಲು ಪ್ರಯತ್ನಿಸಿದ್ದಾರೆ. ದೇವರನ್ನು ಪ್ರಾರ್ಥಿಸುವಲ್ಲಿಯೂ ಇಬ್ಬರ ದಾರಿಗಳು ಒಂದೇಯಾಗಿವೆ. ''ಆಸೆ, ಆಮಿಷ, ತಾಮಸ, ಹುಸಿ, ವಿಷಯ, ಕುಟಿಲ, ಕುಹಕ, ಕ್ರೋಧ, ಕ್ಷುದ್ರ, ಮಿಥ್ಯ ಇವನೆನ್ನ ನಾಲಗೆಯ ಮೇಲಿಂದತ್ತ ತೆಗೆದು ಕಳೆಯಯ್ಯಾ'' ಎಂದು ಬಸವೇಶ್ವರರು ಕೂಡಲಸಂಗನಲ್ಲಿ ಬಿನ್ನವಿಸಿಕೊಂಡರೆ, ''ಮರುಳ ಬುದ್ಧಿಗಳೆಲ್ಲ ಬಿಡಿಸೋ - ನಿನ್ನ ಕರುಣ ಕವಚವೆನ್ನ ಹರಣಕ್ಕೆ ತೊಡಿಸೋ'' ಎಂದು ಪುರಂದರದಾಸರು ಪುರಂದರವಿಠಲನಲ್ಲಿ ಪ್ರಾರ್ಥಿಸಿದ್ದಾರೆ. ದುಷ್ಟಚಟಗಳಿಂದ ದೂರವಿರಲು, ಕುಟಿಲ - ಕುಹಕತನಗಳು ಹತ್ತಿರ ಬರದಿರಲು, ವಿಷಯಗಳ ಗುಲಾಮರಾಗದಿರಲು ಅವರಿಬ್ಬರೂ ದೇವರನ್ನು ವಿವಿಧ ರೀತಿಯಲ್ಲಿ ಪ್ರಾರ್ಥಿಸಿದ್ದಾರೆ. ಇಂತಹ ಸಾಮ್ಯ ವಿಚಾರಗಳು ಅವರ ವಚನ-ಕೀರ್ತನೆಗಳಲ್ಲಿ ಹೇರಳವಾಗಿ ದೊರೆಯುತ್ತವೆ.

''ಭವರೋಗವೈದ್ಯ ನೀನು ಭವವಿರಹಿತ ನೀನು, ಅವಧಾರು, ಕರುಣಿಸುವುದು ಕೂಡಲಸಂಗಮದೇವಾ'' ಎಂದು ಬಸವೇಶ್ವರರು ಕೂಡಲಸಂಗನಲ್ಲಿ ಬೇಡಿಕೊಂಡರೆ, ಇದೇ ರೀತಿಯ ಪದಗಳನ್ನು ಪುರಂದರದಾಸರು ತಮ್ಮ ಹಾಡುಗಳಲ್ಲಿ ಬಳಸಿ ''ಪವಡಿಸು ಪರಮಾತ್ಮನೆ ಸ್ವಾಮಿ, ಭವರೋಗ ವೈದ್ಯನೆ ಭಕ್ತರ ಪ್ರಿಯನೆ'' ಎಂದು ಪುರಂದರವಿಠಲನಲ್ಲಿ ಪ್ರಾರ್ಥಿಸಿದ್ದಾರೆ. ಅರಸರ ಅರಮನೆಯಲ್ಲಿ ಅರಸಿಯಾಗುವುದಕ್ಕಿಂತ ಭಕ್ತರ ಮನೆಯಲ್ಲಿ ತೊತ್ತಾಗಿರುವುದೇ ಬಸವೇಶ್ವರರಿಗೆ ಸರಿಕಂಡರೆ, ಐಶ್ವರ್ಯವನ್ನೆಲ್ಲ ತೊರೆದ ಪುರಂದರರು 'ದಾಸನ್ನ ಮಾಡಿಕೋ' ಎಂದು ಹಗಲಿರುಳೂ ಹರಿಯಲ್ಲಿ ಹಂಬಲಿಸಿದ್ದಾರೆ. ಐಶ್ವರ್ಯ- ಅಂತಸ್ತು - ಅಧಿಕಾರಕ್ಕಿಂತ, ಭಕ್ತಿ-ದಯೆ-ಸೇವಾಭಾವ ಮುಖ್ಯವೆಂದು ಇಬ್ಬರೂ ನಂಬಿದ್ದಾರೆ.

ಸಾಮಾನ್ಯವಾಗಿ ಜನರೆಲ್ಲಾ ತಮಗೆ ಸುಖಬೇಕು, ಸಂಪತ್ತುಬೇಕು, ಐಶ್ವರ್ಯ, ಅಂತಸ್ತು ಬೇಕೆಂದು ದೇವರಲ್ಲಿ ಪ್ರಾರ್ಥಿಸಿದರೆ, ಬಸವೇಶ್ವರ ಮತ್ತು ಪುರಂದರದಾಸರು ತಮಗೆ ಕಷ್ಟಗಳು ಬರಲಿ, ಏನೂ ಸಿಗದಂತಾಗಲಿ, ತಕ್ಕ ಪ್ರಾಯಶ್ಚಿತ್ತವಾಗಲಿಯೆಂದು ಭಗವಂತನಲ್ಲಿ ಬೇಡಿಕೊಂಡಿದ್ದಾರೆ. ಅಂತೆಯೇ ಇವರದು ವಿಶಿಷ್ಟ ರೀತಿಯ ಭಕ್ತಿಯೆಂದು ಅಲ್ಲಮಪ್ರಭು ಮತ್ತು ವ್ಯಾಸರಾಯರು, ಕ್ರಮವಾಗಿ ಬಸವೇಶ್ವರ ಮತ್ತು ಪುರಂದರದಾಸರನ್ನು ಕುರಿತು

ಹೇಳಿದ್ದಾರೆ. ಸ್ವಾರ್ಥವನ್ನು ತೊರೆದಾಗಲೇ ನಿಜವಾದ ಭಕ್ತಿ ಸಾಧ್ಯವೆಂದು ಇಬ್ಬರೂ ಬಲವಾಗಿ ನಂಬಿದವರಾಗಿದ್ದಾರೆ.

ಒಡೆದೋಡು ಎನ್ನ ಮನೆಯಲಿಲ್ಲದಂತೆ ಮಾಡಯ್ಯಾ
ಕೊಡುದೇವ ಎನ್ನ ಕೈಯಲೊಂದು ಕರಿಕೆಯನು
ಮೃಡದೇವಾ ಶರಣೆಂದು ಭಿಕ್ಷಕ್ಕೆ ಹೋದಡೆ,
ಅಲ್ಲಿ 'ನಡೆ ದೇವಾ' ಎಂದೆನಿಸು ಕೂಡಲಸಂಗಮದೇವಾ *(ಬ.ವ.೪೫೬)*

ಹರನೀನೊಲಿದಂತೆ ಮಾಡು
ಒಲಿದಡೆ ತಿರಿವಂತೆ ಮಾಡು
ತಿರಿದರೆ ಆರೂ ನೀಡದಂತೆ ಮಾಡು
ನೀಡಿದರೆ ಹೊಟ್ಟೆ ತುಂಬದಂತೆ ಮಾಡು
ಹೊಟ್ಟೆ ತುಂಬಿದರೆ ಬಟ್ಟೆ ದೊರೆಯದಂತೆ ಮಾಡು
ಬಟ್ಟೆದೊರೆತರೆ ಇಂಬು ದೊರೆಯದಂತೆ ಮಾಡು....

ಹೀಗೆ ಇಬ್ಬರೂ ತಮಗೆ ದುಃಖಬೇಕು, ಏನೂ ಸಿಗದಂತಾಗಬೇಕು, ಹೋದಲ್ಲೆಲ್ಲಾ ನಿರಾಶೆಯಾಗಬೇಕೆಂದು ದೇವರಲ್ಲಿ ಬೇಡಿಕೊಳ್ಳುವ ಪರಿ ಇತರರಿಗಿಂತ ಭಿನ್ನವಾಗಿದೆ. ಜೀವದ ವಿಷಯಂಗಳ ಕಳೆಯುತ್ತಾ ದೇವಗುಣಗಳನ್ನು ಪಡೆಯುತ್ತಾ ಸಾಗುವ ಇವರಿಬ್ಬರ ಭಕ್ತಿ ವಿಶಿಷ್ಟವಾಗಿ ಕಾಣಿಸುತ್ತದೆ.

ಬಸವೇಶ್ವರ ಮತ್ತು ಪುರಂದರದಾಸರಲ್ಲಿ ಸಮಾಜವನ್ನು ನೋಡುವ ದೃಷ್ಟಿಕೋನದಲ್ಲಿ ಭಿನ್ನತೆ ಕಂಡುಬಂದರೂ, ಸಮಾಜ ವ್ಯವಸ್ಥೆಯಲ್ಲಿರುವ ಮೂಢನಂಬಿಕೆ, ಅಂಧಸಂಪ್ರದಾಯಗಳ ವಿರುದ್ಧ ಪ್ರತಿಕ್ರಿಯಿಸುವಲ್ಲಿ ಸಾಮ್ಯತೆ ಕಂಡುಬರುತ್ತದೆ. ತಿಥಿ, ವಾರ, ಮುಹೂರ್ತಗಳಿಗೆ ಇವರಿಬ್ಬರೂ ಮಹತ್ವ ಕೊಟ್ಟವರಲ್ಲ, ರಾಹುಕಾಲ. ಗುಳಿತೆ ಕಾಲಗಳನ್ನು ಇವರು ನಂಬಿದವರಲ್ಲ.

ಎಮ್ಮವರು ಬೆಸಗೊಂಡರೆ ಶುಭಲಗ್ನವೆನ್ನಿರಯ್ಯಾ,
ರಾಶಿಕೂಟ ಗಣಸಂಬಂಧವುಂಟೆಂದು ಹೇಳಿರಯ್ಯಾ,
ಚಂದ್ರಬಲ ತಾರಾಬಲವುಂಟೆಂದು ಹೇಳಿರಯ್ಯಾ
ನಾಳಿನ ದಿನಕಿಂದಿನ ದಿನಲೇಸೆಂದು ಹೇಳಿರಯ್ಯಾ... *(ಬ. ವ. ೮೩)*

ಇಂದಿನ ದಿನವೇ ಶುಭ ದಿನವು
ಇಂದಿನ ವಾರವೇ ಶುಭ ವಾರ

*ಇಂದಿನ ತಾರೆಯೇ ಶುಭ ತಾರೆ*
*ಇಂದಿನ ಯೋಗವೇ ಶುಭಯೋಗ..... (ಪು.ತ. ಉಗಾ: ೧೭೮)*

ನಾಳೆನಾಡಮು ಎಂದು ದಿನಗಳನ್ನೆಣಿಸುವವರಿಗೆ, ಚಂದ್ರಬಲ, ತಾರಾಬಲದ ದಾರಿಕಾಯುವವರಿಗೆ ಬಸವೇಶ್ವರ ಮತ್ತು ಪುರಂದರದಾಸರು ತಮ್ಮ ರಚನೆಗಳಲ್ಲಿ ಬಹುಮಾರ್ಮಿಕವಾಗಿ ಹೇಳಿದ್ದಾರೆ. ನಾಳಿನ ದಿನಕಿಂದಿನ ದಿನಲೇಸೆಂದು ಹೇಳುವ ಅವರೀರ್ವರ ಮಾತುಗಳಲ್ಲಿ ಸತ್ಯಸಂಗತಿಗಳನ್ನೂ ಧೈರ್ಯದಿಂದ ಪ್ರಕಟಿಸುವ ಶಕ್ತಿಯಿದೆ. ವೇದ ಶಾಸ್ತ್ರ, ಪುರಾಣಗಳ ಹೆಸರಿನಲ್ಲಿ ಕೆಲವರು ಸಾಮಾನ್ಯ ಜನತೆಯನ್ನು ದಿಕ್ಕುತಪ್ಪಿಸುತ್ತಾ ಬಂದಿರುವ ವಿಚಾರವನ್ನು ಇಬ್ಬರೂ ಚೆನ್ನಾಗಿ ತಿಳಿದುಕೊಂಡಿದ್ದಾರೆ. ಇದಕ್ಕೆ ಸಂಬಂಧಿಸಿದಂತೆ ಅವರಿಬ್ಬರಲ್ಲಿಯೂ ಸ್ಪಷ್ಟವಿಚಾರಗಳಿವೆ.

*ವೇದಕ್ಕೆ ಒರೆಯ ಕಟ್ಟುವೆ ಶಾಸ್ತ್ರಕ್ಕೆ ನಿಗಳವನಿಕ್ಕುವೆ*
*ತರ್ಕದ ಬೆನ್ನಬಾರನೆತ್ತುವೆ ಆಗಮದ ಮೂಗ ಕೊಯ್ಯುವೆ ನೋಡಯ್ಯ (ಬ.ವ.೭೧೬)*

*ಪರಿ ಪರಿ ಶಾಸ್ತ್ರವನೇಕವನೋದಿ ವ್ಯರ್ಥವಾಯ್ತು ಭಕುತಿ*
*ಆರು ಶಾಸ್ತ್ರಗಳನೋದಿದರೇನು ? ನೂರಾರು ಪುರಾಣ ಕೇಳಿದರೇನು (ಆ.ಭಾ.ಪುಟ.೬)*

ಹೀಗೆ ಅವರಿಬ್ಬರೂ ವೇದ ಶಾಸ್ತ್ರ ಪುರಾಣಗಳನ್ನು ಅರ್ಥೈಸುವ ನಂಬುವ ರೀತಿಯಲ್ಲಿ ಸಾಮ್ಯತೆ ಕಂಡುಬರುತ್ತದೆ. ಬಸವೇಶ್ವರ, ಪುರಂದರದಾಸರಿಬ್ಬರೂ ವೇದ-ಪುರಾಣಗಳ ಸಂಸ್ಕೃತಿಯಲ್ಲಿಯೇ ಬೆಳೆದು ಬಂದಿದ್ದರೂ ಅವುಗಳ ಸ್ಥಗಿತತೆಯನ್ನು ಗುರುತಿಸಿ, ಅವುಗಳನ್ನು ಮೀರಿ ಬೆಳೆಯುವ ಸಾಮರ್ಥ್ಯವನ್ನು ಪ್ರಕಟಿಸಿದ್ದಾರೆ. ವೇದ, ಶಾಸ್ತ್ರ, ಪುರಾಣಗಳನ್ನು ಮುಂದೆಮಾಡಿಕೊಂಡು ಧರ್ಮದ ಹೆಸರಿನಲ್ಲಿ ದೇವರ ಹೆಸರಿನಲ್ಲಿ ಮನುಷ್ಯ - ಮನುಷ್ಯರಲ್ಲೇ ಗೋಡೆಗಳು ನಿರ್ಮಾಣವಾದ ಸಂದರ್ಭದಲ್ಲಿ ಇವರಿಬ್ಬರೂ ವಿಚಾರವಾದಿಗಳು ತೆಗೆದುಕೊಂಡ ಇಂತಹ ನಿರ್ಣಯಗಳು ಚಾರಿತ್ರಿಕ ಸತ್ಯಗಳಾಗಿ ಅತ್ಯಂತ ಮಹತ್ವ ಪಡೆಯುತ್ತವೆ.

*ಹೋಮ ನೇಮ ಗಾಯತ್ರಿಯ ಜಪವಂತಿರಲಿ ಹೋ*
*ಜನ ಮೋಹನ ಮಂತ್ರವಂತಿರಲಿ, ಹೋ*
*ಕೂಡಲ ಸಂಗನಶರಣರ ನುಡಿಗಡಣ*
*ಎಲ್ಲಕ್ಕೂ ಅಧಿಕ ನೋಡಾ - (ಬ.ವ.೬೧೦)*

ಎಂದ ಬಸವೇಶ್ವರರು ಹೋಮ, ನೇಮ, ಜಪ, ತಪಗಳೆಲ್ಲವನ್ನೂ ಅಲ್ಲಗಳೆದು ಕೂಡಲ ಸಂಗನ ಶರಣರ ನುಡಿಗಳಿಗೆ ತೀರ ಮಹತ್ವದ ಸ್ಥಾನ ನೀಡಿದ್ದಾರೆ. ಶರಣರನ್ನು ನೆನಪಿಸುವುದು ತಪಸ್ಸು ಮಾಡಿದಂತೆಂದು ಹೇಳಿ ಶತಮಾನಗಳಿಂದ ನಂಬಿದ್ದ ಇಂತಹ ಹುಸಿನಂಬಿಕೆಗಳನ್ನು ಬಸವೇಶ್ವರರು ತಿರಸ್ಕರಿಸಿದರೆ ಪುರಂದರದಾಸರು -

*ಯಾಗ ಯಜ್ಞ ಮಾಡಬೇಕೆ ಯೋಗಿ ಯತಿಯು ಆಗಲೇಕೆ*
*ನಾಗಶಯನ ನಾರದವಂದ್ಯನ ಕೂಗಿ ಭಜನೆ ಮಾಡು ಮನುಜ* (ಮ.ಜ್ಞಾ. ಹಾಡು.೮)

ಎಂದು ಸ್ಪಷ್ಟಪಡಿಸಿದ್ದಾರೆ. ಯೋಗಿ-ಯತಿಗಳಾಗುವುದು ನಿರರ್ಥಕವೆಂದು ಸಾರಿದ ದಾಸರು, ಅಂತರಂಗದ ಭಕ್ತಿಗೆ ಪ್ರಾಮುಖ್ಯತೆ ಕೊಟ್ಟಿದ್ದಾರೆ. ಯಾಗ-ಯಜ್ಞ ಮಾಡುವುದು, ಹೋಮ-ನೇಮ ಮಾಡುವುದೇ ಧರ್ಮದ ಪ್ರಮುಖ ಕ್ರಿಯೆಯೆಂದು ತಿಳಿದುಕೊಂಡಂತಹ ಜನತೆಯಲ್ಲಿ ಹೊಸ ಆಲೋಚನೆಗಳನ್ನು ಹುಟ್ಟಿಸಿ, ನಿಜವಾದ ಮಾನವತಾ ಧರ್ಮಕ್ಕೆ ಅಗತ್ಯವಾಗಿರುವ ದಯೆ, ಅನುಕಂಪ, ಭಕ್ತಿ, ವಿನಯದಂತಹ ಗುಣಗಳಿಗೆ ಪ್ರಾಮುಖ್ಯತೆ ನೀಡಿ ಅಂತರಂಗ ಭಕ್ತಿಯ ಅಂತಃಸತ್ವವನ್ನು ಹೆಚ್ಚಿಸಿದ ಇವರಿಬ್ಬರೂ ಈ ದೃಷ್ಟಿಯಿಂದ ತುಂಬ ಮಹತ್ವದ ವ್ಯಕ್ತಿಗಳಾಗಿ ಕಾಣಿಸುತ್ತಾರೆ.

ಅಂದಿನ ಸಾಮಾಜ ವ್ಯವಸ್ಥೆಯಲ್ಲಿದ್ದ ಜಾತೀಯತೆಯನ್ನು ಕಂಡು ಬಸವೇಶ್ವರ ಮತ್ತು ಪುರಂದರದಾಸರಿಬ್ಬರೂ ಕೆರಳಿದ್ದಾರೆ. ಜಾತೀಯ ನಿರ್ಮೂಲನೆಯೇ ಬಸವೇಶ್ವರರ ಮುಖ್ಯ ಹೋರಾಟವಾದರೆ, ನಿಜವಾದ ಹೊಲೆತನವೆಂದರೆ ಯಾವುದೆಂಬುದನ್ನು ಪುರಂದರದಾಸರು ತಿಳಿಸಿದ್ದಾರೆ. ''ಕೊಲುವವನೇ ಮಾದಿಗ, ಹೊಲಸುತಿಂಬುವನೇ ಹೊಲೆಯ'' ಎಂದು ಬಸವೇಶ್ವರರು ಸ್ಪಷ್ಟಪಡಿಸಿದರೆ, ''ನುಡಿದಂತೆ ನಡೆಯದವ, ಪರರ್ಥಕ್ಕೆ ಪರಸತಿಗೆ ಆಶಿಸುವ ಹೊಲೆಯ'' ನೆಂದು ಪುರಂದರದಾಸರು ಹೇಳಿದ್ದಾರೆ.

ಡಾಂಭಿಕ ಭಕ್ತಿಯ ಬಗೆಗೆ, ಕುಟಿಲತನವ ಬಗೆಗೆ ಇಬ್ಬರೂ ತೀವ್ರವಾಗಿ ವಿಡಂಬಿಸಿದ್ದಾರೆ. ಭಕ್ತಿಯಿಲ್ಲದವರು ಏನು ಮಾಡಿದರೂ ವ್ಯರ್ಥವೆಂದು ತಿಳಿಸಿದ್ದಾರೆ.

*ಗೀತವ ಹಾಡಿದಡೇನು ಶಾಸ್ತ್ರಪುರಾಣವ ಕೇಳಿದರೇನು*
*ವೇದ ವೇದಾಂತವ ನೋಡಿದಡೇನು ?*
*ಮನವೊಪ್ಪಿ ಲಿಂಗ ಜಂಗಮವ ಪೂಜಿಸಲರಿಯದವರು*
*ಎಲ್ಲರೂ ಅನುಭಾವಿಯಾದಡೇನು?*
*ಭಕ್ತಿಯಿಲ್ಲದವರನೊಲ್ಲ ಕೂಡಲಸಂಗಮದೇವ* (ಬ. ವ : ೧೮೮)

ಎಂದು ಬಸವೇಶ್ವರರು, ಭಕ್ತಿಯಿಲ್ಲದವರನೊಲ್ಲನೆಂದು ಸ್ಪಷ್ಟಪಡಿಸಿದರೆ, ಇದೇ ವಿಚಾರವನ್ನು ಪುರಂದರರು :

*ಕುಟಿಲವ ಬಿಡದಿಹ ಕುಜನರು ಮಂತ್ರದ*
*ಪಠಣೆಯ ಮಾಡಿದರೇನು ಫಲ?*
*ಕಪಟತನದಲ್ಲಿ ವಂಚಿಸುವ ಮನುಜರು ಜಪಗಳಮಾಡಿದರೇನು ಫಲ?*
*ಘಾತುಕತನವನು ಬಿಡದೆ ಗೀತೆಯನೋದಿದಡೆ*
*ಹೀನಕೃತ್ಯಗಳ ಮಾಡುತ ನದಿಯಲ್ಲಿ ಸ್ನಾನಮಾಡಿದರೇನು ಫಲ?* (ಪು.ಹೀ. ೪-೧೪೮)

ಎಂದು ಕೇಳಿದ್ದಾರೆ. ಭಕ್ತಿಯಿಲ್ಲದೆ ಕುಟಿಲತನದಿಂದ ಗೀತೆಯನ್ನೋದಿದರೆ ವ್ಯರ್ಥವೆಂದು ಅವರು ಹೇಳಿದ್ದಾರೆ. ಮೋಸ-ವಂಚನೆಗಳಿಂದ, ಅಧಿಕಾರ-ದರ್ಪಗಳಿಂದ ದೇವರು ಒಲಿಯಲಾರನೆಂದು ಅವರು ಬಿಡಿಸಿ ಹೇಳಿದ್ದಾರೆ.

ಬಸವೇಶ್ವರ ಮತ್ತು ಪುರಂದರದಾಸ ಇವರಿಬ್ಬರೂ ಅರಸರ ಸಂಪರ್ಕದಲ್ಲಿದ್ದೂ ಅರಸೊತ್ತಿಗೆಯನ್ನು ತಿರಸ್ಕರಿಸಿದವರಾಗಿದ್ದಾರೆ. ಬಿಜ್ಜಳರಾಜನ ಅರಸೊತ್ತಿಗೆಯಲ್ಲಿ ಮಂತ್ರಿಯಾಗಿದ್ದ ಬಸವೇಶ್ವರರಿಗೆ ಅದೊಂದು ಕಾಯಕವಾಗಿತ್ತೇ ಹೊರತು ಅಧಿಕಾರವನ್ನು ಪ್ರದರ್ಶಿಸುವ ತಂತ್ರಗಾರಿಕೆಯಾಗಿರಲಿಲ್ಲ. ತಮ್ಮ ಸ್ವಾಭಿಮಾನಕ್ಕೆ ಧಕ್ಕೆ ಬಂದಾಗ ಬಸವೇಶ್ವರರು ಮಂತ್ರಿಪದವಿಯನ್ನೂ ತ್ಯಜಿಸಿ ಹೊರಟು ಹೋಗುವುದು ಮೌಲ್ಯಗಳ ಮೇಲಿರುವ ಅವರ ಬದ್ಧತೆಯನ್ನು ಸ್ಪಷ್ಟಪಡಿಸುತ್ತದೆ. ತಮ್ಮ ಸ್ವಾರ್ಥಕ್ಕಾಗಿ ಅರಸರನ್ನು, ಅರಸೊತ್ತಿಗೆಯನ್ನು ಎಂದೂ ಅವರು ಬಳಸಿಕೊಳ್ಳಲಿಲ್ಲ. ತಾವು ನಂಬಿದ ವಚನ ಚಳುವಳಿಗೆ ಅವರು ಬದ್ಧರಾಗಿ ನಿಂತರೆ ಹೊರತು, ವೈಭವದ ಅರಸೊತ್ತಿಗೆಗೆ ಅವರು ಮರುಳಾಗಲಿಲ್ಲ. ಅದೇ ರೀತಿ ಪುರಂದರ ದಾಸರೂ ಕೂಡ ಅರಸೊತ್ತಿಗೆಯಿಂದ ದೂರವಿದ್ದರು. ಸ್ವತಃ ಆಗರ್ಭ ಶ್ರೀಮಂತರಾಗಿದ್ದ ಇವರು ಎಲ್ಲವನ್ನೂ ದಾನಮಾಡಿ ದಾಸರಾದರೆಂದು ಪ್ರತೀತಿ. ವಿಜಯನಗರದ ಅರಸ ಕೃಷ್ಣದೇವರಾಯರ ಸಂಪರ್ಕದಲ್ಲಿ ದಾಸರು ಇದ್ದರೂ ಕೂಡ, ಅವರೆಂದೂ ಅರಸೊತ್ತಿಗೆಯ ವ್ಯಾಮೋಹಕ್ಕೆ ಒಳಗಾದವರಲ್ಲ. ಧರ್ಮಪರ ಮೌಲ್ಯಗಳನ್ನು ಎತ್ತಿಹಿಡಿದ ಇವರಿಬ್ಬರು ರಾಜಪರ ಮೌಲ್ಯಗಳನ್ನು ಪ್ರೋತ್ಸಾಹಿಸಲಿಲ್ಲವೆಂಬುದು ಬಹುಮುಖ್ಯ ಸಂಗತಿಯಾಗುತ್ತದೆ. ಧರ್ಮ, ದೇವರು, ಭಕ್ತರು ಮುಖ್ಯರಾದಷ್ಟು ಇವರಿಗೆ ಸಾಮ್ರಾಜ್ಯ, ರಾಜ, ಅಧಿಕಾರ ಮುಖ್ಯವಾಗಲಿಲ್ಲ. ಎಂಟುನೂರು ವರ್ಷಗಳ ಹಿಂದೆ ಬಸವೇಶ್ವರರು, ನಾಲ್ಕು ನೂರು ವರ್ಷಗಳ ಹಿಂದೆ ಪುರಂದರದಾಸರು ಅರಸೊತ್ತಿಗೆಗಿಂತ ಮಾನವೀಯ ಮೌಲ್ಯ ದೊಡ್ಡದೆಂದು ಹೇಳಿದರು, ವೈಭವದ ಡಾಂಭಿಕ ಬದುಕಿಗಿಂತ ಸರಳತೆಯ ಸಾಧನಮಾರ್ಗ ಶ್ರೇಷ್ಠವೆಂದು ಸಾರಿದರು. ಇದು ಅವರಿಬ್ಬರಲ್ಲಿರುವ ಬಹುಮುಖ್ಯವಾದ ಸಾಮ್ಯತೆಯಾಗಿದೆ. ನಾಳೆ ಬರುವ ಕಷ್ಟಗಳನ್ನು ಇಂದೇ ಬರಲೆಂದು ಅವರಿಬ್ಬರೂ ಸ್ವಾಗತಿಸಿದ್ದಾರೆ. 'ನಾಳೆ ಬಪ್ಪುದು ನಮಗಿಂದೆ ಬರಲಿ, ಇಂದು

ಬಪ್ಪುದು ನಮಗೀಗಲೇ ಬರಲಿ ಎಂದು ಬಸವೇಶ್ವರರು ಹೇಳಿದರೆ, 'ಅಂದು ಬಾಹೋದು ನಮಗಿಂದೆ ಬರಲಿ, ಇಂದು ಬಾಹೋದು ನಮಗೀಗಲೇ ಬರಲಿ' ಎಂದು ಪುರಂದರದಾಸರು ಹೇಳಿದ್ದಾರೆ. ಹೇಳುವ ವಿಷಯದ ಜತೆಗೆ ಹೇಳುವ ಮಾತಿನಲ್ಲಿ, ಭಾಷಾ ಬಳಕೆಯಲ್ಲಿಯೂ ಕೂಡ ಸಾಮ್ಯತೆ ಎದ್ದುಕಾಣುತ್ತದೆ. ಇವರಿಬ್ಬರ ವಿಚಾರಗಳು ಇಂತಹ ಅನೇಕ ವಿಷಯಗಳಲ್ಲಿ ತೀರ ಸಾಮಾನ್ಯವಾಗಿರುವುದನ್ನು ಅವರ ರಚನೆಗಳ ಮೂಲಕವೇ ಗುರುತಿಸಬಹುದಾಗಿದೆ.

ಬೂಟಾಟಿಕೆಯ ಭಕ್ತರನ್ನು ಡಾಂಭಿಕ ಜನರನ್ನು ಕಂಡು ಬಸವೇಶ್ವರ ಮತ್ತು ಪುರಂದರ ದಾಸರಿಬ್ಬರೂ ವಿಡಂಬಿಸಿದ್ದಾರೆ. ಇಂತಹ ಸಂದರ್ಭದಲ್ಲಿ ಅವರಿಬ್ಬರ ರಚನೆಗಳು ತುಂಬಾ ಹಾಸ್ಯವೆಂದೆನಿಸಿದರೂ ಕೂಡ, ಅವರಿಬ್ಬರೂ ಈ ಸಿಟ್ಟಿನಲ್ಲಿ ಮಾಡಿದ ಪ್ರಯತ್ನ ಮಾತ್ರ ಸ್ವಾಗತಾರ್ಹವಾಗಿದೆ. ಇವರಿಬ್ಬರೂ ಮೊದಲು ಸ್ವವಿಮರ್ಶೆ ಮಾಡಿಕೊಂಡು, ನಂತರ ಸಮಾಜ ವಿಮರ್ಶೆಗೆ ತೊಡಗಿದ್ದರಿಂದ ಅವರ ಮಾತುಗಳಿಗೆ ಬೆಲೆಬಂದಿದೆ. 'ಒಳಕುಟಿಲ ಹೊರಗೆ ವಿನಯರಾಗಿ ಭಕ್ತರೆನಿಸಿಕೊಂಬವರ ಒಲ್ಲೆನೊಲ್ಲೆನಯ್ಯಾ' ಎಂದು ಬಸವೇಶ್ವರರು ಹೇಳಿದರೆ, ಪರವನಿತೆಯ ಒಲುಮೆಗೊಲಿದು, ಹರುಷದಿಂದ ಅವಳ ಬೆರೆದು, ಹರಿವ ನೀರೊಳಗೆ ಮುಳುಗಿ ಬೆರಳೆಣಿಸುತಿಹರ ಕಂಡು ನಗೆಯು ಬರುತಿಹೆ ಎನಗೆ' ಎಂದು ಪುರಂದರದಾಸರು ವಿಡಂಬಿಸಿದ್ದಾರೆ. 'ಬೇವಿನ ಬೀಜವ ಬಿತ್ತಿ ಬೆಲ್ಲದ ಕಟ್ಟೆಯ ಕಟ್ಟಿದರೇನು ಫಲ?' ಎಂದು ಬಸವೇಶ್ವರರು ಪ್ರಶ್ನಿಸಿದರೆ, 'ಬೇವು-ಬೆಲ್ಲದೊಳಿಡಲೇನು ಫಲ? ಎಂದು ಪುರಂದರದಾಸರು ಕೇಳಿದ್ದಾರೆ.

ಬಸವೇಶ್ವರ ಮತ್ತು ಪುರಂದರದಾಸರೀರ್ವರೂ ಸಜ್ಜನರ ಸಂಗವನ್ನು ಬಯಸುತ್ತಲೇ, ದುರ್ಜನರ ಸಂಗದಿಂದ ದೂರವಿರಲು ಯತ್ನಿಸಿದ್ದಾರೆ. 'ಸಾರ ಸಜ್ಜನರ ಸಂಗ, ದೂರ ದುರ್ಜನರ ಸಂಗ' ವೆಂದು ಬಸವೇಶ್ವರರು ಹೇಳಿದರೆ, 'ಸಜ್ಜನರ ಸಂಗ ನಮಗೆಂದಿಗಾಗುವುದೊ, ದುರ್ಜನರ ಸಂಗದಿಂದಲಿ ನೊಂದೆ ಹರಿಯೆ' ಎಂದು ಪುರಂದರದಾಸರು ನುಡಿದಿದ್ದಾರೆ. ಮನುಷ್ಯ ಪ್ರಯತ್ನಕ್ಕೆ, ಮಾನವ ಜನ್ಮಕ್ಕೆ, ಬಸವೇಶ್ವರರು ಮಹತ್ವ ನೀಡಿದಂತೆ, ಮಾನವ ಜನ್ಮ ದೊಡ್ಡದೆಂದು ಪುರಂದರದಾಸರೂ ಹೇಳಿದ್ದಾರೆ.

ಹೀಗೆ ಬಸವೇಶ್ವರ ಮತ್ತು ಪುರಂದರ ದಾಸರ ಅನೇಕ ವಿಚಾರಗಳಲ್ಲಿ ಸಾಮ್ಯವಿರುವುದನ್ನು ಕಾಣಬಹುದಾಗಿದೆ. ಕಾಲ, ಧರ್ಮ, ಸಂದರ್ಭ ಬೇರೆಯಾದರೂ ಕೂಡ ಇಬ್ಬರ ಆಚಾರ-ವಿಚಾರಗಳಲ್ಲಿ, ನಡೆ-ನುಡಿಗಳಲ್ಲಿ ಸಾಮ್ಯವಿರುವ ಅನೇಕ ಸಂಗತಿಗಳನ್ನು ನೋಡಬಹುದಾಗಿದೆ. ಅವರಿಬ್ಬರೂ ಭಕ್ತರಾಗಿದ್ದವರು, ಧರ್ಮದ ಮೂಲಕ ತಮ್ಮನ್ನು ಅನಾವರಣಗೊಳಿಸಿಕೊಂಡವರು, ದಯೆ-ಅಂತಃಕರಣಗಳಿಗೆ ಬೆಲೆ ಕೊಟ್ಟವರು, ಇಂತಹ ಮಹತ್ವದ ಈ ಇಬ್ಬರು ಸಾಧಕರ ಬದುಕು-ಬರಹಗಳಲ್ಲಿ ಅನೇಕ ವಿಷಯಗಳಲ್ಲಿ ಸಾಮ್ಯತೆ ಕಂಡುಬರುವುದು ಸಹಜವಾಗಿದೆ.

## ಭಿನ್ನತೆ

ಬಸವೇಶ್ವರ ಮತ್ತು ಪುರಂದರದಾಸರಲ್ಲಿ ಅನೇಕ ವಿಷಯಗಳಿಗೆ ಸಂಬಂಧಿಸಿದಂತೆ ಸಾಮ್ಯತೆ ಇರುವಂತೆ, ಕೆಲವು ವಿಷಯಗಳ ಬಗೆಗೆ ಭಿನ್ನತೆಯೂ ಇದೆ. ಅವರೀರ್ವರು ಇದ್ದ ಕಾಲ, ಪರಿಸರ, ಮತ, ಧರ್ಮಗಳು, ಸಾಮಾಜಿಕ, ರಾಜಕೀಯ ಸಂದರ್ಭಗಳು ಇಂತಹ ಭಿನ್ನತೆಗೆ ಕಾರಣವಾಗಿರಲುಬಹುದು. ಇಬ್ಬರೂ ಭಕ್ತರೂ, ಇಬ್ಬರೂ ಧರ್ಮಕ್ಕೆ ಪ್ರಥಮ ಪ್ರಾಶಸ್ತ್ಯ ನೀಡಿದವರು ಆದರೂ ಕೆಲವು ವಿಷಯಗಳಲ್ಲಿ ಭಿನ್ನತೆ ಇರುವುದನ್ನು ಕಾಣಬಹುದಾಗಿದೆ.

ಬಸವೇಶ್ವರ ಮತ್ತು ಪುರಂದರದಾಸರಿಬ್ಬರೂ ವೈದಿಕ ಮತಧರ್ಮದಲ್ಲಿ ಹುಟ್ಟಿ ಬೆಳೆದವರಾಗಿದ್ದಾರೆ. ಬಸವೇಶ್ವರರು ವೈದಿಕ ಮತದ ಸ್ಥಗಿತತೆಯನ್ನು ಮೀರಿ, ಅದು ನಿರ್ಮಿಸಿದ್ದ ಚಾತುರ್ವರ್ಣ ಪದ್ಧತಿಯನ್ನು ತಿರಸ್ಕರಿಸಿಬಂದು ವೀರಶೈವ ಧರ್ಮಕ್ಕೆ ಹೊಸ ಆಯಾಮ ನೀಡಿದರೆ, ಪುರಂದರದಾಸರು ಅದೇ ಮತಧರ್ಮದಲ್ಲಿ ಮುಂದುವರೆದು ಅದರಲ್ಲಿದ್ದು ಕೊಂಡೇ ಅದರ ಪ್ರಚಾರಕರಾಗಿಯೇ ಅದನ್ನು ಸುಧಾರಿಸಲು ಪ್ರಯತ್ನಿಸಿದರು. ಹೀಗಾಗಿ ಬಸವೇಶ್ವರರದು ಧಾರ್ಮಿಕ ಕ್ರಾಂತಿಯಾದರೆ, ಪುರಂದರದಾಸರದು ಮತಧರ್ಮದ ಸುಧಾರಣೆಯಾಗುತ್ತದೆ.

ಬಸವೇಶ್ವರರು ಪ್ರಮುಖ ಚಳುವಳಿಯೊಂದರ ನೇತೃತ್ವ ವಹಿಸಿದವರು, ಪುರಂದರದಾಸರು ಚಳುವಳಿಗಳಿಂದ ದೂರವಿದ್ದವರು. ಬಸವೇಶ್ವರರದು ಕ್ರಾಂತಿಕಾರಕ ಮನಸ್ಸು, ಪುರಂದರರದು ಸುಧಾರಣಾವಾದೀ ನಿಲುವು. ಒಬ್ಬರು ಸಂಸಾರದಲ್ಲಿದ್ದುಕೊಂಡೇ ಆಧ್ಯಾತ್ಮವನ್ನು ಸಾಧಿಸಿದರೆ, ಇನ್ನೊಬ್ಬರು ಸಂಸಾರವನ್ನು ತೊರೆದು ಅದನ್ನು ಸಾಧಿಸಲು ಹೊರಟವರು. ವಚನ ಚಳುವಳಿಯಂತಹ ಪ್ರಮುಖ ಸಂಘಟನೆಯೊಂದಿಗೆ ಬೆಳೆದುಬಂದ ಬಸವೇಶ್ವರರ ವಿಚಾರಕ್ಕೂ, ದಾಸಕೂಟದಂತಹ ಒಂದು ಸಣ್ಣ ಗುಂಪಿನ ಮೂಲಕ ಗುರುತಿಸಿಕೊಂಡ ಪುರಂದರದಾಸರ ವಿಚಾರಕ್ಕೂ ಕೆಲವು ಅಂಶಗಳಲ್ಲಿ ಭಿನ್ನತೆಇರುವುದು ತೀರ ಸಹಜವಾಗಿದೆ.

ಇಬ್ಬರಲ್ಲೂ ಸಮಾಜವನ್ನು ನೋಡುವ ದೃಷ್ಟಿಕೋನವೇ ತುಂಬ ಭಿನ್ನವಾಗಿದೆ. ಇಬ್ಬರೂ ಧರ್ಮದ ಮೂಲಕವೇ ಗುರುತಿಸಿಕೊಂಡರೂ ಅದರ ತಾತ್ತ್ವಿಕ ವಿಚಾರಗಳಲ್ಲಿ ಭಿನ್ನತೆಯಿರುವುದು ಕಾಣುತ್ತದೆ. ಬಸವೇಶ್ವರರದು ಶೋಷಣೆಯನ್ನು ತಪ್ಪಿಸುವ ಇಷ್ಟಲಿಂಗ ಪೂಜೆಯಾದರೆ, ಪುರಂದರದಾಸರದು ಶೋಷಣೆಯನ್ನು ಪೋಷಿಸಬಹುದಾದ ಮೂರ್ತಿಪೂಜೆ. ಜೀವ ಬೇರೆಯಲ್ಲ, ದೇವ ಬೇರೆಯಲ್ಲವೆಂದು ನರನಲ್ಲಿ ಹರನ ಅಂಶವಿರುವುದರಿಂದ ಸಾಧನೆಯ ಮೂಲಕ ನರ-ಹರನಾಗಬಲ್ಲನೆಂದೂ, ಶಿವನಿಗಿಂತ ಶಿವಶರಣ-ನಧಿಕನಾಗಬಲ್ಲನೆಂದೂ ಬಸವೇಶ್ವರರು ಹೇಳಿದರೆ, ಜೀವ ಬೇರೆ - ದೇವ ಬೇರೆಯೆಂದು, ಹರಿಯ ಮಟ್ಟಕ್ಕೇರಲು ನರನಿಗೆ ಸಾಧ್ಯವಿಲ್ಲವೆಂದೂ, ನರ ಎಂದಿದ್ದರೂ ಹರಿಯದಾಸನೆಂದೂ

ಪುರಂದರದಾಸರು ಬೋಧಿಸಿದರು. ಮನುಷ್ಯ ಪ್ರಯತ್ನ ಮತ್ತು ಸಾಧನೆಗಿರುವ ಮಹತ್ವವನ್ನು ಬಸವೇಶ್ವರರು ಒತ್ತಿಹೇಳಿವರೆ; ಪುರಂದರದಾಸರು ಮಧ್ವಾಚಾರ್ಯರ ದ್ವೈತಮತವನ್ನೇ ಬಲವಾಗಿ ನಂಬಿದರು. ಶೈವ ಬ್ರಾಹ್ಮಣ ಮನೆತನದಲ್ಲಿ ಹುಟ್ಟಿದ ಬಸವೇಶ್ವರರು ಆ ಮತದ ಸ್ಥಗಿತತೆಯನ್ನು ಮೀರುವುದರ ದ್ಯೋತಕವಾಗಿ ಜನಿವಾರವನ್ನು ಕಿತ್ತು ಬಾಗೇವಾಡಿಯನ್ನು ತೊರೆದು ಬಂದರೆ, ಅದೇ ಜನಿವಾರವನ್ನು ಹಾಕಿಕೊಂಡು ಪುರಂದರದಾಸರು ದ್ವೈತಮತವನ್ನು ಪ್ರಚಾರ ಪಡಿಸಿದರು. ಬಸವೇಶ್ವರರು ದೇಹವನ್ನೇ ದೇಗುಲವನ್ನಾಗಿಮಾಡಿಕೊಂಡರೆ, ಪುರಂದರರು ಅನೇಕ ದೇವಾಲಯಗಳನ್ನು ಸುತ್ತಿ ಬಂದರು.

ಬಸವೇಶ್ವರರು ಜನಿವಾರವನ್ನು ಕಿತ್ತೊಗೆಯುವುದರ ಮೂಲಕ ಬಾಗೇವಾಡಿಯಲ್ಲಿ ವೈದಿಕ ಸಂಸ್ಕೃತಿಯನ್ನು ಮೀರಿದರು, ಕೂಡಲ ಸಂಗಮದಲ್ಲಿ ದೇವಾಲಯ ಸಂಸ್ಕೃತಿಯನ್ನು ಮೀರಿಬಂದರು, ಕಲ್ಯಾಣದಲ್ಲಿ ವೈದಿಕ ಸಂಸ್ಕೃತಿ, ದೇವಾಲಯ ಸಂಸ್ಕೃತಿ, ರಾಜ ಪರ ಸಂಸ್ಕೃತಿ ಇವು ಮೂರನ್ನೂ ಮೀರಿನಿಂತು, ಮಾನವೀಯತೆಯ ಧರ್ಮದ ಮೂಲಕ ಜನಪರ ಸಂಸ್ಕೃತಿಯನ್ನು ಹುಟ್ಟುಹಾಕಲು ಪ್ರಯತ್ನಿಸಿದರು. ಆದರೆ ಪುರಂದರದಾಸರು ಹೀಗೆ ಸಂಸ್ಕೃತಿಗಳನ್ನು ಮೀರುವ ಯಾವ ಪ್ರಯತ್ನವನ್ನೂ ಮಾಡಲಿಲ್ಲ. ಹುಟ್ಟಿನಿಂದ ಕೊನೆಯವರೆಗೆ ಒಂದೇ ಮತಧರ್ಮದ ಸಂಸ್ಕೃತಿಯಲ್ಲಿ ಬದುಕಿದರು. ಅಲ್ಲಿ ಅವರಿಗೆ ಲೋಪ-ದೋಷಗಳು ಕಂಡುಬಂದರೂ ಆ ಕಡೆ ಲಕ್ಷ್ಯವಹಿಸಲಿಲ್ಲ. ಹೀಗಾಗಿ ದಾಸರಲ್ಲಿ ಮೀರುವ ಕ್ರಿಯೆಗಿಂತ ಆ ಮತಧರ್ಮವನ್ನು ಸಾರುವ ಕ್ರಿಯೆಯೇ ಹೆಚ್ಚಾಗಿ ಕಾಣುತ್ತದೆ. ಈ ಎಲ್ಲ ಮೂಲಭೂತ ವ್ಯತ್ಯಾಸಗಳು ಅವರಲ್ಲಿರುವುದರಿಂದ, ಅನೇಕ ವಿಷಯಗಳಿಗೆ ಸಂಬಂಧಿಸಿದಂತೆ ಅವರೀರ್ವರಲ್ಲಿ ಭಿನ್ನತೆಯಿರುವುದು ಸಹಜವಾಗಿದೆ.

ಕರ್ಮಸಿದ್ಧಾಂತಕ್ಕೆ ಸಂಬಂಧಿಸಿದಂತೆ ಇಬ್ಬರಲ್ಲೂ ತುಂಬಾ ಪರ-ವಿರೋಧವಾದ ವಿಚಾರ ವ್ಯಕ್ತವಾಗಿವೆ.

*ಶಾಸ್ತ್ರ ಘನವೆಂಬನೆ ಕರ್ಮವ ಭಜಿಸುತ್ತದೆ - (ಬ.ವ.೨೦೮)*
*ನಿಮ್ಮ ನೆನೆವಂಗೆ ಭವಕರ್ಮವೆಲ್ಲಿಯದೊ ಸಂಗಯ್ಯಾ (ಬ.ವ.೮೭೧)*
*ಕಾಲಕರ್ಮರಹಿತರು ನಿಮ್ಮ ಶರಣರು (ಬ.ವ.೮೭೩)*

ಈ ಮುಂತಾದ ವಚನಗಳ ಮೂಲಕ ಬಸವೇಶ್ವರರು ಕರ್ಮಸಿದ್ಧಾಂತವನ್ನು ತಿರಸ್ಕರಿಸಿದರೆ,

‘ಆರೇನು ಮಾಡುವರು ಭುವನದೊಳಗೆ ಪೂರ್ವಜನ್ಮದ ಕರ್ಮ ಹಣೆಯಲ್ಲಿ ಬರೆದುದಕೆ’ ಎಂದ್ಹೇಳಿ ಅಸಹಾಯಕತೆಯನ್ನು ಪ್ರಕಟಿಸುವುದರ ಮೂಲಕ ಪುರಂದರದಾಸರು ಕರ್ಮ ಸಿದ್ಧಾಂತವನ್ನು ಒಪ್ಪಿಕೊಂಡಿದ್ದಾರೆ. ವಿಧಿಯ ಬಗೆಗೂ ಅಷ್ಟೆ. ಬಸವೇಶ್ವರರು ಅದನ್ನು ತಿರಸ್ಕರಿಸಿದರೆ, ಪುರಂದರರು ವಿಧಿಗೆ ಮಹತ್ವದ ಸ್ಥಾನ ಕೊಟ್ಟಿದ್ದಾರೆ. ಬಸವೇಶ್ವರರು

ಧರ್ಮವನ್ನು ದಯೆಯೆಂದು, ಕರ್ಮವನ್ನು ಕ್ರಿಯೆಯೆಂದು ವ್ಯಾಖ್ಯಾನಿಸುವುದರ ಮೂಲಕ ಸರಳತೆಯನ್ನು, ಸ್ಪಷ್ಟತೆಯನ್ನು ಮೂಡಿಸಿದರೆ, ಪುರಂದರರು ಆರೇನು ಮಾಡುವರೆಂದು ಹೇಳಿ ತಮ್ಮ ಅಸಹಾಯಕತೆಯನ್ನು ಪ್ರಕಟಿಸಿದರು. ಶತಮಾನಗಳಿಂದ ಧರ್ಮದ ಹೆಸರಿನಲ್ಲಿ, ಕರ್ಮದ ಹೆಸರಿನಲ್ಲಿ ಸಾಮಾನ್ಯ ಜನತೆಯನ್ನು ಶೋಷಣೆ ಮಾಡುತ್ತಾ ಬಂದ ಸಂಪ್ರದಾಯವಾದಿಗಳನ್ನು, ಅವರ ಕರ್ಮಠತನವನ್ನು ಬಸವೇಶ್ವರರು ತಿರಸ್ಕರಿಸಿದರೆ, ಕರ್ಮವಾದವನ್ನು ಪ್ರೋತ್ಸಾಹಿಸುವುದರ ಮೂಲಕ ದಾಸರು ದ್ವೈತಮತದ ದಾರಿಯಲ್ಲಿಯೇ ಸಾಗಿದರು.

ನಾನು ಪರಸೇವೆಯ ಮಾಡುವೆನಯ್ಯಾ ಜಂಗಮ ದಾಸೋಹಕ್ಕೆಂದು (ಬ.ವ.೨೭) ಎಂದು ಹೇಳಿದ ಬಸವೇಶ್ವರರು ದಾಸೋಹಕ್ಕೆ ಅತ್ಯಂತ ಮಹತ್ವದ ಸ್ಥಾನ ನೀಡಿದರು. ಅದಕ್ಕಾಗಿಯೇ ತಾವು ಪರಸೇವೆಮಾಡುವುದು ಎಂದು ಸ್ಪಷ್ಟಪಡಿಸಿದರು. ಆದರೆ ಪುರಂದರದಾಸರು 'ಪರಸೇವೆಯ ಮಾಡಿ ಪರರನೆ ಕೊಂಡಾಡಿ ಮರೆತೆನೋ ನಿನ್ನ ಧ್ಯಾನ' ಎನ್ನುತ್ತಾರೆ. ಪರಸೇವೆಯ ಮಾಡಿದುದರ ಬಗೆಗೆ ಅವರು ಪಶ್ಚಾತ್ತಾಪ ಪಟ್ಟಿದ್ದಾರೆ. ದೇವರ ಧ್ಯಾನವೊಂದೇ ಅವರಿಗೆ ಅಂತಿಮ ಗುರಿಯಾಗಿದೆ. ಜಂಗಮ ದಾಸೋಹದಲ್ಲಿ ದೇವರನ್ನು ಕಂಡು ಪರಸೇವೆಮಾಡಿದ್ದನ್ನು ಪ್ರೋತ್ಸಾಹಿಸಿಕೊಳ್ಳುವ ಮನಸ್ಸಿಗೂ, ದೇವರ ಧ್ಯಾನವೊಂದೇ ಶ್ರೇಷ್ಠವೆಂದು ನಂಬಿ ಪರಸೇವೆಮಾಡಿದ್ದಕ್ಕೆ ಪಶ್ಚಾತ್ತಾಪ ಪಡುವ ಮನಸ್ಸಿಗೂ ಮೂಲಭೂತವಾದ ವ್ಯತ್ಯಾಸವಿದೆ.

ಬಸವೇಶ್ವರರು ಉಳಿದ ಮತ-ಧರ್ಮಗಳಲ್ಲಿದ್ದ ಸಾಂಪ್ರದಾಯಿಕ ಗುಣಗಳನ್ನು, ಕರ್ಮಠತನವನ್ನು ಅಲ್ಲಗಳೆದರೆ, ಪುರಂದರದಾಸರು ಅದ್ವೈತ ಮತ-ಧರ್ಮವನ್ನು ಖಂಡಿಸಿದರು. ತಾವು ಅನುಸರಿಸಿದ ಮತ-ಧರ್ಮವನ್ನೇ ಮೀರುವ ಸಾಹಸ ಬಸವೇಶ್ವರರಲ್ಲಿ ಕಂಡುಬಂದರೆ, ತಾವು ನಂಬಿದ್ದರಲ್ಲಿಯೇ ಸಂಪೂರ್ಣ ಕರಗಿ ಹೋಗುವ ಅಪಾಯ ಪರಂದರ ದಾಸರಲ್ಲಿ ಕಂಡುಬರುತ್ತದೆ.

'ಹುಟ್ಟಿಸುವಾತ ಬ್ರಹ್ಮನೆಂಬರು, ರಕ್ಷಿಸುವಾತ ವಿಷ್ಣುವನೆಂಬರು ನೋಡಾ, ಬ್ರಹ್ಮ ತನ್ನ ಶಿರವನ್ನೇಕೆ ರಕ್ಷಿಸಲಾರ ? ವಿಷ್ಣು ತನ್ನ ಮಗನನ್ನೇಕೆ ರಕ್ಷಿಸಲಾರ ?' ಎಂದು ಬಸವೇಶ್ವರರು ಪ್ರಶ್ನಿಸಿದರೆ, 'ಬ್ರಹ್ಮನಿಂದಲೇ ಸಕಲವು, ಹುಟ್ಟು ಸಾವಿಗೆ ಆತನೇ ಕಾರಣ, ಆತನೇ ಸರ್ವಸ್ವ' ನೆಂದು ಪುರಂದರದಾಸರು ಹೇಳುತ್ತಾರೆ. ಪ್ರತಿಯೊಂದನ್ನು ಪ್ರಶ್ನಿಸುವ ಹೋರಾಟಗಾರನ ಮನಸ್ಸು ಬಸವೇಶ್ವರರದಾದರೆ ; ಎಲ್ಲವನ್ನೂ ಮೌನದಿಂದ ಸ್ವೀಕರಿಸುವ ಸಂತನ ಮನಸ್ಸು ಪುರಂದರದಾಸರದಾಗಿದೆ. ಪ್ರಶ್ನೆ-ಉಪಪ್ರಶ್ನೆಗಳ ಮೂಲಕ ಬಸವೇಶ್ವರರಂತಹ ವಚನಕಾರರು ವಚನ ಚಳುವಳಿಯನ್ನು ಸೈದ್ಧಾಂತಿಕವಾಗಿ ಕಟ್ಟಿದರೆ, ದ್ವೈತ ಮತವನ್ನನುಸರಿಸಿ ಮಧ್ವಾಚಾರ್ಯರ ನಿಲುವುಗಳನ್ನೇ ದಾಸರು ಮುಂದುವರೆಸಿದ್ದಾರೆ. ಬಸವೇಶ್ವರರಲ್ಲಿ

ಪ್ರಶ್ನಿಸುವುದರ ಮೂಲಕ ಕಟ್ಟುವ ಕ್ರಿಯೆ ಪ್ರಾರಂಭವಾದರೆ, ಪುರಂದರದಾಸರಲ್ಲಿ ಮೌನಸಮ್ಮತಿಯ ಮೂಲಕ ಸ್ಥಗಿತತೆ ಕಂಡುಬರುತ್ತದೆ. ಧರ್ಮ-ಆಧ್ಯಾತ್ಮಗಳನ್ನು ಸಮಾಜದ ಜನಜೀವನಕ್ಕಾಗಿ ಬಸವೇಶ್ವರರು ಬಳಸಿಕೊಂಡರೆ, ಧರ್ಮ-ಆಧ್ಯಾತ್ಮಗಳಡಿಯಲ್ಲಿ ಜನತೆ ಮೌನವಾಗಿ ಅನುಸರಿಸಬೇಕೆಂದು ಬಯಸಿದವರು ಪುರಂದರದಾಸರಾಗಿದ್ದಾರೆ.

ಬಸವೇಶ್ವರರು ಇಹದ ಮೂಲಕ ಪರವನ್ನು ಕಂಡುಕೊಂಡರು, ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವವರೆಂದು ಹೇಳಿದರು. ಸ್ವರ್ಗಲೋಕ ಮರ್ತ್ಯಲೋಕ ಬೇರಿಲ್ಲ ಕಾಣಿರೋ ಎಂದು ಸ್ಪಷ್ಟಪಡಿಸಿದರು. ಆದರೆ ಪುರಂದರದಾಸರು ಪರವನ್ನೇ ಶ್ರೇಷ್ಠವೆಂದು ತಿಳಿದರು. ಸ್ವರ್ಗ-ನರಕಗಳು ಬೇರೆ ಬೇರೆಯೆಂದು ಹೇಳಿದರು. ಮೋಕ್ಷಸಾಧನೆಯೇ ಜೀವನದ ಪರಮ ಗುರಿಯೆಂದು ಭಾವಿಸಿದರು.

ಬಸವೇಶ್ವರರು ಕಾಯಕಕ್ಕೆ ಅತ್ಯಂತ ಗೌರವದ ಸ್ಥಾನ ನೀಡಿದರು, ಕಾಯಕದಲ್ಲಿ ಸಮಾನತೆಯನ್ನು ಸಾಧಿಸಿದರು, ಕಾಯಕವೇ ಕೈಲಾಸವೆಂದು ಸಾರಿ ಹೇಳಿದರು. ಆದರೆ ಪುರಂದರದಾಸರು ಇದ್ದ ಕಾಯಕವನ್ನು ತೊರೆದು ಊರೂರು ಅಲೆದರು. ಕಾಯಕದ ಮಹತ್ವವನ್ನು ತಿಳಿಯದೆ, ಹರಿಯ ಧ್ಯಾನವೊಂದೇ ಪರಮಸತ್ಯವೆಂದರು.

ಸಂಸಾರದಲ್ಲಿದ್ದುಕೊಂಡೇ ಸೌಖ್ಯವನ್ನುಂಡು ಸಕಲವನ್ನು ಸಾಧಿಸಿದವರು ಬಸವೇಶ್ವರರು. ಇಬ್ಬರು ಮಡದಿಯರನ್ನು ಮಾಡಿಕೊಂಡು ಸಂಸಾರಜೀವನಕ್ಕೆ ಅತ್ಯುನ್ನತ ಗೌರವದ ಸ್ಥಾನವನ್ನು ಅವರು ಕೊಟ್ಟರು. ಆದರೆ ಪುರಂದರದಾಸರು ಸಂಸಾರವನ್ನು ತೊರೆದು ಹೋದರು. ಮೋಕ್ಷಸಾಧನೆಗೆ ಸಂಸಾರವೊಂದು ತೊಡಕೆಂದು ಹೇಳಿದರು. ಸಂಸಾರದ ಜಂಜಾಟದಲ್ಲಿದ್ದುಕೊಂಡೇ ಅದನ್ನು ಮೀರಿ ಆಧ್ಯಾತ್ಮವನ್ನು ಬಸವೇಶ್ವರರು ಸಾಧಿಸಿದರೆ, ಸಂಸಾರ ಹೇಯವೆಂದು ಭಾವಿಸಿ ಅದನ್ನು ತೊರೆದು ಹೋದವರು ಪುರಂದರದಾಸರಾಗಿದ್ದಾರೆ. ಕಾಯಕದಲ್ಲಿ ನಿರತರಾದಾಗ ಗುರು-ಲಿಂಗ-ಜಂಗಮರ ಹಂಗು ತೊರೆಯಬೇಕೆಂದು ಹೇಳಿದ ಬಸವೇಶ್ವರರು ಕರ್ತವ್ಯನಿಷ್ಠೆಗೆ ಅತ್ಯಂತ ಮಹತ್ವದ ಸ್ಥಾನ ನೀಡಿದರೆ, ಹರಿಯೇ ಸರ್ವೋತ್ತಮನೆಂದು ಸಾರುತ್ತ ಕರ್ತವ್ಯನಿಷ್ಠೆಯ ಕಡೆಗೆ ಪುರಂದರರು ಗಮನ ಹರಿಸದೇ ಹೋಗಿದ್ದಾರೆ. ಕಾಯಕ-ಕರ್ತವ್ಯನಿಷ್ಠೆಗೆ ಗೌರವದ ಸ್ಥಾನ ಕೊಡುವುದರ ಮೂಲಕ ಬಸವೇಶ್ವರರು ಸಮಾಜದ ಆರ್ಥಿಕ ಬೆಳವಣಿಗೆಗೆ ಹೊಸ ಆಯಾಮ ನೀಡಿದರೆ, ಆ ಬಗೆಗೆ ಆಲೋಚಿಸದೆ ಅದೆಲ್ಲಾ ಗೌಣವೆಂದು ತಿಳಿದುಕೊಂಡ ಪುರಂದರರು ಸ್ವಾಧ್ಯಾಯ, ವಿಷ್ಣು ಭಕ್ತಿ ಹಾಗೂ ಕರ್ಮಾಚರಣೆಗೆ ಮಾತ್ರ ಬೆಲೆ ನೀಡಿದ್ದಾರೆ. ಕಾಯಕದ ಮೂಲಕ ಬಸವೇಶ್ವರರಿಗೆ ಮೋಕ್ಷ ಮಾರ್ಗ ಕಾಣಿಸಿದರೆ, ಕರ್ಮಾಚರಣೆ ಇಲ್ಲದೆ ಮೋಕ್ಷಸಾಧ್ಯವಿಲ್ಲವೆಂದು ದಾಸರು ಹೇಳಿದ್ದಾರೆ.

ಬಸವೇಶ್ವರ ಮತ್ತು ಪುರಂದರದಾಸರಲ್ಲಿ ಮಹಿಳೆಯರನ್ನು ಕುರಿತಂತೆ ಭಿನ್ನಾಭಿಪ್ರಾಯ ಪ್ರಕಟವಾಗಿವೆ. ಶತಮಾನಗಳಿಂದ ಶೋಷಿತಳಾದ ಸ್ತ್ರೀಯರಿಗೆ, ಪ್ರೇರಣೆಯಾಗಿ ನಿಂತ

ಬಸವೇಶ್ವರರು ಮಹಿಳಾ ಸಮಾನತೆಗಾಗಿ ಹಾತೊರೆದರೆ ; ಯಜಮಾನ ಸಂಸ್ಕೃತಿಯ ಪಡಿನೆರಳಲ್ಲೇ ಸ್ತ್ರೀಯನ್ನು ಕಂಡ ಪುರಂದರದಾಸರು ಸ್ತ್ರೀಯರಿಗೆ ಸ್ವಾತಂತ್ರ್ಯ ಕೊಡಬೇಡಿರೆಂದು ಹೇಳಿದ್ದಾರೆ. ಬಸವೇಶ್ವರರು ಸ್ತ್ರೀಸ್ವಾತಂತ್ರ್ಯಕ್ಕಾಗಿ ಹೋರಾಡಿದರೆ, ಪುರಂದರರು ಸ್ತ್ರೀ ಸ್ವಾಂತಂತ್ರ್ಯವನ್ನು ಅಲ್ಲಗಳೆದಿದ್ದಾರೆ. ಮಹಿಳೆಯರಿಗೆ ಮೊಟ್ಟಮೊದಲು ಬಸವೇಶ್ವರರು ಧಾರ್ಮಿಕ-ಆಧ್ಯಾತ್ಮಿಕ ಕ್ಷೇತ್ರದಲ್ಲಿ ಮಹೋನ್ನತ ಸ್ಥಾನವನ್ನು ನೀಡಿದರೆ, ಪುರಂದರದಾಸರು ಇದಕ್ಕೆ ಸಂಬಂಧಿಸಿದಂತೆ ಅಲಕ್ಷ್ಯ ತಾಳಿರುವುದು ಕಂಡುಬರುತ್ತದೆ.

'ಪರವಧುವ ಮಹಾದೇವಿಯೆಂಬೆ, ಎನ್ನ ಹೆತ್ತ ತಾಯ್ಗಳೆಂಬೆ' ಎಂಬ ಪರಸ್ತ್ರೀಯರ ಬಗೆಗೆ ಅತ್ಯುನ್ನತ ಗೌರವವನ್ನು ಬಸವೇಶ್ವರರು ಪ್ರಕಟಿಸಿದರೆ 'ಕದವನಿಕ್ಕಿದಳೆ, ಗಯ್ಯಾಳಿಮೂಳಿ' ಎಂದು ಪರವಧುವನ್ನು ದಾಸರು ಟೀಕಿಸಿದ್ದಾರೆ. ವಚನಚಳುವಳಿಯ ಮುಂಚೂಣಿಯಲ್ಲಿ ಅಕ್ಕಮಹಾದೇವಿ, ನೀಲಾಂಬಿಕೆ, ಲಿಂಗಮ್ಮ, ಅಕ್ಕನಾಗಮ್ಮ, ಅಕ್ಕಮ್ಮ, ಅಮುಗೆ ರಾಯಮ್ಮ ಈ ಮೊದಲಾದ ವಚನಕಾರ್ತಿಯರಿರುವಂತೆ, ದಲಿತ ವರ್ಗದಿಂದ ಬಂದ ಕಾಳವ್ವೆ, ಗೊಗ್ಗವ್ವೆ, ಸೂಳೆಸಂಕವ್ವೆ, ಬೊಂತಾದೇವಿಯರಂತಹ ಅನೇಕ ವಚನಕಾರ್ತಿಯರು ವಚನಕಾರರಿಗೆ ಸಮಾನರೀತಿಯಲ್ಲಿ ಬೆಳೆಮ ಅಧ್ಯಾತ್ಮಸಾಧಿಸಲು ಬಸವೇಶ್ವರರಂತಹ ನೇತಾರರು ಕಾರಣರಾಗಿದ್ದಾರೆ. ಆದರೆ ಪುರಂದರದಾಸರ ದಾಸಕೂಟದಲ್ಲಿ ಒಬ್ಬ ಮಹಿಳೆಗೂ ಅವಕಾಶವಿಲ್ಲದಿರುವುದನ್ನು ಕಾಣಬಹುದಾಗಿದೆ.

ದಲಿತರಷ್ಟೇ ಶೋಷಣೆಗೊಳಗಾದ ಮಹಿಳೆಯರಿಗೆ ವಚನಕಾರರು ಮಾತೆಯೆಂದು ಕರೆದು ಗೌರವದ ಸ್ಥಾನ ನೀಡಿದರು. ಆದರೆ ದಾಸರು, ಮಹಿಳೆಯಿಂದ ಆಧ್ಯಾತ್ಮ ಸಾಧನೆಗೆ ಅಡ್ಡಿಯುಂಟಾಗುತ್ತವೆಯೆಂದು ನಂಬಿದರು. ಮಹಿಳೆ ಎಲ್ಲ ಕ್ಷೇತ್ರಗಳಲ್ಲಿಯೂ ಸಮಾನತೆ ಸಾಧಿಸಬೇಕೆಂಬುದು ಬಸವೇಶ್ವರರ ಮುಖ್ಯ ಉದ್ದೇಶವಾಗಿತ್ತು. ಅಂತೆಯೇ ಅವರು ವಚನ ಚಳುವಳಿಯಲ್ಲಿ ಮಹಿಳೆಯರಿಗೆ ಅತ್ಯುನ್ನತ ಸ್ಥಾನವನ್ನು ನೀಡಿದರು. ಆದರೆ ಪುರಂದರದಾಸರು ಯಜಮಾನ ಸಂಸ್ಕೃತಿಯನ್ನು ತಿರಸ್ಕರಿಸದಿದ್ದುದರಿಂದ ಮಹಿಳೆಯನ್ನು ಕುರಿತಂತೆ ಉನ್ನತ ಆಲೋಚನೆ ಅವರಲ್ಲಿ ಬರಲೇ ಇಲ್ಲವೆಂದು ಹೇಳಬಹುದಾಗಿದೆ.

ಜಾತಿನಿರ್ಮೂಲನದ ವಿಷಯದಲ್ಲಿ ಅವರ ಕಾರ್ಯಾಚರಣೆಯಲ್ಲಿ ಬಸವೇಶ್ವರ ಮತ್ತು ಪುರಂದರದಾಸರ ವಿಚಾರಗಳಲ್ಲಿ ವ್ಯತ್ಯಾಸ ಕಂಡುಬರುತ್ತದೆ. ಇಬ್ಬರೂ ಜಾತೀಯತೆಯನ್ನು ವಿರೋಧಿಸುತ್ತಾರೆ. ಮಾನವರೆಲ್ಲಾ ಒಂದೆನ್ನುವ ವಿಚಾರ ಇಬ್ಬರಲ್ಲೂ ಸಾಮ್ಯವಿದೆ. ಆದರೆ ಜಾತೀಯತೆಯನ್ನು ಹೊಡೆದೋಡಿಸಲು ಬಸವೇಶ್ವರು ಕೇವಲ ನುಡಿಯಲ್ಲಷ್ಟೇ ಹೇಳದೆ ನಡೆಯಲ್ಲಿ ತರುತ್ತಾರೆ. ಅದಕ್ಕಾಗಿ ಚಳುವಳಿಯನ್ನೇ ಮಾಡುತ್ತಾರೆ. ಪುರಂದರ ದಾಸರು ಮಾತ್ರ ಇಂತಹ ಹೋರಾಟಗಳ ಕಡೆ ಲಕ್ಷ್ಯವಹಿಸಿದವರಲ್ಲ. ಈ ಜಾತೀಯತೆಗೆ ಮೂಲ ಕಾರಣವಾದ ಚಾತುರ್ವರ್ಣ ಪದ್ಧತಿ ಮತ್ತು ವೈದಿಕ ಮತಧರ್ಮದ ಸ್ಥಗಿತತೆಯೇ ಮುಖ್ಯ ಕಾರಣವೆಂದು

ಬಲವಾಗಿ ನಂಬಿದ ಬಸವೇಶ್ವರರು, ಅದರ ಮೂಲಕ್ಕೆ ಕೈಹಾಕಿ ಹೋರಾಟಮಾಡಿದರೆ, ಚಾತುರ್ವರ್ಣ ಪದ್ಧತಿ ಹಾಗೂ ವೈದಿಕ ಮತಧರ್ಮವನ್ನು ತಿರಸ್ಕರಿಸದ ಪುರಂದರದಾಸರು ಮೌನವಾಗುತ್ತಾರೆ. ಹೀಗಾಗಿ ಬಸವೇಶ್ವರರು ಜಾತಿ ನಿರ್ಮೂಲನೆಗಾಗಿ ನಡೆ-ನುಡಿಗಳಲ್ಲಿ ಏಕತೆಯನ್ನು ತರುವುದರ ಮೂಲಕ, ನಿಜವಾದ ಜಾತ್ಯಾತೀತ ಸಮಾಜ ಕಟ್ಟಲು ಪ್ರಯತ್ನಿಸುತ್ತಾರೆ. ಆದರೆ ಪುರಂದರದಾಸರು ಹೊಲೆಯ ಊರಹೊರಗಿಲ್ಲ ಊರೊಳಗೂ ಇದ್ದಾನೆಂದು ಹೇಳಿ ಸುಮ್ಮನಾಗುತ್ತಾರೆ. ಬದಲಾವಣೆಯ ಪ್ರಕ್ರಿಯೆಗಳು ಬಸವೇಶ್ವರರಲ್ಲಿ ಹೋರಾಟದ ಮೂಲಕ ಆಚರಣೆಗೆ ಬಂದರೆ, ಪುರಂದರ ದಾಸರಲ್ಲಿ ಅವು ಕೇವಲ ಬೋಧನೆಯ ಹಂತದಲ್ಲಿ ಮಾತ್ರ ನಿಂತುಬಿಡುತ್ತವೆ. 'ಇವ ನಮ್ಮವ ಇವ ನಮ್ಮವ'ನೆಂದು ಅಪ್ಪಿಕೊಳ್ಳುವ ಪ್ರಸಂಗವಾಗಲಿ, 'ಅಪ್ಪನು ನಮ್ಮ ಮಾದಾರ ಚೆನ್ನಯ್ಯ, ಬೊಪ್ಪನು ನಮ್ಮ ಡೋಹರ ಕಕ್ಕಯ್ಯ' ಎಂದು ಅರ್ಪಿಸಿಕೊಳ್ಳುವ ಸಂದರ್ಭವಾಗಲಿ ಬಸವೇಶ್ವರರಿಗಿದ್ದಂತೆ, ಪುರಂದರ ದಾಸರಿಗಿರಲಿಲ್ಲವೆಂಬುದನ್ನು ಇಲ್ಲಿ ಗಮನಿಸಬಹುದಾಗಿದೆ.

ಬಸವೇಶ್ವರ ಮತ್ತು ಪುರಂದರದಾಸರಲ್ಲಿರುವ ಬಹುಮುಖ್ಯವಾದ ವ್ಯತ್ಯಾಸವೆಂದರೆ, ಬಸವೇಶ್ವರರಿಗೆ ಇಡೀ ಸಮಾಜ ವ್ಯವಸ್ಥೆಯೇ ಬದಲಾಗಬೇಕಾಗಿತ್ತು. ಧಾರ್ಮಿಕ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಆಮೂಲಾಗ್ರ ಬದಲಾವಣೆಯನ್ನು ತರುವುದೇ ಅವರ ಪ್ರಮುಖ ಉದ್ದೇಶವಾಗಿತ್ತು. ಆದರೆ ಪುರಂದರದಾಸರಿಗೆ ಇಂತಹ ಯಾವುದೇ ನಿಯೋಜಿತ ಉದ್ದೇಶಗಳಿರಲಿಲ್ಲ. ದ್ವೈತ ಮತ ಪ್ರಚಾರ ಮಾಡುತ್ತಲೇ ಕೆಲವು ಸುಧಾರಣೆಯ ವಿಚಾರಗಳನ್ನು ಅವರು ಹೇಳಿದರು.

ಇದುವರೆಗೆ ನಡೆದ ತೌಲನಿಕ ವಿವೇಚನೆಯಲ್ಲಿ ಬಸವೇಶ್ವರ ಮತ್ತು ಪುರಂದರದಾಸರಲ್ಲಿರುವ ಕೆಲವು ಸೌಮ್ಯತೆ ಹಾಗೂ ಭಿನ್ನತೆಯಿಂದ ಕೂಡಿದ ವಿಚಾರಗಳ ಬಗೆಗೆ ಮಾತ್ರ ಪ್ರಸ್ತಾಪಿಸಲಾಗಿದೆ. ಅವರೀರ್ವರ ಜೀವನ ಸಾಧನೆಗಳ ಹರಹು ವಿಶಾಲವಾದುದು. ಅದೆಲ್ಲವನ್ನೂ ಇಲ್ಲಿ ವಿವೇಚಿಸಲಾಗಿಲ್ಲ.

ಬಸವೇಶ್ವರ ಮತ್ತು ಪುರಂದರದಾಸರಲ್ಲಿ ಭಕ್ತಿ-ಮಾನವೀಯತೆ-ಧರ್ಮ ಸುಧಾರಣೆಯಂತಹ ಕೆಲವು ವಿಷಯಗಳನ್ನು ಬಿಟ್ಟರೆ ಇತರ ಅನೇಕ ವಿಚಾರಗಳಲ್ಲಿ ಮೂಲಭೂತವಾದ ಭಿನ್ನತೆ ಕಂಡುಬರುತ್ತದೆ. ಒಂದೊಂದು ಸಲ, ಕೆಲವು ವಿಷಯಗಳಲ್ಲಿ ಇಬ್ಬರನ್ನೂ ತೌಲನಿಕವಾಗಿ ನೋಡುವುದೇ ಅಷ್ಟೊಂದು ಸಮಂಜಸವಲ್ಲವೆಂದೂ ತಿಳಿದು ಬರುತ್ತದೆ. ಅವರೀರ್ವರ ಉದ್ದೇಶ ಕೆಲವು ಹಂತದವರೆಗೆ ಮಾತ್ರ ಒಂದೇಯಾಗಿ ಕಂಡರೂ ಮುಂದೆ ಕ್ರಮಿಸಿದಂತೆಲ್ಲ ಅವೆರಡೂ ಭಿನ್ನ-ಭಿನ್ನ ಮಾರ್ಗಗಳೆಂದೂ ಸ್ಪಷ್ಟವಾಗುತ್ತದೆ. ಈ ದೇಶ ಕಂಡ ಪ್ರಥಮ ಪ್ರಗತಿಪರ ಹೋರಾಟವಾದ ವಚನಚಳುವಳಿಯ ನೇತೃತ್ವ ವಹಿಸಿ, ಹಗಲಿರುಳೂ ಸಮಾಜದ ಬದಲಾವಣೆಗಾಗಿ ಶ್ರಮಿಸಿದ ಬಸವೇಶ್ವರರಿಗೂ, ದಾಸ ಪಂಥವೊಂದರ

ಪ್ರಚಾರಕರಾಗಿ, ಭಕ್ತರಾಗಿ, ಸಾಹಿತ್ಯ, ಸಂಗೀತಗಳಿಗೆ ಕೊಡುಗೆ ನೀಡಿದ ಪುರಂದರ ದಾಸರಿಗೂ ಮೂಲಭೂತವಾಗಿ ವ್ಯಕ್ತಿತ್ವಗಳಲ್ಲೇ ತುಂಬಾ ವ್ಯತ್ಯಾಸವಿದೆ. ಹೀಗಾಗಿ ಇವರೀರ್ವರಿಗೆ ಸಂಬಂಧಿಸಿದ ತುಲನೆಯನ್ನು ಕೆಲವೊಂದು ವಿಷಯಗಳಿಗೆ ಮಾತ್ರ ಸೀಮಿತಗೊಳಿಸಬೇಕೇ ಹೊರತು, ಇಡಿಯಾಗಿ ತೌಲನಿಕ ದೃಷ್ಟಿಕೋನದಿಂದ ನೋಡಲು, ಅವರೀರ್ವರೂ ಎಲ್ಲ ಹಂತದಲ್ಲೂ ಸರ್ವಾಸ್ಥಾನದಲ್ಲಿ ನಿಲ್ಲುವುದಿಲ್ಲ. ಒಂದೇ ಉದ್ದೇಶ, ಒಂದೇ ಸಂದರ್ಭವನ್ನೊಳಗೊಂಡವರಲ್ಲವೆಂಬುದು ಸ್ಪಷ್ಟವಾಗುತ್ತದೆ. ಚಳುವಳಿ, ಸಮಾಜ, ಸಂಸಾರದಿಂದ ದೂರವಾದ ಪುರಂದರದಾಸರಂತವರಿಗೆ, ಇವರು ಆ ಮೂಲಾಗ್ರಬದಲಾವಣೆಗೆ ಪ್ರಯತ್ನಿಸಲಿಲ್ಲವೆನ್ನುವುದೇ ಅಸಮಂಜಸವಾಗುತ್ತದೆ. ಹೀಗಾಗಿ ಅವರ ಮಿತಿಗಳಲ್ಲಿಯೇ ಅವರ ಸಾಧನೆಯನ್ನು ಗುರುತಿಸುವುದು ಹೆಚ್ಚು ಸೂಕ್ತವೆನಿಸುತ್ತದೆ.

# ಚನ್ನವೀರ ಕವಿಯ
# "ಕಾಶಕೃತ್ಸ್ನ ಶಬ್ದಕಲಾಪ ಧಾತುಪಾಠ"

**ಜಿ. ಎ. ಶಿವಲಿಂಗಯ್ಯ**

---

*ಇನ್ದ್ರ ಚನ್ದ್ರ ಕಾಶಕೃತ್ಸ್ನಾಪಿಶಲಿ ಶಾಕಟಾಯನಾಃ*
*ಪಾಣಿನ್ಯಮರ ಜೈನೇನ್ದ್ರಾ ಜಯನ್ತ್ಯಷ್ಟಾದಿ ಶಾಬ್ದಿಕಾಃ ॥*

ಕವಿ ಕಲ್ಪದ್ರುಮದಲ್ಲಿ ಮೇಲ್ಕಂಡ ಶ್ಲೋಕವು ಹೇಳಲ್ಪಟ್ಟಿದೆ. ಇದರ ಪ್ರಕಾರ, ಎಂಟುಮಂದಿ ಆದಿ ಶಾಬ್ದಿಕರು ವ್ಯಾಕರಣಗಳನ್ನು ರಚಿಸಿದ್ದಾರೆ. ಪ್ರತಿ ವ್ಯಾಕರಣಕ್ಕೂ ಒಂದು ಧಾತು ಪಾಠವು ಸೇರಿದೆಯೆಂದು ಹೇಳುವುದು ಸಂಪ್ರದಾಯ. ಕೆಲವು ಧಾತುಪಾಠಗಳು ಸಿಕ್ಕಿವೆ, ಕೆಲವು ಸಿಕ್ಕಿಲ್ಲ. ಕಾಶಕೃತ್ಸ್ನನ ಹೆಸರು ಎಂಟು ಜನ ಆದಿಶಾಬ್ದಿಕರಲ್ಲಿ ಮೂರನೆಯದು. "ಕಾಶಕೃತ್ಸ್ನ ಶಬ್ದಕಲಾಪ ಧಾತುಪಾಠ" ಎಂಬ ಹೆಸರಿರುವುದರಿಂದ ಇದು 'ಕಲಾಪ' ವ್ಯಾಕರಣಕ್ಕೆ ಸಂಬಂಧಪಟ್ಟಿದೆಯೆಂದು ಹೇಳುವುದೂ ಉಂಟು. ಇದಕ್ಕೆ ಕುಮಾರ ವ್ಯಾಕರಣ ಮತ್ತು ಕಾತನ್ತ್ರವ್ಯಾಕರಣ ಎಂಬ ಹೆಸರೂ ಉಂಟು. ವಂಗದೇಶದಲ್ಲಿ ಈ ವ್ಯಾಕರಣವು ಬಹಳ ಪ್ರಸಿದ್ಧವಾದದ್ದು. ಪಾಣಿನಿಯನ್ನು ಬಿಟ್ಟರೆ ಈ ವ್ಯಾಕರಣದ ಶ್ರೇಷ್ಠತೆಯನ್ನು ಎಲ್ಲ ವೈಯಾಕರಣರೂ ಅಂಗೀಕರಿಸಿದ್ದಾರೆ.

ಸಂಸ್ಕೃತ ವಾಙ್ಮಯದಲ್ಲಿ 'ಸಾರಸ್ವತ ವ್ಯಾಕರಣ' ವೆಂಬುದೊಂದು ಇದೆ. ಇದರ ಕರ್ತೃವು 'ಅನುಭೂತಿ ಸ್ವರೂಪಾಚಾರ್ಯ'. ಬಹುಶಃ ಇವರ ಕಾಲ ೯ನೇ ಶತಮಾನ.

ಈ ಮೇಲೆ ತಿಳಿಸಿರುವ ವ್ಯಾಕರಣಗಳಿಗೆ 'ಚನ್ನವೀರ ಕವಿ' ಯು ಕನ್ನಡದಲ್ಲಿ ಟೀಕನ್ನು ಬರೆದಿದ್ದಾನೆ. (ಸ್ವಾರಸ್ವತ ವ್ಯಾಕರಣಕ್ಕೆ 'ಶಬ್ದಮಣಿ' ಎಂಬ ಹೆಸರಿನಿಂದ ಟೀಕೆ ಬರೆದಿದ್ದಾನೆ) ಈತನು ಪುರುಷಸೂಕ್ತ, ನಮಕ-ಚಮಕಗಳಿಗೂ ಕನ್ನಡ ಟೀಕೆಯನ್ನು ಬರೆದಿದ್ದಾನೆ. ಇವನು ವೀರಶೈವ ಕವಿ. ಯಾಗಂಟಿ ಶರಭಲಿಂಗ ಭಕ್ತನು. ಇವನಿಗೆ ಕಾಶಿಕಾಂಡ ಚೆನ್ನವೀರಕವಿ ಎಂದೂ ಹೆಸರಿದೆ. ಇವನ ಟೀಕೆಗಳನ್ನು ನೋಡಿದರೆ ಈತನು ಪ್ರಕಾಂಡ ಪಂಡಿತನೇ ಆಗಿರುತ್ತಾನೆ.

ಕಾಶಕೃತ್ಸ್ನ ಧಾತುಪಾಠಕ್ಕೆ ಚನ್ನವೀರ ಕವಿಯು ತನ್ನದೇ ಆದ ರೀತಿಯಲ್ಲಿ ಟೀಕನ್ನು ಬರೆದಿದ್ದಾನೆ. ಮೊದಲು 'ಧಾತು' ವನ್ನು ತಿಳಿಸಿ, ಅದಕ್ಕೆ ಸಂಸ್ಕೃತದಲ್ಲಿ ಅರ್ಥವನ್ನು ಕೊಟ್ಟು, ನಂತರ ಕನ್ನಡದಲ್ಲಿ ಅರ್ಥವನ್ನು ತಿಳಿಸುತ್ತಾನೆ. ಆಮೇಲೆ ಆ ಧಾತುವಿನಿಂದ ನಿಷ್ಪನ್ನವಾದ ಕೆಲವಾರು ಪದಗಳನ್ನು ಕೊಟ್ಟು ಅವುಗಳಿಗೆ ಸಂಸ್ಕೃತ ಮತ್ತು ಕನ್ನಡದಲ್ಲಿ ಅರ್ಥಗಳನ್ನು ತಿಳಿಸುತ್ತಾನೆ. ಕನ್ನಡದ ಅರ್ಥಗಳಲ್ಲಿ ಕೆಲವು ಗ್ರಂಥಸ್ಥವೂ ಆಹುದು, ಕೆಲವು ಆಡುಭಾಷೆಯವೂ ಆಹುದು. ಟೀಕಾಕಾರನ ಕಾಲದ ಬಳಕೆಯಲ್ಲಿದ್ದ ಆಡುಭಾಷೆಯ ಕೆಲವಾರು ಶಬ್ದಗಳು ಇಂದು ಇಲ್ಲದಿರಬಹುದು. ಈ ಕಾರಣದಿಂದ ಕೆಲವು ಪದಗಳ ಬಗೆಗೆ ಅನುಮಾನಬರುವುದು ಸಹಜ. ಈ ದೃಷ್ಟಿಯಿಂದ ಇವನ ಕೃತಿಯು ಒಂದು ರೀತಿಯಲ್ಲಿ ಟೀಕಾ ಕೃತಿಯೂ ಆಹುದು, ಮತ್ತೊಂದು ರೀತಿಯಲ್ಲಿ ನಿಘಂಟುವೂ ಆಹುದು. ಆದುದರಿಂದಲೇ ಇವನ ಕೃತಿಗೆ ವಿಶಿಷ್ಟವಾದ ಸ್ಥಾನವಿದೆ.

ಚನ್ನವೀರ ಕವಿಯು ವೇದ ಆಗಮ ಪುರಾಣವೇ ಮೊದಲಾದ ಸಂಸ್ಕೃತ ಸಾಹಿತ್ಯವನ್ನು ಆಳವಾಗಿ ಅಧ್ಯಯನ ಮಾಡಿ ಪ್ರಕಾಂಡ ಪಂಡಿತನಾಗಿದ್ದಾನೆ. ಇವನಿಗೆ ಪುರಾಣ ಪುರುಷರ ಬಗೆಗೆ ಅರಿವಿದೆ. ಅಲ್ಲದೆ ಇವನು ವೀರಶೈವನಾದುದರಿಂದ ವೀರಶೈವಧರ್ಮದ ಅರಿವು - ಆಚಾರ - ಅನುಭಾವಗಳನ್ನು ಬಲ್ಲ ಶಿವಶರಣರ ಬಗೆಗೆ ಚನ್ನಾಗಿ ಬಲ್ಲವನಾಗಿದ್ದಾನೆ. ಜೈನ, ಬೌದ್ಧ ಧರ್ಮದ ವಿಭೂತಿಗಳ ಬಗ್ಗೆಯೂ ಇವನಿಗೆ ಅರಿವಿದೆ. ಈ ಕಾರಣದಿಂದ ಇವನ ಟೀಕೆಯಲ್ಲಿ, ನಿಷ್ಪನ್ನವಾದ ಪದಗಳಿಗೆ ಇವನು ಕೊಟ್ಟಿರುವ ಪ್ರಯೋಗಗಳು ಚನ್ನವೀರ ಕವಿಯ ವಿಸ್ತಾರವಾದ ಪಾಂಡಿತ್ಯಕ್ಕೆ ಸಾಕ್ಷಿಗಳಾಗಿವೆ. ಸ್ಥೂಲವಾಗಿ ಇವನ ಪ್ರಯೋಗಗಳನ್ನು ೧) ಪೌರಾಣಿಕ, ೨)ಐತಿಹಾಸಿಕ ಮತ್ತು ೩) ವ್ಯಾವಹಾರಿಕಗಳೆಂದು ಹೇಳಬಹುದು. ಸಾಹಿತ್ಯ ಕ್ಷೇತ್ರದಲ್ಲಿ ಮತ್ತು ಐತಿಹಾಸಿಕ ಕ್ಷೇತ್ರದಲ್ಲಿ ಕೆಲವು ಸಮಯ ತೊಡಕುಗಳುಂಟಾಗುತ್ತವೆ. ಕೆಲವಕ್ಕೆ ಇವನ ಕೃತಿಯಲ್ಲಿ ಪರಿಹಾರವು ದೊರಕಿದೆ.

ಉದಾಹರಣೆಗೆ, ಶರಣ ಮಾದೇಶ್ವರರು ಯಾವ ಕಾಲದವರು ಎಂಬುದು ಜಟಿಲವಾದ ಸಮಸ್ಯೆಯಾಗಿತ್ತು. ಅವರು ಜನಪ್ರಿಯ ಮಹಿಮರಾಗಿದ್ದರು. ಅವರು ತುಂಬ ಈಚಿನ

---

೧. ಶಿವಪುರಾಣದಲ್ಲಿ ಬರುವ 'ಕಾಶಿಕಾಂಡ' ದ ಪ್ರವಚನದಲ್ಲಿ ಈ ಕವಿಯು ಪ್ರಸಿದ್ಧನಿರಬೇಕೆಂದು ತೋರುತ್ತದೆ.

ಕಾಲದವರೋ ಎನ್ನುವ ಅಭಿಪ್ರಾಯವಿತ್ತು. ಇಂತಹ ಕೆಲವಾರು ಗೊತ್ತಿಲ್ಲದ ವಿಷ್ಯೋ ಅಂಶಗಳು ಈ ಕೃತಿಯಿಂದ ನಮ್ಮ ತಿಳುವಳಿಕೆಗೆ ಬರುತ್ತವೆ. ಮಾದೇಶ್ವರರ ಹೆಸರು ಇವನ ಕೃತಿಯಲ್ಲಿ ಪ್ರಯೋಗವಾಗಿರುವುದರಿಂದ, ಮಾದೇಶ್ವರರು ಚನ್ನವೀರಕವಿಯ ಕಾಲಕ್ಕೆ ಹಿಂದಿನವರು ಎಂಬುದು ಸ್ಪಷ್ಟವಾಯಿತು. ಈ ದೃಷ್ಟಿಯಿಂದ ಈ ಕೃತಿಯನ್ನು ಅಧ್ಯಯನ ಮಾಡುವುದು ಅತ್ಯವಶ್ಯಕವಾಗಿದೆ.

ಈ ಶಾಸ್ತ್ರಗ್ರಂಥದಲ್ಲಿ ಭ್ವಾದಿಯೇ ಮೊದಲಾದ ಹತ್ತು ಗಣದಲ್ಲಿ ಪದಗಳನ್ನು ನಿಯತ ಕ್ರಮದಿಂದಲೇ ಹೇಳಲಾಗಿದೆ. ಹಾಗೆ ಹೇಳುವಲ್ಲಿ, ಧಾತುವಿನ ಅರ್ಥದ ಆಧಾರದ ಮೇಲೆ ನಿಷ್ಪನ್ನವಾದ ಪದಗಳು, ಆ ಪದಗಳ - ಅದು ನಾಮಪದವಾಗಿದ್ದರೆ - ಮೂಲ ಕಾರಣವನ್ನು ತಿಳಿಸಿಕೊಡುವಲ್ಲಿ ಚನ್ನವೀರಕವಿಯ ಪೌರಾಣಿಕ ಪ್ರಜ್ಞೆಯನ್ನು ಮೆಚ್ಚಬಹುದು. ಇಂತಹವುಗಳಲ್ಲಿ ಕೆಲವನ್ನು ಒಂದೊಂದಾಗಿ ಗಮನಿಸೋಣ.

೧. ಶಿವಶರಣರಲ್ಲಿ ಅಲ್ಲಮಪ್ರಭುವಿನ ಸ್ಥಾನ ಬಹಳ ಮಹತ್ವದ್ದು. ಅಲ್ಲಮ- ಅಲ್ಲ ಈ ಹೆಸರಿನ ಬಗೆಗೆ ವಿದ್ವಾಂಸರು ಹಲವಾರು ರೀತಿಯಲ್ಲಿ ಚಿಂತಿಸಿದ್ದಾರೆ. ಅನ್ಯಭಾಷೆಗಳಲ್ಲಿನ ಸಾದೃಶ್ಯ ಶಬ್ದವನ್ನು ಅಲ್ಲಮ ಶಬ್ದದೊಂದಿಗೆ ತೌಲನಿಕವಾಗಿ ಯೋಚಿಸಿದ್ದಾರೆ. ಇನ್ನು 'ಅಲ್ಲಮ' ಶಬ್ದದ ಬಗ್ಗೆ ಈ ಕೃತಿಯಲ್ಲಿ ಯಾವರೀತಿ ಇದೆ ಎಂಬುದನ್ನು ನೋಡೋಣ.

   'ರಲ್ಲ' ಧಾತುವಿನಿಂದ 'ಅಲ್ಲತೀತಿ' ಎಂಬುದು ನಿಷ್ಪನ್ನವಾಗುತ್ತದೆ. ಇದರ ಅರ್ಥ ''ಅಲ್ಲದವನ್'' ಎಂಬುದು. ಎಂದರೆ ಯಾವುದೂ ಅಲ್ಲದವನು. (ಶಂಕರಾಚಾರ್ಯರು 'ನೇತಿ' ಎಂದು ಹೇಳಿರುವಂತೆ) ಎಂಬ ಅರ್ಥ ಸಿದ್ಧವಾಗುತ್ತದೆ. ಇದೇ ಆಧಾರದ ಮೇಲೆ ಅಲ್ಲಃ = ಶಿವ, ಅಲ್ಲಾ = ಶಿವೆ ಎಂಬುದು ನಿಷ್ಪನ್ನವಾಗಿರುವುದನ್ನು ಚನ್ನವೀರ ಕವಿಯು ತಿಳಿಸಿದ್ದಾನೆ.

೨. ಜೈನರಲ್ಲಿ ಆದಿತೀರ್ಥಂಕರರು ಬಹಳ ಪ್ರಸಿದ್ಧರು. ಇವರು ಅರ್ಹಂತರೂ ಅಹುದು ಜಿನರೂ ಅಹುದು ಜಿಷ್ಣರೂ ಅಹುದು. ಈ ಕೃತಿಯಲ್ಲಿ ಜಿನ ಮತ್ತು ಜಿಷ್ಣ ಶಬ್ದಗಳ ನಿಷ್ಪತ್ತಿಯನ್ನು ನೋಡಬಹುದು. 'ಜಿನ' ಧಾತುವಿನಿಂದ 'ಜಿನತೀತಿ' ಯು ನಿಷ್ಪನ್ನವಾಗುತ್ತದೆ. ಇದರ ಅರ್ಥ 'ಬಿಟ್ಟವನ್ ಎಂಬುದಾಗಿ. ತ್ಯಜಿಸುವಿಕೆ ಎಂದೂ ಹೇಳಬಹುದು. ವಿಶೇಷವಾಗಿ ಸಂಸಾರ ಮೋಹವನ್ನು ಇಲ್ಲವೆ ವಿಷಯದಾಸೆಯನ್ನು ಬಿಟ್ಟವರು (ಜಿನಃ) ಎಂದು ಹೇಳಬಹುದು. ಅದುದರಿಂದಲೇ ಜಿನಃ =ಅರ್ಹಂತನುಂ, ವಿರಕ್ತನುಂ, ಎಂದು ಹೇಳಿದ್ದಾನೆ. ಎಂದ ಮೇಲೆ ಯಾರು ಬೇಕಾದರೂ 'ಜಿನ' ಇಲ್ಲವೆ 'ವಿರಕ್ತ' ರಾಗಬಹುದು. ಆದರೆ ಜೈನಧರ್ಮದಲ್ಲಿ 'ಜಿನ' ಶಬ್ದವು ಪಾರಿಭಾಷಿಕವಾಗಿದೆ. ಅದರಂತೆಯೇ 'ಜಿಷ್ಣ ತೀತಿ' ಯು ನಿಷ್ಪನ್ನವಾಗಿದೆ. 'ಗೆಲ್ದವನ್' ಎಂಬ ಅರ್ಥವನ್ನು

ಪಡೆಯುತ್ತದೆ. ಜೀವನದ ಕಷ್ಟಪರಂಪರೆಗಳನ್ನು ಗೆಲ್ಲುವುದು ಎಂಬುದು ಇಲ್ಲಿ ವಿಶೇಷಾರ್ಥ (ರಣರಂಗದಲ್ಲಿ ಗೆಲ್ಲುವುದು ಸಾಮಾನ್ಯ ವಿಷಯ) ಹಾಗೆ ಗೆದ್ದವನೇ ತಪಸ್ವಿಯಾಗುತ್ತಾನೆ.

ಜಿನ್ನಃ = ನಾಭಿರಾಜ ಸುತನುಂ (ಆದಿ ತೀರ್ಥಂಕರ)

= ತಪಸ್ವಿಯುಂ,

ಆದರೆ ಇಲ್ಲಿಯೂ ಸಹ ಜಿನ್ನಃ ಎಂದರೆ ಪರೀಷಹಗಳನ್ನು ಗೆದ್ದ ತೀರ್ಥಂಕರನು ಎಂದು ಜೈನರಲ್ಲಿ ಪಾರಿಭಾಷಿಕವಾಗಿ ಗಣಿಸಲಾಗಿದೆ.

೩. ಕಲಕೇತ ಬ್ರಹ್ಮಯ್ಯನೊಬ್ಬ ಶಿವಶರಣ. ಈ ಹೆಸರಿನಲ್ಲಿ ಪೂರ್ವಭಾಗವು 'ಕಲಕೇತ' ಎಂಬುದು. ಇದರಲ್ಲಿನ 'ಕೇತ' ವು 'ಕಿತ' ಧಾತುವಿನಿಂದ ನಿಷ್ಪನ್ನವಾಗಿದೆ. 'ಕಿತ' ಎಂದರೆ ನಿವಾಸೇ ಎಂದು ಸಂಸ್ಕೃತದಲ್ಲಿ ಅರ್ಥೈಸಿ, 'ಮನೆಯಾಳ್' ಎಂದು ಕನ್ನಡದಲ್ಲಿ ಅರ್ಥೈಸುತ್ತಾನೆ. ಈ ಆಧಾರದ ಮೇಲೆ ಕಲಕೇತ = ಬ್ರಹ್ಮಾಶರಣಂ, ಎಂಬುದಾಗಿ ತಿಳಿಸಿದ್ದಾನೆ.

೪. ಭಾಗವತ ಪುರಾಣದಲ್ಲಿ ಹಿರಣ್ಯಕಶಿಪುವು ಒಬ್ಬ ರಾಕ್ಷಸ ಹಾಗೂ ಶಿವಭಕ್ತ. ಇವನ ಮಗ ಪ್ರಹ್ಲಾದ ವಿಷ್ಣು ಭಕ್ತ. ನಮಗೆ ಹಿರಣ್ಯಕಶಿಪುವಿನ ಮಗನಾದ ಪ್ರಹ್ಲಾದನು ಮಾತ್ರ ತಿಳಿದಿದೆ. ಪ್ರಹ್ಲಾದನಿಗೆ ಮೂವರು ತಮ್ಮಂದಿರಿದ್ದರೆಂಬುದಾಗಲಿ, ಅವರುಗಳ ಹೆಸರಾಗಲಿ ತಿಳಿದಿಲ್ಲ. ಚನ್ನವೀರಕವಿಯು ಇದರ ಬಗ್ಗೆ ತಿಳಿಸುತ್ತಾನೆ. 'ಹ್ಲಾದೀ' ಧಾತುವಿಗೆ 'ಸೌಖ್ಯೇಚ' ಎಂದರೆ ಸೊಕತನದೊಳಂ ಎಂದು ಅರ್ಥವನ್ನು ತಿಳಿಸುತ್ತಾನೆ. ಈ ಧಾತುವಿನಿಂದ 'ಹ್ಲಾದತೆ' ಪದವು ನಿಷ್ಪನ್ನವಾಗುತ್ತದೆ. ಹ್ಲಾದಃ, ಹ್ಲಾದಮಾನಃ ಎಂದರೆ ಸುಖಿಸುವಂ ಎಂದು ಅರ್ಥವನ್ನು ಹೇಳುತ್ತಾನೆ. ಇದರ ಆಧಾರದ ಮೇಲೆ, ಪ್ರಹ್ಲಾದಃ, ವಿಹ್ಲಾದಃ, ಸುಹ್ಲಾದಃ, ನಿಹ್ಲಾದಃ ಎಂಬ ನಾಲ್ಕು ಶಬ್ದಗಳನ್ನು ಹೇಳಿ ಈ ನಾಲ್ವರು ಹಿರಣ್ಯಕಶಿಪುವಿನ ಮಕ್ಕಳ್ ಎಂದು ಪೌರಾಣಿಕ ಅಂಶವನ್ನು ತಿಳಿಸುತ್ತಾನೆ.

೫. ವೆಂಕಟ, ವೆಂಕಟೇಶ, ವೆಂಕಟೇಶ್ವರ ಈ ಪದಗಳು ಬಹಳ ಪರಿಚಿತ ತಿರುಪತಿ ವೆಂಕಟೇಶ್ವರನು ಪ್ರಸಿದ್ಧವಾದ ದೇವರು. 'ವೆಂಕಟ' ಎನ್ನುವ ಪದ ಸಂಸ್ಕೃತದಲ್ಲಿ 'ವೇಂಕಟ' ಎಂಬ ರೂಪದಲ್ಲಿ ಬಳಕೆಯಲ್ಲಿದೆ. ಹಾಗಾದರೆ 'ವೇಂಕಟ' ಎಂದರೇನು ? ಇದಕ್ಕೆ ಚನ್ನವೀರ ಕವಿಯು ಅರ್ಥವನ್ನು ಕೊಡುತ್ತಾನೆ. ಭ್ವಾದಿಯ ಆತ್ಮನೇಪದಿಯಲ್ಲಿ ಬರುವ 'ವೇಕಿ' ಧಾತುವಿನಿಂದ 'ವೇಂಕತೆ' ಎಂಬ ರೂಪವು ನಿಷ್ಪನ್ನವಾಗುತ್ತದೆ. ಇದರ ಅರ್ಥ "ಕಡೆಗೋಲನೇಣಾದಪುದು" ಎಂಬುದಾಗಿ. ಸಮುದ್ರ ಮಥನಕಾಲದಲ್ಲಿ ಕಡೆಗೋಲ ನೇಣಾಗಿದ್ದ ಶೇಷಾದ್ರಿ. ಹಾವಿನ ಹೆಡೆಯಂತೆ ಬಿಚ್ಚಿ ತೋರುತ್ತಾ ತನ್ನ ಶರೀರವನ್ನು

ಸುತ್ತುಸುತ್ತಾಗಿ (ತೆಕ್ಕೆಯಾಗಿ) ಸುತ್ತಿಕೊಂಡಿರುವಂತೆ ಕಾಣುವ ತಿರುಪತಿ ಬೆಟ್ಟಕ್ಕೆ 'ವೇಂಕಟಗಿರಿ' ಎಂದು ಕರೆಯುತ್ತಾರೆ. ಇದರ ಅಧಿಪ ವೇಂಕಟಪತಿ. ವೇಂಕಟ ಎನ್ನುವ್ರವರ ಮತ್ತೊಂದು ರೂಪವು ಯಾಗಂಟಿ ಇರಬಹುದೆಂದು ವಿದ್ವಾಂಸರಲ್ಲಿ ಅಭಿಪ್ರಾಯವಿದೆ.

೬. 'ಮಾಚ' ಎಂಬ ಧಾತುವಿನಿಂದ 'ಮಾಚಃ' ಎಂಬ ಶಬ್ದವು ನಿಷ್ಪನ್ನವಾಗುತ್ತದೆ. ಮಚ ಎಂದರೆ ಬಂಡದೊಳ್ ಎಂಬ ಅರ್ಥವಿದೆ. ಮಾಚಃ ಎಂದರೆ ಬಂಡವಾಳವಂ ಕುಡುವವನುಂ ಎಂದರ್ಥ.

ಆದ್ದರಿಂದಲೇ ಮಾಚಃ = ರಜಕ ಕಾಯಕಶರಣನುಂ.

ಬಂಡವಾಳವಂ ಕುಡುವನುಂ

ಎಂಬ ಎರಡು ಅರ್ಥವನ್ನು ಕೊಟ್ಟಿದ್ದಾನೆ.

೭. 'ಶಿಪೃ' ಧಾತುವಿನಿಂದ 'ಶೇಪತೆ'ಯು ಸಿದ್ಧವಾಗುತ್ತದೆ. ಇದರ ಅರ್ಥ ''ಕೊಯ್ಯಲ್ತಕ್ಕಪಂ'' ಎಂಬುದಾಗಿ. ಇದರ ನಾಮರೂಪ 'ಶಿಪಿಃ' ಎಂಬುದಾಗಿ. ಶಿಪಿಃ = ಸೂರ್ಯವಂಶದ ರಾಯನುಂ.

ಶಿಪಿಃ =ಗೌರಿ ಕೋಕಿಲೆಯಾಗಿ ಬಂದು ಯಜ್ಞ ಕುಂಡದ ಸಮೀಪದಲ್ಲಿ ತನುಮನೋಧನಂಗಳಂ ಬೇಡಿದ ಬ್ರಾಹ್ಮಣರ್ಗೀವೆನೆಂಬನ ಮರೆವೊಗೆ, ಅಟ್ಟಿಕೊಂಡು ಬಂದ ಯಾಗಂಟಿ ಮಲ್ಲಿಕಾರ್ಜುನ ಚಂಚಂಗೆ ಮಯ್ಯಂ ಕೊಯ್ದಿತ್ತ ಸೂರ್ಯವಂಶದ ರಾಯನುಂ. (ಇಲ್ಲಿ ಶಿಬಿ ಚಕ್ರವರ್ತಿಯ ಕಥೆಯು ನೆನಪಿಗೆ ಬರುತ್ತದೆ. ಆದ್ದರಿಂದ ಶಿಪಿಃ = ಶಿಬಿ ಇರಬಹುದೇ ?)

೮. 'ರಭಿ' ಧಾತುವಿನ ಅರ್ಥ ಶಬ್ದೇ ಎಂದು. ದನಿಯೊಳ್ ಎಂಬುದು ಕನ್ನಡದ ಅರ್ಥ. ಧ್ವನಿಗೆ ವಾಯುವೇ ಮುಖ್ಯ ಕಾರಣ. ಈ ಧಾತುವಿನಿಂದ 'ರಂಭಃ' ಶಬ್ದವು ನಿಷ್ಪನ್ನವಾಗಿ ಇದಕ್ಕೆ ನಾಲ್ಕು ರೀತಿಯ ಉಪಸರ್ಗಗಳು ಸೇರಿದಾಗ ನಾಲ್ಕು ಪದಗಳು ಸಿದ್ಧವಾಗಿ ಆ ಮೂಲಕ ಐದು ತೆರನಾದ ವಾಯುಗಳನ್ನು ಚೆನ್ನವೀರಕವಿಯು ತಿಳಿಸುತ್ತಾನೆ.

ರಂಭಃ = ಮನೋವಾಯು
ಆರಂಭಃ = ಬುದ್ಧಿವಾಯು
ವಿರಂಭಃ = ಚಿತ್ತವಾಯು
ಸುರಂಭಃ = ಅಹಂಕಾರ ವಾಯು
ಸಂರಂಭಃ = ಆತ್ಮವಾಯು

ನಮಗೆ, ಪ್ರಾಣ, ಅಪಾನ, ವ್ಯಾನ, ಉದಾನ ಮತ್ತು ಸಮಾನಗಳೆಂಬ ಐದು ಬಗೆಯ ವಾಯುಗಳು ಪರಿಚಿತ. ಆದರೆ ಚೆನ್ನವೀರಕವಿಯು ತಿಳಿಸಿದ ವಾಯುಗಳು ಹೊಸದಾದ ಅಂಶವಾಗಿದೆ.

೯. ''ರಮು'ಧಾತುವಿಗೆ ಕ್ರಿಡಾಯಾಂ ಎಂದು ಅರ್ಥೈಸಿ, ಕನ್ನಡದಲ್ಲಿ 'ಆಟದೊಳ್ ಎಂದು ಅರ್ಥವನ್ನು ಹೇಳುತ್ತಾನೆ. ಈ ಧಾತುವಿನಿಂದ ನಿಷ್ಪನ್ನವಾದ 'ರಾಮಃ' ಶಬ್ದಕ್ಕೆ ಆರು ಪ್ರಯೋಗಗಳನ್ನು ಕೊಡುತ್ತಾನೆ.

ರಾಮಃ = ೧) ಕಳ್ತಿಗಿರುಬನು, ೨) ಪರಶುರಾಮನುಂ ೩) ದಶರಥರಾಮನುಂ

೪) ಮೈದುನ ರಾಮನುಂ, ೫) ಸಿದ್ಧರಾಮನುಂ, ೬)ಏಕಾಂತರಾಮನುಂ. ಈ ರಾಮರುಗಳಲ್ಲಿ ಇಬ್ಬರು ಪುರಾಣಪುರುಷರು. ಉಳಿದ ಮೂವರು ಬಸವಣ್ಣನವರ ಸಮಕಾಲೀನರು (ಬಲರಾಮನನ್ನು ಚೆನ್ನವೀರಕವಿಯು ಏಕೆ ಬಿಟ್ಟನೋ ತಿಳಿಯದು).

೧೦. 'ರಂಜ' ಎಂಬ ಧಾತುವಿಗೆ ರಾಗೇ ಎಂಬ ಅರ್ಥವನ್ನು ಹೇಳಿ ಕನ್ನಡದಲ್ಲಿ ಕೆಂಪಿನೊಳ್ ಎಂದು ಪರಿಚಯಿಸುತ್ತಾನೆ. ಆತ್ಮನೇಪದಿಯ ಧಾತುವಿನಿಂದ 'ನಿರಂಜನಃ' ಎಂಬ ಶಬ್ದವು ನಿಷ್ಪತ್ತಿಯಾಗಿ, 'ಮಾಯಾತೀತಂ' ಎಂದು ಇದಕ್ಕೆ ಅರ್ಥೈಸುತ್ತಾನೆ. ದಿವಾದಿಯಲ್ಲಿನ ಇದೇ ಧಾತುವಿಗೆ ಮೇಲಿನ ಅರ್ಥವನ್ನೇ ಹೇಳಿದ್ದಾನೆ. ಇದರಿಂದ 'ರಂಜಕಃ ಪದವು ನಿಷ್ಪನ್ನವಾಗಿ, 'ತುಪಾಕದ ಮದ್ದಿನೊಳ್ ಎಂದು ಇದಕ್ಕೆ ಅರ್ಥವನ್ನು ಹೇಳಿದ್ದಾನೆ. ಈ ಪ್ರಯೋಗದಿಂದ ಚೆನ್ನವೀರ ಕವಿಯ ಕಾಲಕ್ಕೆ ''ರಂಜಕ''ವು (Phosphorus) ''ತುಪಾಕಿಗೆ ಅಥವಾ ಬಂದೂಕಕ್ಕೆ (gun) ಮದ್ದಿನ ಪುಡಿಯಾಗಿ ಬಳಕೆಯಲ್ಲಿತ್ತು ಎಂಬುದು ತಿಳಿದು ಬರುತ್ತದೆ. ಎಂದರೆ ಈ ಕವಿಯ ಕಾಲಕ್ಕೆ ತುಪಾಕಿಯು ಬಳಕೆಯಲ್ಲಿತ್ತು ಎಂಬುದರಿಂದ ಕರ್ನಾಟಕಕ್ಕೂ ಯುರೋಪಿಯನ್ನರ ಆಗಮನವಾಗಿರಬೇಕು. ಅವರಿಂದ ಯುದ್ಧದಲ್ಲಿ ತುಪಾಕಿಯು ಬಳಕೆಯಾಗಿದ್ದುದನ್ನು ಕವಿಯು ಕಣ್ಣಾರೆ ಕಂಡಿರಬೇಕು.

೧೧. ಕೇರಳ ಪ್ರಾಂತ್ಯದ ಶಬರಿಮಲೆಯ ಒಡೆಯ 'ಅಯ್ಯಪ್ಪ' ಸ್ವಾಮಿಯ ಹೆಸರು ಇತ್ತೀಚಿನ ದಿನಗಳಲ್ಲಿ ಅತ್ಯಂತ ಪ್ರಖ್ಯಾತಿಯಾಗಿದೆ. ಈ ಸ್ವಾಮಿಗೆ ಮಣಿಕಂಠ, ಶಾಸ್ತಾ ಎಂಬ ಹೆಸರುಗಳೂ ಉಂಟು. 'ಶಾಸ್ತಾ' ಎಂಬ ನಾಮಪದದ ಬಗೆಗೆ ಈ ಕೃತಿಯಲ್ಲಿ ಇಂತಿದೆ. ಅದಾದಿಯ ಗಣದ 'ಶಾಸು' ಧಾತುವಿಗೆ ಅನುಶಿಷ್ಟೌ, ಎಂದರೆ ಶಿಕ್ಷೆಯೊಳ್ ಎಂದು ಅರ್ಥವನ್ನು ಕೊಡುತ್ತಾನೆ. ಇದರಿಂದ ಶಾಸ್ತಾ ಎಂಬ ನಾಮಪದವು ನಿಷ್ಪನ್ನವಾಗಿರುತ್ತದೆ. ಇದಕ್ಕೆ ಅರ್ಹಂತನುಂ, ಶಿಕ್ಷಕನುಂ ಎಂದು ಎರಡು ಅರ್ಥವನ್ನು ಹೇಳಿ ವಿಸ್ತಾರವಾದ ವಿಷಯದಿಂದ ಕೂಡಿದ ಅರ್ಥವನ್ನು ಮೂರನೆಯದಕ್ಕೆ ಈ ರೀತಿ ತಿಳಿಸುತ್ತಾನೆ.

ಚತುರ್ಮುಖದ, ಅಷ್ಟಬಾಹುವಿನ, ರಕ್ತಕಾಯದ, ದ್ವಾದಶಾಕ್ಷಿಗಳ, ಗಜವಾಹನದ, ಮೋಹಿನೀರೂಪದ ನಾರಾಯಣನ ರುದ್ರನ ಕುಮಾರನಾದ, ಮತ್ಸ್ಯಾವತಾರದ ವಿಷ್ಣುವಿನ ಸಂಹಾರಕನಾದ ಶಾಸ್ತಾರನುಂ.

೧೩. 'ಮದೀ' ಎಂಬ ಧಾತುವಿಗೆ 'ಹರ್ಷೇ' ಎಂದರೆ ಹರುಷದೊಳ್ ಎಂಬ ಅರ್ಥವನ್ನು ತಿಳಿಸುತ್ತಾನೆ. ಈ ಧಾತುವಿನಿಂದ ಮಾದೇಶ್ವರಃ ಎಂಬುದು ನಿಷ್ಪನ್ನವಾಗುತ್ತದೆ. ಇದಕ್ಕೆ ಮಾದೇಶ್ವರ =ಶಿವಣಶರಣಂ.

ಶಿವಶರಣರಾದ ಮಾದೇಶ್ವರರು ಸದಾ ಹರ್ಷಚಿತ್ತರಾಗಿದ್ದು, ಭಕ್ತರನ್ನೂ ಹರ್ಷಚಿತ್ತರಾಗಿರುವಂತೆ ಉದ್ಧಾರಮಾಡುತ್ತಿದ್ದರೆಂಬುದು ತಿಳಿದುಬರುತ್ತದೆ.

೧೪. 'ತನಾದಿ' ಗಣದಲ್ಲಿ ಬರುವ 'ಡಕೃಞ್' ಧಾತುವಿಗೆ ಕರಣೇ ಎಂದರೆ ಮಾತಿನೊಳ್ ಎಂದು ಅರ್ಥವನ್ನು ಕೊಡುತ್ತಾನೆ. ಈ ಧಾತುವಿನಿಂದ 'ಸಂಸ್ಕೃತಂ' ಎಂಬ ಪದವು ಮತ್ತು 'ಪ್ರಾಕೃತಂ' ಎಂಬ ಪದವೂ ನಿಷ್ಪನ್ನವಾಗುತ್ತವೆ.

ಸಂಸ್ಕೃತಂ = ಸಗ್ಗಿಗರ ಮಾತು
ಪ್ರಾಕೃತಂ = ಸಗ್ಗದ ಪೆಣ್ಗಳ ಮಾತು.

ಎಂಬ ಈ ಅರ್ಥದ ಅಭಿಪ್ರಾಯವುಳ್ಳ ಚನ್ನವೀರಕವಿಯು ಸಂಸ್ಕೃತ ಭಾಷೆ ಮತ್ತು ಅದರ ಕುಟುಂಬ ಭಾಷೆಗಳ ಚಿಂತನೆಯಿಲ್ಲದೆ ಸಂಪ್ರದಾಯದ ಜಾಡಿನಲ್ಲೇ ಬಂದಿದ್ದಾನೆ ಎನ್ನಬಹುದು.

೧೫. 'ಉಛುಶು' ಎಂಬ ಧಾತುವಿನ ಅರ್ಥ 'ಉಂಛೇ' ಎಂದರೆ 'ಆಯ್ಕುಳಿಯಲ್ಲಿ' ಎಂಬುದಾಗಿ. ಈ ಧಾತುವಿನಿಂದ "ವೃಷ್ಟತಂಡುಲಮಾರಃ" ಎಂಬ ಪದವು ನಿಷ್ಪತ್ತಿಯಾಗಿದೆ. ಇದರ ಅರ್ಥ ಆಯ್ದಕ್ಕಿಮಾರಯ್ಯ ಎಂಬುದಾಗಿ. ಆಯ್ದಕ್ಕಿ ಮಾರಯ್ಯನು ಒಬ್ಬ ಶಿವಶರಣ. ಬಸವಣ್ಣನವರ ಸಮಕಾಲೀನ. ಇವನ ವಚನಗಳ ಅಂಕಿತ "ಅಮರೇಶ್ವರಲಿಂಗ".

೧೬. 'ಮುಷ' ಎಂಬ ಧಾತುವಿಗೆ ಅರ್ಥಸ್ತೇಯೇ ಎಂದರೆ ಕಳವಿನೊಳ್ ಎಂಬುದಾಗಿ. ಶ್ರೀ ರುದ್ರಸೂಕ್ತದಲ್ಲಿ ಬರುವ 'ಮುಷ್ಣತಾಂ ಪತಯೇನಮಃ' ಎಂಬ ವಾಕ್ಯವನ್ನೇ ಇಲ್ಲಿನ ಪ್ರಯೋಗಕ್ಕೆ ತೆಗೆದುಕೊಂಡಿದ್ದಾನೆ. 'ಮುಷ' ದಿಂದ 'ಮುಷ್ಣ' ವು ನಿಷ್ಪನ್ನವಾಗಿದೆ. ಈ ವಾಕ್ಯದ ಅರ್ಥ 'ಕಳ್ಳರೊಡಯಂಗೆ ಶರಣು' ಎಂಬುದಾಗಿ. ವೃತ್ತಿಯಲ್ಲಿ ಕಳ್ಳನಾಗಿದ್ದರೂ, ಪ್ರವೃತ್ತಿಯಲ್ಲಿ ಶಿವಭಕ್ತನಾಗಿರುತ್ತಾನೆ. ಅಂತಹವನಿಗೂ ಶಿವನು ಒಡೆಯನಾಗಲೇಬೇಕು. ಕನ್ನದ ಬ್ರಹ್ಮಯ್ಯನೆಂಬ ಒಬ್ಬ ಶಿವಶರಣನಿದ್ದನು ಎಂಬುದನ್ನು ಇಲ್ಲಿ ನೆನೆಯಬಹುದು.

೧೭.ಚುರಾದಿ ಗಣದಲ್ಲಿ 'ಲಕ್ಷ್ಮ' ಎಂಬ ಧಾತುವಿದೆ. ಅದರ ಅರ್ಥ 'ದರ್ಶನಾಂಕನಯೋಃ' ಎಂದರೆ ನೋಟದೊಳಂ, ಗುರುತಿನೊಳಂ ಎಂದು ಕನ್ನಡದಲ್ಲಿ ಅರ್ಥೈಸಿದ್ದಾನೆ ಚನ್ನವೀರ ಕವಿ. ಈ ಧಾತುವಿನಿಂದ ಲಕ್ಷ್ಮೀಃ, ಅಲಕ್ಷ್ಮೀಃ ಎಂಬ ಎರಡು ಬಗೆಯ ನಾಮಪದಗಳು ನಿಷ್ಪನ್ನವಾಗುತ್ತವೆ.

ಲಕ್ಷ್ಮೀಃ = ಪಾಲ್ಗಡಲ ಕುವರಿ, ಎಂಬ ಅರ್ಥವಿದ್ದರೆ, ಅಲಕ್ಷ್ಮೀಃ ಎಂಬುದರ ವ್ಯಾಪಕ ಅರ್ಥವು ಈರೀತಿ ಇದೆ. ಅಲಕ್ಷ್ಮೀಃ = ಪಾಲ್ಗಡಲ ಕಡೆತದಲ್ಲಿ ಚಂದ್ರನತ್ತಣಿಂ ಕಡೆಸಾರಿ ಹುಟ್ಟಿದ ಬ್ರಹ್ಮನ ಹಿರಿಯ ಮಗನಾದ ಪಾಪಪುರುಷನೆಂಬ ಹೆಸರುಳ್ಳ ದ್ರೋಹಿಯೆಂಬ ಹೆಸರುಳ್ಳ, ಪಾತಕನೆಂಬ ಹೆಸರುಳ್ಳ, ಯಕ್ಷ್ಮನ್ ಎಂಬ ಹೆಸರುಳ್ಳ, ಜೀವಿಗಳ ಎಡದ ಹೊಟ್ಟೆಯೊಳಿರ್ಪ ಅಧರ್ಮನ ಹೆಂಡತಿಯಾದ, ಜೋಕುಮಾರನ ತಾಯಿಯಾದ ಜೇಷ್ಠಾದೇವಿಯೆಂಬ ಹೆಸರುಳ್ಳ ದರಿದ್ರ ಲಕ್ಷ್ಮಿ.

ಈ ವಿವರಣೆಯಲ್ಲಿ ಬ್ರಹ್ಮನ ಹಿರಿಯ ಮಗನಾರೋ ತಿಳಿದಿರಲಿಲ್ಲ, ಧರ್ಮ (ಯಮ)ನು ಪರಿಚಿತ. ಆದರೆ ಅಧರ್ಮನು ತಿಳಿಯದು, ಇನ್ನು ಅವನ ಹೆಂಡತಿ ಅಪರಿಚಿತ, ಜೋಕುಮಾರ ಜಾನಪದ ಸಾಹಿತ್ಯ ಮತ್ತು ಶಿಷ್ಟಸಾಹಿತ್ಯದಲ್ಲಿ ಪರಿಚಿತ. ಆದರೆ ಅವನ ತಾಯಿ ದರಿದ್ರಲಕ್ಷ್ಮಿ ಎಂಬುದಂತು ಈ ಕೃತಿಯಿಂದಲೇ ತಿಳಿಯುತ್ತಿರುವ ಅಂಶವಾಗಿದೆ.

೧೮.'ಅರ್ದ' ಎಂಬ ಧಾತುವಿನ ಅರ್ಥ ಹಿಂಸಾಯಾಂ, ಎಂದರೆ ಕೊಲೆಯೊಳ್ ಎಂಬುದಾಗಿ. 'ಜನಾರ್ದನ' ರೂಪವು 'ಅರ್ದ' ಧಾತುವಿನಿಂದ ನಿಷ್ಪನ್ನವಾಗಿದೆ. ಇದರ ಅರ್ಥ ಕಾಲಾಗ್ನಿರುದ್ರ ಎಂಬುದಾಗಿ. ಸಾಮಾನ್ಯವಾಗಿ ಜನಾರ್ದನ ಎಂಬುದು ವಿಷ್ಣುವಿಗೆ ಅನ್ವಯಿಸುವ ಪದ. ಇದರ ಧಾತುವಿನ ಅರ್ಥದ ಪ್ರಕಾರ ಈ ಪದವು ಶೈವ ಪರವಾಗುತ್ತದೆ.

ಹೀಗೆ ಚನ್ನವೀರ ಕವಿಯ ಕಾಶಕೃತ್ಸ್ನ ಶಬ್ದಕಲಾಪ ಧಾತುಪಾಠಗಳ ಟೀಕೆಯನ್ನು ಪರಿವೀಕ್ಷಿಸುತ್ತಾ ಹೋದರೆ ಕುತೂಹಲಕರವಾದ ಅನೇಕ ವಿಷಯಗಳು, ಸಂಗತಿಗಳು ಅರ್ಥಗಳು ಕಂಡುಬರುತ್ತವೆ. ಈ ಮೊದಲೇ ತಿಳಿಸಿರುವಂತೆ ಈ ಕೃತಿಯು ಶಾಸ್ತ್ರಕೃತಿಯೂ ಅಹುದು, ಅರ್ಥಕೋಶವೂ ಅಹುದು. ಈ ನಿಟ್ಟಿನಲ್ಲಿ ಈ ಕೃತಿಯನ್ನು ಅಧ್ಯಯನ ಮಾಡುವುದು ಆಗತ್ಯವೆನಿಸುತ್ತದೆ.

■

# ಶ್ರೀ ಸಿದ್ಧಲಿಂಗ ವಿಜಯ ಮಹಾಕಾವ್ಯ

## ಒಂದು ಪರಿಚಯಾತ್ಮಕ ಅವಲೋಕನ

**ಡಾ॥ ಎಸ್. ರಂಗನಾಥ್**

---

ಪಂಡಿತ ಬಸವರಾಜಶಾಸ್ತ್ರಿಗಳಿಂದ ವಿರಚಿತವಾದ ಈ ಮಹಾಕಾವ್ಯ ೧೯೭೧ರಲ್ಲಿ ಪ್ರಕಟವಾಯಿತು. ಈ ಮಹಾಕಾವ್ಯದಲ್ಲಿ ವಿಷಯ ನಿರೂಪಣೆಯು ಈ ಕೆಳಕಂಡಂತಿದೆ : ಪ್ರಸ್ತಾವನೆ, ಕವಿ ವಿಚಾರ, ಕಾವ್ಯವಿಚಾರ, ಶ್ರೀಯಡಿಯೂರು ಮಹಾಕ್ಷೇತ್ರ, ಆತ್ಮನಿವೇದನೆ, ವಿಷಯಾನುಕ್ರಮಣಿಕೆ, ಶುದ್ಧಾಶುದ್ಧಪತ್ರಿಕೆ ಮತ್ತು ಮಹಾಕಾವ್ಯ ನಿರೂಪಣೆ. ಈ ವಿಷಯ ನಿರೂಪಣೆಯಿಂದ ನಮಗೆ ಕವಿಯ ಬಗ್ಗೆಯಾಗಲೀ, ಕವಿಯ ಪಾಂಡಿತ್ಯ ಪದವಿಗಳ ಬಗ್ಗೆಯಾಗಲೀ, ಕಾವ್ಯದಲ್ಲಿ ಮೂಡಿಬರುವ ವಿಷಯದ ಬಗ್ಗೆಯಾಗಲೀ ಎಳ್ಳಷ್ಟೂ ಸಂಶಯಕ್ಕೆ ಆಸ್ಪದವಿಲ್ಲ. ಸಂಸ್ಕೃತ ಸಾಹಿತ್ಯದಲ್ಲಿ ಅನೇಕ ಕೃತಿಗಳ ಬಗ್ಗೆ. ಕರ್ತೃವಿನ ಸಮಸ್ಯೆ, ಕವಿಯ ಕಾಲದ ಬಗ್ಗೆ ಸಮಸ್ಯೆ ಇತ್ಯಾದಿ ಸಮಸ್ಯೆಗಳು ಸಹಜವಾಗಿ ತಲೆದೋರುತ್ತವೆ. ಆದರೆ ಈ ಕಾವ್ಯವು ಈ ಎಲ್ಲ ಸಮಸ್ಯೆಗಳಿಂದ ಹೊರತಾಗಿರುವುದು ಒಂದು ವೈಶಿಷ್ಟ್ಯ.

### ಪ್ರಸ್ತಾವನೆ

ಈ ಕಾವ್ಯವನ್ನು ರಚಿಸುವುದರ ಮೂಲಉದ್ದೇಶವನ್ನು ಈ ಪ್ರಸ್ತಾವನೆಯಲ್ಲಿ ನಿರೂಪಿಸಿರುವುದು ಅತ್ಯಂತ ಸೂಕ್ತವಾಗಿದೆ. ಕನ್ನಡ ಭಾಷೆಯಲ್ಲಿ ಶ್ರೀ ಸಿದ್ಧಲಿಂಗೇಶ್ವರರ ಬಗ್ಗೆ

ವಿಪುಲವಾದ ಸಾಹಿತ್ಯವಿದೆ. ವಿರಕ್ತ ತೋಂಟದಾರ್ಯ ವಿರಚಿತ "ಸಿದ್ಧೇಶ್ವರ ಮಹಾಪುರಾಣ" ವಿದೆ. ಶಾಂತೇಶಕವಿಯಿಂದ ವಿರಚಿತವಾದ ಶ್ರೀ "ತೋಂಟದ ಸಿದ್ಧೇಶ್ವರಪುರಾಣ"ವಿದೆ. ಹೇರಂಬ ಕವಿಯಿಂದ ಬರೆಯಲ್ಪಟ್ಟ "ಸಿದ್ಧಲಿಂಗ ಸಾಂಗತ್ಯ" ವಿದೆ. ಹೀಗಿದ್ದೂ ಸಹ ಈ ಗ್ರಂಥದ ಪ್ರಸ್ತುತತೆಯೇನೆಂದರೆ ಪ್ರಪ್ರಥಮವಾಗಿ ಸಂಸ್ಕೃತ ಭಾಷೆಯಲ್ಲಿ ಸಿದ್ಧಲಿಂಗ ವಿಜಯವನ್ನು ಕುರಿತು ಕಾವ್ಯವನ್ನು ಬರೆದಿರುವುದು. ಇದರಿಂದ ಬಸವರಾಜ ಶಾಸ್ತ್ರಿಗಳಿಗೆ ಶಾಶ್ವತಕೀರ್ತಿ ದೊರೆತಂತಾಗಿದೆ.

"ಕನ್ನಡ ಭಾಷಾಯಾಂ ಶ್ರೀವಿರಕ್ತ ತೋಂಟದಾರ್ಯ ವಿರಚಿತ ಸಿದ್ಧೇಶ್ವರ ಮಹಾಪುರಾಣಂ ಪ್ರಸಿದ್ಧಮೇವ, ಅಪರಂ ಗುಬ್ಬೀ ಮಲ್ಲಣಾರ್ಯ ಪುತ್ರೇಣ ಶಾಂತೇಶ ಕವಿನಾ ವಿರಚಿತಂ ಶ್ರೀ ತೋಂಟದ ಸಿದ್ಧೇಶ್ವರ ಪುರಾಣಂ ನಾಮ. ಗ್ರಂಥಂ ಶ್ರೀ ಮುರುಘಾ ಮಠಾತ್ ಪ್ರಕಟಿತೋ ವರ್ತತೇ. ವೈಷ್ಣವೇನ ಕವಿನಾ ವಿರಚಿತಂ ಸಿದ್ಧಲಿಂಗಸಾಂಗತ್ಯಮಿತಿ. ಪ್ರಥಮಾವಸರೋಽಯಂ ಯದ್‌ಗೀರ್ವಾಣ ಭಾರತಾ ತಸ್ಯ ವಿಷಯೇ ಕಾವ್ಯಂ ವಿರಚ್ಯತೇ. ತದ್ವಿರಚ್ಯ ಪಂಡಿತ ಬಸವರಾಜ ಮಹಾಕವಿ ಸಂಸ್ಕೃತಸಾಹಿತ್ಯೇ ಚಿರಸ್ಥಾನಂ ಪ್ರಾಪ್ಯ ಐತಿಹಾಸಿಕ ಪುರುಷೋ ಅಭವದಿತಿ ಮಹತೀ ಸಂತುಷ್ಟಿ"[೧]

ಕವಿಯ ವಿಚಾರದಲ್ಲಿ, ಮಾತಾ ಪಿತೃಗಳ ಬಗ್ಗೆ, ಕವಿಯ ಸ್ಥಳದ ಬಗ್ಗೆ ಈ ಕೆಳಗಿನ ಸಾಲುಗಳು ಮಾಹಿತಿ ಕೊಡುತ್ತವೆ :-

*ಶ್ರೀ ರಾಯಚೂರು ವರಮಂಡಲ ಮಧ್ಯದೇಶೇ ।*
*ಶ್ರೀ ಸಿಂಧನೂರಿತಿ ವಿಭಾಗ ಶಿರೋಮಣೌ ಚ ॥*

*ಶೋಭಾನ್ವಿತೇ ಪಗಡದಿನ್ನಿ ಸುನಾಮಗ್ರಾಮೇ ।*
*ಮೇಧಾಯುತೋ ಬಸವರಾಜ ಸುಧೀಃ ಕವೀಂದ್ರಃ ॥*

*ಗುರುಪಾದಾರ್ಯ ಸದ್ವಂಶೋ ಮುಕ್ತಾಮಣಿರಿವಾಮಲಃ ।*
*ರುದ್ರಮೂರ್ತಿಸುತೋ ಧೀಮಾನ್ ಸಂಗಮಾಂಬಾತನೂಭವಃ ॥*

*ಪುತ್ರೋ ಅಪ್ಪಮೋ ಲಿಂಗನಿಷ್ಠಃ ಸದಾಚಾರ ಪರಾಯಣಃ ! ।*
*ಬಸವರಾಜಶಾಸ್ತ್ರಜ್ಞಃ ಶಿವಾದ್ವೈತ ವಿಶಾರದಃ*[೨]

ರಾಯಚೂರು ಮಂಡಲದ ಸಿಂಧನೂರು ವಿಭಾಗದ ಪಗಡದಿನ್ನಿ ಗ್ರಾಮದಲ್ಲಿ ಸದಾಚಾರಪರಾಯಣರಾದ ರುದ್ರಮೂರ್ತಿ ಹಾಗೂ ಸಂಗಮಾಂಬಾ ಎಂಬುವವರ

---

೧. ಶ್ರೀ ಸಿದ್ಧಲಿಂಗ ವಿಜಯ ಮಹಾಕಾವ್ಯಂ - ಪಗಡದಿನ್ನಿ ಬೃಹನ್ಮಠಾಧ್ಯಕ್ಷೇಣ ಪಂಡಿತ ಬಸವರಾಜಶಾಸ್ತ್ರೀ ಣಾ ವಿರಚಿತಂ - ೧೯೭೧ - ಪುಟ - IV

೨. ಅದೇ ಗ್ರಂಥ- ಪುಟ-೫

ಎಂಟನೆಯ ಪುತ್ರರಾಗಿ, ಶಿವಾದ್ವೈತ ವಿಶಾರದರಾದ ಪಂಡಿತ ಬಸವರಾಜ ಶಾಸ್ತ್ರಿಗಳು ಜನ್ಮತಾಳಿದರು. ಕವಿಯ ವಿದ್ಯಾಭ್ಯಾಸಾದಿಗಳ ಬಗ್ಗೆ, ಪಡೆದ ಕೀರ್ತಿಯ ಬಗ್ಗೆಯೂ ಸಹ ಉಲ್ಲೇಖವಿದೆ.

''ವಿಂಶತಿ ಶತಮಾನಸ್ಯ ಪ್ರಥಮದಶಕೇ ಜನ್ಮಾಧಿಗಮ್ಯ ಸ್ವದೇಶೇಸಾಹಿತ್ಯ ಮಧೀತ್ಯ ವಾರಾಣಾಸ್ಯಾಂ ವ್ಯಾಕರಣ ಶಾಸ್ತ್ರಂ ಸಮೂಲಮಧೀತ್ಯ ವ್ಯಾಕರಣ ತೀರ್ಥ, ವ್ಯಾಕರಣ ಶಾಸ್ತ್ರೀ, ವ್ಯಾಕರಣ ರತ್ನಮಿತಿ, ಸಾಹಿತ್ಯೇ ಶಿರೋಮಣಿರಿತಿ ಪದವೀಂ ಚ ಪ್ರಾಪ್ತವಾನ್ ವೈದಿಕ ಜ್ಯೋತಿಷ ಶಾಸ್ತ್ರೇಪಿ ಲಬ್ಧಪ್ರವೇಶಃ ಇತಿ ಜನಪ್ರಿಯ.[೩]

ಇಪ್ಪತ್ತನೆಯ ಶತಮಾನದ ಪ್ರಥಮದಶಕದಲ್ಲಿ ಜನ್ಮತಾಳಿ ಸ್ವಂತಪ್ರಾಂತ್ಯದಲ್ಲಿ ಸಾಹಿತ್ಯಾಧ್ಯಯನ ಮಾಡಿ, ವಾರಣಾಸಿಯಲ್ಲಿ ವ್ಯಾಕರಣಶಾಸ್ತ್ರವನ್ನು ಆಮೂಲಾಗ್ರವಾಗಿ ಅಧ್ಯಯನಮಾಡಿ ''ವ್ಯಾಕರಣ ತೀರ್ಥ'', ''ವ್ಯಾಕರಣ ಶಾಸ್ತ್ರೀ'', ''ವ್ಯಾಕರಣ ರತ್ನ'' ಎಂಬುದಾಗಿ ಬಿರುದುಗಳನ್ನು ಪಡೆದು ''ಸಾಹಿತ್ಯ ಶಿರೋಮಣಿ'' ಪದವಿಯನ್ನು ಗಳಿಸಿ, ವೈದಿಕ ಜ್ಯೋತಿಷ ಶಾಸ್ತ್ರಗಳಲ್ಲೂ ಪ್ರಾವೀಣ್ಯವನ್ನು ಹೊಂದಿದ್ದರೆಂದು ತಿಳಿದು ಬರುತ್ತದೆ.

ಈ ಮಹಾಕಾವ್ಯವನ್ನು ಬರೆಯುವ ಸಂದರ್ಭದಲ್ಲಿ ಒಂದು ಸಲ ಕವಿಯ ಆರೋಗ್ಯಕೆಟ್ಟು, ಕಣ್ಣುಗಳು ಮಂದವಾಗಿ ಕಷ್ಟದ ಪರಿಸ್ಥಿತಿ ಒದಗಲು ಆರಾಧ್ಯದೈವವಾದ ಸಿದ್ಧಲಿಂಗೇಶ್ವರನಿಗೆ ತಮ್ಮನ್ನು ತಾವು ಅರ್ಪಿಸಿಕೊಂಡು ಆ ದೇವರ ಕೃಪಾಬಲದಿಂದಲೇ ಮತ್ತೆ ದೃಷ್ಟಿಯನ್ನು ಪಡೆದು ಶರೀರ ಸೌಷ್ಠವವುಂಟಾಗಿ ಮಹಾಕಾವ್ಯವನ್ನು ಪೂರೈಸಿದರೆಂದು ತಿಳಿದು ಬರುತ್ತದೆ.

*ಮಹಾಕಾವ್ಯರಚನಾಕಾಲೇ ಏತದಾ ಕವೇಃ ಶರೀರಂ*
*ವ್ಯಾಧಿಗ್ರಸ್ತಂ ಸದತಿ ಜೀರ್ಣಾವಸ್ಥಾಂಗತಮ್,*
*ನಯನಯೋಃ ಮಾಂದ್ಯಕ್ರಿಯಾ ಜಾತಾ, ತದಾ ಕವಿಃ*
*ಆರಾಧ್ಯದೇವಂ ಶ್ರೀ ಸಿದ್ಧಲಿಂಗೇಶ್ವರಂ ಆತ್ಮಾನಂ*
*ಸರ್ವಥಾ ಭಾವೇನ ಅರ್ಪಯಿತ್ವಾ ತಸ್ಯ ಕೃಪಾಬಲೇನ*
*ಚ ಪುನಃ ದೃಷ್ಟಿಂ ಲಬ್ಧವಾನ್, ಶರೀರಸೌಷ್ಠವಂ*[೪]
*ತದೈವ ಪ್ರಾಪ್ಯ ಮಹಾಕಾವ್ಯಮಿದಂ ಸಮಾಪ್ತಯಾಮಾಸ*

**ಕೃತಿಗೆ ಮೂಲಾಧಾರ**

ಈ ಕೃತಿಗೆ ಮೂಲಾಧಾರ ವಿರಕ್ತ ತೋಂಟದಾರ್ಯ ವಿರಚಿತವಾದ ಶ್ರೀಸಿದ್ಧೇಶ್ವರ ಪುರಾಣವೆಂದೇ ತಿಳಿಯುತ್ತದೆ :-

---
೩. ಅದೇ ಗ್ರಂಥ - ಪುಟ-೬
೪. ಅದೇ ಗ್ರಂಥ - ಪುಟ-೬

“ಶ್ರೀಸಿದ್ಧಲಿಂಗೇಶ್ವರ ಮಹಿಮ್ನೋ ವಿಷಯೇ ಮಹಾಕವಿರಯಂ ವಿರಕ್ತ ತೋಂಟದಾರ್ಯ ವಿರಚಿತಂ ಶ್ರೀ ಸಿದ್ಧೇಶ್ವರ ಪುರಾಣಮೇವ ಆಧಾರೀಕೃತ್ಯ ಲಿಖಿತಾವಾನಿತಿ ಜ್ಞಾಯತೇ”[೫]

## ಕೃತಿಯ ಪರಿಚಯ

ಈ ಶ್ರೀಸಿದ್ಧಲಿಂಗ ವಿಜಯ ಮಹಾಕಾವ್ಯದಲ್ಲಿ ೨೬ ಸರ್ಗಗಳಿವೆ. ಒಟ್ಟು ೨೨೪೧ ಶ್ಲೋಕಗಳಿವೆ. ಶ್ರೀ ಸಿದ್ಧಲಿಂಗೇಶ್ವರನೇ ಕಾವ್ಯದ ನಾಯಕ. ಶ್ರೀಸಿದ್ಧಲಿಂಗೇಶ್ವರನ ಮಹಿಮೆ, ಲೀಲಾಚಮತ್ಕಾರಗಳನ್ನು ಮೂರುಬಗೆಯಾಗಿ ಬಣ್ಣಿಸಲಾಗಿದೆ. ಜೈನ ಮೊದಲಾದ ಮತಗಳಿಗಿಂತ ಭಿನ್ನವಾದುದು ಶ್ರೇಷ್ಠವಾದುದು ಎಂಬುದನ್ನು ಪ್ರತಿಪಾದಿಸುವುದು ಮೊದಲನೆಯ ಪ್ರಕಾರ. ಸ್ಥಾವರ ಲಿಂಗಕ್ಕಿಂತ ಜಂಗಮ ಲಿಂಗವು ಶ್ರೇಷ್ಠವೆಂದು ಎರಡನೆಯ ಪ್ರಕಾರ. ಭಕ್ತರಿಗೆ ಪ್ರಾಣ ಪ್ರದಾನ ಮಾಡುವುದು, ಸ್ವೀಕರಿಸುವುದು ರೋಗಾದಿಗಳನ್ನು ನಿವಾರಣೆ ಮಾಡುವುದು ಮೂರನೆಯ ಪ್ರಕಾರ.

*ಶ್ರೀ ಸಿದ್ಧಲಿಂಗೇಶ್ವರಸ್ಯ ಮಹಿಮಾ, ಲೀಲಾಚಮತ್ಕಾರಾವಾ*
*ಮಹಾಕಾವ್ಯೇಸ್ಮಿನ್ ತ್ರಿಭಿಃ ಪ್ರಕಾರೈಃ ಪ್ರದರ್ಶಿತಾಃ ಸಂತಿ*
*ತತ್ರ ಜೈನಾದ್ಯನ್ಯಮತೀಭ್ಯೋ ಭಿನ್ನೋ ವೀರಶೈವಃ*
*ಶ್ರೇಷ್ಠತಮ ಇತಿ ಪ್ರದರ್ಶನಂ ಪ್ರಥಮಃ ಪ್ರಕಾರಃ*
*ಸ್ಥಾವರಲಿಂಗಾತ್ ಜಂಗಮಲಿಂಗಂ ಶ್ರೇಷ್ಠತರಮಿತಿ*
*ಸ್ಥಿರೀಕರಣಂ ದ್ವಿತೀಯಃ, ಭಕ್ತಾನಾಂ ಪ್ರಾಣಪ್ರದಾನಂ*
*ರೋಗಾದಿತಸ್ಯ ನಿವಾರಣಂ ಚ ತೃತೀಯಃ ಪ್ರಕಾರಃ*[೬]

ಈ ಮಹಾಕಾವ್ಯದ ವೈಶಿಷ್ಟ್ಯವೆಂದರೆ “ಪ್ರತಿಸರ್ಗದ ಕೊನೆಯಲ್ಲೂ ಸಹ ಆ ಸರ್ಗಕ್ಕೆ ಒಂದು ಔಚಿತ್ಯಪೂರ್ಣವಾದ ಹೆಸರನ್ನು ಕೊಟ್ಟಿರುವುದು”. - ಸಿದ್ಧಲಿಂಗೇಶ್ವರ ಆವಿರ್ಭಾವ (III ಶ್ಲೋಕಗಳು), ಗುರುಶಿಷ್ಯ ಸಮಾಗಮ (೯೯ ಶ್ಲೋಕಗಳು) ಜಂಗಮಾಧಿಕಾರ ಪ್ರಾಪ್ತಿ (೧೧೦ ಶ್ಲೋಕಗಳು), ಆರುಣಾಚಲೇಶ್ವರ ಹಸ್ತದಿಂದ ಮುಕ್ತಾಹಾರ ಗ್ರಹಣಪೂರ್ವಕ ಲಿಂಗಧಾರಣ (೧೧೦ ಶ್ಲೋಕಗಳು), ಪಾದೋದಕ ಪ್ರಸಾದ ಮಹತ್ವ ಬೋಧಕ, (೭೭ ಶ್ಲೋಕಗಳು), ಮಹಾಬಲೇಶನ ಶಿರಸ್ಸಿನಲ್ಲಿ ಪಾದನ್ಯಾಸಾವಿರ್ಭಾವಿತ ಗಂಗಾಪ್ರವಾಹ (೫೯ ಶ್ಲೋಕಗಳು), ಉತ್ತುಂಗ ಯೋಗೀಗರ್ವಭಂಗ (೯೨ ಶ್ಲೋಕಗಳು), ಶೃತ್ಯಾಗಮಾದಿ ಪ್ರಮಾಣಗಳಿಂದ ಜನಾರ್ದನನ ಮುಖಮುದ್ರಣ, (೧೦೫ ಶ್ಲೋಕಗಳು), ಶೃತ್ಯಾಗಮ ಪ್ರಮಾಣಗಳಿಂದ ಜೈನವಾದ ನಿರಾಕರಣ (೮೮ ಶ್ಲೋಕಗಳು), ವೃದ್ಧಜಂಗಮರೂಪೀ ಮಲ್ಲಿನಾಥ ಸತ್ಕೃತಿ (೭೭

---

೫. ಶ್ರೀಸಿದ್ಧಲಿಂಗ ವಿಜಯ ಮಹಾಕಾವ್ಯ. ಪುಟ ೫

೬. ಅದೇ ಗ್ರಂಥ. ಪು.ಸಂ.೧೧

ಶ್ಲೋಕಗಳು), ನೈರಂತರ್ಯ ಸಮಾಧಿಯಿಂದ ವಾಲ್ಮೀಕಾಗ್ನಿ (೬೭ ಶ್ಲೋಕಗಳು) ವಲ್ಮೀಕದಿಂದ ಹೊರಬಂದ ಶಿವಯೋಗಿಗಳಿಂದ ಪೂಜಾ ಪ್ರಸಾದ ಗ್ರಹಣ (೬೭ ಶ್ಲೋಕಗಳು), ೧೩ ನೇ ಸರ್ಗದಲ್ಲೂ ಅದೇ ವಿಷಯದ ಮುಂದುವರೆಯುವಿಕೆ (೫೨ ಶ್ಲೋಕಗಳು), ೧೪ನೇ ಸರ್ಗದಲ್ಲೂ ಅದೇ ವಿಷಯ ಮುಂದುವರಿಯುವುದು (೮೦ ಶ್ಲೋಕಗಳು), ನಾನಾ ಲೀಲಾ ಪ್ರಬೋಧಕ (೯೦ ಶ್ಲೋಕಗಳು), ಸ್ಫಟಿಕ ಲಿಂಗಾಕರಣ ದ್ರೋಣ ಪುಷ್ಪವೃಷ್ಟಿ ಪ್ರಬೋಧಕ (೬೪ ಶ್ಲೋಕಗಳು), ಮಾಯಾದೇವೀ ಪಾದ ಪೂಜಾ ಪ್ರಸಾದ ಗ್ರಹಣ (೮೬ ಶ್ಲೋಕಗಳು), ಪೂರ್ಣನದಿಯಲ್ಲಿ ಚೌರ್ಯಾ ಸಕ್ತವಾದ ನಾರೀಕರ ಸ್ಥಂಭನ ಪ್ರಬೋಧಕ (೭೧ ಶ್ಲೋಕಗಳು), ಲಿಂಗ ಪೂಜಾ ವಿಧಾನ ಬೋಧಕ (೬೮ ಶ್ಲೋಕಗಳು), ಶಕ್ತಿ ವಿಶಿಷ್ಟಾದ್ವೈತ ತತ್ತ್ವ ಪ್ರತಿಪಾದನೆ (೭೬ ಶ್ಲೋಕಗಳು), ಸೃಷ್ಟಿ ಕ್ರಮ ಪ್ರತಿಪಾದನೆ. (೭೧ ಶ್ಲೋಕಗಳು), ಲಿಂಗಧಾರಣಾದಿ ಶಿವಾಚಾರ ಸಂಪತ್ತಿ (೭೧ ಶ್ಲೋಕಗಳು), ಅವಾಂತರ ಬೋಧ ವಿಶಿಷ್ಟ ಭಕ್ತಸ್ಥಲ ಪ್ರತಿಪಾದಕ, (೬೪ ಶ್ಲೋಕಗಳು), ಮಾಹೇಶ್ವ ಪ್ರಸಾದಿಸ್ಥಲಬೋಧಕ (೮೦ ಶ್ಲೋಕಗಳು,) ಪ್ರಾಣ ಲಿಂಗಿ ಸ್ಥಲಬೋಧಕ (೭೦ ಶ್ಲೋಕಗಳು), ಶರಣೈಕ್ಯಸ್ಥಲ ಬೋಧಕ (೮೩ ಶ್ಲೋಕಗಳು).

ಈ ಮಹಾಕಾವ್ಯದ ಎರಡನೆಯ ವೈಶಿಷ್ಟ್ಯವೆಂದರೆ ''ಪ್ರತಿಸರ್ಗದಲ್ಲೂ ಉಪಯೋಗಿಸಿರುವ ವೃತ್ತದ ಹೆಸರನ್ನು ನಮೂದಿಸಿರುವುದು''. ಮೊದಲನೆಯ ಸರ್ಗದಲ್ಲಿ ಶಾರ್ದೂಲವಿಕ್ರೀಡಿತ, ಇಂದ್ರವಜ್ರಾ, ಉಪೇಂದ್ರವಜ್ರಾ, ಧೃತವಿಲಂಬಿತ, ವಸಂತತಿಲಕಾ ವೃತ್ತಗಳೂ, ಉಪಯೋಗಿಸಲ್ಪಟ್ಟಿವೆ.

ಈ ಮಹಾಕಾವ್ಯದ ಮೂರನೆಯ ವೈಶಿಷ್ಟ್ಯವೆಂದರೆ ವಿಶ್ವನಾಥನು ಸಾಹಿತ್ಯದರ್ಪಣದಲ್ಲಿ ಮಹಾಕಾವ್ಯದಲ್ಲಿರಬೇಕಾದ ಲಕ್ಷಣಗಳನ್ನು ಹೇಳುವಂತೆಯೇ ಇಲ್ಲೂ ಸಹ ಬಹುತೇಕ ಅನುಸರಿಸಲಾಗಿದೆ (i) ಅವನ ಪ್ರಕಾರ ಮಹಾಕಾವ್ಯವು ಅತಿ ಚಿಕ್ಕದಾಗಿಯೂ ಇರಬಾರದು, ಅತಿ ದೊಡ್ಡದಾಗಿಯೂ ಇರಬಾರದು : ''ನಾತಿ ಸ್ವಲ್ಪಾ, ನಾತಿ ದೀರ್ಘಾ, ಸರ್ಗಾ ಅಷ್ಟಾಧಿಕಾ ಇಹ'' - ಮಹಾಕಾವ್ಯವು ಅತಿ ಚಿಕ್ಕದಾಗಿಯೂ ಇರಬಾರದು, ಅತಿ ದೊಡ್ಡದಾಗಿಯೂ ಇರಬಾರದು, ಎಂಟು ಸರ್ಗಗಳಿಗಿಂತಲೂ ಮೇಲ್ಪಟ್ಟಿರಬೇಕು - ಈ ಲಕ್ಷಣವೂ ಇಲ್ಲಿ ಸರಿಹೊಂದುತ್ತದೆ (ii) ಶೃಂಗಾರ, ವೀರ, ಶಾಂತಗಳಲ್ಲಿ ಒಂದು ರಸ ಪ್ರಧಾನವಾಗಿರಬೇಕು. ''ಶೃಂಗಾರ ವೀರ ಶಾಂತಾನಾಂ ಏಕಾಂಗೀ ರಸ ಇಷ್ಯತೇ'' - ಪ್ರಕೃತ ಮಹಾಕಾವ್ಯದಲ್ಲಿ ಶಾಂತವೇ ಪ್ರಧಾನ ರಸ (iii) ಗ್ರಂಥದ ಪ್ರಾರಂಭದಲ್ಲಿ ನಮಸ್ಕಾರಾತ್ಮಕ, ಆಶೀರ್ವಾದಪೂರ್ವಕ ಅಥವಾ ವಸ್ತುನಿರ್ದೇಶಾತ್ಮಕವಾದ ಮಂಗಳವಿರಬೇಕು.

''ಆದೌ ನಮಸ್ಕ್ರಿಯಾಶೀರ್ವಾ ವಸ್ತುನಿರ್ದೇಶ ಏವ ವಾ''

ಪ್ರಸ್ತುತ ಮಹಾಕಾವ್ಯವು ಕಾಳಿದಾಸನ ಮಹಾಕಾವ್ಯವಾದ ರಘುವಂಶದಂತೆಯೇ ನಮಸ್ಕಾರಾತ್ಮಕ ಮಂಗಳ ಶ್ಲೋಕದಿಂದ ಪ್ರಾರಂಭವಾಗುತ್ತದೆ.

"ವಿಭ್ರಾಜತ್ ಸುಜಟಾಧಿವಾಸ ವಿಭಜದ್ಗಂಗಾ ವಿಲಾಸಾವೃತಮ್
ರಾರಾಜದ್ರಜತಾದ್ರಿವಾಸ ವಿಲಸದ್ಗೌರೀ ಭುಜಾಲಂಕೃತಮ್
ಚಂದ್ರಾದಿತ್ಯ ಧನಂಜಯಾಖ್ಯ ನಯನಂ ಸಂತ್ರಜ್ಯ ನಿರ್ಮಾಯಿಕಮ್
ಸಚ್ಚಿದ್ರೂಪಮನಾದಿದೇವಮತುಲಂ ಶ್ರೀ ಸಿದ್ಧಲಿಂಗಂಭಜೇ" [೭]

(iv) ಮಹಾಕಾವ್ಯವು ಸರ್ಗಗಳಿಂದ ಕೂಡಿರಬೇಕು, ಒಬ್ಬನೇ ನಾಯಕನಿರಬೇಕು. "ಸರ್ಗ ಬಂಧೋ ಮಹಾಕಾವ್ಯಂ, ತತ್ರೈಕೋ ನಾಯಕಃ ಸು ರಃ" - ಈ ಪ್ರಸ್ತುತ ಮಹಾಕಾವ್ಯವೂ ಸಹ ೨೬ ಸರ್ಗಗಳಿಂದ ಕೂಡಿದೆ. ದೇವರಾದ (ಸುರನಾದ) ಸಿದ್ಧಲಿಂಗೇಶ್ವರನೇ ಕಾವ್ಯದ ನಾಯಕ. ಇನ್ನೂ ಈ ಮಹಾಕಾವ್ಯದಲ್ಲಿ ಬರುವ ಕೆಲವು ವೈಶಿಷ್ಟಗಳನ್ನು ಸ್ಥೂಲವಾಗಿ ಈ ಕೆಳಕಂಡಂತೆ ಗಮನಿಸಬಹುದು.

ಮೊದಲನೆಯ ಸರ್ಗ ಕವಿಯ ವಿನಯ ಹಾಗೂ ನಮ್ರತೆ

ಕವಿಯು ಪ್ರಾರಂಭದಲ್ಲಿ ತನ್ನ ವಿನಯವನ್ನು ಈ ರೀತಿ ತೋರ್ಪಡಿಸಿಕೊಂಡಿದ್ದಾನೆ :

"ಶ್ರೀ ಸಿದ್ಧಲಿಂಗ ಮಹಾತ್ಮ್ಯಂ ಕುತ್ರ ಚಾಲ್ಪಜ್ಞತಾಕ್ವಮೇ ।
ತಥಾಪಿ ದಯಯಾ ತಸ್ಯ ಪ್ರವೃತ್ತಿಃ ಕಾವ್ಯಲೀಖೇನ" ॥ [೮]

ಶ್ರೀ ಸಿದ್ಧಲಿಂಗ ಮಹಾತ್ಮ್ಯವೆಲ್ಲಿ ನನ್ನ ಅಲ್ಪಜ್ಞಾನವೆಲ್ಲಿ, ಆದರೂ ಸಹ ಆ ಪ್ರಭುವಿನ ದಯೆಯಿಂದ ನಾನು ಈ ಕಾವ್ಯ ಬರೆಯುಲು ಪ್ರವೃತ್ತನಾಗುತ್ತಿದ್ದೇನೆ. ಇದಕ್ಕೆ ಸರಿಸಮನಾದ ವಿನಯವನ್ನು ನಾವು ಕಾಳಿದಾಸನ ರಘುವಂಶದ ಮೊದಲನೆಯ ಸರ್ಗದ ಎರಡನೆಯ ಶ್ಲೋಕದಲ್ಲಿ ಕಾಣಬಹುದಾಗಿದೆ :-

"ಕ್ವ ಸೂರ್ಯ ಪ್ರಭವೋ ವಂಶಃ ಕ್ವಚಾಲ್ಪವಿಷಯಾಮತಿಃ
ತಿತೀರ್ಷುಃ ದುಸ್ತರಂ ಮೋಹಾತ್ ಉಡುಪೀನಾಸ್ಮಿ ಸಾಗರಂ" [೯]

ಪ್ರಸಿದ್ಧವಾದ ಆ ಸೂರ್ಯವಂಶವೆಲ್ಲಿ, ಈ ಅಲ್ಪಬುದ್ಧಿಯೆಲ್ಲಿ - ಈ ನನ್ನ ಪ್ರಯತ್ನ ಸಣ್ಣ ದೋಣಿಯಿಂದ ದೊಡ್ಡ ಸಾಗರವನ್ನು ದಾಟಿದಂತೆ.

**ಸುಭಾಷಿತ**

"ಅಶ್ವಮೇಧ ಸಹಸ್ರಾದ್ಧಿ ಸತ್ಯಮೇವ ವಿಶಿಷ್ಯತೇ" [೧೦]

---

೭. ಶ್ರೀ ಸಿದ್ಧಲಿಂಗ ವಿಜಯ ಮಹಾಕಾವ್ಯ. ಪು.ಸಂ.೧

೮-೯. ಶ್ರೀ ಸಿದ್ಧಲಿಂಗ ವಿಜಯ ಮಹಾಕಾವ್ಯ. ಪು.ಸಂ.೨

೧೦. ಶ್ರೀ ಸಿದ್ಧಲಿಂಗ ವಿಜಯ ಮಹಾಕಾವ್ಯ. ಪು.ಸಂ. ೭

ನೂರು ಅಶ್ವಮೇಧಯಾಗಗಳಿಗಿಂತಲೂ ಸತ್ಯವೇ ದೊಡ್ಡದು.
ಮೂರ್ಖನೂ ಸಹ ಮಹಾತ್ಮರ ಸಹವಾಸದಿಂದ ಮಹಾತ್ಮನಾಗುತ್ತಾನೆ:

''ಮೂಢಾಪಿ ಅಮೂಢತಾಂ ಯಾತಿ ಸಂಗಮೇನ ಮಹಾತ್ಮ ನಾಮ್''[೧೧]

## ಎರಡನೆಯ ಸರ್ಗ

ಈ ಸರ್ಗದಲ್ಲಿ ಪ್ರಕೃತಿ ವರ್ಣನೆ, ಕಾವೇರಿಯ ವರ್ಣನೆ, ಮಥುರಾ ವರ್ಣನೆ, ಚಾಮರಾಜನಗರದ ವರ್ಣನೆ ಇತ್ಯಾದಿಗಳು ಅದ್ಭುತವಾಗಿ ಮೂಡಿ ಬಂದಿದೆ.

## ಮೂರನೆಯ ಸರ್ಗ

ಇಲ್ಲಿ ಗುರುಗಳ ಅನುಗ್ರಹದಿಂದ ಜಂಗಮಾಧಿಕಾರ ಪ್ರಾಪ್ತಿಯು ಕೂಲಂಕಷವಾಗಿ, ಕ್ರಮಬದ್ಧವಾಗಿ, ಪಾಂಡಿತ್ಯ ಪೂರ್ಣವಾಗಿ ನಿರೂಪಿತವಾಗಿದೆ.

## ನಾಲ್ಕನೆಯ ಸರ್ಗ

ಈ ಸರ್ಗದಲ್ಲಿ ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ ಎಂಬ ಚತುರ್ವಿಧಭಕ್ತಿ, ಇತ್ಯಾದಿ ವಿಷಯಗಳು ಮನೋಹರವಾಗಿವೆ.

## ಐದನೆಯ ಸರ್ಗ

ಪಾದೋದಕ ಪ್ರಸಾದವನ್ನು ಬೋಧಿಸುವ ಈ ಸರ್ಗ ವೇದಾಂತಗರ್ಭಿತವಾಗಿದೆ.

''ಏಕೈವ ಮೂರ್ತಿರತುಲಾ ಲಭತೇ ತ್ರಿರೂಪಮ್''[೧೨]

ಇತ್ಯಾದಿ ವಾಕ್ಯಗಳು ''ಏಕಂ ಸದ್ವಿಪ್ರಾ ಬಹುಧಾ ವದಂತಿ'' ಮೊದಲಾದ ಋಗ್ವೇದ ವಾಕ್ಯಗಳಿಗೆ ಸಮಾನಗಳಾಗಿವೆ.

ಈ ಕೆಳಗಿನ ಶ್ಲೋಕದಲ್ಲಿ ಅನುಪ್ರಾಸಾಲಂಕಾರವು ಸುಂದರವಾಗಿ ನಿರೂಪಿತವಾಗಿದೆ.

''ಧರ್ಮಿಷ್ಠೌ ನೃಪತೌ ಪ್ರಜಾಶ್ಚ ಸತತಂ ಧರ್ಮಾನುರಕ್ತಾಭುದಿ
ಭೂಪಾಲೇ ವರಧರ್ಮಮಾರ್ಗ ವಿಮುಖೇ ವೈಮುಖ್ಯ ಮಾಪುಃ ಪ್ರಜಾಃ
ಸಾಮಾನ್ಯೇನ ಚ ರಾಜ್ಞಿ ಧರ್ಮನಿರತೇ ಸಾಮ್ಯಂ ಭಜೇಯುಃ ಪ್ರಜಾಃ
ಯಾದೃಜ್ ಮಾರ್ಗಯುತೋ ಭವೇಚ್ಚನೃಪತಿಃ ಸನ್ಮಾರ್ಗಮಾಲಂಬತೇ.[೧೩]

೧೧. ಶ್ರೀ ಸಿದ್ಧಲಿಂಗ ವಿಜಯ ಮಹಾಕಾವ್ಯ ಪು. ಸಂ. ೧೩
೧೨. ಶ್ರೀ ಸಿದ್ಧಲಿಂಗ ವಿಜಯ ಮಹಾಕಾವ್ಯ ಪು. ಸಂ. ೫೭
೧೩. ಶ್ರೀ ಸಿದ್ಧಲಿಂಗ ವಿಜಯ ಮಹಾಕಾವ್ಯ ಪು. ಸಂ. ೬೮

## ಆರನೆಯ ಸರ್ಗ

ಇಲ್ಲಿ ಪಾದೋದಕ, ಪ್ರಸಾದಗಳ ಅದ್ಭುತ ನಿರೂಪಣೆಯಿದೆ.

## ಏಳನೆಯ ಸರ್ಗ

**ಸುಭಾಷಿತ.**

"ಕಾಮಾತುರಾಣಾಂ ನ ಭಯಂ ನ ಲಜ್ಜಾ"[೧೪]

ಕಾಮಾತುರರಿಗೆ ಭಯವೂ ಇಲ್ಲ, ನಾಚಿಕೆಯೂ ಇಲ್ಲ.
"ಸತ್ಯಂ ಶಿವಂ ಸುಂದರಂ" - ಎಂಬ ಶ್ರೇಷ್ಠ ನುಡಿಯ ಪ್ರತಿಪಾದನೆ ಅದ್ಭುತವಾಗಿದೆ.

## ಎಂಟನೆಯ ಸರ್ಗ

ಇಲ್ಲಿ ಬ್ರಹ್ಮ, ವಿಷ್ಣು, ರುದ್ರರ ನಡುವೆ ನಡೆದ ಜಗಳ ಸುಂದರವಾಗಿ ನಿರೂಪಿತವಾಗಿದೆ.

"ಕದಾಚಿದೇತೌ ಪರಮೇಷ್ಠಿವಿಷ್ಣೂ ಶ್ರೇಷ್ಠೋಹಮಸ್ಮೀತಿ ವಿವಾದಯಂತೌ
ನಾಹಂ ಸೃಜೇಯಂ ಕಥಮೇಷ ರಕ್ಷೇದಿತ್ಥಂ ಹಿ ಬ್ರಹ್ಮಾ ಗದಿತುಂ ಪ್ರವೃತ್ತ
ಮಹಾನ ರಕ್ಷ್ಯಂ ಕಿಮು ಸೃಷ್ಟಿಕಾರ್ಯಾತ್ ಕ್ಷಣಾರ್ಧ ಏವಾಖಿಲನಾಶ ಭಾವಾತ್
ಇತ್ಥಂ ಹಿ ನಾರಾಯಣ ಅಹ ವಾದೇ ವಾಗ್ಯುದ್ಧಮಂತೇ
ನಿಜಯುದ್ಧಮಾಸೀತ್"[೧೫]

ಒಮ್ಮೆ ತ್ರಿಮೂರ್ತಿಗಳು ಪರಸ್ಪರ ಕಲಹದಿಂದಿರುವಾಗ ತಾನೇ ಶ್ರೇಷ್ಠ ಎಂಬ ವಿಷಯದಿಂದ ಬ್ರಹ್ಮನು ನಾನು ಸೃಷ್ಟಿಸದೇ ಹೋದರೆ ವಿಷ್ಣುವು ಹೇಗೆ ಸಂರಕ್ಷಿಸುತ್ತಾನೆ ಎಂದು ಪ್ರಶ್ನಿಸಿದನು.

ಈ ಮೇಲಿನ ಕವಿಕಲ್ಪನೆ ನಾವೀನ್ಯತೆಯಿಂದ ಕೂಡಿದ್ದು ಹೊಸದಾಗಿದೆ.

"ಯೋಗಾಚ್ಚ ರೂಢಿಃ ಪ್ರಬಲಾ ಹಿ ಲೋಕೇ"[೧೬]

ಯೋಗಕ್ಕಿಂತಲೂ ರೂಢಿಯೇ ಪ್ರಬಲ ಎಂಬ ಮಾತು

"ಯೋಗಾದ್ರೂಢಿಃ ಬಲೀಯಸೀ" ಎಂಬ ಲೌಕಿಕ ನ್ಯಾಯವನ್ನು ನೆನಪಿಗೆ ತಂದುಕೊಡುತ್ತದೆ.

---

೧೪. ಶ್ರೀ ಸಿದ್ಧಲಿಂಗ ವಿಜಯ ಮಹಾಕಾವ್ಯ ಪು.ಸಂ.೮೫

೧೫. ಶ್ರೀ ಸಿದ್ಧಲಿಂಗ ವಿಜಯ ಮಹಾಕಾವ್ಯ ಪು.ಸಂ.೧೦೨-೧೦೩

೧೬. ಶ್ರೀ ಸಿದ್ಧಲಿಂಗ ವಿಜಯ ಮಹಾಕಾವ್ಯ ಪು.ಸಂ.೯೯

## ಒಂಭತ್ತನೆಯ ಸರ್ಗ

ಈ ಸರ್ಗವಲ್ಲಿ ಅಷ್ಟಾವರಣ, ಷಟ್ ಸ್ಥಲ, ಪಂಚಾಚಾರಗಳ ವಿವರಣೆ ಮನೋಜ್ಞವಾಗಿದೆ.

## ಹತ್ತನೆಯ ಸರ್ಗ

ಈ ಸರ್ಗವಲ್ಲಿ ಆಶ್ರಮದ ವೈಶಿಷ್ಟ್ಯ ಅದ್ಭುತವಾಗಿ ಮೂಡಿಬಂದಿದೆ. ಸಿಂಹದಮೇಲೆ ಕೈಯಿಟ್ಟು ಆನೆಯು ವಿಶ್ರಾಂತಿಯನ್ನು ಪಡೆಯುತ್ತಿತ್ತು, ಹುಲಿಯು ಜಿಂಕೆಯ ಕೋಡುಗಳಲ್ಲಿ ತಮ್ಮ ತಲೆಯನ್ನಿಟ್ಟು ಮಲಗುತ್ತಿತ್ತು, ಹಾವುಗಳು ತಮ್ಮ ಹೆಡೆಯನ್ನು ನವಿಲುಗಳ ಗರಿಗಳಲ್ಲಿಡುತ್ತಿತ್ತು. ಇಲಿಗಳು ಬೆಕ್ಕುಗಳ ಹತ್ತಿರ ಹಾಲನ್ನು ಕುಡಿಯುತ್ತಿದ್ದುವು.

*''ಸಿಂಹಸ್ಕಂದೇ ಕರಂ ಕ್ಷಿಪ್ತ್ವಾ ಗಜಾ ವಿಶ್ರಾಂತಿ ಮಾಪ್ನುದನ್*
*ಶಾರ್ದೂಲಾ ಹರಿಣಶೃಂಗೇ ವಿಧಾಯ ಮಸ್ತಕಂ ಮುದಾ ।*
*ಉರಗಾಃ ಫಣಮಾಕಾರ್ಯ ಮಯೂರಾಣಾಂ ಶಿಖೋಪರಿ*
*ಮಾರ್ಜಾರಾಣಾಂ ಪಯಃ ಪಾನಂ ಕುರ್ವಂತಿ ಮೂಷಕಾಃ ತದಾ'' ॥* [೧೨]

ಈ ಮೇಲಿನ ವರ್ಣನೆಯು ಮಹಾತ್ಮರ ಸಾನ್ನಿಧ್ಯದಲ್ಲಿ ಪರಸ್ಪರ ದ್ವೇಷವಿರುವ ಪ್ರಾಣಿಗಳೂ ಹೇಗೆ ತಮ್ಮ ದ್ವೇಷ ತೊರೆದು ಸೌಹಾರ್ದದಿಂದ ವರ್ತಿಸಿದವು ಎಂಬುದನ್ನು ಪ್ರತಿಪಾದಿಸುತ್ತದೆ. ಬಾಣಭಟ್ಟನ ಕಾದಂಬರಿಯಲ್ಲಿ ಜಾಬಾಲಿಯ ಆಶ್ರಮದ ವರ್ಣನೆಯನ್ನು ಇದು ನೆನಪಿಸಿ ಕೊಡುತ್ತದೆ.

## ಹನ್ನೊಂದನೆಯ ಸರ್ಗ

ಈ ಸರ್ಗವಲ್ಲಿ ''ತತ್ತ್ವಮಸಿ'' ವಾಕ್ಯಾರ್ಥವು ಯಶಸ್ವಿಯಾಗಿ ನಿರೂಪಿತವಾಗಿದೆ.

## ಹನ್ನೆರಡನೆಯ ಸರ್ಗ

ಈ ಸರ್ಗವು ಜಾಗ್ರತ್, ಸ್ವಪ್ನ, ಸುಷುಪ್ತಿ, ತುರೀಯಾ ಅವಸ್ಥೆಗಳನ್ನು ಮನೋಜ್ಞವಾಗಿ ಬಣ್ಣಿಸುತ್ತದೆ.

## ಹದಿಮೂರು - ಹದಿನಾಲ್ಕು

ಇಲ್ಲಿ ಪೂಜಾಪ್ರಸಾದಗ್ರಹಣದ ವಿಷಯ ವರ್ಣಿತವಾಗಿದೆ.

---

೧೨. ಶ್ರೀ ಸಿದ್ಧಲಿಂಗ ವಿಜಯ ಮಹಾಕಾವ್ಯ ಪು.ಸಂ.೧೨೪

## ಹದಿನೈದನೆಯ ಸರ್ಗ

ಸ್ವಾಮಿಗಳು ಬರುವಾಗ ಅವರನ್ನು ನೋಡಲು, ಜನಗಳ ಕುತೂಹಲ ಮಾರ್ಮಿಕವಾಗಿ ಚಿತ್ರಿತವಾಗಿದೆ.

"ಗ್ರಾಮಸ್ಥ ದೇವಾಲಯ ಗೋಪುರಾದೌ ವೀಥೀ ಪ್ರತೋಲೀ ಮಠ ಮಂದಿರೇಷು [೧೮] ಕಾಸಾರತೀರೇ ತರು ಮೂಲದೇಶೇ ಸರ್ವತ್ರ ಯಾತ್ರಾಜನ ವೃಂದಮಾಸೀತ್" ಜನರು ಗುರುಗಳ ದರ್ಶನಕ್ಕಾಗಿ ದೇವಾಲಯಗಳಲ್ಲಿ, ಗೋಪುರಗಳ ಮೇಲೆ, ಮಠಗಳಲ್ಲಿ, ಮಂದಿರ ಗಳಲ್ಲಿ, ಮರಗಳ ಮೇಲೆ ತುಂಬಿ ನೆರೆದಿದ್ದರು. ಬಾಣನು ತನ್ನ ಕಾದಂಬರಿಯಲ್ಲಿ ಚಂದ್ರಾಪೀಡ ವಿದ್ಯಾಭ್ಯಾಸ ಮುಗಿಸಿ ಹಿಂದಿರುಗುವಾಗ ಪಟ್ಟಣಿಗರ ಕುತೂಹಲವನ್ನು ಇದೇ ರೀತಿ ವರ್ಣಿಸುತ್ತಾನೆ. ವೀರಶೈವಸಿದ್ಧಾಂತದ ಮೂಲ ಅಂಶಗಳೂ ಸಹ ಇಲ್ಲಿ ಪ್ರತಿಪಾದಿತವಾಗಿದೆ.

## ಹದಿನಾರನೆಯ ಸರ್ಗ

ಈ ಕೆಳಗಿನ ಶ್ಲೋಕದಲ್ಲಿ ಶೃಂಗಾರರಸ ಹಾಗೂ ಅನುಪ್ರಾಸಾಲಂಕಾರ ಅದ್ಭುತವಾಗಿ ನಿರೂಪಿತವಾಗಿದೆ.

*ಕಿಂ ನೇತ್ರೈಃ ಕಿಮುಕ್ಕೈರವೇ ಕಿಮುರುಃಷೌ ಬಿಂಬೇ ಕಿಪುಷ್ಮೌರದಾಃ*
*ಕಿಂ ಕುಂದಾಃ ಕಿಮು ಕುಂತಲಾ ಮಧುರಾ ಕಿಂ ವಕ್ತ್ರಮಂಭೋರುಹಮ್*
*ಕಿಂ ಕುಂಭೌ ಕಿಮು ಪೀವರ ಸ್ತನಯುಗೌ ಗಂಡೇನು ಕಿಂ ದರ್ಪಣಂ* [೧೯]
*ಕಿಂ ಪಾದೌ, ಕಿಮು ಪಲ್ಲವೌ ಕಿಮಬಲಾ ಕಿಂ ಹೇಮವಲ್ಲೀ ನವಾ ॥*

## ಹದಿನೇಳನೆಯ ಸರ್ಗ

ಇಲ್ಲಿ ಜಗದ್ಗುರುಗಳು ಸತ್ತ (ವಿಷಮಜ್ವರದಿಂದ) ಬಾಲಕನನ್ನು ತಮ್ಮ ಅನುಗ್ರಹದಿಂದ ಬದುಕಿಸಿದ ವರ್ಣನೆ ಮಾರ್ಮಿಕವಾಗಿದೆ. ಆ ಬಾಲಕನ ತಂದೆ ತಾಯಿಗಳ ರೋದನವ ಮುಖಾಂತರ ಕರುಣರಸದ ವರ್ಣನೆಯೂ ಸಹ ನಿರೂಪಿತವಾಗಿದೆ.

*"ಮೃತಂ ಸ್ವ ಪುತ್ರಂ ಪರಿಗೃಹ್ಯತೌಹಿ ಸಿದ್ಧೇಂದ್ರಪಾದೇ ವಿನಿ ಪತ್ಯ ದೈನ್ಯಾನ್ ।*
*ಕಾರುಣ್ಯ ಸಿಂಧೋ ನತದೀನ ಬಂಧೋ ದುಷ್ಕರ್ಮ ಪ್ರಾರಬ್ಧವಿನಾಶದಕ್ಷ॥*
*ಭಕ್ತಾನುರಾಗಿನ್ ಭವತಾಪಹಾರಿನ್ ಸಿದ್ಧೇಂದ್ರಯೋಗಿನ್ ಹರಕಾಲ ನಾನಿನ್* [೨೦]
*ಕಾಲೇತಿ ನೀತಂ ಕರಕಂಜರೂಪಂ ಪುತ್ರ ಮದೀಯಂ ಪರಿರಕ್ಷದೇವ*

---

೧೮. ಶ್ರೀ ಸಿದ್ಧಲಿಂಗ ವಿಜಯ ಮಹಾಕಾವ್ಯ ಪು.ಸಂ.೧೭೫
೧೯. ಶ್ರೀ ಸಿದ್ಧಲಿಂಗ ವಿಜಯ ಮಹಾಕಾವ್ಯ ಪು.ಸಂ.೧೮೫
೨೦. ಶ್ರೀ ಸಿದ್ಧಲಿಂಗ ವಿಜಯ ಮಹಾಕಾವ್ಯ ಪು.ಸಂ.೧೯೫

## ಹದಿನೆಂಟನೆಯ ಸರ್ಗ

ಈ ಸರ್ಗದಲ್ಲೂ ಅನುಪ್ರಾಸಾದಿ ಅಲಂಕಾರಗಳು ಚೇತೋಹಾರಿಯಾಗಿವೆ.

## ಹತ್ತೊಂಭತ್ತನೆಯ ಸರ್ಗ

ಲಿಂಗಪೂಜಾ ವಿಧಾನವನ್ನು ಇಲ್ಲಿ ಸ್ಪಷ್ಟವಾಗಿ ವಿವರಿಸಲಾಗಿದೆ.

## ಇಪ್ಪತ್ತನೆಯ ಸರ್ಗ

''ಏಕಮೇವಾದ್ವಿತೀಯಂ ಹಿ ಪರಂ ಬ್ರಹ್ಮ ಪರಾತ್ಪರಮ್[೨೧]'' ಎಂಬ ವಾಕ್ಯವು ಏಕಮೇವಾದ್ವಿತೀಯಂ ಎಂಬ ಛಾಂದೋಗ್ಯಶ್ರುತಿಯ ವಾಕ್ಯವನ್ನು ''ಸರ್ವಂ ಹಿ ವಿಶ್ವಂ ಲಯಮೇತಿ ಯತ್ರ ಸ್ಥಿತ್ವಾ ಪುನರ್ಗ ಮ್ಯತ ಏವ ಯಸ್ಮಾತ್''[೨೨] ಎಂಬ ವಾಕ್ಯವು ಬ್ರಹ್ಮನ ತಟಸ್ಥ ಲಕ್ಷಣ ಬೋಧಕವಾದ ತೈತ್ತೀರಿಯ ಶ್ರುತಿಯ, ''ಯೇನ ಜಾತಾನಿ ಜೀವಂತಿ, ಯತ್ಪ್ರಯಂತ್ಯಭಿನಂವಿಶಂತೀತಿ'' ಎಂಬ ವಾಕ್ಯವನ್ನು ನೆನಪಿಗೆ ತಂದುಕೊಡುತ್ತದೆ.

## ಇಪ್ಪತ್ತೊಂದನೆಯ ಸರ್ಗ

ಇಲ್ಲಿ ಸೃಷ್ಟಿಕ್ರಮವು ಅದ್ಭುತವಾಗಿ ನಿರೂಪಿತವಾಗಿದೆ. ''ಚಂದ್ರಮಾ ಮನಸೋ ಜಾತಃ''[೨೩] ಎಂಬ ವಾಕ್ಯ ಅದೇ ವಾಕ್ಯವಿರುವ ಪುರುಷ ಸೂಕ್ತ ಮಂತ್ರವನ್ನು ಸ್ಮರಣೆಗೆ ತರುತ್ತವೆ. ''ಬಂಧೇ ಮೋಕ್ಷೇ ಚ ಸರ್ವೇಷಾಂ ಕಾರಣಂ ಮನ ಏವ ಹಿ''[೨೪] ಎಂಬ ವಾಕ್ಯವು ಈ ಕೆಳಗಿನ ಭಗವದ್ಗೀತಾ ವಾಕ್ಯವನ್ನು ಸ್ಮರಣೆಗೆ ತರುತ್ತದೆ. ''ಮನ ಏವ ಮನುಷ್ಯಣಾಂ ಕಾರಣಂ ಬಂಧ ಮೋಕ್ಷಯೋಃ''

## ಇಪ್ಪತ್ತೆರಡನೆಯ ಸರ್ಗ

ಈ ಸರ್ಗದಲ್ಲಿ ಲಿಂಗಧಾರಣಾದಿ ಶಿವಾಚಾರ ಸಂಪತ್ತಿಯು ನಿರೂಪಿತವಾಗಿದೆ.

## ಇಪ್ಪತ್ತಮೂರನೆಯ ಸರ್ಗ

''ಭಕ್ತ ಸ್ಥಲದ'' ಪ್ರತಿಪಾದನೆ ಯುಕ್ತಿಯುಕ್ತವಾಗಿದೆ.

## ಇಪ್ಪತ್ತನಾಲ್ಕನೆಯ ಸರ್ಗ

''ಮಾಹೇಶ್ವರ ಪ್ರಸಾದಿ ಸ್ಥಲ'' ದ ಮಾರ್ಮಿಕ ನಿರೂಪಣೆಯಿದೆ

---

೨೧. ಶ್ರೀ ಸಿದ್ಧಲಿಂಗ ವಿಜಯ ಮಹಾಕಾವ್ಯ ಪು.ಸಂ.೨೨೫
೨೨. ಶ್ರೀ ಸಿದ್ಧಲಿಂಗ ವಿಜಯ ಮಹಾಕಾವ್ಯ ಪು.ಸಂ.೨೨೩
೨೩. ಶ್ರೀ ಸಿದ್ಧಲಿಂಗ ವಿಜಯ ಮಹಾಕಾವ್ಯ ಪು.ಸಂ.೨೨೩
೨೪. ಶ್ರೀ ಸಿದ್ಧಲಿಂಗ ವಿಜಯ ಮಹಾಕಾವ್ಯ ಪು.ಸಂ.೨೩೮

## ಇಪ್ಪತ್ತೈದನೆಯ ಸರ್ಗ

"ಪ್ರಾಣಲಿಂಗಿ ಸ್ಥಳದ ನಿರೂಪಣೆ" ಸೊಗಸಾಗಿದೆ.

## ಇಪ್ಪತ್ತಾರನೆಯ ಸರ್ಗ

"ಶರಣೈಕ್ಯಸ್ಥಳ"ದ ಪ್ರತಿಪಾದನೆ ಸೊಗಸಾಗಿದೆ. ಉಪಸಂಹಾರ ಉಪಕ್ರಮಕ್ಕೆ ಅನುಗುಣವಾಗಿದೆ.

*ಶ್ರೀ ರಾಯಚೂರು ವರಮಂಡಲ ಪ್ರದೇಶೇ*
*ಶ್ರೀ ಸಿಂಧನೂರಿತಿ ವಿಭಾಗ ಶಿರಾಮಣೌ ಚ ।*
*ಶೋಭಾನ್ವಿತೇ ಪಗಡದಿನ್ನಿ ಸುನಾಮಗ್ರಾಮೇ*
*ಮೇಧಾಯುತೋ ಬಸವರಾಜ ಸುಧೀಃ ಕವೀಂದ್ರ ॥*

### ಉಪಸಂಹಾರ

ಕಾವ್ಯದ ಒಟ್ಟಾರೆ ಅಭಿಪ್ರಾಯವೆಂದರೆ, ಈ ಕಾವ್ಯದಲ್ಲಿ ಒಬ್ಬ ಓದುಗ ಸಮಸ್ತ ದರ್ಶನ ಸಾಹಿತ್ಯ, ವೇದ ವೇದಾಂತ, ವೇದಾಂಗಗಳ ನಿರೂಪಣೆ, ಲೌಕಿಕನ್ಯಾಯಗಳ ಬಗ್ಗೆ ಇರುವ ಹಿಡಿತ, ಅಲಂಕಾರಗಳ ಸಮಯೋಚಿತ ಪ್ರಯೋಗ, ವೃತ್ತಗಳ ನಿರೂಪಣೆ, ವರ್ಣನಾ ವೈವಿಧ್ಯ, ನೂತನ ಕಲ್ಪನೆಗಳ ಆವಿರ್ಭೂತಿ, ವೀರಶೈವ ಸಿದ್ಧಾಂತದ ಪ್ರಾಮಾಣಿಕ ನಿರೂಪಣೆ, ವ್ಯಾಕರಣಾದಿ ಶಾಸ್ತ್ರ ಪ್ರೌಢಿಮೆ, ಇತ್ಯಾದಿ ವಿಷಯಗಳನ್ನು ಆನಂದಿಸಲು ಸಾಕಷ್ಟು ಮಾಹಿತಿಗಳಿವೆ. ಇಪ್ಪತ್ತನೆಯ ಶತಮಾನದಲ್ಲೂ ಸಹ ಇಂತಹ ಮಹಾಕಾವ್ಯಬಂದಿರುವುದು ಮೆಚ್ಚತಕ್ಕ ಸಂಗತಿ. ಇದೇ ವಿಷಯವನ್ನು ಮಹಾಲಿಂಗೇಶ್ವರ ಸ್ವಾಮಿಗಳ ವಾಕ್ಯಗಳಿಂದಲೇ ಉದಾಹರಿಸಬಹುದು.

*"ಪರಂ ಗೌರವಾಸ್ಪದಮಿದಂ ಯತ್ ವಿಂಶತಿಶತಮಾನಸ್ಯ*
*ಉತ್ತರಾರ್ಧೇ ಸಂಸ್ಕೃತಕಾವ್ಯ ಪ್ರೌಢಿಮಾ ವಿವಿಧ ಶಾಸ್ತ್ರಜ್ಞಾನ*
*ಛಂದೋ ಬದ್ಧ ಶಬ್ದ ಸೌಷ್ಠವ ಗುಣಾಲಂಕಾರಯುತಂ*
*ದೋಷ ವಿವರ್ಜಿತಂ ಸಹಜಂ ಕಾವ್ಯ ಪ್ರವಾಹಂ*
*ಪ್ರವಾಹಯಿತುಂ ಸಮರ್ಥೋಽಸ್ತೀತಿ."* [೨೫]

---

೨೫. ಶ್ರೀ ಸಿದ್ಧಲಿಂಗ ವಿಜಯ ಮಹಾಕಾವ್ಯ ಪು.ಸಂ. ೧೬

# ಪ್ರೊ. ಎಂ. ಜಿ. ನಂಜುಂಡಾರಾಧ್ಯರ ಎರಡು ಸ್ವತಂತ್ರ ನಾಟಕಗಳು

ಡಾ|| ಕೆ. ರಾಘವೇಂದ್ರರಾವ್

ಲಿಂ. ಆಸ್ಥಾನ ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯರು ವೀರಶೈವ ಸಾಹಿತ್ಯ, ಧರ್ಮ, ತತ್ತ್ವ ಶಾಸ್ತ್ರ, ಅನುವಾದ, ಸಂಪಾದನಾ ಕೃತಿಗಳ ರೂವಾರಿಯಾಗಿದ್ದರು. ಇವರ ಸಾಹಿತ್ಯದ ಹರವು ವೈವಿಧ್ಯಪೂರ್ಣವಾದುದು. ಇವರ ಸಾಹಿತ್ಯ ಕೃಷಿಯು ನೂರಕ್ಕೂ ಹೆಚ್ಚು ಸಂಸ್ಕೃತ, ಕನ್ನಡ, ಹಿಂದಿ ಭಾಷೆಗಳಲ್ಲಿ ಕಾಣಬರುತ್ತದೆ. ಸುಮಾರು ಇನ್ನೂರಕ್ಕೂ ಹೆಚ್ಚು ವಿದ್ವತ್ ಪರಿಪೂರ್ಣವಾದ ಸಂಶೋಧನಾತ್ಮಕ ಲೇಖನಗಳಿವೆ. ಇವರ ಸಾಹಿತ್ಯ ಸೇವೆ 1939 ರಿಂದ 1990ರವರೆಗೆ ಎಂದರೆ 51 ವರ್ಷಗಳವರೆಗೆ ಅವಿರತವಾಗಿ ನಡೆದಿದೆ. ಇದರಲ್ಲಿ 'ಗುರುಸ್ತವನ' ಪದ್ಯಮಾಲಿಕೆ (1939) ಮೊದಲನೆಯದು. 'ದಸ್ಯು ಮಹರ್ಷಿ ಕವಷ ಐಲೂಷ' (1990) ಕಿರುರೂಪಕ ಕೊನೆಯ ಕೃತಿಯಾಗಿದೆ. 'ಶೈವ ಮತ್ತು ವೀರಶೈವ ಸಂಸ್ಕೃತಿಯ ಸಮಗ್ರ ಸಮೀಕ್ಷೆ'ಯು ಇವರ ಸಂಶೋಧನಾತ್ಮಕ ಕೃತಿಯಾಗಿದೆ. ಇವರು ಶಕ್ತಿವಿಶಿಷ್ಟಾದ್ವೈತ ವೇದಾಂತ, ವೀರಶೈವಾಗಮ ಮತ್ತು ಅಲಂಕಾರಶಾಸ್ತ್ರದಲ್ಲಿ ತಜ್ಞರಾಗಿದ್ದರು. ಹಾಗೆಯೇ ಇವರ ಸಾಹಿತ್ಯದಲ್ಲಿ ಸಂಪಾದನಾಕೃತಿಗಳಿವೆ, ಅನುವಾದ ಕೃತಿಗಳಿವೆ, ಕಾವ್ಯಗಳಿವೆ, ಕಥಾಸಾಹಿತ್ಯ, ಗದ್ಯಸಾಹಿತ್ಯಗಳಿವೆ, ಜೀವನ ಚರಿತ್ರೆಗಳಿವೆ, ಕಾದಂಬರಿಗಳಿವೆ, ನಾಟಕಗಳಿವೆ. ಇವುಗಳಲ್ಲಿ ವೀರಶೈವ ಸಾಹಿತ್ಯ ಹಾಗೂ ಧರ್ಮಕ್ಕೆ ಸಂಬಂಧಪಟ್ಟುವು ಹೆಚ್ಚಾಗಿವೆ. ಇವರು ಸಂಪಾದಿಸಿದ

ಬಸವಪ್ಪ ಶಾಸ್ತ್ರಿಗಳ ಸಮಗ್ರ ಕೃತಿಗಳು'', ಎಂಬ ಬೃಹತ್‌ಗ್ರಂಥವು ಇವರ ಮೇರು ಕೃತಿಯಾಗಿದೆ. ಅವರ 'ವಿಕ್ರಮೋರ್ವಶಿಯ ನಾಟಕ' ನಾಲ್ಕು ಅಂಕಗಳಿಂದ ಅಪೂರ್ಣವಾಗಿತ್ತು. ಇವರು ಐದನೆಯ ಅಂಕವನ್ನು ಅನುವಾದಿಸಿ ಅದರ ಜೊತೆಯಲ್ಲಿ ಪೋಣಿಸಿದುದು ಇವರ ವಿದ್ವತ್ತನ್ನು ಎತ್ತಿತೋರಿಸುತ್ತದೆ. ನಾಲ್ಕು ಅಂಕಗಳ ಜೊತೆಗೆ ಇದನ್ನು ಓದಿದಾಗ ಬೇರೆಯವರು ಬರೆದಿದ್ದಾರೆಂಬ ಭಾವನೆ ಉಂಟಾಗುವುದಿಲ್ಲ.

ಪ್ರಸ್ತುತ ಇವರ ಎರಡು ಸ್ವತಂತ್ರ ನಾಟಕಗಳ ಬಗ್ಗೆ ಈ ಲೇಖನದಲ್ಲಿ ಪ್ರಸ್ತಾಪಿಸಲಾಗಿದೆ. ಒಂದು 'ಶಿವನ ಸೋಲು' (1942) ಮತ್ತೊಂದು 'ದಸ್ಯು ಮಹರ್ಷಿ ಕವಷ ಐಲೂಷ' (1990) ಇವೆರಡೇ ಇವರ ಸ್ವತಂತ್ರ ನಾಟಕಗಳು. ಮೊದಲನೆಯದನ್ನು ಹರೆಯ ವಯಸ್ಸಿನಲ್ಲಿ ಬರೆದುದು. ಮತ್ತೊಂದು ಜೀವನದ ಕೊನೆಯ ಅಂಚಿನಲ್ಲಿ ಬರೆದು ಹಸ್ತಪ್ರತಿ ಅಚ್ಚಾಗಿ ಬರುವುದಕ್ಕಿಂತ ಮೊದಲೇ ಅವರೇ ಇಲ್ಲವಾದರು. ಇಂಥ ಎರಡು ಕೃತಿಗಳ ವಿಮರ್ಶೆ ಇಲ್ಲಿ ಇದೆ.

ಶಿವನ ಸೋಲು - ಇದೊಂದು ಚಿಕ್ಕ ಗೀತ ನಾಟಕ. ಇದರ ಕಥಾವಸ್ತು ತುಂಬಾ ಪ್ರಾಚೀನವಾದುದು. ರಾಮಾಯಣ, ಮಹಾಭಾರತ, ಶಿವ-ಸೌರ-ಮತ್ಸ್ಯ- ಬ್ರಹ್ಮ -ಸ್ಕಾಂದ ಪುರಾಣಗಳಲ್ಲಿ ಈ ಕಥೆ ಬರುತ್ತದೆ. ಕಾಳಿದಾಸನ ಕುಮಾರ ಸಂಭವ, ಹರಿಹರನ ಗಿರಿಜಾ ಕಲ್ಯಾಣ ಗಳಿಗೆ ಈ ಕಥಾವಸ್ತುವನ್ನೇ ಬಳಸಿಕೊಂಡಿದ್ದಾರೆ. ಪ್ರೊ. ಆರಾಧ್ಯರು ತಮ್ಮ ಈ ಪುಟ್ಟ ಕೃತಿಗೆ ಯಾವುದನ್ನು ಆಧಾರವಾಗಿಟ್ಟುಕೊಂಡಿದ್ದಾರೋ ಗೊತ್ತಿಲ್ಲ. ಆದರೆ ಈ ಕೃತಿಯಲ್ಲಿ ಕಾಳಿದಾಸನಿಗಿಂತ ಹರಿಹರನ ಪ್ರಭಾವ ಸಾಕಷ್ಟಿದೆಯೆಂದು ಹೇಳಬಹುದು. ಇಷ್ಟೆಲ್ಲ ಪುರಾಣ ಕಾವ್ಯಗಳಲ್ಲಿ ಕಾಣಬರುವ ಈ ಕಥಾವಸ್ತುವಿಗೆ ಹಳತೆಂಬುದೇ ಇಲ್ಲ. ಇದು ನಿತ್ಯನೂತನ ವಾದುದು. ಇನ್ನೂ ಹಲವಾರು ಕವಿಗಳಿಗೆ ಈ ಕಥಾಭಿತ್ತಿ ಸ್ಫೂರ್ತಿದಾಯಕವಾದುದು.

ಯುಗಯುಗಗಳ ಹಿಂದೆ ತಾರಕಾಸುರನ ಉಪಟಳ ಲೋಕದಲ್ಲಿ ಹೆಚ್ಚಾಗಿತ್ತು. ಇದರಿಂದ ಮೂರುಲೋಕದ ಜನ ತಲ್ಲಣಿಸಿ ನೊಂದು ಬೆಂದಿತ್ತು. ಸನ್ಯಾಸಿಗಳ ಕೊಲೆ, ಕನ್ಯಾಪಹರಣ, ಮಾನ್ಯರ ಅಪಮಾನ ನಡೆದಿತ್ತು. ತಾರಕನೊಡನೆ ಹೋರಾಡಲು ಸುರನಿಕರ ಸಿದ್ಧವಾಗಿತ್ತು. ಬ್ರಹ್ಮನ ವರಪ್ರಸಾದದಿಂದ ಅವನು ಕೊಬ್ಬಿದ್ದ. ಎಲ್ಲ ದೇವತೆಗಳು ಬ್ರಹ್ಮನ ಹತ್ತಿರ ಹೋದರು. ಆಗ ಬ್ರಹ್ಮನು, ಶಿವನ ಮಗನಿಂದ ಅವನಿಗೆ ಸಾವುಂಟು. ಶಿವನ ತಪಸ್ಸನ್ನು ಭಂಗಗೊಳಿಸಿ ಅವನು ಗಿರಿಜೆಯನ್ನು ವರಿಸುವಂತೆ ಏರ್ಪಾಡು ಮಾಡಿರೆಂದು ಹೇಳಿಕಳುಹಿದ. ದೇವತೆಗಳೊಂದಾಗಿ ಮನ್ಮಥನನ್ನು ಹುರಿದುಂಬಿಸಿ, ಶಿವನ ತಪೋಭಂಗಕ್ಕೆ ಕಳಿಸಿದರು. ಅವನು ಪರಶಿವನ ತಪೋಭಂಗಕ್ಕೆ ಮುಂದಾಗಿ ಅವನ ಉರಿಗಣ್ಣಿಗೆ ತುತ್ತಾದ. ಪಾರ್ವತಿಯೂ ಲೋಕ ಹಿತಕ್ಕಾಗಿ ಅವನ ಅರ್ಧಾಂಗಿಯಾಗಲು ಛಲತೊಟ್ಟು ಘೋರ ತಪಸ್ಸನ್ನಾಚರಿಸಲು ತೊಡಗಿದ್ದಳು. ಕೊನೆಗೆ ಅವಳ ತಪಸ್ಸು ಸಿದ್ಧಿಯಾಯಿತು. ಪರಶಿವನು ಪಾರ್ವತಿಯ ಕೈ ಹಿಡಿದ. ಅವರಿಗೆ ಕುಮಾರನು

ಕಾಣಬರುತ್ತದೆ. ಅಂದು ಅವಳ ಪರಿಚರ್ಯೆ ಎಸಗಲು ಅನುವುಮಾಡಿಕೊಟ್ಟಿದ್ದೆ! ತಪ್ಪಾಯಿತೆನ್ನುತ್ತಾನೆ. ''ಯೋಗ ವಿರತಿಯು ಹರಿದು ಭೋಗವಿರಹತೆಯಾಯ್ತೆಂದೂ ತನುವು ಪುಲಕಿತವಾಯ್ತು ಮನವು ಹೊರಮುಖವಾಯ್ತೆಂದು'' ಉದ್ಗರಿಸುತ್ತಾನೆ. ಆಗ ನಾರದರು ಬಂದು ತಾರಕನ ಕಿರುಕುಳ ಹಾಗೂ ಗಿರಿಜೆಯ ತಪದ ತೇಜೋಜ್ವಾಲೆಯು ಲೋಕವನ್ನು ದಹಿಸುತ್ತದೆಯೆಂದೂ ಕರುಣೆತೋರಿ ಲೋಕವನ್ನು ಕಾಪಾಡಬೇಕೆಂದೂ'' ಕೇಳಿಕೊಳ್ಳುತ್ತಾನೆ. ಆಗ ಶಿವನು ''ಲೋಕ ಕುಶಲವೆ ನನಗೆ ಜೀವನದುಸಿರಾಗಿರುವುದು, ಗಿರಿಜೆಯ ತಪಕ್ಕೆ ಒಲಿದು ಮೂಜಗವನ್ನು ಕಾಪಾಡುವೆನೆಂದು ಹೇಳಿ ಕಳುಹುತ್ತಾನೆ. ಅನಂತರ ಪರಶಿವನು ತನ್ನಲ್ಲಿ ತಾನು ವಿಮರ್ಶಿಸಿಕೊಳ್ಳುತ್ತಾ ''ಮದನನೊಳು ತಪ್ಪಿಲ್ಲ, ಬರಿದೆ ದಹಿಸಿದೆನವನ, ಗಿರಿಜೆ ಬರದಿರೆ ಅವನೇನು ಮಾಡಲು ಸಾಧ್ಯ'' ಅಂದು ಮಂದಾರಮಾಲಿಕೆಯ ಗಿರಿಜೆ ಕರದಿಂ ತೆಗೆದು ಕೊರಳಿಗೆರಗಿಸೆ ಕರದ ಸೋಂಕಿನ್ಮಿ ಮೈನವಿರಿತು, ಆಗಸುತೆಯ ಮನ ಚಲಿಸಿತು. ಎನ್ನೆದೆಯ ನೋಯಿಸಿತು, ನೇಮ ಬಲಿಯದ ಮುನ್ನಮೊಲಿಯುವುದು ತರವಲ್ಲವೆಂದು ತಡೆದೆ. ಈಗ ಅವಳು ಪುಟವಿಟ್ಟ ಮಿಸುನಿಯಂತೆ ಪರಿಪೂತೆಯಾಗಿದ್ದಾಳೆ. ರೂಪಲಾವಣ್ಯಗಳ ಹಮ್ಮು ಬಿಮ್ಮುಗಳಳಿದು ಲೋಕಹಿತವನು ಬಯಸಿ, ನಿಜತನುವ ಸೇವೆಯೊಳಗೀಡಾಗಿ ಬಳಲಿದ್ದಾಳೆ. ಗಿರಿಜೆಯ ತಪಕೊಲಿದು, ವಟುವೇಷವನ್ನು ಧರಿಸಿ ಕಪಟುನುಡಿಯೊಳು ಜರಿದು ಕಾಮನೆಯ ನೀಡುವೆನೆಂದು ನಿರ್ಧರಿಸುತ್ತಾನೆ.

ಅತ್ತ ಶೈಲಜೆಯು ದರ್ಭಾಸನದಲ್ಲಿ ಧ್ಯಾನಮಗ್ನಳಾಗಿ ಕುಳಿತಿದ್ದಾಳೆ. ಜಯೆ ವಿಜಯೆ ಸಖಿಯರು ಹೂಗಳನ್ನು ಪೋಣಿಸುತ್ತಿದ್ದಾರೆ. ಪರಶಿವನು ತೇಜೋಮೂರ್ತಿಯಾಗಿ ವಟುವೇಷಧರಿಸಿ ಅಲ್ಲಿಗೆ ಬರುತ್ತಾನೆ. ಜಯ ವಿಜಯೆಯರು ಪಾದಾರ್ಘ್ಯಗಳನ್ನಿತ್ತು ಅತಿಥಿ ಸತ್ಕಾರ ಮಾಡುತ್ತಾರೆ. ತೃಪ್ತನಾದ ವಟು, ''ಯಾರಿವಳು ಕನ್ಯೆ ಎಳೆ ಹರೆಯದಲ್ಲಿ ತಪವೆಸಗಿ ಬಳಲುತ್ತಿದ್ದಾಳಲ್ಲ ! ಮನಮರುಗವ ಕಠಿಣಾತ್ಮನಾವನವನು. ನಾನು ಮೊದಲು ಗಳಿಸಿದ ತಪದೊಳರ್ಧವನೀವೆನದಕೊಂಡು ಮನದನ್ನನೊಡಗೂಡಿ ಸುಖಿಯಾಗು'', ತಪವನ್ನು ಮಾಡುವುದು ಬೇಡವೆಂದು ಕೇಳಿಕೊಳ್ಳುತ್ತಾನೆ. ವಿಜಯೆಯು ಪಾರ್ವತಿಯ ತಪದ ಹವನವನ್ನು ಅರುಹುತ್ತಾಳೆ. ವಟುವು ಸಖಿಯ ಉಕ್ತಿ ದಿಟವಲ್ಲವೇ ಎಂದು ಗಿರಿಜೆಯನ್ನು ಕೇಳುತ್ತಾನೆ. ಅವಳು ನಿಜವೆಂದಾಗ, ವಟುವು ಕಪಟುನುಡಿಗಳಿಂದ ಶಿವನನ್ನು ಹೀಯಾಳಿಸುತ್ತಾನೆ. ಅವನ ವೇಷಭೂಷಣಗಳನ್ನು ತೆಗಳುತ್ತಾನೆ. ಅಮಂಗಳಾತ್ಮನವನು, ತಿರುಕನವನು, ಅವನ ಬಯಕೆಯ ಬಿಟ್ಟು ಬೇರೆ ಪುರುಷನನ್ನು ಹುಡುಕೆಂದು ಹೇಳುತ್ತಾನೆ. ಪಾರ್ವತಿಯು ಶಿವನಿಂದೆಯನ್ನು ಸಹಿಸುವುದಿಲ್ಲ. ''ಶಿವನೊಲವ ಗಳಿಸುವದೆನ್ನ ಕಡೆಯ ಗುರಿಯೈಸೆ, ತೊಲಗಾಚೆ ಕಡುಮೂರ್ಖನೀನೆಂದು'' ಮುಖವನ್ನೋರೆಮಾಡಿ ಎದ್ದು ಹೋಗಲುದ್ಯುಕ್ತಳಾಗುತ್ತಾಳೆ. ಶಿವನುನಿಜರೂಪವನ್ನು ತೋರಿ ಅವಳ ಕೈಹಿಡಿದು, 'ಇಂದು ನಿನ್ನಯ ತಪಕೆ ಮೆಚ್ಚಿದೆನು ತನುಗಾತ್ರಿ, ನಿನ್ನಚಲಭಕ್ತಿಗಾಂ ಸೋತಿಹೆನು ಮನವನ್ನೆ -

ಪರರಿಗೆಸಗುವ ನೆರವೆ ಹಿರಿತನವು ಲೋಕದೊಳು, ಬೇಡಿದುದ ನೀಡುವೆನು ಬಿಡು ತಪದ ನೇಮವನು'' ಎಂದು ಪರಶಿವನು ತನ್ನ ಸೋಲನ್ನೊಪ್ಪಿಕೊಳ್ಳುತ್ತಾನೆ. ಉಮೆಯು ಕೃತಜ್ಞತೆಯಿಂದ ನೋಡಿ ಅವನತಮುಖಿಯಾಗುತ್ತಾಳೆ. ಹರಿಹರನಲ್ಲಿ ಈ ಪ್ರಸಂಗವು ಅದ್ಭುತವಾಗಿ ಬರುತ್ತದೆ. ಅಲ್ಲಿಯ ಗಿರಿಜೆ ಶಿವನಿಂದೆಯನ್ನು ಕೇಳಿ ವಟುವಿನ ಮೇಲೆ ವಿಭೂತಿಯನ್ನು ಎರಚುತ್ತಾಳೆ. ವಿಭೂತಿಯ ಮಹಿಮೆಯೋ ಎನ್ನುವಂತೆ ಶಿವನ ದಿವ್ಯದರ್ಶನ ಗಿರಿಜೆಗೆ ಆಗುತ್ತದೆ. ಇದೊಂದು ಮನೋಜ್ಞವಾದ ಚಿತ್ರ ಹರಿಹರನಲ್ಲಿ ಕಾಣಬರುತ್ತದೆ. ಇಲ್ಲಿಯ ಪಾರ್ವತಿ ಸೌಮ್ಯಮನಸ್ಕಳು. ಕೃತಜ್ಞತೆಯಿಂದ ತನ್ನ ಮೆಚ್ಚಿಗೆಯನ್ನು ಸೂಚಿಸುತ್ತಾಳೆ.

ಈ ನಾಟಕ ಕಾರರು, ನಾಟಕದ ೭, ೮, ೯ನೆಯ ದೃಶ್ಯಗಳಲ್ಲಿ ಕೆಲವು ಕಾಲ್ಪನಿಕ ಪಾತ್ರಗಳನ್ನು ಸೃಷ್ಟಿಸಿ, ನಾಟಕದ ಹಿನ್ನೆಲೆಯಲ್ಲಿ ನಡೆದ ಸನ್ನಿವೇಶಗಳನ್ನು ವಿವಿಧ ಪಾತ್ರಗಳ ಮೂಲಕ ಹೇಳಿಸುತ್ತಾರೆ. ಏಳನೆಯ ದೃಶ್ಯದಲ್ಲಿ ಮಾಲತಿಯ ಪಾತ್ರ ಅಂಥದು ಮಾಲತಿಯು ದೇಶ ಸೇವಕಿಯ ವೇಷದಲ್ಲಿ ಸ್ತ್ರೀಬಳಗದೊಂದಿಗೆ ಗೀತೆಹಾಡುತ್ತ ಬರುತ್ತಾಳೆ. ಮಹಿತಾತ್ಮೆ ಹೈಮವತಿ ತಪದಿಂದೆ ಶಿವನೆಂದು ಕಣ್ತೆರೆದು ಕಾಯುವನೊ ನಾನರಿಯೆ - ಎಂದು ದೀನ ಮುಖ ಮುದ್ರೆಯಲ್ಲಿರುತ್ತಾಳೆ. ಆಗ ಜಯೆಯ ಭೇಟಿಯಾಗುತ್ತದೆ. ಅವಳು ಹೈಮವತಿಗೆ ಶಿವನೊಲಿದ ಪರಿಯನ್ನು ವಿವರಿಸುತ್ತಾಳೆ. ಶಿವನು ಅವಳ ತಪಕ್ಕೆ ಮೆಚ್ಚಿದನೆಂದೂ ರಜತಗಿರಿಗಿನ್ನು ನಡೆ ಎಂದು ಹೇಳುತ್ತಾನೆ. ಆಗ ಅವಳು ''ಕೊಡುಗ ತಂದೆಯ ಕಂಡು ಕೊಂಡು ನಡೆಮನದನ್ನ'' ಎಂದಳೆಂದು ಅಗಜೆಯ ಮಾತನ್ನು ಜಯೆಹೇಳಿದಾಗ 'ಕುಲಜೆಯರು ಶೀಲವನು ಕಡೆಗಣಿಸಿ ನಡೆಯುವರೆ!' ಎಂದು ಮಾಲತಿ ಹೇಳುತ್ತಾಳೆ. ಆಗ ವಿಜಯೆ ಬಂದು ಜಯೆಯನ್ನು ಕರೆಯುತ್ತ ಮದುವೆಯ ಏರ್ಪಾಡಾಗಬೇಕಾಗಿದೆ ತಡವಾಯಿತೆಂದು ಹೇಳುತ್ತಾಳೆ. ಆಂಗಿರಸ ಮೊದಲಾದ ಸಪ್ತಜನ ಮುನಿವರರು ಅರುಂಧತಿಯರು ಬಂದ ವಾರ್ತೆಯೂ ಅವರನ್ನು ಶಿವನು ಪರ್ವತರಾಜನ ಹತ್ತಿರ ಪಾರ್ವತಿಯನ್ನು ಕೇಳಿ ಕಳಿಸಿದುದು ವಿಜಯೆಯ ಮುಖಾಂತರ ಮಾಲತಿಗೂ ಪ್ರೇಕ್ಷಕರಿಗೂ ಗೊತ್ತಾಗುತ್ತದೆ. ಹೀಗೆ ತೆರೆಯ ಹಿನ್ನೆಲೆಯಲ್ಲಿ ನಡೆದ ಕಥಾಭಾಗವನ್ನು ಈ ನಾಟಕಕಾರರು ಈ ಪಾತ್ರಗಳ ಮುಖಾಂತರ ತಿಳಿಸಿದ್ದಾರೆ.

ಎಂಟನೆಯ ದೃಶ್ಯದಲ್ಲಿ ಬರುವ ಯಕ್ಷ ಕಿನ್ನರ ಗಂಧರ್ವರ ಪಾತ್ರಗಳೂ ಕಥೆಗೆ ಸಹಕಾರಿಯಾಗಿವೆ. ಯಕ್ಷ ಕಿನ್ನರರ ಸಂಭಾಷಣೆ ಹೀಗೆ ನಡೆಯುತ್ತದೆ - 'ತಾರಕನ, ಸೆರೆಯೊಳಗೆ ದೇವಗಣ ಬಂಧಿತವಾಗಿದೆ. ಬಡಜನವು ದುಗುಡದಿಂದ ಬಳಲುತ್ತಿದ್ದಾರೆ. ಪರಶಿವನ ಮದುವೆಯಲ್ಲಿ ರಮಣೀಯವೇನುಂಟು' ಎಂದು ಯಕ್ಷನು ಕೇಳುತ್ತಾನೆ. ಆಗ ಗಂಧರ್ವನು ಬಂದು 'ಶಿವನ ಮದುವೆಯ ಸುದ್ದಿಯಿಂದ ತಾರಕನ ಗದ್ದುಗೆಯು ನಡುಗಿತು, ಸೆರೆಮನೆಯ ಸರಪಳಿಯು ಹರಿಯಿತು. ಸುರರೆಲ್ಲ ಹರುಷದಿಂದ ಹೊರಬರುತ್ತಿದ್ದಾರೆ. ನಾರದರ ಸಂಧಾನದಿಂದ ನಾಕಿಗರು ಸಂತಸದಿಂದ ಇದ್ದಾರೆ. ಶುಕ್ರಾಚಾರ್ಯನದು ವಂಚನೆಯ ಸಂಧಾನ

ಅವನು ಸಂಧಾನಕ್ಕೆ ಬರುವುದೆಂದರೆ ಅವನದು ಮೋಸದ ಸಂಧಾನವೇ ಸರಿಯೆಂದು ಯಕ್ಷನು ಆಕ್ಷೇಪಿಸುತ್ತಾನೆ.

ಒಂಬತ್ತನೆಯ ದೃಶ್ಯದಲ್ಲಿ ಶುಕ್ರ, ಬೃಹಸ್ಪತಿಯ ಪಾತ್ರಗಳು ಬರುತ್ತವೆ. ಶುಕ್ರಾಚಾರ್ಯರು ದುಷ್ಕರ್ಮಿ ತಾರಕನ ದುರ್ಮಂತ್ರಕ್ಕೆ ಬೇಸತ್ತಿದ್ದಾರೆ. ಹೇಗೋ ಸಂಧಾನವಾದರೆ ಸಾಕೆಂದು ಅವರಿಗೆ ಅನ್ನಿಸಿಬಿಟ್ಟಿದೆ. ಅಸುರ ಗುರುವಿನ ಹತ್ತಿರ ಸುರಗುರು ಬರುತ್ತಾನೆ. 'ಬಾ ಮಿತ್ರ ದೇವ ಗುರು ಕುಶಲವೇ ಸಕಲರಿಗೆ ! ಅಸುರ ಗುರು ದಯೆಕರಿಸೆ ದುಗುಡವಿರೆ ನೆಲೆಯುಂಟೆ ?' ಎನ್ನುತ್ತಾನೆ ಬೃಹಸ್ಪತಿ. 'ಇನ್ನು ಸಂಧಾನವೇ ಸಾಕು. ಸಂಧಾನದ ನೆಪದಿಂದ ಹಲವು ಕಾಲ ವಂಚಿಸಿದೆ. ನಮಗೆ ಸಂಧಾನವು ಬೇಡ. ನಾವು ಆಶಾವಾದಿಗಳು. ನಮಗೆಂದೂ ಸೋಲಿಲ್ಲ ಶಿವನೊಲವು ಪಡೆದು ಸಮತೆಯನ್ನು ನೆಲೆಗೊಳಿಸಿ ಸರ್ವಸುಖ ಬೆಳೆದೆಗೆದು ಆನಂದಗಳಿಸಲಿದೊ ಸಿದ್ಧರಿಹೆವು ಧರ್ಮಸಾಮ್ರಾಜ್ಯವನ್ನು ಸ್ಥಾಪಿಸಲು ತೊಡಗಿಹೆವೆಂದು ಸುರಗುರು ಹೇಳುತ್ತಾನೆ. ಆಗ ಅಲ್ಲಿಗೆ ನಾರದರು ಬರುತ್ತಾರೆ. ನಮ್ಮ ದುಗುಡವನ್ನು ಶಿವ ಸನ್ನಿಧಿಗೆ ಅರ್ಪಿಸೆಂದು ಇಬ್ಬರೂ ಕೇಳಿಕೊಳ್ಳುತ್ತಾರೆ. ಆಮೇಲೆ ಎಲ್ಲರೂ ಶಿವಸನ್ನಿಧಿಗೆ ಹೊರಡುತ್ತಾರೆ. ಈ ಭಾಗವೂ ಕಥೆಗೆ ಪೂರಕವಾಗಿ ಬೆಳೆದು ಬರುತ್ತದೆ.

ಹತ್ತನೆಯ ದೃಶ್ಯವು ಪುಟ್ಟದಾದರೂ ಕೆಲವು ಮಹತ್ವದ ವಿಷಯಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ. ಶಿವನ ಒಡ್ಡೋಲಗ ಅಲ್ಲಿ ಶಿವ ಪಾರ್ವತಿಯರು ಸಿಂಹಾಸನಾರೂಢರಾಗಿದ್ದಾರೆ. "ನಿನ್ನೊಲವಿನಿಂದ ಎಮ್ಮ" ಕುಲವು ಪಾವನವಾಯಿತೆಂದು ಹಿಮವಂತನು ಶಿವನಿಗೆ ಹೇಳಿಕೊಳ್ಳುತ್ತಾನೆ. ರತಿಯು ಪತಿ ಭಿಕ್ಷೆ ಬೇಡಲು ಬಂದಿದ್ದಾಳೆ. 'ನಿನ್ನ ಪತಿ ಜಾಗಕ್ಕೆ ನಿನ್ನ ಅಮಲಭಕ್ತಿಗಾಂ ಸೋತಿಹೆನು ರತಿ ದೇವಿ. ನಿಜಭಕ್ತಸಂತತಿಗೆ ಭಜಕರೆದೆ ಬೇಡಿಕೆಗೆ ಸೋಲುವುದೆ ಹಿರಿದೆನಗೆ, ನಿನ್ನಿನಿಯ ನಿನಗೊಲಿದು 'ಅನಂಗ'ನಾಗಿರುವಂತೆ ಗಿರಿಸುತೆಯು ಬಯಸಿಹಳೆಂದು ಶಿವನು ಹೇಳುತ್ತಾನೆ. ಆಗ ನಾರದರು ಬಂದು 'ದೇವಗಣ ನಿಮ್ಮನ್ನು ನೆನೆಯುತ್ತದೆ, ಮರುಕದಿಂ ವರವಿತ್ತು ಪೊರೆ' ಎಂದು ಕೇಳಿಕೊಳ್ಳುತ್ತಾರೆ. "ನನ್ನ ತೇಜೋರಶ್ಮಿಯಾದ ಕುಮಾರಸ್ವಾಮಿಯು ನಾಯಕತ್ವದಲ್ಲಿ ದೇವಗಣ ತಾರಕನ ಮೇಲೆ ಸಮರ ಹೂಡಿ ಸುಜನರನ್ನು ಪೊರೆದು ಸತ್ಯವನ್ನು ಸಾರುವೆಸೆಂದು ಶಿವನು ಹೇಳುತ್ತಾನೆ". ಇನ್ನು ಮೇಲೆ "ಸ್ವಾರಾಜ್ಯ ದಿವಿಜರಿಗೆ ಸ್ವಾತಂತ್ರ್ಯ ಮನುಜರಿಗೆ ಮನದಿಚ್ಛೆ ಸಕಲರಿಗೆ ಲಭಿಸಿ ಸುಖವಹುದಿನ್ನು" ಎಂದು ಹೇಳಿದ್ದಲ್ಲದೆ - "ಅವರವರ ಧರ್ಮದೊಳಗವರವರ ನೇಮದೊಳಗವರವರು ನೆಲೆಗೊಂಡು ನಿಜಸುಖದ ಸೊದೆಯುಣಲಿ" ಎಂದು ಪರಶಿವನು ತನ್ನ ಸಂದೇಶವನ್ನು ಬೀರುತ್ತಾನೆ.

ಪೀಠಿಕಾ ದೃಶ್ಯದಲ್ಲಿ ಪ್ರೇಕ್ಷಕರಿಗೆ ಕಥಾಪರಿಚಯ ಮಾಡಿದ ವೇದಶಿಖಿ ಗೌತಮರು ಉಪಸಂಹಾರ ದೃಶ್ಯದಲ್ಲಿಯೂ ಕಾಣಬರುತ್ತಾರೆ. ಸಂಸ್ಕೃತ ನಾಟಕವಲ್ಲಿ ಕಥಾಪರಿಚಯ

ಮಾಡುವವರು ಮತ್ತೆ ಎಲ್ಲಿಯೂ ಕಾಣಬರುವುದಿಲ್ಲ. ಪ್ರೊ ॥ ಆರಾಧ್ಯರ ಈ ನಾಟಕದಲ್ಲಿ ಪುರಾತನರನ್ನು ಅನುಸರಿಸಿದ್ದರೂ ಇಲ್ಲಿ ವೇದಶಿಖಿ, ಗೌತಮರ ಪಾತ್ರಗಳು ಈ ದೃಶ್ಯದಲ್ಲಿ ಕಾಣುತ್ತವೆ. ಇದು ನಾಟಕಕಾರರ ಹೊಸ ಬಗೆಯೆಂದು ಹಿಂದೆ ಹೇಳಿದೆ. ಕುಮಾರಸ್ವಾಮಿ ನೇತೃತ್ವದಲ್ಲಿ ವಟುಗಳ ಪ್ರಚಂಡ ಆರ್ಭಟವು ಕೇಳಿಬರುತ್ತದೆ. ಷಣ್ಮುಖನು ತಾರಕನನ್ನು ಧ್ವಂಸ ಮಾಡಿ ಜಯವನ್ನು ತಂದಿದ್ದಾನೆ. ಎಲ್ಲರಿಗೂ ಪರಮಾನಂದ ಉಂಟಾಗಿದೆ. 'ಹಿರಿಯ ಕಿರಿಯರಾ ಭೇದಗಳಿಲ್ಲ, ಹೆಚ್ಚು ಕಡಿಮೆಯಾ ಕಿಚ್ಚೆಮಗಿಲ್ಲ, ದೇಶವೆ ನಮ್ಮಯ ಹೃದಯಾರಾಮವು, ದೇಹವೆ ದೇಶದ ಬಲಿಯಾಧಾಮವು'' ಎಂದು ವಟುಗಳು ನವಯುಗದ ಕಹಳೆಯನ್ನು ಊದುತ್ತಾರೆ. ವೇದಶಿಖಿಗೆ ಆಶ್ಚರ್ಯವಾಗುತ್ತದೆ. ಹುಟ್ಟಿದ ಏಳನೆಯ ದಿನವೇ ತಾರಕನನ್ನು ಮೆಟ್ಟಿದ ಕಡುಗಲಿ ಇವನು, ಶಿವತೇಜಕಿದಿರುಂಟೆ ? ಎಂದು ಉದ್ಗರಿಸುತ್ತಾನೆ. ತಾರಕನು ಮಾಡಿದ ಉರುಪಾಪವು ಹಾಗೂ ದಷ್ಕೃತಿಯೇ ಶಿವಕಿಡಿಯಿಂದ ಸುಟ್ಟು ಮೆರೆದಿಹುದೆಂದು ಗೌತಮನು ಹೇಳುತ್ತಾನೆ.

ನಾಟಕದ ಅಂತ್ಯದಲ್ಲಿ ಕುಮಾರಸ್ವಾಮಿ ಹಾಗೂ ಮಹಾತ್ಮನ ವೇಷದಲ್ಲಿ ಮನ್ಮಥನು ಬರುತ್ತಾರೆ. ಷಣ್ಮುಖನು ''ತ್ಯಾಗವಿದ್ಯಾಗುರುವೆ, ಆತ್ಮಬಲಿಯಾಚಾರ್ಯ, ನುಡಿದಂತೆ ನಡೆದೋರಿ ಮುನ್ನಡೆದ ಯೋಗಿವರ !' ಎಂದು ಮನ್ಮಥನನ್ನು ಹೊಗಳುತ್ತಾನೆ. ನಿನ್ನ ''ಭಕ್ತಿ ಬಲಿಯಿಂದ ಶಿವನೊಲವ ಸೆರೆಗೈದು ಲೋಕಹಿತವೆಸಗಿದ ಮಹಿತಾತ್ಮ ನೀನಲ್ತೆ, ದಿವಿರಾಜ್ಯ ಬಾವಟವ ಸ್ಥಾಪಿಸೈ ಸತ್ಯಾತ್ಮ'' ಎಂದು ಕೇಳಿಕೊಳ್ಳುತ್ತಾನೆ. ಆಗ ಮನ್ಮಥನು ''ಮೂಜಗದ ಚಾಗಿಗಳ ನಿಜ ಶಕ್ತಿ ಶಿವಶಕ್ತಿಯೊಡವೆರೆದು ಬೆಳಗಲೀ ಬಾವುಟವು ಚಿರಕಾಲ !' ನನಗೆ ಮುಕ್ತಿಯು ಬೇಡ ಲೋಕಹಿತಕ್ಕಾಗಿ ಬಲಿದಾನಗೈಯುವ ತಾಳ್ಮೆಯನ್ನು ಎನಗೆ ನೀಡೆಂದೂ ವಿಶ್ವರೂಪ ದರ್ಶನವಿತ್ತು ಕರುಣಿಸೆಂದೂ ಕೇಳಿಕೊಳ್ಳುತ್ತಾನೆ. ವಿಶ್ವರೂಪದರ್ಶನವಾಗುತ್ತದೆ. ಅದರಿಂದ ಎಲ್ಲರ ಕಣ್ಣು ಕೋರೈಸುತ್ತವೆ. ಋಷಿಗಳು ಶಾಂತಿಪಾಠವನ್ನು ಹೇಳುತ್ತಾರೆ. ಕುಮಾರಸ್ವಾಮಿ, ಮನ್ಮಥರು ಪರಸ್ಪರ ಆಲಂಗಿಸುತ್ತಾರೆ. ಪುಷ್ಪವೃಷ್ಟಿಯಾಗುತ್ತದೆ ಜಯಜಯಕಾರಗಳೊಂದಿಗೆ ನಾಟಕವು ಮಂಗಳದಲ್ಲಿ ಮುಕ್ತಾಯವಾಗುತ್ತದೆ.

ಕೊನೆಯಮಾತು - 'ಶಿವನ ಸೋಲು' ಕಾವ್ಯಮಯವಾದ ಪುಟ್ಟ ನಾಟಕ. ಸೊಗಸಾದ ಕಥಾವಸ್ತು. ಕಾಳಿದಾಸ, ಹರಿಹರರಲ್ಲಿ ಈ ಕಥಾವಸ್ತುವಿದ್ದರೂ ಪ್ರೊ. ಆರಾಧ್ಯರದೇ ಒಂದು ಹೊಸಬಗೆಯ ಶೈಲಿಯಲ್ಲಿ ನಿರೂಪಿತವಾಗಿದೆ. ಇಲ್ಲಿ ನಾಟಕ ಪ್ರಾರಂಭವಾದುದೇ ಗಿರಿಜೆಯ ತಪಸ್ಸಿನಿಂದ. ಹರಿಹರನಂತೆ ಪರ್ವತರಾಜನು, ಔಷಧಿಪ್ರಸ್ತಪುರದಿಂದ ಹಂಪೆಗೆ ವಿಮಾನದಲ್ಲಿ ತಪಸ್ಸು ಮಾಡಲು ಕಳಿಸುತ್ತಾನೆ. ಶಿವನು ಹೇಮಕೂಟದಲ್ಲಿ ಸಮಾಧಿಯಲ್ಲಿರುವುದು ಕುಮಾರ ಸಂಭವದಲ್ಲಿ ಬರುವುದಿಲ್ಲ. 'ಮನ್ಮಥನ ದಹನ, ಗಿರಿಜೆಯ ಉಗ್ರತಪಸ್ಸು, ಶಿವನು ವಟುವೇಷದಿಂದ ಬಂದು ಪಾರ್ವತಿಯನ್ನು ರೇಗಿಸುವುದು, ಅವಳು ಶಿವನಿಂದೆಯನ್ನು ಕೇಳದೆ

ವಿಭೂತಿಯಿಂದ ಹೊಡೆಯುವುದು (ಇಲ್ಲಿ ಕಡುಮೂರ್ಖವಟು ನೀನು ಎಂದು ಮುಖ ಓರೆ ಮಾಡಿ ಹೋಗಲುದ್ಯುಕ್ತಳಾಗುತ್ತಾಳೆ) ವಟು ವೇಷ ಮಾಯವಾಗಿ ನಿಜರೂಪ ತೋರುವುದು - ಇವೆಲ್ಲ ಹಂಪೆಯಲ್ಲಿ ನಡೆದ ಪ್ರಸಂಗಗಳು 'ಕುಮಾರ ಸಂಭವ' ದಲ್ಲಿ ಬರುವುದಿಲ್ಲ. ಇಲ್ಲಿ ಹರಿಹರನ ಮಾತೃಭೂಮಿಯ ಪ್ರೀತಿಯು ವ್ಯಕ್ತವಾಗುತ್ತದೆ. ಈ ಪ್ರಸಂಗಗಳಲ್ಲಿ ಅವನನ್ನೇ ಅನುಸರಿಸಿದ ಆರಾಧ್ಯರೂ ತಮ್ಮ ಮಾತೃಭೂಮಿಯ ಪ್ರೇಮವನ್ನು ವ್ಯಕ್ತಪಡಿಸಿದ್ದಾರೆ.

ನಾಟಕದ ಶೈಲಿಯಲ್ಲಿ ಲಾಲಿತ್ಯವಿದೆ ಮಾಧುರ್ಯವಿದೆ. ಪ್ರೊ. ಆರಾಧ್ಯರು ಸಂಸ್ಕೃತದ ಘನ ವಿದ್ವಾಂಸರಾಗಿದ್ದರೂ ಈ ನಾಟಕದಲ್ಲಿ ಸಂಸ್ಕೃತ ಪದಗಳ ಬಳಕೆಯೇ ಕಡಿಮೆ. ತಿಳಿಗನ್ನಡ ಪದಗಳನ್ನು ಹೆಚ್ಚಾಗಿ ಬಳಸಿ ಕನ್ನಡದ ಘನವಿದ್ವಾಂಸರೆನ್ನಿಸಿಕೊಂಡಿದ್ದಾರೆ.

ಈ ನಾಟಕವನ್ನು ಸರಳ ರಗಳೆಯಲ್ಲಿ ಬರೆಯಲಾಗಿದೆ. ಐದೈದು ಮಾತ್ರೆಗಳ ನಾಲ್ಕುಗಣಗಳು ನಾಟಕದ ಉದ್ದಕ್ಕೂ ಕಾಣಬರುತ್ತವೆ. ಐವತ್ತರ ದಶಕದಲ್ಲಿ ಸರಳ ರಗಳೆಯು ಒಂದು ಪರಂಪರೆಯೇ ಬೆಳೆದು ಬಂದಿತ್ತು. ಮಾಸ್ತಿ, ಎಂ. ಆರ್. ಶ್ರೀ. ಮೊದಲಾದ ಶ್ರೇಷ್ಠ ಕವಿಗಳು, ನಾಟಕಕಾರರು ಸರಳ ರಗಳೆಯಲ್ಲಿ ತಮ್ಮ ನಾಟಕ ಮೊದಲಾದವುಗಳನ್ನು ಬರೆಯುತ್ತಿದ್ದರು. ಇವರ ಜಾಡನ್ನೇ ಹಿಡಿದ ಯುವ ಕವಿ ಆರಾಧ್ಯರು ಅಚ್ಚುಕಟ್ಟಾದ ಸರಳ ರಗಳೆಯಲ್ಲಿ ಬರೆದಿದ್ದಾರೆ. ಇವರ ಬಂಧದಲ್ಲಿ ಬಿಗಿವು ಇದೆ. ಎಲ್ಲಿಯೂ ಕುಂಠಿತವಾಗಿಲ್ಲ. ಐವತ್ತೊಂದು ವರ್ಷಗಳ ಹಿಂದೆ ಬರೆದ ಈ ನಾಟಕದಲ್ಲಿ ಉದಾತ್ತ ಧ್ಯೇಯ, ಮನಂಬುಗುವ ರಸ ನಿರೂಪಣೆ, ಉಚ್ಚ ವಿಚಾರಧಾರೆಗಳು ಉದ್ದಕ್ಕೂ ಕಾಣಬರುತ್ತವೆ.

ವಿದ್ವಾನ್ ಆರಾಧ್ಯರ ಮತ್ತೊಂದು ಸ್ವತಂತ್ರ ನಾಟಕ ''ದಸ್ಯು ಮಹರ್ಷಿ ಕವಷ ಐಲೂಷ'' ಎಂಬುದು. ಇದೊಂದು ಚಿಕ್ಕ ರೂಪಕ. ಇದರ ಕಥಾವಸ್ತು ಋಗ್ವೇದ (ಮಂ. ೧೦.ಸೂ.೩೦) ದಿಂದ ಎತ್ತಿ ಕೊಳ್ಳಲಾಗಿದೆ. ಇದು ಭಾರತದ ವಾಯುವ್ಯಗಡಿಯ ಸಿಂಧು ಕಣಿವೆಯ ಸರಸ್ವತಿ ನದಿಯ ದಂಡೆಯಲ್ಲಿ, ಆರ್ಯರು ಭಾರತ ಪ್ರವೇಶ ಮಾಡುವ ಸಂದರ್ಭದಲ್ಲಿ ನಡೆದ ಕಥೆ. ಮಹೆಂಜೊದಾರೋ ಹರಪ್ಪಾದಲ್ಲಿ ಈಗ ಸಾಕಷ್ಟು ಸಂಶೋಧನೆಗಳು ನಡೆಯುತ್ತಿವೆ. ಹೊರಗಿನಿಂದ ಬಂದ ಆರ್ಯರು ಮೂಲನಿವಾಸಿಗಳಾದ ದ್ರಾವಿಡರ ಮೇಲೆ ದಬ್ಬಾಳಿಕೆ ನಡೆಸಿ ಅವರನ್ನು ದಸ್ಯುಗಳೆಂದು ಕರೆದರು. ಇವರಿಬ್ಬರ ಸಂಘರ್ಷಣೆ ಅನೇಕ ಕಾಲಗಳವರೆಗೆ ನಡೆಯಿತು. ಇದರ ಫಲವೇ ಹಿಂದೂಧರ್ಮ ಹಿಂದೂಸಂಸ್ಕೃತಿ ರೂಪ ತಾಳಿತೆಂದು ಹಲವು ವಿದ್ವಾಂಸರ ಅಭಿಪ್ರಾಯವಾಗಿದೆ. ಆರ್ಯ ದ್ರಾವಿಡರ ಸಂಘರ್ಷದಲ್ಲಿ ದ್ರಾವಿಡರು ಯುದ್ಧದಲ್ಲಿ ಸೋತಾಗ, ಅವರ ಹೆಂಡಂದಿರು ಆರ್ಯರ ಮನೆಯಲ್ಲಿ ದಾಸಿಗಳಾಗಿ ಗಂಡಸರು ದಾಸರಾಗಿ ದುಡಿಯುತ್ತಿದ್ದರು. ಕೆಲವು ಆರ್ಯರು ಆ ದಾಸಿಯರನ್ನು ಮೋಹಿಸಿ ಮದುವೆ ಕೂಡ ಮಾಡಿಕೊಳ್ಳುತ್ತಿದ್ದರು. ಅಂತಹ ಒಂದು ಸಂದರ್ಭವು ಈ ಕಿರುನಾಟಕದಲ್ಲಿ ಕಾಣಬರುತ್ತದೆ. ಇಲೂಷನೆಂಬ ಋಷಿ, ತನ್ನ ಮನೆಯಲ್ಲಿ ಕೆಲಸಮಾಡುವವಳಾದ ಭವಾನಿ ಎಂಬುವವಳನ್ನು

ಮದುವೆಯಾಗುತ್ತಾನೆ. ಅವನಿಗೆ, ಇವಳಲ್ಲದೆ ಮದುವೆಯಾದ ಬ್ರಾಹ್ಮಣಿಯೊಬ್ಬಳಿರುತ್ತಾಳೆ. ಭವಾನಿಗೆ 'ಕವಷ' ನೆಂಬ ಮಗ ಹುಟ್ಟುತ್ತಾನೆ. ದಾಸಿಯೊಡನೆ ಬೆಳೆಸಿದ ಈ ಸಂಬಂಧವು ಅಲ್ಲಿಯ ಆರ್ಯರಿಗೆ ಹಿಡಿಸುವುದಿಲ್ಲ. ಆಗ ಸಮಾಜದಲ್ಲಿ ಗೊಂದಲವೇಳುತ್ತದೆ.

ಇಲೂಷ ಋಷಿ ಆ ರಾಜ್ಯದಲ್ಲಿ ಪ್ರತಿಷ್ಠಿತ ವ್ಯಕ್ತಿಯಾದರೂ ಅಲ್ಲಿಯ ಆರ್ಯರು ಇವನನ್ನು ಸಮಾಜದಿಂದ ದೂರಿಡಲು ಪ್ರಯತ್ನಿಸುತ್ತಾರೆ. ಆಗ ರಾಜ್ಯದಲ್ಲಿ ಹನ್ನೆರಡು ವರ್ಷಗಳವರೆಗೆ ಕ್ಷಾಮ ಉಂಟಾಗುತ್ತದೆ. ಇದನ್ನು ನಿವಾರಿಸಲು ಋಷಿಗಳೆಲ್ಲರೂ ಸರಸ್ವತಿ ನದಿ ತೀರದಲ್ಲಿ ಸೇರಿ 'ಮಹಾಸತ್ರಯಾಗ' ಮಾಡಲು ತೊಡಗುತ್ತಾರೆ. ಯಾಗಕ್ಕಾಗಿ ಇಲೂಷ, ಕವಷರಿಗೂ ಆಹ್ವಾನವಿದೆ. ಆದರೆ ಕವಷನನ್ನು ಅಲ್ಲಿ ಅವಮಾನ ಮಾಡುತ್ತಾರೆ.

ಇಲೂಷನು ಯಾಗಶಾಲೆಯಿಂದ ಹೊರಟು ಹೋಗುತ್ತಾನೆ. ಕವಷನು ದಾಸಿ ಪುತ್ರನೆಂದು ಅವನನ್ನು ನೀರು ನೆರಳಿಲ್ಲದ ಸ್ಥಾನದಲ್ಲಿ ಕರೆದೊಯ್ದುಬಿಡುತ್ತಾರೆ. ಸರಸ್ವತಿ ನದಿ ಬತ್ತಿಹೋಗುತ್ತದೆ. ಋತ್ವಿಜರೆಲ್ಲರೂ ಹವಿಸ್ಸು ಸ್ವೀಕರಿಸಲು ಮಂತ್ರಗಳನ್ನು ಪಠಿಸುತ್ತಾರೆ. ಯಾವ ದೇವತೆಗಳೂ ಅಲ್ಲಿಗೆ ಬರುವುದಿಲ್ಲ. ಎಲ್ಲರೂ ಗಾಬರಿಯಾಗುತ್ತಾರೆ. ಕವಷನ್ನು ಹುಡುಕಲು ಎಲ್ಲರೂ ಹೊರಡುತ್ತಾರೆ.

ಕಾಡಿನಲ್ಲಿ ಕವಷನು ಅನ್ನನೀರಿಲ್ಲದೆ ಹಲಬುತ್ತಿದ್ದಾನೆ. ಜಲದೇವತೆಗಳು, ಅವನಿಗೆ ಕಾಣಿಸಿಕೊಳ್ಳುತ್ತಾರೆ. ಅವನ ಮುಖದಿಂದ ''ಪ್ರದೇವತಾಬ್ರಹ್ಮಣೆ' ಮೊದಲಾದ ಋಕ್ಕುಗಳು ಹೊರಬರುತ್ತವೆ. ಕೂಡಲೇ ಮಳೆ ಪ್ರಾರಂಭವಾಗುತ್ತದೆ. ಋಷಿಗಳೆಲ್ಲರೂ ಇವನನ್ನು ಹುಡುಕಿಕೊಂಡು ಇವನಲ್ಲಿಗೆ ಬರುತ್ತಾರೆ. ಎಲ್ಲರೂ ಅವನನ್ನು 'ಮಹರ್ಷಿ' ಎಂದು ಕರೆಯುತ್ತಾರೆ. ಆಗ ದೇವದುಂದುಭಿಗಳು ಮೊಳಗುತ್ತವೆ. ಈ ಕಥಾವಸ್ತುವನ್ನು ಹಿನ್ನೆಲೆಯಾಗಿ ಇಟ್ಟುಕೊಂಡು ಈ ಪುಟ್ಟ ರೂಪಕವನ್ನು ಪ್ರೊ. ಆರಾಧ್ಯರು ಸೃಜನಾತ್ಮಕವಾಗಿ ನಿರೂಪಿಸಿದ್ದಾರೆ.

ಈ ಕಿರುನಾಟಕದಲ್ಲಿ ಎರಡು ಅಂಕಗಳಿದ್ದು, ಪ್ರತಿ ಅಂಕದಲ್ಲಿ ಐದೈದು ಪುಟ್ಟಪುಟ್ಟ ದೃಶ್ಯಗಳಿವೆ (ಎರಡನೆಯ ಅಂಕದಲ್ಲಿ ನಾಲ್ಕನೆಯ ದೃಶ್ಯಗಳು ಎರಡು ಉಂಟು) ಋಗ್ವೇದದಲ್ಲಿ ಬರುವ ಕೆಲವೇ ಕೆಲವು ಸೂತ್ರಗಳ ಆಧಾರದಿಂದ ಇಂತಹ ಕಲಾತ್ಮಕವಾದ ನಾಟಕವನ್ನು ರಚಿಸಿದ ಪ್ರೊ. ಆರಾಧ್ಯರ ಕಲಾಕಲ್ಪನೆಯು ಪ್ರಶಂಸನೀಯವಾದುದು. ಮೊದಲೆರಡು ದೃಶ್ಯಗಳಲ್ಲಿ ಶೈವಧರ್ಮ ಹಾಗೂ ಆರ್ಯಧರ್ಮಗಳ ಸಂಘರ್ಷಣೆಯ ಸೂಚನೆಯಿಂದ, ವಿರಪಣ್ಣ, ಕೆಂಚಣ್ಣ, ಗಿಡ್ಡಣ್ಣ ಮೊದಲಾದ ಕಾಲ್ಪನಿಕ ವ್ಯಕ್ತಿಗಳ ಮೂಲಕ ನಾಟಕ ಪ್ರಾರಂಭವಾಗುತ್ತದೆ. ಶೈವದಳಪತಿಯ ಹೆಂಡತಿ ಶಿವದಾಸಿ ಹಾಗೂ ಅವಳ ಮಗಳು ಭವಾನಿ ವಿರಪ್ಪಣ್ಣನ ಗಾಡಿಯಲ್ಲಿ ಬಂದು, ಆರ್ಯರ ಅಗ್ರಹಾರದಲ್ಲಿ ಇಳಿದು ಇಲೂಷನ ಮನೆಯಲ್ಲಿ ದಾಸಿಯರಾಗಿ ಉಳಿಯುತ್ತಾರೆ. ಇಲೂಷನ ಹೆಂಡತಿ ಸಾವಿತ್ರಿ ಆ ಇಬ್ಬರನ್ನು ಮನೆಯ ಮಕ್ಕಳಂತೆ ನೋಡಿಕೊಳ್ಳುತ್ತಿದ್ದಾಳೆ.

ಮೊದಲ ಅಂಕದ ಮೂರನೆಯ ದೃಶ್ಯದಲ್ಲಿ ಒಂದು ಘಟನೆ ನಡೆಯುತ್ತದೆ. ಶಿವದಾಸಿ ಹಾಗೂ ಅವನ ಮಗಳು ಇಲೂಷನ ಮನೆಗೆ ಬಂದು ಆರುತಿಂಗಳಾಗಿದೆ. ಅವನು ಆ ಅಗ್ರಹಾರದಲ್ಲಿ ವೇದಪಾಠವನ್ನು ಹೇಳುವ ವ್ಯಕ್ತಿ. ಈ ಮಧ್ಯದಲ್ಲಿ ಇಲೂಷನು, ಭವಾನಿಯನ್ನು ಪ್ರೀತಿಸುತ್ತಿದ್ದಾನೆ. ಇವನ ಪ್ರತಿಸ್ಪರ್ಧಿ ಕಪಿಂಜಲಶಾಸ್ತ್ರಿ ಎಂಬುವನಿದ್ದಾನೆ. ಒಂದು ಸಲ ಇಲೂಷನು ನಾಲ್ಕೈದು ಓಲೆಕಟ್ಟುಗಳನ್ನು ತರಗತಿಯಲ್ಲಿಟ್ಟು ಎಲ್ಲಿಯೋ ಅವಸರದಿಂದ ಹೊರಟು ಹೋಗುತ್ತಾನೆ. ಪಾಠಶಾಲೆಯಲ್ಲಿ ಹುಡುಗರು ಆ ಓಲೆಕಟ್ಟುಗಳನ್ನು ಬಿಚ್ಚಿ ನೋಡಿ ಗಲಾಟೆ ಮಾಡುತ್ತಿದ್ದಾರೆ. ಕಪಿಂಜಲಶಾಸ್ತ್ರಿ ಗಲಾಟೆ ಏನೆಂದು ಕೇಳುತ್ತಾರೆ. ಹುಡುಗರು ಓಲೆಗರಿ ಕಟ್ಟನ್ನು ತೋರಿಸುತ್ತಾರೆ. ಅದರಲ್ಲಿ ರತಿಶಾಸ್ತ್ರವೂ ಶೃಂಗಾರಚಿತ್ರಗಳೂ ಕಾಣಬರುತ್ತವೆ. ತರಗತಿಯಲ್ಲಿ ಪಾಠಹೇಳುವುದು ಯಜುಸ್ಸಂಹಿತೆ, ಓದುವುದು ರತಿಶಾಸ್ತ್ರ, ಬರೆಯುವುದು ಶೃಂಗಾರ ರಸಚಿತ್ರಗಳು ಚೆನ್ನಾಗಿದೆಯೆಂದು ಶಾಸ್ತ್ರಿಗಳು ಅವನ್ನು ಅವನ ಹೆಂಡತಿಗೆ ಕಳಿಸಿಕೊಡುತ್ತಾರೆ.

ಸಾವಿತ್ರಿಯ ಚೊಚ್ಚಲು ಹೆರಿಗೆಯ ದಿನಗಳು ಸಮೀಪಿಸುತ್ತಿವೆ. ಗಂಡನು ಭವಾನಿಯಲ್ಲಿ ಆಸಕ್ತನಾಗಿದ್ದಾನೆಂಬುದು ಆ ಓಲೆಗರಿಗಳಿಂದ ಅವಳು ಅರಿತುಕೊಳ್ಳುತ್ತಾಳೆ. ಅವಳಿಗೆ ಮೊದಮೊದಲು ತುಂಬಾ ನೋವು ಉಂಟಾಗುತ್ತದೆ. ತನ್ನ ಗಂಡ ಎಂಥಾ ಜಿತೇಂದ್ರಿಯನೆಂಬುದು ಈ ಹಿಂದೆ ಅವಳ ತಂದೆ ಮರೀಚಿ ಋಷಿ ಹೇಳಿದ್ದು ಜ್ಞಾಪಿಸಿಕೊಳ್ಳುತ್ತಾಳೆ. ಆದರೂ ಈಗ ಹೀಗೇಕಾದರೆಂದು ಚಿಂತಿಸುತ್ತಿದ್ದಾಳೆ. ಹಿಂದೆ ಇಂದ್ರ, ವಿಶ್ವಾಮಿತ್ರರ ಗತಿ ಏನಾಯಿತೆಂದು ಯೋಚಿಸುತ್ತಿದ್ದಾಳೆ. ಅಂಥವರೂ ಕಾಮವಿಕಾರಕ್ಕೆ ಒಳಗಾದ ಮೇಲೆ ನಮ್ಮವರ ಪಾಡೇನೆಂದು ಅರ್ಥೈಸಿಕೊಳ್ಳುತ್ತಾಳೆ. ಭವಾನಿಯು ಸ್ಫುರದ್ರೂಪಿಯಾಗಿದ್ದಾಳೆ. ಇಲ್ಲಿ ಅವಳ ಚಿತ್ರವನ್ನು ನೋಡಿದರೆ ಎಂಥವರಿಗೂ ಮನಸ್ಸು ಹರಿಯುತ್ತದೆ. ಅವರ ಕಾರ್ಯ ದೈವಪ್ರೇರಿತವಾದುದೆಂದು ಅನ್ನಿಸುತ್ತದೆ. ಆರ್ಯ ದ್ರಾವಿಡರ ಈ ಬಗೆಯ ವರ್ಣಸಂಕರದಿಂದ ಮುಂದೆ ಹುಟ್ಟುವ ಸಂತಾನವು ಎರಡೂ ವರ್ಣಗಳ ಶ್ರೇಯಸ್ಸನ್ನು ಬಯಸಬಹುದಾಗಿದೆ. ಇಂಥ ಘಟನೆಗಳು ಲೋಕಹಿತಾರ್ಥವಾಗಿ ನಡೆಯಲು ಸಾಧ್ಯ. ಇದು ದೈವಪ್ರೇರಣೆಯಿರಬೇಕು. ಇದಕ್ಕೆ ತಲೆಬಾಗುವುದು ನಮ್ಮೆಲ್ಲರ ಕರ್ತವ್ಯವೆಂದು ಸಾವಿತ್ರಿಯು ದೃಢ ಸಂಕಲ್ಪಮಾಡಿಕೊಳ್ಳುತ್ತಾಳೆ.

ಮಾರನೆಯ ದಿನ ಸಾವಿತ್ರಿಯು ಶಿವದಾಸಿಯನ್ನು ಕರೆಸುತ್ತಾಳೆ. ಭವಾನಿಯನ್ನು ತನ್ನ ತಂಗಿಯಾಗಿ ಮಾಡಿಕೊಳ್ಳಬೇಕೆಂದು ನಿರ್ಧರಿಸಿದ್ದೇನೆ. ನಿನ್ನ ಒಪ್ಪಿಗೆಯನ್ನು ತಿಳಿಸೆಂದು ಶಿವದಾಸಿಯನ್ನು ಕೇಳುತ್ತಾಳೆ. ಆಗ ಅವಳು ನೀವು ಆರ್ಯರು ನಾವು ದ್ರಾವಿಡರು. ನಮಗೂ ನಿಮಗೂ ಸಂಬಂಧ ಹೇಗೆ ಸಾಧ್ಯ. ಅಂದು ಭವಾನಿ, ಒಡೆಯರ ಬಗ್ಗೆ ತಪ್ಪಾಗಿ ತಿಳಿದು ಕೊಂಡಿರಬೇಕು. ನೀವು ಅದನ್ನು ನಂಬಬೇಡಿ ಎಂದು ಶಿವದಾಸಿ ಹೇಳುತ್ತಾಳೆ. ಆಗ

ಸಾವಿತ್ರಿಯು ಮನುಷ್ಯರಲ್ಲಿ ನಾಲ್ಕುವರ್ಣಗಳು ಇವೆಯೆಂದು ಹೇಳುವುದು ಒಬ್ಬರು ಶ್ರೇಷ್ಠ ಒಬ್ಬರು ಕನಿಷ್ಠ ಎಂಬ ಭಾವನೆಯಿಂದ ಅಲ್ಲ. ಉತ್ತಮ ಗುಣ-ಕರ್ಮ-ಶೀಲ ಸ್ವಭಾವಗಳಿದ್ದರೆ ಶೂದ್ರನೂ ಬ್ರಾಹ್ಮಣನಾಗಬಹುದು, ಕೆಟ್ಟ - ಗುಣ - ಕರ್ಮ ಶೀಲ ಸ್ವಭಾವಗಳಿದ್ದರೆ ಬ್ರಾಹ್ಮಣನೂ ಶೂದ್ರನಾಗಬಹುದೆಂದು ತಿಳಿಸುತ್ತಾಳೆ. ನಮ್ಮ ಯಜಮಾನರು ತ್ರಿಕರಣ ಪೂರ್ವಕವಾಗಿ ಭವಾನಿಯನ್ನು ಪ್ರೀತಿಸುತ್ತಿದ್ದಾರೆ. ಇದೊಂದು ದೈವಸಂಕಲ್ಪವೆಂದು ಅವರೇ ಹೇಳುತ್ತಿದ್ದಾರೆ. ದೈವಸಂಕಲ್ಪವನ್ನು ವಿರೋಧಿಸುವುದು ನ್ಯಾಯವಲ್ಲ. ಇನ್ನು ನನಗೆ ಐಹಿಕ ಸುಖ ಸಾಕು ! ದೈವ ಸಂಕಲ್ಪಕ್ಕೆ ತಲೆಬಾಗಿ ನನ್ನ ಒಡೆಯರನ್ನು ಶಿವಭಕ್ತೆಯಾದ ಭವಾನಿಗೆ ಧಾರೆ ಎರೆಯುತ್ತಿದ್ದೇನೆ. ಅವಳೇ ನನ್ನ ನಿಜವಾದ ತಂಗಿಯೆಂದು ಹೇಳುತ್ತಾಳೆ. ಶಿವದಾಸಿಗೆ ಅಚ್ಚರಿಯುಂಟಾಗುತ್ತದೆ. ಯಾವ ಹೆಂಗಸೂ ತನ್ನ ಸುಖಕ್ಕೆ ಅಡ್ಡಬರುವ ಸವತಿಯನ್ನು ತಂದುಕೊಳ್ಳಲು ಒಪ್ಪುವುದಿಲ್ಲ. ನೀವು ನಿಜವಾಗಿಯೂ ಮಾನವರ ಶ್ರೇಯಸ್ಸನ್ನು ಬಯಸುವ ದೇವ ಮಾನವರೇ ಸರಿ. ನಿಮ್ಮ ಇಷ್ಟದಂತೆ ಆಗಲೆಂದು ಶಿವದಾಸಿಯು ಒಪ್ಪಿಗೆ ನೀಡುತ್ತಾಳೆ. ಇಲ್ಲಿ ಸಾವಿತ್ರಿಯ ಔದಾರ್ಯ ಎಷ್ಟು ಮಹತ್ವಪೂರ್ಣವಾದುದೆಂದು ತಿಳಿದುಬರುತ್ತದೆ.

ಅಗ್ರಹಾರದಲ್ಲಿ ಇಲೂಷ ಭವಾನಿಯರ ಮದುವೆ ವೈಭವದಿಂದ ನಡೆಯುತ್ತದೆ. ದಾಸಕನ್ಯೆಯನ್ನು ಆರ್ಯಋಷಿ ಮದುವೆಯಾದುದು ಇದೇ ಮೊದಲು. ಮದುವೆಯಲ್ಲಿ ಸಾವಿತ್ರಿ ಶಿವದಾಸಿಯರು ಕ್ಷೀರಧಾರೆ ಎರೆಯುತ್ತಾರೆ. ಜಾತವೇಧ ಮುನಿಗಳು ಬಂದು ಆಶೀರ್ವದಿಸುತ್ತಾರೆ. ಶಾಲೆಯ ವಿದ್ಯಾರ್ಥಿಗಳು ಫಲತಾಂಬೂಲ ಹಂಚುತ್ತಾರೆ. ಉತ್ಸವದ ಅಂಗವಾಗಿ ಸಿಹಿತಿಂಡಿ ಹಂಚಲಾಯಿತು. ಹೀಗೆ ಇವರ ಮರುಮದುವೆಯಿಂದ ಆರ್ಯ ದ್ರಾವಿಡರ ವರ್ಣಸಂಕರವಾಗಿ ಹೊಸಸಂಸ್ಕೃತಿ ಬೆಳೆಯಲು ಆಸ್ಪದವಾಗುತ್ತದೆ. ಈ ವರ್ಣಸಂಕರದ ವಿರೋಧಿಗಳು, ಇಂಥ ಕಾರ್ಯದಿಂದ ಕ್ಷಾಮ ಉಂಟಾಯಿತೆಂದು ಹೇಳತೊಡಗುತ್ತಾರೆ. ಅಗ್ರಹಾರದಲ್ಲಿ ಇಲೂಷ ಋಷಿಯ ಬಗ್ಗೆ ಒಂದು ಬಗೆಯ ಪ್ರತಿರೋಧವೇ ಉಂಟಾಗುತ್ತದೆ.

ಎರಡನೆಯ ಅಂಕದ ಮೊದಲನೆಯ ದೃಶ್ಯದಲ್ಲಿ ಸ್ವಾರಸ್ಯವಾದ ಒಂದು ಚಿತ್ರ ಚಿತ್ರಿತವಾಗಿದೆ. ಅಗ್ರಹಾರದ ಹೆಂಗಸರು, ಕಪಿಂಜಲ ಶಾಸ್ತ್ರಿಯ ಹೆಂಡತಿ ಭಾಗೀರಥಿ, ವೈದ್ಯ ಶೇಷಣ್ಣನ ಹೆಂಡತಿ ವೇದಾವತಿ ಮತ್ತೊಬ್ಬಳು ಪುರೋಹಿತ ವೆಂಕಣ್ಣನವರ ಹೆಂಡತಿ ಕೃಷ್ಣವೇಣಿ ಹೊಳೆಯ ದಂಡೆಯ ಮೇಲೆ ಬಟ್ಟೆ ಒಗೆಯುತ್ತಾ ಪರಸ್ಪರ ಮಾತನಾಡುತ್ತಿದ್ದಾರೆ. ಅವರ ಸಂಭಾಷಣೆಯಲ್ಲಿ ಇಲೂಷ, ಭವಾನಿ ಹಾಗೂ ಸಾವಿತ್ರಿಯರ ವಿಷಯವೇ ಮುಖ್ಯವಾದುದು. ಭಾಗೀರಥಿಯು, ತನ್ನ ಗಂಡ ಎಂತಹ ಹಟಸ್ವಭಾವದವನೆಂದೂ, ನಾಗರಹಾವಿನ ಮಾತ್ಸರ್ಯ ಅವರಲ್ಲಿದೆಯೆಂದು ಹೇಳುತ್ತಾಳೆ. ಆಗ ವೇದವತಿಯು, ಇಲೂಷನನ್ನಷ್ಟೇ ಅಲ್ಲ ಕೆಲವು ಗಂಡಸರು ಚಾಪಲ್ಯಕ್ಕೆ ಮಾಡಬಾರದ್ದನ್ನೆಲ್ಲಾ ಮಾಡಿ ದೈವಸಂಕಲ್ಪವೆಂದು ಹೇಳಿಕೊಳ್ಳುತ್ತಾರೆ. ಇವರ ಮಾತುಗಳಲ್ಲಿ ಸಾವಿತ್ರಿಯ ಮಗ ಕವಿ, ಭವಾನಿಯ ಮಗ ಕವಷ- ಇವರ ಅಧ್ಯಯನದ ಬಗೆಗೂ ಚರ್ಚಿಸುತ್ತಾರೆ.

ಕವಷನಿಗೆ ಉಪನಯನವಾಗದಿದ್ದರೂ, ಅವನ ಅಣ್ಣ ವೇದಾಧ್ಯಯನ ಮಾಡುತ್ತಿರುವಾಗ ಅದನ್ನೇ ಕೇಳಿ ಎಲ್ಲವನ್ನೂ ಕರಗತ ಮಾಡಿಕೊಂಡಿದ್ದಾನಂತೆ. ದಾಸರ ಮಕ್ಕಳಿಗೂ ವೇದಾಗಮ ಪಾಠ ಹೇಳಿಕೊಡುತ್ತಿದ್ದಾನೆಂದು ಮಾತಾಡಿಕೊಳ್ಳುತ್ತಾರೆ. ಅಲ್ಲದೆ ಸಾವಿತ್ರಿ ಭವಾನಿಯರು ಎಷ್ಟು ಅನ್ಯೋನ್ಯವಾಗಿದ್ದಾರೆ. ಅವರದು ನೆಮ್ಮದಿಯ ಸಂಸಾರವೆಂದು ಕೃಷ್ಣವೇಣಿ ತಿಳಿಸುತ್ತಾಳೆ. ಇವರ ಸಂಭಾಷಣೆಯಿಂದ ಈ ಬಗೆಯ ವರ್ಣಸಂಕರದಿಂದ ದೇಶ ವೀರಕ್ಷಾಮಕ್ಕೆ ತುತ್ತಾಗಿದೆ. ಮಹಾಸತ್ರಯಾಗ ಮಾಡಿಸಬೇಕೆಂದು ಕಪಿಂಜಲಶಾಸ್ತ್ರಿಗಳು ಮಹಾರಾಜರಿಗೆ ಸೂಚಿಸಿದ್ದಾರೆಂದೂ ತಿಳಿದುಬರುತ್ತದೆ. ಹೀಗೆ ಹೆಂಗಸರ ಸಂಭಾಷಣೆಗಳಲ್ಲಿ ಅಗ್ರಹಾರದ ವಿಷಯ, ದೇಶದ ವಿಷಯಗಳೆಲ್ಲವೂ ತಿಳಿದು ಬರುತ್ತವೆ. ಹೆಂಗಸರು ತಮ್ಮ ಸಂಭಾಷಣೆಯಲ್ಲಿ ತಮ್ಮ ಗಂಡಂದಿರ ಅವಗುಣಗಳನ್ನು ಎತ್ತಿ ತೋರಿಸುವಲ್ಲೂ ಹಿಂಜರಿಯುವುದಿಲ್ಲ. ಇದರಿಂದ ತಮ್ಮ ಮನೆತನದ ಪ್ರತಿಷ್ಠೆ ಕಡಮೆಯಾಗುತ್ತದೆಯೆಂಬ ಭಾವನೆಯೂ ಅವರಲ್ಲಿ ಇರುವುದಿಲ್ಲ.

ಎರಡನೆಯ ಅಂಕದ ಎರಡನೆಯ ದೃಶ್ಯದಲ್ಲಿ ಒಂದು ಪುಟ್ಟ ದುರ್ಘಟನೆ ನಡೆಯುತ್ತದೆ. ಸರಸ್ವತಿ ನದಿ ದಡದಲ್ಲಿ ಪಾಠಶಾಲೆಯ ವಿದ್ಯಾರ್ಥಿಗಳೆಲ್ಲರೂ ಸಮಿತ್ತು, ದರ್ಭೆ, ಹೂ, ಪತ್ರೆಗಳನ್ನು ತರಲು ಬಂದಿದ್ದಾರೆ. ಅವರಲ್ಲಿ ಇಲೂಷನ ಮಕ್ಕಳಾದ ಕವಿ, ಕವಷರೂ ಬಂದಿದ್ದಾರೆ. ಕವಿಯು ದರ್ಭೆಯನ್ನು ಕೊಯ್ಯುತ್ತಿರುವಾಗ, ಅವನ ಕೈಗೆ ಹಾವು ಕಚ್ಚುತ್ತದೆ. ಕವಷ ಹಾಗೂ ಸಿದ್ಧ (ಕೆಂಚಣ್ಣನ ಮಗ) ಬೇರೆಡೆಗೆ ಹೂಪತ್ರೆ ತರಲು ಹೋಗಿದ್ದಾರೆ. ಕವಿ ಹಾವು ಕಡಿದ ಕೂಡಲೇ ಗಟ್ಟಿಯಾಗಿ ಚೀರುತ್ತಾನೆ. ಅವನ ಜೊತೆಯಲ್ಲಿದ್ದ ಸ್ನೇಹಿತರು ಎತ್ತಿಕೊಂಡು ಹೋಗಿ ಅಗ್ರಹಾರದಲ್ಲಿ ಇಳಿಸುತ್ತಾರೆ. ವೈದ್ಯ ಶೇಷಣ್ಣ ನಾರು, ಬೇರು, ಮೂಲಿಕೆ ಸಿದ್ಧಪಡಿಸುತ್ತಿದ್ದಾರೆ. ಶಿವದಾಸಿ, ಸಾವಿತ್ರಿ ಭವಾನಿಯರು ಗೊಳೋ ಎಂದು ಅಳುತ್ತಿದ್ದಾರೆ. ಜನ ಜಾತ್ರೆಯಂತೆ ಸೇರಿದೆ. ಕವಷ ಎಲ್ಲಿಂದಲೋ ಓಡಿ ಬಂದು ಗಿಡಮೂಲಿಕೆಯಿಂದಲೇ ತನ್ನ ಅಣ್ಣನನ್ನು ಉಳಿಸುತ್ತಾನೆ. ಕವಷನು ಅಗ್ರಹಾರದ ಧನ್ವಂತರಿಯಾಗಿ ಬಿಟ್ಟಿದ್ದಾನೆಂದು ಎಲ್ಲರೂ ಹೊಗಳುತ್ತಾರೆ. ಕವಷ, ಕವಿಯರು ತಂದೆಗೆ ನಮಸ್ಕರಿಸುತ್ತಾರೆ. ಸಾವಿತ್ರಿ ಭವಾನಿಯರು ಇಬ್ಬರು ಮಕ್ಕಳನ್ನು ಅಪ್ಪಿಕೊಂಡು ಹರಸುತ್ತಾರೆ. ಈ ಪ್ರಸಂಗದಿಂದ ಕವಷನ ಹಿರಿಮೆ ಅಗ್ರಹಾರದಲ್ಲಿ ಬೆಳೆಯುತ್ತದೆ. ಕಪಿಂಜಲಶಾಸ್ತ್ರಿ ವೆಂಕಣ್ಣನವರ ಮುಖಗಳು ಕಪ್ಪಿಡುತ್ತವೆ.

ಮೂರನೆಯ ದೃಶ್ಯದಲ್ಲಿ ರಾಜಸಭೆ ನಡೆಯುತ್ತಲಿದೆ. ಅದರಲ್ಲಿ ಮಹರ್ಷಿಗಳು, ವಿದ್ವಾಂಸರು, ಪ್ರಜಾಪ್ರತಿನಿಧಿಗಳು, ಮಹಾಜನರು ಭಾಗವಹಿಸಿದ್ದಾರೆ. ಎಲ್ಲರೂ ಈ ವೀರ ಕ್ಷಾಮಕ್ಕೆ ಕಾರಣವೇನೆಂದೂ ಪರಿಹಾರ ಮಾಡುವುದು ರಾಜನ ಕರ್ತವ್ಯವೆಂದು ಹೇಳುತ್ತಾರೆ. ರಾಜಪುರೋಹಿತರಾದ ವಸಿಷ್ಠರು ಸೂಕ್ತಸಲಹೆಗಳನ್ನು ನೀಡುತ್ತಾರೆ. ದೇವತಾಪ್ರಕೋಪದಿಂದ ಮಳೆ-ಬೆಳೆ ಇಲ್ಲದೆ ಜನರು ಪರಿತಪಿಸುತ್ತಿದ್ದಾರೆ. ನಾವು, ಸುವೃಷ್ಟಿ ದೇವತೆಗಳಾದ, ಪರ್ಜನ್ಯ, ವರುಣ ಮುಂತಾದ ಜಲದೇವತೆಗಳ ಪ್ರೀತ್ಯರ್ಥವಾಗಿ ವೇದೋಕ್ತವಾದ ಒಂದು ಯಾಗವನ್ನು

೧೫ ದಿನಗಳವರೆಗೆ ನಡೆಸಬೇಕಾಗುತ್ತದೆ ಅದಕ್ಕೆ ಮಹಾಸತ್ರಯಾಗವೆಂದು ಕರೆಯಲಾಗುವುದೆಂದೂ ಇಲ್ಲಿ ಸೇರಿದ ಎಲ್ಲಾ ಋಷಿಗಳು ಈ ಯಾಗದ ಋತ್ವಿಜರಾಗಬೇಕೆಂದು ಕೇಳಿಕೊಳ್ಳುತ್ತಾರೆ. ಈ ಸಲಹೆಗೆ ರಾಜನ ಹಾಗೂ ಎಲ್ಲಾ ಋಷಿಗಳ ಒಪ್ಪಿಗೆ ದೊರೆಯುತ್ತದೆ. ಈ ಯಾಗಕ್ಕೆ ವಿಶ್ವಾಮಿತ್ರರು ಅಧ್ಯಕ್ಷರಾಗಿಯೂ ವಾಮದೇವರು ಅಧ್ವರ್ಯುಗಳಾಗಿಯೂ ವಸಿಷ್ಠರೂ ಆಚಾರ್ಯರಾಗಬೇಕೆಂಬ ನಿರ್ಣಯವೂ ಆ ಸಭೆಯಲ್ಲಿ ಅಂಗೀಕಾರವಾಗುತ್ತದೆ. ಇಲ್ಲಿ ಕಪಿಂಜಲಶಾಸ್ತ್ರಿಗಳದೇ ಹೆಚ್ಚಿನ ಕಾರಭಾರ. ಇಲೂಷನ ಎಲ್ಲ ಅಧಿಕಾರವನ್ನು ಕಿತ್ತುಕೊಳ್ಳುವುದು, ಕವಷನನ್ನು ದೇಶಭ್ರಷ್ಟನನ್ನಾಗಿ ಮಾಡುವುದೇ ಇವರ ಮೂಲಉದ್ದೇಶವಾಗಿದೆ.

ಇಲ್ಲಿ ನಾಲ್ಕನೆಯ ದೃಶ್ಯಗಳು ಎರಡು ಇವೆ. ಮೊದಲನೆಯ ನಾಲ್ಕನೆಯ ದೃಶ್ಯದಲ್ಲಿ ಸರಸ್ವತಿ ತೀರದ ವಿಶಾಲ ಬಯಲಿನಲ್ಲಿ ಯಜ್ಞಶಾಲೆ ಸಿದ್ಧವಾಗಿದೆ. ಯಾಗಮಂಟಪವು ತಳಿರು ತೋರಣಗಳಿಂದ ಅಲಂಕೃತವಾಗಿದೆ. ಎಲ್ಲರೂ ಅವರವರ ಪೀಠದಲ್ಲಿ ಅಲಂಕರಿಸುತ್ತಿದ್ದಾರೆ. ರಾಜಭಟರು ಇಲೂಷ, ಸಾವಿತ್ರಿ ಮತ್ತು ಕವಿಗಳನ್ನು ಆರ್ಯಪೀಠದ ವೇದಿಕೆಯಲ್ಲಿಯೂ ಭವಾನಿ, ಕವಷ ಶಿವದಾಸಿಯರನ್ನು ಬೇರೆ ವೇದಿಕೆಯಲ್ಲಿ ಕೂಡಿಸಲುದ್ಯುಕ್ತರಾಗಿದ್ದಾರೆ. ಈ ಭೇದವು ಇಲೂಷನಿಗೆ ಅವಮಾನವೆನ್ನಿಸಿ ವೇದಿಕೆಯಿಂದ ಹೊರಹೊರಡುತ್ತಾನೆ. ಮತ್ತೊಬ್ಬ ರಾಜಭಟನು ಕವಷನನ್ನು ದಾಸಿಪುತ್ರನೆಂದು ನೀರು ನೆರಳಿಲ್ಲದ ಸ್ಥಾನದಲ್ಲಿ ಕರೆದೊಯ್ಯುತ್ತಾನೆ. ಸರಸ್ವತಿ ನದಿಯೂ ಬತ್ತಿಹೋಗುತ್ತದೆ. ಋತ್ವಿಜರು ದೇವತಾ ಆಹ್ವಾನ ಮಂತ್ರಗಳ ಪಠಿಸಿದರೂ ಯಾವ ಮಂತ್ರಾಧಿದೇವತೆಯೂ ಯಾಗ ವೇದಿಕೆಗೆ ಬರುವುದಿಲ್ಲ. ಆಗ ಯಾಗಾಧ್ಯಕ್ಷರಾದ ವಿಶ್ವಾಮಿತ್ರರಿಗೆ ಆಶ್ಚರ್ಯವಾಗುತ್ತದೆ. ವೇದಿಕೆಗಳ ಪ್ರತ್ಯೇಕತೆ ಅವರಿಗೆ ಹಿಡಿಸುವುದಿಲ್ಲ. ಕವಷನನ್ನು ಸಭೆಯಿಂದ ಬಹುದೂರ ಕರೆದುಕೊಂಡು ಹೋದುದಕ್ಕಾಗಿ ಇಲೂಷಋಷಿ ಸಭಾತ್ಯಾಗ ಮಾಡಿದ್ದಾನೆ. ಒಬ್ಬ ಋಷಿಯನ್ನು ಅವಮಾನ ಮಾಡಿದ್ದರಿಂದ ಯಾವ ದೇವತೆಗಳು ವೇದಿಕೆಗೆ ಬರಲಿಲ್ಲವೆಂದು ಅರಿತು ವಿಶ್ವಾಮಿತ್ರರು ಸಭಾಧ್ಯಕ್ಷ ಸ್ಥಾನವನ್ನು ತ್ಯಜಿಸುತ್ತಾರೆ. ಅವರ ಹಿಂದೆ ವಸಿಷ್ಠ ವಾಮದೇವಾದಿ ಋತ್ವಿಜರೂ ಕಪಿಂಜಲಶಾಸ್ತ್ರಿಯನ್ನು ದುರುಗುಟ್ಟಿನೋಡಿ, ಕವಷನನ್ನು ಹುಡುಕಿ ತಮ್ಮ ಅಪರಾಧಕ್ಕೆ ಕ್ಷಮೆ ಕೇಳುವಾ ಎಂದು ಎಲ್ಲರೂ ಯಾಗಶಾಲೆಯಿಂದ ಹೊರಡುತ್ತಾರೆ. ರಾಜನು ತಾನು ಮಾಡಿದ ತಪ್ಪಿಗಾಗಿ ಕ್ಷಮೆಕೋರುತ್ತಾನೆ.

ಎರಡನೆಯ ನಾಲ್ಕನೆಯ ದೃಶ್ಯದಲ್ಲಿ ಒಂದು ಪುಟ್ಟ ಚಿತ್ತಾಕರ್ಷಕ ಸನ್ನಿವೇಶವಿದೆ. ಇಲೂಷ ಭವಾನಿಯರು ಅರಳೀ ಕಟ್ಟೆಗೆ ಬಂದಿದ್ದಾರೆ. ಊರಿನ ಜನ ಕಿಕ್ಕಿರಿದು ಸೇರಿದೆ. ಅಲ್ಲಿಗೆ ಜಾತವೇದ ಮುನಿಗಳೂ ಬಂದಿದ್ದಾರೆ. ಅವರು ಇಲೂಷ ಭವಾನಿಯವರಿಗೆ ಸಮಾಧಾನವನ್ನು ಹೇಳಿ, ಸತಿಪತಿಗಳೊಂದಾಗಿ ಮಹಾಮಂತ್ರವನ್ನು ಪಠಿಸಿದರೆ ಪರಶಿವನು ಪ್ರಸನ್ನನಾಗುತ್ತಾನೆ. ಅವನು ಪ್ರಸನ್ನನಾದರೆ ನಿಮ್ಮ ಇಷ್ಟಾರ್ಥಗಳು ನೆರವೇರುವುವೆಂದು ಹೇಳಿ ಹೋಗುತ್ತಾರೆ.

ರಾಜಭಟರು ಕವಷನನ್ನು ಕಾಡಿಗೆ ಅಟ್ಟಿಕೊಂಡು ಹೋದುದರಿಂದ ಸರಸ್ವತಿ ನದಿ ಬತ್ತಿ ಹೋಗುತ್ತದೆ. ಅವಳು ತನ್ನ ಪಾತ್ರವನ್ನೇ ಬದಲಿಸಲು ಸಿದ್ಧಳಾಗಿದ್ದಾಳೆ. ಆಗ ಅವಳ ಅಕ್ಕ ಯಮುನಾ ಅಲ್ಲಿಗೆ ಬರುತ್ತಾಳೆ. ಇಲ್ಲಿ ಇವರಿಬ್ಬರ ಸಂಭಾಷಣೆಯು ಸ್ವಾರಸ್ಯಕರವಾಗಿದೆ. ''ಎಲ್ಲರನ್ನೂ ಆರ್ಯರನ್ನಾಗಿ ಮಾಡಿರಿ'' ಎಂಬ ವೇದೋಕ್ತಿಯಿದ್ದರೂ ಈ ಆರ್ಯರ ನಡತೆಯನ್ನು ದೇವರೇ ಸರಿಪಡಿಸಬೇಕೆಂದೂ ಈಗ ಕಮಷನ ತಾಯಿ ತಂದೆಯರು ಪರಶಿವನನ್ನು ಕುರಿತು ಘೋರತಪವನ್ನಾಚರಿಸುತ್ತಿದ್ದಾರೆ. ಅವನ ತಪಸ್ಸು ಶಿವ ಪಾರ್ವತಿಯರನ್ನು ಎಚ್ಚರಗೊಳಿಸಿದೆ. ಕವಷನು ರಾಜಭಟರಿಂದ ಬಿಡಲ್ಪಟ್ಟು ಮೂರ್ಛಿತನಾಗಿ ಬಿದ್ದಿದ್ದಾನೆ. ನಾವು ಆ ಬಾಲಕನನ್ನು ಉಪಚರಿಸೋಣವೆಂದು ಇಬ್ಬರೂ ಅವನ ಹತ್ತಿರ ಹೋಗುತ್ತಾರೆ. ಆಗ ಶಿವನ ಜಟಾ ಜೂಟದಿಂದ ಗಂಗೆಯೂ ಇವರ ಹತ್ತಿರ ಬರುತ್ತಾಳೆ. ಮೂವರು ಕವಷನ ಹತ್ತಿರ ಹೋಗುತ್ತಾರೆ. ಇವರ ಅಮೃತಹಸ್ತದ ಸ್ಪರ್ಶದಿಂದ ಅವನಿಗೆ ಎಚ್ಚರವಾಗುತ್ತದೆ. ಅವನ ಮುಖದಿಂದ ''ಪ್ರದೇವತಾ ಬ್ರಹ್ಮಣೆ''- ಎಂಬ ಮೊದಲಾದ ಋಕ್ಕುಗಳು ಪುಂಖಾನು ಪುಂಖವಾಗಿ ಪ್ರವಾಹದಂತೆ ಹರಿದುಬರುತ್ತವೆ.

ಐದನೆಯ ದೃಶ್ಯದಲ್ಲಿ ದೇವಗಂಗೆಯು ಪ್ರವಾಹರೂಪದಲ್ಲಿ ಹರಿದು ಬರುತ್ತಾಳೆ. ಮಿಂಚು, ಗುಡುಗು, ಸಿಡಿಲುಗಳು ಗರ್ಜಿಸುತ್ತವೆ. ಮಳೆ ಧಾರಾಕಾರವಾಗಿ ಕವಷನ ಸುತ್ತ ಸುರಿದು ''ಪರಿಸಾರಕ'' ವೆನಿಸುತ್ತದೆ. ಮಹರ್ಷಿ ವಿಶ್ವಾಮಿತ್ರ, ವಾಮದೇವ ವಸಿಷ್ಠರಿಂದ ಕೂಡಿದ ರಾಜನು ಕವಷನಲ್ಲಿಗೆ ಬಂದು ಶರಣಾಗತರಾಗುತ್ತಾರೆ. ಅನಂತರ ಎಲ್ಲರೂ ಇಲೂಷ ಭವಾನಿಯರ ತಪಸ್ಸಿನ ತಾಣಕ್ಕೆ ಬರುತ್ತಾರೆ. ಅವರೆಲ್ಲರೂ ಕವಷನನ್ನು ಮಹರ್ಷಿ ಎಂದು ಘೋಷಿಸಿ ಗೌರವಿಸುತ್ತಾರೆ. ಮಾನವರಲ್ಲಿ ಜ್ಞಾನಿಯೇ ಶ್ರೇಷ್ಠ. ಜ್ಞಾನಿಯಾದವನು ಎಲ್ಲರನ್ನೂ ಜ್ಞಾನಿಗಳನ್ನಾಗಿ ಮಾಡಿದಾಗಲೇ ಅವನ ಜ್ಞಾನವು ಸಾರ್ಥಕವಾಗುತ್ತದೆ ಎಂಬ ಮಾತು ಇಲ್ಲಿ ತಿಳಿದು ಬರುತ್ತದೆ. ಆಗ ದೇವದುಂದುಭಿ ಮೊಳಗುತ್ತದೆ, ಪುಷ್ಪವೃಷ್ಟಿಯೂ ಆಗುತ್ತದೆ.

ಋಗ್ವೇದದಲ್ಲಿ ಬರುವ ಐದು ಸೂತ್ರಗಳ ಆಧಾರದಿಂದ ಈ ಕಿರುರೂಪಕವನ್ನು ಚಿತ್ತಾಕರ್ಷಕವಾಗಿ ಚಿತ್ರಿಸಲಾಗಿದೆ. ಇಲ್ಲಿ ಆರ್ಯ ದ್ರಾವಿಡರ ಸಂಘರ್ಷಣೆ ಹಾಗೂ ಅವರ ವರ್ಣಸಂಕರದಿಂದ ಜ್ಞಾನಜ್ಯೋತಿಯಾದ ಕರ್ವಷನ ಹುಟ್ಟು, ಅವನೇ ಪರ್ಜನ್ಯಸೂಕ್ತಗಳಿಗೆ ಕಾರಣೀಭೂತನಾಗಿದ್ದಾನೆಂದು ತಿಳಿದು ಬರುತ್ತದೆ. ಆರ್ಯರು ಇವನಿಗೆ ಕೊಟ್ಟ ಕಷ್ಟಗಳು, ಇವನ ತಾಯಿ ತಂದೆಯರ ನಿರ್ಮಲವಾದ ಮನಸ್ಸು, ಇವರಿಗೆ ದೈವಸಂಕಲ್ಪದಲ್ಲಿರುವ ನಂಬಿಕೆ ಇಲ್ಲಿ ಮನೋಜ್ಞವಾಗಿ ಚಿತ್ರಿತವಾಗಿದೆ. ಅಲ್ಲದೆ ಇಲೂಷನ ಹೆಂಡತಿಯ ಉದಾರತೆ, ಭವಾನಿಯ ಮುಗ್ಧಸ್ವಭಾವವೂ ಪರಿಣಾಮಕಾರಿಯಾಗಿ ಮೂಡಿಬಂದಿದೆ. ಇಲ್ಲಿ ಆಗಿನ ಕಾಲದ ಜನಜೀವನವೂ ಕಲಾತ್ಮಕವಾಗಿ ಚಿತ್ರಿತವಾಗಿದೆ. ಪ್ರೊ. ಆರಾಧ್ಯರು ಇಳಿವಯಸ್ಸಿನಲ್ಲಿಯೂ ಇಂತಹ ಸೃಜನಾತ್ಮಕ ನಾಟಕವನ್ನು ಸೃಷ್ಟಿಸಿ ತಮ್ಮ ಪ್ರತಿಭಾ ಪಾಂಡಿತ್ಯವನ್ನು ಇಲ್ಲಿ ಮೆರೆಸಿದ್ದಾರೆ.

ಈ ನಾಟಕವು ಗದ್ಯರೂಪದಲ್ಲಿ ಇದೆ. ಇಲ್ಲಿಯ ಸಂಭಾಷಣಾ ಕುಶಲತೆ ಚಿತ್ತಾಕರ್ಷಕವಾಗಿದೆ. ಹರಪ್ಪಾ ಮಹೇಂಜೋದಾರೋದಲ್ಲಿ ನಡೆದ ಸಾಮಾಜಿಕ ಹಾಗೂ ಸಾಂಸ್ಕೃತಿಕ ಚಿತ್ರವೊಂದು ಇಲ್ಲಿ ಒಡಮೂಡಿದೆ. ಆರ್ಯ ದ್ರಾವಿಡರ ಸಂಘರ್ಷಣೆಯಿಂದ ಹೊಸ ಸಂಸ್ಕೃತಿಯ ಉದ್ಭವವಾದುದು ಇಲ್ಲಿ ಕಾಣಬರುತ್ತದೆ.

# 'ಪರಮಹಂಸ ಶ್ರೀಪತಿಪಂಡಿತಾಚಾರ್ಯ'

**ಒಂದು ಪರಿಚಯ**

**ಡಾ|| ಆರ್. ಶೇಷ ಶಾಸ್ತ್ರಿ**

---

ಕರ್ನಾಟಕದಲ್ಲಿ ಹನ್ನೆರಡನೆಯ ಶತಮಾನದಲ್ಲಿ ನಡೆದ ವೀರಶೈವ ಧಾರ್ಮಿಕ, ಸಾಮಾಜಿಕ ಆಂದೋಲನವನ್ನು ಕುರಿತು, ಆ ಆಂದೋಲನದಲ್ಲಿ ಪ್ರಮುಖ ಪಾತ್ರವಹಿಸಿದವರನ್ನು ಕುರಿತು ಪ್ರತ್ಯೇಕ ಕಾದಂಬರಿಗಳು ಕನ್ನಡದಲ್ಲಿ ಸಾಕಷ್ಟು ಹೊರಬಂದಿವೆ. ಈ ತೆರನ ಒಂದು ಪ್ರಯತ್ನವನ್ನು ಶ್ರೀಮುದಿಗೊಂಡ ಶಿವಪ್ರಸಾದರು ತೆಲುಗುಭಾಷೆ ಯಲ್ಲಿಯೂ ಮಾಡಿದ್ದಾರೆ. ಆದರೆ ಬಸವಣ್ಣನವರಿಗಿಂತಲೂ ಪೂರ್ವದಲ್ಲಿಯೇ ವೈದಿಕ ಧರ್ಮದಲ್ಲಿನ ಅನೇಕ ವಿಚಾರಗಳನ್ನೆ ತಾತ್ವಿಕವಾಗಿ ವಿರೋಧಿಸಿ, ಅದರಲ್ಲಿಯ ಸ್ವೀಕಾರಾರ್ಹ ಭಾಗಗಳನ್ನು ಒಪ್ಪಿಕೊಂಡು ಹೊಸಮಾರ್ಗ, ಸಿದ್ಧಾಂತವತ್ತ ಹೆಜ್ಜೆಹಾಕಿದ ಶ್ರೀಪತಿ ಪಂಡಿತಾಚಾರ್ಯರನ್ನು ಕುರಿತಂತೆ ಕನ್ನಡ ಅಥವಾ ತೆಲುಗು ಈ ಎರಡೂ ಭಾಷೆಗಳಲ್ಲಿ ಇದುವರೆಗೆ ಯಾವ ಕೃತಿಯೂ ಬಂದಿಲ್ಲ. ಒಂದು ದೃಷ್ಟಿಯಿಂದ ಹೇಳುವುದಾದರೆ ಶ್ರೀಪತಿ ಪಂಡಿತಾಚಾರ್ಯರನ್ನು ಕುರಿತು ಹೆಚ್ಚಿನ ಲೇಖನಗಳೂ ಬಂದಿಲ್ಲ. ಈ ಒಂದು ಕೊರತೆಯನ್ನು ತುಂಬುವ ಸಲುವಾಗಿ ಶ್ರೀಯುತ ಎಂ. ಜಿ. ನಂಜುಂಡಾರಾಧ್ಯರು ಸ್ತುತ್ಯ ಪ್ರಯತ್ನವನ್ನು ಮಾಡಿದ್ದಾರೆ.

ಶ್ರೀಯುತ ಎಂ. ಜಿ. ನಂಜುಂಡಾರಾಧ್ಯರ ಈ ಕೃತಿ ಕಾದಂಬರಿಯಾಗಿ ಎಷ್ಟರ ಮಟ್ಟಿಗೆ ಯಶಸ್ವಿಯಾಗಿದೆ ಎಂಬುದನ್ನು ವಿವೇಚಿಸುವುದು ನನ್ನ ಉದ್ದೇಶವಲ್ಲ. ಈ ಕೃತಿ ಕಾದಂಬರಿಯಾಗಿ ಸಂಪೂರ್ಣವಾಗಿ ಸೋತಿದೆ ಎಂದು ನಾವು ಅಂಗೀಕರಿಸಿದರೂ ಶ್ರೀಯುತರ

ಮೂಲಉದ್ದೇಶವಾದ ಶ್ರೀಪತಿ ಪಂಡಿತಾರಾಧ್ಯರ ಸಮಗ್ರಜೀವನದರ್ಶನವನ್ನು ಮಾಡಿಸುವಲ್ಲಿ ಯಶಸ್ವಿಯಾಗಿದೆ ಎಂಬುದನ್ನು ಯಾರೇ ಆದರೂ ಒಪ್ಪಿಕೊಳ್ಳಬೇಕು. ಹೀಗಾಗಿ ಈ ಕೃತಿ ಸಾಹಿತ್ಯಾಭ್ಯಾಸಿಗಳಿಗಿಂತಲೂ ಸಾಂಸ್ಕೃತಿಕ ಅಧ್ಯಯನ ಮಾಡುವ ವಿದ್ಯಾರ್ಥಿಗಳಿಗೆ, ಆಂಧ್ರ ಪ್ರದೇಶವಲ್ಲಿ ಮೂಡಿ, ಬೆಳೆದ ವೀರಶೈವ ಆರಾಧ್ಯ ಸಂಪ್ರದಾಯದ ತಾತ್ವಿಕ ನೆಲೆಯನ್ನು ಅರ್ಥಮಾಡಿಕೊಳ್ಳುವುದಕ್ಕೆ ತುಂಬಾ ಸಹಾಯವಾಗುತ್ತದೆ.

ಶ್ರೀಪತಿ ಪಂಡಿತಾರಾಧ್ಯರು ಸಂಸ್ಕೃತದಲ್ಲಿ ಬರೆದಿರುವ ತಾತ್ವಿಕ ಗ್ರಂಥಗಳು ಉಪಲಬ್ಧವಿರುವುದಾದರೂ, ಅವರ ಜೀವನಕ್ಕೆ ಸಂಬಂಧಿಸಿದಂತೆ ದೊರೆಯುವ ವಿವರಗಳು ತೀರಾ ಅಲ್ಪ, ಪಾಲ್ಕುರಿಕೆ ಸೋಮನಾಥನೂ ಕೂಡ ಶ್ರೀಪತಿ ಪಂಡಿತರ ಬಗ್ಗೆ ಹೆಚ್ಚಿನ ವಿವರಗಳನ್ನು ತನ್ನ ಕೃತಿಗಳಲ್ಲಿ ನೀಡಿಲ್ಲ. ಪರಿಸ್ಥಿತಿ ಹೀಗಿರುವಾಗ ಶ್ರೀಪತಿ ಪಂಡಿತಾರಾಧ್ಯರನ್ನು ಕುರಿತು ಬರೆಯುವುದಕ್ಕೆ ತುಂಬಾ ಎದೆಗಾರಿಕೆಯೇ ಬೇಕಾಗುವುದು. ಶ್ರೀಪತಿ ಪಂಡಿತರು ಬರೆದ ಕೃತಿಗಳ ಮೂಲಕವೇ ಅವರ ಜೀವನ ದರ್ಶನವನ್ನು, ಜೀವನವನ್ನು ಗ್ರಹಿಸಬೇಕಾಗುವುದು. ಕೇವಲ ಅವರು ರಚಿಸಿದ ಕೃತಿಗಳಷ್ಟೆ ಅಲ್ಲ ಆ ಕೃತಿಗಳಲ್ಲಿ ಅವರು ಚರ್ಚಿಸಿರುವ ಇತರ ಅಂಶಗಳ ಆಮೂಲಾಗ್ರ ಪರಿಚಯವೂ ಅಗತ್ಯ. ಇವುಗಳನ್ನು ಕೇವಲ ಪ್ರತಿಭೆಯಿಂದ ಮಾತ್ರ ರೂಢಿಸಿಕೊಳ್ಳುವುದು ಸಾಧ್ಯವಿಲ್ಲ. ಪ್ರತಿಭೆಯ ಜೊತೆಗೆ ಅಪಾರವಾದ ಪಾಂಡಿತ್ಯವೂ ಅಗತ್ಯ. ಶ್ರೀಯುತ ಎಂ. ಜಿ. ನಂಜುಂಡಾರಾಧ್ಯರು ಬಹುದೊಡ್ಡ ಸಂಸ್ಕೃತ ವಿದ್ವಾಂಸರು. ಅನೇಕ ಶಾಸ್ತ್ರ, ಆಗಮ, ದರ್ಶನಗಳನ್ನು ಕರತಲಾಮಲಕ ಮಾಡಿಕೊಂಡವರು. ಇವುಗಳೆಲ್ಲಕ್ಕಿಂತಲೂ ಹೆಚ್ಚಾಗಿ ಅವುಗಳನ್ನು ಅನುಷ್ಠಾನದಲ್ಲಿ ತಂದುಕೊಂಡವರು. ಈ ಅಂಶವೇ ಅವರಿಗೆ ಈ ಕೃತಿಯನ್ನು ರಚಿಸುವಲ್ಲಿ ನೆರವಾಗಿದೆ. ಅನೇಕರಲ್ಲಿ ಪಾಂಡಿತ್ಯವಿರುತ್ತದೆ. ಆದರೆ ಅವುಗಳನ್ನು ಸಾಮಾನ್ಯರಿಗೆ ಅರ್ಥವಾಗುವಂತೆ ಹೇಳಬೇಕೆಂಬ ಕಳಕಳಿ ಇರುವುದಿಲ್ಲ; ಕಳಕಳಿ ಇದ್ದರೂ ಹೇಳಬಲ್ಲ ನೈಪುಣ್ಯವಿಲ್ಲದೇ ಹೋಗುತ್ತದೆ. ಈ ಕೃತಿಯಲ್ಲಿ ಈ ನೈಪುಣ್ಯತೆ ಉತ್ತಮ ಕಲಾಮಟ್ಟಿಗೆ ತಲುಪದೇ ಹೋಗಿದ್ದರೂ ಲೇಖಕರ ಮೂಲಉದ್ದೇಶವಾದ ಶ್ರೀಪತಿ ಪಂಡಿತರ ಜೀವನದರ್ಶನವನ್ನು ಮಾಡಿಸುವಲ್ಲಿ ಯಶಸ್ವಿಯಾಗಿದೆ. ಈ ತೆರನ ಪ್ರಯತ್ನಗಳನ್ನು ನಂಜುಂಡಾರಾಧ್ಯರಿಗಿಂತಲೂ ಮೊದಲು ಶ್ರೀ ದೇವುಡು ನರಸಿಂಹಶಾಸ್ತ್ರಿಯವರು 'ಮಹಾ ಬ್ರಾಹ್ಮಣ', 'ಮಹಾ ದರ್ಶನ' ಗಳಲ್ಲಿ ಮಾಡಿರುವುದನ್ನು ಗಮನಿಸಬಹುದಾಗಿದೆ.

ಆಂಧ್ರಪ್ರದೇಶದಲ್ಲಿ ವೀರಶೈವಧರ್ಮ ಎರಡು ಸಂಪ್ರದಾಯಗಳಲ್ಲಿ ವ್ಯಾಪ್ತಿ ಹೊಂದಿರುವುದನ್ನು ಗುರುತಿಸಬಹುದು. ಬಸವ ಪೂರ್ವಯುಗದಲ್ಲಿಯೇ ಪ್ರಾರಂಭವಾದ ವೈದಿಕ ಪಂಡಿತ ಇಲ್ಲವೇ ಆರಾಧ್ಯ ಸಂಪ್ರದಾಯ ಮೊದಲನೆಯದಾದರೆ, ಬಸವಣ್ಣನ ಜೀವನದಿಂದ ಪ್ರೇರಿತವಾಗಿ ಪ್ರಚುರವಾದ ಬಸವ ಇಲ್ಲವೇ ಜಂಗಮಸಂಪ್ರದಾಯ ಎರಡನೆಯದು. ಆರಾಧ್ಯ ಸಂಪ್ರದಾಯದ ಪ್ರವರ್ತಕರೆಂದು ಶ್ರೀಪತಿ ಪಂಡಿತಾರಾಧ್ಯ, ಶಿವಲೆಂಕ ಮಂಚಣ್ಣ ಮತ್ತು ಶ್ರೀಮಲ್ಲಿಕಾರ್ಜುನ ಪಂಡಿತಾರಾಧ್ಯರನ್ನು ಗುರುತಿಸುತ್ತಾರೆ. ಈ

ಮೂವರನ್ನು ಪಂಡಿತತ್ರಯರೆಂದು ಕರೆಯುತ್ತಾರೆ. ಈ ಮೂವರೂ ಸಂಸ್ಕೃತ ಭಾಷೆಯಲ್ಲಿ ಅಪಾರ ಪಾಂಡಿತ್ಯ ಹೊಂದಿದ್ದ ವೇದ ವೇದಾಂಗ ಪಾರಂಗತರು ಮತ್ತು ಸ್ವತಂತ್ರ ಆಲೋಚನಾ ಶಕ್ತಿಯುಳ್ಳ ದ್ರಷ್ಟಾರರು. ಈ ಮೂವರಲ್ಲಿ ಶ್ರೀಪತಿ ಪಂಡಿತಾರಾಧ್ಯರೇ ಮೊದಲಿಗರು. ಮಂಚಣ ಪಂಡಿತರು ಶ್ರೀಪತಿಪಂಡಿತರಿಗಿಂತಲೂ ಕಿರಿಯರಾಗಿದ್ದರೂ ಅವರ ಸಮಕಾಲೀನರೇ. ಮಲ್ಲಿಕಾರ್ಜುನ ಪಂಡಿತಾರಾಧ್ಯರು ನಂತರದ ಕಾಲದವರು. ಸೃಷ್ಟಿ ಸ್ಥಿತಿ ಲಯಕಾರರಾದ ಬ್ರಹ್ಮ ವಿಷ್ಣು ಮಹೇಶ್ವರರ ಆಧಿಕ್ಯತೆಯನ್ನು ಅಲ್ಲಗಳೆದು ಶಿವನೇ ಏಕೈಕ ದೈವವೆಂದೂ, ಅವನು ಈ ತ್ರಿಮೂರ್ತಿಗಳಿಗೂ ಎಟುಕದ ದಿವ್ಯಲಿಂಗ ಮೂರ್ತಿ ಸ್ವರೂಪವೆಂದು ಸಕಲವೇದಾಗಮ ಶಾಸ್ತ್ರೇತಿಹಾಸ ಪ್ರಮಾಣಗಳಿಂದಲೇ ನಿರೂಪಿಸಿದವರು ಈ ಪಂಡಿತ ತ್ರಯರು.

ಶ್ರೀಪತಿ ಪಂಡಿತಾರಾಧ್ಯರು ಬ್ರಹ್ಮವಾದಿಗಳನ್ನು ಜಯಿಸಿದರೆ ವಿಷ್ಣುವಾದಿಗಳನ್ನು ಶಿವಲೆಂಕ ಮಂಚಣ್ಣ ಪಂಡಿತರು ಜಯಿಸಿದರು. ನಂತರ ಬಂದ ಮಲ್ಲಿಕಾರ್ಜುನ ಪಂಡಿತಾರಾಧ್ಯರು ಶಿವನು ಕೇವಲ ಸಂಹಾರ ಕರ್ತನು ಎಂಬ ಪಾಕ್ಷಿಕ ಶೈವ ವಾದಿಗಳನ್ನು ವಾದದಲ್ಲಿ ಸೋಲಿಸಿ, ಶಿವಭಕ್ತಿಯನ್ನು ಎತ್ತಿಹಿಡಿದು ಆ ಭಕ್ತಿಯೇ ಸರ್ವೋತ್ಕೃಷ್ಟವೆಂಬುದಾಗಿ ಸಾರಿದರು.

ಮಲ್ಲಿಕಾರ್ಜುನ ಪಂಡಿತಾರಾಧ್ಯರ ವರೆಗೆ ಸ್ವತಂತ್ರವೈದಿಕಶೈವ ಪಂಥವಾಗಿ ಅಭಿವೃದ್ಧಿಹೊಂದಿದ ವೀರಶೈವ ಧರ್ಮ ಅಲ್ಲಿಂದ ಮುಂದೆ ಆಂಧ್ರದಲ್ಲಿ ಒಂದು ಹೊಸ ತಿರುವನ್ನು ಪಡೆಯಿತು. ಮಲ್ಲಿಕಾರ್ಜುನ ಪಂಡಿತಾರಾಧ್ಯರು ಬಸವಣ್ಣನವರ ಸಮಕಾಲೀನರು. ಬಸವಣ್ಣನವರ 'ಭಕ್ತಿ'ಯಿಂದ ಹೊಸ ಹೊಸ ಆಲೋಚನೆಗಳಿಂದ ಆಕರ್ಷಿತರಾದರು. ಆತನನ್ನು ಕಾಣಬೇಕೆಂಬ ಉತ್ಕಟಾಕಾಂಕ್ಷೆಯಿಂದ ಕಪ್ಪಡಿಸಂಗಮಕ್ಕೆ ಬಂದರು. ಆದರೆ ಆವೇಳೆಗಾಗಲೇ ಬಸವಣ್ಣ ಕೂಡಲಸಂಗಮನಲ್ಲಿ ಐಕ್ಯರಾಗಿದ್ದರು. ಕೊನೆಗೂ ಬಸವಣ್ಣನವರನ್ನು ನೋಡಲಿಲ್ಲವೆಂಬ ವೇದನೆ ಅವರಲ್ಲಿತ್ತು. ಮಲ್ಲಿಕಾರ್ಜುನ ಪಂಡಿತಾರಾಧ್ಯರಿಗೆ ಬಸವಣ್ಣನವರ 'ಧಾರ್ಮಿಕ. ಸಾಮಾಜಿಕ ಆಂದೋಲನದ ಬಗ್ಗೆ ಅಪಾರವಾದ ಒಲವು ಇತ್ತು. ಆದರೆ ಹಿಂದಿನಿಂದ ಅನುಸರಿಸುತ್ತಾಬಂದ ಬ್ರಾಹ್ಮಣ್ಯವನ್ನು ಬಿಡಲಾರದ, ಹೊಸಪಂಥವನ್ನು ಸಂಪೂರ್ಣವಾಗಿ ಒಪ್ಪಿಕೊಳ್ಳುವ ಮಾನಸಿಕ ಸ್ಥಿತಿಯಲ್ಲಿರಲಿಲ್ಲ. ಈ ಮಾತನ್ನು ತುಂಬು ಕಳಕಳಿಯಿಂದ ಅವರೇ ಹೇಳಿಕೊಂಡಿದ್ದಾರೆ. ಈ ಮಲ್ಲಿಕಾರ್ಜುನಪಂಡಿತರ ಶಿಷ್ಯನೂ, ಆರಾಧ್ಯ ಸಂಪ್ರದಾಯದಲ್ಲಿ ಬಂದ ಪಾಲ್ಕುರಿಕೆ ಸೋಮನಾಥನು ಮಲ್ಲಿಕಾರ್ಜುನ ಪಂಡಿತಾರಾಧ್ಯರಿಗಿಂತಲೂ ಮುಂದುವರಿದು ಬಸವಣ್ಣನವರನ್ನು ಸಂಪೂರ್ಣವಾಗಿ ಒಪ್ಪಿಕೊಂಡು ಅವನ್ನು ತನ್ನ ಕಾವ್ಯಗಳ ಮೂಲಕ ಸಾರಿದರೆ, ಆರಾಧ್ಯ ಸಂಪ್ರದಾಯದ ತಾತ್ತ್ವಿಕ ಸಿದ್ಧಾಂತಗಳನ್ನು ತನ್ನ ಸಂಸ್ಕೃತ ಕೃತಿಗಳ ಮೂಲಕ ಮಂಡಿಸಿದನು. ಈ ಹಿನ್ನೆಲೆಯಲ್ಲಿ ಯೋಚಿಸಿದಾಗ ಶ್ರೀಯುತ ಎಂ.ಜಿ. ನಂಜುಂಡಾರಾಧ್ಯರ ಈ ಕೃತಿ ಇದುವರೆಗೆ ಉಪಲಬ್ಧವಿಲ್ಲದ, ಆಂಧ್ರಪ್ರದೇಶದ ಪ್ರಾರಂಭ ಕಾಲದ ವೀರಶೈವಧರ್ಮದ ತಾತ್ತ್ವಿಕ ನೆಲೆಯನ್ನು ಎಷ್ಟು ಸಮರ್ಥವಾಗಿ, ಸಮಗ್ರವಾಗಿ ಪರಿಚಯಿಸುತ್ತದೆ ಎಂಬುದು ನಮ್ಮ ಗಮನಕ್ಕೆ ಬರುತ್ತದೆ.

ಶ್ರೀಪತಿ ಪಂಡಿತಾರಾಧ್ಯರು ಅನ್ಯದರ್ಶನಗಳನ್ನು ಖಂಡಿಸಿ ಶಿವಾಧಿಕ್ಯವನ್ನು ಎತ್ತಿಹಿಡಿದವರು. ಇಂತಹ ಪ್ರಸಂಗಗಳನ್ನು ನಿರೂಪಿಸುವಾಗ ಶ್ರೀ ನಂಜುಂಡಾರಾಧ್ಯರು ತೋರಿರುವ ಸಂಯಮ ಮೆಚ್ಚತಕ್ಕದ್ದು. ಜನಸಾಮಾನ್ಯರಿಂದ ಹಿಡಿದು ಪಂಡಿತರ ವರೆಗೆ 'ಧರ್ಮ'ದ ಬಗ್ಗೆ ಮೂಡಬಹುದಾದ ಹತ್ತು ಹಲವಾರು ಸಂಶಯಗಳನ್ನು ಎತ್ತಿ ಅವುಗಳಿಗೆ ಸಮಾಧಾನ ನೀಡುವುದರ ಮೂಲಕ ಪಂಡಿತರ ಜೀವನವನ್ನು, ಜೀವನ ದರ್ಶನವನ್ನು ನಮಗೆ ಮಾಡಿಸುತ್ತಾರೆ. ಪ್ರತಿಯೊಂದು ಸಿದ್ಧಾಂತದಲ್ಲಿನ ಒಳ್ಳೆಯ ಅಂಶಗಳನ್ನು ಗುರುತಿಸುತ್ತಾ, ಕಾಲಾನುಕ್ರಮದಲ್ಲಿ ಅವುಗಳಲ್ಲಿ ನುಸುಳಿಸಿದ ಜನವಿರೋಧಿ ಆಚಾರಗಳನ್ನು ವಿಶ್ಲೇಷಿಸುತ್ತಾ, ಹೊಸ ಪಂಥವನ್ನು ಶ್ರೀಪತಿ ಪಂಡಿತರು ಹೇಗೆ ಮಂಡಿಸಿವರು ಎಂಬುದನ್ನು ನಿರೂಪಿಸುತ್ತಾರೆ. ಈ ತೆರನ ವಿವರಗಳು ಕಾದಂಬರಿಗೆ 'ಭಾರ'ವೆನ್ನಿಸಿದರೂ ಶ್ರೀಪತಿ ಪಂಡಿತರನ್ನು ಅವರ ಸಿದ್ಧಾಂತವನ್ನು ಅರ್ಥಮಾಡಿಕೊಳ್ಳಬಯಸುವವರಿಗೆ ತುಂಬಾ ಉಪಯುಕ್ತವಾಗಿವೆ. ಶ್ರೀಪತಿ ಪಂಡಿತರು ನಿರೂಪಿಸಿರುವ ಸಿದ್ಧಾಂತಗಳನ್ನು ಕರತಲಾಮಲಕ ಮಾಡಿಕೊಂಡಿರುವ ಶ್ರೀಯುತರು ಅದರಲ್ಲಿ ನಿರೂಪಿತವಾದ ಗಹನವಾದ ವಿಚಾರಗಳನ್ನು ತುಂಬಾ ಸರಳವಾಗಿ ಮನಮುಟ್ಟುವಂತೆ ವಿವರಿಸಿದ್ದಾರೆ. ಈ ಕೃತಿಯನ್ನು ಕುರಿತು ವಿದ್ವಾನ್ ವೈ. ಎಂ. ಉಮಾಪತಿಶರ್ಮರು ಹೇಳಿರುವ "ಭಾರತೀಯ ಸಂಸ್ಕೃತಿಯ ಒಂದು ಪುಟ್ಟ ವಿಶ್ವಕೋಶ ಎಂದು ಹೇಳಿದರೆ ಅತಿಶಯೋಕ್ತಿಯಲ್ಲ" ಎಂಬ ಮಾತುಗಳ ಅಂಗೀಕಾರಾರ್ಹವಾದವು.

ಒಟ್ಟಿನ ಮೇಲೆ ಹೇಳುವುದಾದರೆ ಈ ಗ್ರಂಥವನ್ನು ಕಾದಂಬರಿ ಎಂದು ಕರೆಯುವುದಕ್ಕಿತಲೂ ಶ್ರೀಪತಿ ಪಂಡಿತಾಚಾರ್ಯರ ಜೀವನ ಚರಿತ್ರೆ ಎಂದು ಕರೆಯುವುದು ಹೆಚ್ಚು ಸೂಕ್ತ. ಆರಾಧ್ಯ ಸಂಪ್ರದಾಯದ ಸಿದ್ಧಾಂತಗಳನ್ನು ಕುರಿತು ಕನ್ನಡದಲ್ಲಿ ಬಂದಿರುವುದು ತೀರಾ ಕಡಿಮೆ. ಆವೊಂದು ಕೊರತೆಯನ್ನು ಶ್ರೀ ಎಂ. ಜಿ. ನಂಜುಂಡಾರಾಧ್ಯರ ಈ ಪುಸ್ತಕ ತುಂಬಿವೆ. ದಕ್ಷಿಣ ಭಾರತದಲ್ಲಿ ವೀರಶೈವ ಧರ್ಮದ ಬೆಳವಣಿಗೆಯನ್ನು ಕುರಿತು ಅಧ್ಯಯನ ಮಾಡುವ ಪ್ರತಿಯೊಬ್ಬರೂ ಅಗತ್ಯವಾಗಿ ಓದಲೇಬೇಕಾದ ಪುಸ್ತಕ.

■

# ಶ್ರೀ ಜಯಚಾಮರಾಜ ಒಡೆಯರ್‌ರವರ ಸಂಗೀತ ನೈಪುಣ್ಯ

ವಿದ್ವಾನ್ ಎಂ. ಶಿವಕುಮಾರಸ್ವಾಮಿ

---

ಲಲಿತ ಕಲೆಗಳ ತೌರೂರು ಮೈಸೂರು. ಆದರಲ್ಲಿಯೂ ಮೈಸೂರು ಎಂದು ಹೇಳಿದ ಕೂಡಲೆ ಮೊದಲು ನೆನಪಿಗೆ ಬರುವುದು ಅಲ್ಲಿನ ಮಹಾರಾಜರು ಅವರುಗಳಿಂದ ಪೋಷಿಲ್ಪಟ್ಟ ಸಂಗೀತ. ಕರ್ನಾಟಕದ ಇತಿಹಾಸದ ಸುವರ್ಣಪುಟಗಳಲ್ಲಿ ಉಲ್ಲೇಖಿಸಲು ಅರ್ಹರಾದವರೆಂದರೆ, ವಿಶ್ವವಿಖ್ಯಾತರಾಗಿ ಆಳಿ ಬಾಳಿದ ಮೈಸೂರು ದೊರೆಗಳು. ನಾಡಿನ ಪ್ರಭುಗಳೆನಿಸಿ ನಮ್ಮನ್ನಾಳಿದ ಯದುವಂಶದ ಅರಸರಲ್ಲಿ-ಅನೇಕ ರಾಜರುಗಳಲ್ಲಿ ಸಂಗೀತದ, ಮುಖ್ಯವಾಗಿ ಶಾಸ್ತ್ರೀಯ ಸಂಗೀತದಲ್ಲಿ ಕೇವಲ ಅಭಿರುಚಿ ಅಥವಾ ಅಭಿಮಾನವನ್ನು ಮಾತ್ರ ಹೊಂದಿದ್ದವರಾಗಿರದೆ ಸ್ವಯಂಪಾಂಡಿತ್ಯ ಪಡೆದಿದ್ದ ರಾಜರುಗಳೂ ಇದ್ದರೆಂಬುದು ಸರ್ವವಿದಿತ! ಚಿಕ್ಕದೇವರಾಜ ಒಡೆಯರ್ ಅವರು 'ಗೀತಗೋವಿಂದದ' ಕರ್ತೃವಾಗಿದ್ದರೆಂಬುದು ಇತಿಹಾಸದಿಂದ ತಿಳಿದುಬರುತ್ತದೆ. ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರು ಕವಿಗಳಿಗೆ, ಕಲಾವಿದರಿಗೆ ಸಂಗೀತಗಾರರಿಗೆ ಕಾಮಧೇನುವಾಗಿದ್ದರೆಂದೂ ತಿಳಿದು ಬರುತ್ತದೆ. ಜಯಚಾಮರಾಜ ಒಡೆಯರ್ ಅವರು ಸ್ವಯಂ ಸಂಗೀತಗಾರರಾಗಿ, ಸ್ವತಂತ್ರ ಕೃತಿರಚನಾಕಾರರಾಗಿ, ಸಾಹಿತ್ಯ ಸಂಸ್ಕೃತಿಗಳ ಪೋಷಕರಾಗಿ ವಿದ್ವಜ್ಜನಗಳ ಆರಾಧ್ಯ ಮೂರ್ತಿಯಾಗಿದ್ದರೆಂದೂ ತಿಳಿದುಬರುತ್ತದೆ.

ಮೈಸೂರು ಸಂಸ್ಥಾನದ ಕೊನೆಯ ರಾಜರಾಗಿದ್ದ ಶ್ರೀ ಜಯಚಾಮರಾಜ ಒಡೆಯರ್ (೧೮.೭.೧೯೧೯ ರಿಂದ ೨೩.೯.೧೯೭೪) ಅವರು ಸಾಹಿತ್ಯ ಸಂಗೀತಗಳಿಗೆ ಆಶ್ರಯದಾತರಾಗಿದ್ದರಲ್ಲದೆ ಸ್ವಯಂ ಶ್ರೇಷ್ಠವಿದ್ವಾಂಸರೂ ಆಗಿದ್ದರು. ಕರ್ನಾಟಕ ರತ್ನಸಿಂಹಾಸನಾಧೀಶ್ವರರಾಗಿ

ಕನ್ನಡ ನಾಡಿನ ಇಪ್ಪತ್ತೈದನೆಯ ಹಾಗೂ ಯದುವಂಶದ ಕೊನೆಯ ದೊರೆ ಶ್ರೀ ಜಯಚಾಮರಾಜಒಡೆಯರ್ ಅವರು ದೇಶ, ಕಾಲ ಮತ್ತು ಪರಿಸ್ಥಿತಿಗಳಿಗೆ ಹೊಂದಿಕೊಳ್ಳುವ ಧೀಮಂತಿಕೆಯ ವ್ಯಕ್ತಿತ್ವವನ್ನು ಪಡೆದಿದ್ದವರಲ್ಲಿ, ಭಾರತದ ಆಧುನಿಕ ರಾಜವಂಶೀಯರಲ್ಲಿ ಜಯಚಾಮರಾಜ ಒಡೆಯರ್ ಅವರು ಸರ್ವಾದರಣೀಯರು. ಇವರ ದೈವಭಕ್ತಿ ಮತ್ತು ಔದಾರ್ಯಗಳ ಧವಳಕೀರ್ತಿ ನಾಡಿನೆಲ್ಲೆಡೆ ಪರಿಚಯವಾಗಿತ್ತು. ಭಾರತೀಯ ಸಂಸ್ಕೃತಿಯ ಬಗ್ಗೆ ಅಪಾರವಾದ ಒಲವನ್ನು ಅತೀವವಾದ ಆಸಕ್ತಿಯನ್ನು ಹೊಂದಿದ್ದ ಅವರ ವ್ಯಕ್ತಿತ್ವ ಉಲ್ಲೇಖನೀಯ.

ಯಾವುದೇ ಕಾಲವಾಗಿರಲಿ, ಯಾವುದೇ ದೇಶವಿರಲಿ, ಆಯಾ ಕಾಲದಲ್ಲಿ ಆಳಿದ ಅಲ್ಲಲ್ಲಿನ ಪ್ರಭುಗಳ ಆಳ್ವಿಕೆಯಿಂದಾಗಿಯೇ ಆಯಾ ಕಾಲದ ಗೊತ್ತುಗುರಿಗಳ ಬಗ್ಗೆ, ಪ್ರಗತಿ - ಪರಿಚಯಗಳ ಬಗ್ಗೆ, ನಿಖರವಾದ ಮಾಹಿತಿಯನ್ನು ಸಂಗ್ರಹಿಸಬಹುದಾಗಿದೆ ಎನ್ನುವುದಂತೂ ಸತ್ಯಸ್ಯಸತ್ಯ. ಬದಲಾದ ಕಾಲಮಾನಕ್ಕನುಗುಣವಾಗಿ ರಾಜಪದವಿಯನ್ನು ಬಿಟ್ಟಿದ್ದರೂ ಕೂಡ ಇಂದೂ ಶ್ರೀಸಾಮಾನ್ಯನ ಮನದಲ್ಲಿ ಅವರು ಮಹಾರಾಜರೆಂದೇ ಗುರುತಿಸಲ್ಪಡುತ್ತಿರುವುದು ನಾಡಿನ ಜನಕ್ಕೆ ಅವರ ಬಗ್ಗೆ ಇಂದೂ ಇರುವ ಅಪಾರ ಗೌರವವೇ ಸಾಕ್ಷಿಯಾಗಿದೆ. ಅಂದಮೇಲೆ 'ಯೋಗಿನಾಂ ಚರಿತುಂ ಶಕ್ಯಂ ಸಮ್ಯಗ್ರಾಜ್ಯಾದಿ ಲೌಕಿಕಮ್' ಎಂಬ ಉಕ್ತಿಗೆ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಅವರು ನಿದರ್ಶನವೆನಿಸಿದ್ದಾರೆ. ಸಂಗೀತ ಸಂರಕ್ಷಣೆಗೆ ಅವರು ನೀಡಿದ ಕೊಡುಗೆ ಅಪಾರ. ಸಂಗೀತ ಪ್ರಪಂಚಕ್ಕೆ ಕೀರ್ತಿ ತಂದ ಕೃತಿಗಳಲ್ಲಿ ಶ್ರೀ ಒಡೆಯರ್ ಅವರ ಕೃತಿಗಳು ಇಂದೂ ಅಗ್ರಸ್ಥಾನದಲ್ಲಿವೆ. ಸಂಗೀತಕ್ಕೆ ಸಂಬಂಧಿಸಿದ ಅದರ ಹುಟ್ಟು, ಬೆಳವಣಿಗೆ ಇತ್ಯಾದಿಗಳ ಅರಿವಿಗಾಗಿ ಹಲವು ಹತ್ತು ಗ್ರಂಥಗಳ ಪರಿಶ್ರಮ ಅಧ್ಯಯನಗಳ ಮೂಲಕವೇ ಸಂಗೀತ ಕೃತಿರಚನೆಗೆ ತೊಡಗಲು ಪ್ರೇರಣೆಯಾಗಿರುವುದು ಉಲ್ಲೇಖನೀಯ ವಿಷಯವೇ ಸರಿ. ಸಂಗೀತ ಸಾಧಕರಿಗೆ, ಅದರ ರಕ್ಷಣೆ ಪೋಷಣೆಗೆ ಒಡೆಯರ್‌ರವರ ಕೊಡುಗೆ ಉದಾರ, ಅಪಾರ. ರಾಜಮನೆತನದ ಅಧ್ಯಾತ್ಮ ಜೀವಿಯಾಗಿ, ಭಾರತೀಯ ಸಂಸ್ಕೃತಿ ಸಮೃದ್ಧಿಗೆ ನೆರವಾಗಿ ವಿದ್ವತ್ತಿನ ಸಾಕಾರ ಸಂಗಮವಾಗಿ ಸಂಗೀತದ ಪ್ರಜ್ಞಾವಂತ ಪರಿಣತಿ ಪಡೆದು ಉನ್ನತ ಪರಂಪರೆಯನ್ನು ಗೌರವಿಸುವಲ್ಲಿ ಉದಾತ್ತತೆಯಿಂದ ನೆರವಾಗಿ ಪ್ರಜಾಪ್ರಭುತ್ವದ ಪರಿಸ್ಥಿತಿಗನುಗುಣವಾದ ರೀತಿಯಲ್ಲಿ ಹೊಂದಿಕೊಂಡವರಾಗಿ ಉತ್ತಮ ಮೌಲ್ಯಗಳನ್ನು ಎತ್ತಿಹಿಡಿಯುವುದರಲ್ಲಿ ಸದಾ ಕಾರ್ಯ ತತ್ಪರರಾಗಿದ್ದವರು ಜಯಚಾಮರಾಜ ಒಡೆಯರ್‌ರವರು.

ಶ್ರೀ ಜಯಚಾಮರಾಜೇಂದ್ರ ಗ್ರಂಥಮಾಲೆಯಲ್ಲಿ ಸಂಪೂರ್ಣ ಋಗ್ವೇದ ಪುರಾಣಗಳು ಹಾಗೂ ಕೆಲವು ಶಾಸ್ತ್ರಗ್ರಂಥಗಳು ಕನ್ನಡಾನುವಾದದೊಡನೆ ಪ್ರಕಟವಾಗಿ ಕನ್ನಡದ ಶ್ರೀಮಂತಿಕೆಯನ್ನು ಹೆಚ್ಚಿಸಿದುದು ಅವರ ಸಾಹಿತ್ಯಾಸಕ್ತಿಗೆ ಕುರುಹಾಗಿದ್ದರೆ - ವಾಸುದೇವಾಚಾರ್ಯರೇ ಮುಂತಾದ ಘನವಿದ್ವಾಂಸರು ಮತ್ತು ವಾಗ್ಗೇಯಕಾರರು ಅವರ ಆಶ್ರಯ ಪಡೆದು ಕೀರ್ತಿಶಾಲಿಗಳಾದದ್ದು ಅವರ ಸಂಗೀತ ಪ್ರೇಮಕ್ಕೆ ಸಾಕ್ಷಿಯಾಗಿದೆ.

ಭಾರತೀಯ ಸಾಹಿತ್ಯ ಸಂಸ್ಕೃತಿಗಳಲ್ಲಿ ಅವರಿಗಿದ್ದ ಪಾಂಡಿತ್ಯವನ್ನು ಅವರೇ ರಚಿಸಿರುವ, ಮತ ಮತ್ತು ಮಾನವ- ಮಾರ್ಗ ಮತ್ತು ಧ್ಯೇಯ - ಗೀತಾ ಮತ್ತು ಭಾರತ ಜೀವನ - ಆತ್ಮ ಮತ್ತು ಬ್ರಹ್ಮ-ದತ್ತಾತ್ರೇಯ - ಭಾರತೀಯ ಸೌಂದರ್ಯದ ಹಲವು ಮುಖಗಳು ಮುಂತಾದ ಗ್ರಂಥಗಳು ಪ್ರಕಟಗೊಳಿಸುತ್ತವೆ.

ಸಂಗೀತದಲ್ಲಿ ಶ್ರೀ ಒಡೆಯರ್‌ರವರಿಗಿದ್ದ ಆಸಕ್ತಿ, ಮೊದಲಿಗೆ ಅವರ ಒಲವು ಪಾಶ್ಚಾತ್ಯ ಸಂಗೀತವೇ ಆಗಿತ್ತು. ಹೆಚ್ಚಿನ ಪಾಂಡಿತ್ಯ ಪಡೆದಿದ್ದ ಒಡೆಯರ್ ಅವರು, 'ಪಿಯಾನೋ' ವಾದ್ಯವನ್ನು ನುಡಿಸುವುದರಲ್ಲಿ ಅಪ್ರತಿಮ ನೈಪುಣ್ಯವನ್ನು ಗಳಿಸಿದ್ದರು. 'ಲಂಡನ್ ಗಿಲ್ಡ್‌ಹಾಲ್ ಆಫ್ ಮ್ಯೂಸಿಕ್ ಸಂಸ್ಥೆಯಲ್ಲಿ ಅವರಿಗೆ ವಿಶೇಷ ಯೋಗ್ಯತಾ ಗೌರವ ಪತ್ರವನ್ನು ನೀಡಿ ಗೌರವಿಸಿತ್ತು. ಲಂಡನ್ನಿನ ಟ್ರಿನಿಟಿ ಕಾಲೇಜ್ ಆಫ್ ಮ್ಯೂಸಿಕ್‌ನ ಗೌರವ ಸದಸ್ಯರಾಗಿದ್ದವಲ್ಲದೆ ಪಾಶ್ಚಾತ್ಯ ಸಂಗೀತದ ಪರೀಕ್ಷೆಗಳಲ್ಲಿ ಪರೀಕ್ಷಕರಾಗಿ ಭಾಗವಹಿಸುತ್ತಿದ್ದರು. ಸಂಗೀತ ಶಾಸ್ತ್ರ ರತ್ನ ಶ್ರೀ ಕೆ. ವಾಸುದೇವಾಚಾರ್ಯರ ಮಾರ್ಗದರ್ಶನದಲ್ಲಿ ಕರ್ನಾಟಕ ಸಂಗೀತದ ರೂಪು - ರೇಷೆಗಳನ್ನು ಖಚಿತವಾಗಿ ಅರಿತು ಸಂಗೀತಶಾಸ್ತ್ರದಲ್ಲಿ 'ತಲಸ್ಪರ್ಶಿ' ಪಾಂಡಿತ್ಯವನ್ನು ಪಡೆದಿದ್ದರು. ಕೇವಲ ರಸಿಕರಾಗಿ ಅವರು ತೃಪ್ತಿಪಟ್ಟುಕೊಳ್ಳಲಿಲ್ಲ. ಕರ್ನಾಟಕ ಶಾಸ್ತ್ರೀಯ ಸಂಗೀತಕ್ಕೆ ಶಾಶ್ವತವಾದ ಕೊಡುಗೆ ನೀಡಬೇಕೆಂಬ ಹಂಬಲ ಅವರದಾಗಿತ್ತು. ಪ್ರಾತಃಸ್ಮರಣೀಯರಾದ ಪುರಂದರದಾಸರು, ಕನಕದಾಸರು, ತ್ಯಾಗರಾಜರು ಮತ್ತು ಸ್ವಾಮಿ ದೀಕ್ಷಿತರು, ಶ್ಯಾಮಾಶಾಸ್ತ್ರಿಗಳು, ಸ್ವಾತಿ ತಿರುನಾಳ ಮಹಾರಾಜರು ಇವರುಗಳೆಲ್ಲ ಹೇಗೆ ತಮ್ಮ ದಿವ್ಯವಾದ ಭವ್ಯವಾದ ಕೃತಿಗಳಿಂದ ಅಮರರಾದರೋ ಹಾಗೆ ತಾವೂ ಸಂಗೀತ ಸರಸ್ವತಿಯ ಕೈಂಕರ್ಯದಿಂದ ಒಂದು ವಿಶಿಷ್ಟಸ್ಥಾನವನ್ನು ಪಡೆಯಬೇಕೆಂಬ ಅದಮ್ಯ ಆಕಾಂಕ್ಷೆ ಶ್ರೀ ಜಯಚಾಮರಾಜ ಒಡೆಯರ್ ಅವರ ಹೃದಯದಲ್ಲಿತ್ತೆಂದು ತೋರುತ್ತದೆ. ಇದಕ್ಕಾಗಿ ಅವರು ಅಭ್ಯಾಸ ತಪಸ್ವಿಗಳಾಗಿ ಒಂದೊಂದು ರಾಗವನ್ನು ಆಳವಾಗಿ ಅಧ್ಯಯನ ಮಾಡಿ ಅದರ ಸಾರಸರ್ವಸ್ವವನ್ನೂ ಅದರದೇ ಆದ ನಾಡಿಮಿಡಿತವನ್ನು ಅರಿತುಕೊಂಡಿದ್ದರಾದ್ದರಿಂದ ಈ ಅಧ್ಯಯನ ಅವರ ಮುಂದಿನ ಕೃತಿ ರಚನೆಗೆ ಬುನಾದಿಯಾಯಿತು.

ಶ್ರೀ ಒಡೆಯರ್ ಅವರಿಗೆ ಕನ್ನಡ, ಇಂಗ್ಲಿಷ್, ಹಾಗೂ ಸಂಸ್ಕೃತಗಳಲ್ಲಿ ಸಮಾನ ಪ್ರಭುತ್ವವಿದ್ದರೂ ಸಂಗೀತ ಕೃತಿರಚನೆಗೆ ಮಾಧ್ಯಮವಾಗಿ ಅವರು ಆರಿಸಿಕೊಂಡಿದ್ದು ದೇವಭಾಷೆಯೆನಿಸಿದ ಸಂಸ್ಕೃತವನ್ನು. ವಿಶಿಷ್ಟರಾಗಗಳ ಜೀವಸ್ವರಗಳನ್ನು ಪ್ರಕೃತಿ ಸುಂದರವಾದ ಭಾವೋನ್ಮೇಷದೊಡನೆ ಹೊಮ್ಮಿಸಲು ದೇವಭಾಷೆಯೇ ಉಚಿತವೆಂದು ಆ ರಾಜರ್ಷಿಗಳು ಭಾವಿಸಿರಬೇಕು. ಒಡೆಯರ್ ಅವರ ಕೃತಿಗಳಲ್ಲಿ ಎದ್ದು ತೋರುವ ಮುಖ್ಯಭಾವವೆಂದರೆ ದೈವಭಕ್ತಿ. ಅವರ ಅಪರಿಮಿತ ದೈವಭಕ್ತಿ, ಅಪಾರವಾದ ಗುರುಭಕ್ತಿ, ರಾಜರೆನಿಸಿಯೂ ರಾಗ ಮೋಹಗಳಲ್ಲೇ ಆಸಕ್ತಿವಹಿಸದೆ, ವಿದೇಶಗಳಲ್ಲೆಲ್ಲಾ ಸಂಚರಿಸಿ ಬಂದಿದ್ದರೂ ತಮ್ಮ ಸಂಸ್ಕೃತಿಯ ಸಾಗರವನ್ನು ಬಿಡದೆ ರಾಜರ್ಷಿ ಎನಿಸಿದ್ದರು. ಅರಸರ ಕುಲದೇವತೆ 'ಚಾಮುಂಡಾದೇವಿ'

ಅವರ ಆರಾಧ್ಯ ದೈವ. ಅವರ ಕೃತಿಗಳಲ್ಲಿ ಹೆಚ್ಚಿನವು ಚಾಮುಂಡಾದೇವಿಯ (ಅಥವಾ ಅವಳ ಮೂಲರೂಪವಾದ ಅಂಬಿಕಾ) ವರ್ಣನೆಗೆ ಮೀಸಲಾಗಿವೆ. ಗಣಪತಿ, ಸರಸ್ವತಿ, ವಿಷ್ಣು, ಲಕ್ಷ್ಮಿ, ಶಂಕರ - ಈ ದೇವತೆಗಳನ್ನು ಕುರಿತು ಇತರ ಕೃತಿಗಳು ರಚಿತವಾಗಿವೆ. ಒಟ್ಟು ಈಗ ಉಪಲಬ್ದವಾಗಿರುವ ಕೃತಿಗಳ ಸಂಖ್ಯೆ ತೊಂಬತ್ತನಾಲ್ಕು. ಇಲ್ಲಿ ನಾವು ಕಾಣುವ ವಿಶಿಷ್ಟ್ಯವೆಂದರೆ - ತೊಂಬತ್ನಾಲ್ಕು ಕೃತಿಗಳು ತೊಂಬತ್ನಾಲ್ಕು ರಾಗಗಳಲ್ಲಿವೆ. ಎಂದರೆ ಒಮ್ಮೆ ಬಳಸಿದ ರಾಗಗಳನ್ನು ಅವರು ಮತ್ತೆ ಬಳಸಿಲ್ಲ. ಹೀಗೆ ಪ್ರತಿಯೊಂದು ಕೃತಿಯನ್ನು ಬೇರೆ ಬೇರೆ ರಾಗಗಳಲ್ಲಿಯೇ ರಚಿಸಿದ ಪ್ರತಿಭಾವಂತರು ಮತ್ತೊಬ್ಬರಿಲ್ಲವೆಂದು ಹೇಳಿದರೆ ತಪ್ಪಾಗಲಾರದು. ಈ ರಾಗಗಳಲ್ಲಿ 'ಜಯಸಂವರ್ಧಿನೀ'ಎಂಬ ರಾಗ ಶ್ರೀಒಡೆಯರ್ ರವರ ಪ್ರತಿಭಾಲತೆಯಲ್ಲಿ ಹುಟ್ಟಿದ ಅನರ್ಘ್ಯ ಕುಸುಮ ಎಂದು ಸಂಗೀತಶಾಸ್ತ್ರ ನಿಷ್ಣಾತರ ಅಭಿಪ್ರಾಯ.

ಶಿಲ್ಪಸಿದ್ಧಾಂತಿ ಶ್ರೀನಾಗಲಿಂಗಸ್ವಾಮಿಗಳ ಪರಂಪರೆಯಲ್ಲಿ ವಿಖ್ಯಾತರಾದ ಶ್ರೀಸಿದ್ಧಲಿಂಗ ಸ್ವಾಮಿಗಳು ವೇದಾಗಮಾದಿಗಳಲ್ಲಿ ವಿದ್ವಾಂಸರಾಗಿದ್ದುದಷ್ಟೇ ಅಲ್ಲ 'ಶ್ರೀವಿದ್ಯೆ'ಯಲ್ಲೂ ಪರಿಣಿತ ರಾಗಿದ್ದರೆಂದು ಹಿಂದಿನ ತಲೆಮಾರಿನ ಹಿರಿಯರು ಹೇಳುತ್ತಾರೆ. ಶ್ರೀ ಒಡೆಯರ್ ಅವರು ಶ್ರೀ ಸಿದ್ಧಲಿಂಗಸ್ವಾಮಿಗಳ ಅನನ್ಯ ಭಕ್ತರಾಗಿದ್ದುದಲ್ಲದೆ ತಂತ್ರ ಶಾಸ್ತ್ರದಲ್ಲಿ ದೀಕ್ಷೆಯನ್ನು ಪಡೆದು ಶ್ರೀವಿದ್ಯೆಯ ಪರಮ ರಹಸ್ಯಗಳನ್ನು ಅರಿತಿದ್ದರಂತೆ. ಒಡೆಯರ್ ಅವರ ಸಂಗೀತಕೃತಿ ಗಳಲ್ಲಿ ಅನೇಕ ಸ್ಥಳಗಳಲ್ಲಿ ಈ ಅಂಶವು ಸುವ್ಯಕ್ತವಾಗಿರುವುದನ್ನು ಕಾಣಬಹುದಾಗಿದೆ. ತಂತ್ರಶಾಸ್ತ್ರದಲ್ಲಿ ದೀಕ್ಷೆಯನ್ನು ಗ್ರಹಿಸಿದಾಗ 'ದೀಕ್ಷಾನಾಮ' ಎಂಬ ಹೊಸಹೆಸರನ್ನು ಸ್ವೀಕರಿಸುವ ಸಂಪ್ರದಾಯ ವಿದೆ. ಈ ಸಂಪ್ರದಾಯಕ್ಕೆ ಅನುಗುಣವಾಗಿ ಒಡೆಯರ್‌ಅವರು ''ಚಿತ್ರಭಾನಂದನಾಥ'' ಎಂಬ ದೀಕ್ಷಾನಾಮವನ್ನು ರಚಿಸದರೆಂಬುದೂ ಕೆಲವು ಕೃತಿಗಳಿಂದ ಗೊತ್ತಾಗುತ್ತದೆ. ಉದಾ : ಅಠಾಣಾ ರಾಗದಲ್ಲಿ ರಚಿತವಾಗಿರುವ 'ಶ್ರೀ ಮಹಾಗಣಪತಿಂ ಭಜೇ ಹಂ' ಎಂಬ ಕೃತಿಯಲ್ಲಿ 'ನಾಗಲಿಂಗವರಪುತ್ರಂ ಶ್ರೀ ವಿದ್ಯಾಚಿತ್ರಭಾನಂದ ರಾಜಯೋಗೀಂದ್ರ ವಂದಿತಮ್' ಎಂಬ ಸಾಲನ್ನು ಗಮನಿಸಬಹುದು. ಹೀಗೆಯೇ ವಿನುತಶ್ರೀ ವಿದ್ಯಾ ಷೋಡಶಾಕ್ಷರೀ 'ಶ್ರೀ ವಿದ್ಯಾ ತೋಷಿತಾಂ ಬ್ರಹ್ಮಾರ್ಯಾದ್ಯುಪಾಸಿತ ಶ್ರೀ ವಿದ್ಯೆ ಮುಂತಾದ ಅಪೂರ್ವ ಪದಪುಂಜಗಳನ್ನು ಶ್ರೀ ಒಡೆಯರ್ ಅವರು ಬಳಸಿರುವುದು ಅವರ ತಂತ್ರಶಾಸ್ತ್ರ ನಿಷ್ಠೆಗೆ ದ್ಯೋತಕವಾಗಿದೆ. ಯಾವ ರಾಗದಲ್ಲಿ ಕೃತಿಗಳನ್ನು ರಚಿಸಲಾಗಿದೆಯೋ ಆ ರಾಗದ ಹೆಸರನ್ನು ಅದೇ ಕೃತಿಯಲ್ಲಿ ಶ್ಲೇಷ ಮರ್ಯಾದೆಯಿಂದ ಅಂತರ್ಭಾವಗೊಳಿಸುವುದು ವಾಗ್ಗೇಯಕಾರನ ಸ್ಫೂರ್ತಿಯ ದಿಕ್ಸೂಚಿ. ಶ್ರೀ ಜಯಚಾಮರಾಜ ಒಡೆಯರ್ ಅವರ ಅನೇಕ ಕೃತಿಗಳಲ್ಲಿ ಈ ವೈಶಿಷ್ಟ್ಯವನ್ನು ನಾವು ಕಾಣಬಹುದು. ಉದಾ : ಸರಸಾಂಗೀ ಎಂಬ ರಾಗದಲ್ಲಿ ರಚಿತವಾಗಿರುವ ''ಸದಾಶಿವ ಮುಪಾಸ್ಮಹೇ ಸತತಂ'' ಎಂಬ ಕೃತಿಯಲ್ಲಿ ''ಸದಾಭೀಷ್ಟದಾನಪರಂ ಸರಸಾಂಗ್ಯರ್ಧನಾರೀಶ್ವರಮ್'' ಎಂಬ ಅನುಪಲ್ಲವಿಯಲ್ಲಿ ರಾಗದ ಹೆಸರನ್ನು ಚಮತ್ಕಾರ ಜನಕವಾದ ರೀತಿಯಲ್ಲಿ ಜೋಡಿಸಲಾಗಿದೆ. ಹಾಗೆಯೇ 'ಸಿಂಹೇಂದ್ರ ಮಧ್ಯಮ''

ರಾಗದಲ್ಲಿರುವ "ಬಾಲೇ ಬೃಹತ್ಸೃಷ್ಟಿ ಮೂಲೇ" ಎಂಬ ಕೃತಿಯಲ್ಲಿ" ಕಮನೀಯ ಹಿಂದೋಲ ಮಧ್ಯಮೇ" ಎಂಬ ಸಂಬೋಧನೆಯಲ್ಲಿ ರಾಗನಾಮವನ್ನು ಅಳವಡಿಸಲಾಗಿದೆ. ಇದೇ ಪ್ರಕಾರವಾಗಿ ತಮ್ಮ ಆರಾಧ್ಯದೇವತೆಯಾದ ಚಾಮುಂಡೇಶ್ವರಿಯನ್ನು ಕುರಿತು 'ಹಿಂದೋಳ' ರಾಗದಲ್ಲಿ ರಚಿಸಿರುವ ಸಕಲ ಜಗದಾಕರ್ಷಕವಾದ "ಚಿಂತಯಾಮಿ ಜಗದಂಬಾಂ" ಎಂಬ ಕೃತಿಯಲ್ಲಿ "ತಾನಾಲಯ ಮೂರ್ಛನಯುತ ಹಿಂದೋಳ ಪ್ರೀತಾಮ್" ಎಂದು ತಾಯಿಯನ್ನು ಸ್ತುತಿಸುವಾಗ ರಾಗದ ಹೆಸರನ್ನು ಸಂಯೋಜಿಸಿದ್ದಾರೆ. ಸುಪ್ರಸಿದ್ಧವಾದ ಜನಪ್ರಿಯರಾಗಗಳಲ್ಲೇ ಅಲ್ಲದೇ, ಕೋಕಿಲಪ್ರಿಯ, ಸೂತ್ರದೀಪ, ಗಂಭೀರನಾಟ, ವಿಜಯವಸಂತ, ನೀಲವೇಣಿ, ಕೋಕಿಲಭಾಷಿಣಿ, ವಾಗಧೀಶ್ವರಿ ಮುಂತಾದ ಅಪೂರ್ವರಾಗಗಳಲ್ಲಿಯೂ ಕೃತಿಗಳನ್ನು ರಚಿಸಿ ಶ್ರೀ ಒಡೆಯರ್‌ರವರು ಕರ್ನಾಟಕ ಸಂಗೀತಕ್ಕೆ ಹೊಸ ಆಯಾಮವನ್ನೇ ಒದಗಿಸಿದ್ದಾರೆ. ಅವರ ಕೃತಿಗಳನ್ನು ನಾಡಿನ ಖ್ಯಾತ ಸಂಗೀತ ವಿದ್ವಾಂಸರು, ವಿದುಷಿಯರೂ ಹಾಡಿ ಮನ್ನಣೆಯನ್ನು ಗಳಿಸಿದ್ದಾರೆ, ಗಳಿಸುತ್ತಿದ್ದಾರೆ. ಭಾರತದ ಸಂಗೀತದ ಕೀರ್ತಿಯನ್ನು ಜಗತ್ತಿನಲ್ಲೆಲ್ಲಾ ಹರಡಿರುವ ಶ್ರೀಮತಿ ಎಂ.ಎಸ್. ಸುಬ್ಬುಲಕ್ಷ್ಮಿಯವರು ವಿಶ್ವಸಂಸ್ಥೆಯಲ್ಲಿ ಸಂಗೀತವನ್ನು ಹಾಡುವ ಸಂದರ್ಭಬಂದಾಗ ಶ್ರೀ ಜಯಚಾಮರಾಜ ಒಡೆಯರ್‌ರವರು ರಚಿಸಿರುವ ನಾದನಾಮಕ್ರಿಯಾ ರಾಗದಲ್ಲಿರುವ "ಶಿವಶಿವ ಶಿವ ಭೋ" ಎಂಬ ಕೃತಿಯನ್ನು ಅಮೋಘವಾಗಿ ಹಾಡಿ ಇಡೀ ಜಗತ್ತಿನ ನಾಯಕರೆಲ್ಲರನ್ನೂ ಮಂತ್ರಮುಗ್ಧವಾಗಿ ಮಾಡಿದುದು ವಿದ್ವಾಂಸರಿಗೆಲ್ಲಾ ತಿಳಿದ ವಿಷಯವೇ ಆಗಿದೆ. ಆದಿನದ ಸಭೆಯಲ್ಲಿ ಅಂದು ವಿಶ್ವಸಂಸ್ಥೆಯ ಮಹಾಕಾರ್ಯದರ್ಶಿಯಾಗಿದ್ದ ಉಥಾಂಟ್‌ರವರು ಈ ಸಂಗೀತದ ಮಾಧುರ್ಯಕ್ಕೆ ಮನಸೋತು -" Music Knows, no National boundaries' ಎಂದು ಉದ್ಗರಿಸಿದರೆಂದು ತಿಳಿದುಬರುತ್ತದೆ.

ಪಾಶ್ಚಾತ್ಯ - ಭಾರತೀಯ ಸಂಗೀತಗಳೆರಡರಲ್ಲೂ ಪರಿಣಿತಿಯಿದ್ದ ಶ್ರೀ ಜಯಚಾಮರಾಜ ಒಡೆಯರ್ ಅವರಲ್ಲದೆ ಮತ್ತಾರು ಇಂಥ ಮಹೋನ್ನತ ಕೃತಿಗಳನ್ನು ರಚಿಸಲು ಸಾಧ್ಯ. ೧೯೪೦ ರಿಂದ ೧೯೫೭ರವರೆಗೆ ಮೈಸೂರು ಸಂಸ್ಥಾನದ ಮಹಾರಾಜರಾಗಿ ಅನಂತರ ರಾಜಪ್ರಮುಖರೂ, ರಾಜ್ಯಪಾಲರೂ ಆಗಿ ಸಹಸ್ರಾರು ಕಾರ್ಯಗಳಲ್ಲಿ ವ್ಯಾಪಕರಾಗಿದ್ದರೂ ಕೂಡ ಶ್ರೀ ಜಯಚಾಮರಾಜ ಒಡೆಯರ್ ಅವರು ಅಸಾಧಾರಣವಾದ ಏಕಾಗ್ರತೆಯಿಂದ ಸಂಗೀತ ಶಾಸ್ತ್ರದ ಅಧ್ಯಯನವನ್ನು ಮಾಡಿ ಅಸದೃಶವೈದುಷ್ಯವನ್ನು ಸಂಪಾದಿಸಿ ಅದ್ಭುತವಾದ ಕೃತಿಗಳನ್ನು ರಚಿಸಿ ಜಗತ್ತಿಗೆ ಮಹೋಪಕಾರವನ್ನು ಮಾಡಿದ್ದಾರೆ. ಸಂಗೀತ ಪ್ರಪಂಚದಲ್ಲಿ ಉನ್ನತವಾದ ಸ್ಥಾನವನ್ನು ಗಳಿಸಿಕೊಂಡಿದ್ದಾರೆ. ಅವರ ಕೃತಿಗಳು ಇನ್ನೂ ಹೆಚ್ಚು ಪ್ರಚಾರವನ್ನು ಪಡೆದು ಜನಪ್ರಿಯವಾಗಬೇಕು. ಕರ್ನಾಟಕ ಸಂಗೀತಕ್ಕೆ ಅವರ ಕೊಡುಗೆಯ ಮಹತ್ವ ಎಷ್ಟೆಂಬುದು ವಿದ್ವಾಂಸರ ಮೂಲಕ ಜಗತ್ತಿಗೆ ತಿಳಿಯುವಂತಾಗಬೇಕು.

■

# ‘ಸಂಗೀತರುದ್ರ’ದ ಪರಂಪರೆ ಹಾಗೂ ವೈಶಿಷ್ಟ್ಯ

**ಪ್ರೊ. ಎಂ. ಸಿದ್ಧರಾಮಯ್ಯ ಗೋರಟಾ**

---

‘ಸಂಗೀತ ರುದ್ರ’ ವೆಂಬಾಕ್ಷಣ ನಮಗೆಲ್ಲ ಆಶ್ಚರ್ಯವಾಗುವುದು ಸಹಜ. ಏಕೆಂದರೆ, ನಾವು ಸಂಗೀತವನ್ನು ಆಲಿಸಿದ್ದೇವೆ; ‘ರುದ್ರ’ವನ್ನೂ ಕೇಳಿದ್ದೇವೆ. ಆದರೆ ‘ಸಂಗೀತರುದ್ರವೆಂದರೇ ನೆಂಬುದನ್ನು ಕೇಳಿರಲಿಲ್ಲ. ಸಂಗೀತದ ಸಹಾಯದಿಂದ ಅಥವಾ ಸಂಗೀತ ಸಮೇತವಾಗಿ ರುದ್ರದ ಮಂತ್ರಗಳನ್ನು ಹಾಡುವುದಕ್ಕೆ ‘ಸಂಗೀತ ರುದ್ರ’ ಎನ್ನಲಾಗುತ್ತದೆ. ಸಂಗೀತದ ಸಹಯೋಗ ದೊಂದಿಗೆ ‘ರುದ್ರ’ವನ್ನು ಹಾಡುವ ಒಂದು ಪರಂಪರೆಯನ್ನೇ ನಾವು ಇಂದು ಕಾಣುತ್ತೇವೆ. ಅದುವೇ ಭಾರತದ ಏಕೈಕ ಹಾಗೂ ಪ್ರಪ್ರಥಮವಾದ ಬೀದರ ಜಿಲ್ಲೆಯ ಬಸವಕಲ್ಯಾಣ ತಾಲ್ಲೂಕಿನ ಗೋರಟಾ (ಬಿ) ಗ್ರಾಮದ ಸುಪ್ರಸಿದ್ಧವಾದ ‘ಶ್ರೀ ಸಂಗೀತ ರುದ್ರ ಸಂಘ’.

**ಹಿನ್ನೆಲೆ :**

‘ಗೋರಟಾ’ (ಬಿ) ಬಸವಕಲ್ಯಾಣದಿಂದ ಪೂರ್ವಕ್ಕೆ ೧೮ ಕಿ.ಮಿ. ಅಂತರದಲ್ಲಿರುವ ಒಂದು ಗ್ರಾಮ. ಕಲ್ಯಾಣ ಚಾಲುಕ್ಯ ಆರನೇ ವಿಕ್ರಮಾದಿತ್ಯನ ಕಾಲದಲ್ಲಿ ಇದೊಂದು ಅಗ್ರಹಾರವಾಗಿತ್ತೆಂದು ತಿಳಿದು ಬಂದಿದೆ. ಇಲ್ಲಿ ದೊರೆತಿರುವ ಸುಮಾರು ಒಂಬತ್ತು ಶಾಸನಗಳ ಪ್ರಕಾರ ಈ ಗ್ರಾಮದಲ್ಲಿ ರುದ್ರೇಶ್ವರ, ಕುಂಭೇಶ್ವರ, ನಗರೇಶ್ವರ, ಮಲ್ಲೇಶ್ವರ ಮತ್ತು ಶಂಕೇಶ್ವರಗಳೆಂಬ ಐದು ದೇವಾಲಯಗಳಿದ್ದವೆಂದು ಹೇಳಲಾಗಿದೆ. ವಿಕ್ರಮಾದಿತ್ಯ ಸಂಗೀತ ಶಿಕ್ಷಣಕ್ಕೆ ತುಂಬ ಮಹತ್ವಕೊಟ್ಟಿದ್ದನೆಂಬುದು ಇಲ್ಲಿ ವ್ಯಕ್ತವಾಗುತ್ತದೆ. ಈ ಗ್ರಾಮದಲ್ಲಿ ‘ವೇದ ಸಂಗೀತ ಪಾಠಶಾಲೆ’ ಇತ್ತೆಂದು, ರುದ್ರೇಶ್ವರ ದೇವರಿಗೆ ನಿತ್ಯ ಸಂಗೀತ ಸಮೇತವಾಗಿ ರುದ್ರಪೂಜೆ

ನೆರವೇರುತ್ತಿತ್ತೆಂದು ತಿಳಿದು ಬಂದಿದೆ. ಈ ಐದು ದೇವಾಲಯಗಳ ಅಂಗ ಭೋಗ, ಪೂಜೆ, ಕಲಾವಿದರ ಕುಟುಂಬದ ಉಪಜೀವನಕ್ಕಾಗಿ ವಿಕ್ರಮಾದಿತ್ಯ ಭೂಮಿಯನ್ನು ದಾನವಾಗಿ ಕೊಟ್ಟ ಉಲ್ಲೇಖ ಈ ಶಾಸನದಲ್ಲಿ ಹೇಳಲಾಗಿದೆ.

ಈಗ ಈ ದೇವಾಲಯಗಳು ನಶಿಸಿಹೋಗಿವೆ. ಇತ್ತೀಚೆಗೆ ಕೆಲವೊಂದು ಕುರುಹುಗಳ ಆಧಾರದಿಂದ ಗ್ರಾಮದ ಹೊರಭಾಗದಲ್ಲಿ 'ನಗರೇಶ್ವರ ದೇವಾಲಯ'ದ ಅವಶೇಷಗಳು ಕಂಡು ಬಂದ ಸ್ಥಳದಲ್ಲಿ ಗ್ರಾಮದವರೆಲ್ಲ ಕೂಡಿ 'ಶ್ರೀ ನಗರೇಶ್ವರ ದೇವಾಲಯ' ನಿರ್ಮಿಸಿದ್ದಾರೆ.[೧] ಈ ಗ್ರಾಮದಲ್ಲಿ ಕರ್ನಾಟಕದ ಎರಡನೇ ಬೃಹತ್ ಶಾಸನವೆಂದು ಹೇಳಲಾದ ಒಂದು ದೊಡ್ಡ ಶಾಸನ ದೊರೆತಿದೆ. ಅದು ಅನೇಕ ದಿನಗಳಿಂದ ಭೂಮಿಯಲ್ಲಿ ಹೂತುಹೋಗಿತ್ತು. ಲೋಕೋಪಯೋಗಿ ಇಲಾಖೆಯವರು ರಸ್ತೆ ನಿರ್ಮಾಣಮಾಡುವ ಕಾಲಕ್ಕೆ ಅದು ದೊರೆತಿದೆ. ಅದು ಈಗ ಅನಾಥ ಸ್ಥಿತಿಯಲ್ಲಿ 'ಅಂಗವಿಕಲ ಚಕ್ರವರ್ತಿ'ಯಂತೆ ದುಸ್ಥಿತಿಯಲ್ಲಿದ್ದುದು ತುಂಬ ಶೋಚನೀಯ.

ವಿಕ್ರಮಾದಿತ್ಯನು ವೇದ ಮತ್ತು ಸಂಗೀತ ಕಲೆಗೆ ಪ್ರಾಮುಖ್ಯತೆ ನೀಡಿದ್ದನು. ಆತನ ಪಟ್ಟದರಸಿ 'ಪಿರಿಯ ಕೇತಲ ದೇವಿ'ಯು ಸಂಗೀತ ವಿದ್ಯಾಪ್ರವೀಣೆ ಯಾಗಿದ್ದಳೆಂದು, ನಾಟ್ಯ ಕಲೆಯಲ್ಲಿ ಅಪ್ರತಿಮ ಪಾಂಡಿತ್ಯವನ್ನು ಪಡೆದಿದ್ದಳೆಂದು, ಅವಳಿಗೆ 'ನಾಟ್ಯವಿಶಾರದೆ' ಎಂಬ ಬಿರುದಾಂಕಿತವಿತ್ತೆಂದು ಹೇಳಲಾಗುತ್ತಿದೆ. ಗೋರಟಾ ಅಗ್ರಹಾರದಲ್ಲಿ ವಿಶ್ವವಿದ್ಯಾಲಯ ಮಟ್ಟದ 'ಸಂಗೀತ ವಿದ್ಯಾ ಕೇಂದ್ರ' ವಿತ್ತೆಂದು ಅದರಲ್ಲಿ ಸುಮಾರು ಎರಡುನೂರು ಜನ ಶಿಕ್ಷಕರಿದ್ದರೆಂದು ವಿಕ್ರಮಾದಿತ್ಯನ ಗುರು 'ರುದ್ರಮಿಶ್ರರು' ಕೇಂದ್ರದ ಕುಲಪತಿಗಳಾಗಿದ್ದು, ಭಾಸ್ಕರ ಚಟ್ಟೋಪಾಧ್ಯಾಯರು ಕೇಂದ್ರದ ಪ್ರಧಾನ ಗುರುಗಳಾಗಿದ್ದರೆಂದು ತಿಳಿದುಬರುತ್ತವೆ. ಈ ಕೇಂದ್ರದಲ್ಲಿ ಸಹಸ್ರಸಂಖ್ಯೆಯ ವಿದ್ಯಾರ್ಥಿಗಳು ವೇದಾಧ್ಯಯನ ಹಾಗೂ ಸಂಗೀತ ಶಿಕ್ಷಣ ಕಲಿಯುತ್ತಿದ್ದರೆಂದು ಹೇಳಲಾಗಿದೆ. ಇಂದಿಗೆ ಸುಮಾರು ಒಂಬತ್ತು ಶತಮಾನಗಳ ಹಿಂದೆ ಇತ್ತೆಂದು ಹೇಳಲಾದ ಮೇಲ್ಕಾಣಿಸಿದ 'ವೇದ ಸಂಗೀತ' ದ ಬೀಜವೊಂದು ನೆಲಕ್ಕುರುಳಿ ಕಾಲಗರ್ಭದಲ್ಲಿ ಮೊಳಕೆಯೊಡೆದು ಇಂದು ಹೆಮ್ಮರವಾಗಿ ನಿಂತಿದೆ. ಅದುವೇ ಗೋರಟಾದ ಪ್ರಸಿದ್ಧ 'ಶ್ರೀ ಸಂಗೀತ ರುದ್ರಸಂಘ'ವೆಂದು ಹೇಳಬಹುದು.

## ವೇದ ಮತ್ತು ಸಂಗೀತ

ವೇದಕ್ಕೂ ಸಂಗೀತಕ್ಕೂ ಬಲವಾದ ನಂಟು. ಚತುರ್ವೇದಗಳಲ್ಲೊಂದಾದ 'ಸಾಮವೇದ'ವು ಸಂಗೀತಕ್ಕಾಗಿಯೇ ಹುಟ್ಟಿಕೊಂಡ ವೇದವೆಂದು ಹೇಳಲಾಗುತ್ತದೆ. ವೈದಿಕ ಯುಗದಲ್ಲಿ ಋಕ್‌ಗಳನ್ನು ಸಂಗೀತದ ಸಹಾಯದಿಂದ ಉಚ್ಚರಿಸಲಾಗುತ್ತಿತ್ತೆಂದು ವೈದಿಕ ವಾಙ್ಮಯದಿಂದ ತಿಳಿದು ಬರುತ್ತದೆ. ವೈದಿಕ ಯುಗದಲ್ಲಿ 'ಉದಾತ್ತ', 'ಅನುದಾತ್ತ' ಮತ್ತು

೧. ಈ ಸ್ಥಳಕ್ಕೆ ಜನರು 'ನಗರನಜಾಗಾ' ಎಂದೇ ಇಂದಿಗೂ ಕರೆಯುತ್ತಾರೆ.

'ಸ್ವರಿತ'[೧] - ಸ್ವರಗಳಿಂದ ವೇದಮಂತ್ರಗಳನ್ನು ಹಾಡಲಾಗುತ್ತಿತ್ತು. ಇವುಗಳನ್ನು ಹಾಡುವುದಕ್ಕೆ 'ವೇದಗಾನ'ವೆಂದು ಕರೆಯಲಾಗುತ್ತಿತ್ತು. ವೈದಿಕಗಾನದಲ್ಲಿ ಆರ್ಚಿಕ, ಗಾಥಿಕ, ಮತ್ತು ಸಾಮಿಕ ಎಂಬ ಮೂರು ಪ್ರಭೇದಗಳಿದ್ದು ; ಒಂದು ಸ್ವರವನ್ನು ಬಳಸಿ ಹಾಡಿದರೆ ಆರ್ಚಿಕವೆಂದು, ಎರಡು ಸ್ವರಕ್ಕೆ ಗಾಥಿಕವೆಂದು ಮತ್ತು ಮೂರು ಸ್ವರಕ್ಕೆ ಸಾಮಿಕವೆಂದು ಕರೆಯಲಾಗಿದೆ. ಸಾಮಿಕ ಪದ್ಧತಿ ಋಷಿಗಳಿಂದ ಕಂಡುಹಿಡಿಯಲ್ಪಟ್ಟಿದೆ. ಸಾಮಗಾನಕ್ಕೆ ಅದುವೇ ಮೂಲವೆನಿಸಿತು. ಹಾಡಿನಿಂದಲೇ ಮಂತ್ರಗಳನ್ನು ವ್ಯವಹರಿಸುವುದು ಸಾಮಗಾನ ವೆನಿಸಿಕೊಂಡಿತು. ಅಂದಿನ ವೇದಗಾನ ಪರಂಪರೆಯನ್ನು ಇಂದಿನ ಆಧುನಿಕ ಯುಗದಲ್ಲಿ ಅದರಲ್ಲು, ಕಂಪ್ಯೂಟರ್ ಯುಗದಲ್ಲಿ ವೇದಮಂತ್ರಗಳನ್ನು ಶಾಸ್ತ್ರೀಯ ಸಂಗೀತದ ಪದ್ಧತಿಯಲ್ಲಿ ಸಾಮೂಹಿಕವಾಗಿ ಹಾಡುವ ವೇದಗಾನಸಂಘವನ್ನು ಇಂದು ನೋಡುತ್ತೇವೆ. ಅದುವೇ ಪ್ರಸ್ತುತವಾದ 'ಶ್ರೀ ಸಂಗೀತ ರುದ್ರಸಂಘ'.

## ರುದ್ರಸಂಘ

'ಗೋರಟಾ' ಕಲ್ಯಾಣನಾಡಿನ ಸಂಪದ್ಭರಿತವಾದ ಗ್ರಾಮಗಳಲ್ಲೊಂದು. ಈ ಗ್ರಾಮದಲ್ಲಿ ಅಧಿಕ ಸಂಖ್ಯೆಯಲ್ಲಿರುವವರು ವೀರಶೈವರು. ಅವರಲ್ಲಿ ಕಾಲುಭಾಗದಷ್ಟು ವೀರಮಾಹೇಶ್ವರರು. ಅವರು ಪೂಜಾದಿ ಕ್ರಿಯೆಗಳಲ್ಲಿ ನಿಷ್ಣಾತರಾಗಿದ್ದರೂ 'ರುದ್ರಪೂಜಾ' ಕಲಿಯಬೇಕೆಂಬ ಹಂಬಲವಿತ್ತು. ರುದ್ರಪೂಜಾಕ್ರಿಯೆಗಳನ್ನು ಕಲಿಸುವ ಒಬ್ಬಯೋಗ್ಯ ಗುರುವಿಗಾಗಿ ಅವರೆಲ್ಲ ತಡಪಡಿಸುತ್ತಿದ್ದರು. ಈ ದಿನಗಳಲ್ಲಿ ಗೋರಟಾಕ್ಕೆ ಬಂದ ಶ್ರೀ ಮರಿದೇವ ದೇಶೀಕೇಂದ್ರ ಸ್ವಾಮಿಗಳ ಮುಂದೆ ಅವರೆಲ್ಲ ತಮ್ಮ ಇಚ್ಛೆಯನ್ನು ವ್ಯಕ್ತಪಡಿಸಿದರು.

ಶ್ರೀ ಮರಿದೇವ ದೇಶೀಕೇಂದ್ರ ಸ್ವಾಮಿಗಳು ಮೇಹಕರ - ಡೋಣಗೋಪುರ ಕಟ್ಟಿಮನಿ ಸಂಸ್ಥಾನದ ಅಧಿಪತಿಗಳು. ಅವರು ವೀರಶೈವ ಧರ್ಮದ ಮಹಾನ್ ಚಿಂತಕರು. ವೀರಶೈವರ ಸರ್ವತೋಮುಖ ಬೆಳವಣಿಗೆಗಾಗಿ ಅವರು ಕಂಕಣಬದ್ಧರಾಗಿದ್ದರು. ಅವರು ಭಕ್ತಜನಾನುರಾಗಿಗಳಾಗಿದ್ದರು. ಅವರನ್ನು ಜನರು 'ಮೇಹಕರದ ಮರೆಪ್ಪನವರೆಂದು' ಕರೆಯುತ್ತಿದ್ದರು. ಅವರು ಆಗಾಗ ಗೋರಟಾ ಗ್ರಾಮಕ್ಕೆ ಬರುತ್ತಿದ್ದರು. ಗೋರಟಾ ಗ್ರಾಮದ ಭಕ್ತರಮೇಲೆ ಅವರ ಪ್ರೀತಿ-ವಿಶ್ವಾಸ ಅಪಾರವಾಗಿತ್ತು.

ಗೋರಟಾ ಗ್ರಾಮದ ವೀರಮಾಹೇಶ್ವರರ ಅಳಲನ್ನು ಅರ್ಥಮಾಡಿಕೊಂಡ ಸ್ವಾಮಿಗಳು 'ರುದ್ರ'ವನ್ನು, ರುದ್ರಪೂಜೆಯ ಕ್ರಿಯೆಗಳನ್ನು ಕಲಿಸುವ ಒಬ್ಬ ಯೋಗ್ಯ ಶಾಸ್ತ್ರಿಗಳನ್ನು ಹುಡುಕಹತ್ತಿದರು. ಅದೇ ಸಮಯಕ್ಕೆ ಅವರಿಗೆ ವಿಜಾಪುರಜಿಲ್ಲೆಯ ಕೋರವಾರದ ಶ್ರೀ ಬಸವರಾಜ ಶಾಸ್ತ್ರಿಗಳು ಇವರ ಗಮನಕ್ಕೆ ಬಂದರು. ಸ್ವಾಮಿಗಳು ಅವರನ್ನು ಗೋರಟಾಕ್ಕೆ ಕರೆಸಿ ಅಲ್ಲಿಯ ಹಿರೇಮಠದಲ್ಲಿ ವೀರಮಾಹೇಶ್ವರ ವಟುಗಳಿಗೆ ರುದ್ರವನ್ನು ಕಲಿಸುವ ಏರ್ಪಾಡು ಮಾಡಿದರು.

---

೧. ಉದಾತ್ತ = ತಾರಸ್ಥಾಯಿಯಲ್ಲಿ, ಅನುದಾತ್ತ = ಮಂದ್ರಸ್ಥಾಯಿಯಲ್ಲಿ. ಸ್ವರಿತ = ಮಧ್ಯಸ್ಥಾಯಿಯಲ್ಲಿ

ಶ್ರೀ ಬಸವರಾಜ ಶಾಸ್ತ್ರಿಗಳು ಸಂಸ್ಕೃತ, ವೇದಗಳಲ್ಲಿ ಪ್ರಕಾಂಡ ಪಂಡಿತರಾಗಿದ್ದರು. ಅವರ ನೇತೃತ್ವದಲ್ಲಿ ಹಿರೇಮಠದಲ್ಲಿ 'ವೇದಪಾಠಶಾಲೆ' ಪ್ರಾರಂಭವಾಯಿತು. ಈ ವೇದ ಪಾಠಶಾಲೆಯಲ್ಲಿ ಅನೇಕ ಜನ ವೀರಶೈವ ಮಾಹೇಶ್ವರ ವಿದ್ಯಾರ್ಥಿಗಳು 'ರುದ್ರ' ವನ್ನು ಕಲಿತರು. ಶಾಸ್ತ್ರಿಗಳವರಲ್ಲಿ ಸುಮಾರು ೧೬ಕ್ಕೂ ಅಧಿಕ ವೀರಮಾಹೇಶ್ವರ ವಟುಗಳು ಶಾಸ್ತ್ರೋಕ್ತವಾಗಿ ರುದ್ರವನ್ನು ಕಲಿತರು. ಅವರಲ್ಲಿ ಶ್ರೀಪ್ರಭುದೇವರು, (ಷ.ಬ್ರ. ಶ್ರೀ ರಾಜೋಟಿಶಿವಾಚಾರ್ಯರ ಪೂರ್ವಾಶ್ರಮದ ಹೆಸರು) ಶ್ರೀ ಸುರೇಶ ಸ್ವಾಮಿಗಳು ಪ್ರಮುಖರು. ಶಾಸ್ತ್ರಿಗಳವರು ಮಾರ್ಗದರ್ಶನದಲ್ಲಿ ರುದ್ರಾಧ್ಯಯನ ಮಾಡಿದ ಎಲ್ಲ ವಟುಗಳನ್ನು ಸೇರಿಸಿ ಮರಿದೇವ ಸ್ವಾಮಿಗಳು 'ಗೋರಟಾ. ರುದ್ರಸಂಘ' ವನ್ನು ೧೯೪೨ರಲ್ಲಿ ಸ್ಥಾಪಿಸಿದರು. ಗೋರಟಾದ ಮೇಲಗಲ್ಲಿಯ ಶ್ರೀ ಶಿವಲಿಂಗಯ್ಯ ಮಠಪತಿಯವರು ಈ ಸಂಘದ ನೇತೃತ್ವವನ್ನು ವಹಿಸಿದರು.

ಗೋರಟಾ ಗ್ರಾಮದಲ್ಲಿ ಸ್ಥಾಪನೆಗೊಂಡ 'ರುದ್ರಸಂಘ' ಕ್ರಮೇಣ ಕಲ್ಯಾಣ ನಾಡಿನಲ್ಲಿ ಅಲ್ಲಲ್ಲಿ ರುದ್ರಪೂಜೆಯ ಕಾರ್ಯಕ್ರಮಗಳನ್ನು ಮಾಡಲಿಕ್ಕೆ ಆರಂಭಿಸಿತು. ಸಂಘ ಸ್ಥಾಪನೆಯಾದ ಆರಂಭದಲ್ಲಿ ಗೋರಟಾ ಗ್ರಾಮದ ಪ್ರಸಿದ್ಧ ದಾನಿಯೆಂದೇ ಹೆಸರು ಪಡೆದಿದ್ದ ಡುಮಣೆ ಶ್ರೀ ಮಾದಪ್ಪನವರ ಮನೆಯಲ್ಲಿ ೨೧ ದಿವಸ ರುದ್ರ ಪೂಜಾ ಕಾರ್ಯಕ್ರಮ ನಡೆಸಿತು.

## ಸಂಗೀತ ರುದ್ರಸಂಘ

'ಗೋರಟಾ ರುದ್ರಸಂಘ'ದ ಸ್ಥಾಪನೆಗೆ ಕಾರಣರಾದ ಶ್ರೀ ಮರಿದೇವ ಸ್ವಾಮಿಗಳು ಲಿಂಗೈಕ್ಯರಾದ ನಂತರ ಗೋರಟಾ ಹಿರೇಮಠದ ಲಿಂ. ಶ್ರೀ ರೇವಣಸಿದ್ದಯ್ಯ- ಗುರುದೇವಿಯವರ ಸತ್ಪುತ್ರರಾದ ಶ್ರೀಪ್ರಭುದೇವರು ಷ.ಬ್ರ. ಶ್ರೀರಾಜೋಟಿ ಶಿವಾಚಾರ್ಯರೆಂಬ ಅಭಿಧಾನಪಡೆದು ಮೇಹಕರ ಮಠಕ್ಕೆ ಅಧಿಪತಿಗಳಾಗಿ ಬಂದರು. ಅವರು ಭಕ್ತಜನಾನುರಾಗಿಗಳು ಮಹಾಮಹಿಮರು. ಕಲಾಪ್ರೇಮಿಗಳು ಅವರಿಗೆ ಸಂಗೀತದ ಮೇಲೆ ಅಪಾರ ಪ್ರೀತಿ-ಅಭಿಮಾನವಿತ್ತು. ತಮ್ಮ ಗುರುಗಳು ಸ್ಥಾಪಿಸಿದ 'ರುದ್ರ ಸಂಘ'ಕ್ಕೆ ನವಚೇತನವನ್ನು ಕೊಟ್ಟು ಅದನ್ನು ಜನಪ್ರಿಯಗೊಳಿಸಬೇಕೆಂಬ ಉದ್ದೇಶದಿಂದ ಶ್ರೀ ರಾಜೋಟಿಶಿವಾಚಾರ್ಯರು ರುದ್ರಕ್ಕೆ ಸಂಗೀತ ಜೋಡಿಸುವ ವಿನೂತನ ವಿಧಾನದತ್ತ ಕಾರ್ಯಮಗ್ನರಾದರು. ರುದ್ರದ ಮಂತ್ರಗಳು ಜನಸಾಮಾನ್ಯರಿಗೆ ಸುಲಭವಾಗಿ ತಿಳಿಯಲು ಅಸಾಧ್ಯ. ಅದರೆ ರುದ್ರದ ಮಂತ್ರಗಳಿಗೆ ಸಂಗೀತದ ಜೋಡಣೆಯಾದರೆ ಎಂಥ ಅಜ್ಞನು ಸಹ ಅದನ್ನು ಆಲಿಸುತ್ತ ಮುಗ್ಧನಾಗಬಲ್ಲನೆಂಬುದು ಅವರ ವಿಚಾರವಾಯಿತು. ತಮ್ಮ ಈ ಸಂಕಲ್ಪದ ಕಾರ್ಯಸಾಧನೆಗಾಗಿ ತಮ್ಮ ಪ್ರಿಯ ಶಿಷ್ಯ ಗೋರಟಾದ ಶ್ರೀ ವಿರೂಪಾಕ್ಷಯ್ಯನವರನ್ನು ಈ ಕಾರ್ಯಕ್ಕಾಗಿ ಸಿದ್ಧತೆಮಾಡಿದರು.

ಶ್ರೀವಿರೂಪಾಕ್ಷಯ್ಯನವರು ಒಬ್ಬ ಸುಸಂಸ್ಕೃತ ವ್ಯಕ್ತಿಗಳು. ಅವರು ತಮ್ಮ ಎಳವೆಯಲ್ಲಿಯೇ ಸಂಗೀತದ ಗೀಳನ್ನು ಹಚ್ಚಿಕೊಂಡು ಬಂದವರು. ಬಾಲ್ಯದಿಂದಲೇ ಶ್ರೀ

ವಿರೂಪಾಕ್ಷಯ್ಯನವರಲ್ಲಿದ್ದ ಸುಪ್ತವಾದ ಸಂಗೀತ ಪ್ರತಿಭೆಯನ್ನು ಗುರುತಿಸಿದ ಶ್ರೀ ರಾಜೋಟಿ ಶಿವಾಚಾರ್ಯರು ಮುಂದೊಂದು ದಿನ ಕಲಾಕ್ಷೇತ್ರದ ಹೆಸರುವಾಸಿಯಾಗಬಲ್ಲ ಎಲ್ಲ ಲಕ್ಷಣಗಳನ್ನು ಹೊಂದಿದ ಶ್ರೀ ವಿರೂಪಾಕ್ಷಯ್ಯನವರ ಪ್ರತಿಭೆಯನ್ನು ಸದ್ವಿನಿಯೋಗ ಮಾಡಿಕೊಳ್ಳಬೇಕೆಂಬ ಉದ್ದೇಶದಿಂದ ಸ್ವಾಮಿಗಳು ತಮ್ಮ ಶಿಷ್ಯ ಶ್ರೀವಿರೂಪಾಕ್ಷಯ್ಯನವರನ್ನು ಶಾಸ್ತ್ರಬದ್ಧವಾದ ಸಂಗೀತ ವಿದ್ಯೆಯನ್ನು ಕಲಿಯಲು ಹೈದ್ರಾಬಾದಿಗೆ ಕಳಿಸಿಕೊಟ್ಟರು. ಅವರೊಂದಿಗೆ ಅದೇ ಗ್ರಾಮದ ಅದೇ ಹೆಸರಿನ ಮೇಲಗಲ್ಲಿಯ ಶಿವಲಿಂಗಯ್ಯನವರ ಪುತ್ರ ಶ್ರೀ ವಿರೂಪಾಕ್ಷಯ್ಯನವರನ್ನು ಸಂಗೀತ ಕಲಿಯಲು ಹೈದ್ರಾಬಾದಿಗೆ ಕಳಿಸಿದರು.

ಶ್ರೀ ವಿರೂಪಾಕ್ಷಯ್ಯನವರು ಹೈದ್ರಾಬಾದಿನ ಸರಕಾರಿ ಸಂಗೀತ ನೃತ್ಯಶಾಲೆಯ (ಈಗಿನ ಸರಕಾರಿ ಸಂಗೀತ ಕಾಲೇಜು) ಸಿತಾರ್ ವಿದ್ವಾನ್ ಪಂ. ನಾಗೇಶ ದಿವಾಣ ಗುರೂಜಿಯವರ ಮಾರ್ಗದರ್ಶನದಲ್ಲಿ ಸಂಗೀತವಿದ್ಯೆ ಸಂಪಾದಿಸಿ ಮನೆಗೆ ಮರಳಿದರು. ತಮ್ಮ ಇಚ್ಛೆಯಂತೆ ಸಂಗೀತ ವಿದ್ಯೆಯನ್ನು ಕಲಿತು ಬಂದ ಶ್ರೀ ವಿರೂಪಾಕ್ಷಯ್ಯನವರಿಂದ ಸ್ವಾಮಿಗಳು ರುದ್ರಕ್ಕೆ ಸಂಯೋಜಿಸಲು ಅವರಿಗೆ ಆಜ್ಞಾಪಿಸಿ ಸಂಗೀತಕ್ಕೆ ರುದ್ರವನ್ನು ಸಂಯೋಜಿಸುವ ವಿನೂತನ ವಿಧಾನಕ್ಕೆ ನಾಂದಿ ಹಾಕಿದರು. ಶ್ರೀ ವಿರೂಪಾಕ್ಷಯ್ಯನವರು ಗುರುಗಳ ಅಪ್ಪಣೆಯಂತೆ ಹಿಂದುಸ್ತಾನಿ ಶಾಸ್ತ್ರೀಯಸಂಗೀತದ ಖ್ಯಾಲ ಗಾಯಕಿಯ ಮಾದರಿಯಲ್ಲಿ ರುದ್ರದ ನಮಕ ಮತ್ತು ಚಮಕಗಳಿಗೆ ಸಂಗೀತ ಸಂಯೋಜಿಸಿದರು. ಶ್ರೀ ವಿರೂಪಾಕ್ಷಯ್ಯನವರ ಈ ಕಾರ್ಯದಲ್ಲಿ ಅವರಿಗೆ ಸಂಗೀತ ಸಹಾಯಕರಾಗಿ ಕಾರ್ಯನಿರ್ವಹಿಸಿದರು ಮೇಲಗಲ್ಲಿ ಶ್ರೀ ವಿರೂಪಾಕ್ಷಯ್ಯನವರು.

ಶ್ರೀ ವಿರೂಪಾಕ್ಷಯ್ಯನವರು ತಮ್ಮೊಂದಿಗೆ ವಿವಿಧ ವಾದ್ಯಗಳನ್ನು ನುಡಿಸುತ್ತ ರುದ್ರವನ್ನು ಹಾಡಲು ಅನೇಕ ಯುವಕರಿಗೆ ತರಬೇತಿ ನೀಡಿದರು. ಶ್ರೀ ವಿರೂಪಾಕ್ಷಯ್ಯನವರಲ್ಲಿ ತರಬೇತಿ ಪಡೆದ ಎಲ್ಲ ರುದ್ರಗಾಯಕರನ್ನು ಕಲೆಹಾಕಿ ಶ್ರೀ ರಾಚೋಟಿ ಶಿವಾಚಾರ್ಯರು ಮೊದಲಿದ್ದ ಸಂಗೀತರುದ್ರಕ್ಕೆ 'ಸಂಗೀತ ರುದ್ರಸಂಘ' ವೆಂದು ಹೆಸರಿಟ್ಟರು. ಶ್ರೀ ವಿರೂಪಾಕ್ಷಯ್ಯನವರನ್ನು ಸಂಘದ ಸ್ಥಾಪಕ ಅಧ್ಯಕ್ಷರನ್ನಾಗಿಸಿದರು. ಹೀಗೆ ಶ್ರೀ ಮರಿದೇವ ಸ್ವಾಮಿಗಳಿಂದ ಸ್ಥಾಪನೆಗೊಂಡು ಶ್ರೀ ರಾಚೋಟಿ ಶಿವಾಚಾರ್ಯರಿಂದ ಸಂಗೀತದ ಕಳೆಯನ್ನು ಪಡೆದು ಸಂಗೀತ ರುದ್ರವೆಂಬ ಹೆಸರು ಪಡೆದ ಗೋರಟಾದ ಪ್ರಸ್ತುತ ''ಶ್ರೀ ಸಂಗೀತ ರುದ್ರಸಂಘ'' ಆಧುನಿಕ ಕಾಲದಲ್ಲಿ ಭಾರಿ ಜನಪ್ರಿಯತೆಗಳಿಸಿದೆ.

**ಸಂಘದ ಖ್ಯಾತಿ**

ಕಳೆದ ಐದು ದಶಕಗಳಿಂದ ನಾಡಿನ ಸಾಂಸ್ಕೃತಿಕ ಬದುಕನ್ನು ಪುನಶ್ಚೇತನಗೊಳಿಸುತ್ತಿರುವ ಗೋರಟಾದ ಶ್ರೀಸಂಗೀತ ರುದ್ರಸಂಘ, ಕರ್ನಾಟಕದ ಹೆಮ್ಮೆಯ ಸಾಂಸ್ಕೃತಿಕ ಸಂಘಗಳಲ್ಲೊಂದು. ಕರ್ನಾಟಕ, ಆಂಧ್ರ, ಮಹಾರಾಷ್ಟ್ರಗಳಲ್ಲಿ ಈ ಸಂಘ ಅಸಂಖ್ಯಾತ

ಕಾರ್ಯಕ್ರಮಗಳನ್ನು ನೀಡಿ ಹೆಸರು ಪಡೆದಿದೆ. ಉತ್ತರ ಕರ್ನಾಟಕ ಮತ್ತು ಮಹಾರಾಷ್ಟ್ರದ ದಕ್ಷಿಣ ಭಾಗದಲ್ಲಿ ಈ ಸಂಘದ ಹೆಸರು ಮನೆಮಾತಾಗಿದೆ.

ನಾಡಿನ ಅಸಂಖ್ಯಾತ ಮಠ-ಪೀಠಗಳು, ಸಾಂಸ್ಕೃತಿಕ ಸಂಘಸಂಸ್ಥೆಗಳು ಈ ಸಂಘದ ಕಾರ್ಯಕ್ರಮ ಏರ್ಪಡಿಸಿವೆ. ಅನೇಕ ಮಠಾಧಿಪತಿಗಳು, ಗಣ್ಯನಾಗರಿಕರು, ಹೆಸರಾಂತ ಸಂಗೀತಗಾರರು ಈ ಸಂಘದ ಕಾರ್ಯವನ್ನು ಪ್ರಶಂಸಿಸಿ ಪ್ರಶಸ್ತಿಪತ್ರಗಳನ್ನು, ಮಾನ-ಸನ್ಮಾನಗಳನ್ನು ನೀಡಿ ಗೌರವಿಸಿವೆ.

ವಿಖ್ಯಾತ ಸಂಗೀತಗಾರರಾಗಿದ್ದ ಪಂ. ಮಲ್ಲಿಕಾರ್ಜುನಮನಸೂರ, ಪಂ. ಬಸವರಾಜ ರಾಜಗುರು ಮುಂತಾದವರು ಈ ಸಂಘದ ವೇದಗಾಯನವನ್ನು ಆಲಿಸಿ ಪ್ರಶಸ್ತಿ ಪತ್ರ ನೀಡಿರುವುದು ಈ ಸಂಘಕ್ಕೆ ದೊರೆತ ಅಪೂರ್ವ ಗೌರವವೆನಿಸಿವೆ. ಭಾರತದ ಮಹಾದಂಡನಾಯಕ ಫೀಲ್ಡ್ ಮಾರ್ಷಲ್ ದಿ. ಜನರಲ್ ಕಾರ್ಯಪ್ಪ ಮುಂತಾದ ಸೇನಾನಿಗಳು ಸಂಗೀತರುದ್ರವನ್ನು ಆಲಿಸಿ ಮೆಚ್ಚಿಗೆ ವ್ಯಕ್ತಪಡಿಸಿರುವುದರಿಂದ ಈ ಸಂಘದ ಘನತೆಯನ್ನು ನಾವು ಕಾಣಬಹುದಾಗಿದೆ.

ಭಾರತದ ಸುಪ್ರಸಿದ್ಧವಾದ ಉತ್ತರ ಪ್ರದೇಶದ ಹಾಥರಸದ ಸಂಗೀತ ಕಾರ್ಯಾಲಯವು ಶ್ರೀವಿರೂಪಾಕ್ಷಯ್ಯನವರು ರುದ್ರದ ಮಂತ್ರಗಳಿಗೆ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತ ಪದ್ಧತಿಯಲ್ಲಿ ಸ್ವರಸಂಯೋಜಿಸಿ ಸಾಮೂಹಿಕವಾಗಿ ವೇದಮಂತ್ರಗಳನ್ನು ಹಾಡುವ ವಿನೂತನ 'ವೇದ ಗಾಯನ' ವನ್ನು ಕಂಡುಹಿಡಿದ ಸಾಹಸ ಕಾರ್ಯವನ್ನು ಮೆಚ್ಚಿ 'ಪ್ರಶಂಸಾ ಪತ್ರ' ನೀಡಿ ಗೌರವಿಸಿರುವುದು ಈ ಸಂಘಕ್ಕೆ ಅಖಿಲ ಭಾರತ ಖ್ಯಾತಿಯನ್ನು ತಂದುಕೊಟ್ಟಿದೆ. ಶ್ರೀವಿರೂಪಾಕ್ಷಯ್ಯನವರು ಸ್ವರಸಂಯೋಜಿಸಿದ ಅನೇಕ ರುದ್ರಮಂತ್ರಗಳನ್ನು ಹಾಥರಸ ಕಾರ್ಯಾಲಯ ತನ್ನ ''ಸಂಗೀತ'' (ಹಿಂದಿ) ಮಾಸಿಕದಲ್ಲಿ ಪ್ರಕಟಪಡಿಸಿರುವುದು ನಿಜಕ್ಕೂ ಹೆಮ್ಮೆಯ ಸಂಗತಿಯಾಗಿದೆ.

**ವೈಶಿಷ್ಟ್ಯ :**

ಹನ್ನೊಂದು ಜನ ವೇದ ಗಾಯಕರು ಹಾರ್ಮೋನಿಯಂ, ತಬಲಾ, ಸಿತಾರ್, ಬುಲ್‌ಬುಲ್ ತರಂಗ್ - ಮುಂತಾದ ವಾದ್ಯಗಳ ಸಹಾಯದಿಂದ ಸುಮಾರು ಮೂರು ಗಂಟೆಗೂ ಅಧಿಕ ರುದ್ರವನ್ನು ಹಾಡುವುದು ಈ ಸಂಘದ ವೈಶಿಷ್ಟ್ಯ. ಅನೇಕ ಜನ ಭಕ್ತಾದಿಗಳು ದೇವಾಲಯಗಳಲ್ಲಿ, ಮಠಗಳಲ್ಲಿ, ಮನೆಮನೆಗಳಲ್ಲಿ ಈ ಸಂಘದವರನ್ನು ಆಮಂತ್ರಿಸಿ ತಮ್ಮ ತಮ್ಮ ಇಷ್ಟದೇವರಿಗೆ ಸಂಗೀತ ಸಹಿತ ರುದ್ರಪೂಜೆಯನ್ನು ಮಾಡಿಸುತ್ತಾರೆ. ಪೂಜಾವೇಷದಲ್ಲಿ ಹನ್ನೊಂದು ಜನ ವೇದಗಾಯಕರು ವಾದ್ಯಸಮೇತವಾಗಿ ಪ್ರಸ್ತುತ ಪಡಿಸುವ ''ರುದ್ರ ಸಂಗೀತ'' ನಿಜಕ್ಕೂ ಕೇಳಿಯೇ ಆನಂದಿಸಬೇಕು. ರುದ್ರದ ಮಂತ್ರಗಳನ್ನು ಹತ್ತಾರುಜನರು ಒಂದೇ ವೇದಿಕೆಯ ಮೇಲೆ ಸಾಮೂಹಿಕವಾಗಿ ವಿವಿಧ ವಾದ್ಯಗಳೊಂದಿಗೆ ಹಾಡುವ ಈ ವಿಧಾನ ಆಧುನಿಕ ಸಂಗೀತ

ಕ್ಷೇತ್ರದಲ್ಲಿಯೇ ಒಂದು ಹೊಸ ಪ್ರಯೋಗವೆನ್ನಬೇಕು. ಈ ಮಾದರಿಯ ವೇದಗಾಯನ ಭಾರತದ ಯಾವ ಭಾಗದಲ್ಲೂ ನಮಗೆ ಕಾಣಸಿಗುವುದಿಲ್ಲ. ವೇದಮಂತ್ರಗಳನ್ನು ಹಾಡುವ ಸುಮಾರು ನೂರಕ್ಕೂ ಅಧಿಕ ವೈದಿಕರು ಒಂದೇ ಗ್ರಾಮದಲ್ಲಿ ದೊರೆಯುವುದು ಸೋಜಿಗವೂ ಮತ್ತು ಅಭಿಮಾನವೂ ಎನಿಸುತ್ತದೆ. ಆಧುನಿಕ ಕಾಲದಲ್ಲಿ ಪ್ರಖ್ಯಾತ ಸಂಗೀತಗಾರರ ಸಂಗೀತವನ್ನೇ ಕೇಳದ ಇಂದಿನ ಜನ ರುದ್ರಸಂಗೀತವನ್ನು ಮೂರು ತಾಸಿಗೂ ಮಿಕ್ಕಿದ ಕಾಲಾವಧಿಯಲ್ಲಿ ಮಂತ್ರಮುಗ್ಧರಾಗಿ ಕೇಳುತ್ತಿರುವುದು ಈ ಸಂಘದ ಇನ್ನೊಂದು ವೈಶಿಷ್ಟ್ಯವೆನ್ನಬೇಕು.

ಈ ಸಂಘದವರು ಹಣಕ್ಕಾಗಿ ಎಂದೂ ಕಾರ್ಯಕ್ರಮ ಮಾಡುವವರಲ್ಲ. ಸಂಪತ್ತಿಗಾಗಿ ಎಂದೂ ಕೈಚಾಚಿದವರಲ್ಲ. ಭಕ್ತಿಯಿಂದ ಬಳಿಗೆ ಬಂದು ನಿಷ್ಠೆಯಿಂದ ಪೂಜೆಮಾಡಿಸಿದವರಲ್ಲಿ ಕೊಟ್ಟಷ್ಟು ಹಣ ತೆಗೆದುಕೊಂಡು ಸಂತೃಪ್ತಿಯಿಂದ ಇರುವುದು ಈ ಸಂಘದ ಹೆಗ್ಗಳಿಕೆಯಾಗಿದೆ.

ಒಮ್ಮೆ ಒಬ್ಬ ಭಕ್ತರಿಂದ ಆಮಂತ್ರಣ ಸ್ವೀಕರಿಸಿ, ತಮ್ಮ ಆಮಂತ್ರಣ ಡೈರಿಯಲ್ಲಿ ಸಹಿ ಹಾಕಿದರೆ ಮುಗಿಯಿತು. ನಿಗದಿತ ಸಮಯಕ್ಕೆ, ನಿರ್ದಿಷ್ಟಪಡಿಸಿದ ದಿನಾಂಕದಂದು ಆ ಭಕ್ತನ ಮನೆಯಲ್ಲಿ ಹಾಜರಾಗಿ ಕಾರ್ಯಕ್ರಮ ನೀಡುತ್ತಾರೆ. ಒಮ್ಮೆ ಒಪ್ಪಿಕೊಂಡ ದಿನದಂದು, ಅದೇ ವೇಳೆಗೆ ಮೊದಲಿನ ಭಕ್ತರಿಗಿಂತ ಇಮ್ಮಡಿಯಾಗಿ ಹಣಕೊಡುತ್ತೇವೆಂದು ಆಮಿಷ ತೋರಿಸಿದರೂ ಅವರು ಕೊಟ್ಟ ವಚನವನ್ನು ಮೀರಿ ನಡೆಯುವವರಲ್ಲ. ಭಕ್ತನ ವಿನಂತಿಯ ಮೇರೆಗೆ ಒಂದೇ ದಿನದಲ್ಲಿ ಬೇರೆ ಬೇರೆ ವೇಳೆಯಲ್ಲಿ ಬೇರೆ ಬೇರೆ ಎರಡ್ಮೂರು ಊರಲ್ಲಿ ಕಾರ್ಯಕ್ರಮ ನೀಡಿದ್ದಾರೆ. ಆದರೆ ಮೊದಲು ಕೊಟ್ಟ ವೇಳೆಯನ್ನು ಎಂದೂ, ಯಾವ ಕಾಲಕ್ಕೂ ತಪ್ಪಿಸಿದವರಲ್ಲ. ಅಂತಹ ಯಾವುದೇ ಉದಾಹರಣೆ ಈ ಸಂಘದಲ್ಲಿಲ್ಲ.

**ಪರಂಪರೆ :**

ಶ್ರೀ ಮರಿದೇವ ದೇಶೀಕೇಂದ್ರ ಸ್ವಾಮಿಗಳಿಂದ ಸ್ಥಾಪನೆಗೊಂಡು ಶ್ರೀಶಿವಲಿಂಗಯ್ಯನವರ ನೇತೃತ್ವದಲ್ಲಿ ಆರಂಭಗೊಂಡ ಗೋರಟಾದ ''ಶ್ರೀ ಸಂಗೀತ ರುದ್ರಸಂಘ'' ಕ್ಕೆ ಸುಮಾರು ಮೂರು ತಲೆಮಾರುಗಳ ಪರಂಪರೆಯಿದೆ. ಶ್ರೀ ಶಿವಲಿಂಗಯ್ಯನವರ ನೇತೃತ್ವದಲ್ಲಿದ್ದ ಸಂಗೀತ ರುದ್ರಸಂಘ ಮೊದಲ ತಲೆಮಾರಾದರೆ, ಪ್ರಸ್ತುತ ಸಂಘದ ಅಧ್ಯಕ್ಷ ಶ್ರೀ ವಿರೂಪಾಕ್ಷಯ್ಯನವರ ನೇತೃತ್ವದ ಮತ್ತು ಅವರ ಮಕ್ಕಳ ವಯಸ್ಸಿನವರ ಸಮೂಹಕ್ಕೆ ಎರಡು ಮತ್ತು ಮೂರನೇ ತಲೆಮಾರೆಂದು ಹೇಳಬೇಕಾಗುತ್ತದೆ.

ಸಂಗೀತ ರುದ್ರಸಂಘ ಸ್ಥಾಪನೆಯಾದ ಹೊಸದರಲ್ಲಿ ವರ್ಷಕ್ಕೆ ಕೇವಲ ನಾಲ್ಕಾರು ಕಾರ್ಯಕ್ರಮಗಳು ಮಾತ್ರ ನಡೆಯುತ್ತಿದ್ದವು. ಈಗ ಒಂದು ವರ್ಷಕ್ಕೆ ಸರಾಸರಿ ೨೬೫ಕ್ಕೂ ಅಧಿಕ ಸಂಗೀತ ರುದ್ರ ಪೂಜಾ ಕಾರ್ಯಕ್ರಮಗಳು ನೆರವೇರುತ್ತಿರುವುದು ಸಂಘದ ವ್ಯಾಪಕ ಜನಪ್ರಿಯತೆಗೆ ಸಾಕ್ಷಿಯಾಗಿದೆ. ಈ ಯಶಸ್ಸಿಗೆ ಅವರ ಅಧ್ಯಕ್ಷರಾದ ಶ್ರೀ ವಿರೂಪಾಕ್ಷಯ್ಯನವರೇ ಕಾರಣರು.

ಅವರ ಅವಿರತ ಮತ್ತು ನಿಷ್ಠೆಯ ದುಡಿತದ ಫಲವಾಗಿ ಸಂಘ ಇಷ್ಟೊಂದು ಖ್ಯಾತಿಗೆ ಹೆಸರಾಗಿದೆ. ಅವರ ಈ ಕಾರ್ಯಕ್ಕೆ ಸಂಘದ ಸರ್ವ ವೈದಿಕ ಸದಸ್ಯರ ಸಂಪೂರ್ಣ ಬೆಂಬಲವೇ ಕಾರಣ.

ಈ ಸಂಘದಲ್ಲಿ ಆರಂಭದಿಂದ ಇಲ್ಲಿಯವರೆಗೆ ಸುಮಾರು ೮೦ ಕ್ಕೂ ಹೆಚ್ಚು ವೈದಿಕ ಸದಸ್ಯರಿದ್ದಾರೆ. ಒಂದೇ ಮನೆಯಲ್ಲಿ ತಂದೆ, ಚಿಕ್ಕಪ್ಪ, ದೊಡ್ಡವರು ಹಾಗೂ ಮಕ್ಕಳು ಹೀಗೆ ಸುಮಾರು ಒಂದು ಕುಟುಂಬದ ೮-೧೦ ಜನರು ಈ ಸಂಘದ ವೈದಿಕ ಸದಸ್ಯರಿದ್ದಾರೆ. ಒಬ್ಬ ಯುವಕ ಪ್ರಾಪ್ತವಯಸ್ಸಿಗೆ ಬಂದಾಗ ಅವನಿಗೆ ಸಂಗೀತ ರುದ್ರದ ತರಬೇತಿಯನ್ನು ನೀಡಲಾಗುತ್ತದೆ. ಶಾಲೆಯ ಶಿಕ್ಷಣದ ಜೊತೆಗೆ ಮಕ್ಕಳಿಗೆ ವೇದ, ಸಂಗೀತ, ರುದ್ರದ ಶಿಕ್ಷಣವನ್ನೂ ಮನೆಯಲ್ಲಿ ಖಾಸಗಿಯಾಗಿ ನೀಡಲಾಗುತ್ತಿದೆ. ಇಂತಹ ತರಬೇತಿ ಪಡೆದ ಯುವಕರು ಸಂಘದ ಎಲ್ಲ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಾರೆ.

ಸಂಘದಲ್ಲಿ ತಮ್ಮ ತಮ್ಮ ಬೇರೆ ಬೇರೆ ವೃತ್ತಿಯೊಂದಿಗೆ ಅವರು ಸಂಘದ ರುದ್ರಪೂಜಾ ಕಾರ್ಯಕ್ರಮದಲ್ಲಿ ಭಾಗವಹಿಸುತ್ತಾರೆ. ಈ ಸಂಘದಲ್ಲಿ ಕೃಷಿಕರು, ವ್ಯಾಪಾರಸ್ಥರು, ಕಾಲೇಜಿನ ಪ್ರಾಧ್ಯಾಪಕರು, ಮಾಜಿ ಹಾಗೂ ಹಾಲಿ ಸೈನಿಕರು, ಬ್ಯಾಂಕ್ ಉದ್ಯೋಗಿಗಳು, ಸಂಗೀತ ಕಲಾವಿದರು, ಶಾಲಾ-ಕಾಲೇಜು ಶಿಕ್ಷಣ ಪಡೆಯುತ್ತಿರುವ ವಿದ್ಯಾರ್ಥಿಗಳು ಈ ಸಂಘದ ವೈದಿಕ ಸದಸ್ಯರಾಗಿದ್ದಾರೆ. ಅವರೆಲ್ಲರು ತಮ್ಮ ತಮ್ಮ ವೃತ್ತಿಯೊಂದಿಗೆ ಬಿಡುವಿನ ವೇಳೆಯಲ್ಲಿ ಮತ್ತು ಮಹತ್ವದ ಕಾರ್ಯಕ್ರಮಗಳಲ್ಲಿ ಬಿಡುವು ಪಡೆದುಕೊಂಡು ಸಂಘದ ರುದ್ರಪೂಜಾ ಕಾರ್ಯಕ್ರಮದಲ್ಲಿ ಭಾಗವಹಿಸುತ್ತಾರೆ. ಕುಲುಷಿತ ವಾತಾವರಣವೇ ಹೆಚ್ಚಾಗಿ ತುಂಬಿರುವ ಇಂದಿನ ದಿನಗಳಲ್ಲಿ ಯುವಕರು ತಮ್ಮ ಶಾಲಾ ಶಿಕ್ಷಣದ ಜೊತೆ ಜೊತೆಯಲ್ಲಿಯೇ ಇಂಥ ಧಾರ್ಮಿಕ ಸಂಸ್ಕಾರಯುಕ್ತವಾಗಿರುವುದು ಇಂದಿನ ದಿನಗಳಲ್ಲಿ ಇದೊಂದು ಮಾದರಿ ಸಂಘ ಹಾಗೂ ಒಂದು ಮಾದರಿ ಸಮಾಜವೆಂದು ಹೇಳಬೇಕು. ಶಾಲಾ ಶಿಕ್ಷಣದ ಜೊತೆ ಜೊತೆಯಲ್ಲಿ ಎಲ್ಲ ಯುವಕರಿಗೆ ಪೂಜೆ, ಧರ್ಮಾಚರಣೆಗಳಂತಹ ಧಾರ್ಮಿಕ ಸಂಸ್ಕಾರವನ್ನು ನೀಡುತ್ತಿರುವ ಶ್ರೀವಿರೂಪಾಕ್ಷಯ್ಯನವರ ಕಾರ್ಯ ಶ್ಲಾಘನೀಯವಾಗಿದೆ.

ಹಿಂದೆ ಈ ಗ್ರಾಮದಲ್ಲಿ ಇತ್ತೆಂದು ಶಾಸನವಲ್ಲಿ ಹೇಳಲಾದ "ಸಂಗೀತ ಸಹಿತ ರುದ್ರ ಪೂಜಾ" ಪರಂಪರೆ ಶಾಶ್ವತವಾಗಿ ಉಳಿಯಲೆಂಬ ಉದ್ದೇಶದಿಂದ ಶ್ರೀ ವಿರೂಪಾಕ್ಷಯ್ಯನವರು ವರ್ಷದಿಂದ ವರ್ಷಕ್ಕೆ ಅನೇಕ ಯುವಕರಿಗೆ ಸಂಗೀತ ರುದ್ರ ಶಿಕ್ಷಣದಲ್ಲಿ ತರಬೇತಿ ನೀಡುತ್ತಿರುವುದು ಅಭಿಮಾನದ ಸಂಗತಿಯಾಗಿದೆ.

**ರುದ್ರವಿಕ್ರಮ :**

ರುದ್ರಾಭಿಷೇಕದಲ್ಲಿ ಶ್ರೀರುದ್ರ, ಲಘು ರುದ್ರ, ಏಕಾದಶ ರುದ್ರ, ಮಹಾ ರುದ್ರ ಮತ್ತು ಅತಿ ರುದ್ರಗಳೆಂಬ ಐದು ಪ್ರಕಾರದ ರುದ್ರ ಪೂಜಾ ಕ್ರಮಗಳುಂಟು. ಒಬ್ಬ ವೈದಿಕರು ಒಂದಾವರ್ತನ

ರುದ್ರ ಪಠಣಮಾಡಿ ಪೂಜೆಮಾಡುವುದಕ್ಕೆ ಶ್ರೀರುದ್ರವೆಂದು, ಹನ್ನೊಂದು ಜನ ವೈದಿಕರು ಹನ್ನೊಂದು ಸಾರಿ ರುದ್ರಪಠಣಮಾಡಿ ಪೂಜೆಸಲ್ಲಿಸುವುದಕ್ಕೆ ಏಕಾದಶ ರುದ್ರವೆಂದು, ಹನ್ನೊಂದು ಜನ ವೈದಿಕರು ೧೨೧ ಸಾರಿ ರುದ್ರಾವರ್ತನ ಮಾಡಿ ಪೂಜೆ ಮಾಡುವುದಕ್ಕೆ ಲಘುರುದ್ರವೆಂದು, ಹನ್ನೊಂದು ವೈದಿಕರು ೧೩೩೧ ಸಾರಿ ರುದ್ರಾವರ್ತನ ಮಾಡಿ ಪೂಜೆ ಮಾಡುವುದಕ್ಕೆ ಮಹಾರುದ್ರವೆಂದು ಮತ್ತು ಹನ್ನೊಂದು ಜನ ವೈದಿಕರು ೧೪೬೪ ಸಾರಿ ರುದ್ರಾವರ್ತನ ಮಾಡಿ ಪೂಜೆಮಾಡುವುದಕ್ಕೆ ಅತಿರುದ್ರವೆಂದು ಕರೆಯುವರು.

ಈ ಸಂಘ ಕಳೆದ ಐದು ದಶಕಗಳಲ್ಲಿ ಸಹಸ್ರಸಂಖ್ಯೆಯಲ್ಲಿ 'ಶ್ರೀರುದ್ರ' ವನ್ನು, ನೂರಾರು ಸಂಖ್ಯೆಯಲ್ಲಿ 'ಏಕಾದಶ ರುದ್ರ'ವನ್ನು, ಹತ್ತಾರು ಸಾರಿ 'ಲಘುರುದ್ರ' ಮತ್ತು 'ಮಹಾರುದ್ರ' ಪೂಜೆಯನ್ನು ಮಾಡಿರುವುದು ಇದರ ಅಗ್ಗಳಿಕೆ ಎನ್ನಬೇಕು. ಆದರೆ 'ಅತಿರುದ್ರ' ಪೂಜೆಯನ್ನು ಈ ಸಂಘ ಇದುವರೆಗೆ ನಡೆಸಿಲ್ಲ. ಇದು ತುಂಬ ಖರ್ಚಿನ ಹಾಗೂ ದೀರ್ಘಾವಧಿಯ ಕಾರ್ಯ. ವಿರೂಪಾಕ್ಷಯ್ಯನವರು ಒಂದೇ ಸ್ಥಳದಲ್ಲಿ ಅತಿರುದ್ರ ಪೂಜಾ ಕಾರ್ಯಕ್ರಮ ಮಾಡದಿದ್ದರೂ ಅವರು ತಮ್ಮ ಸಂಗಡಿಗರೊಂದಿಗೆ ಇದುವರೆಗೆ ಸುಮಾರು ನಾಲ್ಕು ಅತಿರುದ್ರ ಪೂಜೆಯ ಕಾರ್ಯ ಮಾಡಿದ್ದಾರೆ. ಅಂದರೆ ವಿರೂಪಾಕ್ಷಯ್ಯನವರು ಕಳೆದ ಐವತ್ತು ವರ್ಷಗಳಲ್ಲಿ ಸುಮಾರು ೬,೪೪,೬೦೪ ಸಂಖ್ಯೆಯಲ್ಲಿ ರುದ್ರಾವರ್ತನಗಳನ್ನು ಮಾಡಿರುವುದು ಒಂದು ದಾಖಲೆಯೆಂದೇ ಹೇಳಬೇಕು.

ಬಹುಶಃ ಇಷ್ಟೊಂದು ಸಂಖ್ಯೆಯಲ್ಲಿ ರುದ್ರಪೂಜೆ ಮಾಡಿದ ವೈದಿಕರು ಭಾರತದಲ್ಲಿಯೇ ವಿರಳವೆಂದು ಹೇಳಬಹುದು. ಈ ಪೂಜಾಕಾರ್ಯಕ್ರಮಗಳು ಇನ್ನೂ ಎಡೆಬಿಡದೇ ಮುನ್ನಡೆದಿರುವುದು ಸಂಘದ ಜನಪ್ರಿಯತೆಗೆ ಸಾಕ್ಷಿಯಾಗಿದೆ.

ಶ್ರೀ ವಿರೂಪಾಕ್ಷಯ್ಯನವರು ಇದುವರೆಗೆ ಗೋರಟಾ ಗ್ರಾಮದ ಶ್ರೀ ಮಾದಪ್ಪ ಡುಮಣೆ, ದೇವಣಿಯ ಶ್ರೀ ಕಾಂತಪ್ಪ ಅಂಬಲಗೆ, ಖಟಕ ಚಿಂಚೋಳಿಯ ಶ್ರೀ ಗಳಂಗಳಪ್ಪಾ ಕಡಿಗಂಚೆ, ಹೂಲಿಯ ಶ್ರೀ ಸಾಂಬಯ್ಯನವರ ಮಠದಲ್ಲಿ, ಚಾಂಗತೀರದ ಸುಕ್ಷೇತ್ರ, ಶ್ರೀ ವೀರಭದ್ರೇಶ್ವರ ದೇವಸ್ಥಾನದಲ್ಲಿ ಮತ್ತು ಬೀದರದ ಶ್ರೀ ಪಾಪನಾಶ ಲಿಂಗೇಶ್ವರ ದೇವಸ್ಥಾನಗಳಲ್ಲಿ 'ಮಹಾರುದ್ರ' ಪೂಜೆಮಾಡಿದ್ದಾರೆ.

'ಅತಿರುದ್ರ' ಪೂಜೆಮಾಡಬೇಕೆಂಬುದು ವಿರೂಪಾಕ್ಷಯ್ಯನವರ ಮಹಾನ್ ಸಂಕಲ್ಪವಾಗಿದೆ. ''ಸಂಚಾರಿ ಸಂಗೀತ ರುದ್ರ ಪೂಜೆ'' ಕಾರ್ಯಕ್ರಮ ಮಾಡಬೇಕೆಂಬುದು ಅವರ ಬಹುದಿನದ ಬಯಕೆ. ತಮ್ಮ ಸಂಗಡಿಗರೊಂದಿಗೆ ೧೨೧ ಹಳ್ಳಿಗಳಲ್ಲಿ 'ಸಂಚಾರಿ ಸಂಗೀತ ರುದ್ರ ಪೂಜೆ' ಮಾಡುತ್ತ ಗೋರಟಾ ಗ್ರಾಮದಿಂದ ಕಾಶಿಕ್ಷೇತ್ರಕ್ಕೆ ತೆರಳಿ ಕಾಶಿಯ ಶ್ರೀವಿಶ್ವನಾಥಲಿಂಗಕ್ಕೆ ೧೨೧ನೇ ರುದ್ರಪೂಜೆ ಸಲ್ಲಿಸಬೇಕೆಂಬ ಗುರಿ ಅವರು ಇಟ್ಟುಕೊಂಡಿದ್ದಾರೆ.

**ಸಂಘದ ಸಂಸ್ಥಾಪಕರು :**

ಸಂಗೀತ ರುದ್ರ ಸಂಘದ ಸಂಸ್ಥಾಪಕರು ಷ.ಬ್ರ.ಶ್ರೀ.ಲಿಂ. ರಾಚೋಟಿ ಶಿವಾಚಾರ್ಯ ಮಹಾಸ್ವಾಮಿಗಳು. ಅವರು ಮೇಹಕರ- ಡೋಣ ಗೋಪುರ ಮಠದ ಅಧಿಪತಿಗಳು. ಪೂಜ್ಯ ಶ್ರೀ ಮರಿದೇವ ದೇಶಿಕೇಂದ್ರ ಸ್ವಾಮಿಗಳು ಅವರ ಗುರುಗಳು. ಸಂಗೀತ ರುದ್ರದ ಸ್ಥಾಪನೆಗೆ ಮೂಲಪ್ರೇರಣೆ ನೀಡಿದವರು. ಅವರು ಪ್ರೇರಣೆ ನೀಡಿದ ರುದ್ರಸಂಘಕ್ಕೆಸಂಗೀತ ಕಳೆಯನ್ನು ಕೊಟ್ಟು 'ಸಂಗೀತ ರುದ್ರ ಸಂಘ' ವನ್ನು ಸ್ಥಾಪಿಸಿದರು. ಅವರು ಸಂಸ್ಥಾಪಿಸಿದ ಪ್ರಸ್ತುತ ಗೋರಟಾದ 'ಶ್ರೀ ಸಂಗೀತ ರುದ್ರ ಸಂಘ' ಇಂದು ನಾಡಿನಾದ್ಯಂತ ಹೆಸರು ಪಡೆದಿದೆ.

ಷ.ಬ್ರ.ಲಿಂ. ಶ್ರೀ ರಾಚೋಟಿ ಶಿವಾಚಾರ್ಯ ಜನ್ಮಭೂಮಿ ಗೋರಟಾ ಗ್ರಾಮ. ಅವರ ಪೂರ್ವಾಶ್ರಮದ ಹೆಸರು ಶ್ರೀ ಪ್ರಭುದೇವರು. ಅವರು ಬಾಲಯೋಗಿಗಳಾಗಿದ್ದರು. ಅವರು ತೇಜಃಪುಂಜವಾದ ಪ್ರತಿಭೆಯನ್ನು ಕಂಡು ಮೇಹಕರ ಮಠದ ಲಿಂ. ಶ್ರೀ ಮರಿದೇವ ದೇಶಿಕೇಂದ್ರಸ್ವಾಮಿಗಳು ಪ್ರಭುದೇವರನ್ನು ತಮ್ಮ ಮಠದ ಉತ್ತರಾಧಿಕಾರಿಗಳನ್ನಾಗಿ ಸ್ವೀಕರಿಸಿ, ಮಠದ ಅಧಿಕಾರ ನೀಡಿ ''ಶ್ರೀ ರಾಚೋಟಿ ಶಿವಾಚಾರ್ಯ''ರೆಂದು ಅಭಿಧಾನವನ್ನಿತ್ತರು.

ಶ್ರೀ ರಾಚೋಟಿ ಶಿವಾಚಾರ್ಯರು ತಮ್ಮ ಹದಿನೆಂಟನೇ ವಯಸ್ಸಿನಲ್ಲಿ ಮೇಹಕರ ಮಠದ ಅಧಿಕಾರವನ್ನು ವಹಿಸಿಕೊಂಡರು. ವಹಿಸಿಕೊಂಡ ಅಲ್ಪಾವಧಿಯಲ್ಲಿಯೇ ಅನೇಕ ವಿಧಾಯಕ ಕೆಲಸ ಕಾರ್ಯಗಳನ್ನು ಮಾಡಿದರು. ಅವರು ಮಾಡಿದ ಮಹತ್ವಪೂರ್ಣ ಕಾರ್ಯಗಳಲ್ಲಿ ಮೇಹಕರ ಮಠದ ಜೀರ್ಣೋದ್ಧಾರ, ಜಪಯಜ್ಞ, ಗ್ರಂಥ ಪ್ರಕಾಶನ, ತಡೋಳಾದಲ್ಲಿ ಗುರುಕುಲಾಶ್ರಮ ಸ್ಥಾಪನೆ, ಶ್ರೀ ವಿರೂಪಾಕ್ಷ ಲಿಂಗೇಶ್ವರರ ಕರ್ತೃಗದ್ದುಗೆಗೆ ನಿತ್ಯನಿರಂತರ ರುದ್ರಾಭಿಷೇಕ ಮತ್ತು ನಂದಾದೀಪ, ವಿರೂಪಾಕ್ಷಯ್ಯನವರಿಗೆ ಉಚ್ಚಮಟ್ಟದ ಸಂಗೀತ ಶಿಕ್ಷಣ ಕಲಿಸಲು ವ್ಯವಸ್ಥೆ ಮಾಡಿದ್ದು, ಅವರಿಂದ ರುದ್ರಕ್ಕೆ ಸಂಗೀತ ಸಂಯೋಜನೆ ಮಾಡಿಸಿದ್ದು, ಶ್ರೀ ಸಂಗೀತ ರುದ್ರ ಸಂಘದ ಸ್ಥಾಪನೆ ಮುಂತಾದವು ಉಲ್ಲೇಖನೀಯವಾಗಿದೆ.

ಶ್ರೀ ರಾಚೋಟಿ ಶಿವಾಚಾರ್ಯರು ಈ ಶತಮಾನದ ಮಹಾನ್‌ಯೋಗಿಪುಂಗವರು. ಅವರು ಅದಮ್ಯ ಚೇತನದ ಅಪರಾವತಾರಿಗಳು. ಪ್ರಸನ್ನಮುಖಮುದ್ರೆ, ಪೂಜೆಯಲ್ಲಿ ಕುಳಿತರೆ ಸಾಕ್ಷಾತ್ ಶಿವನ ಪ್ರತಿರೂಪ, ಶಿವನೇ ಗುರುರೂಪ ತಾಳಿ ಧರೆಗೆ ಬಂದಂತೆ ಅವರು ಶಿವಸ್ವರೂಪಿಗಳಾಗಿದ್ದರು. ನಡೆಯಲ್ಲಿ ನುಡಿಯಲ್ಲಿ ಅವರದು ಏಕತಾನತೆ. ಪೂಜೆಯಲ್ಲಿ ಕುಳಿತರೆ ಲಿಂಗವೇ ತಾವಾಗುತ್ತಿದ್ದರು. ಅವರ ಹೃದಯ ಅತ್ಯಂತ ಕೋಮಲ. ಅವರ ಮನಸ್ಸು ಬಹುವಿಶಾಲ. ಆಡಂಬರದ ಬದುಕು ಅವರಿಂದ ಬಹುದೂರ. ಸಾದಾ-ಸರಳತೆ ತೀರ ಹತ್ತಿರ. ಮಕ್ಕಳಿಂದ ಮುದುಕರ ವರೆಗೆ, ಕಡುಬಡವರಿಂದ ಕುಬೇರನ ವರೆಗೆ ಅವರದು ಏಕಭಾವವಾಗಿತ್ತು. ಎಂದೂ, ಯಾವ ಕಾರಣಕ್ಕೂ, ಯಾರ ಮನಸ್ಸನ್ನೂ ನೋಯಿಸದ ಆತ್ಮ ಅವರದಾಗಿತ್ತು. ಅಂತೆಯೇ ಅವರು ಮಹಾತ್ಮರಾಗಿ ತೋರಿದರು.

ಶ್ರೀ ರಾಚೋಟಿ ಶಿವಾಚಾರ್ಯರು ತಮ್ಮ ಜೀವಿತದ ಕೊನೆದಿನಗಳಲ್ಲಿ ತಾವೇ ನಿರ್ಮಿಸಿದ ತಡೋಳಾದ ತಮ್ಮ ಗುರುಕುಲಾಶ್ರಮದಲ್ಲಿ ಶ್ರಾವಣಮಾಸದಲ್ಲಿ ಶಿವಪೂಜಾನುಷ್ಠಾನದಲ್ಲಿ ನಿರತರಾಗಿರುವಾಗಲೇ ಭಗವಂತನ ಸಾನಿಧ್ಯ ಸೇರಿದರು. ಅವರು ತೋರಿದ ದಾರಿ ನಮಗೆ ಹೆದ್ದಾರಿ. ಅವರು ಹಾಕಿಕೊಟ್ಟ ಮಾರ್ಗ ನಮಗೆ ಸನ್ಮಾರ್ಗ. ಶ್ರೀ ರಾಚೋಟಿ ಶಿವಾಚಾರ್ಯರ ಹೆಸರಿನಲ್ಲಿ ಒಂದು ''ಗ್ರಂಥಾಲಯ'' ಮತ್ತು ಲಿಂ.ಶ್ರೀ ಮರಿದೇವ ದೇಶೀಕೇಂದ್ರ ಸ್ವಾಮಿಗಳ ಹೆಸರಿನಲ್ಲಿ ''ವೇದ ಪಾಠಶಾಲೆ'' ಸ್ಥಾಪಿಸುವುದು ಸಂಗೀತ ರುದ್ರಸಂಘದ ಯೋಜನೆಗಳಾಗಿವೆ.

**ಅಧ್ಯಕ್ಷರು :**

ಸಂಗೀತ ರುದ್ರ ಸಂಘದ ಅಧ್ಯಕ್ಷರು ಶ್ರೀ ವಿರೂಪಾಕ್ಷಯ್ಯನವರು. ಅವರ ಜನ್ಮಸ್ಥಾನ ಗೋರಟಾ (ಬಿ) ಗ್ರಾಮ. ಅವರದು ಸುಸಂಸ್ಕೃತ ವೀರಮಾಹೇಶ್ವರ ಮನೆತನ. ಶ್ರೀವಿರೂಪಾಕ್ಷಯ್ಯನವರು ಎಳವೆಯಿಂದಲೇ ಸಂಗೀತ-ನಾಟಕಗಳ ಗೀಳು ಅಂಟಿಸಿಕೊಂಡವರು. ಅವರ ಸಂಗೀತದ ಬಾಲಪ್ರತಿಭೆಯನ್ನು ಕಂಡು ಅವರ ಅಣ್ಣ ಲಿಂ. ಶ್ರೀ ರಾಚೋಟಿಯವರು (ದೊಡ್ಡಪ್ಪಳ ಮಗ) ಅವರಿಗೆ ಸಂಗೀತ ವಿದ್ಯೆ ನೀಡಿದರು. ಶ್ರೀ ವಿರೂಪಾಕ್ಷಯ್ಯನವರ ಸಂಗೀತ ಪ್ರತಿಭೆ ಕಂಡು ಅದನ್ನು ಸದುಪಯೋಗಪಡಿಸಿಕೊಳ್ಳಬೇಕೆಂಬ ಉದ್ದೇಶದಿಂದ ಶ್ರೀವಿರೂಪಾಕ್ಷಯ್ಯನವರ ಮನೆಯ ಗುರುಗಳಾದ ಶ್ರೀ ರಾಚೋಟಿ ಶಿವಾಚಾರ್ಯರು ಶ್ರೀವಿರೂಪಾಕ್ಷಯ್ಯನವರನ್ನು ಸಂಗೀತದಲ್ಲಿ ಉನ್ನತವ್ಯಾಸಂಗ ಕೈಗೊಳ್ಳಲು ಹೈದರಾಬಾದಕ್ಕೆ ಕಳಿಸಿಕೊಟ್ಟರು. ಶ್ರೀವಿರೂಪಾಕ್ಷಯ್ಯನವರು ಸುಮಾರು ಆರುವರ್ಷ ಹೈದ್ರಾಬಾದಿನಲ್ಲಿ ಪಂ. ನಾಗೇಶ ದಿವಾಣರಲ್ಲಿ ಸಿತಾರ್ ಅಭ್ಯಾಸಮಾಡಿ ಉಚ್ಚಪದವಿ ಪಡೆದರು.

ಶ್ರೀ ರಾಚೋಟಿ ಶಿವಚಾರ್ಯರ ಸತ್ಯ ಸಂಕಲ್ಪದಂತೆ ಶ್ರೀ ವಿರೂಪಾಕ್ಷಯ್ಯನವರು ಉನ್ನತ ಸಂಗೀತ ಪದವಿ ಪಡೆದು ರುದ್ರಕ್ಕೆ ಸಂಗೀತ ಸಂಯೋಜಿಸಿದರು. ಇಂದಿನ ಬಹುಜನ ಕಲಾವಿದರು ಸಂಗೀತ ಕಲಿತು ರಂಗಭೂಮಿ, ಚಿತ್ರಪ್ರಪಂಚ, ಆಕಾಶವಾಣಿ, ದೂರದರ್ಶನ, ಸರಕಾರಿ ನೌಕರಿಗೆ ಸೇರುವುದು ಸರ್ವೇಸಾಮಾನ್ಯ. ಆದರೆ ಶ್ರೀವಿರೂಪಾಕ್ಷಯ್ಯನವರು ಸಂಗೀತದಲ್ಲಿ 'ಸಂಗೀತ ಅಲಂಕಾರ' (ಸಂಗೀತ ಎಂ.ಎ. ಪದವಿಗೆ ತತ್ಸಮಾನವಾದ ಪದವಿ) ಪದವಿಪಡೆದಿದ್ದರೂ ಧರ್ಮದ ಜಾಗೃತಿಗಾಗಿ, ಗುರುವಿನ ಸತ್ಯಸಂಕಲ್ಪದ ಪೂರೈಕೆಗಾಗಿ ತಮ್ಮ ಸಂಗೀತ ವಿದ್ಯೆ ಹಾಗೂ ತಮ್ಮ ಜೀವನವನ್ನೇ ಮುಡುಪಾಗಿಟ್ಟದ್ದು ಒಂದು ಆದರ್ಶವೆಂದೇ ಹೇಳಬೇಕು. ತನಗೆ ಜೀವನ ಮಾರ್ಗತೋರಿದ ಆಧ್ಯಾತ್ಮಿಕಗುರುವಿನ ಸಂಕಲ್ಪದ ಈಡೇರಿಕೆಗಾಗಿ ತನಗೆ ದೊರೆತ ನೌಕರಿಗೆ ವಿದಾಯ ಹೇಳುವ ಕಲಾವಿದರು ಎಷ್ಟಿದ್ದಾರೆ ಈ ಲೋಕದಲ್ಲಿ ? ಇದಕ್ಕೊಂದು ಅಪವಾದ ಶ್ರೀ ವಿರೂಪಾಕ್ಷಯ್ಯನವರು.

ಶ್ರೀ ವಿರೂಪಾಕ್ಷಯ್ಯನವರು ತಮ್ಮ ಎಳೆವಯಸ್ಸಿನಲ್ಲಿ ಗೋರಟಾದಲ್ಲಿ ಜರುಗಿದ ರಝಾಕಾರ ಚಳವಳಿ ಕುರಿತು 'ಭುಲಾಯಿ ಪದ'ವೆಂಬ ಪುಸ್ತಕ ಬರೆದು ಅವರೊಬ್ಬ ಸಾಹಿತಿ

ಪಡಿಸಿಕೊಂಡಿದ್ದಾರೆ. ಅವರು ರುದ್ರದ ಅನುವಾಕಗಳಿಗೆ ಸ್ವರಸಂಯೋಜಿಸಿದ ಅನೇಕ ಸ್ವರಲಿಪಿ ಚೀಜ್‌ಗಳು ಉತ್ತರ ಪ್ರದೇಶದ ಹಾಥರಸದ ಪ್ರತಿಷ್ಠಿತ 'ಸಂಗೀತ' ಮಾಸಿಕ (ಹಿಂದಿ) ಅನೇಕ ಪಂಚಿಕೆಗಳಲ್ಲಿ ಪ್ರಕಟಗೊಂಡಿವೆ.

ವೇದಮಂತ್ರಗಳಿಗೆ ಸ್ವರಸಂಯೋಜನೆ, ಹಾಡುವ ವಿನೂತನ ಪದ್ಧತಿಯನ್ನು ಹುಟ್ಟುಹಾಕಿದ ಶ್ರೀವಿರೂಪಾಕ್ಷಯ್ಯನವರ ಈ ಕಾರ್ಯವನ್ನು ಪ್ರಶಂಸಿಸಿ 'ಸಂಗೀತ' ಕಾರ್ಯಾಲಯ ಅವರಿಗೆ ಪ್ರಶಸ್ತಿ ನೀಡಿ ಗೌರವಿಸಿದೆ. ತಮ್ಮ ಬದುಕಿನ ಸುದೀರ್ಘ ಸಂಗೀತ ಕ್ಷೇತ್ರದ ಸೇವೆಯನ್ನು ಕಂಡು ಕರ್ನಾಟಕ ಸರಕಾರ ಶ್ರೀವಿರೂಪಾಕ್ಷಯ್ಯನವರಿಗೆ 'ಗೌರವ ಮಾಶಾಸನ' ನೀಡಿ ಗೌರವಿಸಿದೆ. ಶ್ರೀ ವಿರೂಪಾಕ್ಷಯ್ಯನವರಿಗೆ ಅನೇಕ ಪ್ರಶಸ್ತಿ ಪದವಿಗಳೂ ಬಂದಿವೆ. 'ವೇದ ಸಂಗೀತ ಗಾಯಕ', 'ವೇದ ಸಂಗೀತ ರತ್ನ' ಮುಂತಾದವು ಉಲ್ಲೇಖನೀಯ. ವಿಖ್ಯಾತ ಸಂಗೀತಗಾರರಾದ ಪಂ. ಮಲ್ಲಿಕಾರ್ಜುನ ಮನಸೂರ, ಪಂ. ಬಸವರಾಜ ರಾಜಗುರು ಮೊದಲಾದ ಸಂಗೀತ ದಿಗ್ಗಜರು ಶ್ರೀವಿರೂಪಾಕ್ಷಯ್ಯನವರ 'ವೇದ ಸಂಗೀತ' ಕೇಳಿ ಮನಸಾರೆ ಮೆಚ್ಚಿ ಪ್ರಶಸ್ತಿ ನೀಡಿ ಗೌರವಿಸಿದ್ದಾರೆ.

## ಉಪಾಧ್ಯಕ್ಷರು

ಅಧ್ಯಕ್ಷರ ಹೆಸರಿನ ಮತ್ತೊಬ್ಬ ಶ್ರೀ ವಿರೂಪಾಕ್ಷಯ್ಯನವರು ಈ ಸಂಘದ ಉಪಾಧ್ಯಕ್ಷರು. ಇಬ್ಬರ ಹೆಸರು ಒಂದೇ, ಮನಸ್ಸು ಒಂದೇ, ಭಾವ ಒಂದೇ, ಆದರೆ ದೇಹ ಮಾತ್ರ ಬೇರೆ-ಬೇರೆ. ಅಧ್ಯಕ್ಷರ ಪ್ರತಿಕಾರ್ಯದಲ್ಲೂ ಉಪಾಧ್ಯಕ್ಷರ ಪಾತ್ರ ಹಿರಿದು. ಸಹಜ ಮಾತಿನಲ್ಲಿ ಅಧ್ಯಕ್ಷ ಶ್ರೀ ವಿರೂಪಾಕ್ಷಯ್ಯನವರನ್ನು ಕೆಳಗಲ್ಲಿ ಶ್ರೀ ವಿರೂಪಾಕ್ಷಯ್ಯನವರೆಂದು, ಉಪಾಧ್ಯಕ್ಷ ಶ್ರೀ ವಿರೂಪಾಕ್ಷಯ್ಯನವರನ್ನು ಮೇಲಗಲ್ಲಿ ವಿರೂಪಾಕ್ಷಯ್ಯನವರೆಂದು ಕರೆಯಲಾಗುತ್ತದೆ. ಮೇಲಗಲ್ಲಿ ವಿರೂಪಾಕ್ಷಯ್ಯನವರೂ ಸಹ ಹೈದ್ರಾಬಾದಿನಲ್ಲಿ ಪಿಟೀಲುವಾದನ ಕಲಿತು 'ಸಂಗೀತ ವಿಶಾರದ' ಪದವಿ ಪಡೆದಿದ್ದಾರೆ. ಅಧ್ಯಕ್ಷ ಶ್ರೀ ವಿರೂಪಾಕ್ಷಯ್ಯನವರಿಗೆ ಇವರು ಬಲಗೈಯಂತಿದ್ದಾರೆ.

ಉಪಾಧ್ಯಕ್ಷ ಶ್ರೀ ವಿರೂಪಾಕ್ಷಯ್ಯನವರು ಒಳ್ಳೆಯ ನಟ, ನಿರ್ದೇಶಕ, ನಾಟಕ ರಚನಾಕಾರರೂ ಹೌದು. ಅವರು ತಮ್ಮ ಎಳೆ ವಯಸ್ಸಿನಲ್ಲಿ ಅನೇಕ ನಾಟಕಗಳಲ್ಲಿ ನಟಿಸಿದ್ದಾರೆ. ಅನೇಕ ನಾಟಕಗಳಿಗೆ ನಿರ್ದೇಶನ ನೀಡಿ, ಸಂಗೀತಕ್ಕೆ ಮಾರ್ಗದರ್ಶನ ನೀಡಿದ್ದಾರೆ. ಅವರೊಬ್ಬ ಸಾಹಿತಿಯೂ ಅಹುದು. ಅವರೀಗ ಶ್ರೀ ರಾಜೋಟಿ ಶಿವಾಚಾರ್ಯರ ಲೀಲೆ ಕುರಿತು 'ಶ್ರೀರಾಜೋಟಿ ಶಿವಾಚಾರ್ಯ ಲೀಲಾಮೃತ' ಎಂಬ ಪುರಾಣ ರಚಿಸುತ್ತಿದ್ದಾರೆ. ಅವರು ಅನೇಕ ಪುರಾಣ ಪ್ರವಚನ ಉಪನ್ಯಾಸ ನೀಡಿ ಹೆಸರು ಮಾಡಿದ್ದಾರೆ. ಇವರ ಸಂಗೀತ ಸೇವೆಯನ್ನು ಗುರುತಿಸಿ ಕರ್ನಾಟಕ ಸರಕಾರ 'ಗೌರವ ಮಾಸಾಶನ' ನೀಡಿ ಗೌರವಿಸಿದೆ. ಇವರಿಗೆ 'ಸಂಗೀತ ರುದ್ರಕೋವಿದ', 'ಪುರಾಣರತ್ನ' 'ಪ್ರವಚನ ಪ್ರವೀಣ' ವೆಂಬ ಬಿರುದು ಸಂದಿವೆ.

## ರುದ್ರೇಶ್ವರ ಪ್ರಕಾಶನ

ಸಂಗೀತ ರುದ್ರ ಸಂಘದ ಅಂಗ ಸಂಸ್ಥೆಗಳಲ್ಲಿ 'ರುದ್ರೇಶ್ವರ ಪ್ರಕಾಶನವೂ' ಒಂದು. ಸಾಹಿತ್ಯ ಕೃತಿಗಳನ್ನು ಹೊರತರುವ ಉದ್ದೇಶದಿಂದ ಇದು ಹುಟ್ಟಿಕೊಂಡದ್ದು ೧೯೪೪ರ ರಲ್ಲಿ. ಹೈದ್ರಾಬಾದ್ ಕರ್ನಾಟಕ ಪ್ರದೇಶದಲ್ಲಿ ೧೯೪೪ರಲ್ಲಿ ಉರ್ದುಭಾಷೆಯ ಪ್ರಾಬಲ್ಯ ಅಧಿಕವಾಗಿದ್ದ ದಿನಗಳಲ್ಲಿ ಬೀದರ್ ಜಿಲ್ಲೆಯಲ್ಲಿ ಹುಟ್ಟಿಕೊಂಡ ಕನ್ನಡ ಪ್ರಕಾಶನಗಳಲ್ಲಿ ಇದು ಮೊದಲನೆಯ ಪ್ರಕಾಶನ ಸಂಸ್ಥೆ ಎಂದು ಹೇಳಬಹುದು.

ಈ ಸಂಸ್ಥೆ ಇದುವರೆಗೆ 'ಭುಲಾಯಿ ಪದ', 'ಹಿಂದೂಸ್ತಾನಿ ಸಂಗೀತಗಾರರು', 'ಸಂಗೀತ ಶ್ರೀರುದ್ರ' - ಮೂರು ಪುಸ್ತಕಗಳನ್ನು ಪ್ರಕಾಶನಗೊಳಿಸಿದೆ. ಮೊದಲ ಪುಸ್ತಕವನ್ನು ಅಧ್ಯಕ್ಷ ಹಾಗೂ ಉಪಾಧ್ಯಕ್ಷ ಶ್ರೀ ವಿರೂಪಾಕ್ಷಯ್ಯನವರು ಬರೆದರೆ ಎರಡು ಹಾಗೂ ಮೂರನೆಯ ಪುಸ್ತಕ ಅಧ್ಯಕ್ಷರ ಮಗ ಪ್ರೊ. ಸಿದ್ಧರಾಮಯ್ಯ ಗೋರಟಾ ಅವರು ರಚಿಸಿದ್ದಾರೆ. ಭುಲಾಯಿ ಪದ ಹಿಂದಿ ಭಾಷೆಯಲ್ಲೂ ಭಾಷಾಂತರಗೊಂಡಿದೆ. ಭುಲಾಯಿ ಪದ (ಕನ್ನಡ) ಈಗ ಐದು ಮುದ್ರಣಗಳನ್ನು ಕಂಡು ಈಗ ಆರನೇ ಮುದ್ರಣಹೊಂದುತ್ತಿದೆ. 'ಹಿಂದೂಸ್ತಾನಿ ಸಂಗೀತಗಾರರು' ಪ್ರಕಟಗೊಂಡ ಮೂರನೇ ವರ್ಷವೇ ಎರಡನೇ ಮುದ್ರಣಕ್ಕೆ ಸಿದ್ಧವಾಗಿದೆ. 'ಸಂಗೀತ ಶ್ರೀರುದ್ರ' ಇದೀಗ ಹಿಂದಿ ಭಾಷೆಗೂ ಭಾಷಾಂತರಗೊಳ್ಳುತ್ತಿದೆ.

ಸಂಘ ನಡೆಸಿದ ಮಹತ್ವಪೂರ್ಣಕಾರ್ಯಗಳಲ್ಲಿ ೧೯೫೪ ರಲ್ಲಿ ಗೋರಟಾದಲ್ಲಿ ಏರ್ಪಡಿಸಿದ ಹೈದ್ರಾಬಾದ್ ಪ್ರಾಂತೀಯ ಮಟ್ಟದ ಸಂಗೀತ ಸಮ್ಮೇಳನ. ಮೂರು ದಿನಗಳವರೆಗೆ ನಡೆದ ಈ ಸಮ್ಮೇಳನದಲ್ಲಿ ಹೈದ್ರಾಬಾದ್ ಹಾಗೂ ಹೈದ್ರಾಬಾದ್ ಕರ್ನಾಟಕ ಪ್ರಾಂತದ ಸುಮಾರು ೩೦ ಜನ ಸಂಗೀತಕಲಾವಿದರೂ ಭಾಗವಹಿಸಿದ್ದರು. ಹೈದ್ರಾಬಾದ್‌ನ ಪ್ರಸಿದ್ಧ ನೇತಾರ ವಿದ್ವಾನ್ ಪಂ. ನಾಗೇಶ ದಿವಾಣರೂ ಈ ಸಮ್ಮೇಳನದ ಅಧ್ಯಕ್ಷರಾಗಿದ್ದರು. ಈ ಸಮ್ಮೇಳನದ ಯಶಸ್ವಿಗೆ ಗೋರಟಾ ಗ್ರಾಮದ ಸಮಸ್ತ ನಾಕರಿಕರು ಹಾಗೂ ಉಭಯ ಶ್ರೀ ವಿರೂಪಾಕ್ಷಯ್ಯನವರು ಕಾರಣರು.

ಹಿಂದೆ ಗೋರಟಾ ಗ್ರಾಮದಲ್ಲಿ ಇತ್ತೆಂದು ಹೇಳಲಾದ ರುದ್ರೇಶ್ವರ ಮಂದಿರವನ್ನು ಪುನಾನಿರ್ಮಾಣ ಮಾಡಬೇಕೆಂಬುದು ಶ್ರೀ ವಿರೂಪಾಕ್ಷಯ್ಯನವರ ಸತ್ಯಸಂಕಲ್ಪವಾಗಿದೆ. ತಾವು ಸ್ವರಸಂಯೋಜಿಸಿದ 'ರುದ್ರ ಸಂಗೀತ'ವನ್ನು ಶಿಲೆಯಲ್ಲಿ ಕೆತ್ತಿಸಿ ಸಂಗೀತ ರುದ್ರೇಶ್ವರ ಮಂದಿರ ನಿರ್ಮಿಸುವುದು ಶ್ರೀವಿರೂಪಾಕ್ಷಯ್ಯನವರು ಹಾಕಿಕೊಂಡ ಒಂದು ಮಹತ್ತರ ಕಾರ್ಯವಾಗಿದೆ.

೧೯೯೨ಕ್ಕೆ ಸಂಘಕ್ಕೆ ೫೦ ವರ್ಷ ತುಂಬಿದುದರ ಪ್ರಯುಕ್ತ ಗೋರಟಾ ಗ್ರಾಮದಲ್ಲಿ ರಂಭಾಪುರಿ ಜಗದ್ಗುರು ಶ್ರೀ ವೀರಸೋಮೇಶ್ವರ ಭಗವತ್ಪಾದರ ಹಾಗೂ ಕಾಶಿ ಜಗದ್ಗುರು ಡಾ. ಚಂದ್ರಶೇಖರ ಶಿವಾಚಾರ್ಯ ಭಗವತ್ಪಾದರ ದಿವ್ಯನೇತೃತ್ವದಲ್ಲಿ ೧೯೯೨ರ ಮೇ ೮ ಮತ್ತು ೯

ರಂದು ಸಂಘದ ಸುವರ್ಣಮಹೋತ್ಸವ ಕಾರ್ಯಕ್ರಮ ವಿಜೃಂಭಣೆಯಿಂದ ಜರುಗಿತು. ಈ ಸಂದರ್ಭದಲ್ಲಿ 'ಸಂಗೀತ ಶ್ರೀ ರುದ್ರ' ಕ್ಯಾಸೆಟ್ ತಯಾರಿಸಿ ಬಿಡುಗಡೆ ಮಾಡಲಾಗಿದೆ.

**ಉಪಸಂಹಾರ :**

ಗೋರಟಾದ 'ಶ್ರೀ ಸಂಗೀತ ರುದ್ರಸಂಘ' ಇದುವರೆಗೆ ಕರ್ನಾಟಕ, ಆಂಧ್ರ, ಮಹಾರಾಷ್ಟ್ರದಲ್ಲಿ ವ್ಯಾಪಕ ಪ್ರಚಾರ ಪಡೆದಿದೆ. ಇಷ್ಟೆಲ್ಲ ಪ್ರಚಾರ ಪಡೆದಿದ್ದರೂ ಸಹ ಅಧ್ಯಕ್ಷ ಶ್ರೀ ವಿರೂಪಾಕ್ಷಯ್ಯನವರು ಎಂದಿನ ತಮ್ಮ ಸಾದಾ ಸರಳ ಜೀವನವನ್ನು ಜೀವಿಸುತ್ತಿರುವುದು ಅವರ ಸಜ್ಜನಿಕೆಗೆ ಸಾಕ್ಷಿಯಾಗಿದೆ. ೫೦ ವರ್ಷಗಳ ಸುದೀರ್ಘ ಕಾಲದಿಂದ ಮುನ್ನಡೆದುಕೊಂಡು ಬರುತ್ತಿರುವ ಮತ್ತು ಈ ಸಂಘ ಸ್ಥಾಪನೆಯಾದುದಕ್ಕೆ ಒಂದು ಐತಿಹಾಸಿಕ ಹಿನ್ನೆಲೆಯಿರುವ ಈ ಸಂಘಕ್ಕೆ ತನ್ನದೇ ಆದ ಒಂದು ಸ್ವಂತ ಕಟ್ಟಡವಾಗಲೀ, ಒಂದು ನಿವೇಶನವಾಗಲೀ, ಸಂಘಕ್ಕೆ ಒಂದು ವಾಹನವಾಗಲಿ ಇಲ್ಲದಿರುವುದು ಖೇದಕರ. ಸಂಘ ಮತ್ತು ಅದರ ಅಧ್ಯಕ್ಷರು ಕಡುಬಡವರು. ಅದರೆ ಅವರು ಬಡವರಾದರೆ ನಮ್ಮ ಸರಕಾರ, ಸಮಾಜವೂ ಬಡವೇ ? ಇಂತಹ ಒಂದು ಸನಾತನ ಪರಂಪರೆ ಹೊಂದಿದ ರಾಜ್ಯದ ಒಂದು ಸಾಂಸ್ಕೃತಿಕ ಸಂಘಕ್ಕೆ ಸಮಾಜ ಬಾಂಧವರು, ಸರಕಾರ ಒಂದು ನಿವೇಶನ ನೀಡಿ, ಅದಕ್ಕೊಂದು ಕಟ್ಟಡ ನಿರ್ಮಿಸಿಕೊಟ್ಟು, ಸಂಘದ ಕಾರ್ಯಕ್ರಮದ ಸಂಚಾರಕ್ಕೆ ಒಂದು ವಾಹನದ ವ್ಯವಸ್ಥೆ ಮಾಡಿಕೊಟ್ಟರೆ ನಮ್ಮ ಸನಾತನ ಸಂಪದ್ಭರಿತ ಸಂಸ್ಕೃತಿಯನ್ನು ನಾವೇ ಗೌರವಿಸಿದಂತಾಗುತ್ತದೆ. ಸಂಸ್ಕೃತಿಗೆ ನಮ್ಮ ನಿಜವಾದ ಗೌರವ ಸಲ್ಲಿಸಿದಂತಾಗುತ್ತದೆ. ತಮ್ಮ ಜೀವನ ಮುಕ್ಕಾಲುಭಾಗವನ್ನು ಸಂಗೀತ ಕ್ಷೇತ್ರದ ಅಭಿವೃದ್ಧಿ 'ಸಂಗೀತ ಶ್ರೀ ರುದ್ರಸಂಘ'ದ ಕಾರ್ಯ ವ್ಯಾಪ್ತಿಗೆ ಸವೆಸಿದ ಅಧ್ಯಕ್ಷ ವಿರೂಪಾಕ್ಷಯ್ಯನವರಿಗೆ ನಮ್ಮ ಕರ್ನಾಟಕ ಘನಸರಕಾರ 'ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ' ನೀಡಿ ಗೌರವಿಸಿದರೆ ನಿಜಕ್ಕೂ ಸರಕಾರ ಸಂಸ್ಕೃತಿಗೆ ಗೌರವ ಸಲ್ಲಿಸಿದಂತಾಗುತ್ತದೆ. ಇತ್ತ ಸರಕಾರ ಹಾಗೂ ಸಮಾಜ ಮತ್ತು ಸಂಗೀತ ನೃತ್ಯ ಅಕಾಡೆಮಿಗಳು ಗಮನ ಹರಿಸುವುದು ಅತ್ಯಗತ್ಯ.

■

# ಪ್ರಭುದೇವನ ಯೋಗಸಂಪತ್ತು

ಡಾ|| ಎನ್. ವಿ. ಕೊಪ್ಪಳ್

---

ಪರಮ ಪುರುಷಾರ್ಥವಾದ ಮೋಕ್ಷಕ್ಕಾಗಿ ಮಾನವನು ಶ್ರಮಿಸುವ ಮಾರ್ಗಗಳಲ್ಲಿ ಯೋಗಮಾರ್ಗದ ಘನತೆ ವೈಶಿಷ್ಟ್ಯಪೂರ್ಣವಾಗಿದೆ. ಅದ್ವೈತ ಸಿದ್ಧಾಂತದ ಪರಮಪ್ರಮಾಣಗಳಾದ ಉಪನಿಷತ್ತು, ಬ್ರಹ್ಮಸೂತ್ರ, ಭಗವದ್ಗೀತೆಗಳೆಂಬ ಪ್ರಸ್ಥಾನತ್ರಯಿಯಲ್ಲಿ ಭಗವದ್ಗೀತೆಯು ತನ್ನದೆ ಆದ ರೀತಿಯಲ್ಲಿ ಯೋಗವನ್ನು ಪ್ರತಿಪಾದಿಸುತ್ತದೆ. ಶಿವಾಗಮಗಳ ನಾಲ್ಕು ಅಧ್ಯಾಯಗಳಲ್ಲಿ 'ಯೋಗ ಪಾದವು' ಒಂದು ಅಧ್ಯಾಯವಾಗಿರುವುದು ಗಮನಾರ್ಹ. ಷಡ್ದರ್ಶನಗಳಲ್ಲಿ ಪತಂಜಲಿಕೃತ 'ಯೋಗಸೂತ್ರ'ವು ಯೋಗಕ್ಕಾಗಿಯೆ ಮೀಸಲಾದ ಸುಪ್ರಸಿದ್ಧ ಗ್ರಂಥ. ಕಾಲಕ್ರಮದಲ್ಲಿ ಮಂತ್ರ ಯೋಗ, ಲಯಯೋಗ, ಹಠಯೋಗ, ರಾಜಯೋಗ, ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗ ಮೊದಲಾದ ಯೋಗಪ್ರಭೇದಗಳು ತೋರಿ, ಯೋಗಸಾಧನೆಯು ಕಷ್ಟಸಾಧ್ಯವೆಂದೂ, ಈ ಸಾಧನೆಯು ತ್ಯಾಗಿ, ಸನ್ಯಾಸ ಮಾರ್ಗಿಗಳಿಗೆ ಸಾಧ್ಯ ಆದರೆ ಸಂಸಾರಿಗಳಿಗೆ ತೀರ ದೂರ ಎಂಬ ಶ್ರದ್ಧೆ ಭಾರತದಲ್ಲಿ ಬೆಳೆದು ಬಂದಿತು. ಜೊತೆಗೆ ಯೋಗಮಾರ್ಗಗಳಲ್ಲಿ ಯಾವುದು ಸುಲಭ ಮತ್ತು ಸಹಜ ? - ಎಂಬ ಪ್ರಶ್ನೆ ತೋರಿ ೧೨ ನೆಯ ಶತಮಾನದ ವೀರಶೈವಶರಣರು ಬೋಧಿಸಿದ ಶಿವಯೋಗ ಅರ್ಥಾತ್ ಲಿಂಗಾಂಗ ಸಾಮರಸ್ಯವು ಹೊಸವಿಧಾನವಾಗಿ ಗೋಚರಿಸಿತು.

ಶಿವಾಗಮಗಳಲ್ಲಿ ವರ್ಣಿಸಲಾದ ಅಷ್ಟಾಂಗದ ಕಲ್ಪನೆ, ಷಟ್ಸ್ಥಲಸಿದ್ಧಾಂತ, ಹಾಗೂ ಗುರು, ಲಿಂಗ, ಜಂಗಮ, ಶಿವಯೋಗ ಮುಂತಾದ ಪದಪ್ರಯೋಗಗಳನ್ನು ಶಿವಶರಣರು ತಮ್ಮ ವಚನ ಮತ್ತು ಹಾಡುಗಬ್ಬಗಳಲ್ಲಿ ಬಳಸಿಕೊಂಡಿದ್ದರೂ ಅವರು ಎಲ್ಲ ಪದಗಳಿಗೆ ನವೀನ - ಆಧ್ಯಾತ್ಮಿಕ - ಅನುಭಾವಾತ್ಮಕ ಹಾಗೂ ವ್ಯಾಪಕ ಅರ್ಥವೈಭವವನ್ನಿತ್ತರು, ನವೀನ ಯೋಗಸಂಪತ್ತುಳ್ಳ ಕಲೆಯನ್ನು ಕಂಡರಸಿದರು. ಕಾರಣ ವೀರಶೈವ ಸಿದ್ಧಾಂತದಲ್ಲಿ ಲಿಂಗಾಂಗಸಾಮರಸ್ಯವೆ ಮುಕ್ತಿ, ಅದನ್ನು ಪಡೆಯಲು ಉಪದೇಶಿಸಲಾದ ಷಟ್‌ಸ್ಥಲ ಮಾರ್ಗವೆ ಶಿವಯೋಗವಾಗಿದೆ. ಈ ಪಥವನ್ನೇ ಅನುಸರಿಸಿ ಷಟ್‌ಸ್ಥಲಾನುಸಂಧಾನದಿಂದ ಕ್ರಿಯಾಸಿದ್ಧಿ ಅಖಂಡ ಆತ್ಮಜ್ಞಾನಸಿದ್ಧಿ, ಅವಿರಳ ಅದ್ವೈತ ಸಿದ್ಧಿಯನ್ನು ಪಡೆದು 'ನಿರ್ಮಲ' ನಿಜಸಮಾಧಿಯಲ್ಲಿ ನಿಂದು ಅನುಪಮ 'ದಿವ್ಯತೇಜೋಮೂರ್ತಿ' ಎನಿಸಿದವನು ೧೨ ನೆಯ ಶತಮಾನದ ಅಲ್ಲಮಪ್ರಭುದೇವನು. ಅವನು ಪಡೆದ ಯೋಗಸಂಪತ್ತಿನ ರಹಸ್ಯ ಹಾಗೂ ಅನುಭಾವವನ್ನು ನಿರೂಪಿಸುವುದೇ ಈ ಲೇಖನದ ಆಶಯ.

ಮಹಾಪುರುಷರ ದಿವ್ಯಜೀವನ ದರ್ಶನದಲ್ಲಿ ಎರಡು ನಂಬಿಕೆಗಳುಂಟು. ಸಹಜವಾಗಿ ಜನ್ಮತಳೆದ ಮಾನವನು ತನ್ನ ಅಸಾಧಾರಣ ಸಾಧನೆ ಹಾಗೂ ಸಾಮರ್ಥ್ಯಗಳಿಂದ ಸಿದ್ಧಿಪಡೆದು ಅತಿಮಾನವನಾಗುವನೆಂಬುದು ಒಂದು, ಪರಮಾತ್ಮನೆ ಮಾನವ ರೂಪದಲ್ಲಿ ಅವತರಿಸಿ ದೈವೀಸಂಪತ್ತಿನಿಂದ ಜಗತ್ತಿನ ಜೀವಿಗಳ ಯೋಗಕ್ಷೇಮವನ್ನು ನಿರ್ವಹಿಸುವನು - ಎಂಬುದು ಇನ್ನೊಂದು.[೧] ಇವುಗಳಲ್ಲಿ ಪುರುಷ ಪ್ರಯತ್ನವನ್ನು ಎತ್ತಿಹಿಡಿಯುವುದು ಮೊದಲಿನದಾದರೆ, ಪರಮಾತ್ಮನ ನೇರವಾದ ಕೃಪೆಯನ್ನು ಪುರಸ್ಕರಿಸುವುದು ಎರಡನೆಯದು. ಈ ಎರಡೂ ನಂಬಿಕೆಗಳ ಸಮನ್ವಯದ್ಯೋತಕವಾಗಿ ಇಹಜೀವನದಲ್ಲಿಯೆ ಸಚ್ಚಿದಾನಂದ ನಿತ್ಯ ಪರಿಪೂರ್ಣಸ್ಥಿತಿಯುಳ್ಳ ದೈವೀಜೀವನವನ್ನು ಹೊಂದಿ ಜನತೆಗೆ ದೇವನಾಗಿ ಕಾಣಿಸಿಕೊಂಡುದು ಅಲ್ಲಮಪ್ರಭುದೇವನ ನಿಲವಾಗಿದೆ. ಆತನ ಜೀವನ-ಸಾಧನೆ ಸಿದ್ಧಿಗಳನ್ನು ಪ್ರಕಟಿಸುವಲ್ಲಿ ಹಂಪೆಯ ಹರೀಶ್ವರನ 'ಪ್ರಭುದೇವರ ರಗಳೆ' ಚಾಮರಸನ ಪ್ರಭುಲಿಂಗಲೀಲೆ, ಪ್ರಭುದೇವನು ಸ್ವತಃ ರಚಿಸಿದ ವಚನಗಳು ಮತ್ತು ಮಂತ್ರಗೋಪ್ಯ ಹಾಗೂ ಅನುಭಾವದ ಗೀತೆಗಳು ಜೊತೆಗೆ ಆತನ ಸಮಕಾಲೀನ ಶರಣರ ವಚನಗಳು, ಹಾಗೂ ಶೂನ್ಯಸಂಪಾದನೆ ಇವು ಸಹಾಯಕ ಗ್ರಂಥಗಳಾಗಿವೆ. ಅಲ್ಲಮನ ಐತಿಹ್ಯದಲ್ಲಿ ಮೂರುಘಟ್ಟಗಳನ್ನು ಗುರುತಿಸಬಹುದು.

1. ಬಾಲ್ಯ ಮತ್ತು ಅನಿಮಿಷ ಗುರುವಿನ ದರ್ಶನ
2. ಗುರುಕಾರುಣ್ಯ ಮತ್ತು ಕಠೋರ ಸಾಧನೆ
3. ಸಿದ್ಧಾವಸ್ಥೆಯ ಪ್ರಾಪ್ತಿ ಹಾಗೂ ಲೋಕ ಕಲ್ಯಾಣ

---

೧. ಅನನ್ಯಾಶ್ಚಿಂತಯಂತೋ ಮಾಂ ಯೆ ಜನಾಪರ್ಯುಪಾಸತೆ |
ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ || ಭಗವದ್ಗೀತಾ

ಪ್ರಭುದೇವರ ಬಾಲ್ಯ ಹಾಗೂ ಭಾಗ್ಯೋದಯ ರವಿ ಮೂಡಲಿರುವ ಸಮಯದವರೆಗೆ ಭಿನ್ನಭಿನ್ನ ಅಭಿಪ್ರಾಯಗಳಿವೆ. ಆತನ ಯೋಗಸಂಪತ್ತನ್ನು ಚಿತ್ರಿಸುವುದು ಈ ಲೇಖನದ ಮುಖ್ಯ ಉದ್ದೇಶವಾದ್ದರಿಂದ ಕೇವಲ ಎರಡನೆಯ ಹಾಗೂ ಮೂರನೆಯ ಘಟ್ಟಗಳನ್ನು ಮಾತ್ರ ಇಲ್ಲಿ ಗಮನಿಸಲಾಗಿದೆ.

'ವೈರಾಗ್ಯಮೂರ್ತಿ', 'ಗುರುಗುಹೇಶ್ವರ ಲಿಂಗ' 'ವ್ಯೋಮಮೂರ್ತಿ' ಎಂದು ಪ್ರಸಿದ್ಧನಾದ ಅಲ್ಲಮನು ತನ್ನ ಪೂರ್ವಾಶ್ರಮ ಜೀವನದಲ್ಲಿ ಹಠಯೋಗ, ರಾಜಯೋಗಗಳಲ್ಲಿ ಸಿದ್ಧನಾಗಿದ್ದು ನಂತರ ಶಿವಯೋಗಸಿದ್ಧನಾದನೆಂಬುವಕ್ಕೆ ಆಧಾರಗಳಿವೆ. ೫ನೆಯ ಶತಮಾನದ ಸ್ವಾತ್ಮಾರಾಮಯೋಗಿ ವಿರಚಿತ ಸಂಸ್ಕೃತ ಗ್ರಂಥ 'ಹಠಯೋಗ ಪ್ರದೀಪಿಕಾ'ವು ಹಠಯೋಗ ಸಿದ್ಧರ ಮಾಲಿಕೆಯಲ್ಲಿ 'ಅಲ್ಲಮ ಪ್ರಭುದೇವತ್ವ'[೧] ಎಂಬ ಪದವನ್ನು ಸೇರಿಸುತ್ತದೆ. ಅಲ್ಲಮನ ವಚನದಿಂದಲೂ ಸಹ ಇದು ಸ್ಪಷ್ಟವಾಗುತ್ತದೆ.

*ನಾರುಬೇರಿನ ಕುಟಿಲ ಕುಹಕದ ಯೋಗವಲ್ಲಿದು ನಿಲ್ಲಿಭೋ !*
*ಕಾಯ ಸಮಾಧಿ ಕರಣ ಸಮಾಧಿ ಜೀವ ಸಮಾಧಿಯಲ್ಲಿದು ನಿಲ್ಲಿಭೋ !*
*ನಿಜ-ಸಹಜ ಸಮಾಧಿ ಗುಹೇಶ್ವರಾ !*[೨]

ಪ್ರಭುದೇವನು ತನ್ನ ಅಧ್ಯಾತ್ಮಸಾಧನೆಯ ಪ್ರಾರಂಭದಲ್ಲಿ ಸಂಸಾರವೆಂಬ ಸಪ್ತಸಮುದ್ರ ಭಾವವೆಂಬ ಮಹಾರಣ್ಯ, ಪಂಚೇಂದ್ರಿಯವೆಂಬ ವಿಷಯದ ಮಳೆ, ಕೋಪವೆಂಬ ಹಿರಿಹುಲಿ, ಅಷ್ಟಮದ ಕಾಮವೆಂಬ ಮೂರಂಬಿನ ಸೋನೆ, ಮತ್ಸರವೆಂಬ ಮಹಾಸರ್ಪಗಳ ಭಯ, ಆಸೆಯೆಂಬ ಪಾಪಿಯ ಕೂಸಿನ ಕಾಟ, ತಾಪತ್ರಯವೆಂಬ ಕೆಂಡದಮಳೆ, ಅಹಂಕಾರವೆಂಬ ಗಿರಿ, ಪಂಚಭೂತವೆಂಬ ಭೂತಭಯ, ಮಾಯೆಯೆಂಬ ರಕ್ಕಸಿಯ ಪೀಡೆ, ವಿಷಯವೆಂಬ ಕೂಪದ ಪರಿಸ್ಥಿತಿ ಮೋಹಬಳ್ಳಿಯ ತೊಡಕು, ಲೋಭವೆಂಬ ಆಯುಧದ ಉಪಟಳ ಮುಂತಾದವನ್ನು ಎದುರಿಸಿದ್ದಾನೆ. ಪರಮಜ್ಞಾನಿಯಾದ ಆತನು ಈ ಅಡತಡೆಗಳನ್ನೆಲ್ಲ ಗೆದ್ದು ತನ್ನ ಇಷ್ಟದೈವವಾದ ಗುಹೇಶ್ವರಲಿಂಗದಲ್ಲಿ ಪರವಶನಾಗಿ 'ನಿರಾಳದಲ್ಲಿ ನಿಂದೆ' ನೆನ್ನುತ್ತಾನೆ. ಆವನು ಸಾಧಿಸಿ ಸಿದ್ಧನೆನ್ನಿಸಿದ ಈ ಯೋಗ ಸಂಪತ್ತು ಶಿವಯೋಗ ಸಂಪತ್ತಿನ ನೆರವಿನಿಂದ ಪಡೆದ ವ್ಯೋಮಕಾಯ ಸಂಪತ್ತಾಗಿದೆ.

೧೨ನೆಯ ಶತಮಾನದ ವೀರಶೈವ ಶರಣರು ಹಾಗೂ ಮುಂದಿನ ಶಿವಯೋಗಿಗಳು ಅಷ್ಟಾಂಗಯೋಗದಲ್ಲಿಯ ಪೂರ್ವದ ಐದಂಗಗಳನ್ನು ಬಿಟ್ಟು ಉತ್ತರ ಯೋಗವೆನ್ನಿಸಿದ

೧. ಸ್ವಾತ್ಮಾರಾಮ - 'ಹಠಯೋಗ ಪ್ರದೀಪಿಕಾ' I.೮

೨. ಅಲ್ಲಮಪ್ರಭುದೇವರ ವಚನಗಳು. ವಚನ ೧೮೭, ೧೮೮, ೨೨೪, ಶೂನ್ಯ ಸಂಪಾದನೆ (ಗೋರಕ್ಷಸಂಪಾದನೆ) ವಚನ ೫.

೩. ಅಲ್ಲಮಪ್ರಭುದೇವರ ವಚನಗಳು ವಚನ ೧೨೦೧ (ಕ.ವಿ.ವಿ.ಧಾರವಾಡ ಪ್ರತಿ)

ಧ್ಯಾನ-ಧಾರಣ-ಸಮಾಧಿಗಳನ್ನು ಶಿವಯೋಗದ ಅಭ್ಯಾಸ ಕ್ರಮದಲ್ಲಿ ಬಳಸಿಕೊಂಡರು. ಇದರಿಂದ ಸ್ತ್ರೀ-ಪುರುಷರು, ಬಾಲ-ವೃದ್ಧರು ಎಂಬ ತಾರತಮ್ಯವಿಲ್ಲದೆ ವೀರಶೈವರು ಪ್ರತಿನಿತ್ಯ ಆಚರಿಸಬೇಕಾದ ಭಕ್ತಿಯುತವಾದ ಇಷ್ಟಲಿಂಗ ಪೂಜೆಯು ಮಂತ್ರಯೋಗ, ಲಯಯೋಗ, ಹಠಯೋಗ, ರಾಜಯೋಗಗಳನ್ನೊಳಗೊಂಡು, ಕರ್ಮ, ಭಕ್ತಿ, ಜ್ಞಾನಗಳ ಸಂಗಮವುಳ್ಳ ಶಿವಯೋಗವಾಗಿ ಮಾರ್ಪಟ್ಟಿತು. ಲೌಕಿಕ, ಪಾರಮಾರ್ಥಿಕ ಜೀವನಗಳ ನಡುವಿನ ಸೇತುವೆಯಾಯಿತು. ಈ ವಿಷಯಕ್ಕೆ ಅಲ್ಲಮಪ್ರಭುದೇವ ವಿರಚಿತ 'ಪರಮಯೋಗಮಂತ್ರಗೋಪ್ಯ' ಎಂಬ ಗ್ರಂಥಕ್ಕೆ 'ಶಿವಜ್ಞಾನಶಾಸನ'ವೆಂಬ ಟೀಕೆಯನ್ನು ಬರೆದ ಕಲ್ಲುಮಠದ ಪ್ರಭುದೇವನ ಮಾತು ಸಮರ್ಥನೀಯವಾಗಿದೆ.

''ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ ಈ ಐದು ಕರ್ಮಯೋಗಂಗಳು ಧ್ಯಾನ, ಧಾರಣ, ಸಮಾಧಿ ಈ ಮೂರು ಯೋಗಾಂಗಳು ತಮ್ಮ ಲಕ್ಷದಲ್ಲಿ ಕೂಡುವ ಯೋಗಗಳು. ಇವುಗಳಲ್ಲಿ ಐದು ಪೂರ್ವಯೋಗಾಂಗಳ ಬಿಟ್ಟು, ಉತ್ತರವಾದ ಧ್ಯಾನ, ಧಾರಣ, ಸಮಾಧಿ ಯೋಗಗಳು ಷಟ್ಸ್ಥಲ ಲಿಂಗಾಂಗಯೋಗಿಗಳಿಗೂ ಉಂಟು. ಅದೆಂತೆಂದೊಡೆ ಅಷ್ಟಾಂಗ ಯೋಗಿಗಳ ಲಕ್ಷ್ಯಾನುಸಂಧಾನದ ಪರಿಯಲ್ಲ. ಷಟ್ಸ್ಥಲ ಜ್ಞಾನಿಗಳ ಧ್ಯಾನ, ಧಾರಣ, ಸಮಾಧಿಗಳ ಪರಿಯೆ ಬೇರೆ''..... ಅಲ್ಲದೆ ಆತನು ವೀರಶೈವ ಶಿವಯೋಗದ ಉತ್ತರಭಾಗವನ್ನು ವಿವರಿಸುತ್ತ ''ಗುರುಕರುಣದಿಂದ ಸಮ್ಯಕ್ ಜ್ಞಾನವನ್ನು ಪಡೆದು, ಆ ಗುರುಕರುಣದಿಂದವೆ ಅಖಂಡ ಮಹಾಲಿಂಗಮಂ ಪ್ರತ್ಯಕ್ಷಮಂ ಮಾಡಿಕೊಂಡು, ಆ ಸಮ್ಯಕ್ ಜ್ಞಾನವೃಷ್ಟಿಯಿಂದ ಆ ಲಿಂಗಮಂ ನೋಡಿ ಶಿವಮಂತ್ರಯುಕ್ತವಾಗಿ ಧ್ಯಾನಿಸುವುದೇ ಧ್ಯಾನಯೋಗವು. ಆ ಸಮ್ಯಕ್ ಜ್ಞಾನದಿಂದ ಷಟ್‌ಸ್ಥಲ ಲಿಂಗಾಗ ಸಂಯೋಗಾನುಭಾವಿಯಾಗಿ ಆ ಲಿಂಗಸುಖವನನುಭವಿಸುತಿರ್ಪುದೆ ಧಾರಣಯೋಗ, ಇಂತು ಲಿಂಗಾಂಗಸಂಗದಿಂದ ಲಿಂಗಸ್ವರೂಪವಾಗಿ ಲಿಂಗಸುಖವನರಿದನುಭವಿಸುತಿರ್ಪ ಅರಿವಡಗಿನಿಂದುದೆ ಸಮಾಧಿಯೋಗ''ಎಂದಿದ್ದಾನೆ[೫] ಇಲ್ಲಿ ಶಿವಯೋಗರಹಸ್ಯವೂ, ಅದನ್ನು ಪಡೆಯಲು ಅವಶ್ಯವಾದ ಗುರುಕರುಣದ ಮಹತ್ವವೂ ಇದೆ.

ವೀರಶೈವದರ್ಶನವೂ ನಿರೂಪಿಸುವ ಷಟ್‌ಸ್ಥಲಾನುಸಂಧಾನದಲ್ಲಿ ಶಿವಯೋಗದ ರಹಸ್ಯವು ಪ್ರಾಣಲಿಂಗಸ್ಥಲದಲ್ಲಿ ಸ್ಪಷ್ಟವಾಗಿ ಕಾಣಿಸುತ್ತದೆ. ಆದರೆ ಷಟ್‌ಸ್ಥಲಸಾಧನೆಯನ್ನು ಪ್ರಾರಂಭಿಸುವ ಪೂರ್ವದಲ್ಲಿ ಗುರುಕರುಣವು ಅತ್ಯಂತ ಆವಶ್ಯಕವಾದುದು ಏಕೆಂದರೆ ಶಿವಯೋಗಸಿದ್ಧಗುರುವು ತನ್ನ ಹಸ್ತವನ್ನು ಶಿಷ್ಯನ ಮಸ್ತಕದಲ್ಲಿರಿಸಿ ಅನುಗ್ರಹಿಸಿ, ಆತನಲ್ಲಿ ಸರ್ವವ್ಯಾಪಿಯಾದ ನಿರ್ಗುಣ ಬ್ರಹ್ಮವಸ್ತುವಿನ ಚೇತನವನ್ನು ಜಾಗ್ರತಗೊಳಿಸುತ್ತಾನೆ. ಉಪಾಸನೆಗೆಂದು ''ಆದಿ ಅಕ್ಷರದ್ವಯವ ಭೇದಿಸಿ ತಂದು'' ಶಿವಲಿಂಗವ ಮಾಡಿ, ಶಿಷ್ಯನ ಕರಸ್ಥಲದಲ್ಲಿರಿಸುತ್ತಾನೆ. ಕರುಣೆಯಿಂದ ಶಿಷ್ಯನ ಪ್ರಾಣವಾಯುವನ್ನು ಶುದ್ಧಗೊಳಿಸಿ

೫. ಅಲ್ಲಮ ಪ್ರಭುದೇವ - 'ಪರಮಯೋಗ ಮಂತ್ರಗೋಪ್ಯ' ಪೀಠಿಕೆ, ಸಿದ್ಧರಾಮ ಸಾಹಿತ್ಯ ಸಂಗ್ರಹ ಪುಟ ೧೧೫.

ಲಿಂಗಪ್ರಾಣಿಯನ್ನಾಗಿ ಪರಿವರ್ತಿಸುತ್ತಾನೆ. ದೀಕ್ಷಾತ್ರಯವನ್ನು ಅಳವಡಿಸಿ, ಶಿವಲಿಂಗಾರ್ಚನೆ, ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಾನುಸಂಧಾನದ ಮರ್ಮವನ್ನು ಅರುಹುತ್ತಾನೆ. ಹೀಗೆಯೆ, ಅಲ್ಲಮಪ್ರಭುವಿನ ಜೀವನದಲ್ಲಿ ಬಂದೊದಗಿದ ಗುರುಕಾರುಣ್ಯ ಕ್ಷಣವು ಆಶ್ಚರ್ಯಕರವಾಗಿದೆ.

'ಆಸೆಯೆಂಬ ಮಾಯಾಪಾಶದಿಂದ ಭವಬಂಧದೋಷವಾಗುವುದೆಂದರಿತು ಮಾಯಾಕೋಲಾಹಲನಾದ ಅಲ್ಲಮನು ಗುರುವಿನ ಶೋಧದಲ್ಲಿದ್ದಾಗ ಒಮ್ಮೆ ಮಣ್ಣುಮರೆಯ ದೇಗುಲದ ಗುಹೆಯಂತಿಪ ಗರ್ಭಗುಡಿಯಲ್ಲಿ ಮಿನುಗುವ ಪ್ರಕಾಶವು ಗೋಚರಿಸುತ್ತದೆ. ಅಲ್ಲಿ ಪರಮಶಿವಯೋಗಿ ಅನಿಮಿಷ ದೇವನು ಶಿವಯೋಗ ಸಮಾಧಿಯಲ್ಲಿ ಮಗ್ನನಾದುದನ್ನು ಕಾಣುತ್ತಾನೆ. ಆ ಶಿವಯೋಗಿಯ 'ಕಾಣಬಾರದ ಕಾಯ, ನೋಡಬಾರದ ತೇಜ, ಉಪಮಿಸಬಾರದ ನಿಲವನ್ನು ತಿಳಿದು ಪರಮಾಶ್ಚರ್ಯಗೊಂಡು ಅವನ ಕರಸ್ಥಲದ ನಿಬ್ಬೆರಗಿನ ನೋಟದಲ್ಲಿ ತನ್ನ ಕೂಟವನ್ನು ಬಯಸಿ,''-

*ನೀನೆನಗೆ ಗುರುವಪ್ಪಡೆ ನಾನಿನಗೆ ಶಿಷ್ಯನಪ್ಪಡೆ,*
*ಎನ್ನ ಕಾಯದ ಕರ್ಮವ ತೊಡೆದು*
*ಎನ್ನ ಕರುಣಾದಿ ಗುಣಂಗಳ ಕಳೆದು*
*ನೀನೆನ್ನ ಕಾಯದಲಡಗಿ, ನೀನೆನ್ನ ಪ್ರಾಣದಲಡಗಿ,*
*ನೀನೆನ್ನ ಭಾವದಲಡಗಿ, ನೀನೆನ್ನ ಕರಸ್ಥಲಕ್ಕೆ ಬಂದು*
*ಕಾರುಣ್ಯವ ಮಾಡಾ ಗುಹೇಶ್ವರಾ !''*[೬]

ಎಂದು ಮೊರೆಹೋಗುತ್ತಾನೆ. ಆಗ ಅನಿಮಿಷಯ್ಯನ ಕೃಪಾದೃಷ್ಟಿ, ಧ್ಯಾನ, ಸ್ಪರ್ಶನಗಳಿಂದ ಏಕಕಾಲಕ್ಕೆ ಶಕ್ತಿಪಾತ ಪ್ರಯೋಗ ಘಟಿಸಿ ಪ್ರಭುದೇವನು ಗುರುವಿನ ಅಮೃತಲಿಂಗವನ್ನು ಪಡೆಯುತ್ತಾನೆ. ಆ ಲಿಂಗದೊಡನೆಯೆ ಅನಿಮಿಷಯ್ಯನ ಪ್ರಾಣವು ಪ್ರಭುವಿನಲ್ಲಿ ಲೀನವಾಗುತ್ತದೆ. ಅಲ್ಲಮನು ತಾನು ಪಡೆದ ಗುರುಕಾರುಣ್ಯದ ಪರಮಾವಸ್ಥೆಯನ್ನು ಒಂದು ಬೆಡಗಿನ ವಚನದಲ್ಲಿ ಹೀಗೆ ಹಾಡಿಕೊಂಡಿದ್ದಾನೆ.

*'ಬಟ್ಟ ಬಯಲ ಮಹಾಮನೆಯೊಳಗೊಂದು*
*ಹುಟ್ಟಿ ಹೊಂದದ ಶಿಶುವ ಕಂಡೆ,*
*ಮುಟ್ಟಿ ಪೂಜಿಸ ಹೋದಡೆ,*
*ನೆಟ್ಟನೆ ಆ ಶಿಶು ತನುವ ನುಂಗಿತ್ತು* [೭]..'

---

೬. ಅಲ್ಲಮ ಪ್ರಭುದೇವರ ವಚನಗಳು : ಹಾಂಡ, ವಚನ ೭೬೦. ಅದೇ ವಚನ ೧೧೩೭, ೧೧೩೪, ೧೧೫೨.

೭. ಶೂನ್ಯ ಸಂಪಾದನೆ (ಶೂಗುಂ) ಪ್ರಭುದೇವರ ಸಮಕಾಲೀನ ಶರಣ ಚನ್ನಬಸವಣ್ಣನು 'ಕೊಂದೆ ನಿಮ್ಮಯ್ಯನ ಕೊಂಢ ಲಿಂಗವ ೭ ಎಂಬ ನುಡಿ ಮಾರ್ಮಿಕವಾಗಿದೆ.ಪ್ರಭೂದೇವರ ಗುರುಕರುಣದ ವೈಚಿತ್ರ್ಯವನ್ನು ಈ ನುಡಿ ಸಾರುತ್ತದೆ.

ಅನಿಮಿಷ ಗುರುವಿನ ಲಿಂಗಕಿರಣದ ಸೋಂಕಿನಿಂದ ತತ್‌ಕ್ಷಣವೆ ಅಲ್ಲಮಪ್ರಭುವಿನ ಅಂಗಾಂಗಗಳು ಚಿತ್ಪ್ರಭಾ ಚೈತನ್ಯದಿಂದ ಪೂರ್ಣವಾದುವು, ಲಿಂಗದ ನೋಟ, ತುರೀಯದ ಆನಂದದಿಂದ ತನ್ಮಯನಾದ ಅಲ್ಲಮನಲ್ಲಿ ಉಂಟಾದ ಶಿವಯೋಗ ಸಿದ್ಧಾವಸ್ಥೆಯ ಬಗೆಗೆ ಹರಿಹರ ಕವಿ ಹೀಗೆ ವರ್ಣಿಸಿದ್ದಾನೆ.

*‘ಇಳುಪಿಂದಂತಾಯ್ತು ಶಿವಲಿಂಗವಾತನ ಕರದಿ*
*ನೋಟದಿಂದಂಗೈಯಲಿಕ್ಕಿದಂ ಲಿಂಗಮಂ*
*ಕೂಟದಚ್ಚಳಿಯದಸುವೆರಸಿ ಶಿವಲಿಂಗಮಂ*
*ಲಿಂಗದೊಡನೆಯೆ ಕೂಡಿ ಹೋದುದಾತನ ಜೀವ’!* [೮]

ಹೀಗೆ ಒಮ್ಮೆಲೆ ಶಿವಯೋಗಸಿದ್ಧಿಸಂಪನ್ನನಾದ ಅಲ್ಲಮನ ಶಿವಯೋಗಸಿದ್ಧಿಗೆ ನಿರ್ನಿಮೇಷ ದೃಷ್ಟಿಯೆ ಮೂಲಸೂತ್ರವೆಂದು ಸಾರಿದ್ದಾನೆ. ಗೌಪ್ಯಕ್ಕೆ ಗೌಪ್ಯವಾದ ಆತನ ಲಿಂಗಾನುಸಂಧಾನದ ಮರ್ಮ ಹೀಗಿದೆ

*ಕಣ್ಣಿಗೆ ಕಣ್ಣು, ಕಣ್ಣೊಳು ಕಣ್ಣು, ಕಣ್ಣೇ ನೇತ್ರ*
*ನೇತ್ರವೆ ಸೂತ್ರ, ಸೂತ್ರವೆ ಲಿಂಗ, ಲಿಂಗವೆ ಗುಹ್ಯ*
*ಗುಹ್ಯಕ್ಕೆ ಗುಹ್ಯ, ಗೋಪ್ಯಕ್ಕೆ ಗೋಪ್ಯ, ರಹಸ್ಯಕ್ಕೆ ರಹಸ್ಯ !*

*ಈ ನೇತ್ರಮಹಿಮೆಯ ಗುಹೇಶ್ವರ ಬಲ್ಲನಲ್ಲದೆ*
*ಕಣ್ಣಗೆಟ್ಟಣ್ಣಗಳೆತ್ತ ಬಲ್ಲರು ನೋಡಯ್ಯಾ !*

*ಪ್ರಾಣವೆ ಏಕ, ಏಕವೆ ಸಮರಸ,*
*ಸಮರಸವೆ ಲಿಂಗ, ಲಿಂಗವೆ ಪರಿಪೂರ್ಣ*
*ಪರಿಪೂರ್ಣವೆ ಪರಬ್ರಹ್ಮ, ಪರಬ್ರಹ್ಮವೆ ತಾನು !*
*ಇಂತೀ ನಿಜವ ಗುಹೇಶ್ವರ ಬಲ್ಲನಲ್ಲದೆ*
*ಕಣ್ಣಗೆಟ್ಟಣ್ಣಗಳೆತ್ತಬಲ್ಲರು ....* [೯]

ಷಟ್‌ಸ್ಥಲಾನುಸಂಧಾನಿಯು ಪದ್ಮಾಸನಾರೂಢನಾಗಿ ಎದೆ, ಕುತ್ತಿಗೆ, ಶಿರಸ್ಸನ್ನು ನೇರವಾಗಿರಿಸಿ ನೇತ್ರ ಪ್ರಕಾಶದ ಸೂತ್ರವಿಡಿದು ಲಿಂಗದ ಮೇಲೆ ಅನಿಮಿಷ ದೃಷ್ಟಿಯನ್ನಿರಿಸಲು ಶ್ವಾಸಗತಿಯು ಕ್ರಮೇಣ ಸುಸ್ಥಿರಗೊಳ್ಳುತ್ತದೆ. ತಾಳಬದ್ಧವಾದ ಶ್ವಾಸಗತಿಯೊಡನೆ ಮನದಲ್ಲಿ ಮಂತ್ರಪಠಣ ನಡೆದು ಇಂದ್ರಿಯಗಳ ಚಾಪಲ್ಯ, ಮನಸ್ಸಿನ ಸಂಕಲ್ಪ, ವಿಕಲ್ಪ ಭಾವದ ಸೂಕ್ಷ್ಮ ಬಯಕೆಗಳೆಲ್ಲ ಏಕಕಾಲಕ್ಕೆ ನಿಶ್ಚಲಗೊಂಡು ಅವೆಲ್ಲ ಸುಸಂಸ್ಕಾರಗೊಳ್ಳುತ್ತವೆ. ಆಗ ಕರಸ್ಥಲದ ಲಿಂಗವು ಮನೋವೇದ್ಯವಾಗಿ ಪ್ರಾಣಲಿಂಗ, ಭಾವಲಿಂಗಗಳಾಗಿ ಅಂದರೆ ತನು, ಮನ,

೮. ಹರಿಹರಕವಿ : ‘ಪ್ರಭುದೇವರ ರಗಳೆ’

೯. ಅಲ್ಲಮಪ್ರಭುದೇವರ ವಚನಗಳು : ವಚನ, ೨೫೭, ೧೨೩೭, ೧೨೩೮

ಭಾವಗಳೆಲ್ಲ ಲಿಂಗದ ಅರಿವಿನಿಂದ ಬೆಳಗಿ ಸಾಧಕನು ಪರಶಿವನೆ ತಾನೆಂದರಿಯುತ್ತಾನೆ[೧೦]. ಅಲ್ಲದೆ, ಷಟ್‌ಸ್ಥಲಸಾಧನೆಯಲ್ಲಿ ಭಕ್ತಿಸ್ಥಲದಲ್ಲಿ ಶ್ರದ್ಧಾಭಕ್ತಿಯಾಗಿ ಮಾಹೇಶ್ವರ ಸ್ಥಲದಲ್ಲಿ ನೈಷ್ಠಿಕಭಕ್ತಿಯಾಗಿ ಪ್ರಸಾದಿಸ್ಥಲದಲ್ಲಿ ಅವಧಾನ ಭಕ್ತಿಯಾಗಿ, ಪ್ರಾಣಲಿಂಗಿಸ್ಥಲದಲ್ಲಿ ಅನುಭವಭಕ್ತಿಯಾಗಿ, ಶರಣಸ್ಥಲದಲ್ಲಿ ಆನಂದಭಕ್ತಿಯಾಗಿ, ಐಕ್ಯಸ್ಥಲದಲ್ಲಿ ಸಮರಸಭಕ್ತಿಯಾಗಿ, ಷಡ್‌ಲಿಂಗಗಳ ಪೂಜಾಫಲವು ಲಭ್ಯವಾಗುತ್ತದೆ.[೧೧]

ಪ್ರಗತಿಪರ ಶಿವಯೋಗ ಸಾಧಕರಿಗೆ ಪ್ರಭುದೇವನು ಕೊಡುವ ವಿವರಗಳು ಬಹಳ ಮಾರ್ಮಿಕವಾಗಿದೆ. ಅವನು ತಿಳಿಸುವಂತೆ ಲಿಂಗೋಪಾಸಕನು ಆಧಾರಚಕ್ರವನ್ನು ದೃಢಗೊಳಿಸಿ, ಸಕಲ ಕರಣಂಗಳ ವರ್ತನೆಯನ್ನು ನಷ್ಟಗೊಳಿಸಿ ಸುಸ್ಥಿರನಾಗಬೇಕು. ಶಿವಜೀವರನ್ನು, (ಲಿಂಗ-ಅಂಗಗಳನ್ನು) ಒಂದು ಗೂಡಿಸಿ ಆದಿಯಾದ ಓಂಕಾರವನ್ನು ತಿಳಿದು ಪ್ರಾಣದಲ್ಲಿ ಪ್ರಕಾಶಿಸುವ ಪ್ರಾಣಲಿಂಗವನ್ನು ಜ್ಞಾನದೃಷ್ಟಿಯಿಂದ ನಿರೀಕ್ಷಿಸಲು ಅದೇ ಜ್ಞಾನಯೋಗವೆನಿಸುತ್ತದೆ.[೧೨] ಸಕಲ ಇಂದ್ರಿಯಗಳ ಸುಖವನ್ನು ಲಿಂಗಾರ್ಪಿತವ ಮಾಡಿ ಲಿಂಗವೆ ಅಂಗ, ಅಂಗವೇ ಲಿಂಗವಾಗಿ ಚಿದಾನಂದದಲ್ಲಿ ಓಲಾಡುವುದೇ ಶಿವಯೋಗ ವೆನಿಸುತ್ತದೆ. ಅಧೋಮುಖವಾಗಿ ವರ್ತಿಸುವ ಜೀವನ ವರ್ತನೆಯನ್ನು ಸತ್ಕ್ರಿಯೆಯಿಂದ ಮೆಟ್ಟಿ, ಜ್ಞಾನಾಗ್ನಿಯಿಂದ ಸುಟ್ಟು, ಮಂತ್ರೋಚ್ಚಾರಣೆಯಿಂದ ಶುದ್ಧಗೊಳಿಸಲು ಅಖಂಡ ಪರಿಪೂರ್ಣ ನಿರವಯ ಲಿಂಗವು ಪ್ರತ್ಯಕ್ಷವಾಗಿ ತೋರುವದೆಂದೂ[೧೩], ಅಂಥ ಶಿವತತ್ತ್ವಾನುಭಾವಿಗೆ ತೋರಿಕೆಯೆಲ್ಲವೂ ಅಪೂರ್ಣವೆನಿಸಿ, ಆಜ್ಞಾಚಕ್ರಸ್ಥಾನವಲ್ಲಿ ಪರಬ್ರಹ್ಮವು ಸ್ಫಟಿಕವರ್ಣದ ಜ್ಯೋತಿಯಂತೆ ತೊಳಗಿಬೆಳಗುತ್ತದೆಂದೂ, ನಾದಬ್ರಹ್ಮದಿಂದ ಸ್ಥೂಲ-ಸೂಕ್ಷ್ಮ ಕಾರಣವೆಲ್ಲವೂ ವಿಶ್ರಾಂತಿ ಹೊಂದಿ, ಸುಜ್ಞಾನದಿಂದ ಮಾಯೆ ಕಳಚಿ ಲಿಂಗಾಂಗ ಸಮರಸಿಯಾದ ಶಿವಯೋಗಿಗೆ ಶಿವತತ್ತ್ವದ ಪೂರ್ಣತ್ವವುಂಟಾಗಿ ಕೊನೆಯಲ್ಲಿ ತಾನು ಪರಿಪೂರ್ಣನೆಂಬ ಅನುಭಾವ ವೇದ್ಯವಾಗುತ್ತದೆ[೧೪], ಎಂಬುದು ಪ್ರಭುವಿನ ಸಂದೇಶ.

---

೧೦. ಚಾಮರಸಕವಿ : 'ಪ್ರಭುಲಿಂಗಲೀಲೆ' (ಗತಿ ೧೮ ಪದ್ಯ ೨೨)
೧೧. ವೀರಶೈವ ತತ್ತ್ವ ಪ್ರಕಾಶ - ಪರಿಶಿಷ್ಟ ಎ.೭೦
೧೨. ಅಲ್ಲಮಪ್ರಭುದೇವ 'ಪರಮಯೋಗ ಮಂತ್ರಗೋಪ್ಯ' ಪದ್ಯ ೪೫
೧೩. ಅಲ್ಲಮಪ್ರಭುದೇವ 'ಪರಮಯೋಗ ಮಂತ್ರಗೋಪ್ಯ' ಪದ್ಯ ೬
೧೪. ಅಲ್ಲಮಪ್ರಭುದೇವ 'ಪರಮಯೋಗ ಮಂತ್ರಗೋಪ್ಯ' ಪದ್ಯ ೭-೧೨
ಅಡಿಟಿಪ್ಪಣಿ -
೧೪. ಅಲ್ಲಮ ಪ್ರಭುದೇವ ಪರಮಯೋಗ ಮಂತ್ರ ಗೋಪ್ಯ ಪದ್ಯ ೭-೧೨
ಅಷ್ಟಕುಳಗಳ ಮೆಟ್ಟಿ ಸುಟ್ಟು ಶುದ್ಧೈಸಲಾ ಬಟ್ಟಬಯಲಿನ ಘಟ್ಟ ದೃಷ್ಟವಾಗಿ ।
ನೆಟ್ಟನೆಯ ದೃಷ್ಟಿ ತನ್ನಷ್ಟವೇದಗ್ರಜವು ಷಪ್ಪದಳ ಪೀಠಗಳ ಮೆಟ್ಟನಿಂದ ॥
ನಿಟಲ ಭ್ರೂಮಧ್ಯದ ಸ್ಫಟಿಕವರ್ಣದ ಜ್ಯೋತಿ ಘಟದೊಳಗೆ ತಾನಾಗಿ ತೊಳಗಿ ಬೆಳಗಿ ।
ವಟವೃಕ್ಷದ ಕೆಳಗೆ ಲೋಕಾದಿಲೋಕಗಳು ಘಟುಕೆಯಂತಡಗಿದ ಪರಾತ್ಪರವಿದು ॥
ಆಕಾಶದ ಮೇಲೆ ಅರಿದ ತಲೆಯನು ಕಂಡೆ । ಬೇಕು ಬೇಡೆನ್ನದದು ಸಾಕೆನ್ನದು ।
ಲೋಕಾದಿ ಲೋಕದೊಳಗೇಕೋ ಭರಿತನಾಗಿ ಸಾಕಾರವಡಗಿದ ಪರಮಯೋಗಿ ॥
ಶತಪತ್ರ ಶತಲಿಪಿಯು ಶತಸಹಸ್ರದಳವು ಶತಕೋಟಿ ಸೋಮಸೂರ್ಯ ಪ್ರಕಾಶ ।
ಶತಪತ್ರವನು ಮೆಟ್ಟಿ ಹತಮಾಡಿ ಗತಿಗೆಡಿಸಿ। ಅತಿಶಯದ ಮಣಿಮಂಟಪದೊಳು ನಿಂದೆನು ॥

ಪ್ರಭುದೇವನ ದಿವ್ಯಾನುಭವದಂತೆ ಮಾನವನ ಶಿರಸ್ಸಿನಲ್ಲಿ ಶತಪತ್ರಕಮಲವಿದೆ. ಅಲ್ಲಿ ಕೋಟಿ ಸೂರ್ಯ, ಕೋಟಿ ಚಂದ್ರ ಪ್ರಕಾಶವುಳ್ಳ ನಿಷ್ಕಲಲಿಂಗವೆಂಬ ಚಿತ್ಪ್ರಭಾಕಳೆಯಿದೆ. ಆ ಚಿತ್ಪ್ರಭೆಯು ಶರಣನ ಸರ್ವಾಂಗದಲ್ಲಿ ತುಂಬಿ, ದೇಹಭಾವವನ್ನು ಮೆಟ್ಟಿ, ಜೀವ ವರ್ತನೆಯನ್ನು ನಷ್ಟಮಾಡಿ, ಕರಣವೃತ್ತಿಗಳನ್ನು ನಿಲ್ಲಿಸಬಲ್ಲದು.

ಬ್ರಹ್ಮರಂಧ್ರವದಲ್ಲಿರುವ ಈ ನಿಷ್ಕಲಲಿಂಗದಲ್ಲಿ ಪ್ರಭುವು ಸಾಮರಸ್ಯ ಹೊಂದಿದನೆಂಬಂತೆ ಆತನ ಕೃತಿಗಳು ನಿವೇದಿಸುತ್ತವೆ. ಅಲ್ಲದೆ, ಸಮ್ಯಕ್ ಜ್ಞಾನದಿಂದ ಜೀವ, ಪರಮರ ನೆಲೆಯರಿತು, ಪರಮಾತ್ಮನೆ ಆದ ಶರಣನು ಶಿವಯೋಗಸಿದ್ಧನೆನಿಸುತ್ತಾನೆ. ಇಂಥ ಯೋಗಿಯು ಅವಸ್ಥಾತ್ರಯಗಳಲ್ಲಿ ಅಕಾರ, ಉಕಾರ ಮಕಾರವಾಗಿ ತನುತ್ರಯದಲ್ಲಿ ಇಷ್ಟ, ಪ್ರಾಣ, ಭಾವ ಲಿಂಗಸ್ವರೂಪಾಗಿ, ಸಹಸ್ರಾರ ಚಕ್ರದಲ್ಲಿ ನಿಷ್ಕಲಲಿಂಗಸ್ವರೂಪಾಗಿ, ಶಿಖಾಚಕ್ರದಲ್ಲಿ ಶೂನ್ಯಲಿಂಗವಾಗಿ, ಪಶ್ಚಿಮ ಚಕ್ರದ್ವಾರದಲ್ಲಿ ನಿರಂಜನಲಿಂಗ ರೂಪಾಗಿ ಬೆಳಗುತ್ತಾನೆ.

ಗುರುಕಾರುಣ್ಯದಿಂದ ಶಿವಯೋಗಸಿದ್ಧನಾದ ಪ್ರಭುದೇವನು ಮುಂದೆ ವ್ಯೋಮಕಾಯಸಿದ್ಧಿಗಾಗಿ ಶ್ರಮಿಸಿದ್ದಾನೆ. ಶಿವಯೋಗಸಾಧನೆಯಲ್ಲಿಯ ಅತಿಗೌಪ್ಯ ರಹಸ್ಯ ಅವನಿಗೆ ಈ ಪರಾತ್ಪರ ಸಿದ್ಧಿಗೆ ಕಾರಣವಾಗಿದೆ. ಅವನ ವ್ಯೋಮ ಕಾಯಸಿದ್ಧಿ ಸಂಪತ್ತಿನ ಬಗೆಗೆ ಸಮಕಾಲೀನ ಶರಣರು ಹಾಗು ತರುವಾಯದ ಅನುಭಾವಿಗಳು ವಿಶೇಷವಾಗಿ ಕೊಂಡಾಡಿದ್ದಾರೆ.

ಬಸವಣ್ಣನು

*''ನಿಂದರೆ ನೆಳಲಿಲ್ಲ, ನಡೆದಡೆ ಹೆಜ್ಜೆಯಿಲ್ಲ,*
*ಭೂತಳದೊಳಗ' ತಾನು ಕಂಡುದಿಲ್ಲ,*
*ಇಂತಪ್ಪ ಅನಿಯಮದ ಸುಳುಹು....'*[೧೫]

ಚಾಮರಸ ಕವಿಯು -

*ನೆಲಸಿ ಮಿಂಚಿನ ಮಿಡಕಿನೊಲು ಕಂ*
*ಗಳಿಗೆ ತೋರುವವನಲ್ಲದಪ್ಪಿಗೆ*
*ನಿಲುಕನಂಬರದಂತೆ ಸೋಂಕಿಹನಲ್ಲದನುರತಿಗೆ*
*ಉಲುಕನಕ್ಷರದಂತೆ ಬಾಯೊಳು*

೧೫. ಚಾಮರಸ ಪ್ರಭುಲಿಂಗಲೀಲೆ ಗತಿ 22 ಆರಂಭದ ವಚನ ೫
ಶೂನ್ಯಸಂಪಾದನೆಗಳು : ಶೂ. ೫-೬೬೯, ಶೂಗುಂ - 1054, ಶೂಗು - xviii - ೫೩ ಶೂಹ ೧-೧೨೬.

ನಲಿವನಲ್ಲದೆ ಚುಂಬನಕೆ ತಾ
ಸಿಲುಕನಲ್ಲಮನೀ ಪರಿಯ ನಟಿಸಿದನು-[೧೬] ಮಾಯೆಯಲಿ
ಎಂದು ಹೇಳಿದ್ದಾರೆ.

ವಿವಿಧ ಯೋಗಗಳಲ್ಲಿ ಪಾರಂಗತನಾಗಿ ಶಿವಯೋಗಸಿದ್ಧನೆನಿಸಿದ ಅಲ್ಲಮನು ಹಠಯೋಗಸಾಧನೆಯಿಂದ ವಜ್ರದೇಹಿಯಾಗಿದ್ದ ಗೋರಕ್ಷನಿಗೆ ವ್ಯೋಮಕಾಯಸಿದ್ಧಿಯನ್ನು ತೋರಿಸಿ ಆತನನ್ನು ನಿತ್ಯಮುಕ್ತಿಯಸಿದ್ಧಿಯಾದ ಶಿವಯೋಗಕ್ಕೆ ತಿರುಗಿಸಿದನೆಂಬುದನ್ನು ಅನೇಕ ಕವಿಗಳು ಬಣ್ಣಿಸಿದ್ದಾರೆ. ಚಾಮರಸ ಕವಿ ವರ್ಣಿಸಿದಂತೆ, ಗೋರಕ್ಷನು ಪ್ರಭುವಿನ ದೇಹದಲ್ಲಿ ಬೀಸಿದ ಖಡ್ಗವು ಬಯಲಲ್ಲಿ ತೇಲಿದಂತಾಯಿತಂತೆ.

ಸೊಪ್ಪುಳಾಗದು ಕೈದುವಾಗದು
ವೊಪ್ಪವಳಿಯದು ಜಂತ್ರ ಜೋಕೆಗೆ
ತಪ್ಪುದೋಱದು ಹೊಡೆಯ ಹಾಱುವ ಹದ್ದಿನಂದದಲಿ ।
ನಿಪ್ಪಸರದಸಿ ಬಯಲ ದೇಹಿಯ
ನಪ್ಪಲಱ ಕಿಱುದಿದೇನು ಚೋದ್ಯವೊ
ತಪ್ಪದೀತನೆ ಗುರುವೆನೆನುತ ಗೋರಕ್ಷನಿಂತೆಂದ ॥[೧೭]

ರಕ್ಷಿಸುವೆನೆಂದೆನುತ ಶೂನ್ಯದ
ಲಕ್ಷವನು ದೀಕ್ಷೆಯನು ಮಾಡಿದ
ಮೋಕ್ಷಮಾರ್ಗದಲಿಂದು ಗೋರಕ್ಷಂಗೆ ಪ್ರಭುರಾಯ ॥[೧೮]

ಸ್ವತಃ ಅಲ್ಲಮಪ್ರಭುದೇವನು ತನ್ನ ನಿರ್ದೇಹ ಸ್ಥಿತಿಯನ್ನು ನಿರೂಪಿಸಿದ ವಚನ ಹೀಗಿವೆ

"ಕಣ್ಗೆ ಕಾಬಡೆ ರೂಪಲ್ಲ, ಕೈಗೆ ಸಿಲುಕುವಡೆ ದೇಹಿಯಲ್ಲ,
ನಡೆವಡೆ ಗಮನಿಯಲ್ಲ, ನುಡಿವಡೆ ವಾಚಳನಲ್ಲ
...................
ಕಾಯಗೊಂಡ ಮಾನವರಂತೆ ಕೈಗೆ ಸಿಲುಕ ।

೧೬. ಎಳಂದೂರ ಹರೀಶ್ವರ : ಪ್ರಭುದೇವ ಪುರಾಣ ॥ ೬.೨.

೧೭. ಚಾಮರಸ ಪ್ರಭುಲಿಂಗಲೀಲೆ : ಗತಿ ೫, ಪದ್ಯ ೪೫-೪೭ ಗತಿ ೬, ಪದ್ಯ ೨೭-೨೮

೧೮. ಅದೇ ಗತಿ ೧೯, ಪದ್ಯ - ೩೫, ೫೬

೧೯. ಅಲ್ಲಮ ಪ್ರಭುದೇವರ ವಚನಗಳು : ವಚನ ೧೩೩೯

''ಪ್ರಾಣವಿಡಿದ ಜೀವಿಗಳಂತೆ ಎಡೆಯಾಡದಿಪ
ಗುಹೇಶ್ವರನ ನಿಲವು ಬರಿಯ ಸ್ತೋತ್ರಕ್ಕೆ ನಿಲುಕದು''[೧೯]

ಲಿಂಗಾಂಗ ಸಾಮರಸ್ಯದ ನಂತರವೂ ನಿರ್ಮಲಭಕ್ತಿನೆಲೆಗೊಂಡು, ನಿರಂತರ ತೂರ್ಯಾವಸ್ಥೆಯಲ್ಲಿದ್ದ ಅಲ್ಲಮಪ್ರಭುವು ತನ್ನ ನಿರ್ಮಲ ನಿರ್ದೇಹಸ್ಥಿತಿಯಲ್ಲಿ ಹಾಡಿದ ಬೆಡಗಿನ ಸ್ವಾನುಭಾವ ಹೀಗಿದೆ -

ಹಾಳಮೇಲಣ ಮಣಿಯ ಕಾಣಲಾರಳವಲ್ಲ
ಪೌಳಿ ಪೌಳಿಯ ಕೋಣೆ ಕೋಣೆಯೊಳಗೆ
ಮೇಲುಗಿರಿ ಶಿಖರ ಪಶ್ಚಿಮದ್ವಾರವನು ಪೊಗಲು
ಕಾಣಬಾರದ ಕದಳಿಯುಂಟು ನೋಡಾ ॥

ಖೇಚರತ್ವದ ನೆಲೆಯ ಭೂಚರರು ಬಲ್ಲರೆ
ವಾಚಾಳಕರ ಮಾತಿಗಿದು ಸಲ್ಲದು
ಆಚಾರದನುಭಾವ ಭಕ್ತಿನೆಲೆಗೊಂಡಂಗೆ
ಸೂಚಿಸುವುದಾ ಮಹಾಪರಮ ಪದವು ॥

ಬ್ರಹ್ಮರಂಧ್ರದ ಕೊನೆಯ ಮರ್ಮಾದಿ ಮರ್ಮವನು
ನಿರ್ಮಲನು ನಿರ್ದೇಹಿ ತಾ ಬಲ್ಲನು
ವರ್ಮವರಿದಾ ನಿತ್ಯ ನಿರ್ಮಳಂಗಲ್ಲದೆ
ಕರ್ಮಿ ಭೂಭಾರಿಗಳಿಗಿದು ಸಲ್ಲದು ॥[೨೦]

ಅಲ್ಲಮನು ತನ್ನ ಆಂತರಿಕ ಅವಸ್ಥೆ - ಅನುಭಾವಗಳ ಅಂತರವನ್ನು ಬಹು ಸೂಕ್ಷ್ಮವಾಗಿ ಬಚ್ಚಿಟ್ಟಿದ್ದಾನೆ. ಜ್ಞಾನ - ಅಜ್ಞಾನವೆಂಬ ಜನನ - ಮರಣಗಳನ್ನು ನಷ್ಟ ಮಾಡಿದವನೇ ಶಿವಯೋಗಿ, ಸದಮಲ ಬ್ರಹ್ಮದ ಬೆಳಕಿನೊಳಗೆ ಧರ್ಮಾರ್ಥಕಾಮ ಮೋಕ್ಷವೆಂಬ ಪುರುಷಾರ್ಥಗಳನ್ನು, ಸಾಲೋಕ್ಯಾದಿ ಪದಪಿಗಳನ್ನು ತಿರಸ್ಕರಿಸಿ ಲಿಂಗಾಂಗ ಸಾಮರಸ್ಯದ ಆಳದಲ್ಲಿ ನಿರ್ಬಯಲಿಗನಾದ, ಚಿಲ್ಲಿಂಗಸ್ವರೂಪನೂ, ಚಿಲ್ ಪ್ರಕಾಶನೂ, ಧ್ಯಾನದ ತುಟ್ಟ ತುದಿಯನ್ನೇರಿ ತುರ್ಯಾತೀತ ಅವಸ್ಥೆಯಲ್ಲಿ, ಸೋಂಕಲಾಗದಂಥ ಪರಬ್ರಾಹ್ಮಸ್ಥಿತಿಯಲ್ಲಿ ಮರೆದವನೂ ಅಲ್ಲಮಪ್ರಭುದೇವನು! ಶಿವಯೋಗ ಸಾಧಕನ ಅರಿವಿನಾಳಕ್ಕೆ ಮಾತ್ರ ಗೋಚರಿಸಬಲ್ಲ ಅಲ್ಲಮನ ನಿರ್ಬಯಲಯ ಸಿದ್ಧಿಗೆ ಸೂಚನೆ ಎಂಬ ವಚನ ಹೀಗಿದೆ.

---

೨೧. ಶೂನ್ಯ ಸಂಪಾದನೆ, ಚಾಮರಸ - 'ಪ್ರಭುಲಿಂಗಲೀಲೆ

ಆದಿ ಅನಾದಿ ಒಂದಾದಂದು
ಚಂದ್ರಸೂರ್ಯರೊಂದಾದಂದು,
ಧರೆಯಾಕಾಶ ಒಂದಾದಂದು
ಗುಹೇಶ್ವರಲಿಂಗ ನಿರಾಳನು[೨೧]

ಶಿವಯೋಗ ಸಂಪತ್ತಿನ ಬಲದಿಂದ ಸಿದ್ಧಪುರುಷನಾಗಿ ತನ್ನ ಭೌತಿಕಶರೀರವನ್ನು ನಿರ್ಬಯಲನ್ನಾಗಿ ಮಾರ್ಪಡಿಸಿಕೊಂಡ ಬಳಿಕ ಅಲ್ಲಮನು ಲೋಕ ಸಂಗ್ರಹ ಕಾರ್ಯದಲ್ಲಿ ಮಗ್ನನಾಗಿದ್ದಾನೆ. ಅಧ್ಯಾತ್ಮಜೀವಿಗಳ, ಶುದ್ಧಾಂತರಂಗಮುಳ್ಳ ಶರಣರ ಶೋಧನೆಯಲ್ಲಿ ಸಂಚರಿಸಿದ್ದಾನೆ. ತನ್ನ ದಿವ್ಯ ಚಕ್ಷುವಿನ ಪರಿಸರವಲ್ಲಿ ಬಂದ ಎಲ್ಲರನ್ನೂ ಕೃಪಾದೃಷ್ಟಿಯಿಂದ ರಕ್ಷಿಸಿದ್ದಾನೆ.

ಅಂತರಂಗದ ಯೋಗ್ಯತೆಗೆ ಅನುಗುಣವಾಗಿ ಮಾರ್ಗದರ್ಶನ ಪಡೆದು ಪ್ರಭುವಿನ ಕಾರುಣ್ಯಕ್ಕೆ ಪಾತ್ರರಾದ ಶರಣರಲ್ಲಿ ಮುಕ್ತಾಯಕ್ಕ, ಅಕ್ಕಮಹಾದೇವಿ, ಅಕ್ಕನಾಗಮ್ಮ, ನೀಲಲೋಚನೆ ಬಸವಣ್ಣ, ಲಿಂಗಮ್ಮ, ಲಕ್ಕಮ್ಮ, ಮೋಳಿಗೆ ಮಾರಯ್ಯ, ಚೆನ್ನಬಸವಣ್ಣ, ಸೊನ್ನಲಿಗೆ ಸಿದ್ಧರಾಮೇಶ್ವರ, ಗೋರಕ್ಷ, ಮರುಳು ಶಂಕರದೇವ ಹಾಗು ಅಸಂಖ್ಯಾತ ಪ್ರಮಥರು ಮುಖ್ಯರೆನ್ನಬಹುದು[೨೧ಅ].

ಶಿವಯೋಗ ಸಾಮ್ರಾಜ್ಯದಲ್ಲಿ 'ಬಯಲೊಡಲಿಗ'ನಾದ ಅಲ್ಲಮಪ್ರಭುವು ಕಂಡದ್ದೆಲ್ಲ ಪಾವನ, ಕೇಳಿದುದೆಲ್ಲ ಪರಮ ಬೋಧೆ, ಮುಟ್ಟಿದುದೆಲ್ಲ ಪುರುಷದ ಸೋಂಕು, ನುಡಿಸಿದವರೆಲ್ಲ ಸದ್ಯೋನ್ಮುಕ್ತರು, ಮುಟ್ಟಿದ ಧರೆಯೆಲ್ಲ ಅವಿಮುಕ್ತ ಕ್ಷೇತ್ರ, ಸೋಂಕಿದ ಜಲವೆಲ್ಲ ಪುಣ್ಯ ತೀರ್ಥಂಗಳು,[೨೨] ಇಂಥ ಮಹಿಮನು ಆಕಾರ, ನಿರಾಕಾರವೆಂಬ ಎರಡೂ ದೇಹಗಳನ್ನು ಧರಿಸಬಲ್ಲವನಾಗಿ, ಪರಬ್ರಹ್ಮವಸ್ತುವೆ ತಾನಾಗಿ, ವ್ಯೋಮಮೂರ್ತಿಯಾಗಿ, ಇಂದಿಗೂ ಶಿವಯೋಗ ಸಾಧಕರಿಗೆ ಆದರ್ಶನೂ ಆಶ್ಚರ್ಯನೂ ಆಗಿದ್ದಾನೆ. ನಿರ್ಬಯಲ ದೇಹಿಯ ಷಟ್‌ಸ್ಥಲದ ಈ ವಚನ ಶಿವಯೋಗದ ಆದರ್ಶಕ್ಕೆ ಸಾಕ್ಷಿಯಾದೀತು !

"ಸರ್ವಶೂನ್ಯ ಆದಿ ಅನಾದಿ ಭಕ್ತಸ್ಥಲ,
ನಾದ ಬಿಂದು ಮಹೇಶ್ವರ ಸ್ಥಲ,
ಕಳೆಬೆಳಗು ಪ್ರಸಾದಿಸ್ಥಲ,

---

೨೦. ಅಲ್ಲಮಪ್ರಭುದೇವ 'ಪರಮಯೋಗ ಮಂತ್ರಗೋಪ್ಯ' ಪದ್ಯ ೨೪-೨೬

೨೧ಅ. ಅಲ್ಲಮಪ್ರಭುದೇವರ ವಚನಗಳು - ವಚನ ೩೦೯

೨೨. ಅಲ್ಲಮಪ್ರಭುದೇವರ ವಚನಗಳು - ವಚನ ೧೩೩೭

ಅಱುವು ನಿರವಯವು ಪ್ರಾಣಲಿಂಗಿಸ್ಥಲ,
ಜ್ಞಾನ ಸುಜ್ಞಾನ ಶರಣಸ್ಥಲ,
ಭಾವವಿಲ್ಲದ ಬಯಲು ಬಯಲಿಲ್ಲದ ಭಾವ ಆಗಮ್ಯದ ಐಕ್ಯಸ್ಥಲ,
ಇಂತೀ ಷಡು ಸ್ಥಲದ ಕೊರಡ ಮೆಟ್ಟನಿಂದಂಗೆ ಹೆಸರಿಲ್ಲ
ಕುಱುಡಿಲ್ಲ, ತನಗೆ ತಾನಿಲ್ಲ ಗುಹೇಶ್ವರಾ ![೨೩]

೨೩. ಅಲ್ಲಮಪ್ರಭುದೇವರ ವಚನಗಳು - ವಚನ ೧೪೦೯

# ಮಹಾದೇವಿ ಅಕ್ಕನ ಶಿವಯೋಗ ಸಾಧನೆ

ಶ್ರೀ.ಮ.ನಿ.ಪ್ರ. ಜಗದ್ಗುರು ಅನ್ನದಾನೀಶ್ವರ ಮಹಾಸ್ವಾಮಿಗಳು

---

ಭಾರತೀಯ ದಾರ್ಶನಿಕರು ಹಾಗೂ ಅನುಭಾವಿಗಳು ತಮ್ಮ ತತ್ತ್ವಸಿದ್ಧಾಂತವನ್ನು ಅಳವಡಿಸಿಕೊಳ್ಳಲು ಪ್ರಯೋಗಶಾಲೆಯ ಕಲ್ಪನೆಯಿಂದ ದೂರಉಳಿದರೆಂದೇ ಹೇಳಬೇಕು. ಚತುರ್ವೇದಗಳಲ್ಲಿ ಬರುವ ''ಅಯಮಾತ್ಮಾ ಬ್ರಹ್ಮ'', ''ಪ್ರಜ್ಞಾನಂ ಬ್ರಹ್ಮ'', ''ತತ್ತ್ವಮಸಿ'', ''ಅಹಂ ಬ್ರಹ್ಮಾಸ್ಮಿ'' ಈ ನಾಲ್ಕು ಮಹಾವಾಕ್ಯಗಳು, ಬ್ರಹ್ಮದ ಕಲ್ಪನೆಯನ್ನು ಕೊಟ್ಟಿದ್ದರೂ ಪ್ರತ್ಯಕ್ಷ ಅನುಭವಗಮ್ಯವಾಗದೆ ನುಡಿಯ ಬ್ರಹ್ಮವಾಗಿಯೇ ಉಳಿದುದು ಕಂಡುಬರುತ್ತದೆ. ಆದರೆ ಪ್ರಾಯೋಗಿಕ ದರ್ಶನ ವೀರಶೈವರದೆಂಬುದನ್ನು ಅರಿಯಬೇಕು. ಪ್ರಯೋಗಾತ್ಮಕ ಸಿದ್ಧಾಂತವೇ ಶರಣತತ್ತ್ವ. ಆದರಿಂದ ಲಿಂಗಾಂಗಸಾಮರಸ್ಯರೂಪ ಪ್ರಯೋಜನವು ಲಭ್ಯವಾಗುವದು. ಸಮರಸಾನಂದ ಪ್ರಾಪ್ತವಾಗುವದು. ಇದಕ್ಕೇನೆ ಶಿವಯೋಗವೆನ್ನುವರು. ಇದನ್ನಾದರೂ ಸಾರ್ವತ್ರಿಕಗೊಳಿಸಲಿಲ್ಲ. ಗುಪ್ತವಾಗಿಯೇ ಉಳಿಸಿದ ಕಾರಣ ಶಿವಯೋಗದ ಪ್ರಚಾರವಾಗಲಿಲ್ಲ.

ಯುಜ್-ಸಂಗತಕರಣೇ ; ಘಟಿಸು, ಕೂಡುವಿಕೆ ಒಂದಾಗುವಿಕೆ, ಎಂಬ ಅರ್ಥವುಳ್ಳ 'ಯುಜ್ ಧಾತುವಿನಿಂದ ಯೋಗಪದವು ನಿಷ್ಪನ್ನಗೊಳ್ಳುವದು. ''ಯುಜ್‌ಸಮಾಧೌ'' ಎಂಬ ಧಾತುವಿನ ಪ್ರಕಾರ ಯೋಗವು ಸಮಾಧಿಯನ್ನು ಸಹ ಸೂಚಿಸುವದು. ಪತಂಜಲಿಯ ಯೋಗದರ್ಶನದಲ್ಲಿ - 'ಯೋಗಶ್ಚಿತ್ತವೃತ್ತಿನಿರೋಧಃ ಮನಸ್ಸಿನ ಚಂಚಲವಾದ ಪ್ರವೃತ್ತಿಗಳನ್ನು

ನಿರೋಧಿಸುವುದಕ್ಕೇನೆ' ಯೋಗವೆಂದು ಕರೆದರೆ, ಭಗವದ್ಗೀತೆಯಲ್ಲಿ 'ಯೋಗಃ ಕರ್ಮ ಸು ಕೌಶಲಮ್ ಮತ್ತು 'ಸಮತ್ವಂ ಯೋಗ ಉಚ್ಯತೇ' ಕರ್ಮಕುಶಲತೆಯನ್ನು ಯೋಗವೆಂದು ಒಂದು ಕಡೆ ನಿರೂಪಿಸಿದ್ದರೆ, ಇನ್ನೊಂದೆಡೆಯಲ್ಲಿ ಸಮತ್ವವೇ ಯೋಗವೆಂಬುದಾಗಿ ಪ್ರತಿಪಾದಿಸಲ್ಪಟ್ಟಿದೆ. ಸಾಮಾನ್ಯವಾಗಿ ವ್ಯವಹಾರದಲ್ಲಿ 'ಅಪ್ರಾಪಪ್ರಾಪಣೋ ಯೋಗಃ' ಅಲಭ್ಯವಾದ ವಸ್ತು ಆಕಸ್ಮಿಕವಾಗಿ ದೊರೆತರೆ ಅದಕ್ಕೂ ಯೋಗವೆನ್ನುವ ರೂಢಿಯಿದೆ. ರೂಢಿಗಿಂತಲೂ ಶಾಸ್ತ್ರಸಮ್ಮತವಾದ ಯೋಗವು ಇಂದ್ರಿಯ ಮತ್ತು ಚಿತ್ತವೃತ್ತಿಗಳ ನಿರೋಧವನ್ನು, ಸಮಾಧಿಯನ್ನು ಸೂಚಿಸುವುದು ಯೋಗಶಾಸ್ತ್ರಕಾರರಾದ ಪತಂಜಲಿಯು ಚಿತ್ತವೃತ್ತಿಗಳನ್ನು ನಿವೃತ್ತಿಗೊಳಿಸುವುದಕ್ಕೆ ಯೋಗವೆಂದು ಭಾಷ್ಯಬರೆದರೆ ಶಿವಾದ್ವೈತಿಗಳಾದ ವೀರಶೈವರು ಇಂದ್ರಿಯ ಹಾಗೂ ಚಿತ್ತವೃತ್ತಿಗಳು ಕೇವಲ ನಿವೃತ್ತಿಯಾದರೆ ಸಾಲದು; ಭಕ್ತರ ಚೈತನ್ಯದಲ್ಲಿ ನೆಲಸಿದ ಅದ್ಭುತ ಅಲೌಕಿಕ ಸತ್ಯದ ದರ್ಶನದಿಂದ ಶಬ್ದಮುಗ್ಧವಾದ ಯೋಗಿಯ ಅನುಭೂತಿಯು ಶಬ್ದದಲ್ಲಿ ಸಾಕಾರಗೊಂಡಿದೆ.

*ಆಕಾಶದೊಳಗಣ ಜ್ಯೋತಿಯಾ ಪ್ರಭೆ ಬಂದು*
*ಲೋಕಂಗಳೊಳಗೆ ಮುಸಗಲು । ಅದಕಂಡು*
*ಏಕಾಂಗಿಯಾದಡವ ಯೋಗಿ ॥ 18 ॥*

ಲಿಂಗೋಪಾಸಕನಾದ ಭಕ್ತನು ಸಕಲ ಐಹಿಕ ಭೋಗಗಳನ್ನು ಲಿಂಗಾರ್ಪಿತಗೊಳಿಸಿ ಲಿಂಗ ಭೋಗೋಪ ಭೋಗಿಯಾಗಬೇಕು ಪ್ರಸಾರ ಜೀವಿಯಾಗಿ ಪ್ರಾಪಂಚಿಕ ವಿಷಯ ಸುಖಗಳನ್ನು ಶಿವಪ್ರಸಾದವೆಂದು ಸ್ವೀಕರಿಸುವ ಪ್ರಸಾದಭಾವ ಅಳವಡಬೇಕು ಇಂಥ ಸರ್ವಾರ್ಪಣ ಭಾವಸಿದ್ಧಿಯಿಂದ ಭಕ್ತನು ಸರ್ವಾಂಗಲಿಂಗಿಯಾಗುವ ಪರಿಯನ್ನು ಮಹಾದೇವಿಯಕ್ಕ ಅರಿತು ಆಚರಿಸಿದ್ದಾಳೆ.

*ನಡೆವನು ಲಿಂಗದ ಕೂಡೆ ಮಡಿವೆನು ಲಿಂಗದವೊಡನೆ*
*ಎಡವಿಡದೆ ಬರ್ಪ ವಿಷಯದ । ಭೋಗಂಗಳ*
*ಕೊಡುವೆನು ಲಿಂಗಮುಖದೊಳಗೆ ॥ 32 ॥*

ಸಾಧನೆಗೆ ಅತಿಸುಲಭಸಾಧ್ಯವಾಗಬಲ್ಲ ಗುರು-ಲಿಂಗ-ಜಂಗಮ ಪಾದೋದಕ ಪ್ರಸಾದ ವಿಭೂತಿ ರುದ್ರಾಕ್ಷಿ ಮಂತ್ರ ಈ ಅಷ್ಟಾವರಣಗಳನ್ನು ಲಕ್ಷಿಸಿ ಅತಿಕಠಿಣವಾದ ಯಮನಿಯಮ ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ - ಈ ಅಷ್ಟಾಂಗಯೋಗಗಳಲ್ಲಿ ತಮ್ಮ ಆತ್ಮಶಕ್ತಿಯನ್ನು ವ್ಯಯಿಸುವ ಅಜ್ಞಾನವನ್ನು ಅಲ್ಲಗಳೆದು ದೃಷ್ಟಿಯೋಗದ ಇಷ್ಟಲಿಂಗದುಪಾಸನೆಯ ಮೂಲಕ ಶಿವಯೋಗ ಸಾಧಿಸುವ ಸರಳ ವಿಧಾನವನ್ನು ಪ್ರತಿಪಾದಿಸಿದ್ದಾಳೆ.

*ಅಷ್ಟಾವರಣದ ಹಣ್ಣು ಬಟ್ಟಬಯಲೊಳಗಿರಲು*
*ಅಷ್ಟಾಂಗಯೋಗಗಳ ಮಾಡಿ / ಬಳಲುವರು*
*ದೃಷ್ಟಿಯ ಇಡುವುದನ್ನು ಮರೆದು // 32 //*

ಜೀವಾತ್ಮನಲ್ಲಿ ಅವ್ಯಕ್ತವಾಗಿರುವ ಶಿವಕಳೆಯನ್ನು ಸದ್ಗುರುವು ಹಸ್ತಮಸ್ತಕ ಸಂಯೋಗದಿಂದ ಜಾಗೃತಗೊಳಿಸುತ್ತಾನೆ. ಭವದಲ್ಲಿ ಭಾವಲಿಂಗವಾಗಿ ಪ್ರಾಣದಲ್ಲಿ ಪ್ರಾಣಲಿಂಗದಾ ಸಹವಾಸದಲ್ಲಿ ಅವ್ಯಕ್ತವಾಗಿರುವ ಪಿಂಡಗತ ಬ್ರಹ್ಮದ ಚಿತ್ಕಳೆಯನ್ನೆಲ್ಲ ಕರಸ್ಥಲದ ಇಷ್ಟಲಿಂಗರೂಪದಲ್ಲಿ ಅನುಗ್ರಹಿಸುತ್ತಾನೆ. ಅಂಗ-ಲಿಂಗವಾಗುವ ರಹಸ್ಯವನ್ನು ಉಪದೇಶಿಸುತ್ತಾನೆ. ಆಗ ಭಕ್ತನು ತನ್ನ ಅರಿವಿನ ಕುರುಹಾದ ಇಷ್ಟಲಿಂಗಾನುಸಂಧಾನದಿಂದ ಸ್ವಸ್ವರೂಪವನ್ನರಿತು ನಿಜಮುಕ್ತನಾಗುತ್ತಾನೆ. ಜೀವಾತ್ಮದ ಭವಬಾಧೆಗಳನ್ನು ಪರಿಹರಿಸುವ ಇಷ್ಟಲಿಂಗದ ಹಿರಿಮೆಯನ್ನು ಅಕ್ಕ ಹೃದಯತುಂಬಿ ಸ್ತುತಿಸಿದ್ದಾಳೆ.

ಅವು ನಿಷ್ಪತ್ತಿಗೊಳ್ಳಬೇಕೆಂಬುದಾಗಿ ವ್ಯಾಖ್ಯಾನಿಸುವರು. ನಿಷ್ಪತ್ತಿ ಭಾವವೇ ಶಿವಯೋಗಕ್ಕೆ ಪೂರಕವಾದುದು.

ಯೋಗಮಾರ್ಗವು ಶಿವಯೋಗಕ್ಕೆ ಸಹಕಾರಿಯಾಗಿದೆ. ಯೋಗದ ಪ್ರಕ್ರಿಯೆಯನ್ನು ಕೆಲಮಟ್ಟಿಗೆ ಅಳವಡಿಸಿಕೊಳ್ಳುತ್ತ ಶಿವಯೋಗವು ತನ್ನದೇ ಆದ ನಿಲವಿನಲ್ಲಿ ಮುಂದುವರಿಯುತ್ತದೆ. ವಸ್ತುತಃ ಯೋಗವೆಂಬುದು ಬೌದ್ಧಿಕ ಕಸರತ್ತಲ್ಲ. ಅದೊಂದು ಪರಮೋಚ್ಚವಾದ ಆಧ್ಯಾತ್ಮಿಕ ಸಾಧನೆ. ಶರೀರ ಇಂದ್ರಿಯ ಮನಸ್ಸು ಹಾಗೂ ಆತ್ಮವನ್ನು ಪರಿಶುದ್ಧಗೊಳಿಸುವ ಮಹತ್ವದ ಸಾಧನೆ. ಇದರಿಂದ ಜೀವಾತ್ಮನು ಪರಮಾತ್ಮನೊಡನೆ ಒಂದಾಗುವ ಮಾರ್ಗವೇ ಯೋಗ. ಇದರಲ್ಲಿರುವ ಅಷ್ಟಾಂಗಯೋಗ ಸುಲಭವಾದುದಲ್ಲ. ಕಾಯಕಷ್ಟವೆನಿಸುವುದು. ಪ್ರಾಣಾಯಾಸವುಳ್ಳದು ಎಂದು ವೀರಶೈವರು ಸುಲಭವಾದ ಶಿವಯೋಗವನ್ನು ತಮ್ಮದನ್ನಾಗಿಸಿದರು.

*ಹಠಯೋಗ ಮಾರ್ಗ ಸಂಕಟದಿನಾಗುವ ಮೋಕ್ಷ*
*ಸಟೆಯೆಂದು ಬಿಡಿಸಿ-ಘಟಕ ಸಂಗದ ಲಿಂಗ*
*ದಿಟವೆಂದ ಗುರುವೆ ಕೃಪೆಯಾಗು / ಗು.ಕ. ತ್ರಿವಿಧಿ //105 //*
*ಹಲವು ಯೋಗವ ಮಾಡಿ / ಫಲವೇನು ಮಗನೆ ಎಂ*
*ದೊಲಿದು ಲಿಂಗಾಂಗ ಸುಲಭಯೋಗವ ನೋಡ*
*ಗಲಿಸಿದಾ ಗುರುವೆ ಕೃಪೆಯಾಗು // 106 //*

ಹಠಯೋಗಮಾರ್ಗ ಕಷ್ಟಕರವಾದುದು. ಕಾಯವಿಡಿದು ಕೈವಲ್ಯಕ್ಕೇರುವ, ಕಷ್ಟವಿಲ್ಲದ ಯೋಗ ಶಿವಯೋಗ. ಇದುವೆ ಲಿಂಗಾಂಗಯೋಗ. ಹಠಯೋಗದ ಸಂಕಷ್ಟದಿಂದ ದೊರೆಯುವ

ಮೋಕ್ಷ ದಿಟವಲ್ಲವೆಂದರು ಶರಣರು. ಯಾಕೆಂದರೆ ಅನೇಕ ಶಾರೀರಿಕ ದುಃಖಗಳನ್ನು ಅನುಭವಿಸಿ ತನು-ಮನ-ಇಂದ್ರಿಯಗಳನ್ನು ಬಳಲಿಸಿ ಶಿವನ ಕೃಪಾಪ್ರಸಾದವನ್ನು ತ್ಯಜಿಸಿ ಯೋಗಿಯೆನಿಸಿ ಶರೀರನಾಶವಾದ ಬಳಿಕ ಮೋಕ್ಷವನ್ನು ಹೊಂದುವನು. ಯೋಗಿಯು ಆತನು ಅಣಿಮಾದಿ ಸಿದ್ಧಿಗಳನ್ನು ಪಡೆಯಬಹುದು. ಆದರೆ ಪುಣ್ಯಕ್ಷಯವಾದರೆ ಆತನು ಪುನಃ ಭವಕ್ಕೆ ಬರಬೇಕಾಗುವುದು. ಅಲ್ಲದೆ ಯೋಗಭ್ರಷ್ಟರಾಗಿ ಜನ್ಮಾಂತರಗಳನ್ನು ಅನುಭವಿಸುವವರೇ ಹೆಚ್ಚು. ಆದುಕಾರಣ ಸಂಕಷ್ಟದಿಂದ ಸಾಧ್ಯವೆನಿಸುವ ಹಠಯೋಗ ಮಾರ್ಗದಲ್ಲಿ ಲಭ್ಯವಾಗುವ ಮೋಕ್ಷವು ಸಟೆಯೆಂದರು. ಇದು ಸ್ಥಿರ (ಶಾಶ್ವತ) ಮೋಕ್ಷವೆನಿಸುವುದಿಲ್ಲ. ಲಿಂಗಾಂಗಯೋಗದಲ್ಲಿ ಕ್ರಿಯಾಜ್ಞಾನಗಳ ಸಮನ್ವಯವಿದೆ. ಅಂಗೈಯೊಳಗಿನ ಲಿಂಗದಲ್ಲಿ ದೃಷ್ಟಿಯಿರಿಸಿ ತದೇಕಚಿತ್ತದಿಂದ ಮನದಲ್ಲಿ ಮಂತ್ರಧ್ಯಾನಮಾಡುವ ಧ್ಯಾನಯೋಗವಿದೆ. ಸರ್ವೇಂದ್ರಿಯಗಳಲ್ಲಿ ಲಿಂಗಗಳನ್ನು ಧಾರಣಮಾಡಿಕೊಂಡ ಅನುಭಾವವಿದೆ. ಆಯಾಲಿಂಗಗಳಿಗೆ ಸುಚಿತ್ತಾದಿ ಹಸ್ತಗಳಿಂದ ಪದಾರ್ಥಗಳನ್ನು ಅರ್ಪಿಸಿ ಅನುಭವಿಸುವುದರಿಂದ ಆನಂದವಿದೆ. ಇಂಥ ಸಮರಸಾನಂದವೇ ಶಿವಯೋಗದ ಸಮಾಧಿ. ಆನಂದದಲ್ಲಿ ನಿಂದ ನಿಜವೇ ಸಮಾಧಿಯೆಂಬ ಮಾತನ್ನು ಜಂಗಮಪುಂಗವ ಅಲ್ಲಮಪ್ರಭುಗಳು ಸೊನ್ನಲಾಪುರ ಸಿದ್ಧರಾಮದೇವರಿಗೆ ಮಂತ್ರಗೋಪ್ಯದಲ್ಲಿ ಸುಂದರವಾಗಿ, ಅನುಭಾವಪೂರ್ಣವಾಗಿ ತಿಳಿಸುವುದನ್ನು ಮನನಮಾಡಬೇಕು. ಅದಕ್ಕಾಗಿ ಲಿಂಗಾಂಗಯೋಗ ಸುಲಭಯೋಗವಾಗಿದೆ. ಇಂಥ ಸುಲಭವಾದ ಶಿವಯೋಗವನ್ನು ಸಾಧಿಸಿದ ಕಿರಿವಯದ ಹಿರಿಯ ಅನುಭಾವಿ ಮಹಾದೇವಿ ಅಕ್ಕನವರು. ವಿಶ್ವದ ಇತಿಹಾಸದಲ್ಲಿಯೇ ಮಹಿಳೆಯ ಸ್ಥಾನಮಾನವನ್ನು ಉಜ್ವಲವಾಗಿ ಬೆಳಗಿಸಿದ ಶ್ರೇಯಸ್ಸು ಅಕ್ಕನದು.

*ಕೂಡಲಚನ್ನಸಂಗಯ್ಯನಲ್ಲಿ ಬೆರಸಿ ಬೇರಿಲ್ಲದಿಪ್ಪ ಹಿರಿತನ*
*ನಮ್ಮ ಮಹಾದೇವಿಯಕ್ಕಂಗಾಯಿತ್ತು*

ಎಂದು ಹಿರಿತನದ ನ್ಯಾಯನಿರ್ಣಯವನ್ನಿತ್ತ ಷಟ್‌ಸ್ಥಲಚಕ್ರವರ್ತಿ ಚನ್ನಬಸವಣ್ಣನವರ ನುಡಿಗಡಣ ಅಕ್ಕನ ಘನವ್ಯಕ್ತಿತ್ವವನ್ನು ಚಿತ್ರಿಸುತ್ತದೆ. ಕೂಡಲ ಚನ್ನಸಂಗಯ್ಯನಲ್ಲಿ ಬೆರೆಸಿ ಬೇರಿಲ್ಲದಿರುವಿಕೆಯೇ ಅಕ್ಕನು ಸಾಧಿಸಿದ ಶಿವಯೋಗದ ಸಾಕ್ಷಾತ್ಕಾರ. ಇಲ್ಲಿ ಆ ಸ್ವರೂಪ ವ್ಯಕ್ತವಾಗುತ್ತದೆ. ಲಿಂಗಾಂಗ ಸಮರಸವನ್ನು ತಮ್ಮ ವಚನಗಳಲ್ಲಿ ವ್ಯಕ್ತವಾಗಿಸಿದ್ದರೂ ಅಕ್ಕನವರು ಶಿವಯೋಗವನ್ನು ಕಾವ್ಯಮಯವಾಗಿ ಯೋಗಾಂಗತ್ರಿವಿಧಿಯಲ್ಲಿ ತಿಳಿಸಿದ್ದಾರೆ.

ಮಹಾದೇವಿಯಕ್ಕನವರು ಬಾಲ್ಯದಿಂದಲೂ ಲಿಂಗವನ್ನು ಬಳಸಿ ಆಟವಾಡಿದವಳು. ಚನ್ನಮಲ್ಲಿಕಾರ್ಜುನನ್ನೇ ಪತಿಯಾಗಿಸಿಕೊಂಡಳು. ಶಿವದೀಕ್ಷಾಸಂಪನ್ನಳಾಗಿ ಶರಣಸತಿ ಯಾದವಳು ಅವಳು ಅಪ್ಪಟ ಪ್ರೇಮಯೋಗಿನಿ. ಕಾವಯೋಗಿನಿಯೂ ಹೌದು.

"ಹರನೆ ನೀನೆನಗೆ ಗಂಡನಾಗಬೇಕೆಂದು ಅನಂತಕಾಲ ತಪಸ್ಸ[1] ಮಾಡಿದ ಅಕ್ಕನು ಹರನನ್ನೇ ಪತಿಯನ್ನಾಗಿ ಪಡೆಯುತ್ತಾಳೆ. ವೀರಶೈವ ಸಿದ್ಧಾಂತದಂತೆ ಶಿವದೀಕ್ಷಾ ಸಂಪನ್ನನಾಗುವದೇ ಆಧ್ಯಾತ್ಮಿಕ ಮದುವೆ. ದೀಕ್ಷಾವಂತನಾದವನು ಬಾಲನೇ ಇರಲಿ, ವೃದ್ಧನೇ ಇರಲಿ. ತರುಣನೇ ಇರಲಿ, ಲಿಂಗಾಂಗಸಾಮರಸ್ಯ ಪಡೆಯಲು ಅರ್ಹನು. ಇಲ್ಲಿ ವಯೋಭೇದವಿಲ್ಲ, ಲಿಂಗಭೇದವಿಲ್ಲ. ಲೌಕಿಕವಲ್ಲಿ ವಿವಾಹವಿಲ್ಲದೆ ಸತಿ-ಪತಿಗಳ ಸಮರಸ ಸಾಧಿಸುವುದಿಲ್ಲವೊ ಹಾಗೆ ಅಲೌಕಿಕವಾದ ಶಿವಯೋಗಕ್ಕೆ ದೀಕ್ಷೆ ಅವಶ್ಯ. ಗರ್ಭಸ್ಥಶಿಶುವಿಗೆ ಲಿಂಗವನ್ನು ಧರಿಸಿದರೂ ಆನೆಯ ವಯಸ್ಸಿಗೆ ಪುನಃಗುರುಗಳಿಂದ ದೀಕ್ಷೆಮಾಡಿಸಬೇಕು. ದೀಕ್ಷೆಯಿಂದ ಉಂಟಾದ ಲಾಭವನ್ನು ಅಕ್ಕನ ವಾಣಿಯಲ್ಲಿಯೇ ಆಲಿಸಿ.

*ಸದ್ಗುರುಸ್ವಾಮಿ ಶಿಷ್ಯಂಗೆ ಅನುಗ್ರಹವ ಮಾಡುವಲ್ಲಿ*
*ತಚ್ಛಿಷ್ಯನ ಮಸ್ತಕದ ಮೇಲೆ ತನ್ನ ಶ್ರೀ ಹಸ್ತವನಿರಿಸಿದಡೆ*
*ಲೋಹದ ಮೇಲೆ ಫರುಷ ಬಿದ್ದಂತಾಯಿತ್ತಯ್ಯ.*
*ಒಪ್ಪುವ ಶ್ರೀಭೂತಿಯ ನೊಸಲಿಂಗೆ ಪಟ್ಟವ ಕಟ್ಟಿದಡೆ*
*ಮುಕ್ತಿರಾಜ್ಯದ ಒಡೆತನಕ್ಕೆ ಪಟ್ಟವ ಕಟ್ಟಿದಂತಾಯಿತ್ತಯ್ಯ*
*ಸದ್ಯೋಜಾತ ವಾಮದೇವ ಅಘೋರ ತತ್ಪುರುಷ ಈಶಾನವೆಂಬ*
*ಪಂಚಕಳಶದಭಿಷೇಕವ ಮಾಡಿಸಲು*
*ಶಿವನ ಕರುಣಾಮೃತದ ಸೊನೆ ಸುರಿಸಿದಂತಾಯಿತ್ತಯ್ಯಾ*
*ನೆರದ ಶಿವಗಣಂಗಳ ಮಧ್ಯದಲ್ಲಿ*
*ಮಹಾಲಿಂಗವನು ಕರತಳಾಮಳಕವಾಗಿ ಶಿಷ್ಯನ ಕರಸ್ಥಳಕ್ಕೆ ಇತ್ತು*
*ಅಂಗದಲ್ಲಿ ಪ್ರತಿಷ್ಠಿಸಿ, ಪ್ರಣವ ಪಂಚಾಕ್ಷರಿಯುಪದೇಶವ*
*ಕರ್ಣದಲ್ಲಿ ಹೇಳಿ, ಕಂಕಣವ ಕಟ್ಟಿದಲ್ಲಿ*
*ಕಾಯವೆ ಕೈಲಾಸವಾಯಿತ್ತು*
*ಪ್ರಾಣವೆ ಪಂಚಬ್ರಹ್ಮಮಯ ಲಿಂಗವಾಯಿತ್ತು.*
*ಇಂತು, ಮುಂದ ತೋರಿ ಹಿಂದ ಬಿಡಿಸಿದ*

**ಶ್ರೀ ಗುರುವಿನ ಸಾನ್ನಿಧ್ಯದಿಂದಾನು ಬದುಕಿದೆನಯ್ಯಾ ಚನ್ನಮಲ್ಲಿಕಾರ್ಜನಾ[2]**

ಇಲ್ಲಿ ಶಿವದೀಕ್ಷಾಸಂಸ್ಕಾರದ ಮರ್ಮ ವ್ಯಕ್ತವಾಗಿದೆ. ಕಾಯವೇ ಕೈಲಾಸವಾಗುವ ಪರಿಯಿದೆ. ಲಿಂಗವನ್ನು ಸದ್ಗುರುವಿನಿಂದ ಆಯತಮಾಡಿಕೊಂಡ ಬಳಿಕ ಪ್ರಾಣಲಿಂಗವನ್ನು ಸ್ವಾಯತ್ತೀಕರಿಸಿಕೊಳ್ಳುವುದೇ ಶಿವಯೋಗ. ಪ್ರಾಣಲಿಂಗದ ಸ್ವಾಯತ್ತೀಕರಣದಲ್ಲಿಯೇ ಭಾವಲಿಂಗದ ಸಾನ್ನಿಧ್ಯವಾಗುವುದು. ಕೇವಲ ಇಷ್ಟಲಿಂಗವನ್ನು ಧರಿಸಿಕೊಂಡರಾಗದು.

೧. ಮ.ವಚನ-೫೩
೨. ಮ.ವಚನ ೪೩

ಪ್ರಾಣಲಿಂಗ-ಭಾವಲಿಂಗಗಳ ಅನುಸಂಧಾನ ನಡೆಯಬೇಕು. ದೀಪವಿದ್ದರೆ ಮಾತ್ರ ಕಿರಣ-ಪ್ರಕಾಶಗಳು ಹರಡುವಂತೆ ; ಇಷ್ಟಲಿಂಗದಿಂದಲೇ ಪ್ರಾಣ-ಭಾವಲಿಂಗಗಳ ಪ್ರಕಾಶ ಅಂಗದಲ್ಲಿ ವ್ಯಾಪಿಸುವದು. ಅಂತೆಯೇ ಇಷ್ಟಲಿಂಗದ ಘನತೆಯನ್ನು -

*ಆರು ಭೂತಂಗಳಲಿ / ಆರು ತತ್ತ್ವಗಳಲ್ಲಿ*
*ಪೂರೈಸಿ ಇಪ್ಪ ಘನವನು ಮನದಲ್ಲಿ*
*ಆರೈದು ತಿಳಿದಡವ ಮುಕ್ತ* [೩]

ನೆಲ, ಜಲ, ಬೆಂಕಿ, ಗಾಳಿ, ಆಕಾಶ, ಆತ್ಮಗಳೆಂಬ ಆರು ಭೂತಗಳಲ್ಲಿ, ಮಂತ್ರಾಧ್ವ, ಪದಾಧ್ವ, ವರ್ಣಾಧ್ವ, ಭುವನಾಧ್ವ, ತತ್ತ್ವಾಧ್ವ, ಕಲಾಧ್ವಗಳೆಂಬ ಆರುತತ್ತ್ವಗಳಲ್ಲಿ ವ್ಯಾಪಿಸಿರುವ ಮೂರ್ತಿ, ಪಿಂಡ, ಸತ್‌ಕಲಾ, ಆನಂದ, ವಿಜ್ಞಾನ, ನಿಸ್ಸೀಮ ಬ್ರಹ್ಮರೇ ಇಷ್ಟಲಿಂಗವೆನಿಸುವರು. ಹೀಗೆ ಭೂತಗಳಲ್ಲಿ, ತತ್ತ್ವಗಳಲ್ಲಿ, ಬ್ರಹ್ಮರಲ್ಲಿ ವ್ಯಾಪಿಸಿ ಇಪ್ಪ ಘನವಾದ ಲಿಂಗವನ್ನು ಮನಸ್ಸಿನಲ್ಲಿ ಆರೈದು ತಿಳಿಯುವುದೇ ಶಿವಯೋಗ. ಅಂಥ ಶಿವಯೋಗಿಯೇ ಜೀವನ್ಮುಕ್ತನು ಎಂಬ ವಿಚಾರವನ್ನು ಅಕ್ಕನವರು ಅತ್ಯಂತ ಅನುಭಾವಪೂರ್ಣವಾಗಿ ನಿರೂಪಿಸಿದ್ದಾರೆ. ಅಕ್ಕನವರ ಸಾಧನಮಾರ್ಗ ರಾಜಮಾರ್ಗವೆನಿಸಿದೆ. ಭಾಷೆ ಸರಳವಾದರೂ ಚಾಟಿಯ ಪೆಟ್ಟಿನಂತೆ ಮನಸ್ಸಿಗೆ ನಾಟುತ್ತದೆ. ಅರ್ಥವಿಸ್ತಾರಗೊಳ್ಳುತ್ತವೆ. ಭಾವವ್ಯಕ್ತವಾಗುತ್ತದೆ. ಸಾಧಕನಿಗೆ ಸಾಧನಮಾರ್ಗ ಸುಲಭವೆನಿಸುತ್ತದೆ. ಘನ ಚೈತನ್ಯವೆನಿಸಿದ ಲಿಂಗವನ್ನು ಮರೆತ ಮಾನವರನ್ನು ಕುರಿತು ಕನಿಕರ ಪಡುತ್ತಾಳೆ ಅಕ್ಕ.

*ಹಗಲು ನಾಲ್ಕು ಜಾವ ಅಶನಕ್ಕೆ ಕುದಿವರು*
*ಇರುಳು ನಾಲ್ಕುಜಾವ ವ್ಯಸನಕ್ಕೆ ಕುದಿವರು*
*ಅಗಸ ನೀರೊಳಗಿರ್ದು ಬಾಯಾರಿ ಸತ್ತಂತೆ*
*ತಮ್ಮೊಳಗಿರ್ದ ಮಹಾಘನವನರಿಯರು ಚನ್ನಮಲ್ಲಿಕಾರ್ಜುನಾ* [೪]

ಹಗಲಿನಲ್ಲಿ ಹೊಟ್ಟೆಹೊರೆವುದು, ಇರುಳಿನಲ್ಲಿ ವ್ಯಸನಕ್ಕೆಳಸುವುದು ಮಾನವನ ಪರಿಪಾಠ. ಬಟ್ಟೆ ತೊಳೆಯುವ ಮಡಿವಾಳ ನೀರೊಳಗೆ ನಿಂತಿದ್ದರೂ ಬಾಯಾರಿಕೆಯಿಂದ ಬಳಲುತ್ತಾನೆಂಬ ಲೋಕೋಕ್ತಿಯನ್ನಿತ್ತು ತಮ್ಮೊಳಗಿರುವ ಮಹಾಘನವೆನಿಸಿದ ಮಹಾಲಿಂಗವನ್ನು ಅರಿಯದೆ ಭವಭವಕ್ಕೆ ಬರುವುದನ್ನು ಸೂಚಿಸುತ್ತಾರೆ. ಲೋಕದ ಚಿಂತೆಯನ್ನು ಬಿಟ್ಟು ಲಿಂಗದ ಚಿಂತೆಯನ್ನು ಮಾಡಲು ಪ್ರೇರೇಪಿಸುತ್ತಾರೆ.

ತನ್ನ ಸಾಧನೆಯ ಹಂತವನ್ನು ಸ್ಪಷ್ಟವಾಗಿ ಮತ್ತೆ ತಿಳಿಸುತ್ತಾಳೆ ಅಕ್ಕ.

---

೩. ಯೋಗಾಂಗ ತ್ರಿವಿಧಿ-೬

೪. ಮ.ವಚನ.೮೦

ಆಡುವುದು ಹಾಡುವುದು ಹೇಳುವುದು ಕೇಳುವುದು ನಡೆವುದು ನುಡಿಸುವುದು
ಸರಸ ಸಮ್ಮೇಳವಾಗಿಪ್ಪುದಯ್ಯಾ ಶರಣರೊಡನೆ.
ಚನ್ನಮಲ್ಲಿಕಾರ್ಜುನಯ್ಯಾ ನೀ ಕೊಟ್ಟ ಆಯುಷ್ಯವುಳ್ಳನ್ನಕ್ಕರ,
ಲಿಂಗಸುಖಿಗಳ ಸಂಗದಲ್ಲಿ ದಿನಗಳ ಕಳೆವೆನು [೫]

ವ್ಯರ್ಥಹರಟೆಯ ಮಾತು ದುಸ್ಸಂಗದಲ್ಲಿ ಹೊತ್ತುಗಳೆಯದೆ ಶರಣರೊಡನೆ ಆಡುವುದರಿಂದ ಹಾಡುವುದರಿಂದ ಅವರು ನುಡಿದಂತೆ ಹೇಳುವುದರಿಂದ, ಅವರು ಹೇಳಿದ್ದನ್ನು ಕೇಳಿ ಪುನಃ ಪ್ರಶ್ನಿಸಿ ತಿಳಿದುಕೊಳ್ಳುವುದರಿಂದ, ಅಂತೆ ನಡೆವುದರಿಂದ ತನ್ನ ಸಂಗಾತಿಗಳನ್ನು ಹಾಗೆ ನುಡಿಸುವುದರಿಂದ, ಇಂಥ ಸರಸ ಸಮ್ಮೇಳನದಲ್ಲಿ ಕಾಲ ಕಳೆಯುವುದರಿಂದ ಲಿಂಗಾಂಗ ಸಾಮರಸ್ಯದ ಸಾಧನೆ ಸಾಧ್ಯವಾಗುವುದು. ಶಿವನಿತ್ತ ಆಯುಷ್ಯವನ್ನು ಲಿಂಗ ಸುಖಿಗಳ ಸಂಗದಲ್ಲಿಯೇ ಹೊತ್ತುಗಳೆವ ನಿರ್ಧಾರ ಆ ತಾಯಿಗೆ ಮನೆ ಮಾಡಿಕೊಂಡಿದೆ. ಅಕ್ಕನ ಸಾಧನೆಯ ಸ್ವರೂಪ ಹೀಗಿತ್ತು.

ಉಡುವೆ ನಾನು ಲಿಂಗಕ್ಕೆಂದು, ತೊಡುವೆ ನಾನು ಲಿಂಗಕ್ಕೆಂದು
ಮಾಡುವೆ ನಾನು ಲಿಂಗಕ್ಕೆಂದು, ನೋಡುವೆ ನಾನು ಲಿಂಗಕ್ಕೆಂದು.
ಎನ್ನಂತರಂಗ ಬಹಿರಂಗಗಳು ಲಿಂಗಕ್ಕಾಗಿ !
ಮಾಡಿಯೂ ಮಾಡದಂತಿಪ್ಪೆ ನೋಡಾ !
ಆನೆನ್ನ ಚನ್ನಮಲ್ಲಿಕಾರ್ಜುನನೊಳಗಾಗಿ
ಹತ್ತರೊಡನೆ ಹನ್ನೊಂದಾಗಿಪ್ಪುದನೇನ ಹೇಳುವೆನವ್ವಾ [೬]



ಸರ್ವೇಂದ್ರಿಯಗಳಲ್ಲಿ ಲಿಂಗದ ಅರಿವುಂಟಾದರೆ ಎಲ್ಲ ಕ್ರಿಯೆಗಳು ಲಿಂಗಮುಖವಾಗಿ ನಡೆಯುತ್ತವೆ. ಇಲ್ಲಿ ವ್ಯಕ್ತಿ ಅಥವಾ ಇಂದ್ರಿಯಗಳ ಕ್ರಿಯೆಗಳೆನಿಸವು. ಅಂತರಂಗ ಹಾಗೂ ಬಹಿರಂಗದಲ್ಲಿ ಲಿಂಗಭಾವವೇ ಬಲಿಯುತ್ತಿರಲು ಮಾಡಿಯೂ ಮಾಡದ ಭಾವ ಬೆಳೆಯುವದು. ಏನೆಲ್ಲ ಕ್ರಿಯೆಗಳೂ ಲಿಂಗಕ್ರಿಯೆಗಳಾಗಿ ಪರಿಣಮಿಸುತ್ತವೆ. ಬಾಹ್ಯ ಉಪಚಾರಗಳಿಗಿಂತ ಆಂತರಿಕ ಉಪಚಾರಗಳೇ ನಡೆಯುತ್ತವೆ. ಆಂತರಿಕ ಸಾಧನೆಯು ಪ್ರಾಣಲಿಂಗದ ಪೂಜೆಯಾಗುವುದು. ಪ್ರಾಣಲಿಂಗ ಪೂಜಾ ಪರಿಕರಗಳನ್ನು ಅಲ್ಲಮ ಪ್ರಭುಗಳು ಸುಂದರವಾಗಿ ವಚನಿಸಿದ್ದಾರೆ.

ಎನ್ನ ಹೃದಯಕಮಲ ಮಧ್ಯದಲ್ಲಿ ಮೂರ್ತಿಗೊಂಡಿಪ್ಪ ಎನ್ನ ಪ್ರಾಣೇಶ್ವರಂಗೆ
ಎನ್ನ ಕ್ಷಮೆಯ ಅಭಿಷೇಕ, ಎನ್ನ ಪರಮ ವೈರಾಗ್ಯದ ಪುಷ್ಪದ ಮಾಲೆ

---
೫. ಮ.ವಚನಗಳು-೯೪
೬. ಅದೇ ೯೯

*ಎನ್ನ ಸಮಾಧಿಸಂಪತ್ತೆ ಗಂಧ, ಎನ್ನ ನಿರಹಂಕಾರವೆ ಅಕ್ಷತೆ*
*ಎನ್ನ ಸದ್ವಿವೇಕವೆ ವಸ್ತ್ರ, ಎನ್ನ ಸತ್ಯವೆ ದಿವ್ಯಾಭರಣ*
*ಎನ್ನ ವಿಶ್ವಾಸವೆ ಧೂಪ, ಎನ್ನ ದಿವ್ಯ ಜ್ಞಾನವೆ ದೀಪ*
*ಎನ್ನ ನಿಭ್ರಾಂತಿಯೆ ನೈವೇದ್ಯ, ಎನ್ನ ನಿರ್ವಿಷಯವೆ ತಾಂಬೂಲ*
*ಎನ್ನ ಮೌನವೆ ಘಂಟೆ, ಎನ್ನ ನಿರ್ವಿಕಲ್ಪನೆಯೆ ಪ್ರದಕ್ಷಿಣೆ*
*ಎನ್ನ ಶುದ್ಧಿಯೆ ನಮಸ್ಕಾರ*
*ಎನ್ನ ಅಂತಃಕರಣದಿಂದ ಮಾಡುವ ಸೇವೆಯೆ ಉಪಚಾರಂಗಳು*
*ಈ ಪರಿಯಲ್ಲಿ ಎಮ್ಮ ಗುಹೇಶ್ವರ ಲಿಂಗಕ್ಕೆ ಪ್ರಾಣಲಿಂಗ ಪೂಜೆಯ ಮಾಡಿ*
*ಬಾಹ್ಯ ಕ್ರಿಯೆ ಮರೆದೆನು ಕಾಣಾ ಸಂಗನಬಸವಣ್ಣಾ.*[೭]

ಸಾಮಾನ್ಯ ಸಾಧಕನಿಗೆ ಬಾಹ್ಯಉಪಚಾರಗಳು ಬೇಕು. ಕ್ರಮೇಣ ಬಾಹ್ಯಉಪಚಾರ ಮಾಡುತ್ತ ಆಂತರಿಕ ಉಪಚಾರಗಳನ್ನು ಸಾಧಿಸಬೇಕಾಗುವುದು. ಈ ಆಂತರಿಕ ಉಪಚಾರಗಳು ಗಟ್ಟಿಗೊಂಡರೆ ಪ್ರಾಣಲಿಂಗ ಪೂಜೆಯು ಘಟಿಸುವುದು. ಶಿವಯೋಗದ ಅನುಭವವಾಗುವುದು. ಲಿಂಗಾಂಗ ಸಾಮರಸ್ಯದ ಆನಂದದಲ್ಲಿ ಮುಳುಗುವನು. ಅಕ್ಕನವರು ಸಾಧಿಸಿದ ತಮ್ಮ ಸಾಧನೆಯನ್ನು -

*ಅಂಗದ ಭಂಗವ ಲಿಂಗಮುಖದಿಂದ ಗೆಲಿದೆ*
*ಮನದ ಭಂಗವ ಅರುಹಿನ ಮುಖದಿಂದ ಗೆಲಿದೆ*
*ಜೀವದ ಭಂಗವ ಶಿವಾನುಭಾವದಿಂದ ಗೆಲಿದೆ*
*ಕರಣದ ಕತ್ತಲೆಯ ಬೆಳಗನುಟ್ಟು ಗೆಲಿದೆ.*
*ಜವ್ವನದ ಹೊರಮಿಂಚಿನಲ್ಲಿ ನಿಮ್ಮ ಕಣ್ಣಿಗೆ ತೋರುವ*
*ಕಾಮನ ಸುಟ್ಟುರುಹಿದ ಭಸ್ಮವ ನೋಡಯ್ಯಾ*
*ಚೆನ್ನಮಲ್ಲಿಕಾರ್ಜುನಾ, ಕಾಮನ ಕೊಂದು ಮನಸಿಜನಾಗುಳುಹಿದಡೆ*
*ಮನಸಿಜನ ತಲೆಯ ಬರಹವ ತೊಡೆದೆನು*[೮] ಎಂದಿದ್ದಾರೆ .

ಇಂದ್ರಿಯ ಮನಸ್ಸು ಮತ್ತು ಜೀವನ ಭಂಗವನ್ನು ಗೆಲಿದು ಅಂತಃಕರಣದ ಕತ್ತಲೆಯನ್ನು ಕಳೆದು ಬೆಳಕನ್ನೆ ಉಟ್ಟುಕೊಂಡ ಬಗೆಯನ್ನು ಚಿತ್ರಿಸಿದ್ದಾರೆ. ಇಂದ್ರಿಯ, ಮನಸ್ಸು, ಜೀವ, ಕರಣಗಳ ಕಾಟದಲ್ಲಿ ಯೌವನದ ಹೊರಮಿಂಚು ಮಿಂಚುತ್ತದೆ, ಕಾಮನ ಉರುವಣಿಗೆ ಮೇರೆದಪ್ಪಿಸುತ್ತದೆ. ಭಂಗಪದ ನಾನಾರ್ಥಗಳಿಂದ ಕೂಡಿದೆ, ನಾಮಪದವನ್ನಾಗಿಯೂ ಕ್ರಿಯಾಪದವನ್ನಾಗಿಯೂ ಪ್ರಯೋಗಿಸಲ್ಪಡುತ್ತದೆ. ಮುರಿಯುವಿಕೆ, ಸೀಳುವಿಕೆ, ಬಿರುಕು,

೭. ಅಲ್ಲಮ ಪ್ರಭುದೇವರ ವಚನಗಳು-೧೧೫೦
೮. ಅ.ಮ.ವಚನ-೧೦೫

ಸೀಳು, ಚೂರುಗೊಳಿಸು, ಸೋಲು, ಅಪಜಯ, ನಾಶ, ಕಷ್ಟ, ತೊಂದರೆ, ಅವಮಾನ, ಕೊಂಕು, ನಾಶಮಾಡುವ, ಕಡೆಗಣಿಸು ಹೀಗೆ ಅನೇಕ ಅರ್ಥಗಳಿವೆ. ಜೀವಾತ್ಮನು ಇಂದ್ರಿಯಗಳಿಂದ, ಮನಸ್ಸಿನಿಂದ, ಜೀವಭಾವದಿಂದ ಹಾಗೂ ಕರಣಗಳಿಂದ ಪಡಬಾರದ ಕಷ್ಟ ತೊಂದರೆಗಳಿಗೆ ಈಡಾಗುತ್ತಾನೆ. ಕಾರಣ ಇಂಥ ಭಂಗಗುಣವನ್ನು ಕಳೆಯಲು ಅಕ್ಕನವರು ಅನುಭಾವ ಗಮ್ಯವಾದ ನುಡಿಗಳನ್ನು ಸಾಧಕರಿಗೆ ನಿರೂಪಿಸಿದ್ದಾರೆ. ಅಂಗೇಂದ್ರಿಯಗಳನ್ನು ಲಿಂಗಮುಖದಿಂದ ಪರಿಶುದ್ಧಗೊಳಿಸಿದ್ದಾರೆ. ಮನದ ಚಾಂಚಲ್ಯ ಅರುವಿನ ಮುಖದಲ್ಲಿ ನಿಂತಿದೆ. ಜೀವಭಾವ ಶಿವಾನುಭಾವದಿಂದ ಕಡೆಗಣಿಸಲ್ಪಟ್ಟಿದೆ. ಅರ್ಚನ, ಅರ್ಪಣ, ಅನುಭಾವಗಳ ಮೂಲಕ ಕರಣಗಳ ಕತ್ತಲೆಯಳಿದು ಬೆಳಗೇ ತಾನಾದ ಶಿವಯೋಗಿನಿ ಅಕ್ಕನವರು. ಈ ಸಾಧನೆಯಿಂದ ಯೌವ್ವನದ ಭರದಲ್ಲಿ ಹೊರಗೆ ಮಿಂಚಿಸುವ ಕಾಮನ ಉರವಣಿಗೆ ಸುಟ್ಟು ಭಸ್ಮವಾಗಿದೆ ಅಕ್ಕನಲ್ಲಿ. ಅಂಥ ಕಾಮನ ಸುಟ್ಟುರುಹದ ಭಸ್ಮವನ್ನೇ ಧರಿಸಿಕೊಂಡ ಪರಂಜ್ಯೋತಿ ಮಹಾದೇವಿಯಕ್ಕನಲ್ಲಿ ಕಾಮನ ಉರುವಣಿಗೆ ಅಳಿದಿದೆ. ಮನಸಿಜನಾಗಿ ಮೈದೋರುವ ಹಣೆಬರಹದ ಪಟ್ಟಿಯೂ ಸಹ ನಾಶವಾಗಿದೆ. ಅಂದರೆ ಶಿವನು ಕಾಮನನ್ನು ಸುಟ್ಟು ಮನಸ್ಸಿನಲ್ಲಿ ಮೈದೋರುವಂತೆ ಹರಸಿದನು. ಅಕ್ಕನು ಮನಸಿಜನಾಗಿ ಮೈದೋರುವ ಹಣೆಪಟ್ಟಿಯನ್ನು ಸಹ ಸುಟ್ಟು ಭಸ್ಮಗೊಳಿಸಿದ್ದಾಳೆ. ಶಿವಾನುಭಾವಿಯಾದ ಆ ತಾಯಿಯಲ್ಲಿ ಯಾವ ಕಾಮನೆಗಳಿಲ್ಲ. ಎಲ್ಲವೂ ಲಿಂಗಮುಖನಾಗಿ, ಅರುಹನ ಮುಖವಾಗಿ ಶಿವಾನುಭಾವದ ಮುಖವಾಗಿ ನಿಷ್ಪತ್ತಿಗೊಂಡಿವೆ. ಇದುವೆ ಶಿವಯೋಗಿಯ ಸಾಧನೆ. ಅಂತೆಯೇ ಉರಿಲಿಂಗ ಪೆದ್ದಿಗಳು :

*ನಾನು ಕಾಮಿಸುತಿರ್ಪ ವಸ್ತುವಿನಲ್ಲಿ ಸಾಲೋಕ್ಯವಿದೆ ಸಾಮೀಪ್ಯವಿದೆ.*
*ಸಾರೂಪ್ಯವಿದೆ, ಸಾಯುಜ್ಯವಿದೆ, ಧರ್ಮವಿದೆ, ಅರ್ಥವಿದೆ*
*ಕಾಮವಿದೆ, ಮೋಕ್ಷವಿದೆ, ನಾನೇನನರಸುವಬಯಕೆ ಎಲ್ಲವೂ ಇದೆ ನೋಡಾ[೯]*

*ಶ್ರೀಗುರು ಕಾರುಣ್ಯದಿಂದ ಮಹಾವಸ್ತು ಕರಸ್ಥಲಕ್ಕೆ*
*ಬಂದ ಬಳಿಕ ಸರ್ವಸುಖಗಳೆಲ್ಲವೂ ಇದೇ ನೋಡಾ* [೧೦]

ಎಂಬುದಾಗಿ ಪ್ರತಿಪಾದಿಸಿದ್ದು ಮನನೀಯವಾಗಿದೆ. ವೀರಶೈವರು ಅನ್ಯಯೋಗಗಳ ಚಿಂತೆ ಮಾಡದೆ ಶಿವಯೋಗವನ್ನು ಸಾಧಿಸಿದರೆ ಸಕಲವೂ ಇದೆಯೆಂಬುದನ್ನು ಮನವರಿಕೆ ಮಾಡಿಕೊಳ್ಳಬೇಕು. ಕಲ್ಪವೃಕ್ಷ, ಕಾಮಧೇನು, ಚಿಂತಾಮಣಿ ಇಷ್ಟಲಿಂಗವೆಂಬುದನ್ನು ದೃಢವಾಗಿ ನಂಬಬೇಕು. ಶಿವಯೋಗವನ್ನು ಸಾಧಿಸಬೇಕು.

೯. ಉರಿಲಿಂಗ ಪೆದ್ದಿಗಳ ವಚನಗಳು-೧೭೪
೧೦. ಉರಿಲಿಂಗ ಪೆದ್ದಿಗಳ ವಚನಗಳು

*ಶಿವಪೂಜೆಯೇ ಮುಖ್ಯ ಶಿವಯೋಗವೆನಿಸುವದು*
*ಶಿವಪೂಜೆಯಿಲ್ಲದೆ ಮುಕ್ತಿ ಘಟಿಸದು ಮತ್ತೆ* [೧೧]

ಎನ್ನುತ್ತ - 'ಶಿವಪೂಜೆಗೆಣೆಯುಂಟೆ ಮೂಜಗದೊಳು' ಎಂದು ಕವಿರತ್ನ ವ್ಯಾಂಪುರ ಚನ್ನಕವಿಗಳು ಬಾಲಲೀಲಾ ಮಹಾಂತರ ಪುರಾಣದಲ್ಲಿ ಶಿವಯೋಗದ ಸರಳತೆಯನ್ನು ತಿಳಿಸಿದ್ದಾರೆ. ಇಷ್ಟಲಿಂಗಪೂಜೆಯಿಂದಲೆ ಮುಕ್ತಿ ಅಥವಾ ಲಿಂಗಾಂಗಸಮರಸ ಸಾಧ್ಯವಾಗುವುದೆಂಬುದನ್ನು ಸ್ಪಷ್ಟಪಡಿಸಿದ್ದಾರೆ. ವೈರಾಗ್ಯನಿಧಿ ನಾಗಭೂಷಣ ಘನಮಠಾರ್ಯರು

*ಶಿವಲಿಂಗಪೂಜೆ ಮಾಳ್ಪರಿಗೆ ಭವಭಯವಿಲ್ಲ*
*ಶಿವಲಿಂಗಪೂಜೆ ಮಾಳ್ಪರಿಗೆ ಜನಿಮೃತಿಗಳಿಲ್ಲ*
*ಶಿವಲಿಂಗಪೂಜೆ ಮಾಳ್ಪರಿಗೆ ದಾರಿದ್ರ್ಯ ದೋಷಂಗಳವು ಮುನ್ನಿಲ್ಲವೈ*
*ಶಿವಲಿಂಗಪೂಜೆ ಮಾಳ್ಪರಿಗೆ ಮೋಸಗಳಿಲ್ಲ*
*ಶಿವಲಿಂಗಪೂಜೆ ಮಾಳ್ಪರಿಗೆ ನಾಶನವಿಲ್ಲ*
*ಶಿವಲಿಂಗಪೂಜೆ ಮಾಳ್ಪರಿಗೆ ಸತಿಸುತಮತ್ತಗಜಪಲ್ಲಕ್ಕಿಗಳಪ್ಪವು*

ಶಿವಲಿಂಗಪೂಜೆಯ ಘನತೆಯನ್ನು ಹೃದಯ ತುಂಬಿ ಬಣ್ಣಿಸಿದ್ದಾರೆ. ಸಕಲ ಸಿದ್ಧಿಯು ಸಕಲ ಸಂಪದವು ಶಿವಲಿಂಗಪೂಜೆಯಲ್ಲಿಯೇ ಅಡಗಿದೆ. ಭೋಗ-ಭಾಗ್ಯಗಳು ಶಿವಲಿಂಗಪೂಜೆಯಿಂದ ದೊರಕುತ್ತವೆ. ಏನೆಲ್ಲವೂ ಲಿಂಗಪೂಜೆಯಿಂದ ದೊರೆತರೂ ಅವಕ್ಕೆ ಮನಸೋಲದ ಶಿವಯೋಗಿಯು ಪ್ರಾಣಲಿಂಗಾರ್ಚನೆಯಲ್ಲಿ ತೊಡಗುತ್ತಾನೆಂಬುದನ್ನು ಅಕ್ಕನ ಸಾಧನೆಯಿಂದ ವೇದ್ಯವಾಗುತ್ತದೆ. ಅಕ್ಕನ ಲಿಂಗನಿಷ್ಠೆ ಘನವಾದುದು. ಇಲ್ಲಿ ಅವರ ವಚನ ಅತ್ಯಂತ ಮಾರ್ಮಿಕವಾಗಿದೆ.

*ಹಾಲ ಹಿಡಿದು ಬೆಣ್ಣೆಯನರಸಲುಂಟೆ ?*
*ಲಿಂಗವ ಹಿಡಿದು ಪುಣ್ಯತೀರ್ಥಕ್ಕೆ ಹೋಗಲುಂಟೆ ?*
*ಲಿಂಗದ ಪಾದತೀರ್ಥ ಪ್ರಸಾದವ ಕೊಂಡು*
*ಅನ್ಯಬೋಧೆ ಅನ್ಯಶಾಸ್ತ್ರಕ್ಕೆ ಹಾರೈಸಲೇತಕ್ಕೆ ?*
*ಇಷ್ಟಲಿಂಗವಿದ್ದಂತೆ ಸ್ಥಾವರ ಲಿಂಗಕ್ಕೆ ಶರಣೆಂದೆನಾದಡೆ*
*ತಡೆಯದೆ ಹುಟ್ಟಿಸುವನು ಶ್ವಾನನ ಗರ್ಭದಲ್ಲಿ*
*ಅದೆಂತೆಂದಡೆ ಶಿವಧರ್ಮ ಪುರಾಣದಲ್ಲಿ*
*ಇಷ್ಟಲಿಂಗಮವಿಶ್ವಸ್ಯ ತೀರ್ಥಲಿಂಗಸ್ಯ ಪೂಜಕಃ ।*

೧೧. ಬಾಲಲೀಲಾಮಹಾಂತೇಶ್ವರ ಪುರಾಣ-೪ನೇ ಸಂಧಿ ೨

*ಶ್ವಾನಯೋನಿಶತಂ ಗತ್ವಾ ಚಾಂಡಾಲಗ್ರಹಮಾಚರೇತ್ ॥ ಎಂದುದಾಗಿ*
*ಇದನರಿದು ಗುರು ಕೊಟ್ಟ ಲಿಂಗದಲ್ಲಿಯೆ ಎಲ್ಲಾ ತೀರ್ಥಂಗಳೂ*
*ಎಲ್ಲಾ ಕ್ಷೇತ್ರಂಗಳೂ ಇದ್ದಾವೆಂದು ಭಾವಿಸಿ ಮುಕ್ತರಪ್ಪುದಯ್ಯಾ*
*ಇಂತಲ್ಲದೆ ಗುರುಕೊಟ್ಟ ಲಿಂಗವ ಕಿರಿದು ಮಾಡಿ*
*ತೀರ್ಥಲಿಂಗವ ಹಿರಿದು ಮಾಡಿ ಹೋದಾತಂಗೆ*
*ಅಘೋರ ನರಕ ತಪ್ಪದು ಕಾಣಾ, ಚನ್ನಮಲ್ಲಿಕಾರ್ಜುನಾ* [೧೩]

ಶ್ರದ್ಧಾಭಕ್ತಿಯು ಗಟ್ಟಿಗೊಂಡು ಲಿಂಗನಿಷ್ಠೆ ಬಲಗೊಂಡರೇನೆ ಶಿವಯೋಗ ಸಾಧನೆ ಸುಲಭವಾಗುವದು. ಜನಸಾಮಾನ್ಯರಿಗೆ ತಿಳಿಯುವ ಭಾಷೆಯಲ್ಲಿಯೇ ಅಕ್ಕನವರು ಲಿಂಗನಿಷ್ಠೆ ಬೆಳೆಸುವಂತೆ ಉದಾಹರಿಸುತ್ತಾರೆ. ಮನೆಯಲ್ಲಿ ಸಾಕಷ್ಟು ಹಾಲಿದ್ದರೆ ಬೆಣ್ಣೆಗಾಗಿ ಅಲೆಯುವ ಅವಶ್ಯಕತೆಯಿಲ್ಲ. ಹಾಲನ್ನು ಚನ್ನಾಗಿ ಕಾಸಿ ಹೆಪ್ಪುಹಾಕಿ ಕಡೆದರೆ ಬೆಣ್ಣೆ ಸಹಜವಾಗಿ ಬರುವುದು. ಶುದ್ಧವಾದ ಕಂಪುಳ್ಳ ತುಪ್ಪ ಲಭ್ಯವಾಗುವುದು. ಹಾಗೆ ಗುರು ಕರುಣಿಸಿದ ಇಷ್ಟಲಿಂಗವಿದ್ದರೂ ಅನ್ಯದೈವಕ್ಕೆಳಸಬಾರದು. ಗುರು-ಜಂಗಮ ಪಾದೋದಕ ಪ್ರಸಾದವನ್ನು ಕೊಂಡ ಬಳಿಕ ಸ್ಥಾವರದೇವರ ತೀರ್ಥಪ್ರಸಾದವನ್ನು ಸ್ವೀಕರಿಸಬಾರದು. ಈ ಮಾತಿಗೆ ಶಾಸ್ತ್ರ ಪ್ರಮಾಣವನ್ನಿತ್ತು ಪ್ರತಿಪಾದಿಸುವ ಜಾಣ್ಮೆ ಅಕ್ಕನಲ್ಲಿದೆ. ಲಿಂಗನಿಷ್ಠೆಯನ್ನು ಬೆಳೆಸಿಕೊಳ್ಳುವದರಿಂದಾಗಿ ಏನೆಲ್ಲ ಫಲ ದೊರೆಯುವದು. ಈ ಹಿಂದೆ ಉರಿಲಿಂಗ ಪೆದ್ದಿಗಳ ವಚನದಲ್ಲಿಯೂ ಇಷ್ಟಲಿಂಗದ ಘನತೆ ವ್ಯಕ್ತವಾಗಿದೆ.

ಕಿರಿವಯದ ಹಿರಿಯ ಅನುಭಾವಿ ಅಕ್ಕನವರು ಚನ್ನಬಸವಣ್ಣನವರಂತೆ ಸಮ್ಯಕ್ ಜ್ಞಾನಿಗಳು. ಕೆಲವರು ಜ್ಞಾನಿಗಳಾದ ಬಳಿಕ ಸಾಧನೆಯ ಹಂತವನ್ನು ಅಲ್ಲಗಳೆಯುವುದನ್ನು ಅನುಲಕ್ಷಿಸಿ ಉತ್ತರಿಸುತ್ತಾಳೆ ಅಕ್ಕ :

*ಅರಿವು ಸಾಧ್ಯವಾಯಿತ್ತೆಂದು, ಗುರುಲಿಂಗ ಜಂಗಮವ ಬಿಡಬಹುದೆ?*
*ಸಂದು ಸಂಶಯವಳಿದು ಅಖಂಡ ಜ್ಞಾನವಾಯಿತ್ತೆಂದು*
*ಪರಧನ ಪರಸ್ತ್ರೀಯರುಗಳಿಗೆ ಅಳುಪಬಹುದೆ ?*
*'ಯತ್ರಜೀವಃ ತತ್ರಶಿವಃ', ಎಂಬ ಅಭಿನ್ನ ಜ್ಞಾನವಾಯಿತ್ತೆಂದು*
*ಶುನಕ ಶೂಕರ ಕುಕ್ಕುಟ ಮಾರ್ಜಾಲಂಗಳ ಕೂಡೆ ಭುಂಜಿಸಬಹುದೆ ?*
*ಭಾವದಲ್ಲಿ ತನ್ನ ನಿಜದ ನೆಲೆಯನರಿತಿಹುದು,*
*ಸುಜ್ಞಾನ ಸತ್ಕ್ರಿಯಾ ಸುನೀತಿ ಮಾರ್ಗದಲ್ಲಿ ವರ್ತಿಸುವುದು*
*ಹೀಂಗಲ್ಲದೆ ಜ್ಞಾನವಾಯಿತ್ತೆಂದು ತನ್ನ ಮನಕ್ಕೆ ಬಂದ ಹಾಂಗೆ*

---

೧೩. ಮ.ಅಕ್ಕನ ವಚನ ೧೫೭

ಮೀರಿ ನುಡಿದು ನಡೆದೆನಾದಡೆ ಶ್ವಾನಗರ್ಭದಲ್ಲಿ ಹುಟ್ಟಿಸದೆ ಬಿಡುವನೆ
ಚನ್ನಮಲ್ಲಿಕಾರ್ಜುನಯ್ಯನು [೧೩]

ಅಂತರಂಗದಲ್ಲಿ ಅರಿವು ಮೂಡಿದಂತೆ ಅರಿವೆ ಗುರುವೆನಿಸುವುದು. ಅರಿವು ಬೆಳೆಯಿತೆಂದು ಅರಿವಿಗಾಶ್ರಯವೆನಿಸಿದ ಗುರುಲಿಂಗ ಜಂಗಮರನ್ನು ಕಡೆಗಣಿಸಬಾರದು. ಉಪ್ಪರಿಗೆಯನ್ನು ಹತ್ತಿದ ಬಳಿಕ ನಿಚ್ಚಣಿಕೆಯನ್ನು ತೆಗೆಯಬಾರದು. ಅದು ಹಿಂದಿನವರಿಗೆ ಬೇಕು. ಅಲ್ಲದೆ ತನಗೂ ಬೇಕು. ಹೊಳೆದಾಟಿದ ಬಳಿಕ ನಾವನ್ನು ನಾವಿಕನನ್ನು ತಿರಸ್ಕರಿಸಬಾರದು. ಅದರಂತೆ ಸದ್ಗುರು ಕಾರುಣ್ಯದಿಂದ ಲಿಂಗ ಪ್ರಾಪ್ತವಾಗಿರುತ್ತದೆ. ಅರುಹಿನ ಕುರುಹೇ ಇಷ್ಟಲಿಂಗ. ಈ ಇಷ್ಟಲಿಂಗದ ಆರಾಧನೆಯಿಂದ ಅರಿವು ಕರಿಗೊಂಡಬಳಿಕ ಲಿಂಗದ ಹಂಗೇಕೆ ಎನ್ನುವದು ಮೂಢತನ, ಕೃತಜ್ಞತೆಯಲ್ಲ. ಗುರುವಿಲ್ಲದೆ ಲಿಂಗವಿಲ್ಲ. ಜಂಗಮವಿಲ್ಲದೆ ಲಿಂಗಕ್ಕೆ ಪ್ರಾಣವಿಲ್ಲ. ಈ ಮೂವರ ಕೃಪೆಯಿಲ್ಲದೆ ಪಾದೋದಕ ಪ್ರಸಾದಗಳು ಲಭ್ಯವಾಗುವುದಿಲ್ಲ. ಈ ಮಾತನ್ನು ಚೆನ್ನಾಗಿ ಅಳವಡಿಸಲು ಅಕ್ಕನವರು ಲೌಕಿಕ ಉದಾಹರಣೆಗಳನ್ನು ನೀಡಿದ್ದಾರೆ. ದೃಷ್ಟಾಂತಗಳ ಮೂಲಕ ದಾರ್ಷ್ಟಾಂತವನ್ನು ಮನನಮಾಡಿಸುತ್ತಾರೆ. ಜ್ಞಾನಿಯಾದ ಬಳಿಕ ಭಿನ್ನಜ್ಞಾನವು ನಷ್ಟವಾಗಿ ಅಖಂಡ ಜ್ಞಾನವಾಗಿದೆಯೆಂದು ಎಲ್ಲರೂ ಒಂದೇ ಎಂದು ಭಾವಿಸಲಿಕ್ಕಾಗುವುದಿಲ್ಲ. ಸ್ವಸ್ತ್ರೀ ಪರಸ್ತ್ರೀಯಲ್ಲಿ ಅಭಿನ್ನತೆಯನ್ನು ಕಾಣಲಿಕ್ಕಾಗುವುದಿಲ್ಲ. ಅಂತೆಯೇ ನಿಜಗುಣ ಶಿವಯೋಗಿಗಳು.

ಬಳಸದಿರದ್ವೈತವನು ಬಾಹ್ಯದೊಳು
ನಿನ್ನೊಳಗೇಕೋಭಾವನೆಯೊಡಗೂಡು [೧೪]

ಬಾಹ್ಯಪ್ರಪಂಚದಲ್ಲಿ ಅದ್ವೈತವನ್ನು ಬಳಸಲಿಕ್ಕಾಗುವುದಿಲ್ಲ. ವ್ಯಾವಹಾರಿಕ ಬದುಕನ್ನು ಮರೆಯಬಾರದು. ಸರ್ವವೂ ಶಿವಮಯವೆಂದು ತನ್ನಲ್ಲಿ ಏಕೋಭಾವವಿದ್ದರೂ ಪರಧನ ಪರಸ್ತ್ರೀಯರನ್ನು ಮುಟ್ಟಲಾಗದು. ಅಂದರೆ ಅದು ಸುಜ್ಞಾನವೆನಿಸುವುದು. ಮತ್ತು 'ಯತ್ರಜೀವಃ ತತ್ರಶಿವಃ' ಎಲ್ಲೆಲ್ಲಿ ಜೀವವಿದೆ, ಅಲ್ಲೆಲ್ಲ ಶಿವನು ತುಂಬಿದ್ದಾನೆಂಬ ಜ್ಞಾನವಾಗಿದೆಯೆಂದು ನಾಯಿ, ಹಂದಿ, ಕೋಳಿ ಮೊದಲಾದ ಪ್ರಾಣಿಗಳೊಡನೆ ತಿನ್ನಲಿಕ್ಕಾಗದು. ಆದರೆ ಭಾವ ಪರಿಶುದ್ಧವಾಗಬೇಕು. ಭಾವದಲ್ಲಿ ತನ್ನ ನಿಜದ ನಿಲವನ್ನು ಅರಿಯಬೇಕು. ಸುಜ್ಞಾನ ಸತ್ಕ್ರಿಯೆ ಹಾಗೂ ಸುನೀತಿ ಮಾರ್ಗದಲ್ಲಿ ಮುನ್ನಡೆಯಬೇಕು. ಸಾಧಕರಾದವರಿಗೆ ಅಕ್ಕನವರ ಈ ಸಂದೇಶ ಮಹತ್ವಪೂರ್ಣವೆನಿಸಿದೆ. ಜ್ಞಾನಿಯಾದೆನೆಂದು ತನ್ನ ಅರಿವೆ ಗುರುವೆಂಬ ಭ್ರಮೆಯಲ್ಲಿ ಸ್ವಚ್ಛಂದವಾಗಿ ನಡೆಯಬಾರದೆಂಬ ಎಚ್ಚರಿಕೆಯನ್ನಿತ್ತರು ಅಕ್ಕನವರು.

ಸತ್ಕ್ರಿಯೆಗಳನ್ನು ಸುಜ್ಞಾನದಿಂದ ಆಚರಿಸುವ ಘನತೆ ಅಕ್ಕನಲ್ಲಿದೆ. ಜ್ಞಾನ ಕ್ರಿಯೆಗಳ ಸಮ ಸಮುಚ್ಚಯವೆ ವೀರಶೈವ ಸಿದ್ಧಾಂತ. ಬಾಲ್ಯಾವಸ್ಥೆಯಲ್ಲಿಯೆ ಅಪಾರ ಜ್ಞಾನವನ್ನು ಸಂಪಾದಿಸಿ

---

೧೩. ಅದೇ ೧೧೦

೧೪. ಕೈವಲ್ಯ ಪದ್ಧತಿ, ಶಿವಕಾರುಣ್ಯ ಸ್ಥಲ, ಪದ್ಯ೧

ಸತ್ಕ್ರಿಯೆಗಳನ್ನು ಮೈಗೂಡಿಸಿಕೊಂಡಿದ್ದರು. ವಯಸ್ಸಾದವರಿಗೂ ಮೀರಿದ ಸುಜ್ಞಾನ ಅಕ್ಕನಲ್ಲಿತ್ತು. ಸುಜ್ಞಾನದೊಂದಿಗೆ ಸದಾಚರಣೆ ಮೈವೆತ್ತಿಕೊಂಡಿತ್ತು. ಮೂವತ್ತೆರಡು ವಿಧವಾದ ಸದಾಚಾರಗಳನ್ನು ಬಸವಾದಿ ಪ್ರಮಥರಿಂದ ಪಡೆದುದನ್ನು ಅವರ ವಚನಗಳಲ್ಲಿ ಕಾಣಬಹುದು.

*ಅಯ್ಯಾ ಸದಾಚಾರ ಸದ್ಭಕ್ತಿ ಸತ್ಕ್ರಿಯಾ ಸಮ್ಯಕ್‌ಜ್ಞಾನ ಸದ್ವರ್ತನೆ*
*ಸಗುಣ ನಿರ್ಗುಣ ನಿಜಗುಣ ಸಚ್ಚರಿತ್ರ ಸದ್ಭಾವ*
*ಅಕ್ರೋಧ ಸತ್ಯವಚನ ಶಮೆ ದಮೆ ಭವಿಭಕ್ತಭೇದ*
*ಸತ್ಪಾತ್ರ ದ್ರವ್ಯಾರ್ಪಣ ಗೌರವಬುದ್ಧಿ ಲಿಂಗಲೀಯ ಜಂಗಮಾನುಭಾವ*
*ದಶವಿಧಪಾದೋದಕ ಏಕಾದಶ ಪ್ರಸಾದ ಷೋಡಶಭಕ್ತಿನಿರ್ವಾಹ*

*ತ್ರಿವಿಧ ಷಡ್ವಿಧ ನವವಿಧ ಲಿಂಗಾರ್ಚನೆ*
*ತ್ರಿವಿಧ ಷಡ್ವಿಧ ನವವಿಧ ಜಪ*
*ತ್ರಿವಿಧ ಷಡ್ವಿಧ ನವವಿಧ ಲಿಂಗಾರ್ಪಣ*

*ಚಿದ್ವಿಭೂತಿ ಸ್ನಾನ ಧೂಳನ ಧಾರಣ, ಸರ್ವಾಂಗದಲ್ಲಿ ಚಿದ್ರುದ್ರಾಕ್ಷಿಧಾರಣ,*
*ತಾ ಮಾಡುವ ಸತ್ಯಕಾಯಕ, ತಾ ಬೇಡುವ ಸದ್ಭಕ್ತಿ, ತಾ ಕೊಟ್ಟು ಕೊಂಬಭೇದ*
*ತಾನಾಚರಿಸುವ ಸತ್ಯ ನಡೆ ನುಡಿ, ತಾ ನಿಂದ ನಿರ್ವಾಣ ಪದ.*
*ಇಂತೀ ಬತ್ತೀಸ ನೆಲೆ ಕಲೆಗಳ ಸದ್ಗುರು ಮುಖದಿಂದರಿದ*
*ಬಸವ ಮೊದಲಾದ ಸಮಸ್ತ ಗಣಂಗಳೆಲ್ಲಾ ಪ್ರಮಥ*
*ನಿರಾಭಾರಿ ವೀರಶೈವ ಸನ್ಮಾರ್ಗವಿಡಿದಾಚರಿಸಿದರು ನೋಡಾ*
*ಇಂತು ಪ್ರಮಥಗಣವಾಚರಿಸಿದ*
*ಸತ್ಯ ಸನ್ಮಾರ್ಗವರಿಯದ ಮೂಢ ಅಧಮರನೆಂತು*
*ಶಿವಶಕ್ತಿ ಶಿವಭಕ್ತ ಶಿವಜಂಗಮವೆಂಬೆನಯ್ಯಾ ಚನ್ನಮಲ್ಲಿಕಾರ್ಜುನಾ ?* [೧೫]

ಸಾಮಾನ್ಯ, ವಿಶೇಷ, ನಿರಾಭಾರಿ ವೀರಶೈವರೆಂದು ಆಚರಣೆಯ ಹಂತದಿಂದ ವಿಭಾಗಿಸಲ್ಪಡುತ್ತಾರೆ. ಸಂಸ್ಕಾರ-ಸದಾಚರಣೆಗಳಿಂದ ಉತ್ತರೋತ್ತರ ಸನ್ಮಾರ್ಗವನ್ನು ಕ್ರಮಿಸಬೇಕು. ಇಲ್ಲಿ ಉತ್ತಮನೆನಿಸಿದ ನಿರಾಭಾರಿ ವೀರಶೈವನು ಆಚರಿಸಬೇಕಾದ ೩೨ ಸದಾಚಾರಗಳ ವಿವರಣೆ ಬಂದಿದೆ. ಬಸವಾದಿ ಪ್ರಮಥರು ಆಚರಿಸಿದ ಸತ್ಯಸನ್ಮಾರ್ಗದಲ್ಲಿ ನಡೆಯದವರನ್ನು ಅಧಮರೆಂದು ಹೀಗಳೆದಿದ್ದಾರೆ. ಇಂಥವರು ಶಿವಶಕ್ತಿ ಶಿವಭಕ್ತ ಶಿವಜಂಗಮ ಸ್ಥಾನವನ್ನು ಪಡೆಯಲಾರರೆಂಬುದನ್ನು ನಿರೂಪಿಸಿದ್ದಾರೆ. ಇದರಿಂದ ತಮ್ಮ ಆಚರಣೆಯ

---

೧೫. ಮಹದೇವಿಯಕ್ಕನ ವಚನಗಳು ೧೭೬

ಘನತೆಯನ್ನು ಸಹ ವ್ಯಕ್ತಮಾಡಿದ್ದಾರೆ. ಸದಾಚಾರ, ಸದ್ಭಕ್ತಿ, ಸತ್ಕ್ರಿಯಾ, ಸಮ್ಯಕ್‌ಜ್ಞಾನ ಸದ್ವರ್ತನೆಗಳ ಮೂಲಕ ಗೌರವ ಬುದ್ಧಿಯನ್ನು ಸಂಪಾದಿಸುತ್ತ ಲಿಂಗಮಯರಾಗಲು ಸೂಚಿಸಿದ್ದಾರೆ. ಜಂಗಮಾನುಭಾವವನ್ನು ಪಡೆಯಲು ಪ್ರೇರೇಪಿಸಿದ್ದಾರೆ. ಜಂಗಮಾನುಗ್ರಹದಿಂದಲೇ ದಶವಿಧ ಪಾದೋದಕಗಳು, ಏಕಾದಶ ಪ್ರಸಾದಗಳು ಪ್ರಾಪ್ತವಾಗುತ್ತವೆಂಬುದನ್ನು ಪ್ರತಿಪಾದಿಸಿದ್ದಾರೆ. ಪಾದೋದಕ ಪ್ರಸಾದಗಳನ್ನು ಪಡೆಯಲು ೧೬ ತೆರನಾದ ಭಕ್ತಿಯ ನಿರ್ವಹಣೆ ಮಾಡಲು ನಿರೂಪಿಸಿದ್ದಾರೆ. ಅಂದರೆ ಷೋಡಶೋಪಚಾರಗಳ ಮೂಲಕ ಗುರು-ಲಿಂಗ-ಜಂಗಮರ ಪೂಜೆಯ ಮರ್ಮವನ್ನು ಅರುಹಿದ್ದಾರೆ. ಈ ಉಪಚಾರಗಳಿಂದ ತ್ರಿವಿಧ ಷಡ್ವಿಧ ನವವಿಧ ಲಿಂಗಾರ್ಚನೆ ಮಾಡಬೇಕು. ಇಷ್ಟ-ಪ್ರಾಣ-ಭಾವ ಇವು ಮೂರುಲಿಂಗಗಳು. ಈ ಮೂರರಲ್ಲಿ ಅಡಗಿದ ಆಚಾರ, ಗುರು, ಶಿವ, ಜಂಗಮ, ಪ್ರಸಾದ, ಮಹಾಲಿಂಗಗಳೆಂಬ ಆರು ಲಿಂಗಗಳನ್ನು ಹಾಗೂ ಮೂರು ಮತ್ತು ಆರು ಲಿಂಗಗಳನ್ನು ಆಂತರಿಕವಾಗಿ ಒಂಭತ್ತು ಲಿಂಗಗಳ ಅರ್ಚನೆ ನಡೆಯಬೇಕೆಂಬುದನ್ನು ಸೂಕ್ಷ್ಮವಾಗಿ ವಿವರಿಸಿದ್ದಾರೆ.

ಅಷ್ಟವಿಧಾರ್ಚನೆ, ಷೋಡಶೋಪಚಾರಗಳಿಂದ ಮಾಡುವ ಪೂಜೆಯು ಇಷ್ಟಲಿಂಗಪೂಜೆಯಾದರೆ, ಪೂಜೆಯನ್ನು ಮಾಡಿದ ಬಳಿಕ ಅನಿಮಿಷ ದೃಷ್ಟಿಯಿಂದ ಲಿಂಗನಿರೀಕ್ಷಣೆ ಮಾಡುತ್ತ ಮಂತ್ರಜಪಾನುಧ್ಯಾನಗೈವುದು ಪ್ರಾಣಲಿಂಗ ಪೂಜೆಯಾಗುವುದು. ಮಂತ್ರಧ್ಯಾನದೊಡನೆ ಭಾವದಲ್ಲಿ ಬೆರೆಯುವುದೇ ಭಾವಲಿಂಗ ಪೂಜೆಯಾಗುವುದು. ಶಿವಪೂಜೆಗೈಯುವಲ್ಲಿಯೂ ಷಟ್‌ಸ್ಥಲವನ್ನು ಅಳವಡಿಸಿಕೊಳ್ಳಬೇಕಾಗುತ್ತದೆ. ಅಷ್ಟಾಂಗಯೋಗಗಳು ಕಷ್ಟಕರವೆನಿಸಿದರೂ ನಮ್ಮವರು ಅವುಗಳನ್ನು ಪರಿವರ್ತಿಸಿ ಆಚರಿಸುತ್ತಾರೆ. ಯೋಗದರ್ಶನದಲ್ಲಿ ಪ್ರತಿಪಾದಿಸಲ್ಪಡುವ ಅಷ್ಟಾಂಗಯೋಗದ ಅರ್ಥಕ್ಕಿಂತ ಇಲ್ಲಿ ಪರಿಪಕ್ವಭಾವ ಬೆಳೆಯುತ್ತದೆ ಅಹಿಂಸಾದಿ ಪಂಚಲಕ್ಷಣ ಲಕ್ಷಿತವಾದ ಯಮವು ಭಯಾನಕತೆಯುಳ್ಳದು. ಯಾಕೆಂದರೆ ಆಚರಣೆಯಲ್ಲಿ ಲೋಪವಾದರೆ ಭಯಬರುವುದು ಸಹಜ. ಆದಕ್ಕಾಗಿ ವೀರಶೈವರು ಯಮವನ್ನು ಬದಿಗಿರಿಸಿ ಇಂದ್ರಿಯಗಳನ್ನು ಉದಾತ್ತೀಕರಿಸುವ ವಿನೂತನ ತತ್ತ್ವವನ್ನು ಪ್ರತಿಪಾದಿಸಿದರು. ಭಕ್ತಿ, ಜ್ಞಾನ, ಸತ್ಕ್ರಿಯೆಗಳಿಂದ ಮನಸ್ಸನ್ನು ಸುಮನಗೊಳಿಸಿ ಇಂದ್ರಿಯಗಳನ್ನು ಲಿಂಗಗೊಳಿಸಿ ಗುರುಕರುಣಿಸಿದ ಇಷ್ಟಲಿಂಗಾರ್ಚನೆಯಲ್ಲಿ ತೊಡಗಿಸುತ್ತಾರೆ. ಬಹಿರಿಂದ್ರಿಯಗಳನ್ನು ಲಿಂಗಪೂಜೆಯ ಸಾಧನ ಸಾಮಗ್ರಿಗಳ ಸಂಗ್ರಹದಲ್ಲಿ ವಿನಿಯೋಗಿಸುತ್ತಾರೆ. ಯಮವು ಬಹಿರಿಂದ್ರಿಯ ನಿಗ್ರಹಸ್ಥಾನವಾದರೆ ಶೌಚಾದಿ ಪಂಚಾಂಗಗಳುಳ್ಳ ನಿಯಮವು ಅಂತರಿಂದ್ರಿಯ ನಿಗ್ರಹಕ್ಕೆ ಕಾರಣವಾಗಿದೆ. ಈ ಶರೀರೇಂದ್ರಿಯಗಳನ್ನು ಶೋಷಿಸುವ ನಿಯಮಗಳನ್ನು ಕಡೆಗಣಿಸಿ ಸ್ವಯಲಿಂಗಪೂಜಾ ನಿಯಮಗಳನ್ನು ನಿರೂಪಿಸುತ್ತಾರೆ. ಗುರುವಿನಿಂದ ಆಯತಮಾಡಿಕೊಂಡ ಲಿಂಗವು ಸ್ವಯವಾಗುವ (ಸ್ವಾಯತ) ಸಾಧನವೇ ಲಿಂಗಾರ್ಚನೆಯೆನಿಸುವದು. ಲಿಂಗಪೂಜಕನು

ಲಿಂಗಭೋಗೋಪಭೋಗಿಯಾಗಿ ಇಂದ್ರಿಯಗಳನ್ನು ಉದಾತ್ತೀಕರಿಸಿಕೊಂಡು ಸದಾ ಸಂತೋಷಿಯಾಗುವನು. ಆಗ ನಿಯಮವು ಸಹಜವಾಗಿ ಸಾಧ್ಯವಾಗುವದು. ಈ ಲಿಂಗಾರ್ಚನೆಯಾದರೂ ಸ್ವಸ್ವರೂಪಾನುಸಂಧಾನವುಳ್ಳದು. ಶಿವಪೂಜೆಗೆ ಕುಳಿತುಕೊಳ್ಳಲು ಆಸನಗಳ ಉಪಯೋಗವಾಗುವದು. ಶರೀರಕ್ಕೆ ಆಯಾಸಕರವೆನಿಸಿದ ಆಸನಗಳನ್ನು ಬದಿಗಿರಿಸಿ ಸಿದ್ಧಾಸನ, ಸುಖಾಸನ, ಪದ್ಮಾಸನಗಳ ಉಪಯೋಗ ನಿರಾಯಾಸವಾಗಿ ಆಗುವದು. ಯಮ ನಿಯಮಗಳು ಭಕ್ತಸ್ಥಲದಲ್ಲಿ ಸಮಾವೇಶಗೊಳ್ಳುತ್ತವೆ. ಲಿಂಗಾರ್ಚನೆಯ ವೇಳೆಯಲ್ಲಿ ಆಸನ ಗ್ರಹಣಮಾಡಿ ಗುರುಧ್ಯಾನ, ಸಂಕಲ್ಪ ಹಾಗೂ ಪ್ರಾಣಾಯಾಮಗಳನ್ನು ಪೂರೈಸಬೇಕು. ಭಸ್ಮ ರುದ್ರಾಕ್ಷಿಧಾರಣವರೆಗೆ ಭಕ್ತಸ್ಥಲವೇ ಪೂರ್ಣವಾಗುವದು. ಮಾಹೇಶ್ವರ ಸ್ಥಲದಲ್ಲಿ ಶಿವಷಡಕ್ಷರ ಮಂತ್ರನ್ಯಾಸಗಳು ಬರುತ್ತವೆ. ಪರಶಿವನ ಸರ್ವಜ್ಞಶಕ್ತಿ, ನಿತ್ಯತೃಪ್ತ ಶಕ್ತಿ, ಅನಾದಿಬೋಧಕಶಕ್ತಿ, ಸ್ವತಂತ್ರಶಕ್ತಿ ಅಲುಪ್ತಶಕ್ತಿ, ಅನಂತಶಕ್ತಿಗಳೆಂಬ ಆರುಶಕ್ತಿಗಳನ್ನು ನಿತ್ಯದಲ್ಲಿ ಕರ, ದೇಹ, ಅಂಗಗಳಲ್ಲಿ ನ್ಯಾಸಗೊಳಿಸುವುದರಿಂದ ಶಿವಪೂಜಕನಲ್ಲಿ ಅನುಪಮಶಕ್ತಿಸಂಚಯ ವಾಗುವುದು. ಮಂತ್ರನ್ಯಾಸದೊಂದಿಗೆ ದಿಗ್ಬಂಧನ ಮಾಡಿ ಷಡಕ್ಷರ ಮಂತ್ರವನ್ನು ಜಪಿಸುವುದು ಈ ಮಾಹೇಶ್ವರ ಸ್ಥಲದಲ್ಲಿಯೇ ಸಮಾಪ್ತಿಯಾಗುವದು. ಹೀಗೆ ಕಾಯಕರಣೇಂದ್ರಿಯಗಳನ್ನು ವಿಷಯಗಳಿಂದ ಮುಕ್ತಗೊಳಿಸಿ (ಆತ್ಮ) ಲಿಂಗ ಸ್ವರೂಪ ಮಾತ್ರದಲ್ಲಿ ಚಿತ್ತವು ಬೆರೆಯುವಂತೆ ಮಾಡುವದರಿಂದ ಪ್ರತ್ಯಾಹಾರವೂ ಘಟಿಸುವುದು. ಅಲ್ಲದೆ ಕರ್ಮೇಂದ್ರಿಯಗಳಲ್ಲಿ ಇಷ್ಟಲಿಂಗ ಸಂಬಂಧ ಜ್ಞಾನೇಂದ್ರಿಯಗಳಲ್ಲಿ ಪ್ರಾಣಲಿಂಗ ಸಂಬಂಧ, ಕರಣೇಂದ್ರಿಯಗಳಲ್ಲಿ ಭಾವಲಿಂಗ ಸಂಬಂಧ ಸಾಧ್ಯವಾಗುವುದು. ಪ್ರಸಾದಿ, ಪ್ರಾಣಲಿಂಗಿ, ಸ್ಥಲಗಳಲ್ಲಿ ಕರಪೀಠಾರ್ಚನೆ ಮಾಡಿ ಪಶ್ಚಿಮ ಶಿಖಾಚಕ್ರದ ಚಿತ್ಕಳೆಯನ್ನು ಧ್ಯಾನಿಸಿ ಇಷ್ಟಲಿಂಗದಲ್ಲಿ ಕಾಣುವುದು, ಅಭಿಷೇಕ ಹಾಗೂ ಷೋಡಶೋಪಚಾರಗಳನ್ನು ಪೂರೈಸಿ ಲಿಂಗದೃಷ್ಟಿಯನ್ನಿಡುವುದು ನಡೆಯುತ್ತದೆ. ಲಿಂಗದಲ್ಲಿ ದೃಷ್ಟಿಯು ಸ್ಥಿರವಾಗುತ್ತ ಹೋದಂತೆ ಉಸಿರಾಟವು ಸ್ಥಿರವಾಗುವುದು. ಪ್ರಾಣವಾಯು ಕುಂಭಕಗೊಂಡು ಮನದ ಹರಿದಾಟ ನಿಲ್ಲುವದು. ಆಗ ದೃಷ್ಟಿ, ಶ್ವಾಸ, ಮನಗಳು ಸ್ಥಿರಗೊಳ್ಳಲು ಲಿಂಗದಲ್ಲಿ ದಿವ್ಯಪ್ರಕಾಶವು ಕಾಣುವುದು. ಹೀಗೆ ಬಾಹ್ಯಪೂಜೆಯು ಅಂತರ್ಮುಖಿಗೊಳ್ಳಲು ಆಂತರಿಕ ಪ್ರಾಣಲಿಂಗ ಪೂಜೆಯು ಪ್ರಾರಂಭವಾಗುವುದು. ಪ್ರಾಣಲಿಂಗದ ಧ್ಯಾನ ಬಲಿತು ಭಾವಲಿಂಗದ ಸಾಕ್ಷಾತ್ಕಾರ ಮಾಡುವಲ್ಲಿ ಧಾರಣಯೋಗವು ಲಭ್ಯವಾಗುವುದು. ಲಿಂಗದ ಜ್ಞಾನವೇ ಧ್ಯಾನಯೋಗವೆನಿಸುವದು. ಲಿಂಗಭೋಗೋಪಭೋಗಿಯಾಗಿ ಸರ್ವಾಂಗದಲ್ಲಿ ಲಿಂಗದ ಅನುಭವವೇ ಧಾರಣಯೋಗವೆನಿಸುವುದು. ಭಾವಲಿಂಗದ ಅನುಭಾವದ ಚಿದಾನಂದದಲ್ಲಿ ಸಮರಸಗೊಳ್ಳುವಿಕೆಯೇ ಸಮಾಧಿಯೆನಿಸುವುದು. ಲಿಂಗಾಂಗ ಸಮರಸದ ಆನಂದದಲ್ಲಿ ನಿಂದ ನಿಜವೇ ಸಮಾಧಿಯೋಗವು. ಆಂತರಿಕವಾಗಿ ಷಟ್‌ಸ್ಥಲಗಳು ಪೂರ್ಣಗೊಂಡಿದ್ದರೂ ಲೋಕವ್ಯವಹಾರಕ್ಕೆ ಸಾಧಕನು ಹೊರಗೆ ಬರಲೇಬೇಕಾಗುತ್ತದೆ. ಕಾಯಕ-ದಾಸೋಹಗಳು ಜೀವನದ ಎರಡು ಮುಖಗಳು. ಅದಕ್ಕಾಗಿ ಸಾಧಕನು ಭಾವಲಿಂಗದ ಅನುಸಂಧಾನದಲ್ಲಿ ಮೈಮರೆತರೂ ಪುನಃ ಇಷ್ಟ, ಪ್ರಾಣ, ಭಾವಲಿಂಗಗಳಿಗೆ ಮಂಗಲಪಾಡಿ

ಸ್ತುತಿಸಬೇಕು. ಲಿಂಗಪೂಜೆಗೆ ಮಂಗಲವಾದರೂ ಪೂಜೆ ಪೂರ್ಣವಾಗುವುದಿಲ್ಲ. ಪೂಜಾಫಲಗಳೆನಿಸಿದ ಪಾದೋದಕ ಪ್ರಸಾದಗಳು ಅವಶ್ಯಬೇಕು. ಅಕ್ಕನವರ ಮೇಲಿನ ವಚನವನ್ನು ಸಂಪೂರ್ಣವಾಗಿ ವ್ಯಾಖ್ಯಾನಿಸಿದರೆ ಬೃಹತ್ ಪ್ರಬಂಧವಾಗಬಹುದು. ಮುಖ್ಯವಾದ ಅಂಶಗಳನ್ನು ಮಾತ್ರ ಗಮನಿಸಲಾಗಿದೆ.

ಅಷ್ಟಾವರಣ ಸಂಪನ್ನನಾದ ಶರಣನು ಪಂಚಾಚಾರಗಳನ್ನು ಪ್ರಾಣವಾಗಿಸಿಕೊಂಡರೆ ಸಾಲದು, ಷಟ್‌ಸ್ಥಲಾತ್ಮನಾಗಿ ಮುನ್ನಡೆಯಬೇಕಾಗುವುದು. ವೀರಶೈವ ಸಿದ್ಧಾಂತವು ಷಟ್‌ಸ್ಥಲಾತ್ಮಕವಾದುದರಿಂದ ಶಿವಪೂಜೆಯಲ್ಲಿ ಷಟ್‌ಸ್ಥಲವನ್ನು ಅರಿಯಲಾಯಿತು. ಇದರೊಂದಿಗೆ ಷಟ್‌ಸ್ಥಲದ ಮರ್ಮವನ್ನು ತಿಳಿಯುವುದೂ ಅವಶ್ಯ. ಶರೀರವು ನೆಲ-ಜಲ-ಅನಿಲ-ಆಕಾಶ-ಆತ್ಮದಿಂದ ಹುಟ್ಟುತ್ತದೆ. ಈ ಆರುತತ್ತ್ವಗಳ ಸಾಕ್ಷಾತ್ಕಾರ ಷಟ್‌ಸ್ಥಲದಲ್ಲಿ ವ್ಯಕ್ತವಾಗುತ್ತದೆ. ಭಕ್ತನಿಗೆ ನೆಲವೇ ಅಂಗವಾಗಿರುವುದರಿಂದ ಪೃಥ್ವಿಯ ಸಹನೆ, ಶಾಂತಿ, ಕಿಂಕರತನಗಳನ್ನು ಮೈಗೂಡಿಸಿಕೊಂಡು ಶ್ರದ್ಧಾಭಕ್ತಿಯಿಂದ ಆಧಾರಚಕ್ರದಲ್ಲಿಯ ಆಚಾರಲಿಂಗವನ್ನು ಅರ್ಚಿಸಬೇಕು. ಜಲಾಂಗನಾದ ಮಾಹೇಶ್ವರನು ಜಲದ ಸ್ವಚ್ಛತೆ, ಶುಭ್ರತೆಗಳನ್ನು ಅರ್ಥಾತ್ ಸುಚಾರಿತ್ರ್ಯಶೀಲನಾಗಿ ಸ್ವಾಧಿಷ್ಠಾನಚಕ್ರದಲ್ಲಿಯ ಗುರುಲಿಂಗವನ್ನು ನಿಷ್ಠಾಭಕ್ತಿಯಿಂದ ಭಜಿಸುವನು. ಪ್ರಸಾದಿಯು ಅಗ್ನ್ಯಂಗನಾಗಿ, ಅಗ್ನಿಯು ಹಸಿ, ಒಣಕಟ್ಟಿಗೆಗಳನ್ನು ತನ್ನಂತೆ ಮಾಡಿಕೊಳ್ಳುವಂತೆ, ಸುಖ ದುಃಖಗಳಲ್ಲಿ ಸಮಾನಚಿತ್ತನಾಗಿ ಅವಧಾನಭಕ್ತಿಯಿಂದ ನಾಭಿಯ ಮಣಿಪೂರಕ ಚಕ್ರದಲ್ಲಿಯ ಶಿವಲಿಂಗವನ್ನು ಪೂಜಿಸುವನು. ಪ್ರಾಣಲಿಂಗಿಯು ವಾಯ್ವಂಗನಾಗಿ, ಪ್ರಾಣವಾಯು ಸರ್ವಾಂಗದಲ್ಲಿ ವ್ಯಾಪಿಸಿರುವಂತೆ; ಲಿಂಗಪ್ರಾಣಿಯಾಗಬೇಕು. ಹೃದಯಗತ ಅನಾಹತ ಚಕ್ರದಲ್ಲಿಯ ಜಂಗಮಲಿಂಗವನ್ನು ಅನುಭವಭಕ್ತಿಯಿಂದ ಆರಾಧಿಸಬೇಕು. ಆಕಾಶಾಂಗನಾದ ಶರಣನು ಆಕಾಶದಂತೆ ವ್ಯಾಪಕ ಶಿವವೃಷ್ಟಿ ಬಲಿದು, ಲಿಂಗಪತಿಗೆ ಆನಂದ ಭಕ್ತಿಯಿಂದ ಸರ್ವಾರ್ಪಣ ಭಾವವುಳ್ಳವನಾಗಿ ಕಂಠಗತ ವಿಶುದ್ಧಿಚಕ್ರದಲ್ಲಿಯ ಪ್ರಸಾದಲಿಂಗವನ್ನು ಪ್ರಸನ್ನೀಕರಿಸಿಕೊಳ್ಳಬೇಕು. ಐಕ್ಯನು ಆತ್ಮಾಂಗನಾಗಿ, ಆತ್ಮನು ಎಲ್ಲರಲ್ಲಿ ಸಮರಸನಾಗಿರುವಂತೆ, ಉರಿಯುಂಡ ಕರ್ಪೂರದಂತೆ ಸಮರಸವುಳ್ಳವನಾಗಿ ಭ್ರೂಮಧ್ಯದ ಆಜ್ಞಾಚಕ್ರದಲ್ಲಿಯ ಮಹಾಲಿಂಗವನ್ನು ಸಮರಸಭಕ್ತಿಯಿಂದ ಬೆರೆಯುವರು ಹೀಗೆ ಷಟ್‌ಸ್ಥಲವು ಅಂಗ-ಲಿಂಗ, ಭಕ್ತಿ-ಶಕ್ತಿ, ಹಸ್ತ-ಮುಖ, ಪದಾರ್ಥ-ಪ್ರಸಾದಗಳೆಂದು ಎಂಟುವಿಧವಾಗಿ ಅಳವಡುವುದರಿಂದ ಅಷ್ಟವಿಧಸಕೀಲವೆಂತಲೂ ಷಟ್‌ಸ್ಥಲದಲ್ಲಿ ಅಂಗಲಿಂಗಗಳ ತ್ರಿಪುಟಸೇರಿ ನವವಿಧಸಕೀಲವೆಂತಲೂ ತತ್ತ್ವಗಳ ವಿಸ್ತಾರವಾಗುವುದು. ಇದನ್ನೇ ಅಕ್ಕನವರು ತ್ರಿವಿಧ ಷಡ್ವಿಧ, ನವವಿಧ ಲಿಂಗಾರ್ಚನೆ, ಜಪ ಮತ್ತು ಲಿಂಗಾರ್ಪಣಗಳನ್ನಾಗಿ ವಿವರಿಸಿದ್ದಾರೆ. ಯೋಗಾಂಗ ತ್ರಿವಿಧಿಯಲ್ಲಿ -

*ಅಷ್ಟಾವರಣದ ಹಣ್ಣು । ಬಟ್ಟಬಯಲೊಳಗಿರಲು*
*ಅಷ್ಟಾಂಗ ಯೋಗವನು ಮಾಡಿ ಬಳಲುವರು*
*ದೃಷ್ಟಿಯಿಡುವುದನು ಮರೆದಿಹರು* [೧೬]

ಶಿವಯೋಗದ ಮರ್ಮವನ್ನೇ ತಿಳಿಸಿದ್ದಾರೆ. ಅಷ್ಟಾವರಣದ ಹಣ್ಣು ಎಂದರೆ ಇಷ್ಟಲಿಂಗವೇ. ನಿರಾಕಾರ ಪರವಸ್ತು, ಅರುಹಿನ ಕುರುಹು, ಚೈತನ್ಯದ ಚುಳುಕು ಇಷ್ಟಲಿಂಗವೆನಿಸಿದೆ. ಕಷ್ಟಕರವೆನಿಸಿದ ಅಷ್ಟಾಂಗವನ್ನು ಮಾಡಿ ಬಳಲದೆ ಇಷ್ಟಲಿಂಗದಲ್ಲಿ ದೃಷ್ಟಿಯಿರಿಸಿ ಶಿವಯೋಗವನ್ನು ಸಾಧಿಸಲು ಸಲಹೆಮಾಡಿರುವರು. ಲಿಂಗನಿಷ್ಠೆಯಿಂದ ಲಿಂಗಾಂಗ ಸಾಮರಸ್ಯದ ಸಕೀಲವನ್ನು -

*ನೂರೊಂದು ಮಣಿಗಳನು । ಮೂರುಭಾಗವ ಮಾಡಿ*
*ಮೂರು ಪುರುಷರಿಗೆ ರೂಪವನು*
*ಸೇರಿ ನಾನಳಿದು ಬಯಲಾದೆ ॥* [೧೭]

ಇಲ್ಲಿ ವಿವರಿಸಿದ್ದಾರೆ. ಅಂಗಸ್ಥಲ ೪೪, ಲಿಂಗಸ್ಥಲ ೫೭ ಸೇರಿ ನೂರೊಂದು ಸ್ಥಲಗಳ ವಿವರಗಳನ್ನು ಈ ಚಿಕ್ಕ ತ್ರಿಪದಿಯಲ್ಲಿ ಅಳವಡಿಸಿದ್ದಾರೆ. ಇದರ ವಿವರಗಳನ್ನು ನಮ್ಮ ಯೋಗಾಂಗ ತ್ರಿವಿಧಿ ವ್ಯಾಖ್ಯಾನದಲ್ಲಿ ನೋಡಬಹುದು. ಈ ನೂರೊಂದು ಸ್ಥಲಗಳನ್ನು ಮೂರು ಭಾಗ ಮಾಡಿ ಗುರು-ಲಿಂಗ ಜಂಗಮರೆಂಬ ಆರಾಧ್ಯ ಪುರುಷರಿಗೆ ಅಳವಡಿಸಿ ಎಂದರೆ ವ್ಯಾಪಿಸುವಂತೆ ಮಾಡಿ ಆ ಮೂವರ ರೂಪವನ್ನು ಹೊಂದಿ 'ನಾನು' ಎಂಬ ಅಹಂಕಾರವನ್ನು ನಾಶಮಾಡಿ ನಿರಾಕಾರ ನಿರ್ವಯಲ ಮಹಾಜ್ಯೋತಿರ್ಲಿಂಗವೇ ನಾನಾಗಿರುವೆನೆಂದು ಅಕ್ಕನವರು ತಮ್ಮ ಸಾಧನೆಯ ಪರಾಕಾಷ್ಠತೆಯನ್ನು ಬಿತ್ತರಿಸಿದ್ದಾರೆ. ಆಂತರಿಕ ಅಷ್ಟಾವರಣ ಸಾಧನೆಯನ್ನು ವಿವರಿಸಿದ್ದಾರೆ. ಆಂತರಿಕ ಅಷ್ಟಾವರಣ ಸಾಧನೆಯೇ ಶಿವಯೋಗ, ಅದುವೇ ಶೂನ್ಯಸಂಪಾದನೆಯಾಗುವುದು.

*ಅರಿವೆ ಗುರುವಾಗಿ ಪ್ರಾಣವೆ ಲಿಂಗವಾಗಿ ಮ*
*ತ್ತಿರದೆ ಸುಜ್ಞಾನ ಜಂಗಮವಾಗಿ ಬಳಿಕವರ*
*ಚರಣ ಜಿಹ್ವೆಯೊಳು ಶೇಷ ನಾಶಿಕದಲ್ಲಿ ಚಿದ್ಭಸಿತ ತ್ವಕ್ಕಿನಲ್ಲಿ* [೧೮]

ಆಂತರಿಕ ಸಾಧನೆ ಶಿವನಿಗೂ ಇಲ್ಲವಾದುದರಿಂದ ಶಿವಭಕ್ತರು ಶಿವನಿಗಿಂತಲೂ ಅಧಿಕರೆಂದು ಶರಣರು ಸಾರುತ್ತಾರೆ. ಸ್ವಾನುಭಾವದ ಅರಿವು ಜಾಗ್ರತವಾದಂತೆ ಅದು

---

೧೬. ಯೋಗಾಂಗ ತ್ರಿವಿಧಿ-೩೨

೧೭. ಅದೇ - ೧೪

೧೮. ಶಿವಾನುಭವದರ್ಪಣ-ನಿರಾಭಾರಿ ವೀರಶೈವ ಪ್ರಕರಣ

ಗುರುಸ್ವರೂಪವೆನಿಸುವುದು. ಪ್ರಾಣವೇ ಲಿಂಗ, ಲಿಂಗವೇ ಪ್ರಾಣವೆನಿಸಿ, ಸುಜ್ಞಾನವೇ ಜಂಗಮ ಸ್ವರೂಪವೆನಿಸುವುದು. ಅರಿವು-ಅನುಭವ-ಆನಂದಗಳು ಒಂದಾದಾಗ ಚಿದ್ಘಟಿತವಂತೆ ಬೆಳ್ಳಂಬೆಳಗುವನು. ಅಲ್ಲಮ ಪ್ರಭುಗಳು :

*ಅಳಿದು ಕೂಡುವುದು ಒಂದು ಯೋಗ*
*ಅಳಿಯದೇ ಕೂಡುವುದು ಒಂದು ಯೋಗ*
*ಈ ಎರಡು ಯೋಗಗಳಿಗೆ ಅಳಿಯದೇ*
*ಕೂಡುವ ಯೋಗವರಿವುದು ಗುಹೇಶ್ವರಾ* [೧೯]

ಶಿವಯೋಗದ ವೈಶಿಷ್ಟ್ಯವನ್ನು ಇಲ್ಲಿ ಪ್ರತಿಪಾದಿಸುತ್ತಾರೆ. ಯೋಗದರ್ಶನಗಳಲ್ಲಿ ಅಳಿದು ಕೂಡುವ ಯೋಗವಿದ್ದರೆ, ಶಿವಯೋಗದಲ್ಲಿ ಅಳಿಯದೆ ಕೂಡುವ ಕಲೆಯಿದೆ. ಅಳಿದು ಕೂಡುವುದರಿಂದ ಪ್ರಗತಿಗೆ ಅವಕಾಶವಿಲ್ಲ. ಉಳಿದು ಕೂಡುವುದರಿಂದ ಪ್ರಗತಿಗೆ ಅರ್ಥಾತ್ ವಿಕಾಸಕ್ಕೆ ಸಾಕಷ್ಟು ಆಸ್ಪದವಿದೆ. ವೀರಶೈವ ಶರಣನು ನಿತ್ಯದಲ್ಲಿ ಐಕ್ಯಸ್ಥಿತಿಗೇರಿದರೂ ಲೋಕವ್ಯವಹಾರಕ್ಕಾಗಿ ಪುನಃ ಸತ್ಕಾರ್ಯಕ್ಕಾಗಿ ಭಕ್ತಸ್ಥಲಕ್ಕೆ ಅವತರಿಸುತ್ತಾನೆ. ಕಾಯಕ ನಿಷ್ಠೆಯಿಂದ ದಾಸೋಹಗೈಯುತ್ತಾನೆ.

*ಹರಿವ ನದಿಗೆ ಮೈಯಲ್ಲ ಕಾಲು*
*ಉರಿವ ಅಗ್ನಿಗೆ ಮೈಯಲ್ಲ ನಾಲಿಗೆ*
*ಬಿಸುವ ಗಾಳಿಗೆ ಮೈಯಲ್ಲ ಮುಖ*
*ಗುಹೇಶ್ವರ ನಿಮ್ಮ ಶರಣಂಗೆ*
*ಸರ್ವಾಂಗವೆಲ್ಲವೂ ಲಿಂಗ* [೨೦]

ಶಿವಯೋಗ ಸಾಧನೆಯಲ್ಲಿದ್ದ ಶಿವಯೋಗಿಯ ಸರ್ವಾಂಗವೆಲ್ಲವೂ ಲಿಂಗಮಯವಾಗುವದು. ಹರಿವ ನದಿಯು ಮೈಯೆಲ್ಲಾ ಕಾಲಾಗಿ ಹರಿವಂತೆ, ಶಿವಯೋಗಿಯ ಸತ್ಕ್ರಿಯೆ ಅರ್ಥಾತ್ ಅರ್ಚನೆಯು ಸರ್ವತೋಮುಖವಾಗಿ ನಡೆಯುವುದು. ಉರಿವ ಅಗ್ನಿ ಮೈಯೆಲ್ಲಾ ನಾಲಗೆಯಾಗಿ ಸ್ವೀಕರಿಸುವುದು. ಹಾಗೆ ಶರಣನು ಸರ್ವಾತ್ಮಭಾವದಿಂದ ಅರ್ಪಣ ಮಾಡುವನು. ಗಾಳಿ ಮೈಯೆಲ್ಲಾ ಮುಖವಾಗಿ ಬೀಸುವಂತೆ ಶರಣನ ಅನುಭಾವ ಪರಿಪೂರ್ಣವಾಗಿ ತೋರುವುದು. ಅರ್ಚನ-ಅರ್ಪಣ ಅನುಭಾವಗಳು ಪ್ರತ್ಯೇಕ ತೋರುವುದಿಲ್ಲ. ಅದೇ ತಾನಾಗುತ್ತಾನೆ. ಶಿವಯೋಗಿ ಅವುಗಳಲ್ಲಿಯೆ ತನ್ನತನವನ್ನು ವ್ಯಕ್ತಪಡಿಸುತ್ತಾನೆ. ಅಕ್ಕನು ಯೋಗಾಂಗ ತ್ರಿವಿಧಿಯಲ್ಲಿ -

೧೯. ಅಲ್ಲಮ ಪ್ರಭುದೇವರ ವಚನಗಳು

೨೦. ಅದೇ ೧೨೬೫

ಅಂಬರದಾ ಒಳಗಿರುವ / ತುಂಬಿದ ಕೊಡನುಕ್ಕಿ
ಕುಂಭಿನಿಯ ಮೇಲೆ ಸುರಿಯಲು ಮಾನವರು
ಶಂಭುಲೋಕಕ್ಕೆ ತೆರಳಿದರು [೨೧]

ಶಿವಯೋಗದ ಫಲವನ್ನೇ ತಿಳಿಸಿದ್ದಾರೆ. ಅಂಬರವೆಂದರೆ ಭೂತಾಕಾಶವಲ್ಲ. ಇದು ಘಟಾಕಾಶ. ಆಕಾಶ ತತ್ತ್ವದ ತಲೆಯೊಳಗೆ ಅಮೃತಕೊಡವಿದೆ. ಅದು ಉಕ್ಕಿದಾಗ ಅಂಗಭೂಮಿಯು ಲಿಂಗಮಯವಾಗಿ ಶಂಭುಲೋಕವನ್ನು ಪಡೆಯುತ್ತದೆ. ಅಲ್ಲಮ ಪ್ರಭುಗಳು ಸಹ

ಉನ್ಮನಿಯ ಜ್ಯೋತಿ ಬ್ರಹ್ಮರಂಧ್ರದ ಮೇಲೆ
ಸಹಸ್ರದಳ ಪದ್ಮ, ಅಲ್ಲಿ ಅಮೃತವಿಹುದು [೨೨]

ಬ್ರಹ್ಮರಂಧ್ರದ ಸಹಸ್ರದಳಪದ್ಮದಲ್ಲಿ ಪ್ರಾಣಲಿಂಗಾರ್ಚನೆ ನಡೆದರೆ ಅಮೃತ ದೊರೆಯುವುದೆಂಬ ಮಾತನ್ನು ಅನುಭವದಿಂದ ಸಾರಿದ್ದಾರೆ. ಶಿವಯೋಗಿಗಳು ಸಮಾಧಿಸ್ಥಿತಿಯಲ್ಲಿ ಲಿಂಗಾನಂದದ ಅಮೃತವನ್ನು ಸವಿದು ಆನಂದಿಸುತ್ತಾರೆ. ಊರ್ಧ್ವಕುಂಡಲಿ ಅರ್ಥಾತ್ ಉನ್ಮನಿ ಸ್ಥಿತಿಯಿಂದ ಅಮೃತ ಸಾಧ್ಯವಾಗುತ್ತದೆ. ಅಕ್ಕನವರು :

ಮೂಲದ್ವಾರದ ಬೇರ ಮೆಟ್ಟಿ ಭೂಮಂಡಲವನೇರಿದೆ
ಆಚಾರದ ಬೇರ ಹಿಡಿದು, ಐಕ್ಯದ ತುದಿಯನೇರಿದೆ
ವೈರಾಗ್ಯದ ಸೋಪಾನದಿಂದ ಶ್ರೀಗಿರಿಯನೇರಿದೆ
ಕೈವಿಡಿದು ತೆಗೆದುಕೊಳ್ಳಾ ಚನ್ನಮಲ್ಲಿಕಾರ್ಜುನಾ [೨೩]

ಶಿವಯೋಗ ಸಾಧನೆಯ ಮರ್ಮವನ್ನೇ ಇಲ್ಲಿ ಸಾರವತ್ತಾಗಿ ನಿರೂಪಿಸಿದ್ದಾರೆ. ತಮ್ಮ ಸ್ವಾನುಭಾವವನ್ನು ವ್ಯಕ್ತಗೊಳಿಸಿದ್ದಾರೆ. ಮೂಲದ್ವಾರವೆಂದರೆ ಆಧಾರಚಕ್ರ. ಇದು ಗುದಸ್ಥಾನದಲ್ಲಿರುವುದು. ಈ ಆಧಾರಚಕ್ರದಲ್ಲಿ ಕುಂಡಲನೀ ಶಕ್ತಿಯು ಸುಪ್ತವಾಗಿರುತ್ತದೆ. ಅದು ಅಧೋಮುಖವಾಗಿರುವುದರಿಂದ ವೈಷಯಿಕ ವ್ಯವಹಾರ ನಡೆಯುವುದು. ಸುಪ್ತವಾದ ಹಾಗೂ ಅಧೋಮುಖವಾದ ಸರ್ಪಿಣಿಯನ್ನು ಜಾಗ್ರತಗೊಳಿಸಿ ಊರ್ಧ್ವಮುಖಗೊಳಿಸಿದರೆ ಕ್ರಿಯಾಶಕ್ತಿ ಜಾಗ್ರತವಾಗುವುದು. ಸುಜ್ಞಾನ ಮತ್ತು ಕ್ರಿಯಾ ಶಕ್ತಿಗಳ ಜಾಗರಣದಿಂದಲೇ ಬ್ರಹ್ಮರಂಧ್ರದಲ್ಲಿ ಉನ್ಮನಿಯ ಜ್ಯೋತಿ ಬೆಳಗುವುದು. ಅದರಿಂದಾಗಿ ಹುಟ್ಟು ಸಾವುಗಳನ್ನು ಮೀರುತ್ತಾನೆ. ಜನಿಮೃತಿಗಳಿಂದ ಹೊರಗಾಗುವಿಕೆಯೇ ಭೂಮಂಡಲವನ್ನು ಏರಿದೆ ಎಂದು ಸಾಂಕೇತಿಸಿದ್ದಾರೆ. ಆಧಾರದ ಚಕ್ರಗಳಲ್ಲಿಯ ಆಚಾರಲಿಂಗದ ಬೇರನ್ನು ಹಿಡಿದು

---

೨೧. ಯೋಗಾಂಗ ತ್ರಿವಿಧಿ-೧೮

೨೨. ಅ.ಪ್ರದೇವಚನ ೧೧೮

೨೩. ಮ.ವ.೩೩೫

ಮಹಾಲಿಂಗವನ್ನು ದರ್ಶಿಸುವುದರಿಂದಾಗಿ ಐಕ್ಯಸ್ಥಲದ ಶಿಖರವನ್ನು ಕಾಣಬಹುದು. ಭಕ್ತಿಯೆಂಬ ಪೃಥ್ವಿಯಲ್ಲಿ ಗುರುವೆಂಬ ಬೀಜ ಹುಟ್ಟಿ ಲಿಂಗವೆಂಬ ಎಲೆಯಾಗಿ ಆಚಾರವೆಂಬ ಹೂ ವಿಚಾರವೆಂಬ ಕಾಯಿ, ನಿಷ್ಪತ್ತಿಯೆಂಬ ಹಣ್ಣಾದ ಬಳಿಕ ಚನ್ನಮಲ್ಲಿಕಾರ್ಜುನನು ತನಗೆ ಬೇಕೆಂದು ಎತ್ತಿಕೊಳ್ಳುತ್ತಾನೆ. ಸತ್ಕ್ರಿಯೆ, ಸದಾಚಾರ, ವೈರಾಗ್ಯದ ಅನುಭಾವಗಳಿಂದ ಶ್ರೀಗಿರಿಯನ್ನು ಏರಲು ಬರುವುದೆಂದು ಅಕ್ಕನವರು ನಿರೂಪಿಸಿದ್ದಾರೆ. ಶ್ರೀಗಿರಿಯೆಂದರೆ ಶ್ರೀಶೈಲ ಪರ್ವತ. ಜಡವಾದ ಕಲ್ಲು ಬಂಡೆಗಳಿಂದ ಕೂಡಿದ ಶಿಖರವಲ್ಲ :

ನೀನು ನಾನೆಂಬ ಭಯ ಸಂಗವಳಿದು ತಾನುತಾನಾದ
ತ್ರಿಕೂಟವೆಂಬ ಮಹಾಗಿರಿಯು
ತ್ರಿಕೂಟಗಿರಿಯೊಳಗೊಂದು ಕಾಣಬಾರದ ಕದಳಿಯುಂಟು"[೨೪]
ಎಂದು ಪ್ರಭುಗಳು ನಿರೂಪಿಸಿದರೆ ; ಅಕ್ಕನವರ
ಕದಳಿ ಎಂಬುದುತನು, ಕದಳಿ ಎಂಬುದು ಮನ
ಕದಳಿ ಎಂಬುದು ವಿಷಯಂಗಳು, ಕದಳಿ ಎಂಬುದು ಭವಘೋರಾರಣ್ಯ
ಈ ಕದಳಿ ಎಂಬುದ ಗೆದ್ದು ತವೆ ಬದುಕಿ ಬಂದು
ಕದಳಿಯ ಬನವಲ್ಲಿ ಭವಹರನ ಕಂಡೆನು
ಭವಗೆದ್ದು ಬಂದ ಮಗಳೆ ಎಂದು ಕರುಣದಿಂ ತೆಗೆದು ಬಿಗಿದಪ್ಪಿದಡೆ
ಚನ್ನಮಲ್ಲಿಕಾರ್ಜುನನ ಹೃದಯಕಮಲದಲ್ಲಿ ಅಡಗಿದೆನು[೨೫]

ಕದಳಿ (ಬಾಳೆ)ಯಂತೆ ಪದರು ಪದರಾದ ತನು-ಮನ-ವಿಷಯಂಗಳನ್ನು ಗೆದ್ದುದಾಗಿ ವಿವರಿಸಿದ್ದಾರೆ. ತನುವಿನಲ್ಲಿಯೇ ಎಲ್ಲವುಂಟು. ಇಂಥ ಕದಳಿಯ ಬನದಲ್ಲಿ ಭವಹರನನ್ನು ಕಾಣುವ ಸಾಧನವೇ ಶಿವಯೋಗ. ಶಿವಯೋಗಿನಿ ಅಕ್ಕನು ಸಾಧಿಸಿದ ಸಾಧನೆ ಅದ್ಭುತ; ಅತ್ಯಾದ್ಭುತ. ಚನ್ನಮಲ್ಲಿಕಾರ್ಜುನನ ಹೃದಯಕಮಲದಲ್ಲಿ ಒಂದಾದ ಅಕ್ಕನ ಸಾಧನೆ ಅನುಪಮವಾದುದು.

ಲೇಖನದ ಪ್ರಾರಂಭದಲ್ಲಿ ಪ್ರಸ್ತಾಪಿಸಿದಂತೆ ವೀರಶೈವ ಸಿದ್ಧಾಂತದ ಪ್ರಾಯೋಗಿಕ ದರ್ಶನವೆಂಬುದನ್ನು ಅಕ್ಕನವರು ಪ್ರತ್ಯಕ್ಷ ಸಾಧಿಸಿದ್ದಾರೆ. ಅವರ ವಚನಗಳಲ್ಲಿ ಹಾಗೂ ಯೋಗಾಂಗ ತ್ರಿವಿಧಿಯಲ್ಲಿ ಆ ಮಾತನ್ನು ಕಾಣುತ್ತೇವೆ. ತತ್ತ್ವಸಿದ್ಧಾಂತವೆನಿಸಿದ ನುಡಿಯ ಬ್ರಹ್ಮವನ್ನು ಶಿವಾದ್ವೈತಿಗಳು ಇಷ್ಟಲಿಂಗವನ್ನಾಗಿಸಿ ನಡೆಗೆ ತಂದಿರಿಸಿದ ಕಾರಣ, ಅರ್ಚನ-ಅರ್ಪಣ-ಅನುಭಾವಗಳ ಮೂಲಕ ಸರ್ವಾಂಗದಲ್ಲಿ ಲಿಂಗಕಳೆಯನ್ನು ಬೆಳಗಿಸಿಕೊಳ್ಳುವರು. ಲಿಂಗಾಂಗ ಸಾಮರಸ್ಯದ ಪ್ರಯೋಗ ಶಿವಪೂಜಾಮಂದಿರದಲ್ಲಿ

೨೪. ಅ.ಪ್ರ.ವ.೧೧೯೬

೨೫ ಮ.ವ.೩೩೨

ನಿರಂತರವಾಗಿ ತಪ್ಪದೆ ನಡೆಯಬೇಕು. ಅದನ್ನು ಬಾಲ್ಯದಿಂದಲೂ ಆಚರಣೆಗೆ ತರಬೇಕು. ಅದಕ್ಕಾಗಿಯೇ ಹಿರಿಯರು ಶಿವಪೂಜೆಗೆ ಯೋಗ್ಯವೆನಿಸಿದ ಶಿವಪೂಜಾ ಕೋಣೆಯನ್ನು ಪ್ರತ್ಯೇಕವಾಗಿ ಕಟ್ಟಿಸುತ್ತಿದ್ದರು. ಇತ್ತೀಚೆಗೆ ಶಿವಯೋಗ ಸಾಧನೆಯು ಕಲ್ಪನೆಯಲ್ಲದೆ ಭಾವಚಿತ್ರಗಳನ್ನಿಡುವ ಚಿಕ್ಕಕೋಣೆ ಮಾಡುತ್ತಾರೆ. ಒಬ್ಬರಿಗೂ ಕೂಡ್ರಲು ಬರುವುದಿಲ್ಲ. ಅಕ್ಕನವರು ಬಾಲ್ಯದಿಂದಲೇ ಲಿಂಗದ ಆಟವನ್ನು ಆಡಿ ಚನ್ನಮಲ್ಲಿಕಾರ್ಜುನನನ್ನೇ ಪತಿಯಾಗಿಸಿಕೊಂಡವಳು. ಕಲ್ಯಾಣದ ಶಿವಶರಣರೊಡನೆ ತಮ್ಮ ಶಿವಯೋಗಸಾಧನೆಯನ್ನು ಸಾಧಿಸಿದವರು. ಸಾವ ಕೆಡುವ ಗಂಡನ ಗೋಜಿಗೆ ಹೋಗದೆ ನಿತ್ಯ ನಿರಂಜನನ ಕೈಹಿಡಿದವಳು ಅಂತೆಯೇ :

ನಿತ್ಯವೆಂಬ ನಿಜಪದವನ್ನ ಹತ್ತೆ ಸಾರ್ದು ಕಂಡ ಬಳಿಕ
ಚಿತ್ತ ಕರಗಿ ಮನ ಕೊರಗಿ ಹೃದಯವರಳಿತ್ತು ನೋಡಯ್ಯಾ [೨೬]

ಹೃದಯ ವಿಕಾಸದ ಮರ್ಮವನ್ನು ಹೇಳಿದ್ದಾರೆ. ಸುಡಿಯ ಬಾರದ ಹಣ್ಣನ್ನು
ಸುಡಿಯ ಒಳಗಾಗಿ [೨೭] ಪಡೆದ ಅಕ್ಕನು ಜನನ ಮರಣಗಳನ್ನು ಮೀರಿದ
ಬಗೆಯನ್ನು ಮೊರೆವ ನಾದವ ಕೇಳಿ / ಉರಿವ ಜ್ಯೋತಿಯ ನೋಡಿ
ಸುರಿವ ಅಮೃತವನು ಸವಿದುಂಡ ಕಾರಣದಿ
ತೊರೆದಿಹೆನು ಜನನ-ಮರಣಗಳ [೨೮]
ಇಲ್ಲಿ ಬಿತ್ತರಿಸಿದ್ದಾರೆ. ಈ ವಿಚಾರ ಮೇಲೆ ಬಂದಿದೆ.
'ಮೂಲದ್ವಾರದ ಬೇರ ಮೆಟ್ಟಿ'ದ ಅಕ್ಕನು ಇದಕ್ಕೆ ವಿವರಣೆಯೆಂಬಂತೆ-
ಕುಂಡಲಿಯ ಸರ್ಪನಾ / ತುಂಡ ಮೇಲಕೆ ತೆಗೆಯೆ
ಮಂಡಲವು ಮೂರು-ಬೆಳಗಾಗಿ ಉರಿಯುವ
ಖಂಡಜ್ಯೋತಿಯೊಳು ಬಯಲಾದೆ.[೨೯]

ಈ ತ್ರಿಪದಿಯಲ್ಲಿ ಕುಂಡಲಿನಿ ಶಕ್ತಿಯನ್ನು ಜಾಗ್ರತಗೊಳಿಸಿ ಉನ್ಮನಿಯ ಅಖಂಡ ಜ್ಯೋತಿಯಲ್ಲಿ ಪರಂಜ್ಯೋತಿಯಾಗಿ ಬಯಲಾಗಿದ್ದಾಳೆ. ಮಹಾಬೆಳಕಾಗಿದ್ದಾಳೆ. ಅಂತೆಯೇ ಪರಮ ಸಂದೇಶವಿತ್ತರು-

ಲಿಂಗವೆನ್ನೆ ಲಿಂಗೈಕ್ಯವೆನ್ನೆ, ಸಂಗವೆನ್ನೆ, ಸಮರಸವೆನ್ನೆ
ಆಯಿತ್ತೆನ್ನೆ, ಆಗದೆನ್ನೆ ನೀನೆನ್ನೆ ನಾನೆನ್ನೆ
ಚನ್ನಮಲ್ಲಿಕಾರ್ಜುನಯ್ಯಾ ಲಿಂಗೈಕ್ಯವಾದ ಬಳಿಕ ಏನೂ ಎನ್ನೆ

---

೨೬. ಮ.ವಚನ-೩೦೭

೨೭. ಅದೇ-೧೯

೨೮. ಅದೇ ೩೧ ೨೯

೨೯. ಮ.ವಚನ-೩೩೦

# ನಿನ್ನ ಮಕ್ಕಳು ನಶ್ವರ; ನನ್ನ ಮಕ್ಕಳು ಶಾಶ್ವತ

**ಮುಕ್ತಾ ಶಿವಪ್ರಸಾದ್**

---

ಮಂಜಿನಂತೆ ಶುಭ್ರವಾದ ಬಿಳಿಯ ಕಚ್ಚೆ ಪಂಚೆ, ಅಷ್ಟೇ ಬಿಳುಪಾದ ಟೆರಿಕಾಟ್ ಜುಬ್ಬ, ಹೆಗಲ ಮೇಲೊಂದು ಶಲ್ಯ, ವಯೋಧರ್ಮಕ್ಕನುಗುಣವಾಗಿ ಕನ್ನಡಕ ಧರಿಸಿದ ಅಪ್ಪಾಜಿ ನನ್ನ ನೆನಪಿನಂಗಳದಿಂದ ಎಂದೂ ಮರೆಯಾಗದ ವ್ಯಕ್ತಿ. ೮೨ ವರುಷಗಳ ತುಂಬುಜೀವನ ನಡೆಯಿಸಿದ, ಸಾರ್ಥಕ ಬದುಕು ಬಾಳಿದ ಅವರೇ ನನ್ನ ಆದರ್ಶ.

ಅಪ್ಪಾಜಿಯ ಮನಸ್ಸು ಸುಭಾಷಿತದಲ್ಲಿ ವಿವರಿಸಿರುವ ಸಜ್ಜನರಂತೆಯೇ 'ವಜ್ರಾದಪಿ ಕಠೋರಾಣಿ, ಮೃದೂನಿ ಕುಸುಮಾದಪಿ', 'ಎನಗಿಂತ ಕಿರಿಯರಿಲ್ಲ' ಎಂಬ ವಿನಯ, ವಿನೀತ ಭಾವ ಅವರ ನಡೆನುಡಿಗಳಲ್ಲಿ ಎದ್ದು ತೋರುತ್ತಿತ್ತು. ನುಡಿದಂತೆ ನಡೆದ, ನಡೆದಂತೆ ನುಡಿದ ಸರಳ ಧೀಮಂತ ವ್ಯಕ್ತಿತ್ವ ಅಪ್ಪಾಜಿಯದು.

ಶಿಸ್ತು ಅವರ ಜೀವನದಲ್ಲಿ ಹಾಸುಹೊಕ್ಕಾಗಿತ್ತು ಎಂಬುದಕ್ಕೆ ಅವರ ದಿನಚರಿಯೇ ನಿದರ್ಶನ. ಬೆಳಿಗ್ಗೆ ೪ ಗಂಟೆಗೆ ಎದ್ದು ಮುಖಮಾರ್ಜನ ಇತ್ಯಾದಿಗಳನ್ನು ಮುಗಿಸಿ ೫ ಘಂಟೆಯವರೆಗೆ ಅಧ್ಯಯನದಲ್ಲಿ ತೊಡಗಿರುತ್ತಿದ್ದರು. ನಂತರ ೫ ಗಂಟೆಗೆ ಕಾಲ್ನಡಿಗೆಯಲ್ಲಿ ಚಾಮುಂಡಿಬೆಟ್ಟಕ್ಕೆ ಹೋಗಿ ಬರುವಾಗ ಪೂಜೆಗಾಗಿ ಹೂವು ಪತ್ರೆಗಳನ್ನು ತರುತ್ತಿದ್ದರು. ಎಷ್ಟೋ ಬಾರಿ ನಾನೂ ಅವರೊಂದಿಗೆ ವಾಕಿಂಗ್ ಹೋಗುತ್ತಿದ್ದೆ. ದೀರ್ಘವಾಗಿ ಶ್ವಾಸೋಚ್ಛ್ವಾಸ ಮಾಡುತ್ತಾ, ಕೈಗಳನ್ನು ಬೀಸುತ್ತಾ ಬಿರುಸಾಗಿ ನಡೆಯುತ್ತಿದ್ದ ಅವರೊಟ್ಟಿಗೆ ಹೆಜ್ಜೆಹಾಕುವುದು ನನಗೆ ಸ್ವಲ್ಪ ಪ್ರಯಾಸವೇ ಆಗುತ್ತಿತ್ತು. ಯಾವುದಾದರೂ ವಿಷಯವನ್ನು ತೆಗೆದು ಚರ್ಚಿಸುತ್ತಾ

ಬರುವುದು ಇಬ್ಬರಿಗೂ ಪ್ರಿಯವಾದ ವಿಚಾರವಾಗಿತ್ತು. ಮನೆಗೆ ಬಂದು ಸ್ನಾನ ಆಹ್ನಿಕಗಳನ್ನು ಮುಗಿಸಿ ಮತ್ತೆ ಅಧ್ಯಯನದಲ್ಲಿ ತಲ್ಲೀನರಾಗುತ್ತಿದ್ದರು. ನಾವು ಯಾರಾದರೂ ಹೋಗಿ ಅಪ್ಪಾಜಿ, ಅಮ್ಮ ಊಟಕ್ಕೆ ಕರೀತಾರೆ ಅಂದಾಗಲೇ ಅವರಿಗೆ ಎಚ್ಚರ. ಮಧ್ಯಾಹ್ನ ತುಸು ವಿಶ್ರಾಂತಿಯ ನಂತರ ಮತ್ತೆ ತಮ್ಮ ಬರವಣಿಗೆಯಲ್ಲಿ ಅವರು ಮಗ್ನರಾಗುತ್ತಿದ್ದರು. ಬರವಣಿಗೆ ಅವರ ಉಸಿರಾಗಿತ್ತು. ಏನಿದ್ದರೂ ರಾತ್ರಿ ೧೦ ಘಂಟೆಯ ನಂತರ ಎದ್ದಿರುವುದು ಅವರಿಂದ ಅಸಾಧ್ಯವಾಗಿತ್ತು. ''ಬೇಗ ಮಲಗಿ, ಬೇಗ ಏಳಬೇಕು'' ನೀವೆಲ್ಲ ಸೂರ್ಯವಂಶೀಯರು ಎಂದು ನಮ್ಮನ್ನು ಮೂದಲಿಸುತ್ತಿದ್ದರು.

ಮನೆಯ ಮುಂದಿನ ಕೊಠಡಿ ನಮ್ಮ ಬಾಯಲ್ಲಿ 'ಅಪ್ಪಾಜಿ ರೂಮ್' ಆಗಿತ್ತು. ಓರಣವಾಗಿ ಜೋಡಿಸಿದ ಪುಸ್ತಕದ ಬೀರುಗಳು, ಒಂದು ಪಕ್ಕದಲ್ಲಿ ಮಂಚ, ಕಿಟಕಿಗೆದುರಾಗಿ ಹಾಕಿದ್ದ ಟೇಬಲ್ ಹಾಗೂ ಕುರ್ಚಿ ಅವರ ಅಧ್ಯಯನಕ್ಕೆ ತಕ್ಕ ವಾತಾವರಣವಾಗಿತ್ತು. ಕುರ್ಚಿಯಲ್ಲಿ ಕೂತು ಬರವಣಿಗೆಯಲ್ಲಿ ತಲ್ಲೀನರಾದರೆಂದರೆ ಸುತ್ತಲಿನ ವಿದ್ಯಮಾನಗಳ ಪರಿವೆಯೇ ಅವರಿಗಿರುತ್ತಿರಲಿಲ್ಲ. ಮನೆಗೆ ಬಂದು ಹೋಗುವ ಅತಿಥಿ ಅಭ್ಯಾಗತರು, ಹಳ್ಳಿಗಳಿಂದ ಓದಲು ಬಂದು ನೆಲೆನಿಂತ ನೆಂಟರ ಹುಡುಗರು, ಮನೆಯ ಮಕ್ಕಳು, ಪಕ್ಕದ ಪ್ರಿಂಟಿಂಗ್‌ಪ್ರೆಸ್‌ನ ಮಶೀನ್‌ಗಳ ಶಬ್ದ ಇತ್ಯಾದಿಗಳ ನಡುವೆಯೂ ಕೂತು ತಮ್ಮ ಬರವಣಿಗೆಯಲ್ಲಿ ಮುಳುಗಿರುತ್ತಿದ್ದ ಅವರ ಏಕಾಗ್ರತೆಯನ್ನು ಕಂಡು ನಾವು ಅಚ್ಚರಿಗೊಳ್ಳುತ್ತಿದ್ದೆವು.

ಅಪ್ಪಾಜಿ ಮಹಾಶೈವಭಕ್ತರು. ಗಂಟೆಗಟ್ಟಲೆ ಶಿವಪೂಜೆಯಲ್ಲಿ ತಲ್ಲೀನರಾಗಿ ಭಕ್ತಿಪರವಶತೆಯಿಂದ ಮೈಮರೆಯುತ್ತಿದ್ದರು. ಅಪ್ಪಾಜಿ ''ಅನೇಕ ಸನ್ನಿವೇಶಗಳಲ್ಲಿ ಮುಂದೇನು ಎಂದು ದಾರಿಗಾಣದೆ ಪರಿತಪಿಸುವಾಗ, ಅವಕ್ಕೆ ಪರಿಹಾರಗಳು ತಾವಾಗಿಯೇ ಒದಗಿ ಬರುತ್ತಿದ್ದ ರೀತಿ ನನ್ನನ್ನು ಅಚ್ಚರಿಗೊಳಿಸಿದೆ. ಅದನ್ನು ನಾನು ದೈವಸಹಾಯವೆಂದೇ ನಂಬಿದ್ದೇನೆ''ಎನ್ನುತ್ತಿದ್ದರು. ಸಂಪ್ರದಾಯ ನಿಷ್ಠರಾದರೂ ಆಧುನಿಕ ವಿಚಾರಗಳಿಂದ ಅವರು ಪ್ರಭಾವಿತರಾಗಿದ್ದರು. ವೈಜ್ಞಾನಿಕ ಮನೋಧರ್ಮವನ್ನು ಹೊಂದಿದ್ದ ಅವರು ಮೂಢನಂಬಿಕೆಗಳನ್ನು ಖಂಡಿಸುತ್ತಿದ್ದರು.

'ಕಾಯಕವೇ ಕೈಲಾಸ' ಎಂಬಂತೆ ನಡೆಯುತ್ತಿದ್ದ ಅವರು ಕೆಲಸದ ಬದಲಾವಣೆಯೇ ವಿಶ್ರಾಂತಿ ಎನ್ನುತ್ತಿದ್ದರು. ಅಷ್ಟೇ ಅಲ್ಲ ಮನೆಯವರೆಲ್ಲರೂ ಹಾಗೆಯೇ ಇರಬೇಕೆಂದು ಅಪೇಕ್ಷಿಸುತ್ತಿದ್ದರು. ಅವರ ಪ್ರತಿಯೊಂದು ಕೆಲಸದಲ್ಲೂ ಒಪ್ಪ, ಓರಣ, ಶಿಸ್ತು, ಅಚ್ಚುಕಟ್ಟುತನ ಎದ್ದು ತೋರುತ್ತಿತ್ತು.

ಸ್ವತಃ ಕಷ್ಟದಲ್ಲಿ ವಾರಾನ್ನಗಳನ್ನು ಮಾಡಿ ವಿದ್ಯಾರ್ಜನೆ ಮಾಡಿದ್ದ ಅಪ್ಪಾಜಿ ವಿದ್ಯಾರ್ಥಿಗಳಿಗೆ ತಮ್ಮ ಶಕ್ತಿಮೀರಿ ಸಹಾಯ ಮಾಡುತ್ತಿದ್ದರು. ಮನೆಯ ಬಾಗಿಲು ಅತಿಥಿ ಅಭ್ಯಾಗತರಿಗೆ ಸದಾ

ತೆರೆದಿರುತ್ತಿತ್ತು. ಅಮ್ಮ ಕೂಡ ಅಷ್ಟೇ - ಎಷ್ಟೇ ಕೆಲಸವಿದ್ದರೂ ಕೂಡ ಒಮ್ಮೆಯೂ ಅವರು ಬೇಸರಗೊಂಡಿದ್ದನ್ನು ನಾವು ಕಾಣಲಿಲ್ಲ. 'ತಂದು ಹಾಕೋ ಪುಣ್ಯಾತ್ಮರು ಅವರು ನಂದೇನಿದೆ' ಎನ್ನುತ್ತಿದ್ದರು.

ಮನೆಗೆ ಬರುತ್ತಿದ್ದ ಸಾಹಿತಿ ಮಿತ್ರರೊಂದಿಗೆ ಅವರು ನಡೆಸುತ್ತಿದ್ದ ಚರ್ಚೆ ವಾಗ್ವಾದಗಳನ್ನು ನಾವು ಅಮ್ಮ ಮಕ್ಕಳು ಮನೆಯ ಒಳಭಾಗದಲ್ಲಿ ಕುಳಿತು ಆಸಕ್ತಿಯಿಂದ ಆಲಿಸುತ್ತಿದ್ದೆವು. ಏನಾದರೂ ಬರೆದ ನಂತರ ಅಮ್ಮನನ್ನು ಕರೆದು 'ಇಲ್ಲಿ ಕೂತ್ಕೊ. ನಾನು ಬರೆದದ್ದನ್ನು ಓದ್ತೀನಿ ಕೇಳು' ಎಂದು ಅವರಿಗೆ ಅವನ್ನು ಓದಿ ಹೇಳುತ್ತಿದ್ದರು. ಅವರ ಬರಹಗಳಿಗೆ ಮೊದಲನೆಯ ವಿಮರ್ಶೆ ಅಮ್ಮನದೇ. ಹಂಸ - ಕ್ಷೀರ ನ್ಯಾಯದಂತೆ ಅಮ್ಮನ ಸಲಹೆ ಸೂಚನೆಗಳನ್ನು ಆಲಿಸಿ ತಮ್ಮ ಬರಹದಲ್ಲಿ ಅಗತ್ಯವಾದ ಮಾರ್ಪಾಡು ಮಾಡುತ್ತಾ 'ವ್ಯಾಖ್ಯಾನ ವಿಚಕ್ಷಣ' ಎಂಬ ಬಿರುದು ತಪ್ಪಿ ನನಗೆ ಬಂದು ಬಿಟ್ಟಿದೆ ಎಂದು ಅವರನ್ನು ಛೇಡಿಸುತ್ತಿದ್ದರು. 'ಬಾಲಾದಪಿ ಸುಭಾಷಿತಂ' ಎನ್ನುತ್ತಾ ನಮ್ಮ ಟೀಕೆಗಳನ್ನೂ ಸಂತೋಷವಾಗಿಯೇ ಸ್ವೀಕರಿಸುತ್ತಿದ್ದರು.

ಅವರ ಮಕ್ಕಳ್ಯಾರೂ ಸಂಸ್ಕೃತವನ್ನು ಆಳವಾಗಿ ಅಭ್ಯಸಿಸಲಿಲ್ಲವೆಂಬ ಕೊರಗು ಅವರಿಗಿತ್ತು. ಆದರೂ ಅವರು ಎಂದೂ ತಮ್ಮ ಅಭಿಪ್ರಾಯಗಳನ್ನು ನಮ್ಮ ಮೇಲೆ ಹೇರಲು ಪ್ರಯತ್ನಿಸಲಿಲ್ಲ. ನಮಗೆ ಆಸಕ್ತಿ ಇರುವ ವಿಷಯಗಳನ್ನು ಅಭ್ಯಸಿಸುವ ಸ್ವಾತಂತ್ರ್ಯ ನಮಗಿತ್ತು. ''ಪ್ರಾಪ್ತೇಷು ಷೋಡಶೇ ವರ್ಷೇ ಪುತ್ರಂ ಮಿತ್ರವದಾಚರೇತ್'' ಎನ್ನುತ್ತಾ ಮಕ್ಕಳೆಲ್ಲರೊಡನೆ ಸೌಹಾರ್ದಯುತ ಸಂಬಂಧವನ್ನವರು ಹೊಂದಿದ್ದರು. ಜೀವನದಲ್ಲಿ ಗುರಿ ಇಟ್ಟುಕೊಂಡರಷ್ಟೇ ಸಾಲದು ಅದನ್ನು ಮುಟ್ಟುವ ಮಾರ್ಗದ ಕಡೆಗೂ ಅಷ್ಟೇ ಗಮನ ಕೊಡಬೇಕು - ನೀವೆಲ್ಲ ಬರೀ ಆರಂಭಶೂರರಷ್ಟೇ ಎಂದು ನಮ್ಮನ್ನು ಹಾಸ್ಯಮಾಡುತ್ತಿದ್ದರು.

ಅಪ್ಪಾಜಿಯದು ಮಗುವಿನಂಥ ಮನಸ್ಸು. ಸುಳ್ಳಾಡುವುದು 'ಅವರಿಗೆ ಗೊತ್ತೇ ಇರಲಿಲ್ಲ. ಅಂತಹ ಸಂದರ್ಭ ಅನಿವಾರ್ಯವಾಗಿದ್ದಾಗ ಕೆಟ್ಟದಾಗಿ ಸತ್ಯ ಹೇಳಿಕೊಟ್ಟವರನ್ನು ಪೇಚಿಗೆ ಸಿಕ್ಕಿಸುತ್ತಿದ್ದರು.

ನಾವೆಲ್ಲ ಚಿಕ್ಕವರಾಗಿದ್ದಾಗಿನ ಘಟನೆ. ದಸರೆಯ ರಜೆಯಲ್ಲಿ ನಮ್ಮ ದೊಡ್ಡಮ್ಮನ ಮಕ್ಕಳೂ, ಶಿವಣ್ಣಯ್ಯನ (ಈಗ ನನ್ನ ಮಾವನವರು) ಮನೆ ಹುಡುಗರೂ ಮೈಸೂರಿಗೆ ಬರುತ್ತಿದ್ದರು. ಹಾಗೇ ನಾವೆಲ್ಲರೂ ಬೇಸಿಗೆ ರಜೆಯಲ್ಲಿ ಬೆಂಗಳೂರಿಗೆ ಹೋಗುತ್ತಿದ್ದೆವು. ನಮ್ಮ ತಾಯಿಯ ಅಕ್ಕ ಅನ್ನಪೂರ್ಣಮ್ಮನವರಿಗೆ ನಮ್ಮೆಲ್ಲರನ್ನು ಕಂಡರೆ ತುಂಬಾ ಪ್ರೀತಿ. ಅಪರೂಪಕ್ಕೆ ಹೋಗುವ ನಮಗೆ ಅಲ್ಲಿ ರಾಜಾತಿಥ್ಯ. ನಮ್ಮ ಚಿಟ್ಟಿ (ವಿಶಾಲಾಕ್ಷಮ್ಮನವರು) ನಮ್ಮೆಲ್ಲರಿಗೂ ಎಣ್ಣೆ ಒತ್ತಿ ನೀರು ಹಾಕಿದರೆ, ದೊಡ್ಡಮ್ಮ ರುಚಿರುಚಿಯಾಗಿ ತಿಂಡಿ ಮಾಡಿಡುತ್ತಿದ್ದರು. ಅವರು ಮಾಡಿದ ತಿಂಡಿ ತಿಂದು, ಅಲ್ಲೇ ಆಡಿಕೊಂಡಿದ್ದರೆ ದೊಡ್ಡಮ್ಮನಿಗೆ

ಎಲ್ಲಿಲ್ಲದ ಸಂತೋಷ. ೨-೩ ದಿವಸಗಳ ನಂತರ ನಾವು ಶಿವಣ್ಣಯ್ಯನ ಮನೆಗೆ ಹೋಗಿ ಬರುತ್ತೇವೆ ಎಂದರೆ ಅವರಿಗೆ ಅಸಮಾಧಾನ. ಅದಕ್ಕಾಗಿ ನಾವೊಂದು ಸಲ ಅಮ್ಮನಿಗೆ - ''ಅಮ್ಮ ಈ ಬಾರಿ ನಾವು ಮೊದಲು ಅಣ್ಣಯ್ಯನ ಮನೆಗೆ ಹೋಗಿ ೨ ದಿವಸವಿದ್ದು ಆಮೇಲೆ ದೊಡ್ಡಮ್ಮನ ಮನೆಗೆ ಹೋಗೋಣ, ಅಲ್ಲಿ ಇವತ್ತೇ ಮೈಸೂರಿನಿಂದ ಬಂದೆವು ಅಂತ ಹೇಳಿದರಾಯಿತು'' ಅಂತ ಸಲಹೆ ಕೊಟ್ಟೆವು. ಅದಕ್ಕೆ ಅಮ್ಮ :

'ನಾವೇನೋ ಹಾಗೆ ಹೇಳಬಹುದು. ಆದರೆ ನಿಮ್ಮಪ್ಪಾಜಿ ನಿಜ ಹೇಳಿದರೆ ಏನು ಮಾಡುತ್ತೀರಿ' ಎಂದರು. ನಾವು ಪಟ್ಟುಬಿಡದೆ ಅಪ್ಪಾಜಿಗೆ ನೀವೇ ಹೇಳಿಕೊಟ್ಟು ಒಪ್ಪಿಸಿ ನಾವು ಇವತ್ತೇ ಬಂದಿದ್ದು ಅಂತ ಅವರು ಹೇಳಲಿ ಎಂದು ಒತ್ತಾಯಿಸಿದೆವು. ಅಪ್ಪಾಜಿ ಸುಳ್ಳು ಹೇಳುವುದರಲ್ಲಿ ಯಶಸ್ವಿಯಾಗುವರೆಂಬ ಅನುಮಾನವಿದ್ದರೂ ಅಮ್ಮ ಅರೆಮನಸ್ಸಿನಿಂದ ನಮಗಾಗಿ ಸುಳ್ಳು ಹೇಳಿಸಲು ಒಪ್ಪಿಕೊಂಡರು.

೨ ದಿವಸ ಶಿವಣ್ಣಯ್ಯನ ಮನೆಯಲ್ಲಿದ್ದು, ಆಟೋದಲ್ಲಿ ಹೋಗುತ್ತಿರುವಾಗಲೂ ಒಮ್ಮೆ ಅಪ್ಪಾಜಿಗೆ ನೆನಪಿಸಿ ದೊಡ್ಡಮ್ಮನ ಮನೆಗೆ ಬಂದಿಳಿದೆವು.

'ಓ ಹೋ ಹೋ ಯಾವಾಗ ಬಂದ್ರಿ' ಅಂತ ದೊಡ್ಡಮ್ಮ ಹಾರ್ದಿಕವಾಗಿ ಸ್ವಾಗತಿಸಿದರು. 'ಈಗ್ತಾನೇ ಬರ್‍ತಾಇದ್ದೀವಕ್ಕಯ್ಯ' ಅಂತ ಅಮ್ಮ ಉತ್ತರಿಸಿದರು. ಸರಿ ನಮಗೆಲ್ಲ ಅದರೋಪಚಾರವಾಯಿತು. ಕೈಕಾಲು ತೊಳೆದುಕೊಂಡು ಬಂದ ಅಪ್ಪಾಜಿಯನ್ನು ದೊಡ್ಡಮ್ಮ ಸಹಜವಾಗಿ ಏನಪ್ಪಾ ಆರೋಗ್ಯನಾ, ಈಗ ಬಂದ್ರಾ ಎಂದಿದ್ದೇ :

''ಎಲ್ಲಮ್ಮಾ, ಬೆಂಗಳೂರಿಗ್ಬಂದು ಮೂರ್‍ದಿನ ಆಯ್ತು'' ಬಂದ್ಮೇಲಸಪ್ಪಾ ಆಗ್ಲಿಲ್ಲ' ಎನ್ನುವುದೇ! ಅಮ್ಮ ಹಿಂದೆ ನಿಂತು ಕೈ ಕೈ ಹಿಸುಕಿಕೊಳ್ಳುತ್ತಿದ್ದಾಗಲೇ ದೊಡ್ಡಮ್ಮ ಬಿಡದೆ - 'ಏನೇ ಗೌರಾ, ಈಗ್ಬಂದ್ವಿ ಅಂತೀರಾ, ಈಯಪ್ಪ ನೋಡಿದರೆ ಬಂದು ಮೂರ್‍ದಿನ ಆಯ್ತೂಂತಾನೆ' ಅಂತ ಝಾಡಿಸಿದಾಗ ಪಾಪ ಅಮ್ಮನ ಮುಖ ಇಷ್ಟಾಗಿತ್ತು. ಅಪ್ಪಾಜಿಯ ಮುಗ್ಧತೆಯೆದುರು ನಾವು ಸೋತಿದ್ದೆವು.''.

ತಮ್ಮ ವಿದ್ವತ್ತಿನಿಂದ ಸಾಹಿತ್ಯ ಲೋಕದಲ್ಲಿ ವಿಶಿಷ್ಟಸ್ಥಾನ ಸಂಪಾದಿಸಿದ್ದ ಅಪ್ಪಾಜಿ ಲೌಕಿಕದಲ್ಲಿ ಅತ್ಯಂತ ಮುಗ್ಧರು. ಕಪಟವನ್ನರಿಯದ ಅವರ ಈ ಸ್ವಭಾವದ ದುರುಪಯೋಗ ಪಡೆದವರು ಹಲವರು. ಈ ಮುಗ್ಧತೆಯಿಂದಾಗಿಯೇ ಅವರು ತಮ್ಮ ಬೆಂಗಳೂರಿನ ಮನೆಯನ್ನು ಬಾಡಿಗೆದಾರರಿಂದ ಬಿಡಿಸಿಕೊಳ್ಳಲಾರದೆ ಕೋರ್ಟು ಕಛೇರಿಗಳಿಗಾಗಿ ತಮ್ಮ ಅಮೂಲ್ಯವಾದ ಸಮಯವನ್ನು ವ್ಯಯಮಾಡಬೇಕಾಯಿತು.

ಹಿತಮಿತವಾದ ಸಾತ್ವಿಕ ಆಹಾರ ಸೇವನೆಯಿಂದ ಅವರ ಆರೋಗ್ಯ ಚೆನ್ನಾಗಿತ್ತು. ಕಾಫೀ, ಟೀ ಮೊದಲ್ಗೊಂಡು ಯಾವ ಚಟವೂ ಅವರಿಗಿರಲಿಲ್ಲ. ಅವರ ಆರೋಗ್ಯ ಸೂತ್ರವೆಂದರೆ -

ಅಪೇಯ ಪಾನ, ಅಭಕ್ಷ್ಯ ಭಕ್ಷಣ, ಅಗಮ್ಯ ಗಮನಗಳನ್ನು ವರ್ಜಿಸುವಿಕೆ. ಹಾಲು, ತುಪ್ಪ, ಕಡಲೆಕಾಯಿ ಅವರಿಗೆ ತುಂಬಾ ಪ್ರಿಯ. ನಿದ್ದೆಯಲ್ಲಿದ್ದರೂ 'ಅಪ್ಪಾಜಿ, ಹಾಲು' ಎಂದರೆ ಥಿಗ್ಗನೆದ್ದು ಸಂತೋಷದಿಂದ ಕುಡಿಯುತ್ತಿದ್ದರು. ಅವರ ಹಾಲಿನ ಮೇಲಿನ ಪ್ರೇಮವನ್ನು ನೋಡಿ ಅಮ್ಮ - 'ನಿಮಗೆ ಯಾರು ನಂಜುಂಡಾರಾಧ್ಯರು ಅಂತ ಹೆಸರಿಟ್ಟರೋ, ಹಾಲಾರಾಧ್ಯರು ಅಂತ ಇಟ್ಟಿದ್ದರೆ ಚೆನ್ನಾಗಿರ್ತಿತ್ತು' ಅಂತ ಹಾಸ್ಯಮಾಡುತ್ತಿದ್ದರು.

ಅಪ್ಪಾಜಿಯವರು ಸದಾ ಚಿಂತನಶೀಲ ಮನಸ್ಸು. ಮನೆಯಲ್ಲಿ, ಪಕ್ಕದಲ್ಲೇ ಮಕ್ಕಳು ಅಳುತ್ತಿದ್ದರೂ ತಮ್ಮ ಆಲೋಚನೆಗಳಲ್ಲೇ ಅವರು ಮುಳುಗಿರುತ್ತಿದ್ದರು. ಅಮ್ಮ ಬಂದು - 'ಮಗು ಇಷ್ಟು ಅಳ್ತಾ ಇದೆ, ಸ್ವಲ್ಪ ನೋಡಬಾರದಿತ್ತೇ' ಎಂದರೆ ಹೌದಾ ನನಗೆ ಗೊತ್ತೇ ಆಗಲಿಲ್ಲ. 'ಇಷ್ಟಕ್ಕೂ ನಿನ್ನ ಮಕ್ಕಳು ನಶ್ವರ, ನನ್ನ ಮಕ್ಕಳು ಶಾಶ್ವತ' ಎಂದು ಪುಸ್ತಕಗಳೆಡೆಗೆ ಕೈ ತೋರುತ್ತಿದ್ದರು. ಎಷ್ಟೋ ಬಾರಿ ರಸ್ತೆಯಲ್ಲಿ ಎದುರಾಗಿ ವಂದಿಸಿದ ಪರಿಚಿತರನ್ನು ಗಮನಿಸದೆ ಅವರಿಂದ ಟೀಕೆಗೊಳಗಾಗಿದ್ದರು. ಶಾಲೆಯಿಂದ ಮನೆಗೆ ಬಂದು ನಾವು :

'ಅಪ್ಪಾಜಿ ಅಪ್ಪಾಜಿ ನೀವ್ ನಮ್ ಸ್ಕೂಲ್ ಮುಂದೆ ಸೈಕಲ್ನಲ್ಲಿ ಬರ್ತಾ ಇದ್ರಿ. ನಾವ್ ಕರೆದ್ರೂ ನೀವ್ ನೋಡ್ಲೇ ಇಲ್ಲ ಎಂದರೆ '

'ಹೌದೇನಮ್ಮ, ನನಗೆ ಗೊತ್ತೇ ಆಗಲಿಲ್ಲ' ಎನ್ನುತ್ತಿದ್ದರು.

ಅವರ ಮರೆವಿನಿಂದ, ಅನ್ಯಮನಸ್ಕತೆಯಿಂದ ಪ್ರಯಾಣದಲ್ಲಿ ಅವರು ಕಳೆದ ಚಪ್ಪಲಿ, ಶಾಲು, ಛತ್ರಿಗಳಿಗೆ ಲೆಕ್ಕವೇ ಇಲ್ಲ. ರೈಲಿನಲ್ಲಿ ಪ್ರಯಾಣಿಸುವಾಗ ಅವರ ನಿಲ್ದಾಣದಲ್ಲಿ ಇಳಿಯದೆ ಮುಂದೆ ಹೋಗಿ ಹಿಂತಿರುಗಿದ ನಿದರ್ಶನಗಳೂ ಇಲ್ಲದಿಲ್ಲ.

ಅಪ್ಪಾಜಿ ಜೀವನವನ್ನು ತುಂಬಾ ಪ್ರೀತಿಸುತ್ತಿದ್ದರು. ಯಾರಾದರೂ ಸಾವಿನ ವಿಷಯ ತೆಗೆದರೆ ಮಾತನಾಡಿದರೆ ಛೀ ಅಪದ್ಧ ಮಾತನಾಡಬಾರದು ಎಂದು ಗದರಿಸುತ್ತಿದ್ದರು. ಯಾರಾದರೂ 'ತಾತಾ' ಎಂದರೆ ಅವರು ಮುನಿಯುತ್ತಿದ್ದರು. ನನ್ನ ದೇಹಕ್ಕೆ ವಯಸ್ಸಾಗಿರಬಹುದು ನನ್ನ ಮನಸ್ಸಿನ್ನೂ ತರುಣವಾಗಿದೆ ಎಂದು ನುಡಿಯುತ್ತಿದ್ದರು. ಇನ್ನೂ ಬಹಳ ಓದಬೇಕು, ಬರೆಯಬೇಕು, ಸಾಧಿಸಬೇಕು ಎಂಬುದು ಅವರ ಹಂಬಲವಾಗಿತ್ತು.

ಅಮ್ಮ ಜಾನಪದ ಸಾಹಿತ್ಯದ ಭಂಡಾರ ಜೋಗುಳ ಹಾಡುತ್ತಾ ಅವರು ಮೊಮ್ಮಕ್ಕಳನ್ನು ತೂಗಿ ಮಲಗಿಸುತ್ತಿದ್ದರೆ :

'ಈ ಹಾಡು ಕೇಳ್ತಾ ಇದ್ದರೆ ಮತ್ತೆ ಮಗುವಾಗಿ ಮಲಗುವ ಆಸೆಯಾಗ್ತದೆ ' ಎಂಬ ಇಚ್ಛೆಯನ್ನವರು ವ್ಯಕ್ತಪಡಿಸುತ್ತಿದ್ದರು. ಅವರು ಕಾಲವಾದ ವರ್ಷದಲ್ಲೇ ಹುಟ್ಟಿದ ಅಣ್ಣನ ಮಗ ನಿಶಾಂತನಿಗೆ ಅವರದೇ ಹೋಲಿಕೆ.

ಅವರಿಗೆ ಮೊದಲ ಬಾರಿ ಹೃದಯಾಘಾತವಾದಾಗ ನನ್ನ ಮೊದಲ ಮಗ 'ಶಿಶಿರ' ಎರಡು ತಿಂಗಳ ಕಂದ. ಆಸ್ಪತ್ರೆಯಿಂದ ಮನೆಗೆ ಬಂದ ಮೇಲೆ ಅವನನ್ನು ಅವರ ತೊಡೆಯಮೇಲೆ ಮಲಗಿಸಿದ್ದರೆ ಅವನನ್ನೇ ದಿಟ್ಟಿಸುತ್ತಾ :

"ನಿನ್ನ ಅಭ್ಯುದಯ ನಾನು ನೋಡ್ತೀನೇನಪ್ಪಾ" ಎಂದು ಹನಿಗಣ್ಣಾಗಿದ್ದರು.

ಎರಡನೆಯ ಬಾರಿ ಆಸ್ಪತ್ರೆಗೆ ಹೋಗುವಾಗ ಅವರಿಗೆ ಅವರ ಮೃತ್ಯು ಖಚಿತವಾಗಿತ್ತೆಂದು ತೋರುತ್ತದೆ. ಕಾರಿನಲ್ಲಿ ಕೂತು ತಾವು ಬದುಕಿ ಬಾಳಿದ ಮನೆಯನ್ನೊಮ್ಮೆ ಕಣ್ತುಂಬಾ ನೋಡಿ ನಮಸ್ಕರಿಸಿದ ದೃಶ್ಯ ನನ್ನ ಕಣ್ಮುಂದೆ ಅಚ್ಚಳಿಯದೆ ನಿಂತಿದೆ.

ತಮ್ಮ ಕೃತಿಗಳಿಂದ ಸಾಹಿತ್ಯಲೋಕದಲ್ಲಿ ವಿಶಿಷ್ಟಸ್ಥಾನಗಳಿಸಿ ಅಮರರಾಗಿರುವ, ಬಿರುದು ಬಾವಲಿ ಬಿನ್ನವತ್ತಳೆಗಳಿಂದ, ರಾಜ್ಯಪ್ರಶಸ್ತಿ, ರಾಷ್ಟ್ರಪ್ರಶಸ್ತಿಗಳಿಂದ ಸನ್ಮಾನಿತರಾಗಿದ್ದ, ಆಸ್ಥಾನ ವಿದ್ವಾನ್ ಎಂ.ಜಿ. ನಂಜುಂಡಾರಾಧ್ಯರನ್ನೂ ಅವರ ಕೃತಿಗಳನ್ನೂ ಕುರಿತು ಅವರ ಸಾಹಿತಿ ಮಿತ್ರರು, ಶಿಷ್ಯಂದಿರು, ಮಠಾಧೀಶರು ಈ ಕಿರುಹೊತ್ತಿಗೆಯಲ್ಲಿ ಬರೆದಿದ್ದಾರೆ. ಅವರೆ ಮಕ್ಕಳೊಡನೆ ಮಧುರಬಾಂಧವ್ಯವನ್ನಿರಿಸಿಕೊಂಡಿದ್ದ ನಮ್ಮ ಪ್ರೀತಿಯ ಅಪ್ಪಾಜಿಯಲ್ಲಿ ನಾವು ಮೆಚ್ಚಿ ನಮ್ಮದಾಗಿಸಿಕೊಂಡ ಎರಡು ಸಾಲು ಬರೆಯುವಷ್ಟಕ್ಕೆ ನನ್ನ ಜ್ಞಾನ ಸೀಮಿತ.

ಅಪ್ಪಾಜಿಯ ವಿದ್ವತ್ತಿನ ಬಗ್ಗೆ ಅಪಾರ ಹೆಮ್ಮೆ ಹೊಂದಿದ್ದು, ಸಂಸಾರ ನಿರ್ವಹಣೆಯ ಸಿಂಹಪಾಲನ್ನು ತಮ್ಮ ಹೆಗಲಿಗೆ ವರ್ಗಾಯಿಸಿಕೊಂಡು ಸಮರ್ಥವಾಗಿ ನಿರ್ವಹಿಸಿದ, ಜೀವನದ ಏರಿಳಿತಗಳಲ್ಲಿ ಒತ್ತಾಸೆಯಾಗಿ ನಿಂತು ಅವರ ಯಶಸ್ಸಿಗೆ ನೆರವಾದ ಅಮ್ಮನನ್ನು ನೆನೆಯದೆ ಈ ಲೇಖನ ಅಪೂರ್ಣ.

# ಸೃಜನಶೀಲ ವಿದ್ವತ್ ಶಿಖರ

ಡಾ|| ಎಚ್. ತಿಪ್ಪೇರುದ್ರಸ್ವಾಮಿ

---

ವಿದ್ವಾನ್ ಶ್ರೀ ಎಂ.ಜಿ. ನಂಜುಂಡಾರಾಧ್ಯ ಅವರನ್ನು ಸ್ಮರಿಸಿಕೊಂಡಾಗಲೆಲ್ಲಾ ವಿದ್ವತ್ತಿನ ಔನ್ನತ್ಯದ ಜೊತೆಗೆ ಸೌಜನ್ಯ ಸಹೃದಯತೆಗಳ ಸ್ನೇಹಮೂರ್ತಿಯೊಂದು ಕಣ್ಣಮುಂದೆ ನಿಲ್ಲುತ್ತದೆ. ಅವರ ವೈಯಕ್ತಿಕ ಪರಿಚಯವಾಗುವುದಕ್ಕೆ ಮೊದಲೇ ನಾನಿನ್ನೂ ವಿದ್ಯಾರ್ಥಿಯಾಗಿದ್ದಾಗಲೇ ಅವರ ಕೆಲವು ಕೃತಿಗಳ ಮೂಲಕ ಅವರ ಪರಿಚಯವಾಗಿತ್ತು. ಮುಂದೆ ನಾನು ಕನ್ನಡ ಅಧ್ಯಾಪಕನಾದ ಮೇಲೆ ಕೆಲವು ಸಮಾರಂಭಗಳಲ್ಲಿ ಭಾಗವಹಿಸುವುದರ ಮೂಲಕ ನೇರವಾಗಿ ಅವರ ಪರಿಚಯವಾಯಿತು. ಮುಂದೆ ಆ ಪರಿಚಯ ಹೆಚ್ಚು ಹೆಚ್ಚು ನಿಕಟವಾಗುತ್ತಾ ಆತ್ಮೀಯವಾಗುತ್ತಾ ಬೆಳೆದುಬಂದಿತು. ನನಗೆ ತೀರಾ ಆತ್ಮೀಯರಾದ ಕೆಲವೇ ಹಿರಿಯರಲ್ಲಿ ಅವರು ಒಬ್ಬರಾಗಿ ಪರಿಣಮಿಸಿದರು.

ಅವರ ವ್ಯಕ್ತಿತ್ವವೇ ಅಂತಹುದು. ಸಂಸ್ಕೃತ ಕನ್ನಡಗಳಲ್ಲಿ ಪ್ರಗಲ್ಭ ಪಾಂಡಿತ್ಯ ; ಸಂಸ್ಕೃತ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದು ತಮ್ಮ ಪ್ರೌಢಪ್ರವಚನಗಳಿಂದಲೂ ಮತ್ತು ತಮ್ಮ ಪ್ರೌಢ ಗ್ರಂಥಗಳಿಂದಲೂ ಗಮನ ಸೆಳೆಯುವ ಸಿದ್ಧಾಂತ ಪ್ರತಿಪಾದನೆಯ ಶಿಸ್ತು; ಅದರ ಜೊತೆಗೆ ಪರಿಶುದ್ಧ ಜೀವನದ ನಿಷ್ಠಾವಂತ ಆಚರಣೆಯ ನಿಯಮಬದ್ಧ ಜೀವನ; - ಇವುಗಳಿಂದ ಸಹಜವಾಗಿ ಬೆಳೆಯಬಹುದಾದ ಅಹಂಕಾರಕ್ಕೆ ಎಡೆಗೊಡದ ಸರಸ ಸಜ್ಜನಿಕೆಯ ಸರಳತೆ - ಈ

ಮೂರೂ ಒಂದಾಗಿ ಕೂಡಿಕೊಂಡರೆ ಗೌರವವನ್ನು ಮೂಡಿಸುವಂತಹ ಆಕರ್ಷಕ ವ್ಯಕ್ತಿತ್ವ ಅವರದಾಗಿತ್ತು.

ಅವರ ವಿದ್ವತ್ತಿನ ಬಹಳ ಮುಖ್ಯವಾದ ಗುಣವೆಂದರೆ ಅದು ಮುಕ್ತದ ಮನಸ್ಸಿನ ಏಕಮುಖವಾದ ಹಠದಿಂದ ಕೂಡಿದ ಶುಷ್ಕ ಪಾಂಡಿತ್ಯವಾಗಿರಲಿಲ್ಲ. ಅವರ ಗ್ರಂಥಗಳಲ್ಲಿಯೂ ಅದನ್ನು ಕಾಣುತ್ತೇವೆ. ವಿಷಯದ ಪ್ರೌಢಿಮೆಯ ಜೊತೆಗೆ ನಿರೂಪಣೆಯ ಪರಿಣತಿಯೂ ಸೇರಿ ಅವರ ಶಾಸ್ತ್ರಗ್ರಂಥಗಳು ಸಹ ಜಡವಾಗದೆ ಕುತೂಹಲದಿಂದ ಓದಿಸಿಕೊಳ್ಳುತ್ತವೆ. ಪಾಂಡಿತ್ಯದ ಜೊತೆಗೆ ಸೃಜನಾತ್ಮಕ ಪ್ರತಿಭೆಯೂ ಅವರಲ್ಲಿದ್ದುದೇ ಅದಕ್ಕೆ ಕಾರಣ. ನಾಟಕ ಕಾದಂಬರಿ ಮೊದಲಾದ ಕೆಲವು ಸೃಜನಾತ್ಮಕ ಕೃತಿಗಳನ್ನೂ ಅವರು ರಚಿಸಿರುವುದನ್ನು ಗಮನಿಸಬಹುದು. ಅವುಗಳನ್ನು ಪ್ರಸ್ತಾಪಿಸಲು ಇಲ್ಲಿ ಉದ್ದೇಶಿಸಿಲ್ಲ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದುದೆಂದರೆ ಯಾವಾಗಲೂ ಮುಕ್ತವಾದ ಅವರ ಮನಸ್ಸಿನ ಆಲೋಚನಾ ಸರಣಿ. ನಾನು ಕೆಲವು ವೇಳೆ ಅವರ ಕೃತಿಗಳ ವಿಚಾರದಲ್ಲಿ ಅದರಲ್ಲೂ ಮುಖ್ಯವಾಗಿ ಶಿವಾಗಮಗಳು, ಮತ್ತು ವೀರಶೈವವನ್ನು ಕುರಿತ ಕೆಲವು ಅಂಶಗಳಲ್ಲಿ ಭಿನ್ನಾಭಿಪ್ರಾಯವನ್ನು ವ್ಯಕ್ತಪಡಿಸುತ್ತಿದ್ದುದುಂಟು. ಅದನ್ನವರು ಸಹನೆಯಿಂದ ಕೇಳುತ್ತಿದ್ದುದಲ್ಲದೆ ನಗುನಗುತ್ತಲೇ ಅವುಗಳಿಗೆ ಉತ್ತರವನ್ನು ಕೊಡುತ್ತಿದ್ದರು. ಅವರ ವಾದವನ್ನು ಒಪ್ಪದಿದ್ದವರು ಕೂಡಾ ಮುಕ್ತ ಮನಸ್ಸಿನ ಅವರ ಪ್ರತಿಪಾದನೆಗೆ ಮಾರು ಹೋಗುತ್ತಿದ್ದರು.

ಕೇವಲ ಪಾಂಡಿತ್ಯದ ನೆರವಿನಿಂದ ಇದು ಸಾಧ್ಯವಾಗುವುದಿಲ್ಲ. ಅನ್ಯರಲ್ಲಿರುವ ಅಥವಾ ಅನ್ಯವಾದದಲ್ಲಿರುವ ಗುಣವನ್ನು ಗುರುತಿಸುವ ಸಹೃದಯತೆ ಔದಾರ್ಯಗಳಿಂದ ಇದು ಸಾಧ್ಯವಾಗುತ್ತದೆ. ಪ್ರೊ॥ ನಂಜುಂಡಾರಾಧ್ಯರಲ್ಲಿ ಈ ಎರಡು ಗುಣಗಳನ್ನು ನಾನು ವಿಶೇಷವಾಗಿ ಗುರುತಿಸಿದ್ದೆ. ತಾವು ನಿಷ್ಠೆಯಿಂದ ನಂಬಿರುವ ತತ್ತ್ವವನ್ನು ಸಿದ್ಧಾಂತವನ್ನು ಶಾಸ್ತ್ರೀಯವಾಗಿ ಪ್ರತಿಪಾದಿಸುವ ಸಾಂಪ್ರದಾಯಿಕ ದೃಷ್ಟಿಯ ಜೊತೆಗೆ ಅದನ್ನು ಮೀರಿನಿಂತು ಆ ಸತ್ಯದ ಇನ್ನೊಂದು ಮಗ್ಗುಲನ್ನು ಕಾಣುವ ಪೂರ್ಣದೃಷ್ಟಿಯ ವಿಚಾರಶೀಲತೆ ಅವರಲ್ಲಿತ್ತು. ಆದ್ದರಿಂದಲೇ ಅವರು ಸಂಪ್ರದಾಯದಲ್ಲಿದ್ದೂ ಅದರ ಹೊರಗೂ ವಿವೇಚಿಸಬಲ್ಲವರಾಗಿದ್ದರು. ಅಂತೆಯೇ ಇನ್ನೊಂದು ಬಹಳ ಮುಖ್ಯವಾದ ಗುಣ ಸೃಜನಶೀಲತೆಯಿಂದ ಕೂಡಿದ ಸಹೃದಯತೆ. ಆದ್ದರಿಂದಲೇ ಅವರು ಸೃಜನಶೀಲ ಕೃತಿಗಳನ್ನೂ ರಚಿಸುವುದರಲ್ಲಿ ಯಶಸ್ವಿಯಾದರು. ಇನ್ನೊಬ್ಬರ ಕೃತಿಯಲ್ಲಿರುವ ಗುಣವನ್ನು ಗುರುತಿಸಿ ಆಸ್ವಾದಿಸುವ ಔದಾರ್ಯವನ್ನು ಅವರು ಬೆಳೆಸಿಕೊಂಡಿದ್ದರು. ಪಾಂಡಿತ್ಯದ ಭಾರ ಹೆಚ್ಚಾದಂತೆಲ್ಲಾ ಸಹೃದಯತೆ ಕಿರಿದಾಗುತ್ತಾ ಸೊರಗುತ್ತದೆ ಎಂಬ ಅಭಿಪ್ರಾಯಕ್ಕೆ ಅವರು ಹೊರತಾಗಿದ್ದರು.

ಒಮ್ಮೆ ನಡೆದ ಘಟನೆ ಈ ಸಂದರ್ಭದಲ್ಲಿ ನನ್ನ ನೆನಪಿಗೆ ಬರುತ್ತದೆ. ಅಂದು ಮೈಸೂರಿನಿಂದ ಸಿರಿಗೆರೆಗೆ ನಾವಿಬ್ಬರೂ ಜೊತೆಯಲ್ಲಿಯೇ ಪ್ರಯಾಣ ಮಾಡುವ ಅವಕಾಶ ಬಂದಿತು.

ಮೊದಲೇ ಮಾತನಾಡಿಕೊಂಡಂತೆ ಇಬ್ಬರೂ ಬಸ್ ಸ್ಟ್ಯಾಂಡಿಗೆ ಬಂದು ಬಸ್ಸನ್ನೇರಿದೆವು. ನನ್ನ ''ಪರಿಪೂರ್ಣದೆಡೆಗೆ'' ಕಾದಂಬರಿ ಆಗ ತಾನೇ ಪ್ರಕಟವಾಗಿತ್ತು. ಅದರ ಒಂದು ಪ್ರತಿಯನ್ನು ಜೊತೆಯಲ್ಲಿ ತಂದಿದ್ದು ಅದನ್ನು ಅವರಿಗೆ ಕೊಟ್ಟೆ. ಬಹಳ ಉತ್ಸಾಹದಿಂದ ಅದನ್ನು ತೆಗೆದುಕೊಂಡು ಹಿಂದೆ ಮುಂದೆ ತಿರುಗಿಸಿ ನೋಡಿದರು. ಕಾದಂಬರಿಯ ಹೆಸರನ್ನು ಮೆಚ್ಚಿ ನುಡಿದರು. ಅನಂತರ ಸ್ವಲ್ಪ ದೂರ ಅದೂ ಇದೂ ಮಾತುಕತೆಯಾದ ಮೇಲೆ ಪುಸ್ತಕವನ್ನು ತೆರೆದು ಓದತೊಡಗಿದರು. ಓದುತ್ತಲೇ ಹೋದರು. ಬಸ್ಸಿನಲ್ಲಿ ಓದುವುದೇಕೆಂದು ನಾನೇ ಅವರನ್ನು ಮಾತಿಗೆಳೆಯಲು ಪ್ರಯತ್ನಿಸಿದೆ. ಆದರೂ ಓದನ್ನು ನಿಲ್ಲಿಸಲಿಲ್ಲ. ಮಧ್ಯೆ ಬಸ್ಸುನಿಂತಾಗ ಒಂದೆರಡು ಕಡೆ ಕೆಳಗಿಳಿದು ಮಾತನಾಡಿದುದನ್ನು ಬಿಟ್ಟರೆ ಉಳಿದೆಲ್ಲ ಸಮಯವನ್ನು ಓದಿನಲ್ಲೇ ಕಳೆದರು. ಕಾದಂಬರಿ ಚಿಕ್ಕದಾದುದರಿಂದ ಚಿತ್ರದುರ್ಗವನ್ನು ತಲುಪುವ ವೇಳೆಗೆ ಕಾದಂಬರಿಯನ್ನು ಮುಗಿಸಿ ಕೆಳಗಿಟ್ಟರು. ನಾನು ಅವರನ್ನೇ ನೋಡುತ್ತಿದ್ದೆ. ಅದರಿಂದ ಹೊರಗೆ ಬಂದವರಂತೆ ಹೇಳಿದರು: ''ಯಾವ ಕಾದಂಬರಿಯನ್ನೂ ಇಷ್ಟು ಆಸಕ್ತಿಯಿಂದ ನಾನು ಓದಿರಲಿಲ್ಲ. ಪ್ರಭುದೇವನ ದರ್ಶನವಾಯಿತು. ಮಾಯದೇವಿ, ಕಾಮಲತೆ ಅಂತೆಯೇ ಅಲ್ಲಮನಿಗೆ ಮದುವೆ ಆಗಿತ್ತೇ ಇಲ್ಲವೇ ಈ ಎಲ್ಲಾ ವಾದಗಳೂ ಹರಿದು ಹೋದುವು. ಹೀಗೆ ಆಯಿತೋ ಇಲ್ಲವೋ ಆದರೆ ಹೀಗೆ ಆಗಬೇಕಾಗಿತ್ತು ಎಂಬ ಸತ್ಯವನ್ನೇ ಈ ಕಾದಂಬರಿ ಕಾಣಿಸಿತು -'' ಎನ್ನುವ ಅರ್ಥ ಬರುವಂತಹ ಕೆಲವು ಮಾತುಗಳನ್ನು ಹೇಳಿದರು. ಅವರ ಮಾತಿನ ಹಿಂದೆ ಸ್ನೇಹ ಅಭಿಮಾನಗಳ ಔದಾರ್ಯವೂ ಇದ್ದಿರಬಹುದು. ಅದರ ಜೊತೆಗೆ ಕಾವ್ಯಸತ್ಯವನ್ನು ಗುರುತಿಸುವ ಸಹೃದಯನ ಅಂತರ್‌ದೃಷ್ಟಿಯೂ ಅರಳಿತ್ತು ಎಂಬುದನ್ನು ಕಂಡುಕೊಂಡೆ.

ಈ ಶಕ್ತಿ ಅವರಲ್ಲಿ ಸಹಜವಾಗಿ ಇದ್ದುದರಿಂದಲೇ ಅವರ ಪಾಂಡಿತ್ಯಪೂರ್ಣವಾದ ಪ್ರೌಢಶಾಸ್ತ್ರೀಯ ಕೃತಿಗಳಂತೆಯೇ ಸೃಜನಾತ್ಮಕ ಕೃತಿಗಳೂ ಅವರಿಂದ ಸಹಜವಾಗಿ ಮೂಡಿ ಬಂದುವು. ಅವರ ಪರಿಣತ ವಯಸ್ಸಿನಲ್ಲಿ ಬಂದ ''ಪರಮಹಂಸ'' ಎಂಬ ಕಾದಂಬರಿ ಇದಕ್ಕೆ ಒಳ್ಳೆಯ ಉದಾಹರಣೆ. ಒಬ್ಬ ಶಾಸ್ತ್ರೀಯ ವ್ಯಾಖ್ಯಾನಕಾರನ ಅನುಭಾವಿಕ ಜೀವನವನ್ನು ಕಲಾತ್ಮಕವಾಗಿ ಚಿತ್ರಿಸಿರುವ ಈ ಕೃತಿ ಗಮನಾರ್ಹವಾದುದು. ಹಾಗೇ ತೀರಾ ಈಚೆಗೆ ಅವರ ಕೊನೆಯ ದಿನಗಳಲ್ಲಿ ಒಂದು ನಾಟಕ ಬರೆದಿದ್ದರು. ಭಾರತದ ನಾಗರಿಕತೆಯ ಪ್ರಾರಂಭದ ದಿನಗಳಲ್ಲಿ ಆರ್ಯರಿಗೂ ದಸ್ಯುಗಳಿಗೂ ಉಂಟಾದ ಘರ್ಷಣೆಯ ಹಿನ್ನೆಲೆಯಲ್ಲಿ ಆ ನಾಟಕ ರೂಪುಗೊಂಡಿದೆ. ಅವರ ಸಂಶೋಧನಾತ್ಮಕ ಜಿಜ್ಞಾಸೆ ಮತ್ತು ಕಲಾತ್ಮಕ ಪ್ರತಿಭೆ ಎರಡರ ಸಂಗಮವನ್ನು ಅಲ್ಲಿ ಕಾಣಬಹುದಾಗಿದೆ. ಆ ಕೃತಿಯ ಹಸ್ತಪ್ರತಿಯನ್ನು ಮೊದಲು ನನ್ನ ಕೈಗಿತ್ತು ನನ್ನ ಅಭಿಪ್ರಾಯವನ್ನೇ ಕೇಳಿದ್ದರು.

ನನ್ನ ಮೇಲೆ ಅದೇನೋ ಅವರಿಗೆ ವಿಶೇಷ ಅಭಿಮಾನ ಆದರ. ಹಾಗೆ ನನಗೆ ಅವರ ಮೇಲೆ ವಿಶೇಷ ಗೌರವ. ನಮ್ಮಲ್ಲಿ ಆಗಾಗ ಮೂಡುತ್ತಿದ್ದ ಭಿನ್ನಾಭಿಪ್ರಾಯಗಳು ಇದಕ್ಕೆ

ಅಪ್ರಿಯವಾಗುತ್ತಿರಲಿಲ್ಲ. ಅವರ ಕೆಲವು ಕೃತಿಗಳನ್ನು ಕುರಿತು ಕೆಲವುವೇಳೆ ನಾನು ವಿಮರ್ಶಾತ್ಮಕವಾಗಿ ಮಾತನಾಡಿದುದೂ ಉಂಟು. ಅದನ್ನು ಅವರು ತಪ್ಪಾಗಿ ಭಾವಿಸುತ್ತಿರಲಿಲ್ಲ. ಅವರು ಬರಿಯ ಹೊಗಳಿಕೆಯನ್ನೇ ಮೆಚ್ಚುವವರಾಗಿರಲಿಲ್ಲ. ಅವರ ಈ ಮುಕ್ತಮನೋಧರ್ಮ ನನಗೆ ತುಂಬಾ ಮೆಚ್ಚುಗೆಯಾಗಿತ್ತು. ಆಗಾಗ ಅವರ ಮನೆಗೆ ಹೋಗಿ ಅನೇಕ ವಿಷಯಗಳ ಮೇಲೆ ಚರ್ಚೆ ಮಾಡುತ್ತಿದ್ದುದೂ ಅವರ ಆದರದ ಆತಿಥ್ಯವನ್ನು ಪಡೆಯುತ್ತಿದ್ದುದೂ ನನ್ನ ಕಾರ್ಯಕ್ರಮಗಳಲ್ಲಿ ಒಂದಾಗಿತ್ತು. ಅವರು ಮರೆಯಾದ ಮೇಲೂ ಅವರ ಮನೆಗೆ ಹೋಗಿ ಅವರೊಡನೆ ಮಾತನಾಡಿ ಬರಬೇಕೆಂಬ ಭಾವನೆ ಸುಳಿದುದುಂಟು. ಆದರೆ ಈಗ ಅವರನ್ನು ಮನೆಯಲ್ಲಿ ಕಾಣುವಂತಿಲ್ಲ; ಮನದಲ್ಲೇ ಕಾಣಬೇಕೆಂಬ ಕಟುಸತ್ಯ ಮಿಂಚಿನಂತೆ ಸುಳಿದು ಮನ ಭಾರವಾದುದೂ ಉಂಟು. ಈಗ ಅವರ ವ್ಯಕ್ತಿತ್ವದ ಪ್ರಭೆ ಮನವನ್ನೆಲ್ಲಾ ಆವರಿಸಿ ನಿತ್ಯ ಹಸುರಾಗಿದೆ ಎಂಬ ಸ್ಮರಣೆಯೊಂದೇ ಉಳಿದಿದೆ.

# ವೀರಶೈವರತ್ನ
# ಆಸ್ಥಾನ ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯರು

ಎಚ್. ಎಂ. ಸುಲೋಚನಾ ಶಾಸ್ತ್ರಿ

---

ಮಾನವರಿಗೆ ಒಳ್ಳೆಯ ಅವಕಾಶ ಸಿಕ್ಕರೆ ಅವರಲ್ಲಿ ಹುದುಗಿರುವ ಪಾಂಡಿತ್ಯ ಬೆಳಗಲು ಸಾಧ್ಯವಾಗುತ್ತದೆ. ಸಂಪ್ರದಾಯಸ್ಥ ಜಂಗಮ ಮನೆಯಲ್ಲಿ ಹುಟ್ಟಿ ಭಿಕ್ಷೆಕಾಯಕ ಮಾಡಿಯೋ ಕೃಷಿಕರಾಗಿಯೋ ಬದುಕ ಬಹುದಾಗಿದ್ದ ಎಂ.ಜಿ. ನಂಜುಂಡಾರಾಧ್ಯರು ವಿದ್ವತ್ ಪ್ರಪಂಚದಲ್ಲಿ ಬರಿಯ ವ್ಯಕ್ತಿಯಾಗದೆ, ಒಂದು ಶಕ್ತಿಯಾಗಿ, ಸಂಸ್ಥೆಯಾಗಿ, ಸಾಹಿತ್ಯ ಸೇವೆ ಮಾಡಿರುವುದೇ ಇದಕ್ಕೆ ಒಂದು ನಿದರ್ಶನ. ಇವರು ಕರ್ನಾಟಕ ಸಂಸ್ಕೃತ ಪಂಡಿತರಲ್ಲಿ ಅಗ್ರಗಣ್ಯರು. ಸದ್ವಿನಯ ಸಂಪನ್ನರು, ಆಚಾರ ವಿಚಾರಶೀಲರು.

1.8.1914ರಲ್ಲಿ ಕೋಲಾರ ಜಿಲ್ಲೆ ಗೌರಿಬಿದನೂರು ತಾಲ್ಲೂಕು ಗುಂಡ್ಲಹಳ್ಳಿ ಗ್ರಾಮ ಇವರ ಜನ್ಮಸ್ಥಳ. ತಂದೆ ಮಠದ ಗಂಗಾಧರಯ್ಯ. ತಾಯಿ ವೀರಮ್ಮ ಆರಾಧ್ಯರಲ್ಲಿ ಹುಟ್ಟಿನ ವಾತಾವರಣ, ಪ್ರಭಾವಗಳನ್ನು ಮೀರುವ ವಿಲಕ್ಷಣವಾದ ಸಾಹಸ ಬುದ್ಧಿ ಇತ್ತು. ಆದ್ದರಿಂದ ಅವರು ತಮ್ಮ ಸಹೋದರರಂತೆ ಜಂಗಮವೃತ್ತಿಯನ್ನೋ, ಕೃಷಿಕಾಯಕವನ್ನೋ ಮಾಡಲು ಇಷ್ಟಪಡಲಿಲ್ಲ. ಅವರಿಗೆ ಚಿಕ್ಕಂದಿನಿಂದಲೂ ಓದಬೇಕೆಂಬ ಒಲವಿತ್ತು. ಸಾಹಿತ್ಯ ಪ್ರಪಂಚದ ಕಡೆ ತಮ್ಮ ಹೆಜ್ಜೆಯನ್ನು ಮುಂದಿಡಬಹುದೆಂದು ಬಯಸುತ್ತಿದ್ದರು. ಆದರೆ ಅವರ ಹುಟ್ಟಿದೂರಾದ

ಗುಂಡ್ಲು ಪಳ್ಳಿಯಲ್ಲಿ ಪ್ರಾಥಮಿಕ ತರಗತಿಯವರೆಗೆ ಓದುವ ಅವಕಾಶ ಮಾತ್ರ ಸಿಕ್ಕಿತು. ಅನಂತರ ಅವರ ಪ್ರಯತ್ನಕ್ಕೆ ಯಶಸ್ಸು ಸಿಗುವಂತೆ ಕಾಣಲಿಲ್ಲ. ಮನೆಯಲ್ಲಿಯೂ ಪ್ರೋತ್ಸಾಹ ದೊರೆಯಲಿಲ್ಲ. ಇನ್ನೇನು ಮಾಡುವುದು ಎಂದು ತಂದೆ ಹೇಳಿದಂತೆ ಹೊಲಕ್ಕೆ ಹೋಗಿ ಕಳೆ ಕೀಳುತ್ತಿದ್ದರು. ಆಯಾಸವಾದಾಗಲೆಲ್ಲ ಒಂದು ಕಡೆ ಕೆಲಸದವರನ್ನು ಕೂರಿಸಿಕೊಂಡು ಅವರಿಗೆ ಒಳ್ಳೆಯ ಕಥೆಗಳನ್ನು ಹೇಳುತ್ತಿದ್ದರು. ಇದನ್ನು ಕಂಡ ಅಕ್ಕ ಪಕ್ಕದ ಕೆಲಸಗಾರರೂ ಈ ಕಥೆಗಳನ್ನು ಕೇಳಲು ಬರುತ್ತಿದ್ದರು. ಒಮ್ಮೆ ಇದನ್ನು ಕಂಡ ನೆಸ್‌ಗಂಗೆ ಸಿದ್ಧರಾಮಣ್ಣನವರು “ನಿನ್ನ ಮಗನಿಗೆ ಓದುವುದರಲ್ಲಿ ತುಂಬಾ ಆಸಕ್ತಿ ಇದೆ. ಅದಕ್ಕೆ ತಣ್ಣೀರೆರಚಬೇಡ, ನಾನು ಒಂದು ಕಾಗದವನ್ನು ಬರೆದುಕೊಡುತ್ತೇನೆ. ಅದನ್ನು ತೆಗೆದುಕೊಂಡು ಅವನು ಬೆಂಗಳೂರಿಗೆ ಹೋಗಿ ನಮ್ಮ ಹಾಸ್ಟೆಲ್‌ನಲ್ಲಿ ವಿದ್ಯಾಭ್ಯಾಸ ಮಾಡಲಿ” ಎಂದು ಆರಾಧ್ಯರ ತಂದೆಯವರಿಗೆ ಹೇಳಿದರು. ಅದಕ್ಕೆ ಅವರು ಒಪ್ಪಿ ಮಗ ಹೊಲದಿಂದ ಊಟಕ್ಕೆ ಬಂದಾಗ ಅವನಿಗೆ ಆ ಕಾಗದವನ್ನು ಕೊಟ್ಟರು. ಅದನ್ನು ನೋಡಿದ ಆರಾಧ್ಯರಿಗೆ ತುಂಬಾ ಸಂತೋಷವಾಯಿತು.

“ನಾಳೆ ಎನ್ನುವ ಕೆಲಸ ಹಾಳು, ಇವತ್ತೇ ಮಾಡಬೇಕು” ಎಂಬ ದೃಢಮನಸ್ಸಿನಿಂದ ನಾನು ಈಗಲೇ ಹೋಗುತ್ತೇನೆ ಎಂದು ಹೇಳಿ ಹೊರಟೇ ಬಿಟ್ಟರು. ಆಗ ತಂದೆ ಇವರ ಉತ್ಸಾಹವನ್ನು ಕಂಡು ಅವರನ್ನು ಹರಸಿ ತಮ್ಮ ಕೈಯಲ್ಲಿದ್ದ ೫ ರೂಪಾಯಿಗಳನ್ನು ಕೊಟ್ಟರು. ಆ ದುಡ್ಡನ್ನು ಬಸ್ಸು ಪ್ರಯಾಣದ ಖರ್ಚಿಗಾಗಿ ಬಳಸದೆ ತಮ್ಮ ಊರಿನಿಂದ ೧೨ ಮೈಲಿ ನಡೆದು ಬರುವಷ್ಟರಲ್ಲಿ ಪರಿಚಯದವರ ಸಹಾಯದಿಂದ ಒಂದು ಹೆಂಡದ ಲಾರಿಯಲ್ಲಿ ಉಚಿತವಾಗಿ ಬೆಂಗಳೂರು ಸೇರಿದರು. ಸಿದ್ಧರಾಮಣ್ಣನವರ ಕಾಗದವನ್ನು ಮಹಂತಿನ ಮಠದ ಸಂಸ್ಕೃತ ಪಾಠಶಾಲೆಯ ಹಾಸ್ಟೆಲ್ ನವರಿಗೆ ತೋರಿಸಿ ಅಲ್ಲಿ ಉಳಿದುಕೊಂಡರು. ಇರುವುದಕ್ಕೇನೋ ಜಾಗವಾಯಿತು. ಆದರೆ ಊಟಕ್ಕೆ ಏನು ಮಾಡುವುದು ?’ ಎಂದು ಚಿಂತಿಸುತ್ತಿದ್ದಾಗ ಆಗ ಸಿದ್ಧರಾಮಣ್ಣನವರು ಚಿಂತೆಮಾಡಬೇಡ, ನಾನು ಒಂದು ಊಟದ ಡಬ್ಬಿಯನ್ನು ತೆಗೆದುಕೊಡುತ್ತೇನೆ. ನೀನು ದಿನವೂ ಐದು ಮನೆ ಭಿಕ್ಷೆ ಮಾಡಿ ಊಟ ಮಾಡು, ಎಂದು ಹೇಳಿದರು. ಆರಾಧ್ಯರು ಅದೇ ರೀತಿ ಮಾಡಲು ಒಪ್ಪಿಕೊಂಡರು. ಅನಂತರ ಸಂಸ್ಕೃತ ಪಾಠಶಾಲೆಗೆ ಹೋಗಿ ಸಾಹುಕಾರರ ಕಾಗದವನ್ನು ತೋರಿಸಿದರು. ಆಗ ಅಲ್ಲಿಯ ಗುರುಗಳು ಅವರನ್ನು ಒಮ್ಮೆ ನೋಡಿ ‘ನಿನಗೆ ಓದಬೇಕೆಂಬ ಬಯಕೆಯೇ ?” ಎಂದು ಕೇಳಿದರು. ಅದಕ್ಕೆ ಆರಾಧ್ಯರು “ಹೌದು ವಿದ್ಯಾಪೇಕ್ಷೆಯಿಂದ ಬಂದಿದ್ದೇನೆ. ದಯವಿಟ್ಟು ನನಗೆ ಸಹಾಯ ಮಾಡಿ”. ಎಂದು ಕೇಳಿಕೊಂಡರು. ಆಗ ಗುರುಗಳು “ನಿನಗೆ ಈಗಾಗಲೇ ೧೮ ವರ್ಷವಾಗಿದೆ. ಇಷ್ಟರಲ್ಲಿ ವಿದ್ಯೆ ಕಲಿಯಬೇಕಾಗಿತ್ತು. ಆದರೆ ಈಗ ನಿನ್ನ ಜೀವನದಲ್ಲಿ ವಿದ್ಯೆಯಲ್ಲದೆ ಬೇರೆ ಆಸೆಗಳು, ಮನಸ್ಸನ್ನು ಸೆಳೆಯುವ ಪ್ರಾಯ. ಅಂತಹದರಲ್ಲಿ ಈಗ ವಿದ್ಯಾರ್ಜನೆಗಾಗಿ ಬಂದಿರುವುದು ಆಶ್ಚರ್ಯ” ಎಂದು ಹೇಳಿದರು. ಅದಕ್ಕೆ ಆರಾಧ್ಯರು “ನನ್ನ ವಯಸ್ಸನ್ನು ನೋಡಿ ಹಾಗೆ ಹೇಳಬೇಡಿ. ನಾನು ಚಿಕ್ಕ ವಯಸ್ಸಿನಿಂದಲೂ ವಿದ್ಯೆಕಲಿಯಬೇಕೆಂಬ ಆಸೆಪಟ್ಟಿದ್ದೆ.

ಆದರೆ ಅದಕ್ಕೆ ಪ್ರೋತ್ಸಾಹ ಸಿಗಲಿಲ್ಲ. ನನಗೆ ಸಹಾಯ ಮಾಡಿ, ವಿದ್ಯೆಗೆ ವಯಸ್ಸಿನ ಮಿತಿ ಇಲ್ಲವೆಂದು ತಿಳಿದಿದ್ದೇನೆ.

ನೀವು ನನಗೆ ಓದುವ ಅವಕಾಶವನ್ನು ಮಾಡಿಕೊಟ್ಟರೆ ನಾನು ಸಾಧನೆಯನ್ನು ಮಾಡಿ ತೋರಿಸುತ್ತೇನೆ. ವಿದ್ಯೆಗೆ ಮುಖ್ಯವಾದುದು ವಯಸ್ಸಲ್ಲ ಮನಸ್ಸು. ವಿದ್ಯಾಕಾಂಕ್ಷೆ ವಯಸ್ಸನ್ನು ಹಿಂದಕ್ಕೆ ಹಾಕಿ ಪ್ರಾಯವನ್ನು ಕಾಪಾಡಿಕೊಳ್ಳುತ್ತದೆ. ಆದ್ದರಿಂದ ನನ್ನ ಈ ಆಸೆಯನ್ನು ಪ್ರೋತ್ಸಾಹಿಸಿ ಎಂದು ಕೇಳಿಕೊಳ್ಳುತ್ತೇನೆ.'' ಎಂದರು. ಅವರು ಎಷ್ಟು ಹೇಳಿದರೂ ಅವರ ಗುರುಗಳು ಶಂಕೆಯಿಂದಿದ್ದರು. ತಮ್ಮ ಸಹಉಪಾಧ್ಯಾಯರೊಂದಿಗೆ 'ಇವನಿಗೆ ಇಷ್ಟು ವಯಸ್ಸಾಗಿದೆ. ಆದರೂ ವಿದ್ಯೆ ಕಲಿಯಲೇಬೇಕೆಂದು ಬಂದಿದ್ದಾನೆ. ಏನು ಮಾಡೋಣ ?' ಎಂದು ಚರ್ಚಿಸಿ, ಒಂದು ಅವಕಾಶ ಮಾಡಿಕೊಡಲು ಒಪ್ಪಿದರು. ಅಂದಿನಿಂದ ಆರಾಧ್ಯರು ತಮ್ಮ ವಿದ್ಯಾಭ್ಯಾಸವನ್ನು ಮತ್ತೆ ಪ್ರಾರಂಭಿಸಿದರು. ಆಗ ಅಲ್ಲಿ ಅಧ್ಯಾಪಕರಾಗಿದ್ದ ಪೂಜ್ಯ ಪಂಡಿತ ಕೆ.ಎಂ.ವಿಶ್ವನಾಥ ಶಾಸ್ತ್ರಿಗಳು ಇವರನ್ನು ಶಿಷ್ಯನನ್ನಾಗಿ ಪರಿಗ್ರಹಿಸಿ ಸಂಸ್ಕೃತ ಪಾಠ ಪ್ರಾರಂಭಿಸಿದರು.

೧೦ ನೇ ಶತಮಾನದಲ್ಲಿ ರನ್ನನು ವಿದ್ಯಾರ್ಜನೆಯ ಆಸೆಯಿಂದ ತನ್ನ ಊರಿನಲ್ಲಿ ಪ್ರೋತ್ಸಾಹ ಸಿಗದೆ ವಿದ್ಯಾಕೇಂದ್ರವಾದ ಬಂಕಾಪುರಕ್ಕೆ ಬಂದನು. ಅಲ್ಲಿ ಅಜಿತಾಸೇನಾಚಾರ್ಯ ಆ ರನ್ನನಿಗೆ ವಯಸ್ಸಾದ ಮೇಲೆ ವಿದ್ಯಾಭ್ಯಾಸವೇ ಎಂದು ಹೇಳಿ ಕಡೆಗೆ ರನ್ನನ ವಿದ್ಯಾಬಯಕೆಯನ್ನು ಕಂಡು ಲಲಿತಾಕೀರ್ತಿ ಪಂಡಿತರಲ್ಲಿ ವಿದ್ಯಾಭ್ಯಾಸಕ್ಕೆ ಅನುವು ಮಾಡಿಕೊಟ್ಟಿದ್ದರು. ಹಾಗೆಯೇ ಆರಾಧ್ಯರೂ ರನ್ನನಂತೆಯೇ ಕಷ್ಟಪಟ್ಟು ಸಾಹಿತ್ಯ ಜಗತ್ತಿನಲ್ಲಿ ಪ್ರಸಿದ್ಧಿ ಹೊಂದಿದರು. ಎಂಬುದನ್ನು ಮನಗಾಣಬಹುದು.

ಆರಾಧ್ಯರು ವಾರಾನ್ನಕ್ಕೆ ಮನೆಮನೆಗೆ ಹೋಗುತ್ತಿರಲು ಅದನ್ನು ಕಂಡ ಶರಣ ಸಿದ್ದರಾಮಣ್ಣನವರು ಅವರಿಗೆ, ''ಇನ್ನು ಮೇಲೆ ಬೇಕೇ ಎಲ್ಲಿಗೂ ಹೋಗಬೇಡ ನಮ್ಮ ಮನೆಯಲ್ಲೇ ಊಟ ಮಾಡು'' ಎಂದು ಹೇಳಿದರು. ಅದಕ್ಕೆ ಆರಾಧ್ಯರು ಒಪ್ಪಿದರು. ಬೇರೆ ಬಡಹುಡುಗರಿಗೆ ಒಂದೊಂದು ದಿನ ವಾರಾನ್ನ ಸಿಗದೇ ಇರುವಾಗ, ನೀವು ಆ ಹುಡುಗರಿಗೂ ಊಟಹಾಕುವುದಾದರೆ ನಾನು ದಿನಾ ನಿಮ್ಮ ಮನೆಗೆ ಬರುತ್ತೇನೆ ಎಂದರು. ಹುಡುಗನ ಬುದ್ಧಿಯನ್ನು ಮೆಚ್ಚಿ ಸಾಹುಕಾರರು ಒಪ್ಪಿದರು. ತಾವು ಹಿಂದೆ ಹೋಗುತ್ತಿದ್ದ ಆ ನಾಲ್ಕು ಮನೆಗಳಿಗೆ ಓದುವ ಬಡಹುಡುಗರಿಗೆ ಭಿಕ್ಷಾಟನೆಮಾಡಲು ಬಿಟ್ಟುಕೊಟ್ಟರು.

ಇವರಿಂದ ಅವರಿಗೆ ಓದುವ ಬಡ ಹುಡುಗರನ್ನು ಕಂಡರೆ ಎಷ್ಟು ವಿಶ್ವಾಸ, ಕನಿಕರ ಇತ್ತು ಎಂಬುದು ತಿಳಿಯುತ್ತದೆ. ಅನಂತರ ಅವರು ವೇ|| ಬ್ರ|| ಶ್ರೀ ಸುಬ್ಬನರಸಿಂಹ ಶಾಸ್ತ್ರಿಗಳ ಶಿಷ್ಯರಾದರು. ಸರ್ಪಭೂಷಣಮಠ, ವೀರಭದ್ರಪ್ಪನವರ ಪಾಠಶಾಲೆಗಳಲ್ಲಿ ವೇದಾಭ್ಯಾಸ

ಮಾಡಿದರು. ಮುಂದಿನ ವಿದ್ಯಾಭ್ಯಾಸಕ್ಕಾಗಿ ವೇದ, ಸಂಸ್ಕೃತ ಪಾಠಶಾಲೆಯಲ್ಲಿ ಕಲಿಯಲು ಸಾಹುಕಾರರ ಅನುಮತಿ ಕೇಳಿ ಎಂದು ಸಂಗಡಿಗರು ಹೇಳಿದರು. ಅದಕ್ಕಾಗಿ ಒಂದು ದಿನ ಸಾಹುಕಾರರ ಮನೆಗೆ ಹೋದರು ಆರಾಧ್ಯರು "ಸಿದ್ಧರಾಮಣ್ಣನವರ ಮನೆಯಲ್ಲಿ ಊಟದ ವ್ಯವಸ್ಥೆಯಾಗಿದೆ. ಆದರೆ ವಸತಿಗೆ ಅನುಕೂಲವಿಲ್ಲ. ತಾವು ಅನುಮತಿ ಕೊಟ್ಟರೆ ಪಾಠಶಾಲೆಯ ವಿದ್ಯಾರ್ಥಿಗಳ ಜೊತೆ ನಾನು ಇರುತ್ತೇನೆ" ಎಂದರು. ಅದಕ್ಕೆ ಸಾಹುಕಾರರು ಒಪ್ಪಿ "ಓದು ನಿಲ್ಲಿಸದೆ ಚೆನ್ನಾಗಿ ಓದಿ ಮುಂದೆ ಬನ್ನಿ" ಎಂದರು. ಅಂದಿನಿಂದ ಆರಾಧ್ಯರು ಗೌಡರ ವೀರಭದ್ರಪ್ಪನವರ ವಸತಿಗೃಹದಲ್ಲಿ ಇದ್ದುಕೊಂಡು ವೇದ, ಸಂಸ್ಕೃತ ಪಾಠಶಾಲೆಯಲ್ಲಿ ವಿದ್ಯಾಭ್ಯಾಸ ಮುಂದುವರೆಸಿದರು. ಪರಂಪರೆಯಿಂದ ದಾಸೋಹ ಆಚರಿಸುತ್ತಿದ್ದ ಗೌಡರ ಮನೆತನ ಬೆಂಗಳೂರಿನಲ್ಲಿ ಬಹಳ ಪ್ರಸಿದ್ಧಿಯಾಗಿತ್ತು. ಗೌಡರ ಪತ್ನಿ ಕರಿಬಸಮ್ಮಣ್ಣಿಯವರು ಬಡವಿದ್ಯಾರ್ಥಿಗಳಿಗೆ ಪ್ರಸಾದ ನೀಡುತ್ತಿದುದಲ್ಲದೇ, ಅವರಲ್ಲಿ ಅರ್ಹರಾದವರಿಗೆ ಪುಸ್ತಕ, ಬಟ್ಟೆ, ಫೀಜು ಮುಂತಾದವುಗಳಿಗೆ ಹಣವನ್ನು ಕೊಡುತ್ತಿದ್ದರು. ಇಂತಹ ಮಹಾಮಾತೆ ಕೃಪಾಶೀರ್ವಾದ ಪ್ರಸಾದವಿನಿಯೋಗ ಆರಾಧ್ಯರಿಗೆ ದೊರಕಿತ್ತು. ಈ ಸಮಯದಲ್ಲೇ ನಾಡಿನಾದ್ಯಂತ ಹಿಂದಿಪ್ರಚಾರ ಚಳುವಳಿ ನಡೆದಿತ್ತು. ಮಹಾತ್ಮಾಗಾಂಧಿಯವರು ಅದಕ್ಕೆ ಮಹತ್ವ ಕೊಟ್ಟಿದ್ದರು. ಹಿಂದಿಯನ್ನು ಭಾರತದ ರಾಷ್ಟ್ರಭಾಷೆ ಮಾಡಬೇಕೆಂದು ಅಂದಿನ ರಾಷ್ಟ್ರನಾಯಕರ ಅಪೇಕ್ಷೆಯಾಗಿತ್ತು. ಸಿದ್ಧನಾಥ ಪಂತ್ ಎಂಬ ಉಪನ್ಯಾಸಕರು ಅದೇ ಶಾಲೆಯಲ್ಲಿ ಸಂಜೆ ಉಚಿತ ಹಿಂದಿ ತರಗತಿಗಳನ್ನು ಆರಂಭಿಸಿದ್ದರು. ಪಠ್ಯಪುಸ್ತಕಗಳನ್ನು ಅವರು ಉಚಿತವಾಗಿ ನೀಡಿದರು. ಈ ಸಮಯಕ್ಕೆ ಸರಿಯಾಗಿ ಮೈಸೂರಿನ ಶಿವರಾಂ ಪೇಟೆಯಲ್ಲಿ ಹಿಂದಿ ಶಿಕ್ಷಣ ಶಿಬಿರವನ್ನು ತೆರೆಯಲಾಯಿತು. ಹೊರಗಿನವರಿಗೆ ಉಚಿತ ಭೋಜನವಿದೆ. ಹಿಂದಿ ಕಲಿಯುವ ವಿದ್ಯಾರ್ಥಿಗಳು ಈ ಅವಕಾಶವನ್ನು ಉಪಯೋಗಿಸಿಕೊಳ್ಳಬಹುದು ಎಂದು ತಿಳಿಸಿದರು. ಈ ಅವಕಾಶವನ್ನು ಬೇರೆ ವಿದ್ಯಾರ್ಥಿಗಳ ಜೊತೆ ಆರಾಧ್ಯರೂ ಉಪಯೋಗಿಸಿಕೊಂಡರು.

ಹಿಂದಿಯನ್ನು ಕಲಿಯಲು ಮೈಸೂರಿಗೆ ಬಂದಾಗ ಉಳಿದುಕೊಳ್ಳಲು ಏನು ಮಾಡುವುದೆಂದು ಯೋಚಿಸಿ ಕಡೆಗೆ ಪಂಚಾಚಾರ್ಯ ಪ್ರಭ ಕಛೇರಿಗೆ ಹೋಗಿ ಲಿಂ|| ವೇ|| ಬ್ರಂ|| ಶ್ರೀ ಸಿರಸಿ ಗುರುಶಾಂತ ಶಾಸ್ತ್ರಿಗಳನ್ನು ಕಂಡು ಅವರ ಕಷ್ಟಗಳನ್ನು ಹೇಳಿಕೊಂಡಾಗ ಅವರು ವೀರಶೈವ ಅನಾಥಾಲಯ (ರಾಮಾನುಜ ರಸ್ತೆ)ದಲ್ಲಿ ಸ್ಥಳ ಕೊಡಿಸಿ ಅವರಿಗೆ ಪ್ರಸಾದಕ್ಕೆ ವಾರಕ್ಕೆ ಮೂರು ರೂಪಾಯಿಗಳನ್ನು ಶ್ರೀ ಕಾಶಿನಾಥ ಶಾಸ್ತ್ರಿಗಳಿಂದ ಮಂಜೂರು ಮಾಡಿಸಿದರು. ಈ ರೀತಿ ಆರಾಧ್ಯರ ಹಿಂದಿ ಶಿಕ್ಷಣ ಅಭಿವೃದ್ಧಿ ಹೊಂದಿತು. ಈ ಮಧ್ಯೆ ವೇದಪಾಠ ಜೊತೆಗೆ ಬೇರೆ ಕಡೆ ಸಂಸ್ಕೃತವನ್ನು ಅಭ್ಯಾಸಮಾಡಿ ೧೯೩೨ ರಲ್ಲಿ ಶ್ರೀಚಾಮರಾಜೇಂದ್ರ ಸಂಸ್ಕೃತ ಮಹಾಪಾಠಶಾಲೆ ಸೇರಿ ಕಾವ್ಯ ಪರೀಕ್ಷೆಯನ್ನು ಕಟ್ಟಿ, ಆ ಪರೀಕ್ಷೆಯಲ್ಲಿ ಪ್ರಥಮ ದರ್ಜೆಯಲ್ಲಿ ಪಾಸಾದರು. ಹಾಗೆಯೇ ವೇದ, ವೇದಾಂತ, ಜೈನ ಸಿದ್ಧಾಂತ, ತರ್ಕ, ವ್ಯಾಕರಣ, ಅಲಂಕಾರ,

ಆಗಮ, ಅದ್ವೈತ, ಶಕ್ತಿವಿಶಿಷ್ಟಾದ್ವೈತ ಮುಂತಾದ ವಿದ್ವತ್‌ಗಳಲ್ಲಿ ಪ್ರಬುದ್ಧರಾದರು. 1942 ರಲ್ಲಿ ಚಾಮರಾಜೇಂದ್ರ ಸಂಸ್ಕೃತ ಕಾಲೇಜಿನಲ್ಲಿ ಅಲಂಕಾರ ವಿಭಾಗದ ಅಧ್ಯಾಪಕರಾಗಿ ನೇಮಕರಾದರು. ಆಗ ಸಾಹುಕಾರರು ತಮ್ಮ ಛತ್ರದಲ್ಲಿಯೇ ಇರುವಂತೆ ಹೇಳಿ ಅವರಿಗೆ ಪಾಠಶಾಲೆಯ ಮೇಲ್ವಿಚಾರಣೆ ವಹಿಸಿದರು. ಅಲ್ಲಿ 10 ವರ್ಷಗಳ ಕಾಲ ಪಾಠಶಾಲೆಯ ಅಧ್ಯಾಪಕರಾಗಿ ತಮ್ಮ ಅಮೋಘವಾದ ಸೇವೆಸಲ್ಲಿಸಿದರು.

ಮೊದಲು ಬೆಂಗಳೂರಿನ ಶ್ರೀ ಚಾಮರಾಜೇಂದ್ರ ಸಂಸ್ಕೃತ ಕಾಲೇಜಿನಲ್ಲಿ ಓದಿ ಸಂಸ್ಕೃತ ವಿದ್ವಾಂಸರಾದರು. ಅನಂತರ ''ರಾಷ್ಟ್ರಭಾಷಾವಿಶಾರದ'' ಪರೀಕ್ಷೆಯನ್ನು ಮುಗಿಸಿದರು. ಗುರುಗಳಾದ ಶ್ರೀ ವಿಶ್ವನಾಥ ಶಾಸ್ತ್ರಿ ತರ್ಕ, ಅಲಂಕಾರ, ವಿದ್ವತ್ ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಮಹಾಪಾಠಶಾಲಾ ಸಿದ್ಧಗಂಗಾ ತುಮಕೂರು ಜಿಲ್ಲೆ, ಇವರಲ್ಲಿ ವಿದ್ಯೆಯನ್ನು ಕಲಿಯಲು ತುಮಕೂರಿನ ಸಿದ್ಧಗಂಗಾ ಹಾಸ್ಟಲ್‌ಸೇರಿ, ಅಲಂಕಾರಶಾಸ್ತ್ರ ವಿದ್ವಾನ್ ಮಧ್ಯಮ ಪರೀಕ್ಷೆಯನ್ನು ಕಟ್ಟಿ ಮೊದಲ ದರ್ಜೆಯಲ್ಲಿ ಪಾಸಾದರು. ನಂತರ ಬೆಂಗಳೂರಿನ ಮಹಂತಿನ ಮಠದ ಬಸವಣ್ಣನವರ ಆಶ್ರಯದಲ್ಲಿ ಇದ್ದುಕೊಂಡು ತಮ್ಮ ವಿದ್ಯಾಭ್ಯಾಸವನ್ನು ಮುಂದುವರೆಸಿದರು. ತಮ್ಮ ವಿದ್ಯಾಭ್ಯಾಸದ ಕಾಲದಲ್ಲಿಯೂ ಓದುವ ಮಕ್ಕಳನ್ನು ಕಂಡರೆ ಅವರಿಗೆ ತುಂಬಾ ಪ್ರೀತಿ. ಅವರಿಗೆ ಕೈಲಾದ ಸಹಾಯ ಮಾಡುತ್ತಿದ್ದರು. ಅಲಂಕಾರ ಶಾಸ್ತ್ರದಲ್ಲಿ ವಿದ್ವಾಂಸರಾದ ಮೇಲೆ ಮದ್ರಾಸ್ ವಿಶ್ವವಿದ್ಯಾನಿಲಯದ ಕನ್ನಡ ವಿದ್ವಾನ್ ಪರೀಕ್ಷೆಯನ್ನು ಸ್ವತಃ ಓದಿ ಪಾಸು ಮಾಡಿ ಕನ್ನಡ ವಿದ್ವಾಂಸರಾದರು. ಇವರು ಮೊದಲು ಶ್ರೀ ಚಾಮರಾಜೇಂದ್ರ ಸಂಸ್ಕೃತ ಕಾಲೇಜು, ಬೆಂಗಳೂರು ಇಲ್ಲಿ ೧೯೪೨ ರಲ್ಲಿ ಉಪಪ್ರಾಧ್ಯಾಪಕರಾಗಿ ನೇಮಕವಾದರು.

ಇಲ್ಲಿ ೧೯೫೨ರ ವರೆಗೆ ಸೇವೆ ಸಲ್ಲಿಸಿದರು. ಇಲ್ಲಿ ಕೆಲಸ ಮಾಡುತ್ತಿರುವಾಗಲೇ ''ವೀರಶೈವ ವಿದ್ಯಾರ್ಥಿಗಳಿಗೆ ಶಕ್ತಿವಿಶಿಷ್ಟಾದ್ವೈತ ವೇದಾಂತದ ತರಗತಿಯನ್ನು ಏಕೆ ತೆರೆಯಬಾರದು ?' ಎಂಬ ಯೋಚನೆ ಬಂತು. ಇದಕ್ಕಾಗಿ ಶಕ್ತಿವಿಶಿಷ್ಟಾದ್ವೈತ ವೇದಾಂತದ ಬಗ್ಗೆ ಸ್ವತಃ ತಾವೇ ಒಂದು ಪುಸ್ತಕವನ್ನು ಬರೆದರು. ಈ ತರಗತಿಯನ್ನು ತೆರೆಯಲು ಹೋರಾಟ ನಡೆಸಿದರು. ತರಗತಿಯನ್ನು ಪ್ರಾರಂಭಿಸಲು ಸರ್ಕಾರ ಅನುಮತಿ ನೀಡಿತು. ಈ ವಿಭಾಗಕ್ಕೆ ಪ್ರಪ್ರಥಮವಾಗಿ ಆಸ್ಥಾನ ಮಹಾ ವಿದ್ವಾನ್ ಪಂಡಿತರತ್ನಂ ಶಿರಸಿ ಗುರುಶಾಂತ ಶಾಸ್ತ್ರಿಗಳು ಪ್ರಾಧ್ಯಾಪಕರಾಗಿ ನೇಮಕಗೊಂಡರು. ಶಕ್ತಿವಿಶಿಷ್ಟಾದ್ವೈತ ಪರೀಕ್ಷೆಯನ್ನು ಇವರು ಪಾಸು ಮಾಡಿರಲಿಲ್ಲ. ಆದ್ದರಿಂದ ಇವರು ಪಾಠಮಾಡುವುದು, ಸರಿಯಿಲ್ಲವೆಂದು ಬೇರೆ ವಿದ್ವಾಂಸರು ಆರೋಪಿಸಿದರು. ಆಗ ಆರಾಧ್ಯರು ಶಕ್ತಿ ವಿಶಿಷ್ಟಾದ್ವೈತದ ಪರೀಕ್ಷೆ ಕಟ್ಟಿ ಸ್ವತಃ ಓದಿ ಆ ಪರೀಕ್ಷೆಯಲ್ಲಿ ಮೊದಲನೇ ರ್‍ಯಾಂಕ್ ಪಡೆದು ಶಕ್ತಿವಿಶಿಷ್ಟಾದ್ವೈತ ಬಗ್ಗೆ ಪಾಠ ಹೇಳುವ ಅರ್ಹತೆ ಪಡೆದರು. ಈ ರೀತಿ ಬೆಂಗಳೂರಿನ ಶ್ರೀ ಚಾಮರಾಜೇಂದ್ರ ಸಂಸ್ಕೃತ ಕಾಲೇಜಿನಲ್ಲಿ ಶಕ್ತಿ ವಿಶಿಷ್ಟಾದ್ವೈತ ವೇದಾಂತದ ತರಗತಿ ಪ್ರಾರಂಭವಾಯಿತು. ಬೆಂಗಳೂರಿನ ಸಂಸ್ಕೃತ ಕಾಲೇಜಿನಲ್ಲಿ ಸಾಹಿತ್ಯ, ಶಕ್ತಿವಿಶಿಷ್ಟಾದ್ವೈತ ವೇದಾಂತ ಮತ್ತು ವೀರಶೈವ ಆಗಮದ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದರು. ಇದರಿಂದ

ವೀರಶೈವ ವಿದ್ಯಾರ್ಥಿಗಳಿಗೆ ಈ ವಿಷಯಗಳನ್ನು ಕಲಿಯಲು ಸದವಕಾಶವಾಯಿತು. ಇಲ್ಲಿ ವಿದ್ಯಾರ್ಥಿಗಳಿಗೆ ಆರಾಧ್ಯರು ಧೈರ್ಯ, ಪ್ರೋತ್ಸಾಹಕೊಟ್ಟು ವಿದ್ಯೆ ಮುಂದುವರೆಸಲು ಅವಕಾಶ ಮಾಡಿಕೊಡುತ್ತಿದ್ದರು. ಆರ್ಥಿಕವಾಗಿ ಕಷ್ಟಪಡುವ ವಿದ್ಯಾರ್ಥಿಗಳಿಗೆ ತಮ್ಮ ಕೈಯಿಂದ ದುಡ್ಡನ್ನು ಕೊಟ್ಟು ಊಟಕ್ಕಾಗಿ ಬೇರೆ ಹಾಸ್ಟೆಲ್‌ಗಳಲ್ಲಿಯೂ ಅವಕಾಶ ಮಾಡಿಕೊಟ್ಟು ಅಲ್ಲಿ ಸ್ಥಳಸಿಗದಿದ್ದರೆ ತಮ್ಮ ಮನೆಯಲ್ಲಿಯೇ ಊಟಕ್ಕೆ ಏರ್ಪಡಿಸುತ್ತಿದ್ದರು. ಇದರಿಂದ ವಿದ್ಯಾರ್ಥಿಗಳಿಗೆ ಓದಲು ಸುಲಭವಾಗುತ್ತಿತ್ತು. ಅನಂತರ 1953 ರಲ್ಲಿ ಆರಾಧ್ಯರು ಬೆಂಗಳೂರಿನಿಂದ ಮೈಸೂರಿನ ಮಹಾರಾಜ ಸಂಸ್ಕೃತ ಕಾಲೇಜಿಗೆ ವೀರಶೈವ ಆಗಮ ಉಪಪ್ರಾಧ್ಯಾಪಕರಾಗಿ ನೇಮಕರಾಗಿ 1959 ರ ವರೆಗೆ ಸೇವೆ ಸಲ್ಲಿಸಿದರು. ಇಲ್ಲಿಯೂ "ವೀರಶೈವ ವಿದ್ಯಾರ್ಥಿಗಳಿಗೆ ಲಭ್ಯವಾಗದೆ ಶಕ್ತಿ ವಿಶಿಷ್ಟಾದ್ವೈತ ವೇದಾಂತದ ವರ್ಗವನ್ನು ಏಕೆ ತೆಗೆಯಬಾರದು"? ಎಂದು ಯೋಚಿಸಿ, ಅದಕ್ಕಾಗಿ ಹೋರಾಟ ನಡೆಸಿ ಕಡೆಗೆ ಆ ತರಗತಿಯನ್ನು ಪ್ರಾರಂಭಿಸುವುದರಲ್ಲಿ ಯಶಸ್ವಿಯಾದರು. ಇವರ ಈ ಅಪಾರವಾದ ಪಾಂಡಿತ್ಯವನ್ನು ಕಂಡು ಸಂಸ್ಕೃತ ವಿದ್ಯಾ ಇಲಾಖೆಯು ಇವರನ್ನು ವೀರಶೈವ ಆಗಮದ ಪ್ರಾಧ್ಯಾಪಕರಾಗಿ 1959 ರಲ್ಲಿ ನೇಮಕಮಾಡಿತು.

1965 ರವರೆಗೂ ಅಲ್ಲಿ ಸೇವೆಯಲ್ಲಿದ್ದರು. ಶಕ್ತಿವಿಶಿಷ್ಟಾದ್ವೈತ ವೇದಾಂತದ ಪ್ರಾಧ್ಯಾಪಕರಾಗಿ, ೧೯೬೫ರಲ್ಲಿ ನೇಮಕವಾಗಿ ೧೯೭೫ರ ವರೆಗೂ ಮೈಸೂರಿನ ಸಂಸ್ಕೃತ ಕಾಲೇಜಿನಲ್ಲಿ ತಮ್ಮ ಸೇವೆಯನ್ನು ಸಲ್ಲಿಸಿದರು. ಮೈಸೂರಿನ ಕಾಲೇಜಿನಲ್ಲಿಯೂ ಓದುವ ವಿದ್ಯಾರ್ಥಿಗಳಿಗೆ ಹಾಗೂ ಆರ್ಥಿಕವಾಗಿ ತೊಂದರೆ ಇರುವ ವಿದ್ಯಾರ್ಥಿಗಳಿಗೆ ಹಣದ ಹಾಗೂ ಊಟದ ಸೌಲಭ್ಯವನ್ನು ಒದಗಿಸುತ್ತಿದ್ದರು. ಈ ರೀತಿ ಸಾವಿರಾರು ವಿದ್ಯಾರ್ಥಿಗಳಿಗೆ ಅನ್ನದಾನ, ವಿದ್ಯಾದಾನ ಮಾಡಿದ ಶ್ರೇಯಸ್ಸು ಆರಾಧ್ಯರಿಗೆ ಸಲ್ಲುತ್ತದೆ.

ಆರಾಧ್ಯರು ಮೈಸೂರಿನ ಮಹಾರಾಜ ಸಂಸ್ಕೃತ ಕಾಲೇಜಿನಲ್ಲಿ ಆಗಮದ ಹಾಗೂ ಶಕ್ತಿ ವಿಶಿಷ್ಟಾದ್ವೈತದ ಪ್ರಾಧ್ಯಾಪಕರಾಗಿರುವಾಗಲೇ, ಸುತ್ತೂರಿನ ಶ್ರೀಶಿವರಾತ್ರಿರಾಜೇಂದ್ರ ಮಹಾಸ್ವಾಮಿಗಳು ಸಂಸ್ಕೃತ ಅಧ್ಯಯನ ಮಾಡುತ್ತಿದ್ದರು. ಆಗ ಅವರು ವಿದ್ಯೆಯನ್ನು ಕಲಿಯಲು ಬರುವ ವೀರಶೈವ ವಿದ್ಯಾರ್ಥಿಗಳಿಗೆ ಅವರ ಆರ್ಥಿಕ ತೊಂದರೆಯನ್ನು ಕಂಡು ಅವರಿಗೆ "ಊಟದ ವ್ಯವಸ್ಥೆಗಾಗಿ ಒಂದು ಹಾಸ್ಟೆಲ್ ಅನ್ನು ಹಾಗೂ ವಿದ್ಯಾಶಾಲೆಯನ್ನು ಏಕೆ ತೆರೆಯಬಾರದು ?' ಎಂಬ ಯೋಚನೆ ಬಂದಿತು. ಈ ವಿಚಾರವನ್ನು ಆರಾಧ್ಯರಲ್ಲಿ ಚರ್ಚಿಸಿ ಅವರನ್ನು ಸಹಕರಿಸುವಂತೆ ಕೇಳಿದರು. ಅದಕ್ಕೆ ಆರಾಧ್ಯರು ತುಂಬು ಹೃದಯದ ಸಹಕಾರ ನೀಡಿ ಕಡಿಮೆ ವಿದ್ಯಾರ್ಥಿಗಳನ್ನು ಸೇರಿಸಿಕೊಂಡು ಒಂದು ಹಾಸ್ಟೆಲ್ ತೆಗೆಯಬಹುದೆಂದು ಭರವಸೆ ನೀಡಿದರು. ಅದರಂತೆ ಸುತ್ತೂರು ಸ್ವಾಮಿಗಳು ಮೊದಲು ಒಂದು ಚಿಕ್ಕದಾದ ಹಾಸ್ಟೆಲ್ ತೆರೆದರು. ಇದರಿಂದ ವೀರಶೈವ ವಿದ್ಯಾರ್ಥಿಗಳಿಗೆ ಓದು ಮುಂದುವರೆಸುವುದಕ್ಕೆ ಅನುಕೂಲವಾಯಿತು. ಕೆಲವು ಕಾಲ ಕಳೆದ ಮೇಲೆ ಸುತ್ತೂರು ಸ್ವಾಮಿಗಳು ತಮ್ಮ

ಮಹದಭಿಲಾಷೆಯಾದ ವಿದ್ಯಾಶಾಲೆಯನ್ನು ನಡೆಸಲು ಪಣ ತೊಟ್ಟು ಮಹಾರಾಜರಾಗಿದ್ದ ಶ್ರೀಮಾನ್ ಜಯಚಾಮರಾಜೇಂದ್ರ ಒಡೆಯರ್‌ರವರಿಗೆ ಸೇರಿದ ಆನೆಯ ಕರೋಟಿಯನ್ನು ಖರೀದಿಸಿದರು. ಈ ಕಾರ್ಯದಲ್ಲಿ ಆರಾಧ್ಯರ ಸಲಹೆಯೂ ಪ್ರೋತ್ಸಾಹವೂ ಶ್ರೀಗಳಿಗೆ ಉತ್ತೇಜನವಾಯಿತು. ಈ ಶಾಲೆಗೆ ''ಜಗದ್ಗುರು ಸುತ್ತೂರು ಶಿವರಾತ್ರೀಶ್ವರ ರಾಜೇಂದ್ರ ವಿದ್ಯಾ ಶಾಲೆ'' ಎಂಬ ಹೆಸರನ್ನು ಇಡಬೇಕೆಂದು ಬೇರೆಯವರು ಸೂಚಿಸಲು, ಅದಕ್ಕೆ ಆರಾಧ್ಯರು ವಿರೋಧಿಸಿ ಹಾಗೆ ಬೇಡ ''ಜಗದ್ಗುರು ಶಿವರಾತ್ರೀಶ್ವರ ಮಹಾವಿದ್ಯಾ ಪೀಠ'' ಎಂದೇ ಹೆಸರನ್ನು ಇಡಿಸಿದರು. ಅಂದು ಆರಾಧ್ಯರು ಸೂಚಿಸಿದ ಮಹಾ ವಿದ್ಯಾಪೀಠವೆಂಬ ಹೆಸರು ಶಾಶ್ವತವಾಗಿ ನಿಂತಿದೆ. ಇಂದಿನವರೆಗೂ ಬೃಹದಾಕಾರವಾಗಿ ಬೆಳೆದು ನಾಡಿನಾದ್ಯಂತ ಸುಪ್ರಸಿದ್ಧವಾಗಿದೆ. ಇದೇ ರೀತಿ ನಿಡುಮಾಮಿಡಿ ಶ್ರೀ ಶೈಲ ಸಂಸ್ಥಾನ ವಿದ್ಯಾಶಾಲೆ ಸಾಹಿತ್ಯ ಕ್ಷೇತ್ರ ಮುಂದುವರೆಯಲು ಬಹಳವಾಗಿ ಆರಾಧ್ಯರೇ ಕಾರಣವಾಗಿದ್ದರು.

ಆರಾಧ್ಯರ ಕಾವ್ಯನಾಮ ''ಅಮರವಾಣಿ''. ಇವರು ಸಾಹಿತ್ಯ ಕ್ಷೇತ್ರದಲ್ಲಿ ತಮ್ಮ ಈ ಅಮರವಾಣಿಯಿಂದ ಕನ್ನಡದ ಅಮರವಾಣಿಯನ್ನು ಜನತೆಗೆ ಸಾರುತ್ತಿದ್ದರು. ಆರಾಧ್ಯರು ಬರಿಯ ಸಂಸ್ಕೃತವಲ್ಲದೆ. ಕನ್ನಡ, ಹಿಂದಿ, ತೆಲುಗು, ಆಂಗ್ಲಭಾಷೆಗಳಲ್ಲಿ ಅಪಾರವಾದ ಪಾಂಡಿತ್ಯವನ್ನು ಗಳಿಸಿದ್ದರು. ನಾಟಕ, ಪ್ರಬಂಧ, ವಿಮರ್ಶೆ, ಕಾದಂಬರಿ, ಜೀವನ ಚರಿತ್ರೆ, ಭಾಷಾ ರಚನೆ, ಕಾವ್ಯ, ವೈದಿಕ ವಾಙ್ಮಯ, ಸಿದ್ಧಾಂತ ಗ್ರಂಥ, ಗ್ರಂಥಸಂಪಾದನೆ, ಅನುವಾದ, ಸಂಶೋಧನೆ ಈ ರೀತಿ ನಾನಾ ಪ್ರಕಾರಗಳಲ್ಲಿ ಸಾಹಿತ್ಯ ರಚನೆ ಮಾಡಿ ಕೃತಿಗಳನ್ನು ರಚಿಸಿದ್ದಾರೆ. ಭರತ ಖಂಡದ ಖ್ಯಾತಿವೆತ್ತ ಅನೇಕ ವಿದ್ವಾಂಸರ ಪ್ರಶಂಸೆಗೆ ಪಾತ್ರರಾಗಿದ್ದಾರೆ. ಬಹುಮುಖಪ್ರತಿಭೆಯಿಂದ ಶೋಭಿಸುತ್ತಿರುವ ಸಮಾಜದ ಗಣ್ಯವ್ಯಕ್ತಿಗಳು ಆಗಿದ್ದಾರೆ ನಂಜುಂಡಾರಾಧ್ಯರು. ಇವರಿಂದ ಕನ್ನಡ ಮತ್ತು ಸಂಸ್ಕೃತ ಸಾಹಿತ್ಯ ಮಹೋನ್ನತವಾಗಿ ಬೆಳೆದಿರುವುದರಲ್ಲಿ ಸಂಶಯವಿಲ್ಲ. ಅವರ ಸಂಶೋಧನ ಗ್ರಂಥಗಳಲ್ಲಿ ಶಕ್ತಿ ವಿಶಿಷ್ಟಾದ್ವೈತ, ವೇದಾಂತ, ವೀರಶೈವಾ ಆಗಮ, ಅಲಂಕಾರಶಾಸ್ತ್ರ, ಕೈಲಾಸವಾಸಿ, ಅಭಿನವ ಕಾಳಿದಾಸ ಬಸವಪ್ಪ ಶಾಸ್ತ್ರಿಯವರ ಜೀವನ ಚರಿತ್ರೆ ಬಹಳ ಪ್ರಸಿದ್ಧಿಹೊಂದಿದವು.

ಆರಾಧ್ಯರು ತಾವು ಅನುಭವಿಸಿದ ಸಂಸ್ಕೃತ ಕಾವ್ಯದ ಸವಿಯನ್ನು ಕನ್ನಡಿಗರಿಗೂ ಪರಿಚಯ ಮಾಡಿಸುವುದಕ್ಕಾಗಿ, ಅನೇಕ ಭಾಗಗಳನ್ನು ಪುಸ್ತಕ ರೂಪದಲ್ಲೂ, ಮಾಸಪತ್ರಿಕೆಗಳಲ್ಲೂ ಭಾಷಾಂತರ ಭಾವಾನುವಾದಗಳನ್ನು ಮಾಡಿದ್ದಾರೆ. ಇದಕ್ಕಾಗಿ ಕನ್ನಡಿಗರು ಇವರಿಗೆ ಋಣಿಗಳಾಗಿದ್ದಾರೆ. ಕಾಳಿದಾಸನ ರಘುವಂಶ, ಕುಮಾರಸಂಭವ ಕಾವ್ಯಗಳನ್ನು ಭಾಷಾಂತರಿಸಿದ್ದಾರೆ. ಆರಾಧ್ಯರು ಬರೆದಿರುವ 'ವೀರಶೈವ ಪೂರ್ವಪ್ರಯೋಗ ರತ್ನಂ' ಮತ್ತು 'ವೀರಶೈವಾಗಮ ಪ್ರಯೋಗರತ್ನಂ' ಎಂಬ ಈ ಗ್ರಂಥಗಳು ಸರ್ವೋಪಕಾರಕವಾಗಿವೆ. ಆಗಮಕ್ಕನುಸಾರವಾಗಿ ರೂಢಿಯಲ್ಲಿರುವ ಆಗಮಪ್ರಯೋಗವನ್ನೂ ಕ್ರಿಯಾಸಾರಾದಿ ಗ್ರಂಥಗಳ

ನಿರೂಪಣೆಗನುಸಾರವಾಗಿ ಸಮಗ್ರವಾಗಿ ಸಂಪಾದಿಸಿ ಮಹೋಪಕಾರ ಮಾಡಿದ್ದಾರೆ. ಈಗಾಗಲೇ ಈ ಪುಸ್ತಕಗಳು ಸರ್ವೋಪಕಾರಕವಾಗಿ ಜನಮನ್ನಣೆಯನ್ನು ಪಡೆದಿವೆ.

ಆದ್ದರಿಂದ ಈ ಪುಸ್ತಕ ಅತ್ಯಂತ ಮಹತ್ವ ಪೂರ್ಣವಾದುದ್ದಾಗಿದೆ. ಈ ಎರಡು ಕೃತಿರತ್ನಗಳು ವೀರಶೈವ ಸಂಪ್ರದಾಯದ ಆಗಮಪ್ರಯೋಗಗಳನ್ನೆಲ್ಲಾ ಸಮಗ್ರವಾಗಿ ನಿರೂಪಿಸುವುದರಿಂದ ಸಮಾಜಕ್ಕೆ ಮಹೋಪಕಾರಮಾಡಿದೆ. ವೀರಶೈವ ಆಗಮಪುಸ್ತಕವನ್ನು ಸಂಸ್ಕೃತ ಪಾಠಶಾಲೆಯ ವೀರಶೈವ ಆಗಮ ತರಗತಿಗಳಿಗೆ ಪಠ್ಯಪುಸ್ತಕವನ್ನಾಗಿ ಮಾಡಿದ್ದಾರೆ. ಇದರಿಂದಲೇ ಆರಾಧ್ಯರು ವೀರಶೈವ ಆಗಮದಲ್ಲಿ ವೇದಾಂತ ಶಾಸ್ತ್ರದಲ್ಲಿ ಅಪಾರವಾದ ಅನುಭವವುಳ್ಳವರಾಗಿದ್ದರು ಎಂದು ತಿಳಿಯುತ್ತದೆ. ಅವರ ಅತ್ಯಂತ ಶ್ರದ್ಧೆ ಪರಿಶ್ರಮದ ಫಲವಾಗಿ ಸಮಾಜದ ಮಾರ್ಗದರ್ಶನಕ್ಕಾಗಿ, ಪ್ರಯೋಜನಕ್ಕಾಗಿ ಇಂತಹ ಕೃತಿಗಳು ಮೂಡಿ ಬಂದು ಸುಪ್ರಸಿದ್ಧವಾಗಿವೆ. ಆರಾಧ್ಯರು ವೀರಶೈವ ಸಂಪ್ರದಾಯವೇತ್ತರು. ಸ್ವತಃ ಸಂಪ್ರದಾಯ ನಿಷ್ಠರು. ವೈದಿಕ ಸಂಪ್ರದಾಯದ ಹಿನ್ನೆಲೆಯಲ್ಲಿ ಬೆಳೆದುಬಂದ ಶೈವ, ವೈಷ್ಣವ, ಶಾಕ್ತ ಇತ್ಯಾದಿ ಧರ್ಮಗಳ ಕೂಲಂಕಷ ಪರಿಚಯ ಹೊಂದಿರುವ ವಿದ್ವಾಂಸರು. ಅಷೇಯವಾಗಿ ಬಂದ ಎಲ್ಲಾ ಧರ್ಮಸಂಪ್ರದಾಯಗಳ ಬಗ್ಗೆ ಗೌರವಭಾವವನ್ನು ತಳೆದಿದ್ದ ಸಹೃದಯರು ಸುಸಂಸ್ಕೃತರು. ಆದುದರಿಂದ "ವೈದಿಕ ಷಟ್‌ಸ್ಥಲಲಿಂಗ ಪೂಜಾವಿಧಿ" ಎಂಬ ಕನ್ನಡ ಗ್ರಂಥವನ್ನು ಬರೆದಿದ್ದಾರೆ.

ಆರಾಧ್ಯರ ಇನ್ನೊಂದು ಗ್ರಂಥ 'ಶಿವಾಗಮ ಸೌರಭ'. ಇದು ಕನ್ನಡ ಭಾಷೆಯಲ್ಲಿ ಪ್ರಕಟವಾಗಿರುವ ಶೈವ ಮತ್ತು ವೀರಶೈವ ಆಗಮಗಳ ಪರಿಚಯಾತ್ಮಕವಾದ ಸಂಪಾದಿತ ಗ್ರಂಥ. ವೀರಶೈವ ಮತವು ಅನಾದಿ ಎಂದು ಹೇಳುವುದಕ್ಕಿಂತ ಸಾಧ್ಯವಾದಷ್ಟು ಮಾಹಿತಿಗಳನ್ನು ನೀಡಿ ಸಮರ್ಥಿಸುವುದು ಒಳ್ಳೆಯದು. ಅಂತಹ ಮಾಹಿತಿಗಳು ಈ ಶಿವಾಗಮ ಸೌರಭದಲ್ಲಿ ಇವೆ. ಆರಾಧ್ಯರ ಇನ್ನೊಂದು ಮೇರುಕೃತಿ ಎಂದರೆ 'ಶ್ರೀಕರ ಭಾಷ್ಯ'. ಇದರಲ್ಲಿ ಆರಾಧ್ಯರ ಪಾಂಡಿತ್ಯ, ಪ್ರತಿಭೆ, ತತ್ತ್ವನಿಷ್ಠೆ, ತರ್ಕಬದ್ಧ ವಿಚಾರ ಸರಣಿಗಳು ಮೂಡಿಬಂದಿವೆ. ಅವರ ಜ್ಞಾನ ಮತ್ತು ಪ್ರತಿಭೆಗಳು ಇಲ್ಲಿ ಪ್ರದರ್ಶಿತವಾಲಿಗಿವೆ. ಇದು ಕೇವಲ ವೀರಶೈವ ಮತವನ್ನು ತಿಳಿಯ ಬಯಸುವವರಿಗೆ ಮಾತ್ರವಲ್ಲದೆ. ಇತರ ತತ್ತ್ವವಿವೇಚಕರಿಗೂ ಶೈವಮತವನ್ನು ಅರಿಯುವಲ್ಲಿ ನೆರವಾಗುತ್ತದೆ. ಶೈವದರ್ಶನ ಸುಧಾಕರ ಶ್ರೀ ಎಚ್. ಗಂಗಾಧರನ್ ಹೇಳುವಂತೆ "ಶ್ರೀಕರ ಭಾಷ್ಯ ಡಾಕ್ಟರೇಟ್ ಪದವಿ ಪಡೆಯಲು ಅರ್ಹವಾದ ಪ್ರಬಂಧ". ಈ ಗ್ರಂಥವು ಭಾರತೀಯ ಸಂಸ್ಕೃತಿಗೆ ಆರಾಧ್ಯರ ಕೊಡುಗೆಯಾಗಿದೆ. ಇವರ ಅಪಾರವಾದ ವಿದ್ವತ್ತನ್ನು ಕಂಡು ಆಳಿದ ಮಹಾಸ್ವಾಮಿಯವರಾದ ಶ್ರೀಮಾನ್ ಮಹಾರಾಜರವರು ಅವರನ್ನು ಆಸ್ಥಾನ ವಿದ್ವಾಂಸರನ್ನಾಗಿ ನೇಮಿಸಿದ್ದರು.

ಹುಬ್ಬಳ್ಳಿಯ ಮೂರುಸಾವಿರ ಮಠದ ಸ್ವಾಮಿಗಳು ಇವರ ಅದ್ಭುತ ಪಾಂಡಿತ್ಯವನ್ನು ನೋಡಿ ಇವರಿಗೆ "ವಿದ್ಯಾವಾರಿಧಿ" ಎಂಬ ಬಿರುದನ್ನು ನೀಡಿ ಗೌರವಿಸಿದ್ದಾರೆ. ಶ್ರೀ ಪಂಡಿತಾರಾಧ್ಯ ವಂಶವರ್ಧನರಾದ ಆಸ್ಥಾನ ವಿದ್ವಾನ್ ಶಿವಾದ್ವೈತ ವಿದ್ಯಾಭೂಷಣ ಶಿವ ಶ್ರೀ ಎಂ. ಜಿ. ನಂಜುಂಡಾರಾಧ್ಯರಿಗೆ ವೀರಶೈವ ಮತಾನುಯಾಯಿಗಳಾದ ವಿದ್ವಾಂಸರೇ ಅಲ್ಲದೆ ಚರಿತ್ರೆ ಪರಿಶೋಧಕರು ಶೈವಸಾಹಿತ್ಯವೇತ್ತರು ತಮ್ಮ ಕೃತಜ್ಞತೆ ತೋರಬೇಕಾಗಿದೆ.

ಶ್ರುತಿ ಸ್ಮೃತಿ ಪುರಾಣೇತಿಹಾಸ ಪ್ರಾಮಾಣ್ಯವುಳ್ಳ ವೀರಶೈವ ಮತವನ್ನು ಕುರಿತು ಇಂದು ಆಂಧ್ರ, ಕರ್ನಾಟಕ ದೇಶಗಳಲ್ಲಿ ಸಾಧಿಕಾರವಾಗಿ ಪ್ರವಚನವನ್ನು ಮಾಡಬಲ್ಲವರಾಗಿದ್ದರು ಶ್ರೀ ನಂಜುಂಡಾರಾಧ್ಯರೊಬ್ಬರೇ ಎಂಬುದು ಅತಿಶಯೋಕ್ತಿಯಲ್ಲ. ಬೆಂಗಳೂರು ಕನ್ನಡ ಸಾಹಿತ್ಯ ಪರಿಷತ್ತಿನ 'ಕನ್ನಡ ನುಡಿ' ಎಂಬ ವಾರಪತ್ರಿಕೆಯ ಸಂಪಾದಕರಾಗಿ ಸದಾ ಸೇವೆ ಸಲ್ಲಿಸಿದ್ದಾರೆ. ೧೯೬೫ ನೇ ದಸರ ಮಹೋತ್ಸವದಲ್ಲಿ ನಡೆದ ಕವಿಸಮ್ಮೇಳನದಲ್ಲಿ ಭಾಗವಹಿಸಿದ್ದರು. ಉಜ್ಜಯಿನಿಯಲ್ಲಿ ನಡೆದ ಸಂಸ್ಕೃತ ಚರ್ಚಾಸ್ಪರ್ಧೆಯಲ್ಲಿ, ಕಾಳಿದಾಸ ಸಮಾರೋಪದಲ್ಲಿ ವಾರಣಾಸಿಯಲ್ಲಿ ನಡೆದ ಸಂಸ್ಕೃತ ಸ್ಪರ್ಧೆಯಲ್ಲಿ, ನಾಗಪುರದಲ್ಲಿ ನಡೆದ ವಿಶ್ವಹಿಂದೂ ಪರಿಷತ್ತಿನಲ್ಲಿ, ದೆಹಲಿಯಲ್ಲಿ ನಡೆದ ರಾಷ್ಟ್ರೀಯ ಪ್ರಶಸ್ತಿ ಸಮಾರಂಭದಲ್ಲಿ, ಕಾಶ್ಮೀರದಲ್ಲಿ ನಡೆದ ಕಾಶ್ಮೀರ ಶೈವದ ವಿಚಾರ ಸಂಕೀರ್ಣದಲ್ಲಿ ಭಾಗವಹಿಸಿದ್ದರು. ಮೈಸೂರು ಆಕಾಶವಾಣಿಯಲ್ಲಿ ಇವರ ಸುಭಾಷಿತ ಅಥವಾ ಚಿನ್ನುಡಿಗಳು ಪ್ರಸಾರವಾಗುತ್ತಿದ್ದವು. ಆರಾಧ್ಯರಿಗೆ ಬಂದ ಗೌರವಾದರಗಳು ಅನೇಕ. ಮೈಸೂರು ಅರಮನೆಯಿಂದ ಆಸ್ಥಾನ ವಿದ್ವಾನ್, ರಂಭಾಪುರಿ ಜಗದ್ಗುರುಗಳಿಂದ ಶಿವಾದ್ವೈತ ಭೂಷಣ, ನಿಡುಮಾಮಿಡಿ ಜಗದ್ಗುರುಗಳಿಂದ ಚಿನ್ನದ ಪದಕ, ಜಗದ್ಗುರು ಶ್ರೀ ಸುತ್ತೂರು ಸ್ವಾಮಿಗಳಿಂದ ಸಾಹಿತ್ಯ ರತ್ನ, ರೇಣುಕ ಸೇವಾ ಸಮಿತಿ ಮೈಸೂರು ಇವರಿಂದ ವ್ಯಾಖ್ಯಾನ ವಿಚಕ್ಷಣ, ಗುರು ಪ್ರಜೆಗಳಿಂದ ಬಿನ್ನವತ್ತಳೆ, ಮೈಸೂರು ದಸರ ಸಂಸ್ಕೃತಿ ಸಮಾರಂಭ ಸಮಿತಿಯವರಿಂದ ಪ್ರಶಸ್ತಿ ಪತ್ರಿಕೆ, ಮಾತೃಸೇವಾ ಸಮಿತಿ ಮೈಸೂರು ಇವರಿಂದ ಸಾಹಿತ್ಯ ವಿಶಾರದಾ, ಚಿತ್ರದುರ್ಗದ ಜಗದ್ಗುರುಗಳಿಂದ ಶಿವತತ್ತ್ವ ಚಿಂತಾರತ್ನ. ಭಾರತ ಸರ್ಕಾರದಿಂದ ಶಿಕ್ಷಕರ ರಾಷ್ಟ್ರ ಪ್ರಶಸ್ತಿ, ಗಿರಿಯಾಪುರದ ಶಿವಾದ್ವೈತ ಸಮ್ಮೇಳನದಲ್ಲಿ ತಿರುಳ ಕನ್ನಡ ತಿಂಗಳ, ಧಾರವಾಡದ ಮುರುಘಾ ಮಠದಿಂದ ಸುವರ್ಣ ಪದಕ ಕರ್ನಾಟಕ ಸರ್ಕಾರದಿಂದ ರಾಜ್ಯ ಪ್ರಶಸ್ತಿ, ಅಖಿಲ ಭಾರತ ವೀರಶೈವ ಮಹಾಸಭಾದಿಂದ ಪ್ರಶಸ್ತಿ ಪತ್ರ, ಬೆಂಗಳೂರು ರಾಷ್ಟ್ರಪರಿಷತ್ತಿನಿಂದ ಕೃತಜ್ಞತಾ ಪತ್ರ ಮೈಸೂರು ಕನ್ನಡ ಕ್ರಾಂತಿದಳದಿಂದ ಪ್ರಶಸ್ತಿ ಪತ್ರ. ಹುಬ್ಬಳ್ಳಿ ಮೂರು ಸಾವಿರ ಮಠದಿಂದ ವಿದ್ಯಾವಾರಿಧಿ ಎಂಬ ಪ್ರಶಸ್ತಿ ಮೇಲಿನ ಎಲ್ಲಾ ಪ್ರಶಸ್ತಿಗಳು ಆರಾಧ್ಯರ ಅಪಾರ ವಿದ್ವತ್ತಿಗೆ ಶೋಭಾಯಮಾನವಾಗಿದೆ.

ಆರಾಧ್ಯರು ಸಂಸ್ಕೃತ ಮತ್ತು ಕನ್ನಡದ ಉತ್ತಮ ಗ್ರಂಥಗಳನ್ನು ಪ್ರಕಟಿಸಿ, ನೂರಾರು ಲೇಖನ, ಭಾಷಣ, ಪ್ರವಚನ ಮೂಲಕ ನಾಡು ನುಡಿಗಳಿಗೆ ಮುಖ್ಯವಾಗಿ ಭಾರತೀಯ

ಸಂಸ್ಕೃತಿಗೆ ಅಪಾರ ಸೇವೆ ಸಲ್ಲಿಸಿ ವಿದ್ವತ್ ಪ್ರಪಂಚದಲ್ಲಿ ಹೆಸರುವಾಸಿಯಾಗಿ ಕಣ್ಮರೆಯಾಗಿದ್ದಾರೆ. ಈ ಸಾರಸ್ವತ ಸೇವೆಯು ಸ್ಮರಣೆ ಶಾಶ್ವತವಾಗಿ ಉಳಿಯುವಂತೆ ಒಂದು ಸಂಸ್ಮರಣ ಗ್ರಂಥವನ್ನು ಸಂಪಾದಿಸಿ ಪ್ರಕಟಿಸುವ ಯೋಜನೆಯನ್ನು ಹಮ್ಮಿಕೊಂಡಿರುವುದು ಹೆಮ್ಮೆಯ ವಿಷಯ. ಈ ಗ್ರಂಥಕ್ಕೆ ಆರಾಧ್ಯರ ಬಗ್ಗೆ ಒಂದು ಲೇಖನವನ್ನು ಬರೆದು ಕೊಡುವ ಭಾಗ್ಯ ನನಗೆ ಲಭಿಸಿದ್ದಕ್ಕಾಗಿ ನಾನು ಅತ್ಯಂತ ಚಿರಋಣಿಯಾಗಿದ್ದೇನೆ.

ಈ ಸಂಸ್ಮರಣ ಗ್ರಂಥ ಮಾರಾಟದಿಂದ ಬರುವ ಹಣದಿಂದ ಶ್ರೀಯುತರ ಹೆಸರಿನಲ್ಲಿ ಶಾಶ್ವತ ನಿಧಿಯನ್ನು ಇಟ್ಟು ಅದರಿಂದ ಉಪಯುಕ್ತ ಕಾರ್ಯಕ್ರಮಗಳನ್ನು ಮಾಡಬೇಕೆಂಬುದು ನನ್ನ ಆಸೆ. ಪ್ರತಿಭಾವಂತ ವಿದ್ಯಾರ್ಥಿಗಳಿಗೂ, ಬಡವಿದ್ಯಾರ್ಥಿಗಳಿಗೂ ಧನಸಹಾಯ ಮಾಡಬೇಕೆಂಬುದು ಅವರ ಹೆಬ್ಬಯಕೆಯಾಗಿತ್ತು. ಆದರೆ ಅಂತಹ ಒಂದು ಸದವಕಾಶ ಅವರು ಬದುಕಿರುವವರೆಗೂ ಕೈಗೂಡಲಿಲ್ಲ. ಆದರೆ ಅವರ ಮರಣಾಂತರ ಶ್ರೀಯುತರ ಹೆಸರಿನಲ್ಲಿ ಶಾಶ್ವತ ನಿಧಿಯನ್ನು ಇಡುವ ಸುಯೋಗ ಒದಗಿದೆ. ಈ ನಿಧಿಗೆ ಅಪಾರ ಶಿಷ್ಯವರ್ಗದವರು, ಅವರ ಕುಟುಂಬ ವರ್ಗದವರು, ಸ್ನೇಹಿತರು, ವಿದ್ವಾಂಸರು, ಮಠಾಧಿಪತಿಗಳು, ಸಂಘ ಸಂಸ್ಥೆಗಳು ಆರ್ಥಿಕ ಸಹಾಯ ಮಾಡಿದರೆ ಈ ದತ್ತಿ ದೊಡ್ಡದಾಗಿ ಬೆಳೆದು ಅದರಿಂದ ಬರುವ ಹಣದಿಂದ ಅನೇಕ ಉಪಯುಕ್ತ ಕೆಲಸಗಳ ಜೊತೆ, ವಿದ್ಯಾರ್ಥಿವೇತನವನ್ನು ಕೊಡುವ ಹಾಗೆ ಮಾಡಿದರೆ ಅವರ ಆಸೆ ಪೂರೈಸಿ ಅವರ ಆತ್ಮಕ್ಕೆ ಶಾಂತಿಯಾಗುವುದರಲ್ಲಿ ಸಂದೇಹವಿಲ್ಲ. ಮತ್ತು ಪ್ರಕಟವಾಗದೇ ಇರುವ ಶ್ರೀಯುತರ ಕೃತಿಗಳೆಲ್ಲ ಪ್ರಕಟವಾಗಬೇಕು. ಕವಿಯ ಶತಮಾನೋತ್ಸವ ನಡೆಸಬೇಕು. ಹಾಗೆಮಾಡಿದರೆ ಮಾತ್ರ ಅವರ ಸಾಹಿತ್ಯ ಸೇವೆಯೂ ಶಾಶ್ವತವಾಗಿ ಉಳಿಯುತ್ತದೆ.

# ಪ್ರೇರಣ ಶಕ್ತಿ ಆರಾಧ್ಯರು

**ಜಿ. ಚನ್ನವೀರಸ್ವಾಮಿ**

---

೧೯೪೦ನೇ ಮೇ ತಿಂಗಳ ೧೫ನೇ ತಾರೀಖು ನಮ್ಮ ತಂದೆಯವರ ಕೈಯಲ್ಲಿ 'ತಾಯಿನಾಡು' ದಿನಪತ್ರಿಕೆ ಇತ್ತು. ಅವರು ಅದರಲ್ಲಿ ಪ್ರಕಟವಾಗಿದ್ದ ಸುದ್ದಿಯನ್ನು ಪದೇ ಪದೇ ಓದುತ್ತಿದ್ದರು. ಅವರ ನೋಟ ನನ್ನ ಬರುವಿಕೆಯನ್ನು ನಿರೀಕ್ಷಿಸಿದಂತೆ ಇತ್ತು. ಅವರು ನನ್ನ ಕಡೆ ನೋಡಿ 'ನೀನು ಬೆಂಗಳೂರಿಗೆ ಎರಡಕ್ಷರ ಕಲಿತುಕೊಂಡು ಬರಲು ಹೋಗುತ್ತೀಯಾ' ಎಂದು ಕೇಳಿದರು. ನಾನು ತಬ್ಬಿಬ್ಬಾದೆ. ಮೂರೂವರೆ ಮೈಲಿ ದೂರದ ತುಮಕೂರು ಪಟ್ಟಣವನ್ನೇ ನೋಡದ ನನಗೆ ಬೆಂಗಳೂರಿಗೆ ಪ್ರಯಾಣ. ತಕ್ಷಣ ನನಗೆ ಏನೂ ತಿಳಿಯದಾಯಿತು. ಆಗ ನನಗೆ ನನ್ನ ಜನ್ಮಸ್ಥಳ ಗೂಳೂರನ್ನು ಬಿಟ್ಟರೆ ಮಿಕ್ಕ ಊರುಗಳ ಬಗ್ಗೆ ಏನೂ ಅರಿವಿರಲಿಲ್ಲ.

'ಏಕೆ ಸುಮ್ಮನಾಗಿ ನಿಂತಿರುವೆ' ಎನ್ನುತ್ತಾ ನನ್ನ ಕಡೆ ನೋಡಿದರು. ನಾನು ಏನೂ ಮಾತನಾಡದೇ ಸುಮ್ಮನೇ ಇದ್ದೆ. ಈ ಊರನ್ನು ಬಿಟ್ಟರೆ ಸಾಕು ದನಕಾಯುವ ಕೆಲಸ ತಪ್ಪುತ್ತದೆ ಎಂಬುದಷ್ಟೆ ನನಗೆ ತೃಪ್ತಿ ನೀಡಿತ್ತು. ನನ್ನ ಅನಿಸಿಕೆಯನ್ನು ನನ್ನ ತಂದೆಯವರ ಮುಂದೆ ಹೇಳುವಷ್ಟು ಧೈರ್ಯವಾಗಲೀ ಸಾಹಸವಾಗಲೀ ನನ್ನಲ್ಲಿರಲಿಲ್ಲ. 'ನೀನು ಶುದ್ಧ ದಡ್ಡ ಅದಕ್ಕೋಸ್ಕರವೇ ನಿನ್ನನ್ನು ದನಕಾಯುವ ಕೆಲಸಕ್ಕೆ ಹಾಕಲಾಗಿದೆ. ಬೆಂಗಳೂರಿಗೆ ಹೋಗಿ ಅಲ್ಪಸ್ವಲ್ಪ ವೇದ ಜ್ಯೋತಿಷ ಕಲಿತು ಬಂದರೆ ಊರಿನಲ್ಲಿದ್ದುಕೊಂಡು ನಿನ್ನ ಜೀವನ ನಡೆಸಬಹುದು' ಎಂಬ ಅಭಿಪ್ರಾಯ ಅವರದಾಗಿತ್ತು. ಬಹಳ ದಿನಗಳಾದ ಮೇಲೆ ಇದು ನನಗೆ

ತಿಳಿಯಿತು. 'ತಾಯಿನಾಡು' ಪತ್ರಿಕೆಯ ಸುದ್ದಿ ಸಂಗ್ರಹ ಈ ರೀತಿ ಇತ್ತು. 'ಶ್ರೀ ಶಿವರುದ್ರ ಸ್ವಾಮಿಗಳ ಉಚಿತ ವೈದಿಕ ವಿದ್ಯಾರ್ಥಿ ನಿಲಯ, ಜೋಲಿಮಠ, ಅರಳೇಪೇಟೆ, ಬೆಂಗಳೂರು ಇಲ್ಲಿ ಸೇರಲಿಚ್ಛಿಸುವ ವಿದ್ಯಾರ್ಥಿಗಳಿಗೆ ಉಚಿತ ಊಟ, ವಸತಿ ಇತ್ಯಾದಿ'.

೧೯೪೦ನೇ ಮೇ ೨೪ನೆಯ ದಿವಸ ತಮ್ಮ ತಂದೆಯವರೊಡನೆ ಕಂಬಳಿ ಮಿಷನ್ (ಬಿನ್ನಿಮಿಲ್) ಪಕ್ಕದಲ್ಲಿದ್ದ ಜೋಲಿಮಠಕ್ಕೆ ಬಂದು ಉಚಿತ ವಿದ್ಯಾರ್ಥಿನಿಲಯಕ್ಕೆ ದಾಖಲಾದೆ. ವಿದ್ಯಾರ್ಥಿನಿಲಯದ ನಿಯಮಾನುಸಾರ ನನ್ನನ್ನು ಶುದ್ಧವೈದಿಕ ವಟುವನ್ನಾಗಿ ಮಾಡಿ ನಮ್ಮ ತಂದೆಯವರು ಊರಿಗೆ ಹಿಂತಿರುಗಿದರು. ಇದು ನಾನು ಬೆಂಗಳೂರು ಸೇರಿದ ರೀತಿ.

ವಿದ್ವಾನ್ ಎಂ.ಜಿ. ನಂಜುಂಡಾರಾಧ್ಯರನ್ನು ನಾನು ಪರಿಚಯಿಸಿಕೊಂಡದ್ದು ೧೯೪೩ನೇ ಜನವರಿ ತಿಂಗಳ ಮಧ್ಯಭಾಗದಲ್ಲಿ. ತಾವೇ ಬರೆದ 'ಶಿವನಸೋಲು' ನಾಟಕ ಪುಸ್ತಕದ ಪಾತ್ರಗಳ ಹಂಚಿಕೆಯಲ್ಲಿ ಅವರು ಮಗ್ನರಾಗಿದ್ದರು. ಹಂಚಿಕೆಯ ಪಟ್ಟಿ ಸಿದ್ಧವಾಯಿತು. ಆದರೆ ಆ ಪಟ್ಟಿಯಲ್ಲಿ ನನ್ನ ಹೆಸರು ಇರಲಿಲ್ಲ. ನಾನು ಸಪ್ಪೆಮೋರೆ ಹಾಕಿಕೊಂಡು ಮೂಲೆಯಲ್ಲಿ ಕುಳಿತಿದ್ದೆ. ನನ್ನನ್ನು ಸೂಕ್ಷ್ಮವಾಗಿ ವೀಕ್ಷಿಸಿದ ಅವರು 'ಏತಕ್ಕೆ ಹೀಗೆ ಕುಳಿತಿರುವೆ, ನಿನಗೂ ಈ ನಾಟಕದಲ್ಲಿ ಒಂದು ಮುಖ್ಯ ಪಾತ್ರ ಇದೆ' ಎಂದಾಗ ನನಗೆ ಆದ ಸಂತಸ ಅಷ್ಟಿಷ್ಟಲ್ಲ. ಅದು ಕೇವಲ ರಂಗ ಮಂಚದ ಮೇಲೆ ಬಂದು ಹೋಗುವ ಪಾತ್ರವಾಗಿತ್ತು. ಆ ಪಾತ್ರಾಭಿನಯಕ್ಕೆ ಬಹುಮಾನವೂ ಕೂಡ ಇತ್ತು. ಆದರೆ ಆ ಬಹುಮಾನವನ್ನು ನನಗೆ ಅವರೇ ಕೊಟ್ಟಿದ್ದರು ಎಂಬ ಅರಿವು ಇರಲಿಲ್ಲ.

ಈ ಘಟನೆ ನನಗೆ ಆರಾಧ್ಯರ ಬಗ್ಗೆ ಒಂದು ರೀತಿಯ ವಾತ್ಸಲ್ಯವನ್ನು ಮೂಡಿಸಿತು. ಆಗ ಆರಾಧ್ಯರು ಚಾಮರಾಜೇಂದ್ರ ಸಂಸ್ಕೃತ ಕಾಲೇಜಿನಲ್ಲಿ ಅಲಂಕಾರಶಾಸ್ತ್ರ ವಿಭಾಗದಲ್ಲಿ ಉಪಾಧ್ಯಾಯರಾಗಿದ್ದರು. ನಾನು ವೇದ ಮತ್ತು ಸಂಸ್ಕೃತ ತರಗತಿಗೆ ಸರಿಯಾಗಿ ಹಾಜರಾಗುತ್ತಿಲ್ಲ ಮತ್ತು ದಿನೇ ದಿನೇ ಇವುಗಳ ಬಗ್ಗೆ ನನಗೆ ಅನಾಸಕ್ತಿ ಬೆಳೆಯುತ್ತಿದೆ ಎಂಬುದನ್ನು ಅರಿತ ಅವರು ನನ್ನನ್ನು ಕರೆಸಿ 'ವೇದ ಸಂಸ್ಕೃತ ತರಗತಿಗಳಿಗೆ ತಪ್ಪಿಸಿಕೊಳ್ಳಬಾರದಪ್ಪ, ನೀನು ಬೆಂಗಳೂರಿಗೆ ಬಂದಿರುವುದು ಇವುಗಳ ಅಧ್ಯಯನಕ್ಕೋಸ್ಕರವೇ ಅಲ್ಲವೇ' ಎಂದು ಹೇಳಿದ ವಾತ್ಸಲ್ಯದ ಮಾತು ನನ್ನನ್ನು ಎಚ್ಚರಿಸಿತು. ಈ ಮಾತನ್ನು ನನ್ನ ತಂದೆಯವರೇ ಹೇಳಿದಂತಾಗಿತ್ತು.

ಅಂದಿನ ದಿನಗಳಲ್ಲಿ ಬೆಂಗಳೂರಿನ ಸರ್ಕಾರಿ ವೇದಪಾಠ ಶಾಲೆಗೆ ಕೇವಲ ಒಂದು ವರ್ಗದವರಿಗೆ ಮಾತ್ರವೇ ಪ್ರವೇಶಾವಕಾಶವಿತ್ತು. 'ವೇದಾಧ್ಯಯನ ಎಲ್ಲರಿಗೂ ಸಿಗಬೇಕು ಇದು ಕೇವಲ ಒಂದು ವರ್ಗದವರ ಸ್ವತ್ತು ಅಲ್ಲ' ಎಂದು ಒಂದು ಚಳುವಳಿಯನ್ನೇ ಆರಂಭಿಸಿದವರು ಶ್ರೀ ನಂಜುಂಡಾರಾಧ್ಯರು. ಇವರ ಅನುಕೂಲಕ್ಕೆ ತಕ್ಕಂತೆಯೋ ಎಂಬಂತೆ ಬೆಂಗಳೂರಿನ ಚಾಮರಾಜೇಂದ್ರ ಸಂಸ್ಕೃತ ಕಾಲೇಜಿಗೆ ಶ್ರೀ ಕೆ.ಎಸ್. ಧರಣೇಂದ್ರಯ್ಯನವರು

ಪ್ರಾಂಶುಪಾಲರಾಗಿ ನೇಮಕಗೊಂಡರು. ಈ ಇಬ್ಬರು ಮಹನೀಯರ ಹೋರಾಟದ ಫಲವಾಗಿ ವೇದಪಾಠಶಾಲೆಗೆ ಎಲ್ಲಾ ವರ್ಗದವರಿಗೂ ಮುಕ್ತಪ್ರವೇಶಕ್ಕೆ ಅವಕಾಶ ಪ್ರಾಪ್ತವಾಯಿತು. ಈ ಅವಕಾಶವನ್ನೇನೂ ಸರ್ಕಾರ ಒದಗಿಸಿತು. ಆದರೆ ಅಧ್ಯಯನ ಮಾಡುವ ವಿದ್ಯಾರ್ಥಿಗಳೇ ಇಲ್ಲವಾದರು. ಆರಾಧ್ಯರು ಬೆಂಗಳೂರಿನ ಎಲ್ಲಾ ಉಚಿತ ವಿದ್ಯಾರ್ಥಿನಿಲಯಗಳಿಗೂ ಹೋಗಿ ವಿದ್ಯಾರ್ಥಿಗಳನ್ನ ಕಲೆಹಾಕಿ ವೇದಪಾಠಶಾಲೆಗೆ ಹೆಚ್ಚಿನ ಸಂಖ್ಯೆಯಲ್ಲಿ ಸೇರಿಸಿದರು. ಈ ಕೀರ್ತಿ ಅವರಿಗೆ ಸಲ್ಲತಕ್ಕದ್ದಾಗಿದೆ. ಆರಾಧ್ಯರ ಹೋರಾಟ ಇಷ್ಟಕ್ಕೆ ನಿಲ್ಲಲಿಲ್ಲ. ಪ್ರಾಂಶುಪಾಲರಾಗಿದ್ದ ಶ್ರೀ ಧರಣೇಂದ್ರಯ್ಯನವರು ಸಹಕಾರ ಹಾಗೂ ಸಹಯೋಗದಿಂದ ಸಂಸ್ಕೃತ ಕಾಲೇಜುಗಳಲ್ಲಿ ಶಕ್ತಿವಿಶಿಷ್ಟಾದ್ವೈತ ವೇದಾಂತ ಮತ್ತು ಜೈನಸಿದ್ಧಾಂತ ವಿಭಾಗಗಳ ಬೋಧನೆಗೆ ಅವಕಾಶ ಕಲ್ಪಿಸಿದ ಕೀರ್ತಿ ಇವರದಾಯಿತು. ಈ ಮಹನೀಯರಿಬ್ಬರು ಈ ಕಾಲೇಜಿಗೆ ಸಲ್ಲಿಸಿದ ಸೇವೆ, ವಿದ್ಯಾರ್ಥಿಗಳಿಗೆ ಒದಗಿಸಿದ ಸೌಲಭ್ಯ ಸದಾಕಾಲ ನೆನಪಿನಲ್ಲಿ ಉಳಿಯತಕ್ಕದ್ದು. ಕಾಲೇಜಿನ ಸಭಾಂಗಣದಲ್ಲಿ ಹಾಕಿರುವ ದಾನಿಗಳ ಭಾವಚಿತ್ರಗಳೇ ಇದಕ್ಕೆ ಮೂಕಸಾಕ್ಷಿಯಾಗಿವೆ.

ನಂಜುಂಡಾರಾಧ್ಯರ ಹೋರಾಟದ ಫಲವೆಂದರೆ ಅವರಿಗಾದ ಮೈಸೂರಿನ ವರ್ಗಾವಣೆ. ಮೈಸೂರು ಮಹಾರಾಜಾ ಸಂಸ್ಕೃತ ಕಾಲೇಜಿನಲ್ಲಿ ಅವರನ್ನು ಶಕ್ತಿವಿಶಿಷ್ಟಾದ್ವೈತ ವೇದಾಂತ ವಿಭಾಗ ಉಪಪ್ರಾಧ್ಯಾಪಕರನ್ನಾಗಿ ಸರ್ಕಾರ ನೇಮಕಮಾಡಿತು. ಶ್ರೀಯುತರದು ಸುಮ್ಮನೆ ಕೂಡುವ ಸ್ವಭಾವವಾಗಿರಲಿಲ್ಲ. ಮೈಸೂರು ಸಂಸ್ಕೃತ ಕಾಲೇಜಿನಲ್ಲಿ ವೀರಶೈವಾಗಮ ಜೈನಾಗಮ ವಿಭಾಗಗಳಲ್ಲಿ ಬೋಧನೆಗೆ ಅವಕಾಶವಿರಲ್ಲ. ಇದನ್ನು ಅರಿತ ಆರಾಧ್ಯರು ಸಂಸ್ಕೃತ ಕಾಲೇಜುಗಳಲ್ಲಿ ವೀರಶೈವಾಗಮ ಮತ್ತು ಜೈನಾಗಮನಗಳನ್ನು ಬೋಧನಾ ವಿಷಯಗಳಾಗುವಂತೆ ಸೇರ್ಪಡಿಸಿದ ಕೀರ್ತಿ ಶ್ರೀಯುತರಿಗೆ ಸಲ್ಲತಕ್ಕದ್ದಾಗಿದೆ. ನಂಜುಂಡಾರಾಧ್ಯರು ವೀರಶೈವಾಗಮ ವಿಭಾಗದ ಪ್ರಾಧ್ಯಾಪಕರಾಗಿ ಬಹಳ ವರ್ಷಗಳ ಕಾಲ ಸೇವೆ ಸಲ್ಲಿಸಿದ್ದಾರೆ.

ಬೆಂಗಳೂರಿನಲ್ಲಿ ಇಂಟರ್ ಮೀಡಿಯಟ್ ಪರೀಕ್ಷೆಯಲ್ಲಿ ಉತ್ತೀರ್ಣನಾದ ನಾನು ನನ್ನ ಮುಂದಿನ ವಿದ್ಯಾಭ್ಯಾಸಕ್ಕೆ ಮೈಸೂರಿಗೆ ಹೋಗಬೇಕಾಯಿತು. ಸುತ್ತೂರು ಶ್ರೀಗಳು ಬಾಲ್ಯದಿಂದಲೂ ನನ್ನನ್ನು ಬಲ್ಲವರಾಗಿದ್ದುದರಿಂದ ನನ್ನನ್ನು ತಮ್ಮ ನೇತೃತ್ವದಲ್ಲಿ ನಡೆಯುತ್ತಿದ್ದ ಗುರುಕುಲದಲ್ಲಿ ಊಟ ವಸತಿ ಸೌಲಭ್ಯ ಒದಗಿಸಿಕೊಟ್ಟರು. ಶ್ರೀಗಳು ನಾನು ಒಂದು ದೊಡ್ಡಮಠಕ್ಕೆ ಸ್ವಾಮಿ ಆಗಬಹುದೆಂಬ ಭರವಸೆಯನ್ನು ಇಟ್ಟುಕೊಂಡಿದ್ದರೋ ಏನೋ ನನಗೆ ತಿಳಿದಿರಲಿಲ್ಲ.

ಆರಾಧ್ಯರು ಅಲ್ಲಿಗೂ ಬರುತ್ತಿದ್ದರು. ಅಲ್ಲಿನ ವಿದ್ಯಾರ್ಥಿಗಳಿಗೆ ಸಂಸ್ಕೃತ ವೇದ ಪಾಠವನ್ನು ಅವರು ಹೇಳಿಕೊಡುತ್ತಿದ್ದರು. ನಾನು ಇಲ್ಲಿ ಉಳಿದುಕೊಂಡಿರುವುದು ಅವರಿಗೆ ಆನಂದವನ್ನು ತಂದಿರಬಹುದು. ಅವರು ಶ್ರೀಗಳ ಬಳಿಗೆ ಹೋಗಿ 'ಈ ಹುಡುಗನನ್ನು ಬೇರೆ

ವಿದ್ಯಾರ್ಥಿನಿಲಯಕ್ಕೆ ಕಳುಹಿಸಬೇಡಿ, ಈತ ಇಲ್ಲೇ ಇದ್ದು ವಿಶ್ವವಿದ್ಯಾನಿಲಯದ ವ್ಯಾಸಂಗದ ಜೊತೆಗೆ ವೇದ ಮತ್ತು ಸಂಸ್ಕೃತ ಓದಲಿ' ಎಂದು ಹೇಳಿದ್ದುದು ನನಗೆ ಬಹಳ ದಿನಗಳಾದ ಮೇಲೆ ತಿಳಿಯಿತು.

ನಾನು ವಿಶ್ವವಿದ್ಯಾನಿಲಯದ ಪದವಿಯೊಂದಿಗೆ ಸಂಸ್ಕೃತ ಸಾಹಿತ್ಯ ಪರೀಕ್ಷೆಯನ್ನು ಪೂರ್ಣಗೊಳಿಸಿ ಬೆಂಗಳೂರಿಗೆ ಹಿಂತಿರುಗಿದೆ. ಬೇಸಿಗೆ ರಜಾ ಮುಗಿದ ಸ್ವಲ್ಪ ದಿನದಲ್ಲಿ ಶ್ರೀಚಾಮರಾಜೇಂದ್ರ ಸಂಸ್ಕೃತ ಕಾಲೇಜಿನಲ್ಲಿ ನನಗೆ ಅಧ್ಯಾಪಕ ಹುದ್ದೆ ದೊರೆಯಿತು. ನನಗೆ ಅಂದು ಆದ ಸಂತೋಷ ಅಷ್ಟಿಷ್ಟಲ್ಲ. ಆರಾಧ್ಯರಿಗೆ ಈ ವಿಷಯ ತಿಳಿಯಿತು. ನನಗೆ ಶುಭವನ್ನು ಕೋರಿ ಪತ್ರವನ್ನು ಬರೆದರು.

ನನ್ನನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದ ಆರಾಧ್ಯರು 'ನೀನು ಸಂಸ್ಕೃತ ವಿದ್ವತ್ ಪರೀಕ್ಷೆಗೆ ಕುಳಿತು ವಿದ್ವಾನ್ ಪದವಿ ಪಡೆಯಬೇಕು' ಎಂದು ಆಗಾಗ ಹೇಳುತ್ತಿದ್ದರು. ಅಂತೂ ಇಂತು ನಾನು ಆರಾಧ್ಯರಿಗೋಸ್ಕರವೇ ಏನೋ ಎಂಬಂತೆ ವಿದ್ವತ್ ಪದವಿ ಪಡೆದೆ. ಇದು ಅವರ ಪ್ರೋತ್ಸಾಹದಿಂದ ಸಿಕ್ಕ ಪದವಿಯೇ ಹೊರತು ನನ್ನ ಅಭಿಲಾಷೆಯಿಂದ ಪಡೆದ ಪದವಿಯಾಗಿರಲಿಲ್ಲ.

ವಿದ್ಯಾಇಲಾಖೆಯನ್ನು ಬಿಟ್ಟು ವಿಶ್ವವಿದ್ಯಾನಿಲಯಕ್ಕೆ ಹೋಗುವ ಪ್ರಯತ್ನದಲ್ಲಿ ನಾನು ಬಹಳ ಮುಂದುವರಿದಿದ್ದೆ. ಆರಾಧ್ಯರಿಗೆ ಈ ವಿಷಯ ಹೇಗೋ ತಿಳಿಯಿತು. ಅವರು ಬೆಂಗಳೂರಿಗೆ ಬಂದಿದ್ದಾಗ ನನ್ನನ್ನು ಕರೆಸಿಕೊಂಡು 'ನೀನು ವಿಶ್ವವಿದ್ಯಾನಿಲಯ ಪ್ರವೇಶಿಸಿದರೆ ನೂರರಲ್ಲಿ ಒಬ್ಬನಾಗುತ್ತೀ ಅಷ್ಟೇ. ಆದರೆ ಇದೇ ಕಾಲೇಜಿನಲ್ಲಿ ಉಳಿದರೆ ಇಬ್ಬರಲ್ಲಿ ಒಬ್ಬನಾಗಿ ಉಳಿಯುತ್ತೀಯೆ ಉತ್ತರೋತ್ತರ ಅಭಿವೃದ್ಧಿಗೆ ಇಲ್ಲಿ ಹೆಚ್ಚಿನ ಅವಕಾಶಗಳಿವೆ' ಎಂದಾಗ ನನ್ನ ಪ್ರಯತ್ನವನ್ನು ನಿಧಾನಗೊಳಿಸಿದೆ.

.ನಂಜುಂಡಾರಾಧ್ಯರ ಭವಿಷ್ಯವಾಣಿಯಂತೆ ಐದಾರು ವರ್ಷಗಳ ಅವಧಿಯಲ್ಲಿ ನನಗೆ ಬಡ್ತಿಗಳು ಸಿಕ್ಕಿದವು. ಸಂಸ್ಕೃತ ಪಾಠಶಾಲೆಗಳ ಪರಿವೀಕ್ಷಕನಾದೆ. ಶ್ರೀ ಚಾಮರಾಜೇಂದ್ರ ಸಂಸ್ಕೃತ ಕಾಲೇಜಿನ ಪ್ರಾಂಶುಪಾಲನಾದೆ.

ಸ್ವಲ್ಪದಿನಗಳಲ್ಲೇ ನನ್ನನ್ನು ಸರ್ಕಾರ ಹಿರಿಯ ಸಹಾಯಕ ನಿರ್ದೇಶಕನನ್ನಾಗಿ ನೇಮಿಸಿ ಸಾರ್ವಜನಿಕ ಶಿಕ್ಷಣಾಲಯದ ಕೇಂದ್ರಕಛೇರಿಯಲ್ಲಿ ಕಾರ್ಯನಿರ್ವಹಿಸುವ ಅವಕಾಶವನ್ನು ಕಲ್ಪಿಸಿಕೊಟ್ಟಿತು. ಅಲ್ಲಿ ನನ್ನ ಕಾರ್ಯಕ್ಷೇತ್ರ ಇನ್ನೂ ವಿಸ್ತಾರವಾಯಿತು. ಶ್ರೀ ನಂಜುಂಡಾರಾಧ್ಯರ ಸಲಹೆ ಸೂಚನೆ ಮೇರೆಗೆ ಭಾಷಾಭಿವೃದ್ಧಿಗೆ ಅನೇಕ ಯೋಜನೆಗಳನ್ನು ಸಿದ್ಧಪಡಿಸಿ ಅವುಗಳನ್ನು ಕಾರ್ಯಗೊಳಿಸುವ ಕಾರ್ಯ ನನ್ನ ಪಾಲಿಗೆ ಬಂದಿತು.

'ಭಾರತೀಯ ದರ್ಶನ' ಪಠ್ಯ ಪುಸ್ತಕದ ರಚನೆಯ ಸಮಯ. ಎಲ್ಲಾ ಸಮಿತಿಯ ಸದಸ್ಯರು ತಮ್ಮ ಅಭಿಲಾಷೆ ಮತ್ತು ಆಸಕ್ತಿಗೆ ತಕ್ಕಂಥ ವಿಷಯಗಳನ್ನು ಆರಿಸಿಕೊಂಡರು. ಶ್ರೀ ಆರಾಧ್ಯರು ತಮಗೆ ಪ್ರಿಯವಾದ 'ಶಕ್ತಿ ವಿಶಿಷ್ಟಾದ್ವೈತ ವೇದಾಂತ' ಭಾಗವನ್ನೂ, ಉಳಿದ ವಿದ್ವಾಂಸರು ತರ್ಕ, ವ್ಯಾಕರಣ, ದ್ವೈತ ಅದ್ವೈತ ಇತ್ಯಾದಿ ವಿಭಾಗಗಳನ್ನು ಆರಿಸಿಕೊಂಡರು. ಕೊನೆಗೆ ಉಳಿದಿದ್ದು ಜ್ಯೋತಿಷ ಮಾತ್ರ.

ನಾನು ಆಗ ಈ ಸಮಿತಿಯ ಸದಸ್ಯ ಕಾರ್ಯದರ್ಶಿಯಾಗಿ ಕೆಲಸವನ್ನು ನಿರ್ವಹಿಸುತ್ತಿದ್ದೆ. ಜ್ಯೋತಿಷ ವಿಷಯವನ್ನು ಯಾರಿಗೆ ಬಿಡಬೇಕು ಎಂಬುವರ ಬಗ್ಗೆ ಬಹಳ ಚರ್ಚೆಯೇ ನಡೆಯಿತು. ಕೊನೆಗೆ ಶ್ರೀ ಆರಾಧ್ಯರು ಈ ಸಮಿತಿಯ ಕಾರ್ಯದರ್ಶಿಗಳೇ ಈ ವಿಷಯದ ಬಗ್ಗೆ ಲೇಖನವನ್ನು ಸಿದ್ಧಪಡಿಸಲಿ ಎಂದು ಸೂಚಿಸಿದರು. ಎಲ್ಲರೂ ಶ್ರೀ ಆರಾಧ್ಯರನ್ನೇ ಬೆಂಬಲಿಸಿ ಈ ಗುರುತರಹೊಣೆಯನ್ನು ನನ್ನ ಮೇಲೆ ಹೊರಿಸಿದರು. ಜ್ಯೋತಿಷ ಶಾಸ್ತ್ರವನ್ನೇ ಅರಿಯದ ನನಗೆ ಜ್ಯೋತಿಷ ಶಾಸ್ತ್ರದ ಇತಿಹಾಸ ಬರೆಯುವುದೆಂದರೇನು ?ಅವರು ನನಗೆ ವಹಿಸಿದ ಈ ಕೆಲಸವನ್ನು ಬಹಳ ಪ್ರಯಾಸದಿಂದ ಮಾಡಿ ಮುಗಿಸಬೇಕಾಯಿತು. ಈ ಶಾಸ್ತ್ರವನ್ನು ಪರಿಚಯಿಸಿಕೊಳ್ಳುವ ಅವಕಾಶ ಒದಗಿಬಂದುದು ಶ್ರೀ ಆರಾಧ್ಯರಿಂದ.

ಹೀಗೆ ಆರಾಧ್ಯರು ನನ್ನ ಶ್ರೇಯಸ್ಸನ್ನು ಬಯಸುತ್ತಾ ಸೇವೆಯಲ್ಲಿದ್ದಷ್ಟು ಕಾಲವೂ ನನ್ನ ಕೈ ಹಿಡಿದು ಮುನ್ನಡೆಸಿದ್ದಾರೆ. ನಾನು ಸುಮ್ಮನಿದ್ದಾಗ ನನ್ನನ್ನು ಎಚ್ಚರಿಸಿ ನನ್ನ ಎಲ್ಲಾ ಕಾರ್ಯಗಳಿಗೂ ಪ್ರೇರಣೆಯನ್ನು ನೀಡಿದ್ದಾರೆ. ಸಂಸ್ಕೃತ ಸಾರಸ್ವತ ಪ್ರಪಂಚಕ್ಕೆ ನನ್ನಿಂದ ಕಿಂಚಿತ್ ಸೇವೆ ಏನಾದರೂ ಸಂದಿದ್ದರೆ ಅದು ಶ್ರೀ ನಂಜುಂಡಾರಾಧ್ಯರ ಪ್ರೇರಣೆ ಹಾಗೂ ಪ್ರೋತ್ಸಾಹದ ಫಲ. ನನ್ನ ಶ್ರೇಯೋಭಿವೃದ್ಧಿಗೆ ಪ್ರೇರಕಶಕ್ತಿಯಾಗಿದ್ದರು, ಆಸ್ಥಾನ ವಿದ್ವಾನ್ ನಂಜುಂಡಾರಾಧ್ಯರು. ಅವರನ್ನು ಇಂದು ಸಂಸ್ಮರಿಸುವುದೇ ನನಗೆ ಪುಣ್ಯಪ್ರದವೆಂದು ಭಾವಿಸಿದ್ದೇನೆ. ಈ ದಿವ್ಯಚೇತನಕ್ಕೆ ನನ್ನ ಪ್ರಣಾಮಗಳನ್ನು ಅರ್ಪಿಸುತ್ತೇನೆ.

■

# ಎರಡು ನೆನಪು

**ಪ್ರೊ|| ಜಿ.ಎಸ್. ಸಿದ್ಧಲಿಂಗಯ್ಯ**

---

ವಿದ್ವಾನ್ ಎಂ.ಜಿ. ನಂಜುಂಡಾರಾಧ್ಯರನ್ನು ಕುರಿತ ನೆನಪುಗಳು ನನಗೆ ಯಾವಾಗಲೂ ಉಲ್ಲಾಸವನ್ನು ಮೂಡಿಸುವಂಥವು.

ನನಗೆ ಸುಮಾರು ಒಂದು ತಲೆಮಾರಿನಷ್ಟು ಹಿರಿಯವರಾದ ಶ್ರೀನಂಜುಂಡಾರಾಧ್ಯರು ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತ ಹಾಗೂ ವೀರಶೈವಾಗಮಗಳಲ್ಲಿ ಪ್ರಾಧ್ಯಾಪಕರಾಗಿದ್ದುದ್ದೇ ಅಲ್ಲದೆ ಪ್ರಕಾಂಡ ಪಂಡಿತರೂ ಆಗಿದ್ದರು. ಅವರ ಕೃತಿ ಸಮುದಾಯವನ್ನು ಗಮನಿಸಿದರೆ ಶರಣರು ಹಾಗೂ ವೀರಶೈವ ಸಿದ್ಧಾಂತದಲ್ಲಿ ಅವರಿಗಿದ್ದ ಒಲವು ತಾನಾಗಿಯೇ ವೇದ್ಯವಾಗುತ್ತದೆ. ಕುವೆಂಪು ಅವರ ಯಮನ ಸೋಲು ನಾಟಕವನ್ನೋದಿದ ನಮಗೆಲ್ಲಾ ನಂಜುಂಡಾರಾಧ್ಯರ ಶಿವನ ಸೋಲು ತುಂಬ ಕುತೂಹಲ ಹಾಗೂ ಅಚ್ಚರಿಯ ಕೃತಿಯಾಗಿತ್ತು. ಇಂಥ ಹಿರಿಯ ವಿದ್ವಾಂಸರು ಬಹುಶಃ ೧೯೮೯ರ ಮಾರ್ಚ್ ಅಥವಾ ಏಪ್ರಿಲ್ ತಿಂಗಳಿರಬಹುದು. ತಾವಾಗಿಯೇ ಬೆಳಿಗ್ಗೆ ಮನೆಗೆ ಬಂದಾಗ ನನಗೆ ಎಲ್ಲಿಲ್ಲದ ಕುತೂಹಲ ಹಾಗೂ ಆಶ್ಚರ್ಯ. ಗೌರವಪೂರ್ವಕವಾಗಿ ಅವರನ್ನು ಸ್ವಾಗತಿಸುತ್ತಿದ್ದಂತೆ ತಮ್ಮ ಕೈಚೀಲದಲ್ಲಿ ಮೈಸೂರು ಮಲ್ಲಿಗೆಯ ಕಂಪಿನ ಹಾರವನ್ನು ಕೊರಳಿಗಿಕ್ಕಿದರು; ತಂದಿದ್ದ ಫಲತಾಂಬೂಲಗಳನ್ನು ಕೈಗೊಪ್ಪಿಸಿ ನಿಮ್ಮ ಸಾಹಿತ್ಯ ಪರಿಷತ್ತಿನ ಅಧ್ಯಕ್ಷಾವಧಿ ಯಶಸ್ವಿಯಾಗಲೆಂದು ಹಾರೈಸಿದರು.

ಬೆಳಗಿನೊಂದಿಗೆ ಬಂದ ಇಂಥ ಅಭಿಮಾನಪೂರ್ವಕ ಪ್ರಸಂಗದಿಂದ ಪುಲಕಿತನಾಗುತ್ತಿದ್ದಂತೆ ಅಧ್ಯಕ್ಷನಾದುದಕ್ಕೆ ನನ್ನನ್ನು ಹೃತ್ಪೂರ್ವಕವಾಗಿ ಅಭಿನಂದಿಸಿದರು. ನನ್ನ ಪ್ರತಿ ಅಭಿನಂದನೆಗಳನ್ನು ಸಲ್ಲಿಸುವ ಮೊದಲೇ ಕುಶಲ ಸಮಾಚಾರಕ್ಕೂ ಹೆಚ್ಚು ಎಡೆಗೊಡದಂತೆ ತಾವೇ ಆರಂಭಿಸಿದರು.

ನಿಮ್ಮ ಆಕ್ಷೇಪವಿಲ್ಲದಿದ್ದರೆ ಒಂದು ವಿಷಯವನ್ನು ಪ್ರಸ್ತಾಪಿಸಬೇಕೆಂದಿದ್ದೇನೆ. ನನ್ನಿಂದಾಗುವುದಿದ್ದರೆ ಖಂಡಿತ ಆ ಬಗ್ಗೆ ಪ್ರಯತ್ನಶೀಲನಾಗುತ್ತೇನೆಂದು ಅವರ ಬಗೆಗಿದ್ದ ನನ್ನ ಗೌರವ ಭಾವನೆಗಳನ್ನು ಸೂಚಿಸುತ್ತಿದ್ದಂತೆ ಅವರು ಆ ವಿಷಯಬಿಡಿ; ೧೯೯೧ರ ಪೆಬ್ರುವರಿಗೆ ಅಭಿನವ ಕಾಳಿದಾಸ ಬಸವಪ್ಪಶಾಸ್ತ್ರಿಗಳು ಕೈಲಾಸವಾಸಿಗಳಾಗಿ ಸರಿಯಾಗಿ ನೂರು ವರ್ಷಗಳಾಗುತ್ತದೆ. ಮೈಸೂರಿನ ಬನ್ನಿಮಂಟಪದ ಹಿಂಭಾಗದಲ್ಲಿರುವ ಅವರ ಸಮಾಧಿ ಪೂರಾ ಶಿಥಿಲವಾಗಿದೆ. ಸಮಾಧಿಯ ಕಲ್ಲುಗಳು ಕಳಚಿಬಿದ್ದಿರುವುದೇ ಅಲ್ಲದೆ ಮಂಟಪಕೂಡ ಉರುಳಿಬಿದ್ದು ಅಲ್ಲೆಲ್ಲ ಮುಳ್ಳು ಕಳ್ಳಿಗಳು ಬೆಳೆದುಬಿಟ್ಟಿವೆ. ನೂರು ವರ್ಷದ ಸಂದರ್ಭವನ್ನು ಬಳಸಿಕೊಂಡಾದರೂ ಆ ಸಮಾಧಿಯನ್ನು ಗೌರವದ ಸ್ಥಿತಿಗೆ ತರುವ ಪ್ರಯತ್ನ ಮಾಡಬೇಕಾಗಿದೆ ಎಂದರು. ಮೈಸೂರಿನಿಂದ ಬೆಂಗಳೂರಿನವರೆಗೂ ಬಂದು ನನ್ನನ್ನು ಅಭಿನಂದಿಸಿದ ಅವರು ಬಯಸಿದ್ದು ತಮ್ಮ ಯಾವುದೇ ಒಂದು ಸ್ವಾರ್ಥದ ಕಾರ್ಯವನ್ನಲ್ಲ; ಅಭಿನವ ಕಾಳಿದಾಸ ಬಸವಪ್ಪಶಾಸ್ತ್ರಿಗಳವರ ದುಸ್ಥಿತಿಯಲ್ಲಿರುವ ಸಮಾಧಿಯನ್ನು ಅವರ ಸಾವಿನ ನೂರು ವರ್ಷಗಳ ಸಂದರ್ಭದಲ್ಲಾದರೂ ಸುಸ್ಥಿತಿಗೆ ತರಬೇಕೆಂಬುದು ಅವರ ಅಪೇಕ್ಷೆಯಾಗಿತ್ತು. ನಂಜುಂಡಾರಾಧ್ಯರನ್ನು ಕುರಿತ ಗೌರವ ನನ್ನಲ್ಲಿ ಇನ್ನೂ ಹೆಚ್ಚಾಯಿತು. ಆ ತಲೆಮಾರಿನ ಹೆಚ್ಚು ಜನರೇ ಹಾಗೆ. ಒಂದು ಮೌಲ್ಯಕ್ಕಾಗಿ ಬದುಕಿದ ಅಭಿಮಾನಧನರು. ಬೇಡುವುದೇನಿದ್ದರೂ ಸಾಮಾಜಿಕ ಮೌಲ್ಯಕ್ಕೆ ಸಂಬಂಧಿಸಿದ್ದು. ಸ್ವಾರ್ಥದ ಅಗತ್ಯಕ್ಕೆ ಸಂಬಂಧಿಸಿದ್ದಂತು ಅಲ್ಲವೇ ಅಲ್ಲ. ತಟ್ಟನೆ ನೆನಪಾಯಿತು, ಅವರು ಬಸವಪ್ಪಶಾಸ್ತ್ರಿಗಳನ್ನು ಕುರಿತ ಬೃಹತ್ ಸಂಸ್ಮರಣ ಗ್ರಂಥವೊಂದನ್ನು ಸಂಪಾದಿಸಿದ್ದರು. ಅವರ ಜೀವನ ಚರಿತ್ರೆಯನ್ನು ಬರೆದಿದ್ದರು, ಬಸವಪ್ಪಶಾಸ್ತ್ರಿಗಳು ಅವರ ಗುರುಗಳಾಗಿದ್ದರಂತೆ.

ಕರ್ನಾಟಕದ ಅದರಲ್ಲೂ ಮೈಸೂರರಮನೆಯ ವಿದ್ವತ್ ಲೋಕದ ಧ್ರುವತಾರೆಯಂತಿದ್ದ ಮಹಾಪ್ರತಿಭಾನ್ವಿತ ಕವಿ ಗಮಕಿ ವಿದ್ವಾಂಸ ಬಸವಪ್ಪಶಾಸ್ತ್ರಿಗಳಂಥವರ ಸಮಾಧಿ ಸಮಾಜದ ಜನರ ಗೌರವಕ್ಕೆ ಪಾತ್ರನಾಗುವಂತಾಗಬೇಕು ಎನ್ನುವ ಅವರ ಅಪೇಕ್ಷೆ ನನ್ನನ್ನು ಮೂಕನನ್ನಾಗಿಸಿತು. ಷೇಕ್ಸಪಿಯರ್, ಶೆಲ್ಲಿ, ವರ್ಡ್ಸ್‌ವರ್ತ್, ಟಾಲ್‌ಸ್ಟಾಯ್ ಮೊದಲಾದ ಪ್ರತಿಭಾವಂತರನ್ನು ಅವರವರ ದೇಶ ಗೌರವಿಸುವ ನೆನಪು ಸ್ಮೃತಿಪಟಲದಲ್ಲಿ ಸುಳಿದಾಡುತ್ತಿರುವಂತೆ ಇದು ಅಗತ್ಯವಾಗಿ ಆಗಲೇಬೇಕಾದ ಒಂದು ಸಾಂಸ್ಕೃತಿಕ ಕಾರ್ಯ ಅನ್ನಿಸಿತು. ಪರಿಷತ್ತಿನ ಅಧ್ಯಕ್ಷನಾಗಿ ಸಂಬಂಧಿಸಿದವರ ಗಮನಕ್ಕೆ ಇದನ್ನು ತಂದು ಈ ಕಾರ್ಯವನ್ನು ಮಾಡಿಸುವ ಪ್ರಯತ್ನ ಖಂಡಿತ ಮಾಡುತ್ತೇನೆಂದು ಭರವಸೆ ನೀಡಿದೆ. ಅದಕ್ಕಿಂತ

ಹೆಚ್ಚಿನವೇನನ್ನು ಬಯುಸದ ಮಾನ್ಯ ನಂಜುಂಡಾರಾಧ್ಯರು ಮತ್ತೊಮ್ಮೆ ನನ್ನನ್ನು ಅಭಿನಂದಿಸಿ ಮೈಸೂರಿನ ತಮ್ಮ ಗೃಹಕ್ಕೊಮ್ಮೆ ಬರಬೇಕೆಂದು ಆಹ್ವಾನಿಸಿದರು.

ಮಾನ್ಯ ನಂಜುಂಡಾರಾಧ್ಯರ ಮಾತು, ಮನಸ್ಸಿನಲ್ಲಿಯೇ ಉಳಿದಿತ್ತು. ಆಗ ಮೈಸೂರಿನಲ್ಲಿ ಮಾನ್ಯಶ್ರೀ ಬಳಿಗಾರರು ಜಿಲ್ಲಾಧಿಕಾರಿಗಳಾಗಿದ್ದರು. ಸಾಹಿತ್ಯ ಪರಿಷತ್ತಿನ ಕಾರ್ಯನಿಮಿತ್ತವಾಗಿ ಮೈಸೂರಿಗೆ ಹೋಗಿದ್ದಾಗ ಕ್ರಿಯಾಶೀಲತೆಗೆ ಹೆಸರಾಗಿದ್ದ ಮಾನ್ಯಶ್ರೀ ಬಳಿಗಾರರನ್ನು ಭೇಟಿ ಮಾಡಿ ವಿವರಗಳನ್ನು ತಿಳಿಸಿದೆ. ಅಗತ್ಯವಾಗಿ ಆಗಬೇಕಾದ್ದು ಇದು ಎಂದು ಅವರು ಟಿಪ್ಪಣಿ ಮಾಡಿಕೊಂಡರು. ಹಾಗೆಯೇ ಸುತ್ತೂರು ಪೀಠದ ಪೂಜ್ಯ ದೇಶೀಕೇಂದ್ರಮಹಾಸ್ವಾಮಿ ಯವರಲ್ಲಿಯೂ ಈ ವಿಷಯ ಪ್ರಸ್ತಾಪಿಸಿದೆ. ಅವರು ಕೂಡ ಇದು ಅಗತ್ಯವಾಗಿ ಆಗಲೇ ಬೇಕಾದ ಕಾರ್ಯ ಎಂದರು. ಈ ಬಗ್ಗೆ ತಮ್ಮ ಕೈಲಾದುದನ್ನು ಮಾಡುವುದಾಗಿಯೂ ಭರವಸೆ ನೀಡಿದರು. ಇದಾದ ಸ್ವಲ್ಪದಿನಗಳಲ್ಲಿ ಮಾನ್ಯ ಬಳಿಗಾರರು ಮೈಸೂರಿನಿಂದ ಬೇರೊಂದೆಡೆಗೆ ವರ್ಗವಾಗಿ ಹೋದರು. ಮತ್ತೆ ಸುತ್ತೂರು ಸ್ವಾಮಿಗಳವರ ಗಮನವನ್ನು ಸೆಳೆದೆ.

ಬಹುಶಃ ಶ್ರೀನಂಜುಂಡಾರಾಧ್ಯರ ಬಯಕೆ ಮತ್ತೆ ನನ್ನ ಪ್ರಯತ್ನ ಎರಡೂ ಈವರೆಗೆ ನಿಷ್ಫಲವಾಗಿವೆಯೆಂದು ನೋವಿನಿಂದಲೇ ನೆನೆಯಬೇಕಾಗಿದೆ. ಇಂಗ್ಲೆಂಡ್, ರಷ್ಯಾ, ರೋಮ್ ಮುಂತಾದ ಕಡೆಗಳಿಗೆ ಹೋಗಿಬಂದ ರಾಜಕಾರಣಿಗಳು ಅಲ್ಲಿಯ ಕಲಾವಿದರ ಸಮಾಧಿಗಳನ್ನು ನೋಡಿಕೊಂಡು ಬಂದು ಅವುಗಳ ಬಗ್ಗೆ ಸುದೀರ್ಘವಾಗಿ ಹೆಮ್ಮೆಯಿಂದ ಪ್ರಸ್ತಾಪ ಮಾಡುವಾಗಲೆಲ್ಲ ಬಸವಪ್ಪಶಾಸ್ತ್ರಿಗಳಂಥವರ ಸಮಾಧಿಗಳ ಶಿಥಿಲಸ್ಥಿತಿ ನಮ್ಮನ್ನು ಈಟಿಯಂತೆ ಇರಿಯುತ್ತಲೇ ಇರುತ್ತದೆ. ಯಾವುದೇ ಸ್ವಂತದ ಲಾಭ ದೊರಕದ ಸಾಂಸ್ಕೃತಿಕ ಮಹತ್ವ ಪಡೆಯುವ ಕಾರ್ಯ ನಮ್ಮ ದೇಶದಲ್ಲಿ ಅಷ್ಟೊಂದು ಸುಲಭವಾಗಿ ಆದೀತೇ ?

ಮಾನ್ಯ ನಂಜುಂಡಾರಾಧ್ಯರನ್ನು ಕುರಿತ ಇನ್ನೊಂದು ಸಂದರ್ಭವನ್ನು ನೆನೆಯದಿರಲು ನನಗೆ ಸಾಧ್ಯವೇ ಇಲ್ಲ. ಬೆಂಗಳೂರಿನ ನನ್ನ ಮನೆಗೆ ಬಂದಾಗೊಮ್ಮೆ ಅವರು ನನ್ನನ್ನು ತಮ್ಮ ಮನೆಗೆ ಆಹ್ವಾನಿಸಿದ್ದರೂ ವಿದ್ವಾಂಸರೂ, ಸುಸಂಸ್ಕೃತರೂ, ಸಾಹಿತಿಗಳೂ ಆದವರ ಮನೆಗೆ ಹೋಗುವುದು ಯಾವಾಗಲೂ ಹರ್ಷದಾಯಕವಾದ ವಿಷಯವೇ. ಸಾಹಿತ್ಯ ಪರಿಷತ್ತನ್ನು ಕನ್ನಡಿಗರ ಹೃದಯಕ್ಕೆ ಹತ್ತಿರ ತರುವ ಪ್ರಯತ್ನದಿಂದಾಗಿ ತಿಂಗಳಲ್ಲಿ ಸುಮಾರು ಹತ್ತರಿಂದ ಹದಿನೈದು ದಿನ ನಾಡಿನ ಉದ್ದಗಲಕ್ಕೂ ಸಂಚರಿಸಬೇಕಾಗುತ್ತಿತ್ತು. ನಂಜುಂಡಾರಾಧ್ಯರು ಇದನ್ನರಿಯದವರೇನೂ ಅಲ್ಲ. ಆದರೆ ಅವರು ನನ್ನನ್ನು ಅವರ ಮನೆಗೆ ಕರೆಸಿ ಕೊಂಡ ರೀತಿ ಮಾತ್ರ ವಿಶಿಷ್ಟವಾದದ್ದು. ಅವರು ನನ್ನನ್ನು ಅವರ ಮನೆಗೆ ಆಹ್ವಾನಿಸುವುದಕ್ಕಾಗಿಯೆ ನೆಪವೊಂದನ್ನು ಹುಡುಕಿಕೊಂಡಂತಿತ್ತು, ಅವರು ಬರೆದ ಪತ್ರ.

ಆ ಪ್ರಾರ್ಥನೆಯ ಪತ್ರವೇನೂ ದೊಡ್ಡಬೇಡಿಕೆಯ ಅಥವಾ ನನಗೆ ಇಕ್ಕಟ್ಟು ಅಥವಾ ಮುಜುಗರವನ್ನುಂಟುಮಾಡುವ ರೀತಿಯದಾಗಿರಲಿಲ್ಲ. ಅವರೇ ಬರೆದಿರುವ ಪರಮಹಂಸ

ಶ್ರೀಪತಿ ಪಂಡಿತಾಚಾರ್ಯರನ್ನು ಕುರಿತ ಕಾದಂಬರಿಯನ್ನು ಬಿಡುಗಡೆ ಮಾಡಬೇಕೆಂದು ಬಯಸಿದ್ದರು. ಆಶ್ಚರ್ಯ ಎಂದರೆ ನನಗೆ ಬಿಡುವಾದ ದಿನ ಸೂಚಿಸಿ ಮೈಸೂರಿಗೆ ಹೋಗಬೇಕು. ಬಿಡುಗಡೆ ಸಮಾರಂಭ ಅಲ್ಲಿ; ಆತ್ಮೀಯರೊಂದಿಗೆ ನಡೆಯುವ ಚಿಕ್ಕ ಮೈತ್ರಿಕೂಟ ಅದು ಎಂದು ಸೂಚಿಸಿದ್ದರು. ಅವರ ಸರಳತೆ ಸಜ್ಜನಿಕೆಗಳಿಗೆ ಮಾರುಹೋಗಿದ್ದ ನಾನು ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಸಿದ್ಧತೆಗಾಗಿ ಮೈಸೂರಿಗೆ ಆಗಾಗ ಹೋಗಿ ಬರಬೇಕಾಗುತ್ತಿದ್ದುದರಿಂದ ಒಂದು ದಿನ ಗೊತ್ತುಮಾಡಿ ತಿಳಿಸಿದೆ, ಆರಾಧ್ಯರೂ ಒಪ್ಪಿದರು.

ಮೈಸೂರು ಜಿಲ್ಲೆಯ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಪ್ರೊ॥ ಗಿರಿಗೌಡ ಹಾಗೂ ನಾನು ಇಬ್ಬರೂ ನಂಜುಂಡಾರಾಧ್ಯರಿಗೆ ತಿಳಿಸಿದ್ದ ಕಾಲಕ್ಕೆ ಸರಿಯಾಗಿ ಅವರ ಮನೆಗೆ ಹೋದೆವು.

ಶ್ರೀನಂಜುಂಡಾರಾಧ್ಯರು ಮನೆಯ ಬಾಗಿಲಲ್ಲೆ ನಿಂತಿದ್ದರು ತಮ್ಮ ಶ್ರೀಮತಿಯವರನ್ನು ಮತ್ತು ಕುಟುಂಬದವರನ್ನು ಪರಿಚಯಿಸಿದರು. ಮೊಗಸಾಲೆಗೆ ಕರೆದೊಯ್ದರು. ಅಲ್ಲಿ ಮತ್ತೊಂದು ಆಶ್ಚರ್ಯ ಕಾದಿತ್ತು, ಮನೆಗೆ ಬಂದಿದ್ದವರೆಲ್ಲ ಸಾಹಿತಿ ಮಿತ್ರರೇ. ಪ್ರೀತಿ ಅಭಿಮಾನಗಳಿಂದ ಸಿದ್ಧಪಡಿಸಿದ್ದ ಉಪಾಹಾರ ಅನಂತರ ಸಾಹಿತಿ ಮಿತ್ರರ ಮಧ್ಯೆ ಪುಸ್ತಕ ಬಿಡುಗಡೆಯ ಕಾರ್ಯಕ್ರಮ. ಡಾ॥ ಚದುರಂಗ ಕೂಡ ಅಲ್ಲಿದ್ದರು. ತುಂಬ ಅಭಿಮಾನದಿಂದ ಗ್ರಂಥಬಿಡುಗಡೆ ಮಾಡಿದೆ. ಇಷ್ಟು ಸರಳವಾದ ಸಮಾರಂಭದ ಅಫಿಷಿಯಲ್ ಫೋಟೋಗ್ರಾಫರ್ ಇಂದು ಕನ್ನಡ ಅಂಕಿಗಳ ಬಳಕೆಗಾಗಿ ತೀವ್ರ ಹೋರಾಟ ನಡೆಸಿರುವ ಅವರ ಪುತ್ರ ಪ್ರೊ॥ ಪಂಡಿತಾರಾಧ್ಯ.

ಸುಮಾರು ಎಪ್ಪತ್ತಕ್ಕೂ ಹೆಚ್ಚು ನಿಮಿಷಗಳು ಬಳಕೆ ಹೋದುದೇ ಯಾರ ಗಮನಕ್ಕೂ ಬರಲಿಲ್ಲ.(ಆ ಸುದ್ದಿ ಯಾವ ಪತ್ರಿಕೆಯಲ್ಲೂ ಬರಲಿಲ್ಲಾ, ಆಹ್ವಾನ ಪತ್ರಿಕೆ ಕೂಡ ಅಚ್ಚಾಗಿರಲಿಲ್ಲ) ಸಾಹಿತ್ಯ ಸಲ್ಲಾಪಕ್ಕಿರುವ ಶಕ್ತಿಯೇ ಅಂಥದ್ದು! ಅಷ್ಟಲ್ಲದೆ ಹೇಳಿದನೆ ಸುಭಾಷಿತಕಾರ.

*ಸಂಸಾರದ ವಿಷ ವೃಕ್ಷದೆ ಹಣ್ಣೆರಡಿವೆ ಅಮೃತೋಪ*
*ಕಾವ್ಯಾಮೃತದಾಸ್ವಾದನ ಮೇಣ್ ಸಜ್ಜನ ಸಲ್ಲಾಪ.**

ನಂಜುಂಡಾರಾಧ್ಯರನ್ನು ಕುರಿತ ಎರಡು ಪ್ರಸಂಗಗಳು ಇಂಥ ಸಜ್ಜನ ಸಲ್ಲಾಪಕ್ಕೆ ಸೇರಿದುವೆಂಬುದನ್ನು ನೆನೆದಾಗ ಹೆಮ್ಮೆಯಾಗುತ್ತದೆ. ವಿದ್ವತ್ತಿನೊಂದಿಗೆ ವಿನಯ ಬೆರೆತ ಸುಸಂಸ್ಕೃತವಾದ ಮನಸ್ಸೊಂದರ ನೆನಪು ಗುಂಗಾಗುತ್ತದೆ.

■

---

* ಈ ಅನುವಾದ ಕುವೆಂಪು ಅವರದು.

# ಗೆಳೆಯನ ಸವಿನೆನಪು

**ವಿದ್ವಾನ್ ಹ. ಜ. ಶಿವಶಂಕರಪ್ಪ**

---

ದೇವರು ತನಗೆ ಪ್ರಿಯರಾದವರನ್ನು ಬೇಗನೆ ಕರೆಸಿಕೊಳ್ಳುತ್ತಾನೆ ಎಂಬುದು ಅನುಭವಿಗಳ ಮಾತು. ಆಸ್ಥಾನ ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯರು ಅಕಾಲ ಮರಣಕ್ಕೆ ತುತ್ತಾದುದು ಇದನ್ನು ಸಮರ್ಥಿಸುತ್ತದೆ. ಲಕ್ಷಕ್ಕೊಬ್ಬರಿಗೆ ಲಭಿಸುತ್ತಿದ್ದ ಆಸ್ಥಾನ್ ವಿದ್ವಾನ್ ಪದವಿಯು ಎಂ.ಜಿ.ನಂಜುಂಡಾರಾಧ್ಯರಿಗೆ ನಡುವಯಸ್ಸಿನಲ್ಲಿಯೆ ಲಭಿಸಿದುದು ಸಮಾಜಕ್ಕೆ ಹೆಮ್ಮೆಯನ್ನು ತಂದಿತು. ಆದರೆ ಕೆಲವು ಕಾಲದಲ್ಲಿಯೆ ಲಿಂಗೈಕ್ಯರಾದುದು ಸಮಾಜಕ್ಕೆ ತುಂಬಲಾಗದ ನಷ್ಟವಾಗಿ ಪರಿಣಮಿಸಿತು. ಬಹುಕಾಲ ಅವರ ಒಡನಾಟದಲ್ಲಿದ್ದ ನಮಗಂತೂ ಇದು ಹೆಚ್ಚಿನ ದುಃಖವನ್ನುಂಟುಮಾಡಿದೆ. ಅವರ ಬದುಕಿನ ಗಮನಾರ್ಹ ಸಂಗತಿಗಳನ್ನು ನೆನಪು ಮಾಡಿಕೊಳ್ಳುವುದು ನನಗೆ ಸಂತೋಷದ ವಿಚಾರ.

ನಂಜುಂಡಾರಾಧ್ಯರು 'ಶ್ರೀಕರಭಾಷ್ಯ' ದಂತಹ ಬೃಹತ್ಕೃತಿಯನ್ನು ಸಂಪಾದಿಸಿ ಸಾಹಿತ್ಯಲೋಕಕ್ಕೆ ಅರ್ಪಿಸಿರುವರು. ಅವರು ನೂರಾರು ಗ್ರಂಥಗಳನ್ನು ರಚಿಸಿಯೂ ಹಲವಾರು ಲೇಖನಗಳನ್ನು ಬರೆದೂ ಸಾವಿರಾರು ಭಾಷಣಗಳನ್ನು ಮಾಡಿಯೂ ಜನರ ಮೆಚ್ಚುಗೆಯನ್ನು ಪಡೆದಿದ್ದರು. ಬಹುಮುಖ ಪ್ರತಿಭೆಯ ಅವರು ಖ್ಯಾತಿವೆತ್ತ ವಿದ್ವಾಂಸರ ಪ್ರಶಂಸೆಗೆ ಪಾತ್ರರಾಗಿದ್ದರು. ಮೈಸೂರು ಮಹಾರಾಜಾ ಸಂಸ್ಕೃತ ಮಹಾ ಪಾಠಶಾಲೆಯಲ್ಲಿ

ಪ್ರಾಧ್ಯಾಪಕರಾಗಿದ್ದು ಸಾವಿರಾರು ಮಂದಿಗೆ ಜ್ಞಾನದಾನ ಮಾಡಿದ್ದರು. ವೀರಶೈವ ಸಾಹಿತ್ಯ ಪ್ರಪಂಚಕ್ಕೆ ಇವರಿಂದ ಸಂದ ಸೇವೆ ಪ್ರಶಂಸನೀಯವಾದುದಾಗಿತ್ತು. ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ ಪಾರಂಗತರಾದ ಅವರು ಆ ಕ್ಷೇತ್ರದಲ್ಲಿ ಅನುಪಮ ಪಾಂಡಿತ್ಯ ಪಡೆದಿದ್ದರು. ಕನ್ನಡ ನಾಡು-ನುಡಿಗಳಿಗೆ ಅನೇಕ ರೀತಿಯ ಸೇವೆ ಸಲ್ಲಿಸಿ ಸಾರ್ಥಕ ಜೀವನಕ್ಕೆ ಸಾಕ್ಷಿಯಾಗಿ ಧನ್ಯರಾಗಿದ್ದರು. ಮಡಿವಂತಿಕೆಯ ಜೀವನ ನಡೆಸುತ್ತಿದ್ದ ಅವರನ್ನು ಬೆಂಗಳೂರು ಚಿಕ್ಕಪೇಟೆಯಲ್ಲಿರುವ ಶ್ರೀಮಂತ ರುದ್ರಪ್ಪನವರು ತಮ್ಮ ಮನೆಯಲ್ಲಿಯೇ ಹತ್ತು ವರುಷಗಳ ಕಾಲ ಇರಿಸಿಕೊಂಡಿದ್ದರು. ಇವರ ವೃದ್ಧ ತಾಯಿಯವರು ಅವರನ್ನು ಸ್ವಾಮಿಗಳಂತೆಯೇ ಕಾಣುತ್ತಿದ್ದರು.

ಇವರು ವೀರಶೈವ ಸಮಾಜಕ್ಕಾಗಿ, ಅದರ ಒಗ್ಗಟ್ಟಿಗಾಗಿ, ಸರ್ವಾಂಗೀಣ ಪ್ರಗತಿಗಾಗಿ ಅವಿಸ್ಮರಣೀಯ ಸೇವೆ ಸಲ್ಲಿಸಿರುವರು. ಬೆಂಗಳೂರಿನಲ್ಲಿ ಬಸವ ಜಯಂತಿಯನ್ನು ಪ್ರಾರಂಭಿಸಿದವರು ಇವರೇ ಎಂದರೆ ತಪ್ಪಾಗಲಾರದು. ಇವರ ಮಿತ್ರರಲ್ಲಿ ಪ್ರಮುಖರಾಗಿದ್ದ ಬಿ.ನಂಜುಂಡಪ್ಪನವರು, ಶಿವಾನಂದ ಶರ್ಮರು, ಟಿ. ಎನ್. ಮಹದೇವಯ್ಯನವರು ಮತ್ತು ನಾನು ಇವರ ಪ್ರಯತ್ನಕ್ಕೆ ಬೆಂಬಲ ಕೊಟ್ಟೆವು. ಯಜಮಾನ್ ಅಂಡ್ ಸನ್ಸ್‌ರವರು ಇವರ ಪ್ರಯತ್ನವನ್ನು ಶ್ಲಾಘಿಸಿ ಬಸವ ಜಯಂತಿಗೆ ಬೇಕಾಗುವಷ್ಟು ಹಣ ಸಹಾಯವನ್ನು ಮಾಡಿದರು. ಉದಾರದಾನಿಗಳಾದ ಇವರ ಉದಾರತೆಯಿಂದಾಗಿ ನಾವು ಇತರರಲ್ಲಿ ಚಂದಾ ಬೇಡುವ ಶ್ರಮ ತಪ್ಪಿತು. ಮೊದಲನೆಯ ಬಸವಜಯಂತಿ ಕಾರ್ಯಕ್ರಮ ಅಭೂತಪೂರ್ವವಾಗಿ ಕೊನೆಗೊಂಡಿತು. ಮುಂದಿನ ಹಲವು ವರ್ಷಗಳು ಇದೇ ರೀತಿಯಲ್ಲಿ ಈ ದಾನಿಗಳ ಕೃಪಾಶ್ರಯದಿಂದ ಬಸವ ಜಯಂತಿ ನಡೆಯಿತು.

1941ರಲ್ಲಿ ಬೆಂಗಳೂರಿನ ಸರ್ಪಭೂಷಣ ಮಠಕ್ಕೆ ಉತ್ತರಾಧಿಕಾರಿಯನ್ನು ತರುವ ಪ್ರಯತ್ನ ನಡೆಯಿತು. ಚಿತ್ರದುರ್ಗದ ಜಗದ್ಗುರುಗಳವರು ತಮ್ಮಲ್ಲಿದ್ದ ಮಹಾದೇವ ಸ್ವಾಮಿಗಳೆಂಬ ವಟುವನ್ನು ಆ ಸ್ಥಾನಕ್ಕಾಗಿ ಕಳುಹಿಸಿಕೊಟ್ಟರು. ಅವರ ಜೊತೆಯಲ್ಲಿ ಲಚ್ಚಪ್ಪ ಎಲಗಾರ್ ಎಂಬ ಬಿ.ಎ., ಪದವೀಧರರು ಇರುತ್ತಿದ್ದರು. ಅವರು ವಚನಶಾಸ್ತ್ರ ಪಾರಂಗತರು ; ಅದ್ಭುತ ವಾಗ್ಮಿಗಳು. ಪಟ್ಟಾಧಿಕಾರ ಸಂದರ್ಭ ಹಾಗೂ ಅನಂತರ ಅವರಿಂದ ಹಲವಾರು ಭಾಷಣಗಳಾದವು ಜಸ್ಟೀಸ್ ಮಹಾದೇವಯ್ಯನವರು ಅವರನ್ನು ಕರ್ನಾಟಕದ ವಿವೇಕಾನಂದ ಎಂದು ಬಾಯ್ತುಂಬ ಹೊಗಳಿದುದು ನನ್ನ ಮನಃಪಟಲದಲ್ಲಿ ಇಂದಿಗೂ ಉಳಿದಿದೆ. ಶ್ರೀಮಾನ್ ನಂಜುಂಡಾರಾಧ್ಯರು ಅವರ ಭಾಷಣಕ್ಕೆ ಮಾರುಹೋಗಿ, ನಮ್ಮಲ್ಲಿ ಆಲೋಚಿಸಿ 'ವೀರಶೈವ ಸಮಾಜೋದ್ಧಾರಕ ಸಂಘ' ವೆಂಬ ಸಂಸ್ಥೆಯನ್ನು ಸ್ಥಾಪಿಸಿ, ಬೆಂಗಳೂರಿನ ಹಲವಾರು ಸ್ಥಳಗಳಲ್ಲಿ ಅವರ ಭಾಷಣಗಳಾಗುವಂತೆ ಮಾಡಿದರು. ಮತ್ತು ಆ ಸಂಘದ ಹೆಸರಿನಲ್ಲಿ ವೀರಶೈವ ಸಮಾಜದ ಉನ್ನತಿಗೆ ಹಾಗೂ ಐಕ್ಯತೆಗೆ ಸಂಬಂಧಪಟ್ಟ ಹತ್ತಾರು

ಲೇಖನಗಳನ್ನು ಮೈಸೂರಿನ 'ಸ್ಟಾರ್' ಪತ್ರಿಕೆಯಲ್ಲಿ ಪ್ರತಿವಾರವೂ ತಪ್ಪದೆ ಪ್ರಕಟಿಸತೊಡಗಿದರು.

೧೯೪೪ರ ಸುಮಾರಿನಲ್ಲಿ ಅಮೆರಿಕದ ತರುಣಿಯೊಬ್ಬಳು ಕಾರಣಾಂತರದಿಂದ ಭಾರತಕ್ಕೆ ಬಂದು ಸಬರ್ಮತಿ ಆಶ್ರಮದಲ್ಲಿ ಗಾಂಧೀಜಿಯವರ ದರ್ಶನ ಪಡೆದು ತನ್ನನ್ನು ದೇಶ ಸೇವೆಗಾಗಿ ವಿನಿಯೋಗಿಸಿಕೊಳ್ಳಬೇಕೆಂದು ಪ್ರಾರ್ಥಿಸಿದಳು. ಗಾಂಧೀಜಿಯವರು ಪರೀಕ್ಷಾರ್ಥವಾಗಿ ಆಕೆಯು ಬೆಂಗಳೂರಿನಲ್ಲಿ ಕೆಲವು ಕಾಲ ಗ್ರಾಮನಿರ್ಮಲೀಕರಣ ಕಾರ್ಯ ಮಾಡುವ ಸಲಹೆ ಮಾಡಿದರು.

ಆ ಅಮೆರಿಕನ್ ತರುಣಿ ಬೆಂಗಳೂರಿಗೆ ಬಂದು ವೆಸ್ಟ್ ಎಂಡ್ ಹೋಟೆಲಿನಲ್ಲಿ ಬಿಡಾರ ಹೂಡಿ ಸಿಟಿಮಾರ್ಕೆಟ್ ಸುತ್ತಮುತ್ತಲಿನ ಶುಚೀಕರಣ ಕಾರ್ಯ ಕೈಗೊಳ್ಳುವ ದಿವಸವನ್ನು ಪತ್ರಿಕೆಯಲ್ಲಿ ಪ್ರಕಟಿಸಿದಳು. ಅದನ್ನು ಓದಿದ ಯುವಕರಾದ ನಾವುಗಳು ಆ ಕಾರ್ಯದಲ್ಲಿ ಭಾಗಿಗಳಾಗುವ ತೀರ್ಮಾನಕ್ಕೆ ಬಂದೆವು. ನಂಜುಂಡಾರಾಧ್ಯರು ಮಡಿವಂತಿಕೆಯವರಾಗಿದ್ದರಿಂದ ಅವರನ್ನು ಹೊರತುಪಡಿಸುವುದು ನಮ್ಮೆಲ್ಲರ ಇಷ್ಟವಾಗಿದ್ದಿತು. ಆದರೆ ಅದಕ್ಕೆ ಅವರು ಒಪ್ಪಲಿಲ್ಲ. ಗ್ರಾಮನೈರ್ಮಲ್ಯದ ಕೆಲಸ ಮುಗಿಸಿ ಮನೆಗೆ ಬಂದು ಸ್ನಾನ ಮಾಡಿದರಾಯಿತು ಎಂದು ನಮ್ಮೆಲ್ಲರನ್ನು ಒಪ್ಪಿಸಿ ಕಾರ್ಯರಂಗಕ್ಕೆ ಧುಮುಕಿದರು. ಚಿಕ್ಕಪೇಟೆಯ ರುದ್ರಪ್ಪನವರ ಮನೆಯಲ್ಲಿ ನಾವೆಲ್ಲರೂ ಬೆಳಗಿನ ಏಳುಗಂಟೆಗೆ ಕೂಡಿ ಅಮೆರಿಕದ ಮಹಿಳೆಯೊಡನೆ ಹೊರಡುವುದೆಂದು ತೀರ್ಮಾನಿಸಿದೆವು. ಗೊತ್ತಾದ ದಿವಸ ನಮ್ಮಂತೆ ಇನ್ನೂ ಹತ್ತಾರು ಮಂದಿ ಯುವಕರು ಅಲ್ಲಿ ನೆರೆದರು. ಸಿಲೋನಿನ ಬೌದ್ಧಧರ್ಮದ ಪ್ರಚಾರಕನೊಬ್ಬನು ಶ್ರೀಮಾನ್ ರುದ್ರಪ್ಪನವರನ್ನು ಪ್ರಚೋದಿಸಿ ಸಿಲೋನ್ ಪ್ರವಾಸಕ್ಕೆ ಅವರನ್ನು ಹುರಿದುಂಬಿಸುತ್ತಿದ್ದನು. ಅವರ ಮಹಡಿಯ ಒಂದು ಕೊಠಡಿಯಲ್ಲಿ ವಾಸಿಸುತ್ತಿದ್ದ ಅವನಿಂದ ನಮ್ಮ ಶುಚೀಕರಣದ ಪ್ರಾರಂಭೋತ್ಸವವಾಯಿತು. ನಾವು ಒಬ್ಬೊಬ್ಬರೂ ಒಂದೊಂದು ಮಕ್ಕರಿ ಮತ್ತು ಕಸಬರಿಕೆ ಹಿಡಿದು ನೈರ್ಮಲ್ಯದ ಕೆಲಸವನ್ನು ಮಾಡಿ ಎರಡು ಗಂಟೆಗಳ ನಂತರ ನಮ್ಮ ನಮ್ಮ ಮನೆಗಳಿಗೆ ಹಿಂತಿರುಗುತ್ತಿದ್ದೆವು. ಇದು ಎರಡು ತಿಂಗಳು ನಿರಂತರವಾಗಿ ನಡೆಯಿತು.

ಶ್ರೀ ಸಿದ್ಧಗಂಗಾ ಮಠಕ್ಕೆ ನೂತನ ಸ್ವಾಮಿಗಳನ್ನು ಆಯ್ಕೆ ಮಾಡಲಾಯಿತು. ಆ ಮಠಕ್ಕೆ ಉತ್ತರಾಧಿಕಾರಿಗಳಾದವರು ಶ್ರೀ ಶಿವಣ್ಣನವರು. ಅವರು ಗುಬ್ಬಿ ತೋಟದಪ್ಪನವರ ಛತ್ರದಲ್ಲಿ ನಮ್ಮ ಜೊತೆಯಲ್ಲಿ ವಿದ್ಯಾರ್ಥಿಗಳಾಗಿದ್ದರು. ಅವರು ನಿತ್ಯವೂ ಬೆಳಿಗ್ಗೆ ನಾಲ್ಕೂವರೆ ಗಂಟೆಗೆ ಎದ್ದು ತಣ್ಣೀರಿನಲ್ಲಿ ಸ್ನಾನ ಮಾಡಿ ಪತ್ರೆ ಪುಷ್ಪಗಳನ್ನು ಕೊಯ್ದುತಂದು ಲಿಂಗ ಪೂಜೆ ಮಾಡುತ್ತಿದ್ದರು. ಪಟ್ಟಾಧಿಕಾರಕ್ಕೆ ಹಿಂದಣ ದಿವಸವೇ ನಂಜುಂಡಾರಾಧ್ಯರಾದಿಯಾಗಿ ನಾವೆಲ್ಲರೂ ಹೋಗಿದ್ದೆವು. ಪಟ್ಟಾಧಿಕಾರವು ವೈಭವದಿಂದ ಜರುಗಿತು. ಆ ದಿವಸ ಶ್ರೀ ಎಲೆಗಾರ್‌ರವರೂ ಅಮೆರಿಕದ ಮಹಿಳೆಯೂ ಪಟ್ಟಾಧಿಕಾರ ಸಮಾರಂಭದಲ್ಲಿ ಹಾಜರಿದ್ದರು.

ಎಲೆಗಾರ್‌ರವರಿಗೆ ಅದಕ್ಕೆ ಸ್ವಲ್ಪ ದಿವಸಗಳ ಹಿಂದೆಯೇ ಧಾರವಾಡದಲ್ಲಿ ಲಿಂಗಧಾರಣೆಯಾಗಿದ್ದಿತು. ಆ ಸಮಾರಂಭಕ್ಕೆ ನಾವೆಲ್ಲರೂ ಹೋಗಿದ್ದೆವು. ಎಲೆಗಾರ್‌ರವರಿಗೆ ಕುಮಾರಸ್ವಾಮಿಗಳೆಂಬ ನೂತನ ನಾಮಧೇಯವನ್ನು ಇಡಿಸಿದೆವು. ಅವರು ಸಿದ್ಧಗಂಗೆಯಲ್ಲಿ ಮಠದ ಮುಂದಣ ಬಂಡೆಯ ಮೇಲೆ ಕುಳಿತು ಶುಶ್ರಾವ್ಯವಾಗಿ ಸರ್ಪಭೂಷಣರ ಹಾಡುಗಳನ್ನು ಹಾಡಿದುದು ಮತ್ತು ಅಮೆರಿಕನ್ ಮಹಿಳೆಯು ಹಿಂದೂಗಳಂತೆ ಬಾಳೆಯ ಎಲೆಯಲ್ಲಿ ಪ್ರಸಾದ ಸ್ವೀಕರಿಸಿದುದು ನಮ್ಮ ಸ್ಮೃತಿಯಿಂದ ಇನ್ನೂ ಮಾಸದೆ ಇದೆ. ಕುಮಾರ ಸ್ವಾಮಿಗಳು ಮುಂದೆ ಧಾರವಾಡದ ನವಕಲ್ಯಾಣ ಮಠದ ಸ್ವಾಮಿಗಳಾದುದು ನಮ್ಮ ಚಟುವಟಿಕೆಗಳ ಫಲವಾಗಿದ್ದಿತು.

ಶ್ರೀಮಾನ್ ನಂಜುಂಡಾರಾಧ್ಯರು ಸಂಸ್ಕೃತ ಪಾಠಶಾಲೆಯಿಂದ ಪಂಡಿತರಾಗಿ ಹೊರಬಂದ ಮೇಲೆ ಯಾವುದಾದರೊಂದು ಕೆಲಸವನ್ನು ಹುಡುಕತೊಡಗಿದರು. ಆವಾಗ ನಾನು ಕೊಳ್ಳೇಗಾಲದಲ್ಲಿ ಪ್ರೌಢಶಾಲೆಯ ಕನ್ನಡ ಪಂಡಿತನಾಗಿದ್ದೆ. ಆ ಶಾಲೆಯನ್ನು ನಮ್ಮ ಮಾವನವರಾದ ಗುರುಕಾರ್ ವೀರಪ್ಪನವರ ಧನಸಹಾಯದಿಂದ ಕಟ್ಟಿಸಲಾಗಿದ್ದಿತು ಮತ್ತು ಅದು ಕೊಯಮತ್ತೂರು ಜಿಲ್ಲಾ ಬೋರ್ಡಿಗೆ ಸೇರಿದ್ದಿತು. ಆ ಶಾಲೆಯಲ್ಲಿ ಸಂಸ್ಕೃತ ಶಿಕ್ಷಣ ಕೊಡಲು ತಮಿಳು ಪಂಡಿತರೊಬ್ಬರು ನೇಮಕವಾಗಿದ್ದರು. ಜಿಲ್ಲಾ ಬೋರ್ಡಿನಲ್ಲಿ ನನಗೆ ಸಾಕಷ್ಟು ಪ್ರಭಾವವಿದ್ದುದರಿಂದ ಆ ಹುದ್ದೆಗೆ ತಮ್ಮನ್ನು ನೇಮಕ ಮಾಡುವಂತೆ ಪ್ರಯತ್ನಿಸಬೇಕೆಂಬುದು ಅವರ ಆಸೆಯಾಗಿದ್ದಿತು. ಆದರೆ ಅದು ನನಗೆ ಸರಿತೋರಲಿಲ್ಲ. ತಮಿಳು ವಿದ್ವಾಂಸರನ್ನು ವರ್ಗಾಯಿಸಿ ಆ ಸ್ಥಳಕ್ಕೆ ಕನ್ನಡಿಗರಾದ ಇವರನ್ನು ನೇಮಿಸುವಂತೆ ತಮಿಳು ಅಧಿಕಾರಿಗಳನ್ನು ಪ್ರೇರೇಪಿಸುವುದು ಅಷ್ಟು ಸುಲಭದ ಮಾತಾಗಿರಲಿಲ್ಲ. ಅಲ್ಲದೆ ಕೊಳ್ಳೇಗಾಲದ ಪ್ರೌಢಶಾಲೆಯು ನಮ್ಮ ಸ್ನೇಹಿತರ ಘನತೆಗೆ ತಕ್ಕುದಾಗಿರಲಿಲ್ಲ. ಆದ್ದರಿಂದ ಅವರಿಗೆ ಮೈಸೂರಿನ ಸಂಸ್ಕೃತ ಪಾಠಶಾಲೆಯಲ್ಲೇ ಕೆಲಸ ಕೊಡಿಸುವ ಪ್ರಯತ್ನ ಮಾಡುವೆನೆಂದು ಮಾತು ಕೊಟ್ಟು ಅವರನ್ನು ಒಪ್ಪಿಸಲಾಯಿತು. ಅಷ್ಟೇ ಅಲ್ಲ, ನಾನೇ ಮೊಕ್ತಾ ಹೋಗಿ ಕಾಲೇಜು ಅಧಿಕಾರಿಗಳ ಮೇಲೆ ಪ್ರಭಾವ ಬೀರಿ ಕೆಲವೇ ದಿವಸಗಳಲ್ಲಿ ಅವರಿಗೆ ಅಲ್ಲಿ ಕೆಲಸ ಸಿಗುವಂತೆ ಮಾಡಿದೆನು. ಸಂತೋಷದ ಸಂಗತಿಯೆಂದರೆ, ನನ್ನ ಮಾನ್ಯ ಮಿತ್ರರು ತಮ್ಮ ಪಾಂಡಿತ್ಯದ ಫಲವಾಗಿ ಉತ್ತರೋತ್ತರ ಅಭಿವೃದ್ಧಿ ಹೊಂದಿ, ಸಂಸ್ಕೃತ ಕಾಲೇಜಿನ ಪ್ರಾಧ್ಯಾಪಕರೂ ಆದುದು. ಇದು ಆಗಿನ ಕಾಲಕ್ಕೆ ಪ್ರತಿಷ್ಠಿತ ಗೌರವ. ನಂಜುಂಡಾರಾಧ್ಯರು ಸಂಸ್ಕೃತ ಕಾಲೇಜಿನ ಪ್ರಾಧ್ಯಾಪಕರಾಗಿದ್ದರೂ, ಪೌರೋಹಿತ್ಯ ವೃತ್ತಿಯನ್ನು ಉಪಕಸುಬಾಗಿ ಮಾಡಿಕೊಂಡಿದ್ದರು. ಅದಕ್ಕೆ ಕಾರಣವು, ನಮ್ಮ ಸಮಾಜದಲ್ಲಿ ಆ ಕಾಲದಲ್ಲಿದ್ದ ಪುರೋಹಿರಲ್ಲಿ ಕೆಲವರು ಬಡವರು ಬಲ್ಲಿದರೆನ್ನದೆ ಪೌರೋಹಿತ್ಯದ ಹೆಸರಿನಲ್ಲಿ ಸುಲಿಗೆ ಮಾಡುತ್ತಿದ್ದರು. ಇದನ್ನು ತಪ್ಪಿಸಿ, ಆ ಕ್ಷೇತ್ರದಲ್ಲಿ ಸುಧಾರಣೆಯನ್ನು ತರುವುದು ನಂಜುಂಡಾರಾಧ್ಯರ ಉದ್ದೇಶವಾಗಿದ್ದಿತು. ಬ್ರಾಹ್ಮಣ ಸಮಾಜದಲ್ಲಿ ಬಡವರ ಶುಭಾಶುಭ ಕಾರ್ಯಗಳನ್ನು ಪುರೋಹಿತವರ್ಗದವರು ಉಚಿತವಾಗಿ ನೆರವೇರಿಸಿ ಕೊಡುತ್ತಿದ್ದುದು ಆರಾಧ್ಯರಿಗೆ ತಿಳಿದ ವಿಷಯ. ಆ ಉದಾರ ಬುದ್ಧಿ ನಮ್ಮವರಿಗೆ

ಏಕೆ ಬಾರದು ? ಎಂಬುದು ಅವರ ಮನಸ್ಸಿನಲ್ಲಿ ಬಹುಕಾಲ ಕೊರೆಯುತ್ತಿದ್ದುದೇ ಇವಕ್ಕೆ ಕಾರಣವಾಗಿರಬೇಕು. ಆದರೆ ಇಷ್ಟು ದಿವಸಗಳಾದರೂ ಅವರ ಆದರ್ಶವು ಫಲ ಕೊಡದಿರುವುದು ವ್ಯಸನಕರ.

ನಂಜುಂಡಾರಾಧ್ಯರ ಸಾಹಿತ್ಯ ಸೃಷ್ಟಿ ವಿಪುಲವಾದುದು. ಅವರು ತಮ್ಮ ಕೃತಿಗಳನ್ನು ಬೇರೆಯವರ ಮುದ್ರಣಾಲಯಗಳಲ್ಲಿ ಅಚ್ಚುಮಾಡಿಸುತ್ತಿದ್ದರು. ಇದರಿಂದ ಅವರಿಗೆ ಕಾಲವ್ಯಯವೂ ಹಣವ್ಯಯವೂ ಮಿತಿಮೀರಿ ಆಗುತ್ತಿತ್ತು. ಇದನ್ನು ತಪ್ಪಿಸಲು ಅವರು ಸ್ವತಂತ್ರವಾಗಿ ಒಂದು ಅಚ್ಚುಕೂಟವನ್ನೇ ಸ್ಥಾಪಿಸಿದರು. ಸ್ವಯಂವಿದ್ವಾಂಸರೂ, ಅಚ್ಚಿನ ಕೆಲಸದಲ್ಲಿ ಪರಿಣತರೂ ಆಗಿದ್ದುದರಿಂದ ಬೇರೆಯವರೂ ತಮ್ಮ ಪುಸ್ತಕಗಳನ್ನು ಇವರ ಮುದ್ರಣಾಲಯದಲ್ಲಿ ಮುದ್ರಿಸಲು ಬರತೊಡಗಿದರು. ಈ ಕೆಲಸದ ಒತ್ತಡ ಹೆಚ್ಚಾದಾಗ ತಮ್ಮಿಂದ ಸಾಧ್ಯವಿಲ್ಲವೆಂದು ಬಂದವರನ್ನು ನಿರಾಶರಾಗಿ ಹಿಂತಿರುಗಿಸುವುದು ಆರಾಧ್ಯರಿಗೆ ಒಗ್ಗದುದಾಗಿತ್ತು. ಇದರಿಂದಾಗಿ ಅವರು ಮುದ್ರಣಾಲಯದಲ್ಲಿ ಅಹರ್ನಿಶಿ ದುಡಿಯಬೇಕಾಗಿ ಬಂದಿತು. ತಾವಾಗಿಯೇ ತಂದುಕೊಂಡ ಈ ತಲೆನೋವನ್ನು ನಿವಾರಿಸಲು ಮುಂದೆ ಬಂದವರೆಂದರೆ ಅವರ ಧರ್ಮಪತ್ನಿಯವರು. ಅವರು ಅಚ್ಚಿನ ಕೆಲಸದ ಒಂದಂಶವನ್ನು ತಾವೇ ವಹಿಸಿಕೊಂಡರು ಮತ್ತು ಮಕ್ಕಳಿಗೂ ವಹಿಸಿದರು. ಗೃಹಕೃತ್ಯದೊಂದಿಗೆ ಮುದ್ರಣಾಲಯದ ವ್ಯವಹರಣೆಯನ್ನೂ ಅವರು ವಹಿಸಿಕೊಂಡರು. ತಮ್ಮ ಪತಿ ರಚಿಸಿದ್ದ ಗ್ರಂಥಗಳ ಪೂರ್ಣ ಪರಿಚಯ ಈ ನೆಪದಲ್ಲಿ ಅವರಿಗಾಯಿತು. ಪತ್ನಿಯು ಪತಿಯ ಅರ್ಧಾಂಗಿ ಎಂಬುದು ಅನ್ವರ್ಥನಾಮವಾಗುವಂತೆ ಅವರು ನಡೆದುಕೊಂಡರು.

ನಾನು 'ಸಾಲೂರ ಜ್ಯೋತಿರ್ಮಾಲೆ' ಎಂಬ ಕೃತಿರಚನೆ ಮಾಡುತ್ತಿದ್ದಾಗ ಅದರಲ್ಲಿ ಬರುವ ಪ್ರಧಾನ ವ್ಯಕ್ತಿಗಳಾದ ಸಾಲೂರ ಸ್ವಾಮಿಗಳ ಅಂತ್ಯಕ್ರಿಯೆ ಹಾಗೂ ಉತ್ತರಕ್ರಿಯೆಗಳನ್ನು ಶಾಸ್ತ್ರೀಯವಾಗಿ ವರ್ಣಿಸಬೇಕೆಂಬುದು ನನ್ನ ಆಸೆಯಾಗಿದ್ದಿತು. ಆದರೆ ಆ ವಿಷಯಗಳ ಬಗೆಗೆ ನನಗೆ ಸಾಕಷ್ಟು ಪರಿಚಯವಿರಲಿಲ್ಲ. ನಂಜುಂಡಾರಾಧ್ಯರು ಆ ವಿಷಯಗಳನ್ನು ಕುರಿತು ಒಂದು ಗ್ರಂಥವನ್ನೇ ರಚಿಸಿದ್ದರು. ಅದು ನೆನಪಾಗಿ ನಾನು ಅವರ ಮನೆಗೆ ಹೋದೆ. ಆರಾಧ್ಯರು ಮನೆಯಲ್ಲಿರಲಿಲ್ಲ. ಅವರು ಪತ್ನಿಯವರು ನನ್ನ ಬಂದ ಕಾರಣ ತಿಳಿದು, ತಂಪು ಪಾನೀಯವನ್ನು ನನಗೆ ಕುಡಿಯಲು ಕೊಟ್ಟು, ಒಳಗೆ ಹೋಗಿ ಸಂಬಂಧಪಟ್ಟ ಪುಸ್ತಕವನ್ನು ತಂದುಕೊಟ್ಟರು. ನಾನು ಹಣ ಕೊಡಲು ಮುಂದಾದಾಗ ಅದನ್ನು ನಿರಾಕರಿಸುತ್ತ "ನೀವು ಮಾದೇಶ್ವರರ ಬಗೆಗೆ ಬಹುಕಾಲದಿಂದಲೂ ದುಡಿಯುತ್ತಿರುವ ಹಿರಿಯರು, ಈ ಪುಸ್ತಕ ನಿಮಗೆ ನಮ್ಮ ನಮ್ರ ಕಾಣಿಕೆ" ಎಂದರು. ನಾನು ಅವರಿಗೆ ಕೃತಜ್ಞತೆ ಸಲ್ಲಿಸಿ ಹೊರ ಬಂದೆ.

ಈ ಘಟನೆ ಸಂಭವಿಸಿ ಒಂದು ವರ್ಷವೂ ಆಗಿಲ್ಲ. ದೂರದರ್ಶನದಲ್ಲಿ ನಂಜುಂಡಾರಾಧ್ಯರು ಲಿಂಗೈಕ್ಯರಾದ ಸುದ್ದಿ ಬಂದಿತು. ಆ ಸುದ್ದಿ ನನಗೆ ಆಘಾತವನ್ನು ತಂದಿತು ಪ್ರೀತಿಯ ಗೆಳೆಯನ ಅಂತ್ಯಕ್ರಿಯೆಯಲ್ಲಿ ನಾನು ಭಾಗವಹಿಸಿ ಅಶ್ರುತರ್ಪಣವಿತ್ತು ಬಂದೆ.

ನನಗೀಗ 85 ವರ್ಷ. ನನ್ನ ಗೆಳೆಯರಾರೂ ಈಗ ಉಳಿದಿಲ್ಲ. ಆರಾಧ್ಯರಿಗೂ ಮೊದಲೇ ಶಿವಾನಂದಶರ್ಮರೂ ಮಹಾದೇವಯ್ಯನವರೂ ಲಿಂಗೈಕ್ಯರಾಗಿದ್ದರು. ಒಂದು ತಿಂಗಳ ಹಿಂದೆ ನನ್ನ ಸಹಪಾಠಿ ಕನಕಪುರದ ಬಿ. ನಂಜುಂಡಪ್ಪನವರೂ ಲಿಂಗೈಕ್ಯರಾದರು. ಈ ಆತ್ಮೀಯ ಮಿತ್ರರೊಡನಾಡಿದ ದಿನಗಳನ್ನು ನೆನಪು ಮಾಡಿಕೊಳ್ಳುತ್ತಾ ನಾನು ಮಾತ್ರ ಉಳಿದಿದ್ದೇನೆ.



# ಶ್ರೀ ಎಂ.ಜಿ. ನಂಜುಂಡಾರಾಧ್ಯರು

**ಡಾ॥ ಚದುರಂಗ**

---

೧೯೪೪ರಲ್ಲಿ ನನಗೆ ನಂಜುಡಾರಾಧ್ಯರ ಪರಿಚಯವಾಯ್ತು. ಆಗ ಅವರು ಬೆಂಗಳೂರಿನಲ್ಲಿದ್ದರು. ಅ.ನ. ಕೃಷ್ಣರಾಯರ ಮನೆಯಲ್ಲಿ ನನಗೆ ಅವರ ಪರಿಚಯವಾಯ್ತು. ಅವರನ್ನು ನೋಡಿದ ಕೂಡಲೇ ನನಗೆ ಅವರ ಬಗ್ಗೆ ಗೌರವ, ಪೂಜ್ಯ ಭಾವನೆಯುಂಟಾಯಿತು. ಅವರು ನನಗಿಂತ ೭-೮ ವರ್ಷ ಹಿರಿಯರು. ಅವರ ಮೇಲಿನ ಗೌರವ ಪ್ರೀತಿಯಾಗಿ ಬೆಳೆಯಿತು. ಅವರು ನನ್ನನ್ನೂ ಅಷ್ಟೇ ಪ್ರೀತಿಯಿಂದ ಕಂಡರು. ಅ.ನ. ಕೃಷ್ಣರಾಯರು ಆರಾಧ್ಯರ ಬಗ್ಗೆ "ಕನ್ನಡ ಕುಲ ರಸಿಕರು" ಮಾಲೆಯಲ್ಲಿ ಬರೆದ ಲೇಖನವನ್ನು ನನಗೆ ಓದಿ ತೋರಿಸಿದರು. ಅವರಿಗೆ ಆರಾಧ್ಯರನ್ನು ಕಂಡರೆ ಅಪಾರ ಗೌರರ ಪ್ರೀತಿ ಆರಾಧ್ಯರು ಅವರ ಮನೆಗೆ ಬಂದಾಗ ಹಣ್ಣುಹಾಲು ಕೊಡುತ್ತಿದ್ದರು. ಅ.ಸ. ಕೃಷ್ಣರಾಯರು ತಾವು ಹೋಗುವ ಕಡೆಗಳಿಗೆಲ್ಲ ಆರಾಧ್ಯರನ್ನು ಕರೆದುಕೊಂಡು ಹೋಗುತ್ತಿದ್ದರು. ಕೃಷ್ಣರಾಯರು ಜನರನ್ನು ಮಂತ್ರ ಮುಗ್ಧರಾಗಿಸುವ ಮಾತುಗಾರರು. ಆರಾಧ್ಯರು ವಿದ್ವತ್‌ಪೂರ್ಣವಾಗಿ ಮಾತನಾಡುತ್ತಿದ್ದರು. ಇದರಿಂದ ಒಂದು ಸಮತೋಲನ ಏರ್ಪಡುತ್ತಿತ್ತು. ಅವರೊಟ್ಟಿಗೆ ನಾನೂ ಹೋಗುತ್ತಿದ್ದೆ. ಅವರ ಭಾಷಣಗಳ ಜೊತೆ ನನಗೂ ನಾಲ್ಕು ಮಾತನಾಡುವಂತೆ ಪ್ರೋತ್ಸಾಹಿಸುತ್ತಿದ್ದರು. ನಾನು ಅವರಿಬ್ಬರಷ್ಟು ಮಾತುಗಾರನಲ್ಲ ಏನೋ ಒಂದಿಷ್ಟು ಮಾತನಾಡುತ್ತಿದ್ದೆ ಅಷ್ಟೆ.





ನಂಜುಂಡಾರಾಧ್ಯರು ೧೯೫೭ರಲ್ಲಿ ಹಿರಿಯೂರಿನಲ್ಲಿ ನಡೆದ ಪ್ರಗತಿಶೀಲ ಸಮ್ಮೇಳನಕ್ಕೆ ಬಂದಿದ್ದರು. ಆಗ ನಾನು ಹಳ್ಳಿಯಲ್ಲಿದ್ದೆ. ಮೈಸೂರಿಗೆ ಬಂದಿದ್ದಾಗ ಗೆಳೆಯರಾದ ಗೋಪಾಲಕೃಷ್ಣ ಅಡಿಗರು ಸಿಕ್ಕು ಹಿರಿಯೂರು ಸಮ್ಮೇಳನದ ಬಗ್ಗೆ ಹೇಳಿದರು. 'ಹೋಗೋಣ ನಡೆಯಿರಿ' ಎಂದು ಒತ್ತಾಯಿಸಿರು. ರಾತ್ರಿ ರೈಲಿನಲ್ಲಿ ಪ್ರಯಾಣ ಮಾಡಲು ನನಗೆ ಉತ್ಸಾಹವಿರಲಿಲ್ಲ. 'ನಾನು ಬರುವುದಿಲ್ಲ ನೀವು ಹೋಗಿ' ಎಂದೆ. ಆದರೆ ಅಡಿಗರು ಬಿಡಲಿಲ್ಲ. 'ಇದು ವಿಶಿಷ್ಟವಾದ ಸಮ್ಮೇಳನ ಹೋಗ್ಲೇ ಬೇಕು ಬನ್ನಿ' ಎಂದರು. ನಾವಿಬ್ಬರು ರಾತ್ರಿ ರೈಲಿನಲ್ಲಿ ಹೋದೆವು. ಬೆಳಗ್ಗೆ ಹಿರಿಯೂರು ತಲುಪಿದಾಗ ಬಿಡಾರದ ಹೊರಗಡೆ ದೇವುಡು ನರಸಿಂಹಶಾಸ್ತ್ರಿಗಳು ಮಲಗಿದ್ದರು. ನಾನು ದೇವುಡು ಅವರನ್ನು ಪರಿಚಯ ಮಾಡಿಕೊಂಡದ್ದು ಅಲ್ಲಿಯೇ. ಒಳಗಡೆ ಹಜಾರದಲ್ಲಿ ನಂಜುಂಡಾರಾಧ್ಯರು, ಕೃಷ್ಣರಾಯರು, ನಾಡಿಗೇರಿ ಕೃಷ್ಣರಾಯರು, ಅರ್ಚಕ ವೆಂಕಟೇಶ, ಕುಮಾರ ವೆಂಕಣ ತ.ರಾ.ಸು., ನಿರಂಜನ, ಬಸವರಾಜ ಕಟ್ಟೀಮನಿ, ಮಾನಾ. ಚೌಡಪ್ಪ, ಮ. ಶ್ರೀಧರಮೂರ್ತಿ, ಜಿ. ಬಸವರಾಜ್ ಮೊದಲಾದವರ ಒಂದು ಗುಂಪೇ ಇತ್ತು. ಆಗಿನ ಕಾಲದ ಪ್ರಗತಿ ಶೀಲರೆನ್ನಿಸಿಕೊಂಡವರೆಲ್ಲ ಬಂದಿದ್ದರು. ಅದರಲ್ಲಿ ನಂಜುಂಡಾರಾಧ್ಯರು ಬಂದಿದ್ದು ಬಹಳ ವಿಶೇಷ. ನನಗೆ ತಿಳಿದ ಮಟ್ಟಿಗೆ ಪ್ರಗತಿಶೀಲ ಚಳುವಳಿಗೆ ಅವರಿಗೂ ಸಂಬಂಧವಿಲ್ಲ. ಅ.ನ. ಕೃಷ್ಣರಾಯರ ಸ್ನೇಹ ಅವರನ್ನು ಅಲ್ಲಿಗೆ ಕರೆ ತಂದಿತ್ತು. ಆರಾಧ್ಯರು ಸಾಹಿತ್ಯದ ಕೆಲಸ ಮಾಡುತ್ತಿರುವವರನ್ನು ನಿಷ್ಕಳಂಕ ಪ್ರೀತಿಯಿಂದ ಕಾಣುತ್ತಿದ್ದರು. ಅವರದು ಮುಕ್ತಮನಸ್ಸು. ಪ್ರಗತಿ ಶೀಲ ಚಳುವಳಿ, ಕನ್ನಡದ ಬಗ್ಗೆ ಜನರಲ್ಲಿ ಜಾಗೃತಿಯನ್ನು ಅಭಿಮಾನವನ್ನು ಹುಟ್ಟಿಸುತ್ತಿದ್ದುದೂ ಇನ್ನೊಂದು ಕಾರಣ.

ನಂಜುಂಡಾರಾಧ್ಯರು ಸಂಸ್ಕೃತ ಪಂಡಿತರು, ದಿಗ್ಗಜ. ಅವರು ಕನ್ನಡವನ್ನು ಅಷ್ಟೇ ಪ್ರೀತಿ ಮಾಡುತ್ತಿದ್ದರು. ತಮ್ಮ ಈಚಿನ ಪೀಳಿಗೆಯವರ ಪುಸ್ತಕಗಳನ್ನೂ ಓದುತ್ತಿದ್ದರು. ಇಲ್ಲಿ ವಿಶೇಷವೆಂದರೆ ಆಗ ಬಸವರಾಜ ಕಟ್ಟೀಮನಿ ಮಠಾಧಿಪತಿಗಳನ್ನು ಟೀಕಿಸಿ ಬಹಳ ಉಗ್ರವಾಗಿ ಬರೆಯುತ್ತಿದ್ದರು. ಅದನ್ನು ಆರಾಧ್ಯರು ಬೇಸರವಿಲ್ಲದೆ ಓದಿ ಅವರನ್ನು ಸ್ವಂತ ತಮ್ಮನಂತೆ ಮಾತನಾಡಿಸುತ್ತಿದ್ದರು. ನಾನು ತಿಳಿದಂತೆ ಅವರು ಕಟ್ಟೀಮನಿಯವರೊಂದಿಗೆ ಯಾವುದೇ ಬೇಧಭಾವ ಮಾಡುತ್ತಿರಲಿಲ್ಲ. ಅವರನ್ನು ಕೀಳಾಗಿ ಕಾಣುತ್ತಿರಲಿಲ್ಲ. ಆ ದೃಷ್ಟಿಯಲ್ಲಿ ಅವರು ಪ್ರಗತಿಶೀಲರು. ಅವರು ಕೃಷ್ಣರಾಯರನ್ನು ಎಷ್ಟೋ ಒಪ್ಪುತ್ತಿರಲಿಲ್ಲ. ಆದರೆ ಅದು ಅವರ ಸ್ನೇಹಕ್ಕೆ ಚ್ಯುತಿ ತರಲಿಲ್ಲ. ಕೃಷ್ಣರಾಯರ ಬಗ್ಗೆ ಎಷ್ಟೋ ಟೀಕೆಗಳು ಬಂದಾಗ ಆರಾಧ್ಯರು ಆ ಕುರಿತು ಅವರ ಜತೆ ಮಾತನಾಡುತ್ತಿರಲಿಲ್ಲ. ಕೃಷ್ಣರಾಯರ ಬಗ್ಗೆ ಅವರು ಹೇಳುತ್ತಿದ್ದ ಮಾತೆಂದರೆ, ''ಕೃಷ್ಣರಾಯರು ವಿಶಾಲ ಮನೋಭಾವದ ಮನುಷ್ಯರು, ಯಾರನ್ನು ದ್ವೇಷಿಸದ ಮನುಷ್ಯರು, ಅವರು ಉಜ್ವಲ ಕನ್ನಡ ಪ್ರೇಮಿ''. ಕೃಷ್ಣರಾಯರಿಗೆ ಆರಾಧ್ಯರ ಬಗ್ಗೆ ಗೌರವ ಇರುವುದಕ್ಕೆ ಕಾರಣ ಆರಾಧ್ಯರ ಕನ್ನಡಪ್ರೇಮ. ಅವರ ಕನ್ನಡ ಪ್ರೇಮಕ್ಕೆ ಕೃಷ್ಣರಾಯರು ಕಾರಣ.

ಆನಂತರ ನಾನು ಅವರನ್ನು ನೋಡಿದ್ದು ಬೆಂಗಳೂರಿಗೆ ದೇವುಡು ಅವರ ಮನೆಯಲ್ಲಿ ಅವರು ನಂಜುಂಡಾರಾಧ್ಯರ ಜೊತೆಯಲ್ಲಿ ವೇದಾಂತ ವಿಷಯಗಳ ಬಗ್ಗೆ ಚರ್ಚೆ ಮಾಡುತ್ತಿದ್ದರು. ಅವರಿಬ್ಬರ ಚರ್ಚೆಯಲ್ಲಿ ನನಗೆ ಪ್ರವೇಶವಿರಲಿಲ್ಲ. ಸುಮ್ಮನೆ ಕೇಳುತ್ತಿದ್ದೆ. ಈ ನೆನಪು ನನಗೆ ಮಹತ್ವದ್ದು. ಅಂದು ದೇವುಡು ಅವರು ತಮ್ಮ ಕಾದಂಬರಿಯ ಹಸ್ತಪ್ರತಿಯನ್ನು ನನ್ನ ಕೈಯಲ್ಲಿ ಇರಿಸಿ ''ಇದಕ್ಕೆ ಒಂದು ಶೀರ್ಷಿಕೆ ಕೊಡಪ್ಪ'' ಎಂದರು. ಒಂದೆರಡು ಪುಟಗಳನ್ನು ಓದಿದೆ 'ನಿರುತ್ತರ' ಎಂಬ ಪದವಲ್ಲಿ ಮತ್ತೆ ಮತ್ತೆ ಪುನರಾವರ್ತನೆಯಾಗುತ್ತಿತ್ತು.

''ಕೈಯಲ್ಲಿ ಬೆಣ್ಣೆ ಇಟ್ಟುಕೊಂಡು ತುಪ್ಪಕ್ಕೆ ಹುಡುಕುತ್ತಿದ್ದೀರಲ್ಲ ಶೀರ್ಷಿಕೆ ಕಾದಂಬರಿಯಲ್ಲೇ ಇದೆ 'ನಿರುತ್ತರ' ಎಂದೆ. ದೇವುದು ಅವರಿಗೆ ಸಂತೋಷವಾಯ್ತು ''ಇದು ನನಗೆ ಹೊಳೆದೆ ಇರಲಿಲ್ಲವಲ್ಲ'' ಎಂದರು. ನಂಜುಂಡಾರಾಧ್ಯರು ನಕ್ಕರು. ಆಮೇಲೆ ಆ ಶೀರ್ಷಿಕೆಯನ್ನು ಕಾದಂಬರಿಗೆ ಇಟ್ಟರೋ ಇಲ್ಲವೋ ನೆನಪಿಲ್ಲ. ಆದರೆ ನನಗೆ ಅದು ಅವರಿಬ್ಬರ ಪ್ರೀತಿಯ ನೆನಪಾಗಿ ಉಳಿದಿದೆ.

ನಂಜುಂಡಾರಾಧ್ಯರು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿದ್ದರು. 'ಕನ್ನಡ ನುಡಿಯ' ಸಂಪಾದಕರಾಗಿದ್ದರು. ಪರಿಷನ್ಮಂದಿರದಲ್ಲಿ ನಡೆಯುವ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದರು. ಅವರಿಗೆ ಆಗಿನ ಕನ್ನಡದ ಹಿರಿಯ ಲೇಖಕರ ಒಡನಾಟವಿತ್ತು. ಅವರು ಬಿ.ಎಂ.ಶ್ರೀ.ಯವರ ಜೊತೆ ಓಡಾಡುತ್ತಿದ್ದುದನ್ನು ನೋಡುತ್ತಿದ್ದೆ. ಆಗ ನಾನಿನ್ನು ಕಣ್ಣು ತೆರೆಯುತ್ತಿದ್ದೆ. ಡಿ.ವಿ. ಗುಂಡಪ್ಪನವರು ವಿ.ಸೀ., ಜಿ.ಪಿ. ರಾಜರತ್ನಂ, ಬಿ. ಪುಟ್ಟಸ್ವಾಮಯ್ಯ, ಸಿ.ಕೆ. ವೆಂಕಟರಾಮಯ್ಯ, ಎಂ.ಆರ್. ಶ್ರೀನಿವಾಸಮೂರ್ತಿ, ಮೊದಲಾದವರ ಜೊತೆ ಅವರಿಗೆ ಸಂಪರ್ಕವಿತ್ತು. ಕೆ.ಎನ್. ಧರಣೇಂದ್ರಯ್ಯನವರು ಅವರಿಗೆ ತುಂಬಾ ಕೇವಲ, ವ್ಯಾಕರಣತೀರ್ಥ ಚಂದ್ರಶೇಖರಶಾಸ್ತ್ರಿಗಳ ಸಂಪರ್ಕವೂ ಅವರಿಗೆ ಇತ್ತು.

ಅವರು ಮೈಸೂರಿಗೆ ಬಂದಮೇಲೆ ರಾಜಾರಾಂ ಅಗ್ರಹಾರದಲ್ಲೇ ವಾಸಿಸುತ್ತಿದ್ದರು. ನಾನು ಹಳ್ಳಿಯಿಂದ ಬಂದಾಗಲೆಲ್ಲ ಅವರ ಮನೆಗೆ ಹೋಗಿ ಬರುತ್ತಿದ್ದೆ. ಅವರಿಗೆ ಮೈಸೂರಿನಲ್ಲಿ ತ.ರಾ.ಸು. ಆನಂದ, ಕೂಡಲಿ ಚಿದಂಬರಂ ಅವರ ಸ್ನೇಹವಾಯಿತು. ಗೋಪಾಲಕೃಷ್ಣ ಅಡಿಗರ ಸ್ನೇಹ ಬೆಂಗಳೂರಿನಲ್ಲಿದ್ದಾಗಲೇ ಬೆಳೆದಿತ್ತು. ರಾಮರಾಯರ ಪ್ರೆಸ್‌ನಲ್ಲಿ ನಾವೆಲ್ಲ ಸೇರುತ್ತಿದ್ದೆವು. ಆರ್.ಎಸ್. ನಾಯ್ಡು, ಡಿ.ವಿ.ಕೆ. ಮೂರ್ತಿ ಇವರಲ್ಲಿ ಸೇರುತ್ತಿದ್ದರು. ಈಗ ದೊಡ್ಡಗಡಿಯಾರದ ಎದುರು ಇರುವ ಕಾಫಿ ಅಂಗಡಿಯಲ್ಲಿ ಆಗ ಹಣ್ಣಿನ ರಸ ಕೊಡಿಸುತ್ತಿದ್ದರು. ನಂತರದ ದಿನಗಳಲ್ಲಿ ದಾಸ್‌ಪ್ರಕಾಶ್ ಹೋಟೆಲ್‌ನಲ್ಲಿ ಸೇರುತ್ತಿದ್ದೆವು. ಆರಾಧ್ಯರು ನಮ್ಮ ಜೊತೆ ಭಾಗವಹಿಸುತ್ತಿದ್ದರು.

ನಂಜುಂಡಾರಾಧ್ಯರು ಸಂಪ್ರದಾಯಸ್ಥರು. ಅವರಿಗೆ ಸ್ತ್ರೀಯರ ಬಗ್ಗೆ ಸಾಂಪ್ರದಾಯಿಕ ಗೌರವ ಮಾತ್ರ ಇರಲಿಲ್ಲ ಅವರನ್ನು ತುಂಬಾ ಪ್ರೀತಿಯಿಂದಲೂ ಕಾಣುತ್ತಿದ್ದರು. ನನ್ನ ಹೆಂಡತಿಗೆ ಈ ಬಗ್ಗೆ ತುಂಬಾ ಸಂತೋಷವಿತ್ತು. ಅವಳಿಗೆ ಅವರ ಬಗ್ಗೆ ಅಷ್ಟೇ ಪ್ರೀತಿ ಗೌರವಗಳಿತ್ತು.

ನಾವು ಅವರ ಮನೆಗೆ ಆಗಾಗ್ಗೆ ಹೋಗುತ್ತಿದ್ದೆವು. ಇದು ಎರಡು ಕುಟುಂಬಗಳ ಬಗ್ಗೆ ಸ್ನೇಹವಾಗಿ ಬೆಳೆಯಿತು. ನನ್ನ ಮಗ ವಿಕ್ರಮ ಮತ್ತು ಅವರ ಮಗ ಪಂಡಿತ ಮಹಾರಾಜ ಕಾಲೇಜಿನಲ್ಲಿ ಸಹಪಾಠಿಗಳಾದಾಗ ಈ ಬಾಂಧವ್ಯ ಇನ್ನೊಂದು ಘಟ್ಟ ತಲುಪಿತು. ಇದರಿಂದ ಅವರ ಮನೆಗೆ ಹೋಗಿ ಬರುವುದು ಹೆಚ್ಚಿತು. ಆರಾಧ್ಯರು ಮಕ್ಕಳಿಗೆ ಹಳಗನ್ನಡ, ಕಾವ್ಯ, ವ್ಯಾಕರಣ, ವಚನಗಳ ಪಾಠ ಹೇಳುತ್ತಿದ್ದರು. ನಾನೇ ಆಸಕ್ತಿಯಿಂದ ಅವರ ಜೊತೆ ಕುಳಿತು ಕೇಳುತ್ತಿದ್ದೆ ಕಲಿಯುತ್ತಿದ್ದೆ.

ನಾವೆಲ್ಲ ಒಮ್ಮೆ ಕೃಷ್ಣರಾಜ ಸಾಗರಕ್ಕೆ ನಮ್ಮ ಕಾರಿನಲ್ಲಿ ಪ್ರವಾಸ ಹೊರಟೆವು. ಬೃಂದಾವನ ಹತ್ತಿರವಾಗುತ್ತಿದ್ದಂತೆ ಇದ್ದಕ್ಕಿದ್ದಂತೆ ಒಬ್ಬ ರಸ್ತೆ ಬದಿಯಿಂದ ರಸ್ತೆ ಮಧ್ಯೆ ನುಗ್ಗಿ ಕಾರಿಗೆ ಡಿಕ್ಕಿ ಹೊಡೆದುಕೊಂಡು ಬಿದ್ದ. ಅವನಿಗೆ ತುರ್ತು ಚಿಕಿತ್ಸೆ ಕೊಡಿಸಿದ ಮೇಲೆ ಅವನು ಪೂರ್ತಿ ಗುಣವಾಗುವವರೆಗೆ ಅವನನ್ನು ಆರಾಧ್ಯರು ಮತ್ತು ಮನೆಯವರು ತಮ್ಮ ಮನೆಯಲ್ಲಿ ಇರಿಸಿಕೊಂಡು ಉಪಚರಿಸಿದರು. ಅದನ್ನು ನಾನು ಎಂದಿಗೂ ಮರೆಯುವಂತಿಲ್ಲ.

ನನ್ನ ಮಗ ಅನಾರೋಗ್ಯದಿಂದ ಆಸ್ಪತ್ರೆಯಲ್ಲಿದ್ದಾಗ ಪಂಡಿತನಂತೂ ಆಸ್ಪತ್ರೆಯಲ್ಲಿಯೇ ಮಲಗುತ್ತಿದ್ದ. ಅವನ ತಂಗಿ ಪ್ರಭಾ ನಮಗೆ ಊಟ ಉಪಚಾರಗಳನ್ನು ನೋಡಿಕೊಳ್ಳುತ್ತಿದ್ದಳು. ಅದೇ ಆಸ್ಪತ್ರೆಯಲ್ಲಿ ಓದುತ್ತಿದ್ದ ಅವರ ಮಗ ವಿಜಯಕುಮಾರ್ ನಮಗೆ ಅಷ್ಟೇ ಧೈರ್ಯ ನೀಡಿದ. ಅವರ ಮನೆಯವರೆಲ್ಲ ನಮಗೆ ನೀಡಿದ ಸಹಾಯ ಮರೆಯುವಂತದ್ದಲ್ಲ.

ನನ್ನ ಹೆಂಡತಿ ಕ್ಯಾನ್ಸರ್‌ನಿಂದ ನರಳುವುದನ್ನು ನೋಡುವುದು ಆರಾಧ್ಯರಿಗೆ ಅತ್ಯಂತ ದುಃಖದ ವಿಷಯವಾಗಿತ್ತು. ಅವಳು ಆಸ್ಪತ್ರೆಯಲ್ಲಿದ್ದಾಗ ಅವರ ಮಗಳು ಪ್ರಭಾ ಪ್ರತಿನಿತ್ಯ ಮಧ್ಯಾಹ್ನ ನಮಗೆ ಊಟ ತಂದು ಉಪಚರಿಸುತ್ತಿದ್ದಳು. ಆಗಲೇ ಅವರ ಮಗ ಪಂಡಿತ ಮಂಗಳೂರಿನಲ್ಲಿದ್ದ. ನನ್ನ ಮಗ ವಿಕ್ರಮ ಓದಿಗಾಗಿ ಅಣ್ಣಾಮಲೈಗೆ ಹೋಗುವುದು ಅನಿವಾರ್ಯವೆಂಬಂತಾಯ್ತು. ಆಗ ಆರಾಧ್ಯರು ನನಗೆ ನೀಡಿದ ಸಾಂತ್ವನ, ಸ್ಥೈರ್ಯಗಳು ಹೆಣೆದುಕೊಳ್ಳಲು ಆರಾಧ್ಯರ ಅಂತಃಕರಣ ಕಾರಣವಾಯ್ತು.

ನಂಜುಂಡಾರಾಧ್ಯರು "ಪರಮಹಂಸ ಶ್ರೀಪತಿ ಪಂಡಿತಾರಾಧ್ಯ" ಎಂಬ ಸೊಗಸಾದ ಕಾದಂಬರಿಯನ್ನು ಬರೆದರು ನಾನು ಅದನ್ನು ಓದಿ ನಾಲ್ಕು ಮಾತುಗಳನ್ನು ಬರೆದು ಕೊಡಬೇಕೆಂದು ಅವರ ಅಪೇಕ್ಷೆ. ನನಗೆ ಆ ಕೃತಿಯ ಬಗ್ಗೆ ಬರೆಯುವಷ್ಟು ಯೋಗ್ಯತೆ ಇಲ್ಲ ಎಂದು ಹೇಳಿದೆ "ಪ್ರೀತಿಯಿಂದ ನಾಲ್ಕು ಮಾತು ಬರೆಯಿರಿ" ಎಂದರು ನಾನು ಬರೆದೆ. ಆ

ಕಾದಂಬರಿಯನ್ನು ಅವರಿಗೆ ಮನೆಯಲ್ಲಿ ನಡೆದ ಸರಳ ಸಮಾರಂಭದಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಆಗಿನ ಅಧ್ಯಕ್ಷರಾದ ಡಾ|| ಜಿ. ಸಿದ್ಧಲಿಂಗಯ್ಯನವರ ಅಮೃತ ಹಸ್ತದಿಂದ ಬಿಡುಗಡೆ ಮಾಡಿದರು. ಆ ಸಮಾರಂಭದಲ್ಲಿ ನಾನೂ ಮಾತನಾಡಿದೆ.

ಅವರ ಕೊನೆಯ ದಿನಗಳಲ್ಲಿ ಬರೆದ ನಾಟಕವನ್ನು ನನ್ನಲ್ಲಿ ಬಂದು ಚರ್ಚಿಸುತ್ತಿದ್ದರು. ಅವರ ಆರೋಗ್ಯ ಕೆಡುತ್ತಾ ಹೋಯಿತು. ಅವರನ್ನ ಆಸ್ಪತ್ರೆಯಲ್ಲಿ ನೋಡುತ್ತಿದ್ದೆ. ಒಂದು ದಿನ ಅವರು ನಮ್ಮಿಂದ ಮರೆಯಾಗಿ ಹೋದರು. ಅವರ ಆಶೀರ್ವಾದ ನಮ್ಮನ್ನು ಮುನ್ನಡೆಸುತ್ತಿದೆ ಎಂದುಕೊಂಡಿದ್ದೇನೆ, ಏಕೆಂದರೆ ಯಾರೂ ತೀರಿಕೊಂಡಿರುವುದಿಲ್ಲ. ನಾವು ನೆನೆಸಿಕೊಂಡರೆ ಅವರು ಇದ್ದಾರೆ. ಇಲ್ಲದಿದ್ದರೆ ಇಲ್ಲ. ಆ ದೃಷ್ಟಿಯಿಂದ ಅವರು ಸದಾ ನಮ್ಮ ನೆನಪಿನಲ್ಲಿ ಹಸಿರಾಗಿದ್ದಾರೆ. ಅವರ ನೆನಪು ನನಗೆ ಪುಣ್ಯಸ್ಮರಣೆ.

■

# ಆಸ್ಥಾನ ವಿದ್ವಾನ್ ನಂಜುಂಡಾರಾಧ್ಯರು

ಡಾ|| ಬಿ. ನಂಜುಂಡಸ್ವಾಮಿ

---

೧೯೮೩-೮೪ ರ ಸುಮಾರು ಬಳ್ಳಾರಿ ಹತ್ತಿರದ ಚಳ್ಳಗುರ್ಕಿ ಎರ್ರಿತಾತನ ಆರಾಧನಾ ಮಹೋತ್ಸವದಲ್ಲಿ ಭಾಗವಹಿಸಲು ಚಳ್ಳಗುರ್ಕಿಗೆ ನಾನು ಹೋದಾಗ ಮೂಲ ಗದ್ದಿಗೆಯಲ್ಲಿ ಶಾಸ್ತ್ರಿಗಳು ಸಸ್ವರ ಮಹಾನ್ಯಾಸ ಪ್ರಯೋಗ ಪೂರ್ವಕವಾಗಿ ರುದ್ರಾಭಿಷೇಕವನ್ನು ಮಾಡುತ್ತಾ ಇದ್ದರು. ಅವರ ಜೊತೆಗೆ ಅವರ ಶಿಷ್ಯರೊಬ್ಬರು ಸಹ ಇದ್ದು ಆ ಪರಿಸರವೆ ಒಂದು ತರಹದ ಶಿವಮಯವಾಗಿತ್ತು ಅಂದರೆ ತಪ್ಪಾಗಲಾರದು. ಲಿಂ|| ಚಳ್ಳಗುರ್ಕಿ ಎರ್ರಿತಾತನ ಸೇವೆ ಮಾಡಿದ ಶಾಮಣ್ಣನವರ ಮಗ ಚಂದ್ರಶೇಖರವರು ನಂಜುಂಡರಾಧ್ಯರನ್ನು ಚಳ್ಳಗುರ್ಕಿಗೆ ಕರೆದುಕೊಂಡು ಬಂದಿದ್ದರು. ನನಗೆ ಚಂದ್ರಶೇಖರರವರ ಮಗ ಅಲ್ಲಿ ಪರಿಚಯವಾಗಿ ಶಾಸ್ತ್ರಿಗಳು ಯಾರು ಎಂದು ಕೇಳಿದೆ ''ನಂಜುಂಡಾರಾಧ್ಯರು'' ಎಂದು ಕಿವಿಗೆ ಬಿದ್ದ ತಕ್ಷಣ ಬಹಳ ಸಂತೋಷ ಪಟ್ಟೆ. ರುದ್ರಾಭಿಷೇಕ ಮುಗಿದ ನಂತರ ಅಷ್ಟೋತ್ತರ, ರಾಜೋಪಚಾರವನ್ನು ಕ್ರಮಬದ್ಧವಾಗಿ ಮಾಡಿ ಮಹಾಮಂಗಳಾರತಿಯ ನಂತರ ಆರಾಧ್ಯರ ಪರಿಚಯ ಮಾಡಿಕೊಂಡೆ. ನನ್ನ ಮನೆತನದವರ ಪರಿಚಯ ಅವರಿಗಿದ್ದುದರಿಂದ ಅವರು ನನ್ನ ನೋಡಿ ಬಹಳ ಸಂತೋಷ ಪಟ್ಟರು. ನಂತರ ಭೋಜನ ಅಂದರೆ 'ಗಣಸಮಾರಾಧನೆ' ಜೊತೆಯಲ್ಲಿ ನಡೆಯಿತು. ಆ ದಿನ ಕುಂಭಾಭಿಷೇಕ ಸಹ ನಡೆದುದರಿಂದ ಒಂದು ದೊಡ್ಡ ಶಿವಪೂಜಾ ವಸ್ತ್ರವನ್ನು ಸಹ ನನಗೆ ಆಶೀರ್ವಾದ ಮಾಡಿ ಕೊಟ್ಟರು. ನಾನು ಸಂಜೆ ಬಳ್ಳಾರಿಗೆ ಹೊರಟು ಬಂದೆ. ಮರುದಿನ ಬಳ್ಳಾರಿಗೆ ಆರಾಧ್ಯರೂ

ಬಂದು ಬೆಂಗಳೂರು ಬಸ್ ಹತ್ತಿದರು. ಹೀಗೆ ಆರಾಧ್ಯರ ಮತ್ತು ನನ್ನ ಪ್ರಥಮ ಭೇಟಿ. ಆರಾಧ್ಯರು ತುಮಕೂರು ಹತ್ತಿರದ ಹರಳೂರು ವೀರಭದ್ರನ ಮೇಲೆ ಸುಪ್ರಭಾತ ರಚನೆ ಮಾಡಿದ್ದು ಅದರ ಬಿಡುಗಡೆ ಕಾರ್ಯಕ್ರಮಕ್ಕೆ ನಾನು ಹೋಗಬೇಕಾಗಿದ್ದು ಹೋಗಲು ಸಾಧ್ಯವಾಗಲಿಲ್ಲ. ಹೋಗಿದ್ದರೆ ೧೯೬೦ ರ ಸುಮಾರಿನಲ್ಲೇ ಆರಾಧ್ಯರ ಪರಿಚಯವಾಗುತ್ತಾ ಇತ್ತು.

ನಮ್ಮ ಹಿರಿಯರು ಕೋಲಾರ ಜಿಲ್ಲೆ ಹೊಸೂರಿನವರು. ಹಿಂದೆ ಅಲ್ಲಿ ಇದ್ದ ಶ್ರೀ ವೀರಭದ್ರಸ್ವಾಮಿ ಅರ್ಚಕರಾಗಿ ವೃತ್ತಿ ನಡೆಸುತ್ತಾ ಇದ್ದವರು. ಕಾಲಕ್ರಮೇಣ ತುಮಕೂರು ಜಿಲ್ಲೆಗೆ ವಲಸೆ ಬಂದರು. ಗೌರಿಬಿದನೂರು ಸುತ್ತ ಮುತ್ತ ಇದ್ದ ನಮ್ಮ ಬಂಧುಗಳ ಪರಿಚಯ ಆರಾಧ್ಯರಿಗೆ ಇತ್ತು. ನಮ್ಮ ವಂಶಸ್ಥರು ಸಿಡುಮಾಮಿಡಿ ಮಠಕ್ಕೆ ನಡೆದುಕೊಳ್ಳುತ್ತ ಇದ್ದುದರಿಂದ ನಮ್ಮ ಹಿರಿಯರ ಪರಿಚಯ ಅವರಿಗೆ ಇತ್ತು.

ಬಳ್ಳಾರಿಯಲ್ಲಿ ವಿದ್ಯಾಭ್ಯಾಸ ಮಾಡುತ್ತಾ ಇದ್ದುದರಿಂದ ಆರಾಧ್ಯರು ಚಳ್ಳಗುರ್ಕಿಗೆ ಬಂದಾಗಲೆಲ್ಲಾ ಅವರನ್ನು ಮಾತನಾಡಿಸಲು ಹೋಗುತ್ತಿದೆ. ಮುಂಜಾನೆ ಪೂಜಾ ಕಾರ್ಯಕ್ರಮದಲ್ಲಿ ತಲ್ಲೀನರಾಗಿದ್ದರೆ ಜೋಳದರಾಶಿ ದೊಡ್ಡನಗೌಡರ ಜೊತೆ ಸಂಜೆ ಶಿವಾನುಭವ ಗೋಷ್ಠಿಯಲ್ಲಿ ಪಾಲುಗೊಳ್ಳುತ್ತಾ ಇದ್ದರು. ಹಿರಿಯ ಶಿವಾನುಭವಿಗಳ ಜೊತೆ ವಿಶೇಷವಾಗಿ ಚರ್ಚೆ ಮಾಡುತ್ತಾ ಇದ್ದರು, ಅವರ ಜೊತೆ ಇರುವುದೆ ನನಗೆ ಒಂದು ತರಹ ಖುಶಿ ಕೊಡುತ್ತಾ ಇತ್ತು. ಹೀಗೆ ಚಳ್ಳಗುರ್ಕಿಯಲ್ಲಿ ಸಂಜೆ ವಾಯುಸಂಚಾರಕ್ಕೆ ಹೊರಟಾಗ 'ದಲಿತರ ಒಂದು ಸಭೆ' ನಡೆಯುತ್ತಾ ಇತ್ತು. ನನ್ನನ್ನು ಏನು ಅದು ವಿಚಾರಿಸಿಕೊಂಡು ಬಾ ಎಂದು ಹೇಳಿದರು. ಅವರಿಗೆ ವಿಷಯವನ್ನು ವೇದ್ಯ ಮಾಡಿದ ಮೇಲೆ ಆ ಸಭೆಗೆ ದಯಮಾಡಿಸಿ ಚಾತುರ್ವರ್ಣದ ಬಗ್ಗೆ ವಿಶೇಷವಾದ ಉಪನ್ಯಾಸವನ್ನು ಕೊಟ್ಟು ನಾನು ಒಂದು ಪುಸ್ತಕ ಬರೆದಿದ್ದೇನೆ. ಅದು ಮೂರು ಸಾವಿರ ಮಠದಿಂದ ಮುದ್ರಣಗೊಂಡಿದೆ. ನೀವುಗಳು ಅದನ್ನು ಓದಬೇಕು ಅಂತ ಹೇಳಿ ಅನೇಕ ಶ್ಲೋಕಗಳನ್ನು ವಚನಗಳನ್ನು ಉದಾಹರಣೆ ಕೊಟ್ಟರು. ಅಲ್ಲಿ ನೆರೆದಿದ್ದ ಬಳ್ಳಾರಿ ದಲಿತ ಯುವಕರಿಗೂ ಮತ್ತು ಹಿರಿಯರಿಗೂ ಇವರ ಭಾಷಣವನ್ನು ಕೇಳಿ ತುಂಬಾ ಸಂತೋಷವಾಯಿತು ವಂದನಾರ್ಪಣೆಯಲ್ಲಿ ವಿಶೇಷವಾಗಿ ಆರಾಧ್ಯರ ಭಾಷಣದ ಬಗ್ಗೆ ಪ್ರಸ್ತಾಪಿಸಿದ್ದು ನನ್ನ ಕಣ್ಣಿಗೆ ಕಟ್ಟಿದ ಹಾಗೆ ಇದೆ.

ಆರಾಧ್ಯರ ಜೊತೆ ಬಳ್ಳಾರಿ ''ಮರಿಸ್ವಾಮಿಗಳ ಮಠದಲ್ಲಿ'' ಶ್ರೀ ಜ.ಚ.ನಿ. ಸನ್ನಿಧಿಯವರು ಮುಕ್ಕಾಂ ಮಾಡಿದ್ದರು. ನಾನು ಬಳ್ಳಾರಿ ಮರಿಸ್ವಾಮಿಗಳ ಮಠದ ಮರಿಸ್ವಾಮಿಗಳಿಗೆ ಹೇಳಿ ಮಠದಲ್ಲಿದ್ದ ಪ್ರಾಚೀನ ಶಿವಪೂಜಾ ಪರಿಕರಗಳು ರಾಜೋಪಚಾರದ ವಿಶೇಷ ಸಾಮಾನುಗಳನ್ನು ತೋರಿಸಿದೆ. ಒಬ್ಬ ಹುಡುಗ ಒಂದು ವಿಶೇಷ ಅಧ್ಯಯನ ಮಾಡುವಷ್ಟು ಸಾಮಗ್ರಿ ಇರುವುದರ ಬಗ್ಗೆ ನೋಡಿ ಬಹಳ ಸಂತೋಷಪಟ್ಟರು. ನಂತರ ನಾನು ಅವರು

ವೀರಶೈವ ಕಲ್ಯಾಣ ಮಂಟಪದಲ್ಲಿ ಧಾರವಾಡ ಮುರುಗ ಮಠದ ಸ್ವಾಮಿಗಳು ಮತ್ತು ಲಿಂ|| ಸರ್ವದರ್ಶನ ತೀರ್ಥ ವೈ. ನಾಗೇಶಶಾಸ್ತ್ರಿಗಳ ಆಸೆಯಂತೆ ನಡೆಯುವ ವೀರಶೈವ ವೈದಿಕ ಪಾಠಶಾಲೆಯನ್ನು ನೋಡಿಕೊಂಡು ಬರಲು ಹೋಗಿದ್ದೆವು. ಅಲ್ಲಿ ಬಾಲಕರಿಂದ ಉಪಚಾರ ಮಂತ್ರಗಳು ರುದ್ರ ನಮಕ ಚಮಕ ಹೇಳಿಸಿ ಪರೀಕ್ಷಿಸಿ ಸಂತೋಷಪಟ್ಟರು. ಪಾಠಶಾಲೆಯ ಅಧ್ಯಾಪಕರಾಗಿದ್ದ ಶ್ರೀ ಅಯ್ಯಪ್ಪಶಾಸ್ತ್ರಿಗಳನ್ನು ಸಂತೋಷದಿಂದ ಒಳ್ಳೆ ಚೆನ್ನಾಗಿ ವಿದ್ಯಾರ್ಥಿಗಳನ್ನು ತಯಾರು ಮಾಡುತ್ತಾ ಇದ್ದೀರಿ ಎಂದು ಪ್ರೋತ್ಸಾಹದ ಮಾತನ್ನು ಹೇಳಿದರು. ಹೊರಗೆ ಬಂದ ಮೇಲೆ ನಾವು ನೋಡಲು ಹೋದಾಗ ಒಳ್ಳೆ ಮಾತು ಹೇಳಿ ಬರಬೇಕು ವಿದ್ಯೆ ಕಲಿಯುವವರೆ ಇಲ್ಲದೆ ಇರುವಾಗ ಕಲಿಯುವವರಿಗೆ ಪ್ರೋತ್ಸಾಹ ಕೊಡಬೇಕು ಸಣ್ಣ ಸಣ್ಣ ತಪ್ಪು ಹುಡುಕಲು ಹೋಗಬಾರದು ಗೊತ್ತಾ ಎಂದರು. ಸಮಾಜದ ಪ್ರೋತ್ಸಾಹ ಇವರುಗಳಿಗೆ ಬಹಳಮುಖ್ಯ ಅಂತ ಒತ್ತಿ ಒತ್ತಿ ಹೇಳಿದರು. ಲಿಂ|| ತೊಗರಿ ಸರ್ವಮಂಗಳಮ್ಮನವರನ್ನು ನೋಡಲು ಹೋಗಿ ಶಿವಾನುಭವದ ಬಳ್ಳಾರಿ ಕಡೆಯ ವೀರಶೈವ ಸಾಹಿತ್ಯದ ಬಗ್ಗೆ ವಿಶೇಷವಾಗಿ ಮಾತನಾಡಿ, ಲಿಂ|| ವೈ. ನಾಗೇಶಶಾಸ್ತ್ರಿಗಳ ಜೊತೆ ಚರ್ಚಿಸಿದ ವಿಷಯ ಅವರ ಸ್ನೇಹಭಾವದ ಬಗ್ಗೆ ಬಹಳ ಹೊತ್ತು ಮಾತನಾಡಿದರು. ಶ್ರೀಮತಿ ತೊಗರಿ ಸರ್ವಮಂಗಳಮ್ಮನವರು ಶ್ರೀ ಶ್ರೀ ಜ.ಚ.ನಿ. ಸನ್ನಿಧಿಯವರ ಸನ್ಮಾನ ಕೃತಿ ಮುದ್ರಣ ಮಾಡಿಸಿದ್ದರ ಬಗ್ಗೆ ಸಮಾಜದ ಪರವಾಗಿ ನಾನು ಧನ್ಯವಾದಗಳನ್ನು ಅರ್ಪಿಸುತ್ತೇನೆ ಅಂತ ಹೇಳಿ ಅಜ್ಜಿ ಕೊಟ್ಟ ಹಾಲನ್ನು ಸ್ವೀಕರಿಸಿ, ಮರಿಸ್ವಾಮಿಗಳ ಮಠಕ್ಕೆ ಬಂದು ಶ್ರೀ ಕರಿಡಪ್ಪನವರ ಚೌಕಿ ನೋಡಬೇಕು ಅಂತ ಹೇಳಿ 'ಕರಿಡೆಪ್ಪನವರ ಪ್ರಸಾದ ನಿಲಯವನ್ನು' ನೋಡಿ ಬಂದರು. ಬಳ್ಳಾರಿ ವೀರಶೈವ ವಿದ್ಯಾವರ್ಧಕ ಸಂಘದ ಸೇವೆ ಬಗ್ಗೆ ಆರಾಧ್ಯರಿಗೆ ಬಹಳ ಹೆಮ್ಮೆಯಿತ್ತು. ವೀರಶೈವ ಸಮಾಜವು ಮಾಡುವ ಸೇವೆ ಹಿಂದಿನವರ ಆದರ್ಶ ಮುಂದೆಯೂ ವಿಶೇಷವಾಗಿ ಬೆಳೆಯಬೇಕು ಅನ್ನುವುದೆ ಅವರ ಆಸೆಯಾಗಿತ್ತು.

ಶ್ರೀಶೈಲ ಸಿಡುಮಾವಿಡಿ ಸೂರ್ಯ ಸಿಂಹಾಸನದ ಬಗ್ಗೆ ಬಹಳ ಅಭಿಮಾನ ಇಟ್ಟುಕೊಂಡಿದ್ದ ಆರಾಧ್ಯರಿಗೆ ಸಮಯ ಸಿಕ್ಕಾಗಲೆಲ್ಲಾ ಶ್ರೀ ಜ.ಚ.ನಿ. ಸನ್ನಿಧಿಯವರನ್ನು ಭೇಟಿಯಾಗುತ್ತಾ ಇದ್ದರು. ಇಬ್ಬರು ಹಲವು ಯೋಜನೆಗಳನ್ನು ಹಾಕಿಕೊಂಡಿದ್ದರು. ಒಬ್ಬರು ಪುತ್ರವರ್ಗದ ಸ್ವಾಮಿಗಳಂತೆ ಇದ್ದರೆ ಇನ್ನೊಬ್ಬರು ಶಿವಾಚಾರ್ಯ ಮಠದ ಜಗದ್ಗುರುಗಳು. ಆದರೆ ಇಬ್ಬರ ಸೇವೆ ನಿಲುವು ಒಂದೆ.

ಆರಾಧ್ಯರ ಜೊತೆ ಗೂಳೂರು ಮಹಾಪೀಠ ದರ್ಶನ ಮಾಡುವ ಭಾಗ್ಯ ನನ್ನದಾಗಿತ್ತು. ಅವರು ಪ್ರತಿಯೊಂದು ಗದ್ದಿಗೆ ಮುಂದೆ ನಿಂತು ಇದು ಚಂದ್ರಗುಂಡಶಿವಾಚಾರ್ಯರದು, ಎಂತಹ ಯುಗಪುರುಷರು ಅಂತ ಭಾವಗರ್ಭಿತವಾಗಿ ಹೇಳುತ್ತಾ ಇದ್ದದ್ದು ಈಗಲೂ ನನ್ನ ಕಣ್ಣಿಗೆ ಕಟ್ಟಿದಹಾಗೆ ಇದೆ. 'ಕುಮಾರ ವೀರಭದ್ರ' ಕ್ಷೇತ್ರಾಧಿಪತಿ ಮತ್ತು ಮಠದ ಪರಿಸರದ ಬಗ್ಗೆ

ಬಹಳ ಭಾವುಕರಾಗಿ ಮಾತನಾಡುತ್ತಾ ಇದ್ದರು. ಅವರ ಪ್ರಥಮ ಸಂಸ್ಕೃತ ಮತ್ತು ವೇದಪಾಠ ಪ್ರಾರಂಭ ಆಗಿದ್ದೆ ಗೂಳೂರಿನಲ್ಲಿ. ಶ್ರೀ ಜ.ಚ.ನಿ. ಸನ್ನಿಧಿಯವರ ಪೂರ್ವದಲ್ಲಿ ಪೀಠದಲ್ಲಿ ಇದ್ದ ಶ್ರೀಗಳು ವೇದ ಪಾಠಶಾಲೆಯನ್ನು ಪ್ರಾರಂಭ ಮಾಡಿದ್ದರಂತೆ. ನನ್ನ ಊರಿನಲ್ಲಿ ಇದ್ದ ಜೈನರು ಸಂಸ್ಕೃತ ಪ್ರಾಕೃತ ಅಂತ ಮೈಸೂರು, ಹೊಂಬುಜ, ಶ್ರವಣಬೆಳಗೊಳಕ್ಕೆ ಹೊರಟು ಆರಾಧ್ಯರನ್ನು ನಿನಗೆ ಯಾಕೆ ಸಂಸ್ಕೃತ ಪ್ರಾಕೃತ ಅಂತ ಹಾಸ್ಯ ಮಾಡಿದಕ್ಕೆ ಹಠಮಾಡಿ ವಿದ್ಯೆಯನ್ನು ಕಲಿತವರು. ತಮ್ಮ ವಿದ್ಯಾಭ್ಯಾಸವನ್ನು ಗೂಳೂರು, ಸಿದ್ಧಗಂಗಾ, ಬೆಂಗಳೂರಿನಲ್ಲಿ ಮುಗಿಸಿದರು. ವಿದ್ಯಾಭ್ಯಾಸ ಸಮಯದಲ್ಲಿ ಹಲವು ಮಠಗಳನ್ನು ವಿದ್ಯಾರ್ಥಿನಿಲಯಗಳನ್ನು ಶಿವಾಚಾರಸ್ತರನ್ನು ಆಶ್ರಯಿಸಿ ವಿದ್ಯೆಯನ್ನು ಕಲಿತು ಸಮಾಜಕ್ಕೆ ಅರ್ಪಿಸಿದರು. ಅನೇಕ ಜನ ವೈದಿಕರನ್ನು, ವಿರಕ್ತರು, ಮತ್ತು ಪಟ್ಟದ ಶಿವಾಚಾರ್ಯರಿಗೆ ವಿದ್ಯೆ ಕಲಿಸಿದ ಕೀರ್ತಿ ಆರಾಧ್ಯರದು.

ಗುರು ವಿರಕ್ತರ ಜಗಳದ ಬಗ್ಗೆ ಆರಾಧ್ಯರಿಗೆ ಬಹಳ ಬೇಸರವಿತ್ತು. ಅವರು ಇಬ್ಬರ ಹತ್ತಿರವೂ ಅಷ್ಟು ಚೆನ್ನಾಗಿ ಒಡನಾಡಿಗಳಾಗಿದ್ದರು. ಲಿಂ|| ಶ್ರೀಮದ್ ರಂಭಾಪುರಿ ವೀರಸಿಂಹಾಸನಾಧೀಶ್ವರ ೧೦೦೮ ಜಗದ್ಗುರು ಶ್ರೀ ಗಂಗಾಧರ ಶಿವಾಚಾರ್ಯ ಮಹಾಸ್ವಾಮಿಗಳ ಕಡೆಯ ಧನುರ್ಮಾಸದ ಪೂಜಾ ಕಾರ್ಯಕ್ರಮದಲ್ಲಿ ಭಾಗವಹಿಸಿ ಬಿರೇಹಾಳುವಿನಲ್ಲಿ ಅರವತ್ತುಮೂರು ಲಿಂಗಗಳ ಪ್ರತಿಷ್ಠೆ ಕಾರ್ಯಕ್ರಮಕ್ಕೆ ಪ್ರಮುಖ 'ಆಚಾರ್ಯ' ಸ್ಥಾನದಲ್ಲಿ ನಿಂತು ಕಾರ್ಯಕ್ರಮ ನೆರವೇರಿಸಿಕೊಟ್ಟರು. ಶ್ರೀರಾಮುಲು ದಂಪತಿಗಳನ್ನ ಸಂಕಲ್ಪಕ್ಕೆ ಕೂರಿಸಿ ಅವರನ್ನೆ ಕರ್ತೃಗಳನ್ನಾಗಿ ಅವರಿಂದಲೆ ಎಲ್ಲಾ ಪೂಜೆಯನ್ನು ಮಾಡಿಸಿದರು. ಅತಿರುದ್ರಯಾಗವನ್ನೆ ಶ್ರೀರಾಮುಲು ಅವರು ಹಿಂದೆ ಮಾಡಿಸಿದಾಗ ಇವರ ಸೂತ್ರವನ್ನು ಪಡೆದು ಬೇರೆಯವರು ಪೂಜೆ ಮಾಡಿದ್ದು ಕೇಳಿದ ಆರಾಧ್ಯರು ಆ ವಿಷಯದಲ್ಲಿ ಬಹಳ ಪೇಚಾಡಿದರು. ಇವರ ವಿದ್ವತ್ತನ್ನು ನೋಡಿ ಶ್ರೀ ಜ.ಚ.ನಿ. ಸನ್ನಿಧಿಯವರು ಮತ್ತು ಆರಾಧ್ಯರು ಸೇರಿ ಬರೆದ ಶ್ರೀ ಶಿವಾಗಮಸೌರಭ ಗ್ರಂಥದ ಮುದ್ರಣ ಖರ್ಚನ್ನು ಶ್ರೀ ರಾಮುಲು ಅವರು ಕೊಟ್ಟು ಶಾಶ್ವತವಾದ ಗುರು ಕಾಣಿಕೆಯನ್ನು ಅರ್ಪಿಸಿದರು.

'ಸಸ್ವರ ಮಹಾನ್ಯಾಸ ಪ್ರಯೋಗ' ಗ್ರಂಥವನ್ನು ಪರಿಷ್ಕರಿಸಿ ಮುದ್ರಣಕ್ಕೆ ಅಣಿಮಾಡಿದ್ದರು ಚಳ್ಳಗುರ್ಕಿ ಎರ್ರಿತಾತ ಸೇವಾಸಮಿತಿಯವರು ಮುದ್ರಣಕ್ಕೆ ಸಹಕಾರ ನೀಡಿದ್ದರಿಂದ ಬಿಡುಗಡೆ ಚಳ್ಳಗುರ್ಕಿಯಲ್ಲಿಯೆ ಇಟ್ಟುಕೊಂಡಿದ್ದರು. ಬೆಂಗಳೂರಿನಿಂದ ಶ್ರೀ ಜ.ಚ.ನಿ. ಸನ್ನಿಧಿಯವರು, ಆರಾಧ್ಯರು ನಾನು ಆ ಕಾರ್ಯಕ್ರಮಕ್ಕೆ ಜೊತೆಯಲ್ಲಿ ಹೋಗಿದ್ದೆವು.

ಶ್ರೀ ಜ.ಚ.ನಿ ಅವರ ಸಾನಿಧ್ಯದಲ್ಲಿ ಜೋಳದ ರಾಶಿ ದೊಡ್ಡನಗೌಡರ ಅಧ್ಯಕ್ಷತೆಯಲ್ಲಿ ಕೃತಿ ಬಿಡುಗಡೆ ಕಾರ್ಯಕ್ರಮ ನಡೆಯಿತು. 'ಸಸ್ವರ ಮಹಾನ್ಯಾಸ'ದ ಬಗ್ಗೆ ಆರಾಧ್ಯರು ಬಹಳ ವಿಸ್ತಾರವಾಗಿ ಮಾತನಾಡಿದರು. ಜೋಳದರಾಶಿ ದೊಡ್ಡನಗೌಡರು ಆರಾಧ್ಯರ ಸ್ನೇಹ ಅವರ ವಿದ್ವತ್ತಿನ ಬಗ್ಗೆ ಅವರ ಸೇವೆಯಿಂದ ನಿಜವಾಗಿಯೂ ಎರ್ರಿತಾತ ಸಂತೋಷಪಟ್ಟಿದ್ದಾರೆ ಎಂದು ಬಹಳ ಹೆಮ್ಮೆಪಟ್ಟರು. ಶ್ರೀ ಜ.ಚ.ನಿ. ಸನ್ನಿಧಿಯವರು ತಮ್ಮ ಆಶೀರ್ವಚನದಲ್ಲಿ ಆರಾಧ್ಯರ

ಕಾರ್ಯವ್ಯಾಪ್ತಿ, ಅವರಿಂದ ಸಮಾಜಕ್ಕೆ ಆಗುತ್ತಾ ಇರುವ ಸೇವೆಯನ್ನು ಕೊಂಡಾಡಿ ಇವರು ನಮ್ಮ ಪೀಠದ 'ಚರಾಸ್ತಿ' ಎಂದು ಹೆಮ್ಮೆಪಟ್ಟರು. ಕಾರ್ಯಕ್ರಮ ಶಿವಾನುಭವದೊಡನೆ ಮಂಗಳವಾಯ್ತು. ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದು ನನ್ನ ಭಾಗ್ಯ. ಆ ರಾತ್ರಿ ಶ್ರೀ ಜ.ಚ.ನಿ. ಸನ್ನಿಧಿಯವರು ಮತ್ತು ಆರಾಧ್ಯರು ಮರಿಸ್ವಾಮಿ ಮಠದಲ್ಲಿ ಮೊಕ್ಕಾಂ ಮಾಡಿದರು. ಮಹಡಿ ಮೆಟ್ಟಿಲು ಹತ್ತಬೇಕಾದರೆ ಶ್ರೀ ಜ.ಚ.ನಿ. ಸನ್ನಿಧಿಯವರ ಹಾವುಗೆ ಕೆಳಗೆ ಬಿದ್ದು ಸನ್ನಿಧಿಯವರು ಬೀಳುವುದರಲ್ಲಿದ್ದರು. ಆರಾಧ್ಯರು ಅವರ ಹತ್ತಿರ ಇದ್ದವರು ಭದ್ರವಾಗಿ ಶ್ರೀ ಜ.ಚ.ನಿ. ಅವರನ್ನು ಹಿಡಿದುಕೊಂಡರು. ಕೆಳಗೆ ಬಿದ್ದಿದ್ದರೆ ಕಾಡುಕಲ್ಲು ನಿಜವಾಗಿ ಬಹಳ ಪೆಟ್ಟಾಗುತ್ತಿತ್ತು. ಶ್ರೀ ಜ.ಚ.ನಿ. ಸನ್ನಿಧಿಯವರು, ಆರಾಧ್ಯರೆ ಪೀಠವನ್ನು, ಪೀಠದ ಸ್ವಾಮಿಗಳನ್ನು ಭದ್ರವಾಗಿ ಹಿಡಿದುಕೊಳ್ಳುತ್ತೀರಿ ನೀವು ಎಂದು ತಮಾಷೆ ಮಾಡಿದರು.

ನನಗೆ ಸಂಸ್ಕೃತ ಜ್ಞಾನವೆ ಇಲ್ಲ. ತಿಳಿದ ವಿದ್ವಾಂಸನಲ್ಲ. ಆದರೆ ನನ್ನಂತಹ ಬಾಲಕನ ಹತ್ತಿರ ಗಂಟೆಗಟ್ಟಲೆ ಆರಾಧ್ಯರು ಮಾತನಾಡುತ್ತಾ ಇದ್ದರು. ಪುತ್ರಪ್ರೇಮವನ್ನು ತೋರಿಸುತ್ತಾ ಇದ್ದರು ಅಂದರೆ ತಪ್ಪಾಗಲಾರದು. ಕ್ರಿಯಾಮೂರ್ತಿಗಳ ನಡೆನುಡಿ ಬಗ್ಗೆ ಬಹಳಷ್ಟು ವಿಷಯವನ್ನು ತಿಳಿಹೇಳುತ್ತಾ ಇದ್ದರು. ಸ್ವಾಮಿಗಳು ಸಮಾಜಕ್ಕೆ ಕಣ್ಣಾಗಿರಬೇಕು ಹುಣ್ಣಾಗಬಾರದು. ಸತ್ಯ ಶುದ್ಧವಾದ ಆಚರಣೆ ಬಹಳ ಮುಖ್ಯ. ನಿಮ್ಮ ನಡೆನುಡಿ ನಿಮ್ಮ ಬದುಕನ್ನೆ ತೋರಿಸುತ್ತೆ ಎಂಬ ಮಾತನ್ನು ಬಹಳಷ್ಟು ಸಾರಿ ಒತ್ತಿ ಒತ್ತಿ ಹೇಳುತ್ತ ಇದ್ದರು.

ಅಭಿನವ ಕಾಳಿದಾಸ ಬಸವಪ್ಪ ಶಾಸ್ತ್ರಿಗಳ ಸಮಗ್ರ ಸಾಹಿತ್ಯವನ್ನು ಪ್ರಕಟ ಮಾಡಿದ ಆರಾಧ್ಯರಿಗೆ ಅವರ ಸಮಾಧಿ ನವೀಕರಣದ ಬಗ್ಗೆ ಬಹಳಷ್ಟು ಜನರ ಹತ್ತಿರ ಬಹಳ ಸಾರಿ ಹೇಳಿದ್ದರು. ರಿಪೇರಿ ಮಾತ್ರ ಅವರು ಇದ್ದಾಗ ಆಗಲೆ ಇಲ್ಲ. ಅವರ ಶತಮಾನೋತ್ಸವ ಸಮಯದಲ್ಲಿ ಶಾಸ್ತ್ರಿಗಳು ಇರಲಿಲ್ಲ. ಬಸವ ಸಮಿತಿಯವರು ಕನ್ನಡ ಸಾಹಿತ್ಯ ಪರಿಷತ್ ಮಂದಿರದಲ್ಲಿ ಕಾರ್ಯಕ್ರಮ ಮಾಡಿದಾಗ ಅಭಿನವ ಕಾಳಿದಾಸ ಬಸಪ್ಪ ಶಾಸ್ತ್ರಿಗಳು ಬರೆದ ಸಮಗ್ರ ಕೃತಿಗಳು ಜನರಿಗೆ ಆಕರ ಗ್ರಂಥಗಳು. ಕನ್ನಡದ ವಿದ್ವನ್ಮಣಿಗಳಿಗೆ ಆರಾಧ್ಯರ ಸೇವೆ ಚಿರಸ್ಮರಣೀಯವಾದದ್ದು.

ಅವರ ಮೊಮ್ಮಗಳ ನಾಮಕರಣಕ್ಕೆ ತುಮಕೂರಿಗೆ ಬಂದಾಗ ನಾನು ಆರಾಧ್ಯರು ಶ್ರೀ ಸಿದ್ಧಗಂಗಾಮಠಕ್ಕೆ ಶ್ರೀಗಳ ದರ್ಶನಕ್ಕೆ ಹೋಗಿದ್ದೆವು. ಆ ದಿನ ವರ್ಧಂತಿ. ಸ್ವಾಮಿಗಳು ಪೂಜೆಯಲ್ಲಿ ಇದ್ದುದರಿಂದ ಸಿದ್ಧಲಿಂಗೇಶ್ವರನ ದರ್ಶನಕ್ಕೆ ಹೋದಾಗ ಹಿಂದೆ ತಾವು ಸಿದ್ಧಲಿಂಗೇಶ್ವರನಿಗೆ ಸಲ್ಲಿಸಿದ ಸೇವೆಯನ್ನು ಬಹಳಷ್ಟು ನೆನಸಿಕೊಂಡರು. ಭಕ್ತಿಯಿಂದ ಕೈಮುಗಿದರು. ಅವರ ಸಹಪಾಟಿ ಅಲ್ಲಿ ಆಗಮಿಕರಾಗಿ ಸೇವೆ ಸಲ್ಲಿಸುತ್ತಾ ಇದ್ದರು. ಇಬ್ಬರು ಉದ್ದಾನಸ್ವಾಮಿಗಳನ್ನು ನೆನೆದು, ಆದಿನ ಇದ್ದ ಅಧ್ಯಾಪಕರು ವಿದ್ಯಾರ್ಥಿ ಮಿತ್ರರ ಬಗ್ಗೆ ಬಹಳಷ್ಟು ಮಾತನಾಡಿದರು. ಕೆಳಗೆ ಬಂದಾಗ ಉದ್ದಾನ ಸ್ವಾಮಿಗಳ ಗದ್ದುಗೆಗೆ ಹೋಗಿ

ಕರ್ಪೂರ ಪಟ್ಟಿ ಅವರ ಪ್ರೀತಿ ವಾತ್ಸಲ್ಯದ ಬಗ್ಗೆ ಮಾತನಾಡಿ ಗದ್ಗದಿತರಾದರು. ಅವರ ಅಂತ್ಯೇಷ್ಟಿವಿಧಿ ಸಮಯದಲ್ಲಿ ನಾನು ಬರೆದ ಗೀತೆಯನ್ನು ಪಠನೆ ಮಾಡಿದ ಮೇಲೆ ಮೂರ್ತಿಯನ್ನು ಕೆಳಗೆ ಮುಹೂರ್ತಮಾಡಿಸಿದ್ದು ಅದೇ ಪದ್ಯಗಳನ್ನು ಅವರ ಆರಾಧನೆ ಸಮಯಕ್ಕೆ ಮುದ್ರಣವಾಗಿ ಬಿಡುಗಡೆ ಮಾಡಿದೆವು. 'ಜೀವನ ಜ್ಯೋತಿ' ಸಣ್ಣ ಪುಸ್ತಕ ಉದ್ದಾನ ಸ್ವಾಮಿಗಳ ಶಿವಪೂಜೆ ಶಕ್ತಿ ಅವರು ಮಾಡುತ್ತಿದ್ದ ಶಿವಪೂಜೆಯಲ್ಲಿ ಎಲ್ಲವನ್ನು ವರ್ಣಿಸಿದರು. ಶ್ರೀಮಠದಲ್ಲಿ ಶಿವಕುಮಾರ ಸ್ವಾಮಿಗಳು ಶಿವಪೂಜೆ ನಡೆಯುತ್ತಿತ್ತು. ಮಡಿಬಟ್ಟೆ ತಂದಿಲ್ಲದೆ ಇದ್ದುದರಿಂದ ಒಳಗೆ ಹೋಗಲಿಲ್ಲ. ತಮ್ಮ ಪ್ರಸಾದವಾಗಿದ್ದರೂ "ಜಂಗಮ ಪ್ರಸಾದ" ಇದು "ಕರುಣ ಪ್ರಸಾದ" ಗುರುವಿನ ಪ್ರಸಾದ ಸ್ವೀಕಾರ ಮಾಡಲೇಬೇಕು ಅಂತ ಸ್ವೀಕರಿಸಿದರು. ಸ್ವಾಮಿಗಳು ಹೊರಗೆ ಗದ್ದುಗೆ ಮೇಲೆ ಬಂದ ತಕ್ಷಣ ಆರಾಧ್ಯರೆ ಯಾವಾಗ ಬಂದಿರಿ ಅಂತ ಬಹಳ ಮಮತೆಯಿಂದ ಮಾತನಾಡಿಸಿದರು. ಇಬ್ಬರು ಬಹಳ ಹೊತ್ತು ಮಾತನಾಡಿದ ಮೇಲೆ ಮತ್ತೆ ಒಂದು ನಾಲ್ಕು ದಿವಸ ಇಲ್ಲಿ ಬಂದು ಇರುತ್ತೇನೆ ತಮ್ಮ ದರ್ಶನವಾಗಬೇಕು. ಇಲ್ಲಿ ಶಿವಪೂಜೆ ಮಾಡಿಕೊಂಡು ಇರಬೇಕು ಅಂತ ಆಸೆ ಇದೆ ಎಂದು ಹೇಳಿ ಬಂದರು. ಆದರೆ ಮತ್ತೆ ಸಿದ್ಧಗಂಗಾ ಕ್ಷೇತ್ರಕ್ಕೆ ಬರಲೇ ಇಲ್ಲ.

ನಾನು ಆರಾಧ್ಯರನ್ನು ಕರೆದುಕೊಂಡು ತುಮಕೂರು ನಗರಕ್ಕೆ ಬಂದೆ. ಶ್ರೀ ಸಿದ್ಧಲಿಂಗೇಶ್ವರ ದೇವಸ್ಥಾನ ಫಲಾಹಾರ ಸ್ವಾಮಿ ಗದ್ದಿಗೆ ತೋರಿಸಿದೆ. ಅವರಿಗೆ ಮತಕೂರು ಶ್ರೀ ನಂಜುಂಡ ಶಿವಯೋಗಿಗಳು ಬರೆದಿರುವ ತೈಲ ಚಿತ್ರ ನೋಡಬೇಕು ಅನ್ನುವ ಆಸೆ ಇತ್ತು. ಆದರೆ ತೈಲಚಿತ್ರ ಇರುವವರ ಮನೆ ಆ ದಿನ ಬೀಗ ಹಾಕಿತ್ತು. ಆರಾಧ್ಯರಿಗೆ ಬಹಳ ದಣಿವು ಉಂಟಾಯಿತು. ನನ್ನ ಕ್ಲಿನಿಕ್ ನೋಡಲು ಆಗಲೆ ಇಲ್ಲ. ಗುಬ್ಬಿಗೆ ಬರುತ್ತೇನೆ ಶ್ರೀ ಚನ್ನಬಸವೇಶ್ವರ ಸ್ವಾಮಿ ದರ್ಶನ ಮಾಡಬೇಕು ಅಂತ ಹೇಳಿದರು. 'ನಾನು ಹಿಂದೆ ಬಂದಿದ್ದೆ ಈ ನಡುವೆ ಬಂದಿಲ್ಲ ಖಂಡಿತ ಬರುತ್ತೀನಿ ಅಲ್ಲಿರುವ ಮಠಗಳನ್ನು ನೋಡಬೇಕು' ಅಂತ ಹೇಳಿದರು. ಆದರೆ ಕಾಲ ಕೂಡಿ ಬರಲಿಲ್ಲ

'ಮೈಸೂರು ಕಲಾವಿದರಾದ ಆಸ್ಥಾನ ವಿದ್ವಾನ್ ಶ್ರೀ ಶಿವರುದ್ರಪ್ಪನವರು ಬಹಳ ಚೆನ್ನಾಗಿ ಶಿವಪೂಜೆ ಮಾಡುತ್ತಾರೆ ಒಳ್ಳೆ ಪರಿಕರಗಳನ್ನೇ ಇಟ್ಟುಕೊಂಡಿದಾರೆ ಅದನ್ನು ವಿಡಿಯೋ ಮಾಡಿಸಿ ದಾಖಲೆಗೆ ಇಟ್ಟು ಕೊಳ್ಳಬೇಕು' ಅಂತ ಹೇಳಿದೆ.'ಮಾಡಿಸಯ್ಯಾ ನಾನು ಹಣದ ಸಹಾಯ ಮಾಡುತ್ತೇನೆ' ಅಂತ ಸಂತೋಷದಿಂದ ಹೇಳಿದರು. ಸಮಾಜದ ಕೆಲಸದ ಬಗ್ಗೆ ಅಷ್ಟು ಆಸಕ್ತಿ . ಲಿಂ|| ಸದ್ಧರ್ಮ ದೀಪಕ ಚೆನ್ನಮಲ್ಲಿಕಾರ್ಜುನರು ಲಿಂ|| ಶಿವಮೂರ್ತಿ ಶಾಸ್ತ್ರಿಗಳು ಲಿಂ|| ಫಗು ಹಳಕಟ್ಟಿ ಲಿಂ|| ಬಸವನಾಳರು ಲಿಂ||ಜೀರಿಗೆಕಟ್ಟೆ ಬಸಪ್ಪನವರು ಲಿಂ|| ಗುರುಶಾಂತಶಾಸ್ತ್ರಿಗಳು ಲಿಂ|| ಅರಮನೆ ಗವಿಮಠದ ಶ್ರೀ ಗೌರಿಶಂಕರ ಸ್ವಾಮಿಗಳು, ಲಿಂ|| ಟಿ.ಎಸ್. ಮಲ್ಲಪ್ಪನವರು ಲಿಂ||ಸಖರಾಯಪಟ್ಟಣದ ಸದಾಶಿವಾಚಾರ್ಯರು, ಲಿಂ|| ಹರ್ಡೇಕರ್

ಮಂಜಪ್ಪನವರು ಬೆಂಗಳೂರು ಸರ್ಪಭೂಷಣ ಮಠದ ಮಹಾದೇವಸ್ವಾಮಿಗಳು, ಮುತ್ತಿನಕಂತೆ ಮಠದ ಶತಾಯುಷಿ ಶಿವಕುಮಾರ ಸ್ವಾಮಿಗಳು ಮಹಾಸ್ವಾಮಿಗಳು ಮುಂತಾದ ಸ್ವಾಮಿಗಳ ವಿದ್ವಾಂಸರ ಸಂಪರ್ಕ ಇತ್ತು. ಅವರು ಸಂಸ್ಕೃತ ಮಹಾವಿದ್ಯಾಲಯದಲ್ಲಿ ಇದ್ದ ಎಲ್ಲಾ ವಿದ್ವಾಂಸರ ಪ್ರೀತಿ ಪಾತ್ರರಾಗಿದ್ದರು.

ಹಿಂದೆ 'ಶಿವಸೋಲು' ಕೃತಿಗೆ ಮುನ್ನುಡಿ ಬರೆಯುತ್ತೇನೆ ಎಂದು ಹಾಸ್ತಿ ಅವರು ಹಲವು ವರ್ಷ ತಿರುಗಿಸಿ ಕೊನೆಗೆ ಬರೆಯದೆ ನಕಾರಾತ್ಮಕವಾಗಿ ಉತ್ತರಿಸಿದ ಕೃತಿ ಮೂರುಸಾರಿ ಮುದ್ರಣ ಹಾಯಿತು. ಅದನ್ನು ನೋವಿನಿಂದ ಪ್ರಸ್ತಾಪ ಮಾಡುತ್ತಾ ಇದ್ದರು. ಅನೇಕ ಕೃತಿಗಳನ್ನು ತಾವೇ ಪ್ರಕಾಶಕರಾಗಿ ಮುದ್ರಣ ಮಾಡಿದ್ದಾರೆ. ಜೀವನದ ಹೋರಾಟದಲ್ಲಿ ಸಾಕಷ್ಟು ಸಾಧಿಸಿದ್ದರು ಅಂದರೆ ತಪ್ಪಾಗಲಾರದು. ಎಲ್ಲಿ ಯಾವುದೇ ಮಠದಲ್ಲಿ ಆಘಾತವಾದರೂ ಸಮಾಜದ ಪರವಾಗಿ ಧ್ವನಿ ಎತ್ತುತ್ತಾ ಇದ್ದರು. ಶ್ರೀ ಮನ್ ಮಹಾರಾಜರು ಮೃತ್ಯುಂಜಯ ಜಪವನ್ನು ಮಾಡಿಸಬೇಕು ಶ್ರೀರಂಗಪಟ್ಟಣದಲ್ಲಿ ಎಂದು ಹೇಳಿ ಆರಾಧ್ಯರ ನೇತೃತ್ವದಲ್ಲಿ ಕಾರ್ಯಕ್ರಮದ ವ್ಯವಸ್ಥೆ ಮಾಡಿಸಿದರು. ಶ್ರೀಮನ್ ಮಹಾರಾಜರಾದ ಶ್ರೀ ಜಯಚಾಮರಾಜೇಂದ್ರ ಒಡೆಯರ್ ರವರು ಪ್ರತಿದಿನ ಮಧ್ಯಾಹ್ನ ತೀರ್ಥಪ್ರಸಾದಕ್ಕೆ ಬರುತ್ತಾ ಇದ್ದಂತೆ ಋತ್ವಿಕ್ ಸಂಭಾವನೆ ಜೊತೆ ಜೋಡಿಶಾಲು ಸಹ ಕಾಣಿಕೆಯಾಗಿ ಆರಾಧ್ಯರಿಗೆ ಬಂದಿತ್ತು. ಶ್ರೀ ಸುತ್ತೂರು ಮಠಕ್ಕೆ ಮಹಾರಾಜರು ಬಿಜಯಂಗೈದಾಗ ಆರಾಧ್ಯರ ನೇತೃತ್ವದಲ್ಲಿಯೆ ಪೂರ್ಣಕುಂಭ ಸ್ವಾಗತವನ್ನು ಮಾಡಲಾಯಿತು.

ಲಿಂ|| ಜಗದ್ಗುರು ವೀರಸಿಂಹಾಸನಾಧೀಶ್ವರ ಶ್ರೀಶ್ರೀಶ್ರೀ ಶಿವರಾತ್ರಿ ರಾಜೇಂದ್ರ ಸ್ವಾಮಿಗಳವರಲ್ಲಿ ಆರಾಧ್ಯರಿಗೆ ಬಹಳ ಭಕ್ತಿ. ಸುತ್ತೂರು ಮಠದ ಚರಿತ್ರೆಯ ಬಗೆಗೂ ಅನೇಕ ಸಂಸ್ಕೃತ ಕೃತಿ ಸಂಪಾದನೆ ಬಗ್ಗೆ ಸಾಕಷ್ಟು ಚಿಂತಿಸಿದ್ದರು. ಮೈಸೂರು ಸ್ಟಾರ್ ಯಜಮಾನ್ ವೀರಸಂಗಪ್ಪನವರ ಕಾಲದಲ್ಲಿ ನಡೆದ ಧರ್ಮಯುದ್ಧದ ಎರಡು ಸಂಪುಟಗಳು ಅವರ ಕಾಲದಲ್ಲಿ ಮುದ್ರಣವಾಗಿವೆ. ಅದನ್ನು ಪರಿಶೋಧಿಸಿ ಮರುಮುದ್ರಣ ಮಾಡಬೇಕು ಅನ್ನುವ ಬಲವಾದ ಆಸೆ ಆರಾಧ್ಯರಿಗೆ ಇತ್ತು. ಮೈಸೂರು ಸ್ಟಾರ್ ಬಗ್ಗೆ ವಿಶೇಷವಾದ ಅಭಿಮಾನ. ಆ ಪತ್ರಿಕೆಯನ್ನು ಉಪಯೋಗಿಸಿಕೊಂಡ ಆರಾಧ್ಯರು 'ಪರಳಿ ಪ್ರಕರಣ' ಕುರಿತು 'ವೀರಶೈವ ವೇದಾಚಾರ ವಿಜಯ' ಗ್ರಂಥ ರಚನೆ ಮಾಡಿದರು. ಚೀಫ್ ಜಸ್ಟೀಸ್ ಲಿಂ|| ಮಹಾದೇವಯ್ಯನವರ ಮನೆಯಲ್ಲಿ ಹಳೆಯ ಪತ್ರಿಕೆಗಳನ್ನು ಹುಡುಕಿ ಸಾಕಷ್ಟು ಕಡೆ ಚರ್ಚೆಮಾಡಿ ಈ ಗ್ರಂಥವನ್ನು ರಚನೆ ಮಾಡಿದ್ದಾರೆ.

ಗಣಪತಿ ಹಬ್ಬದ ಮಾರನೆ ದಿನ ಆರಾಧ್ಯರ ದರ್ಶನಕ್ಕೆ ೧೯೮೯ರಲ್ಲಿ ಹೋಗಿದ್ದೆ. ಬಹಳ ಸಂತೋಷಪಟ್ಟು ಮಾತನಾಡಿಸಿ ಮಹಾಕವಿ ಅಭಿನವ ಕಾಳಿದಾಸ ಬಸವಪ್ಪ ಶಾಸ್ತ್ರಿಗಳ ಸಂಪುಟವನ್ನೆ ಕೊಟ್ಟರು. ಶಿವಗಂಗಾ ಕ್ಷೇತ್ರ, ತುಮಕೂರು ಜಿಲ್ಲಾ ವೀರಶೈವ ಮಠಗಳ ಕುರಿತು ನೀನು ಹೇಳುವುದನ್ನೆ ಮೊದಲು ಬರೆ ಅಂತ ಒತ್ತಾಯ ಮಾಡಿದರು. ಶಿವಗಂಗೆ ಬಗ್ಗೆ

ಸಂಪೂರ್ಣ ಮಾಹಿತಿ ಕೊಡುವ ಒಂದು ಪುಸ್ತಕ ಬರೆ ನಮ್ಮಂತಹ ಮುಮುಕ್ಷುರು ಶಿವಗಂಗೆ ಬೆಟ್ಟದಲ್ಲಿ ಹತ್ತಿ ಓಡಾಡಲು ಸಾಧ್ಯವಿಲ್ಲ ಅಂತ ಹೇಳಿದರು. ಆರಾಧ್ಯರ ಆರೋಗ್ಯ ಕ್ಷೀಣಿಸಿ ಆಸ್ಪತ್ರೆಯಿಂದ ಮನೆಗೆ ಬಂದ ಮೇಲೆ ದಸರಾ ಸಮಯದಲ್ಲಿ ಅಂದರೆ ಅವರು ಶಿವೈಕ್ಯರಾಗುವ ಮುಂಚೆ ಅವರ ಮನೆಗೆ ಹೋಗಿದ್ದೆ. ನನ್ನ ವೈಯಕ್ತಿಕ ತೊಂದರೆ ಬಗ್ಗೆ ಸಾಕಷ್ಟು ಬಾಧೆ ಪಟ್ಟರು. ತಾವು ಬರೆಯಲೇ ಬೇಕಾದ ಎರಡು ಲೇಖನದ ಬಗ್ಗೆ ಹೇಳಿದರು. ಶ್ರೀ ಜ.ಚ.ನಿ. ಸನ್ನಿಧಿಯವರ ವೀರಾಗಮಕ್ಕೆ ಬೆನ್ನುಡಿ ಬರೆಯುತ್ತಾ ಇದ್ದೇವೆ. ಇನ್ನೊಂದು ಡಾ|| ಎಂ. ಚಿದಾನಂದ ಮೂರ್ತಿಯವರ ಲೇಖನ ಸಾಧನೆಯಲ್ಲಿ ಪ್ರಕಟವಾಗಿದ್ದು "ಪಂಚಾಚಾರ್ಯರ ಬಗೆಗಿನ ವಿವಾದಕ್ಕೆ ಅಂತಿಮ ತೆರೆ" ಲೇಖನಕ್ಕೆ ಉತ್ತರ ಬರೆಯಲು ಅನೇಕ ಮಾಹಿತಿ ಪಟ್ಟಿಯನ್ನು ತಯಾರು ಮಾಡಿಕೊಂಡು ಇಟ್ಟುಕೊಂಡಿದ್ದರು. ಮನೆಯವರು ಜಾಸ್ತಿ ಮಾತನಾಡಬೇಡ ಅಂತ ಅಡ್ಡಿಪಡಿಸುತ್ತಾರೆ, ಬೆಳಗ್ಗಿನಿಂದ ಬಹಳ ಮಾತನಾಡಿದ್ದೇನೆ. ನನ್ನ ಕೆಲವು ಪುಸ್ತಕ ಮರಾಠಿ ಭಾಷೆಗೆ ತರ್ಜುಮೆಯಾಗುತ್ತಾ ಇದೆ ಅಂತ ಹೇಳಿದರು. ನಾನು 'ತಾವು ವಿಶ್ರಾಂತಿ ತೆಗೆದುಕೊಳ್ಳಿ ಇನ್ನೊಂದು ದಿವಸ ಬರುತ್ತೇನೆ' ಅಂತ ಹೊರಬಂದೆ. ಅವರು ಸಹ ಗೇಟ್ ಹತ್ತಿರ ಬಂದು ಬಿಟ್ಟುಹೋದರು. ನಾನು ಅವರನ್ನು ಮತ್ತೆ ಭೇಟಿಯಾಗಲು ಆಗಲೆ ಇಲ್ಲ. ನವೆಂಬರ್ ಏಳನೆಯ ತಾರೀಖು ಶಿವನ ಪಾದ ಸೇರಿದರು. ಅವರ ಪ್ರೀತಿ ನೆನಸಿಕೊಂಡಾಗ ಒಂದು ತರಹದ ನೋವಿನಿಂದ ಬಾಧೆಯಾಗುತ್ತದೆ ಅಂದರೆ ತಪ್ಪಾಗಲಾರದು.

ಅವರ ಪೌರೋಹಿತ್ಯ ಕೃತಿಗಳು, ತೆಲುಗು, ತಮಿಳು, ಮರಾಠಿಗೆ ಭಾಷಾಂತರ ಎಂದು ಬಹಳ ಹೆಮ್ಮೆಯಿಂದ ನನ್ನ ಹತ್ತಿರ ಹೇಳುತ್ತಾ ಇದ್ದರು. ಕರ್ನಾಟಕ ಭಾಷಾರತ್ನ ಲಿಂ|| ಪಿ. ಆರ್. ಕರಿಬಸವ ಶಾಸ್ತ್ರಿಗಳು ಸಂಪಾದನೆ ಮಾಡಿದ ವೀರಶೈವಕೌಸ್ತುಭಾರ್ತರ್ಗತ 'ಶಿವಪೂಜಾವಿಧಿ'ಯನ್ನು ಮುದ್ರಣಕ್ಕೆ ಅಣಿಮಾಡಿದ್ದರು. ಅವರು ಲಿಂಗೈಕ್ಯರಾದ ನಂತರ ಗುಬ್ಬಿಯಲ್ಲಿ ಸುತ್ತೂರು ಜಗದ್ಗುರುಗಳು ಮತ್ತು ಡಾ|| ಶ್ರೀಶ್ರೀ ಶಿವಕುಮಾರಸ್ವಾಮಿಗಳ ಸಾನಿಧ್ಯದಲ್ಲಿ ಬಿಡುಗಡೆಯಾದಾಗ ಶ್ರೀ ಗುಬ್ಬಿ ಕ್ಷೇತ್ರಾಧಿಪತಿಯಾದ ಶ್ರೀ ಚೆನ್ನಬಸವೇಶ್ವರ ಸಾನಿಧ್ಯದಲ್ಲಿ ಅವರ ಸೇವೆಯನ್ನು ಕೊಂಡಾಡುವ ಭಾಗ್ಯ ನನ್ನದಾಗಿತ್ತು.

ವಿದ್ವಾಂಸರ ಜೀವನದ ಬಗ್ಗೆ ಚರ್ಚೆ ಮಾಡಿದಾಗ ಉಮತಗಿ ಶಂಕರಶಾಸ್ತ್ರಿಗಳು ಮುಂತಾದವರ ಜೀವನವನ್ನು ಗಮನಿಸಿದರೆ ನಮ್ಮದು ಬಹಳ ಉತ್ತಮ.'ಶಿವನ ಸೊಮ್ಮು ಶಿವನಿಗೆ ಸಲ್ಲುತ್ತದೆ' ಅಂತ ನಕ್ಕು ಬಿಡುತ್ತಿದ್ದರು. ಅವರ ಸೇವೆಯನ್ನು ಯಾವ ವಿಶ್ವವಿದ್ಯಾನಿಲಯ ಗುರುತಿಸಲಿಲ್ಲ ಅನ್ನುವುದನ್ನೆ ಯಾರಾದರೂ ಅವರ ಮುಂದೆ ಹೇಳಿದರೆ ಹೋಗಲಿ ಬಿಡಿರಿ ಅದಕ್ಕೆ ಯಾಕೆ ಚಿಂತೆ ಅಂತ ಹೇಳಿ ಕಾರ್ಯದ ಬಗ್ಗೆ ಚರ್ಚೆ ಮಾಡುತ್ತಾ ಇದ್ದರು. ಸಂಸ್ಕೃತ ವಿದ್ವಾಂಸರಾಗಿ ಕನ್ನಡದ ಸೇವೆಯನ್ನು ಅಪಾರವಾಗಿ ಮಾಡಿದರು, ನುಡಿದಂತೆ ನಡೆದರು. ಜೀವನವನ್ನು ಪ್ರಸನ್ನವಾಗಿ ಇಟ್ಟುಕೊಂಡು ಬದುಕಿದರು.

ಆವರ ಸಮಗ್ರ ಸಾಧನೆ ಬಹಳ ದೊಡ್ಡದು. ಸಮಾಜಕ್ಕೆ ಬಹಳ ದುಡಿದು ಜೀರ್ಣಾವಸ್ಥೆಯಲ್ಲಿರುವ ಬಂಧುಗಳಿಗೆ ಸಹಾಯ ಮಾಡುವ ಕಾಳಜಿಯನ್ನು ಬಹಳಷ್ಟು ಬಾರಿ ಚರ್ಚಿಸಿದ್ದರು. ತಮ್ಮ ೮೦ ವರ್ಷದ ಅಮೃತಮಹೋತ್ಸವವನ್ನು ದೇಶದಲ್ಲಿ ಇರುವ ಎಲ್ಲಾ ವಿಶ್ವವಿದ್ಯಾನಿಲಯಗಳಿಗೆ ಮತ್ತು ಪ್ರಮುಖ ಗ್ರಂಥಾಲಯಗಳಿಗೆ ತಮ್ಮ ಹಣದಿಂದಲೆ ತಮ್ಮಲ್ಲಿ ಇದ್ದ ಗ್ರಂಥಗಳನ್ನೆ ಕಳುಹಿಸಿಕೊಟ್ಟು ಗ್ರಂಥದಾನ ಮಾಡಿದರು. ಹೀಗೆ ಸಾಮಾನ್ಯ ಹಳ್ಳಿಯ ಬಡ ಕುಟುಂಬದಲ್ಲಿ ಜನಿಸಿ ಹಿರಿಯ ಬಾಳನ್ನು ಬಾಳಿ ಮುಂದಿನ ಪೀಳಿಗೆಗೆ ಆದರ್ಶವ್ಯಕ್ತಿಯಾದ ಆ ಹಿರಿಯ ಚೇತನ ಸಂಸ್ಮರಣೆ ನಮಗೆಲ್ಲಾ ದಾರಿದೀಪವಾಗಲಿ.



# ನನ್ನ ವಿದ್ಯಾಗುರುಗಳು

ವಿದ್ವಾನ್: ಹೆಚ್.ಜಿ. ಶರಣಯ್ಯ

---

ಗುರು ಎಂಬ ಪದದ ಅರ್ಥ ವಿಶಾಲವಾದುದು. ಗುರುವಿನ ಮಹಿಮೆಯನ್ನು ಶರಣರು ತತ್ತ್ವಜ್ಞಾನಿಗಳು ಅನುಭವಿಗಳು ಅನೇಕ ವಿಧವಾಗಿ ಹಾಡಿ ಹೊಗಳಿರುವರು. ಗುರು ದೈವಾಂಶ ಸಂಭೂತನೂ ದೈವಕ್ಕಿಂತಲೂ ಶ್ರೇಷ್ಠನೂ ಎಂದು ತಮ್ಮ ಅನನ್ಯ ಭಕ್ತಿಯನ್ನು ವ್ಯಕ್ತಪಡಿಸಿರುವರು. ಗುರು ಭವರೋಗ ವೈದ್ಯ, ಜ್ಞಾನ ನಿಧಿ. ಅಕಲಂಕ ಸ್ವರೂಪ. ಆತನ ವಚನೋಪದೇಶ ಕೇಳಿದರೆ ಮುಕ್ತಿ ದೊರಕುವುದು ಎಂದು ನಿಜಗುಣರು ಗುರುವಿನ ಮಹಿಮೆಯನ್ನು ಕೊಂಡಾಡಿರುವರು.

ಶಿವಯೋಗಿ ಶಿವಾಚಾರ್ಯರು 'ಯೋ ಗುರುಃ ಸ ಶಿವಃ ಪ್ರೋಕ್ತಃ, ಗುರುವೇ ಶಿವನೆಂದು ಗುರುವಿಗೂ ಶಿವನಿಗೂ ಅವಿನಾಭಾವವನ್ನು ವ್ಯಕ್ತಪಡಿಸಿರುವರು. ಹೀಗೆ ಗುರುವಿನ ಮಹಿಮೆಯು ಅಪಾರವಾದುದು. ಗುರುವೇ ಪರಬ್ರಹ್ಮ ಗುರುವೇ ಸದಾಶಿವನು ಗುರುವಿಗಿಂತಲೂ ಬೇರೆ ಯಾವುದೂ ಇಲ್ಲ ಆತನೇ ಮಹಾದೇವನು, ಸದಾಶಿವನು ಎಂದು ಪರಿಪರಿಯಾಗಿ ಸ್ತುತಿಸಿರುವರು.

ಬಸವಾದಿ ಪ್ರಮಥರೂ ಕೂಡ ಗುರುವಿನ ಮಹಿಮೆ ಅಗಾಧವಾದುದು. ಅವನು ಶಿವಸ್ವರೂಪನೂ ಶಿವನಿಗಿಂತಲೂ ಶ್ರೇಷ್ಠನೆಂದು ಕೊಂಡಾಡಿರುವರು. ಶ್ರೀ ಗುರುವೆ ದಿವ್ಯಮಹಾಮುನಿಯೆ ಶ್ರೀ ಗುರುವೆ ಲೋಕಮೀರೇಳಂ ಪೆತ್ತ ಆನಂದಮಯ ಚಿನ್ಮಯ ಮಹಾಗುರುವೆ ದೇವಾ ಶಿಷ್ಯಕಾರಣ ನೀವು ಪರಶಿವಮೂರ್ತಿಯಾದಿರಯ್ಯಾ ನಿತ್ಯ ಪ್ರಸಾದವಲ್ಲಿ

ಮುಕ್ತನನು ಮಾಡಿದ ನಿತ್ಯಜ್ಯೋತಿರ್ಮಯ ಗುರುವೆ ಕಪಿಲಸಿದ್ಧ ಮಲ್ಲಿಕಾರ್ಜುನಾ, ಗುರುವು ಆನಂದಮಯ ಚಿನ್ಮಯನು ಎಂದು ಹೊಗಳುತ್ತ ಮತ್ತೊಂದು ವಚನದಲ್ಲಿ ಗುರುವು ತನ್ನಂತೆ ಮಾಡಿಕೊಂಡನು ಎನ್ನುವ ಅಭಿಪ್ರಾಯದಲ್ಲಿ ' ನಿರ್ಮಳಾಂಗ ಗುರುವೆ ನಿನ್ನಂತೆ ಎನ್ನನು ಮಾಡಿದ ಪರಮಗುರುವೆ ನೀನು ಕಪಿಲಸಿದ್ಧ ಮಲ್ಲಿನಾಥ. ಕೀಟಭ್ರಮರನ್ಯಾಯದಂತೆ- ಗುರು ತನ್ನ ಶಿಷ್ಯನನ್ನು ತನ್ನಂತೆ ಮಾಡಿಕೊಂಡನು. ಸಿದ್ಧರಾಮನು ಗುರುಸ್ಥಾನವನ್ನು ಅತ್ಯುನ್ನತ ಮಟ್ಟಕ್ಕೇರಿಸಿದುದು ಒಂದು ವಿಶೇಷತೆ. ಗುರುಮುಕ್ತಿ ಪದಕ್ಕಿಂತಲೂ ದೊಡ್ಡವನು. ಅನುಪಮನೆ ನಿನ್ನ ಹವಸಲಿಕ್ಕರಿದಯ್ಯ ಘನಕರವೆನಿಸುವ ಸಾಯುಜ್ಯಪದವ ಮೀರಿಹ ಶಬ್ದ, ಹಲವ ಮೀರಿ ಬ್ರಹ್ಮ ಗುರುಕರುಣದಿಂದ ಕಂಡೆ ಪರಮಪದವ ಗುರುವೆ ಗುರುವೆ ಮದ್ಗುರುವೆ ಸದ್ಗುರುವೆ ಜಗದ್ಗುರುವೆ ಗುರುವೆ ಕಪಿಲಸಿದ್ಧ ಮಲ್ಲಿನಾಥ.

ತೋಂಟದ ಸಿದ್ಧಲಿಂಗ ಶಿವಯೋಗಿಗಳು ಗುರು ಮತ್ತು ಶಿವನಲ್ಲಿ ಭೇದ ಭಾವ ತೋರಬಾರದು ಯಾರಾದರೂ ಹಾಗೆ ಭೇದ ಭಾವ ತೋರಿದರೆ ನಾಯಕ ನರಕ ತಪ್ಪದು ಎಂದು ತಮ್ಮ ವಚನಗಳಲ್ಲಿ ವಿವರಿಸಿರುವರು. ಗುರುವನು ಮಹಾದೇವನನು ಒಂದೆಯೆಂದು ಭಾವಿಸಲು ಬೇಕು ನೋಡಾ, ಎರಡೆಂಬ ಪ್ರತಿ-ಭಾವ ತೋರಿದಡೆ, ಅದು ಅಜ್ಞಾನ ನೋಡಾ, ಇದು ಕಾರಣ ಆವನಾನೊರ್ವನು ಎರಡೆಂದು ಭಾವಿಸಿದನಾದಡೆ, ಅನೇಕ ಕಾಲ ನರಕದ ಕುಣಿಯಲ್ಲಿಪ್ಪುದು ತಪ್ಪದು ನೋಡಾ ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೆ. ಶ್ರೀ ಸಿದ್ಧಲಿಂಗ ಯತಿಗಳು ಇನ್ನೊಂದು ವಚನದಲ್ಲಿ ಶಿಷ್ಯನು ಗುರುವಿಗಿಂತಲೂ ಎಷ್ಟೇ ತಿಳಿದವನಾದರೂ ಗುರುವಿನಲ್ಲಿ ಭೃತ್ಯಭಾವನೆಯಿಂದಲೇ ವರ್ತಿಸಬೇಕು ಎಂಬ ಭಾವವನ್ನು ಹೀಗೆ ಹೇಳುವರು. ' ಗಂಡಗಿಂತ-ಹೆಂಡತಿ ಮೊದಲೇ ಹುಟ್ಟಿದರೂ ಆ ಗಂಡಗಿಂತ-ಕಿರಿಯಳಲ್ಲದೆ ಹಿರಿಯಳಲ್ಲವಯ್ಯಾ ಗುರುವಿಗಿಂತ ಶಿಷ್ಯ ಅರುಹುಳ್ಳವನಾದರೂ ಆ ಗುರುವಿಗೆ ಭೃತ್ಯನಲ್ಲದೆ ಕರ್ತನಲ್ಲವಯ್ಯಾ;

ಶ್ರೀ ಪುರಂದರದಾಸರು ' ಗುರುವಿನ ಗುಲಾಮನಾಗುವತನಕ ದೊರೆಯದಣ್ಣ ಮುಕುತಿ' ಎಂದು ಹೇಳುವುದರಿಂದ ಶಿಷ್ಯನಾದವನು ಗುರುವಿನ ಸೇವೆಯನ್ನು ಮಾಡಿಯೇ ಮುಕ್ತಿ ಪಡೆಯಬೇಕು.

ಕಡಕೋಳ ಮಡಿವಾಳಪ್ಪನವರು 'ಗುರುವಿನ ನಡೆನುಡಿವಡಲೊಳಾಡಿದ ಮೇಲೆ ಕೊಡರಿನ್ನಭವ ಚಿಂತೆ-ನಿಮಗೇಕಮ್ಮ, ಎಲ್ಲರಂತವನಲ್ಲ ನನ ಗಂಡ ಬಲ್ಲಿದನು ಪುಂಡ ತನ್ನ ಗುರು ಶ್ರೇಷ್ಠನು. ಅವನ ನಡೆನುಡಿಗಳು ಅರಿತುಕೊಂಡರೆ ಭವಭಾದೆ ಇಲ್ಲ. ಕಬೀರದಾಸರು ಒಬ್ಬ ಮಹಾಅನುಭವಿಗಳು. ಅವರು ತಮ್ಮ ಅನುಭವವಾಣಿಯಿಂದ ಗುರುವನ್ನು ಕುರಿತು 'ಗುರು ಮತ್ತು ಗೋವಿಂದ ಇಬ್ಬರೂ ನನ್ನ ಮುಂದೆ ನಿಂತರೆ ಮೊದಲು ಗುರುವಿಗೆ ನಮಸ್ಕರಿಸುವೆ ಕಾರಣ ಗೋವಿಂದನನ್ನು ತೋರಿಸಿಕೊಟ್ಟವನು ಗುರುವು. ಇವರ ಅನುಭವವಾಣಿಯು ಅತ್ಯಂತ ಸರಳವಾಗಿವೆ. 'ಶಿಷ್ಯನು ವಸ್ತ್ರವಾದರೆ ಗುರುವು ರಜಕವಾಗಿ ಅವನ

ಅಜ್ಞಾನವನ್ನು ಹೋಗಲಾಡಿಸುವನು. ಗುರುವಿನು ಶಿಷ್ಯನಮೇಲೆ ಎಂತಹ ಅಂತಃಕರಣವಿರುವುದು ಎಂಬುವನ್ನು ತಮ್ಮದೇ ಆದ ಅನುಭವದಿಂದ ಶಿಷ್ಯನನ್ನು ಕೊಡವಾಗಿಯೂ ಗುರುವು ಕುಂಬಾರನಾಗಿ ಕೊಡವನ್ನು ಮಾಡುವಾಗ ಕುಂಬಾರನು ಕೊಡದ ಕೆಳಭಾಗದಲ್ಲಿ ತನ್ನ ಕೈಯಿಂದ ಹಿಡಿದು ಕೊಂಡಿರುವನು. ಅಂದರೆ ಗುರುವು ತನ್ನ ಶಿಷ್ಯನಿಗೆ ಶಿಕ್ಷಿಸಿದರೂ ಹೃದಯದಲ್ಲಿ ಕರುಣೆಯಿರುವುದೆಂಬ ಭಾವವಿದಿತವಾಗುವುದು.

ಅಲ್ಲಮ ಪ್ರಭುದೇವರು ಅನುಭವ ಮಂಟಪದ ಅಧಿಪತಿಗಳಾಗಿದ್ದರು. ಕಾಲಕ್ಕೆ ತಕ್ಕ ಹಾಗೆ ಗುರುಶಿಷ್ಯರ ಸಂಬಂಧ ಹೇಗಿರುವುದೆಂಬುವಕ್ಕೆ ತಮ್ಮ ವಚನದಲ್ಲಿ 'ಕೃತ-ಯುಗದಲ್ಲಿ ಗುರು ಶಿಷ್ಯಂಗೆ ಬಡಿದು ಬುದ್ಧಿಯ ಕಲಿಸಿದಡೆ ಆಗಲಿ ಮಹಾಪ್ರಸಾದವೆಂದೆನಯ್ಯಾ ತ್ರೇತಾಯುಗದಲ್ಲಿ ಗುರು ಶಿಷ್ಯಂಗೆ ಬೈದು ಬುದ್ಧಿಯ ಕಲಿಸಿದಡೆ ಮಹಾಪ್ರಸಾದ ವೆಂದೆನಯ್ಯ, ದ್ವಾಪರದಲಿ ಗುರುಶಿಷ್ಯಂಗೆ ಝಂಕಿಸಿ ಬುದ್ಧಿಯ ಕಲಿಸಿದಡೆ ಆಗಲಿ ಮಹಾಪ್ರಸಾದ ವೆಂದೆನಯ್ಯ, ಕಲಿಯುಗದಲ್ಲಿ ಗುರುಶಿಷ್ಯಂಗೆ ವಂದಿಸಿ ಬುದ್ಧಿಯ ಕಲಿಸಿದಡೆ ಆಗಲಿ ಮಹಾಪ್ರಸಾದ ವೆಂದೆನಯ್ಯ ಗುಹೇಶ್ವರಾ ನಿಮ್ಮ ಕಾಲದ ಕಟ್ಟಳೆಯ ಕಲಿತನಕ್ಕೆನಾನು ಬೆರಗಾದೆನು. ಕಾಲಕ್ಕನುಗುಣವಾಗಿ ಶಿಷ್ಯನನ್ನು ಯಾವ ರೀತಿ-ತಿಳಿಹೇಳಬೇಕೆಂಬುದು ಅವರ ಸ್ಪಷ್ಟೋಕ್ತಿ.

ಗುರು ಸರ್ವಕಾಲಕ್ಕೂ ಸರ್ವಧರ್ಮದವರಲ್ಲಿ ಮಾನ್ಯನಿರುವನು. ನಾಸ್ತಿಕ ಆಸ್ತಿಕರಲ್ಲಿಯೂ ತನ್ನ ಸ್ಥಾನವನ್ನು ಕಾಯ್ದುಕೊಂಡಿರುವನು. ಕೆಲವು ದೇಶಗಳಲ್ಲಿ ಧರ್ಮದ ಪರಿವರ್ತನೆಯಾಗಿರಬಹುದು ದೇವರ ಪರಿವರ್ತನೆಯಾಗಿರಬಹುದು, ಮುಂದೆಯೂ ಆಗಬಹುದು. ಧರ್ಮವನ್ನು ಜಾತಿಯನ್ನು ಬದಲಾಯಿಸಿದರೆ ಆಯಾಯ ಧರ್ಮದ ಗುರುವಿಗೆ ಗೌರವವಿರುವುದು. ಜೈನನು ವೈಷ್ಣವನಾಗಬಹುದು ರಾಮನು ರಹೀಮನಾಗಬಹುದು. ಹೆಣ್ಣುಮಕ್ಕಳು ಪತಿಯ ಮನೆ ಸೇರಿದಾಗ ದೇವರುಗಳು ಬೇರೆಯಾಗಬಹುದು. ಆದರೆ ಗುರು ಒಬ್ಬನೆ. ಮುಸ್ಲಿಮ್ ರಾಷ್ಟ್ರಗಳಲ್ಲಿ ಹಿಂದೂ ದೇವರುಗಳನ್ನು ಪೂಜಿಸದೇ ಇರಬಹುದು ಅಥವಾ ಹಿಂದುಗಳು ಅಲ್ಲಾನನ್ನು ಪರಿಗಣಿಸದೇ ಇರಬಹುದು. ಗುರುವನ್ನು ಮಾತ್ರ ಎಲ್ಲರೂ ಒಪ್ಪುವರು. ನಾಸ್ತಿಕರು ದೇವರನ್ನು ನಂಬುವುದಿಲ್ಲ. ಕಲಿಸಿಕೊಡುವ ಗುರುವನ್ನು ಮಾತ್ರ ನಂಬುತ್ತಾರೆ. ಆದ್ದರಿಂದ ಗುರು ಎಲ್ಲ ಕಾಲದಲ್ಲಿಯೂ ಎಲ್ಲರಲ್ಲಿಯೂ ಪೂಜ್ಯನಾಗಿರುವನು. ಒಟ್ಟಿನಲ್ಲಿ ಗುರುಸಮ್ಮಾನ ಪರಿಪೂರ್ಣನಾದರೆ ಆತನು ಭಗದ್ವಂದ್ಯನು. ಶರಣರ ನುಡಿಯಲ್ಲಿ ಆತನು ಜಗದ್ಗುರು.

ಮುಖ್ಯವಾಗಿ ನಮಗೆ ವಿದ್ಯಾಗುರುಗಳೂ ವೇದಾಗಮ ಸಕಲಶಾಸ್ತ್ರ ಪಾರಂಗತರೂ, ಆಚಾರ್ಯಪುರುಷರೂ, ವೀರಶೈವ ತತ್ತ್ವವೇತ್ತರೂ ಆದ ಪೂಜ್ಯ ನಂಜುಂಡಾರಾಧ್ಯರ ಬಗ್ಗೆ ಹೇಳದೇ ಇದ್ದರೆ ಗುರು ಎಂಬ ಲೇಖನದ ಹೊಳಪಿಗೆ ಬೆಳಕು ಕಡಿಮೆಯಾಗಬಹುದು. ಶ್ರೀ ಆರಾಧ್ಯರ ವಿದ್ಯಾಭ್ಯಾಸ ಸಿದ್ಧಗಂಗೆ ಹಾಗೂ ಬೆಂಗಳೂರಿನ ಶ್ರೀ ವೀರಭದ್ರಪ್ಪನವರ ವೇದ ಸಂಸ್ಕೃತ ಪಾಠಶಾಲೆಯಲ್ಲಿ ಆಯಿತು ಹಾಗೂ ಸಾಹಿತ್ಯದ ಚಟುವಟಿಕೆಯು ಇಲ್ಲಿಯೇ

ಪ್ರಾರಂಭವಾಯಿತು. ಶ್ರೀ ವೀರಭದ್ರಪ್ಪನವರ ಮನೆತನವು ಉತ್ತಮವಾದ ಸಂಸ್ಕಾರ ಉಳ್ಳದ್ದು. ಶ್ರೀ ವೀರಭದ್ರಪ್ಪನವರ ಧರ್ಮಪತ್ನಿ ಶ್ರೀಮತಿ ಕರಿಬಸಮ್ಮನವರು ಗುರು ಲಿಂಗ ಜಂಗಮ ಪ್ರೇಮಿಗಳೂ ವಿದ್ಯಾರ್ಥಿಗಳ ಮೇಲೆ ಅಸಾಧಾರಣ ಮಮತೆಯುಳ್ಳವರು. ಆ ತಾಯಿಯು ವಿದ್ಯಾರ್ಥಿಗಳಿಗೆ ವಾತ್ಸಲ್ಯಮಯಿ ತಾಯಿಯಾಗಿದ್ದರು. ಆ ಮಹಾತಾಯಿಯ ಬಗ್ಗೆ ಎಷ್ಟು ಹೇಳಿದರೂ ಸಾಲದು. ಆ ತಾಯಿಯ ಪವಿತ್ರ ಪ್ರಸಾದದಿಂದ ಶ್ರೀ ಆರಾಧ್ಯರು ಸಂಸ್ಕಾರ ಹೊಂದಿದವರು. ಈಗಿರುವ ಶ್ರೀಮತಿ ಕರಿಬಸಮ್ಮನವರ ಪುತ್ರರು ವಯೋವೃದ್ಧರೂ, ಜ್ಞಾನವೃದ್ಧರೂ ಆದ ಶ್ರೀಮಾನ್ ಗೌಡರ ರುದ್ರಪ್ಪನವರೂ ಹಾಗೂ ಶ್ರೀಮಾನ್ ಚನ್ನಬಸಪ್ಪನವರೂ ಶ್ರೀ ಆರಾಧ್ಯರ ವಿದ್ಯಾಧ್ಯಯನದ ಆಸಕ್ತಿಯನ್ನು ಕಂಡು, ಬೆಳೆಯುವ ಪೈರು ಮೊಳಕೆಯಲ್ಲಿ ನೋಡು, ಎನ್ನುವಂತೆ ಇವರ ಅಧ್ಯಯನಕ್ಕೆ ಹೆಚ್ಚಿನ ಪ್ರೋತ್ಸಾಹವನ್ನು ಕೊಟ್ಟರು. ಶ್ರೀ ಆರಾಧ್ಯರು ಈ ಮಹಾಶಯರ ನಡೆ- ನುಡಿ, ಆಚಾರ-ವಿಚಾರ ಹೆಚ್ಚಿಗೆ ಗ್ರಹಿಸಿ ಓದು ಒಕ್ಕಾಲು ಬುದ್ಧಿ ಮುಕ್ಕಾಲು, ಎನ್ನುವ ನಾಣ್ಣುಡಿಯ ಜೊತೆಗೆ ಓದು ಒಕ್ಕಾಲು ಆಚಾರ ಮುಕ್ಕಾಲು ಎನ್ನುವ ಹೊಸ ನಾಣ್ಣುಡಿಯನ್ನು ಸೃಷ್ಟಿಸಿಕೊಂಡರು. ಶ್ರೀ ಆರಾಧ್ಯರು ಕೊನೆಯವರೆಗೂ ಶ್ರೀ ಜಿ. ವಿ. ರುದ್ರಪ್ಪನವರ ಹಾಗೂ ಶ್ರೀ ಜಿ.ವಿ. ಚನ್ನಬಸಪ್ಪನವರ ಮೇಲೆ ಅಪಾರವಾದ ಗೌರವವನ್ನು ಇಟ್ಟುಕೊಂಡು ಅತ್ಯಂತ ವಿಧೇಯರಾಗಿದ್ದರು. ಈ ಮಹಾಶಯರು ಆರಾಧ್ಯರ ಬಗ್ಗೆ ಹೆಮ್ಮೆ, ಸಂತೋಷ ವಿಷ್ಟಿತ್ತೆಂದು ಹೇಳಲು ಅಸವಳ. ಈ ನಮ್ಮ ವ್ಯಕ್ತಿ ಎಂತಹ ಚೇತನವಾಗಿ ರೂಪುಗೊಂಡಿದೆ ಎಂದು ಹೃದಯಪೂರ್ವಕವಾಗಿ ಸಂತಸ ಪಡುತ್ತಿದ್ದರು.

ಶ್ರೀ ಆರಾಧ್ಯರು ಸಂಸ್ಕೃತ-ಕನ್ನಡ, ಹಿಂದಿ, ಆಂಧ್ರ ಮೊದಲಾದ ಭಾಷೆಗಳಲ್ಲಿ ಪಾಂಡಿತ್ಯ ಪಡೆದವರಾಗಿದ್ದರು. ವೈದಿಕ ವಾಙ್ಮಯದಲ್ಲಿ ಶೀಮಾಪುರುಷರು. ಪ್ರಾಚೀನರು ಒಂದು ಮಾತು ಹೇಳಿರುವರು. 'ಆಚಿನೋತಿ ಸರ್ವಶಾಸ್ತ್ರಾಣಿ ಆಚಾರ್ಯ ಇತ್ಯಾಭಿದೀಯತೆ.' ಅಂದರೆ ಯಾರು ಸರ್ವಶಾಸ್ತ್ರವನ್ನು ಬಲ್ಲವರಾಗಿರುತ್ತಾರೆಯೋ ಅಂತಹವರಿಗೆ ಆಚಾರ್ಯರೆನ್ನುವರು. ನಿಜವಾಗಿಯೂ ಆ ಹೆಸರಿಗೆ ತಕ್ಕವರಾಗಿದ್ದರು ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಶಾಸ್ತ್ರವಿಷಯದಲ್ಲಿ ಅವರು ಅರಿಯದ ವಿಷಯ ಯಾವುದೂ ಇರಲಿಲ್ಲ. ಕನ್ನಡದಲ್ಲಿ ಒಂದು ನಾಣ್ಣುಡಿಯಿದೆ 'ಆಡುಮುಟ್ಟದ ಸೊಪ್ಪು ಯಾವುದೂ ಇಲ್ಲ' ಈ ಮಾತು ಆರಾಧ್ಯರಿಗೆ ಸರಿ ಹೋಗುತ್ತದೆ. ಆರಾಧ್ಯರು ಯಾವುದೇ ವಿಷಯದಲ್ಲಿ ಉಪನ್ಯಾಸಕೊಟ್ಟರೂ ಅವರ ಉಪನ್ಯಾಸವಲ್ಲಿ ತಮ್ಮ ಅನುಭವ ಹಾಗೂ ಶಾಸ್ತ್ರಾಧಾರದಿಂದ ಪ್ರತಿಪಾದಿಸುವಾಗ ಕೇಳುವವರಿಗೆ ಹೊಸಬೆಳಕನ್ನು ಬೀರುತ್ತಿದ್ದರು. ಒಮ್ಮೆ ಸರ್ಪಭೂಷಣ ಮಠದಲ್ಲಿ ಅಕ್ಕಮಹಾದೇವಿಯ ಬಗ್ಗೆ ಉಪನ್ಯಾಸ ಮಾಡುತ್ತ ' ಅಕ್ಕಮಹಾದೇವಿಗೆ ಗಂಡನಾಗಬೇಕಾದವನು ಕೌಶಿಕನು ರಾಜನೆ, ಅವನು ಒಬ್ಬ ವ್ಯಕ್ತಿಯೆ ಎಂದು ತಮ್ಮದೇ ಆದ ಶೈಲಿಯಲ್ಲಿ ಹೇಳುತ್ತ ಕೌಶಿಕ ಎಂಬುದು ಗೂಬೆ (ಗೂಗೆ) ಅದರ ಸಂಚಾರ ರಾತ್ರಿಯ ಹೊತ್ತು ವಿಚಾರವಂತರು ಕತ್ತಲೆಯನ್ನು ಅಜ್ಞಾನಕ್ಕೂ, ಬೆಳಕನ್ನು ಜ್ಞಾನಕ್ಕೂ ಹೋಲಿಸಿರುವರು. ದೀಪದ ಕೆಳಗೆ ಕತ್ತಲೆಯು ಇದ್ದ ಹಾಗೆ ಅಕ್ಕಮಹಾದೇವಿಗೆ ಅಜ್ಞಾನವೆಂಬ ಕತ್ತಲೆಯ

ಗೂಜೆಯು ಗಂಟು ಬೀಳುವುದಿತ್ತು. ಆ ಕಾರಣ ಕೌಶಿಕನೆಂಬುವನು ಅರಸನಲ್ಲ ಎಂದು ವಿಷಯ ಪ್ರತಿ-ಪಾದನೆ ಮಾಡುತ್ತ, ಆಕೆಯು ಸ್ವಯಂಪ್ರಭೆಯಿಂದ ಅಜ್ಞಾನವನ್ನು ಹೋಗಲಾಡಿಸಿ ಸ್ವಯಂ ಪ್ರಕಾಶಿತಳಾದವಳು ಎಂದು ಹೇಳಿದಾಗ ಕೇಳುವವರ ಮನಸ್ಸಿನ ಮೇಲೆ ಹೊಸಬೆಳಕನ್ನು ಬೀರಿದಂತಾಯಿತು. ಆರಾಧ್ಯರು ಅನೇಕ ಮೇರು ಕೃತಿಗಳನ್ನು ರಚಿಸಿರುವರು. ಅವು ಸರ್ವಕಾಲಕ್ಕೂ ಬೆಳಕನ್ನು ಕೊಡತಕ್ಕವುಗಳು. ಅವರದು ಅಪರೂಪವಾದ ಶೈಲಿ. ಶ್ರೀಯುತರು, ಕಥೆ, ನಾಟಕ, ಅನುವಾದ, ಉಪನ್ಯಾಸಮಾಲೆ, ಪದ್ಯರಚನೆ ಅನೇಕ ಶ್ರೇಷ್ಠ ಕೃತಿಗಳು ಹೊರಬಂದಿವೆ. ನನ್ನ ದೃಷ್ಟಿಯಲ್ಲಿ ಅವರು ರಚಿಸಿದ 'ವೀರಶೈವ ಪೂರ್ವ ಪ್ರಯೋಗರತ್ನಂ' ಎಂಬುದು ಕಲಶಪ್ರಾಯವಾದ ವೈದಿಕ ಗ್ರಂಥ. ವೈದಿಕಾಭಿಮಾನಿಗಳಿಗೆ ಮುಕುರದಂತಿದೆ. ಅವರು ಮುಖ್ಯವಾಗಿ ಸಂಸ್ಕೃತ ಕಾವ್ಯಗಳನ್ನು ಕನ್ನಡಕ್ಕೆ ಪದ್ಯರೂಪವಾಗಿ ಅನುವಾದ ಮಾಡಿದ್ದಾರೆ ಹಾಗೂ ಕನ್ನಡ ಕಾವ್ಯಕ್ಕೆ ಹೊಸಗನ್ನಡ ಸರಳಾನುವಾದವನ್ನು ಮಾಡಿದ್ದಾರೆ.

ಶ್ರೀ ಆರಾಧ್ಯರ ಬಗ್ಗೆ ಎಷ್ಟು ಹೇಳಿದರೂ ಸಾಲದು. ಅವರ ಶಿಷ್ಯ ಸಂಪತ್ತು ಅಪಾರವಾದುದು. ಅವರು ಶಿಷ್ಯರ ಮೇಲೆ ಇಟ್ಟಿದ್ದ ವಾತ್ಸಲ್ಯ ಅಪಾರವಾಗಿತ್ತು, ಓದುವವರನ್ನಾಗಲಿ ಲೇಖನ ಬರೆಯುವವರನ್ನಾಗಲಿ ಕಂಡರೆ ಯಾವ ಜಾತಿ-ಭೇದವೆಣಿಸದೆ ಅವರಿಗೆ ಪ್ರೋತ್ಸಾಹ ಕೊಡುತ್ತಿದ್ದರು. ಬೆಂಗಳೂರು ಸಂಸ್ಕೃತ ಕಾಲೇಜಿನಲ್ಲಿ ನನಗೆ ಸಾಹಿತ್ಯ ಬೋಧಕರಾಗಿದ್ದಾಗಲೇ ಮೈಸೂರಿನ ಮಹಾರಾಜಾ ಸಂಸ್ಕೃತ ಕಾಲೇಜಿನ ಪ್ರಧಾನಾಚಾರ್ಯರಾಗಿ ವರ್ಗವಾದರು. ಒಮ್ಮೆ ನಾನು ಮೈಸೂರು ದಸರಾ ಉತ್ಸವ ನೋಡಲು ಹೋಗಿದ್ದೆ. ಆಗ ಅವರು ನನ್ನ ಬಗ್ಗೆ ತೋರಿದ ಶಿಷ್ಯವಾತ್ಸಲ್ಯ ಅವಿಸ್ಮರಣೀಯವಾದುದು. ಅಂದು ಅರಮನೆಯಲ್ಲಿ ದಸರಾ ಪ್ರಯುಕ್ತ ನಡೆಯುತ್ತಿದ್ದ ದರ್ಬಾರಿನಲ್ಲಿ ಎಲ್ಲ ಪಂಡಿತರೂ ತಮ್ಮ ತಮ್ಮ ವೇಷಭೂಷಣಗಳಿಂದ ಅಲಂಕೃತರಾಗಿ ಉಪಸ್ಥಿತರಾಗಿದ್ದರು. ನನ್ನನ್ನು ಸಹ ಪಂಡಿತರ ವೇಷ ಭೂಷಣಗಳಿಂದ ಅಲಂಕರಿಸಿ ಆಸ್ಥಾನಕ್ಕೆ ಕರೆದುಕೊಂಡು ಹೋಗಿ ಪಂಡಿತರ ಸಮೂಹದಲ್ಲಿ ಕುಳ್ಳಿರಿಸಿದರು. ಆ ವೈಭವ ಅತ್ಯಂತ ಮನೋಹರವಾಗಿತ್ತು. ಮಹಾರಾಜರ ಆಸ್ಥಾನದಲ್ಲಿ ಕೂಡಿಸಿದ ಭಾಗ್ಯ ನನ್ನದಾಗಿತ್ತು. ಆ ವೈಭವ ಯಾವ ಕಾಲಕ್ಕೂ ಮರೆಯುವಂತಿಲ್ಲ. ಶ್ರೀಯುತರ ಅಗಾಧವಾದ ಪಾಂಡಿತ್ಯ ಹಾಗೂ ಸಾಹಸವನ್ನರಿತು ಭಾರತ ಸರಕಾರ ಹಾಗೂ ರಾಜ್ಯ ಸರಕಾರ ಗೌರವ ಪ್ರಶಸ್ತಿಯನ್ನು ಅವರ ಜೀವಿತ ಕಾಲದಲ್ಲಿಯೇ ಕೊಟ್ಟುದು ಅತ್ಯಂತ ಸಮಂಜಸವಾಗಿದೆ. ಉಭಯ ಸರಕಾರವೂ ಶ್ರೀಯುತರಿಗೆ ಗೌರವಿಸಿದ್ದು ತನ್ನ ಘನತೆಯನ್ನು ಹೆಚ್ಚಿಸಿಕೊಂಡಂತಾಗಿದೆ.

ಗುರು ಎಂಬ ಪದದ ಅರ್ಥ ಭಾರವಾದುದು. ಗುರು ಎಂಬ ಲೇಖನದಲ್ಲಿ ಭಾರವಿದೆಯೋ ಇಲ್ಲವೋ ಗುರುವಿನ ಗುರು ಪರಮಗುರು ಆರಾಧ್ಯರ ಗುರುತರ ಸ್ಮರಣೆಯಲ್ಲಿ ಕಿಂಚಿತ್ ಗುರುತರವಿದ್ದರೆ ನನ್ನ ಈ ಸಾಹಸ ಸಾರ್ಥಕವಾದೀತೆಂದು ನನ್ನ ಭಾವನೆ.

# ನಾನು ಕಂಡಂತೆ : ಆಸ್ಥಾನ ವಿದ್ವಾನ್ ಎಂ.ಜಿ. ನಂಜುಂಡಾರಾಧ್ಯರು

**ಬಿ.ಕೆ. ಶಿವಯ್ಯ**

---

ವೇ.ಲಿಂ. ಆಸ್ಥಾನ ವಿದ್ವಾನ್ ಎಂ.ಜಿ. ನಂಜುಂಡಾರಾಧ್ಯರಲ್ಲಿ ನಾನು ಕಂಡ ಗುಣಗಳೆಂದರೆ ಮಾನವೀಯತೆ, ತನ್ನಂತೆ ಪರರ ಬಗೆಯುವಿಕೆ, ಸಹಾಯ ಗುಣ ಹಾಗೂ ನಿರ್ಲಿಪ್ತತೆ ಇವು ಅವರಲ್ಲಿ ಸಹಜವಾಗಿ ಮೂಡಿ ಬಂದಿದ್ದವು. ಈ ಗುಣಗಳು ಅನೇಕರನ್ನು ಅವರ ಆಕರ್ಷಣೆಗೆ ಒಳಗಾಗಿಸಿ ಶಿಷ್ಯರನ್ನಾಗಿಸಿದವು. ಅವರಲ್ಲಿ ನಾನೂ ಒಬ್ಬ.

ನಾನು ಸಾಹಿತಿಯೂ ಅಲ್ಲ, ಲೇಖಕನೂ ಅಲ್ಲ. ಅವರ ಒಡನಾಟದಲ್ಲಿ ನನಗೆ ನೆನಪಿದ್ದುದನ್ನು ಇಲ್ಲಿ ಸ್ಮರಿಸಿದ್ದೇನೆ. ಅವರ ಸಾಹಿತ್ಯ ಕೃತಿಗಳು ಅವರ ವ್ಯಕ್ತಿತ್ವ ಹಾಗೂ ಅವರ ವಿಚಾರಗಳನ್ನು ಕುರಿತು ಬೇರೆ, ಬೇರೆ ಮಹನೀಯರು ಈ ಪುಸ್ತಕದಲ್ಲಿ ಬರೆದಿರುವುದರಿಂದ ನಾನು ಆ ಸಾಹಸಕ್ಕೆ ಕೈ ಹಾಕಲಾರೆ.

ನನ್ನ ಮತ್ತು ಆರಾಧ್ಯರ ಸಂಬಂಧ ೬೦ ವರ್ಷಗಳಿಗೂ ಹೆಚ್ಚಿನದು. ೧೯೩೩ನೇ ಇಸವಿ ಮೇ ತಿಂಗಳಲ್ಲಿ ನಾನು ಅದೇ ತಾನೇ ನಮ್ಮೂರಿನ ಸಮೀಪದ ತಾವರೆಕೆರೆಯಲ್ಲಿ ೪ನೇ ತರಗತಿ

ಮುಗಿಸಿ ಒಂದು ಮದುವೆಯ ಸಂದರ್ಭದಲ್ಲಿ ಬೆಂಗಳೂರಿಗೆ ಬಂದೆ. ಬೆಂಗಳೂರಿನಲ್ಲಿ ನನ್ನ ಚಿಕ್ಕಮ್ಮ 'ಚಿಕ್ಕವೀರಮ್ಮ' ಇದ್ದರು. ಅವರ ಯಜಮಾನರು ಸಾಹುಕಾರ ವೀರಭದ್ರಪ್ಪನವರ ಛತ್ರದಲ್ಲಿ ಕೆಲಸದಲ್ಲಿದ್ದರು.

ನನ್ನ ಅಣ್ಣ ಮಹಂತಿನ ಮಠದಲ್ಲಿ ಓದುತ್ತಿದ್ದರು. ನಾನು ಗೌಡರ ವೀರಭದ್ರಪ್ಪನವರ ಪಾಠಶಾಲೆಯಲ್ಲಿ ಖಾಸಗಿಯಾಗಿ 'ಪ್ರಥಮ' ಅಭ್ಯಾಸ ಮಾಡಿ, ಸಂಸ್ಕೃತ ಕಾಲೇಜು ಸೇರುವುದೆಂದು ತೀರ್ಮಾನಿಸಿದೆ. ಆ ಸಂದರ್ಭದಲ್ಲಿ ಆರಾಧ್ಯರು ಗೌ.ವಿ. ಪಾಠಶಾಲೆಯಲ್ಲಿ ಆಗ ತಾನೇ ಸಂಸ್ಕೃತ ಕಾವ್ಯ ಪರೀಕ್ಷೆ ಮುಗಿಸಿದರು. ನಾನು ಮನೆ ಬಿಟ್ಟು ದೂರ ತುಂಬಾ ದಿನ ಇದ್ದವನಲ್ಲ. ಆದ್ದರಿಂದ ಇಲ್ಲಿರುವುದು ನನಗೆ ತುಂಬಾ ಮುಜುಗರವಾಗುತ್ತಿತ್ತು. ಯಾರೂ ಇಲ್ಲದಿದ್ದ ಸಮಯ ನೋಡಿ ಛತ್ರದ ಹಿಂದೆ ಹೋಗಿ ಅಳುತ್ತಿದ್ದೆ. ಇದನ್ನು ಅವರು ಗಮನಿಸಿದರು. ಆಗ ನನಗೆ ಅನೇಕ ಕಥೆಗಳನ್ನು ಹೇಳಿ ಊರಿನ ಚಿಂತೆ ಮರೆಸುತ್ತಿದ್ದರು. ಆ ಕಥೆಗಳು ಈಗ ಜ್ಞಾಪಕವಿಲ್ಲ!

ಆಗ ಅವರು 'ಸಾಹಿತ್ಯ'ದಲ್ಲಿ ಓದುತ್ತಿದ್ದರು. ನಮಗೆ 'ರುದ್ರ' ಇತ್ಯಾದಿಗಳ ಪಾಠ ಹೇಳುತ್ತಿದ್ದರು. ಅವರಿಗೆ ಕೃಷ್ಣಶಾಸ್ತ್ರಿಗಳು, ಸುಬ್ಬನರಸಿಂಹಶಾಸ್ತ್ರಿಗಳು ಕಲಿಸುತ್ತಿದ್ದರು. ನಾನು ಬೆಂಗಳೂರಿಗೆ ಬರುವ ಹೊತ್ತಿಗೆ ಸುಬ್ಬನರಸಿಂಹಶಾಸ್ತ್ರಿಗಳು ಹೊರಟು ಹೋಗಿದ್ದರು. ನಮಗೆ ಆರಾಧ್ಯರು ಆರು ತಿಂಗಳಲ್ಲಿ ಅಕ್ಷರಾಭ್ಯಾಸ ಮಾಡಿಸಿ, ಅಮರಕೋಶದ ಮೊದಲನೇ ಕಾಂಡವನ್ನು ಮುಗಿಸಿದ್ದರು. ಪ್ರಥಮಾ ಎರಡನೆಯ ವರ್ಷಕ್ಕೆ ನಾನು ಸಂಸ್ಕೃತ ಕಾಲೇಜಿಗೆ ಸೇರಿದೆ. ಛತ್ರದ ಮೂವರು ವಿದ್ಯಾರ್ಥಿಗಳಲ್ಲಿ ನಾನೂ ಪಾಸಾದೆ. ಅಲ್ಲಿಂದ ನಾನು ಕಾವ್ಯಕ್ಕೆ ಬಂದೆ. ಮನೆಯ ಕಡೆಯ ತೊಂದರೆಗಳಿಂದಾಗಿ ನನ್ನ ವಿದ್ಯಾಭ್ಯಾಸ ಕುಂಟುವಂತಾಯಿತು. ನಮಗೆ ಅವರು ವೇದ ಪಾಠವನ್ನು ಹೇಳುವುದರೊಡನೆ, ಅವರು ಹೋಗುವ ಕಡೆಗಳಿಗೆಲ್ಲಾ, ಕರೆದುಕೊಂಡು ಹೋಗುತ್ತಿದ್ದರು. ನಾವು ಅವರು ಮಾಡುವ ವಿಧಾನಗಳನ್ನು ನೋಡಿಕೊಳ್ಳುತ್ತಿದ್ದವಷ್ಟೇ ಹೊರತು, ಅವರೊಂದಿಗೆ ಹೇಳುತ್ತಿರಲಿಲ್ಲ. ರುದ್ರಾಭಿಷೇಕ ಮಾಡುವಾಗ ದನಿಗೂಡಿಸುತ್ತಿದ್ದೆವು. ನಮ್ಮ ತಪ್ಪುಗಳನ್ನು ಅವರು ತಿದ್ದುತ್ತಿದ್ದರು.

ಹೋದ ಕಡೆಗಳಲ್ಲಿ ನಾವು ಚಿಕ್ಕ ಹುಡುಗರಾಗಿದ್ದರೂ ಕೂಡ ಅವರು ನಮ್ಮನ್ನು ಬಹುವಚನದಲ್ಲೇ ಮಾತನಾಡಿಸುತ್ತಿದ್ದರು. ಇದರಿಂದ ನಮಗೆ ಸಂಕೋಚವಾಗುತ್ತಿತ್ತು. ಗಾಬರಿಯೂ ಆಗುತ್ತಿತ್ತು. ಅವರು ಬೆಂಗಳೂರಿನಲ್ಲಿರುವವರೆಗೂ ಅವರ ಜೊತೆಯಲ್ಲಿಯೇ ನಾನು ಪೌರೋಹಿತ್ಯಕ್ಕೆ ಹೋಗುತ್ತಿದ್ದೆ. ಇದು ನನ್ನ ಮೇಲೆ ಹೆಚ್ಚಿನ ಪ್ರಭಾವ ಬೀರಿತು. ಅವರು ಹೇಳುತ್ತಿದ್ದರು - ''ಏನು ಕೊಟ್ಟರೆ ಅವನ್ನು ತೆಗೆದುಕೊಳ್ಳಬೇಕು; ಬೇಜಾರು ಪಡಬಾರದು. ಮುಖ ಸಿಂಡರಿಸಬಾರದು, ಇಲ್ಲದಿದ್ದರೆ ಹೋಗಲೇ ಬೇಡಿ''. ಅವರು ಏನು ಕೊಡುತ್ತಾರೆನ್ನುವುದರ ಮೇಲೆ ನಿಮ್ಮ ದೃಷ್ಟಿ ಇರಬಾರದು. ಎಲ್ಲಾ ಮೋಡವೂ ಮಳೆ

ಸುರಿಸುವುದಿಲ್ಲ, ಕೊಡಬಹುದಾದವರು ಕೊಡುತ್ತಾರೆ; ನೀವು ಕರ್ತವ್ಯ ಮಾಡಿ ಬರುತ್ತೀರಿ. ಅವರ ದುಡ್ಡು ಉಳಿಯುವುದಿಲ್ಲ ನೀವು ಕರ್ತವ್ಯ ಮಾಡಿದ್ದು ಉಳಿಯುತ್ತದೆ''. ಈ ಮಾತುಗಳು ನನ್ನ ಮೇಲೆ ವಿಶೇಷವಾಗಿ ಹೆಚ್ಚಿನ ಪ್ರಭಾವ ಬೀರಿದವು. ಅದನ್ನು ನಾನು ಇದುವರೆಗೂ ಬಿಡದೇ ಪಾಲಿಸಿಕೊಂಡು ಬಂದಿದ್ದೇನೆ. ನಾನು ಸ್ವಲ್ಪ ಮಟ್ಟಿಗೆ ಯಶಸ್ವಿಯಾಗಿರುವುದಕ್ಕೆ ಅದೂ ಒಂದು ಕಾರಣ. ನನ್ನ ಜೊತೆಯವರೂ ಅದೇ ರೀತಿ ಇರುವುದರಿಂದ ಅವರೂ ಯಶಸ್ವಿಯಾಗುತ್ತಿದ್ದಾರೆ.

ನಾನು ಸಂಸ್ಕೃತಕಾವ್ಯ ಪರೀಕ್ಷೆ ಮುಗಿಸುವ ಹೊತ್ತಿಗೆ ಅವರು ಸಿದ್ಧಗಂಗಾ ಕ್ಷೇತ್ರದ ಮಹಿಮೆ ಹಾಗೂ ಅಲ್ಲಿನ ಪಂಡಿತರ ವೈಚಾರಿಕತೆಗೆ ಮಾರು ಹೋಗಿ ಅಭ್ಯಾಸ ಮುಂದುವರಿಸಲು ಅಲ್ಲಿಗೆ ಹೋದರು. ಅಲ್ಲಿ 'ವಿದ್ವತ್' ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಬೆಂಗಳೂರು ಚಾಮರಾಜೇಂದ್ರ ಸಂಸ್ಕೃತ ಕಾಲೇಜಿನಲ್ಲಿ ಅಧ್ಯಾಪಕರಾಗಿ ಬಂದರು. ಸ್ವಂತ ಅಭ್ಯಾಸದಿಂದ ಮದರಾಸು ವಿಶ್ವವಿದ್ಯಾನಿಲಯದ ಕನ್ನಡ 'ವಿದ್ವಾನ್' ಪರೀಕ್ಷೆಯನ್ನು ಮಾಡಿಕೊಂಡರು. ಹೀಗೆ ಅವರ ವಿದ್ವತ್ತು ಬಹು ಮುಖವಾಯಿತು.

ನಾನು ಸಂಸ್ಕೃತ ಕಾಲೇಜಿನಲ್ಲಿ ಓದುತ್ತಿರುವಾಗಲೇ ಕನ್ನಡದಲ್ಲಿ 'ಜಾಣ' ಮಾಡಿಕೊಂಡಿದ್ದೆ. 'ಸಾಹಿತ್ಯ' ಆದ ತಕ್ಷಣ ಮಾಧ್ಯಮಿಕ ಶಾಲೆಯ ಉಪಾಧ್ಯಾಯನಾದೆ. ಆಗ ಅವರು ತುಂಬಾ ನೊಂದುಕೊಂಡರು. ಅಷ್ಟು ಹೊತ್ತಿಗೆ ನಾನು ಸಂಸಾರಿಯೂ, ಮಕ್ಕಳೊಂದಿಗನೂ ಆಗಿದ್ದೆ. ನಂತರ ಮೈಸೂರಿಗೆ ಹೋಗಿ ಅವರಿಂದ ಪಾಠ ಹೇಳಿಸಿಕೊಂಡು 'ಕನ್ನಡ ಪಂಡಿತ' ಪರೀಕ್ಷೆ ಮಾಡಿಕೊಂಡೆ.

ನಾನು ಶ್ರೀ ಟಿ. ವೀರಪ್ಪ, ಎಚ್.ಕೆ. ಸಿದ್ಧಗಂಗಯ್ಯ ಹಾಗೂ ಬಸವರಾಜಯ್ಯನವರ ಬಳಿಯೂ ಸ್ವಲ್ಪ ಪಾಠ ಕಲಿತೆ. ನನಗೆ ಸಂಸ್ಕೃತ ಸುಲಭವಾಗಿತ್ತು. ಕನ್ನಡ ಕಷ್ಟವಾಗಿತ್ತು. ಮೊದಲನೆ ಸಲ ಫೇಲಾದೆ ಆಮೇಲೆ ಮತ್ತೆ ಕಟ್ಟಿ ಪಾಸಾದೆ. ಆನಂತರ ಪ್ರೌಢಶಾಲೆಗೆ ಬಂದೆ ಆಗ ಅವರು ''ಈಗ ನನಗೆ ಸಂತೋಷವಾಯಿತು'' ಎಂದು ಹೇಳಿ ನನಗೆ ಕೊಡಲೆಂದು ತೆಗೆದು ಇಟ್ಟಿದ್ದ ಶಾಲನ್ನು ನಮ್ಮ ಮನೆಗೇ ಬಂದು ಹೊದಿಸಿದರು.

ಗೌಡರ ವೀರಭದ್ರಪ್ಪನವರ ಛತ್ರದಲ್ಲಿ ಓದುವಾಗ ಯಾರಾದರೂ ಖಾಯಿಲೆ ಬಿದ್ದರೆ ಅವರಿಗೆ ಆರೈಕೆ ಮಾಡುತ್ತಿದ್ದರು. ಗಂಜಿ ಕಾಯಿಸಿ ಕೊಡುವುದರಿಂದ ಆತನಿಗೆ ಬೆವರು ಒರೆಸಿ ಆಸ್ಪತ್ರೆಗೆ ಸೇರಿಸಿ ನೋಡಿಕೊಳ್ಳುತ್ತಿದ್ದರು. ಅವರಿಗೆ ಗೊತ್ತಿದ್ದವರಾಗಲಿ, ಅಪರಿಚಿತರಾಗಲಿ ಎಂತಹ ಖಾಯಿಲೆಯೇ ಆಗಲಿ ಖಾಯಲೆ ಬಿದ್ದವರಿಗೆ ತಾವೇ ನಿಂತು ಆರೈಕೆ ಮಾಡಿ ಅವರನ್ನು ಗುಣಮುಖರನ್ನಾಗಿಸುತ್ತಿದ್ದರು.

ಕೆಲವು ವಿಷಯಗಳಲ್ಲಿ ನಮ್ಮಲ್ಲಿ ಅಭಿಪ್ರಾಯ ಭೇದವಿತ್ತು. ಮಠಕ್ಕೆ ಸ್ವಾಮಿಯಾಗುವ ಒಬ್ಬ ವಿದ್ಯಾರ್ಥಿ ಸರಿಯಾಗಿ ಓದುತ್ತಿಲ್ಲ; ಆತ ಅದಕ್ಕೆ ಅನರ್ಹ ಎಂದು ನಾನು ಒಮ್ಮೆ ಹೇಳಿದಾಗ ಆರಾಧ್ಯರು ಸಿಟ್ಟುಗೊಂಡು ನನ್ನನ್ನು ಹೊಡೆಯುವುದಕ್ಕೇ ಬಂದರು. ಆಗ ನಾನು ಸುಮ್ಮನಾದೆ. ಅನಂತರ ಅವರಿಗೇ ಅದು ವೇದ್ಯವಾದ ಮೇಲೆ ನಾನು ಹೇಳಿದ್ದು ಸರಿಯೆಂದು ಒಪ್ಪಿಕೊಂಡರು. ಆಮೇಲೆ ಅವರು ಆತನಿಂದ ಎಷ್ಟೋ ನಷ್ಟ ಅನುಭವಿಸಿದರು. ಇಂತಹ ಅನೇಕ ಪ್ರಸಂಗಗಳನ್ನು ನಾನು ನೋಡಿದ್ದೇನೆ. ಅವರು ರೇಗಿದಾಗ ನಾವು ಸುಮ್ಮನಿದ್ದು ಬಿಡುತ್ತಿದ್ದವು. ಅನಂತರ ಅವರಿಗೇ ಮನವರಿಕೆಯಾದ ಮೇಲೆ ಅವರು ಒಪ್ಪಿಕೊಳ್ಳುತ್ತಿದ್ದರು.

ಗೌ.ವೀ. ಪಾಠಶಾಲೆಯಲ್ಲಿ ಓದುತ್ತಿರುವಾಗ ಬೆಳಗ್ಗೆ ಎದ್ದ ಕೂಡಲೇ ಪ್ರಾರ್ಥನೆಗೆ ಹಾಜರಾಗಬೇಕಿತ್ತು. ಅದಕ್ಕೆ ಬಾರದವರಿಗೆ ಆರು ಕಾಸಿನಿಂದ ಒಂದಾಣೆಯವರೆಗೆ ದಂಡ ಹಾಕುತ್ತಿದ್ದರು. ಸರಕಾರದ ಸ್ಕಾಲರ್‌ಶಿಪ್‌ನ ಹಣದಲ್ಲಿ ಹಾಗೂ ನಾವು ಬಿನ್ನಹಕ್ಕೆ ಹೋಗಿದ್ದ ಹಣದಲ್ಲಿ ದಂಡ ತೆರುತ್ತಿದ್ದವು. ದಂಡದ ಹಣದಲ್ಲಿ ಛತ್ರದಲ್ಲೇ ಒಂದು ಗ್ರಂಥಾಲಯವನ್ನು ಮಾಡಿದೆವು. ಛತ್ರದಲ್ಲಿ ರಾತ್ರಿ ಒಂಬತ್ತು ಗಂಟೆಗೆ ಚೆನ್ನಯ್ಯನವರು ದೀಪಗಳನ್ನು ಆರಿಸುತ್ತಿದ್ದರು. ಆರಾಧ್ಯರು ಸೀಮೆಎಣ್ಣೆ ದೀಪ ತಂದಿರಿಸಿಕೊಂಡು ನಮ್ಮನ್ನು ಓದಿಸುತ್ತಿದ್ದರು. ಅವರಿಗೆ ಈಜುವುದು ಬಲು ಇಷ್ಟ. ನಮ್ಮನ್ನು ಕೆಂಪಾಂಬುಧಿ ಕೆರೆಗೆ ಕರೆದುಕೊಂಡು ಹೋಗುತ್ತಿದ್ದರು. ಕೆಲವರು ಚೆನ್ನಾಗಿ ಕಲಿತರೆ ನನಗೆ ಕಲಿಯಲಾಗಲಿಲ್ಲ.

ಒಂದು ದಿನ ವಾರಾನ್ನದ ಊಟವಿಲ್ಲದೆ ನಾನು ಮಲಗಿದ್ದೆ. ಅವರು ಬಂದು ಜೋಳಿಗೆಯನ್ನು ನನಗೆ ಕಟ್ಟಿ 'ಭಿಕ್ಷೆಗೆ ಹೋಗು' ಎಂದು ನನ್ನನ್ನು ಕಳುಹಿಸಿದರು. ಒಂದು ಮನೆಗೆ ಹೋದರೆ ಅವರು ರೊಟ್ಟಿ ಭಿಕ್ಷೆ ಹಾಕಿದರು, ಇನ್ನೊಂದು ಮನೆಯಲ್ಲಿ ಸ್ವಲ್ಪ ಸಿಕ್ಕಿತು. 'ಭಾಣವಾರದ ಹುಚ್ಚಪ್ಪನವರು' ಇಲ್ಲೇ ಊಟಮಾಡಿಬಿಡಣ್ಣ ಎಂದರು. ಇನ್ನೊಂದು ದಿನ ಹೋಗುವ ಹೊತ್ತಿಗೆ ದೊಡ್ಡ ಸಾಹುಕಾರರು ಎದುರಾದರು. 'ಎಲ್ಲಿಗೆ ? ಎಂದರು. 'ಇಲ್ಲೇ ಸ್ವಲ್ಪ ಕೆಲಸವಿತ್ತು' ಎಂದು ಹೇಳಿ ವಾಪಸಾದೆ. ಅಂದಿನಿಂದ ಭಿಕ್ಷೆಗೆ ಹೋಗಲಿಲ್ಲ, ಶ್ರೀ ಗೌಡರ ವೀರಭದ್ರಪ್ಪನವರ ಮನೆಯಲ್ಲೇ ಭೋಜನವೆಂದಾಯಿತು. ಆರಾಧ್ಯರು ತಾವು ವಾರಾನ್ನಕ್ಕೆ ಹೋಗುತ್ತಿದ್ದ ಮನೆಗಳಿಗೆ ನಮ್ಮನ್ನು ಕರೆದುಕೊಂಡು ಹೋಗಿ ಇವರಿಗೆ ವಾರಾನ್ನ ಕೊಡಿ ಎಂದು ನಮಗೆ ವಾರಾನ್ನ ಕೊಡಿಸುತ್ತಿದ್ದರು. ಅವರ ಜೊತೆ ನಾವು ಸಾಹುಕಾರರ, ಮನೆಗೆ ಮಾತ್ರ ಊಟಕ್ಕೆ ಹೋಗುತ್ತಿದ್ದೆವು. ಆಗ ವಿದ್ಯಾರ್ಥಿಗಳು ಮನೆಗೆ ಊಟಕ್ಕೆ ಬಂದರೆ ಜನ ಬಹಳ ಸಂತೋಷ ಪಡುತ್ತಿದ್ದರು. ಪಾದಪೂಜೆ ಮೊದಲಾದ ವಿಶೇಷ ದಿನಗಳಲ್ಲಿ ಅವರು ಎಲ್ಲರನ್ನು ಕರೆಯುತ್ತಿದ್ದರು. ಆಗ ಅವರು ಮೊದಲು ಕುಳಿತುಕೊಳ್ಳುತ್ತಿದ್ದರು. ನಾವೆಲ್ಲಾ ರುದ್ರ ಹೇಳುತ್ತಿದ್ದವು. ರುದ್ರಪ್ಪನವರ ಮನೆಯಲ್ಲಿ 'ಭಾರತ ಹುಣ್ಣಿಮೆ' ಅಂತ ಮಾಡಿ ಎಲ್ಲಾ ವಿದ್ಯಾರ್ಥಿಗಳಿಗೆ ಪಂಚೆ ಶಲ್ಯ ಬೀಸಣಿಗೆ ಕೊಡುತ್ತಿದ್ದರು. ಕೆಲವರಿಗೆ ಬಟ್ಟೆಗಳನ್ನೂ

ಕೊಡುತ್ತಿದ್ದರು. ಹಬ್ಬ ಹರಿದಿನಗಳಲ್ಲಿ ವಿದ್ಯಾರ್ಥಿಗಳಿಗೆ ಎಣ್ಣೆ ಸ್ನಾನಕ್ಕೆ ಬೇಕಾದ ವಸ್ತುಗಳನ್ನೂ ಕಳಿಸುತ್ತಿದ್ದರು. ಶಿವರಾತ್ರಿಯ ದಿವಸ ತಂಬಿಟ್ಟು, ಹುರಿಟ್ಟು ಇತ್ಯಾದಿಗಳನ್ನು ಮಾಡಿ ಛತ್ರಕ್ಕೆ ಕಳಿಸುತ್ತಿದ್ದರು. ಅದನ್ನೆಲ್ಲಾ ಆರಾಧ್ಯರು ಎಲ್ಲರಿಗೂ ಹಂಚುತ್ತಿದ್ದರು. ಅವರಿಲ್ಲದಿದ್ದಾಗ ಅವುಗಳ ದುರುಪಯೋಗವಾಗುತ್ತಿತ್ತು. ತಾವು ಮಾತ್ರ ಕಟ್ಟುಪವಾಸ ಮಾಡುತ್ತಿದ್ದರು. ತಾವೆಲ್ಲಾದರೂ ಪೌರೋಹಿತ್ಯಕ್ಕೆ ಹೋಗಿ ತಂದ ಸಾಮಾನುಗಳನ್ನು ಎಲ್ಲಾ ವಿದ್ಯಾರ್ಥಿಗಳಿಗೂ ಹಂಚುತ್ತಿದ್ದರು. ಸ್ವಯಂ ಪಾಕ ಮಾಡಿಕೊಳ್ಳುತ್ತಿದ್ದ ವಿದ್ಯಾರ್ಥಿಗಳಿಗೆ ಹೆಚ್ಚು ಉಪಯೋಗ ಅದರಿಂದ ಆಗುತ್ತಿತ್ತು. ಬಟ್ಟೆಗಳಿಲ್ಲದವರಿಗೆ ಬಟ್ಟೆಗಳನ್ನು ಕೊಟ್ಟು ಬಿಡುತ್ತಿದ್ದರು. ಪ್ರಾರ್ಥನೆಗೆ ಬಂದೆ ಬರಬೇಕು, ಇಷ್ಟು ಗಂಟೆ ಓದಲೇಬೇಕು, ಬೆಳಗ್ಗೆ ಐದಕ್ಕೆ ಅವರ ಜೊತೆ ವಾಯುವಿಹಾರಕ್ಕೆ ಹೋಗಲೇಬೇಕು. ಇವುಗಳಲ್ಲಿ ಅವರು ಕಟ್ಟುನಿಟ್ಟಾಗಿದ್ದರು. ಆದರೆ ಅವರನ್ನು ವಿರೋಧಿಸಿದ ವಿದ್ಯಾರ್ಥಿಗಳು ಕಾಯಿಲೆಯಿಂದ ಮಲಗಿದಾಗಲೂ ಕೂಡ ಖರ್ಚನ್ನೂ ಇವರೇ ವಹಿಸಿಕೊಂಡು ಆಸ್ಪತ್ರೆಗೆ ಸೇರಿಸಿ, ಆರೈಕೆ ಮಾಡುತ್ತಿದ್ದರು. ಹೀಗೆ ಅವರು ವಿದ್ಯಾರ್ಥಿಗಳ ಮೇಲೆ ತುಂಬಾ ಪ್ರಭಾವ ಬೀರಿದ್ದರು.

ಅವರ ಇನ್ನೊಂದು ವಿಶೇಷವೆಂದರೆ ಅವರ ಸುತ್ತ ಎಲ್ಲರೂ ಮಾತನಾಡುತ್ತಿದ್ದರೂ ಮಲಗಿದಾಕ್ಷಣ ಅವರು ನಿದ್ದೆ ಹೋಗಿಬಿಡುತ್ತಿದ್ದರು. ಎಬ್ಬಿಸಿದರೆ ಗಾಬರಿಯಿಂದ ಏಳುತ್ತಿದ್ದರು.

ಸ್ನಾನ ಪೂಜೆಗಳಲ್ಲಿ ತುಂಬಾ ನಿಷ್ಠೆಯಿಂದಿದ್ದರು. ಪೂಜೆಯಾಗುವವರೆಗೆ ಏನನ್ನೂ ತೆಗೆದುಕೊಳ್ಳುತ್ತಿರಲಿಲ್ಲ. ಅನಾರೋಗ್ಯದ ಕಾರಣದಿಂದ ಖಾರ ತಿನ್ನುತ್ತಿರಲಿಲ್ಲ.

೧೯೩೪ಳನೇ ಇಸವಿಯಲ್ಲಿ ಪುಣೆಯಲ್ಲಿ ಗಾಂಧೀಜಿ ಸತ್ಯಾಗ್ರಹ ನಡೆಸುತ್ತಿದ್ದಾಗ ಹೋಗಿ ಹಿಂದಿಯಲ್ಲಿ ಗೀತೆಯ ಬಗ್ಗೆ ಉಪನ್ಯಾಸ ಮಾಡಿ, ಅವರ ಸಹಿ ತೆಗೆದುಕೊಂಡು ಬಂದಿದ್ದರು. ಐದು ರೂಪಾಯಿ ಹಣ ಕೊಡಬೇಕಾಗಿತ್ತು. ಉಪನ್ಯಾಸ ಮಾಡಿದವರಿಗೆ ಉಚಿತವಾಗಿ ಗಾಂಧೀಜಿ ಸಹಿ ಮಾಡುತ್ತಿದ್ದರು.

ಆ ಸತ್ಯಾಗ್ರಹದ ಫೋಟೋ ಕೂಡ ಇತ್ತು. ಈಗ ಕಾಣುತ್ತಿಲ್ಲ. ಅದೇ ಸಮಯದಲ್ಲಿ ಅವರು ಮುಂಬಯಿಗೂ ಹೋಗಿ ಬಂದಿದ್ದರು. ಆಗ ಪ್ರಯಾಣದಲ್ಲಿ ಆಹಾರವೆಂದು ಚಿಕ್ಕವೀರಮ್ಮನವರಿಂದ 'ಮಾಲದಿ' ಮಾಡಿಸಿಕೊಂಡು ಹೋಗಿದ್ದರು. ಅದನ್ನು ಹಾಲಿನಲ್ಲಿ ಬೆರೆಸಿ ತಿನ್ನುವುದನ್ನು ಬಿಟ್ಟರೆ ಬೇರೆ ಆಹಾರ ಎಲ್ಲಿಯೂ ಸೇವಿಸದೆ ಬೆಂಗಳೂರಿಗೆ ಹಿಂದಿರುಗಿದ ಮೇಲೆ ಖಾಯಿಲೆ ಮಲಗಿದರು.

ನಮ್ಮನ್ನು ಕನ್ನಡ ಸಾಹಿತ್ಯ ಪರಿಷತ್ತು, ರಾಮಕೃಷ್ಣಾಶ್ರಮ ಮಹಂತರಮಠ ಮೊದಲಾದ ಕಡೆ ನಡೆಯುತ್ತಿದ್ದ ಭಾಷಣಗಳಿಗೆ, ಗೀತಾಜಯಂತಿ ಉಪನ್ಯಾಸಗಳಿಗೆ ಕರೆದುಕೊಂಡು

ಹೋಗುತ್ತಿದ್ದರು. ಆರ್ಯ ಸಮಾಜಕ್ಕೆ ಹೋಗಿ ಅಲ್ಲಿ ವೇದಗಳಿಗೆ ಅರ್ಥ ಹೇಳುತ್ತಿದ್ದರು. ಇವೆಲ್ಲಾ ನನ್ನ ಮೇಲೆ ಅಚ್ಚಳಿಯದ ಪ್ರಭಾವವನ್ನು ಬೀರಿವೆ.

ತಮ್ಮಂತೆ ಎಲ್ಲರೂ ಮುಂದುವರಿಯಬೇಕೆಂದು ಹಳ್ಳಿಯಿಂದ ಅನೇಕರನ್ನು ಕರೆದುಕೊಂಡು ಬಂದು ಓದಲು ಪ್ರೋತ್ಸಾಹಿಸುತ್ತಿದ್ದರು. ವಾರದಲ್ಲಿ ಒಂದು ದಿನ ಮೌನವ್ರತ ಮಾಡುತ್ತಿದ್ದರು. ಮೈಸೂರಿಗೆ ಹೋಗುವವರೆಗೂ ಖಾದಿ ಬಿಟ್ಟು ಬೇರೆ ಏನನ್ನೂ ತೊಡುತ್ತಿರಲಿಲ್ಲ. ವೇದಗಳ ಅರ್ಥ ತಿಳಿದುಕೊಂಡು ಬಾಯಿಪಾಠ ಮಾಡಿ ಎಂದು ವೇದಪಾಠ ಮಾಡುವಾಗ ಅರ್ಥ ವಿವರಣೆ ನೀಡುತ್ತಿದ್ದರು.

ಪ್ರಕೃತಿಯ ಬಗೆಗೆ ಅವರಿಗೆ ಅಪಾರವಾದ ಪ್ರೀತಿ. ಲಾಲ್‌ಬಾಗ್ ಕಬ್ಬನ್‌ಪಾರ್ಕ್‌ಗಳಿಗೆ ವಾಯುವಿಹಾರಕ್ಕೆ ಹೋಗುತ್ತಿದ್ದರು. ಅವರು ನಮ್ಮನ್ನು ಸಿನಿಮಾಕ್ಕೂ ಕರೆದುಕೊಂಡು ಹೋಗುತ್ತಿದ್ದರು. ವಸಂತಸೇನಾ, ವಂದೇಮಾತರಂ, ಶಾಕುಂತಲಾ, ಹರಿಶ್ಚಂದ್ರ, ಕುರುಕ್ಷೇತ್ರ ಇವುಗಳಿಗೆ ಅವರೇ ದುಡ್ಡು(ಎರಡಾಣೆ) ಕೊಟ್ಟು ಕರೆದುಕೊಂಡು ಹೋಗುತ್ತಿದ್ದರು. ಕಂಟೋನ್‌ಮೆಂಟ್‌ನಲ್ಲಿ 'Future hundred years' ಎಂಬ ಸಿನಿಮಾಗೆ ಒಟ್ಟಿಗೆ ಹೋಗಿ ಬಂದಿದ್ದೆವು. ಎಷ್ಟೋ ಬಾರಿ ಅವರಿಗೆ ತಿಳಿಯದಂತೆ ನಾವು ಕದ್ದು ಹೋಗುತ್ತಿದ್ದವು. ಅದು ಅವರಿಗೆ ಗೊತ್ತಾದ ಮೇಲೂ ನಮ್ಮನ್ನು ಕೇಳದೇ ಸುಮ್ಮನಿದ್ದು ಬಿಡುತ್ತಿದ್ದರು. ಕಲೆಗೆ ಅವರು ಹೆಚ್ಚಿನ ಉತ್ತೇಜನ ನೀಡುತ್ತಿದ್ದರು.

ಅವರ ಕಲಾಪ್ರೋತ್ಸಾಹಕ್ಕೆ ಉದಾಹರಣೆ ಕೊಡುವುದಾದರೆ ಸಂಸ್ಕೃತ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದಾಗ ಅವರೊಂದಿಗೆ ನಾನು 'ಮಧ್ಯಮ ವ್ಯಾಯೋಗ' ನಾಟಕದಲ್ಲಿ ಭೀಮನ ಪಾತ್ರವಲ್ಲಿ ಅಭಿನಯಿಸಿದ್ದೆ. ಅವರು 'ಚಾರುದತ್ತ' ಮೊದಲಾದ ನಾಟಕಗಳನ್ನು ವಿದ್ಯಾರ್ಥಿಗಳಿಂದ ಮಾಡಿಸುತ್ತಿದ್ದರು. ನನಗೆ ಅವರಂತೆ ಸ್ವಾಮಿಗಳ ಸಂಪರ್ಕ ಒಗ್ಗಿ ಇರಲಿಲ್ಲ. ಅವರಿಗೆ ಕೆಲವು 'ಭಗವಾನ್'ರ ಬಗೆಗೂ ಗೌರವವಿತ್ತು. ವಿದ್ಯಾದಾನ ಮಾಡುವ ಮಠಗಳ ಸಾರ್ವಜನಿಕ ಕಾರ್ಯಮಾಡುವ ಮತ್ತು ಮಠಗಳ ಬಗ್ಗೆ ತುಂಬಾ ಗೌರವ ಹಾಗೂ ಭಕ್ತಿ ಇತ್ತು.

ಆರಾಧ್ಯರೇ ಮುಂದೆ ನಿಂತು ನನ್ನ ಮದುವೆಯನ್ನು ಮಾಡಿಸಿದರು. ಅದಾದ ಒಂದೇ ತಿಂಗಳಲ್ಲಿ ನಾವು ಅವರಿಗೆ 'ಕನ್ಯಾದಾನ' ಮಾಡಿಕೊಡುವ ಪ್ರಸಂಗ ಬಂತು. ನಾಳೆ ಮದುವೆ ಎನ್ನುವಾಗಲೂ ಕೂಡ ಅವರು ಗೌರಿಬಿದನೂರಿನಲ್ಲಿ ದೇವರ ಪ್ರತಿಷ್ಠಾ ಕಾರ್ಯಕ್ಕಾಗಿ ಹೋಗಿದ್ದರು. ನಾವು ವಿದ್ಯಾರ್ಥಿಗಳೇ ಸೇರಿ ಮದುವೆ ಮಾಡಿದೆವು. ಅನಂತರ ಎರಡೂ ಕುಟುಂಬದವರು ಒಂದೇ ಮನೆಯವರಂತೆ ಇದ್ದೆವು. ನಮ್ಮ ಕಾಲಕ್ಕೆ ಈ ಸಂಬಂಧ ಮುಗಿದು ಹೋಗಬಾರದೆಂಬ ಆತಂಕ ನಮ್ಮಿಬ್ಬರಲ್ಲಿಯೂ ಇತ್ತು. ನನ್ನ ಎರಡನೇ ಮಗ ಪ್ರಸಾದನ ಮದುವೆ ವಿಷಯವನ್ನು ಶಿವಮೂರ್ತಿಯವರ ಬಳಿ ಪ್ರಸ್ತಾಪಿಸಿ, ಆರಾಧ್ಯರು ಒಪ್ಪುವುದಾದರೆ

ಅವರ ಕೊನೆಯ ಮಗಳು ಮುಕ್ತಾಳನ್ನು ನನ್ನ ಮಗನಿಗೆ ನಾವೇ ಮದುವೆ ಮಾಡಿಕೊಳ್ಳುವುದಾಗಿ ತಿಳಿಸಿದೆ. ಅವರೇ ಮಾಡಿಕೊಡಲು ಒಪ್ಪಿದರು. ನಿಶ್ಚಯ ಕಾರ್ಯವಾದ ಮೇಲೆ ಅನಾರೋಗ್ಯದಿಂದ ಆಸ್ಪತ್ರೆ ಸೇರುವಂತಾಯಿತು. ಆದರೂ ಯಾವುದೇ ಕಾರಣಕ್ಕೂ ಈ ಕಾರ್ಯ ನಿಲ್ಲಬಾರದೆಂದು ನನ್ನ ಮನೆಯವರಿಗೆ ಹೇಳಿದ್ದೆ. ಮನೆಯವರೂ ಇದಕ್ಕೆ ಒಪ್ಪಿದರು. ಈಗ ಮೊಮ್ಮಕ್ಕಳನ್ನು ನೋಡುವಾಗ ಆರಾಧ್ಯರನ್ನೇ ನೋಡಿದಂತೆ ಆಗುತ್ತದೆ. ಈ ಮಕ್ಕಳೂ ಅವರಂತೆ ಓದಿ ವಿದ್ಯಾವಂತರಾದರೆ ಸಾಕೆಂದು ಹಾರೈಸುತ್ತೇನೆ. ಆರಾಧ್ಯರನ್ನು ಈಗಲೂ ನಾನು ಬಹಳವಾಗಿ ಸ್ಮರಿಸುತ್ತೇನೆ. ಅವರಿಲ್ಲದಿದ್ದರೆ ನಾನು ಅತ್ತುಕೊಂಡು ಊರಿಗೆ ಬಂದು ಬಿಡುತ್ತಿದ್ದನೇನೋ! ಅವರು ನಾನು ಇಲ್ಲಿ ನೆಲೆ ನಿಲ್ಲುವಂತೆ ಮಾಡಿದರು. ಜನಗಳ ಜೊತೆ ಬೆರೆಯುವುದನ್ನು ತೋರಿಸಿಕೊಟ್ಟರು. ಹೆಚ್ಚು ಹೆಚ್ಚು ಪ್ರೋತ್ಸಾಹವನ್ನು ಕೊಟ್ಟರು. ಅವರು ಕೊಟ್ಟ ಕೆಂಪು ಶಾಲು ಅವರ ಜ್ಞಾಪಕಾರ್ಥವಾಗಿ ಇನ್ನೂ ನನ್ನ ಬಳಿ ಇದೆ. ನನ್ನ ತಂದೆ ತೀರಿಕೊಂಡಾಗ ನನಗೆ ಹೆಚ್ಚು ದುಃಖವಾಗಲಿಲ್ಲ. ಆದರೆ ಇವರು ತೀರಿಕೊಂಡಾಗ ನನಗೆ ಅಳು ತಡೆಯಲಾಗಲಿಲ್ಲ. ಈಗಲೂ ಅವರನ್ನು ನೆನೆಸಿಕೊಂಡು ದುಃಖವಾದಾಗ ಮೊಮ್ಮಕ್ಕಳನ್ನು ಎತ್ತಿಕೊಂಡರೆ ಸಮಾಧಾನವಾಗುತ್ತದೆ. ಅವರ 'ಪೂರ್ವಪ್ರಯೋಗ' ಮೊದಲಾದ ಪುಸ್ತಕಗಳನ್ನು ಉಪಯೋಗಿಸುವಾಗ ಅವರ ನೆನಪು ಹೆಚ್ಚಾಗುತ್ತದೆ.

ನುಡಿದಂತೆ ನಡೆಯುವ ಮೂಲಕ ಅವರು ನಮ್ಮನ್ನು ತಿದ್ದಿ ಬೆಳೆಸಿದರು. ಹೀಗೆ ನನ್ನ ಮತ್ತು ಅವರ ಸಂಬಂಧ ಬೆಳೆದು ಬಂಧುತ್ವ ಬೆಳೆಯಿತು. ಬಂಧುತ್ವದ ಜೊತೆಗೆ ಮಮತೆ, ವಾತ್ಸಲ್ಯಗಳು ಬೆಳೆದು ಕೊನೆಯವರೆಗೂ ನಮ್ಮ ಸ್ನೇಹ ಅಮರವಾಯಿತು.

■

# ಸಂಸ್ಕೃತವನ್ನು ಸಾರ್ವತ್ರಿಕಗೊಳಿಸಿದ ಆಸ್ಥಾನ ವಿದ್ವಾನ್ ಎಂ.ಜಿ.ಎನ್.

ಎಲ್. ಶಿವಲಿಂಗಪ್ಪ

---

ಮೈಸೂರಿನ ಕಚ್ಚೆಪಂಚೆ ಬಿಳಿಜುಬ್ಬ, ಜರತಾರಿ ಶಾಲು, ವಿಶಾಲವಾದ ಮುಖದ ಮೇಲೆ ತ್ರಿಪುಂಡ್ರ ಭಸ್ಮಧಾರಣೆ ಸದಾ ಲವಲವಿಕೆಯುಳ್ಳ ಹಸನ್ಮುಖಿ. ಬಾಯ್ತೆರೆದರೆ ಸಾಕು ಸಂಸ್ಕೃತ ಪಾಂಡಿತ್ಯ ದರ್ಶನ, ಹಿಡಿದಪಟ್ಟು, ಬಿಡದ ಛಲ, ಬರವಣಿಗೆಯೇ ಬದುಕು ಮಾಡಿಕೊಂಡಿದ್ದ ಶ್ರೀಮಾನ್ ನಂಜುಂಡಾರಾಧ್ಯರು ಆಸ್ಥಾನ ವಿದ್ವಾಂಸರಾದದ್ದು, ಅರಮನೆ, ಗುರುಮನೆಗಳಿಂದ ಪುರಸ್ಕೃತರಾದದ್ದು ಒಂದು ಪವಾಡವೇ ಸರಿ.

ಬೆಂಗಳೂರಿನಿಂದ ಮೈಸೂರು ಅರಮನೆಪಾಠಶಾಲೆಗೆ ವರ್ಗವಾದ ಸಂದರ್ಭದಲ್ಲಿ ನಾನಿನ್ನೂ ಮಾಧ್ಯಮಿಕ ಶಾಲೆಯ ವಿದ್ಯಾರ್ಥಿ. ತಿರುಳುಗನ್ನಡವನ್ನು ಅರಿಯಲಿಕ್ಕೆ ಕಷ್ಟಪಡುತ್ತಿದ್ದ ಕಾಲದಲ್ಲಿ ಸಂಸ್ಕೃತದಂತಹ ಉಕ್ಕಿನ ಕಡಲೆಯನ್ನು ಸರಳ ಸುಂದರ ಸುಲಲಿತವಾದ, ಜೊತೆಗೆ ಶೃಂಗಾರದ ರಸಮಯ ಸನ್ನಿವೇಶಗಳನ್ನು ಉದಾಹರಣೆ ಸಹಿತ ಹೇಳಿ ಕನ್ನಡಕ್ಕಿಂತ ಇದು ಸುಲಭ ಗ್ರಾಹ್ಯ ಎನ್ನುವಂತೆ ಮನವರಿಕೆ ಮಾಡುತ್ತಿದ್ದ ಮಹಾನ್ ಶೈಲಿ ಅವರದು. ಬಾಲಕ ಬಾಲಕಿಯರಿಗೆ ಅರ್ಥವಾಗುವಂತೆ ಪ್ರತಿಯೊಂದು ಶ್ಲೋಕಗಳನ್ನು ಬಿಡಿಸಿ ಬಿಡಿಸಿ ಹೇಳುತ್ತಿದ್ದರು. ಗಮಕವಾಚನ ಮಾಡಿದ ಅನೇಕ ಕಾರ್ಯಕ್ರಮಗಳಲ್ಲಿ ಭಾಗವಹಿಸಿದ ನನಗೆ ಮಾತ್ರವಲ್ಲ - ಬಂದವರೆಲ್ಲರೂ ಮಂತ್ರಮುಗ್ಧರಾಗುವಂತೆ ಶಬ್ದಾರ್ಥಸಹಿತ ನೀಡುತ್ತಿದ್ದ

ವ್ಯಾಖ್ಯಾನ ಶ್ರೋತೃಗಳನ್ನು ದಿಙ್ಮೂಢರಾಗಿಸುತ್ತಿತ್ತು. ಶ್ರೀಯುತರು ವಿದ್ಯಾರ್ಥಿಗಳ ಮೇಲೆ ತೋರಿಸುತ್ತಿದ್ದ ಮಮಕಾರ ಸ್ಮರಣೀಯವಾದದ್ದು.

ಸಂಸ್ಕೃತ ಕೆಲವೇ ಜನರ ಸ್ವತ್ತಾಗಬಾರದು ಪ್ರತಿಯೊಬ್ಬರ ಸ್ವತ್ತಾಗಬೇಕು ಎಂಬ ಹಂಬಲ. ಇದು ಕೇವಲ ಹಂಬಲ ಅಥವಾ ಆಸೆಯಾಗಿರಲಿಲ್ಲ. ಕಾರ್ಯರೂಪಕ್ಕೆ ತಂದಿದ್ದರು. ಮೈಸೂರಿನ ಪ್ರತಿಯೊಬ್ಬ ವೀರಶೈವರನ್ನು ಕಂಡು ನಿಮ್ಮ ಮಕ್ಕಳನ್ನು ಸಂಸ್ಕೃತ ಪಾಠಶಾಲೆಗೆ ಸೇರಿಸಿ ಎಂದು ಒತ್ತಾಯಿಸುತ್ತಿದ್ದರಲ್ಲದೇ ಅವರೇ ಸ್ವತಃ ವಿದ್ಯಾರ್ಥಿಗಳಿರುವಲ್ಲಿಗೆ ಹೋಗಿ ಪಾಠಶಾಲೆಗೆ ಕರೆದುಕೊಂಡು ಹೋಗುತ್ತಿದ್ದರು. ಸಂಜೆ ಹೊತ್ತು ಅವರ ಮನೆಯೇ ಸಂಸ್ಕೃತ ಪಾಠಶಾಲೆಯಾಗಿತ್ತು. ರಾಜಾರಾಂ ಅಗ್ರಹಾರದಲ್ಲಿದ್ದ ಅವರ ಮನೆಯಲ್ಲಿ ಅವರ ಮಕ್ಕಳೊಡನೆ ಇತರರಿಗೂ ಪಾಠ ಬೋಧಿಸುತ್ತಿದ್ದರು. ವಿಜಯಕುಮಾರ ಮತ್ತು ಪಂಡಿತಾರಾಧ್ಯ ಇಂದು ಉನ್ನತ ಹುದ್ದೆಯಲ್ಲಿದ್ದರೂ ಅಂದು ನಮ್ಮೊಡನೆ ಇದ್ದ ಸಲಿಗೆ ಸ್ಮರಣೀಯ. ಅವರ ಕಾಲದಲ್ಲಿ ವೀರಶೈವ ಯುವ ವಿದ್ಯಾರ್ಥಿಗಳನ್ನು ಸಂಸ್ಕೃತದತ್ತ ಸೆಳೆಯುವಲ್ಲಿ ಯಶಸ್ವಿಯಾದರು. ಅವರಲ್ಲಿ ಕಲಿತವರು ಯಾರೂ ಮರೆಯಲಾಗದಂತ ನೆನಪನ್ನು ತಂದು ಕೊಡುತ್ತಿತ್ತು. ಅವರ ಗುರುಶಿಷ್ಯ ಸಂಬಂಧವು ಬೆರಸಿ ಬೇರಾಗದ ಪುಷ್ಪ ಪರಾಗದಂತಿರುತ್ತಿತ್ತು. ಇದು ಶ್ರೀ ಎಂ.ಜಿ. ನಂಜುಂಡಾರಾಧ್ಯರ ಗುರುಶಿಷ್ಯ ಸಂಬಂಧದ ಒಂದು ಮುಖವಾದರೆ, ಶ್ರೀಯುತರು ಸಂಸ್ಕೃತಾಭ್ಯಾಸ ಮಾಡುವ ಸಂದರ್ಭದ ಸಿಹಿಕಹಿಗಳ ಘಟನೆಗಳನ್ನು ತಿಳಿಯುವುದು ಮತ್ತೊಂದು ಮುಖವಾಗುತ್ತದೆ.

ಸ್ವಾತಂತ್ರ್ಯ ಪೂರ್ವದಲ್ಲಿ ವೇದಾಧ್ಯಯನ ಮಾಡುವ ಅವಕಾಶ ಎಲ್ಲರಿಗೂ ಇರಲಿಲ್ಲ. ಸಾಹಿತ್ಯ- ವ್ಯಾಕರಣ ತರ್ಕಗಳು ಬ್ರಾಹ್ಮಣೇತರರಿಗೆ ಮೀಸಲು ಆಗಿದ್ದವು. ಬೆಂಗಳೂರಿನ ಚಾಮರಾಜೇಂದ್ರ ಸಂಸ್ಕೃತ ಪಾಠಶಾಲೆಯಲ್ಲಿ ಅಭ್ಯಸಿಸಿದ ರೀತಿ ಕ್ಲಿಷ್ಟಕರ. ಆದಾಗ್ಯೂ ಸಿದ್ಧಗಂಗೆಗೆ ಹೋಗಿ ಪಂಡಿತ ಪರೀಕ್ಷೆ ಪೂರೈಸಿ, ಅದೇ ಸಂಸ್ಕೃತ ಕಾಲೇಜಿನಲ್ಲಿ ಉಪನ್ಯಾಸಕರಾದರು. ದ್ವೈತ, ಅದ್ವೈತ ವೇದಾಧ್ಯಯನಗಳು ಎಲ್ಲರಿಗೂ ಲಭಿಸಬೇಕೆಂಬ ದೃಷ್ಟಿಯಿಂದ ಹೋರಾಟ ನಡೆಸಿ, ಪತ್ರಿಕೆಗಳ ಮೂಲಕ, ಸಾರ್ವಜನಿಕರ ಮತ್ತು ಮೇಲಾಧಿಕಾರಿಗಳ ಗಮನಕ್ಕೆ ತಂದರು. ಜನ ಸೇರಿಸಿದರು, ಘೋಷಣೆಗಳು ಮೊಳಗಿದವು. ದಿವಾನರ ಆಡಳಿತ ಕಾಲವದು. ದಿವಂಗತ ಸರ್ ಪುಟ್ಟಣ್ಣ ಶೆಟ್ಟಿಯವರ ನೇತೃತ್ವದಲ್ಲಿ ಸಭೆ ನಡೆದು ವೇದಾಧ್ಯಯನ ಮಾಡುವ ಹಕ್ಕನ್ನು ಸಾರ್ವತ್ರಿಕಗೊಳಿಸಿದರು. ಶ್ರೀ ಆರಾಧ್ಯರ ಹೋರಾಟಕ್ಕೆ ಮನ್ನಣೆ ದೊರಕಿತು. ಪುಳಕಿತಗೊಂಡ ಶ್ರೀಯುತರು ಜೈನಸಿದ್ಧಾಂತ ವಿಭಾಗ, ವಿಶಿಷ್ಟಾದ್ವೈತ ವಿಭಾಗ ತೆರೆಯಲು ಶ್ರಮಿಸಿದರು. ಶ್ರಮಕ್ಕೆ ತಕ್ಕ ಪುರಸ್ಕಾರ ದೊರೆಯಿತು. ಮೇಲಧಿಕಾರಿಗಳು ಸಹ ಸಮ್ಮತಿಸಿದರು. ಆದರೆ ಸಹದ್ಯೋಗಿಗಳ ಮತ್ತು ಅಂಧಾಭಿಮಾನಿಗಳ ಆಕ್ರೋಶಕ್ಕೆ ಕಾರಣರಾದರು. ಇದಾವುದಕ್ಕೂ ಸೊಪ್ಪು ಹಾಕದ ಶ್ರೀಯುತರು ತಮ್ಮ ಬರವಣಿಗೆಯನ್ನು

ಜಾಗೃತಗೊಳಿಸಿದರು. ಪಠ್ಯಪುಸ್ತಕ ರಚನೆಗೆ ಕೈಹಾಕಿದರು. ದಿನೆ ದಿನೇ ಬೆಳೆಯುತ್ತಿದ್ದ ವರ್ಚಸ್ಸು ಇವರ ಪಾಲಿಗೆ ಮುಳುವಾಯಿತು. ಇದ್ದಕ್ಕಿದ್ದಂತೆ ಬೆಂಗಳೂರಿನಿಂದ ಮೈಸೂರು ಅರಮನೆ ಸಂಸ್ಕೃತಪಾಠಶಾಲೆಗೆ ವರ್ಗಾವಣೆ, ಅಲ್ಲಾದರೂ ಇವರಿಗೆ ಕಷ್ಟ ತಪ್ಪಲಿಲ್ಲ. ಇವರೊಬ್ಬರೇ ಬ್ರಾಹ್ಮಣೇತರ ಉಪಾಧ್ಯಾಯರು. ವಿಶಿಷ್ಟಾದ್ವೈತವೂ ಇಲ್ಲ, ಶಕ್ತಿ ವಿಶಿಷ್ಟದ್ವೈತ ವಿಭಾಗವೂ ಸಹ ಇಲ್ಲ. ತಮ್ಮ ಸತತ ಪ್ರಯತ್ನದಿಂದ ಯಶಸ್ವಿಯಾದರು. ಮೈಸೂರಿನಲ್ಲಿ ಆ ಎರಡು ವಿಭಾಗಗಳು ಆರಂಭವಾದವು. ಇದು ಶ್ರೀಯುತರ ಹೋರಾಟದ ಫಲ.

ಕ್ರಮೇಣ ಹೊಂದಾಣಿಕೆಗೆ ಬಂದ ಸಹ ಪಂಡಿತರು ಆರಾಧ್ಯರ ಧ್ಯೇಯ ಸಾಹಸಗಳ ಮುಂದೆ ಶರಣಾದರು. ವೀರಶೈವಾಗಮ ಪ್ರಾರಂಭಿಸಿ ತಮ್ಮದೇ ಆದ ವಿಶಿಷ್ಟರೀತಿಯ ಪಠ್ಯಪುಸ್ತಕ ತರಲು ಪ್ರಯತ್ನಿಸಿದರು. ''ವೀರಶೈವಾಗಮ ಪ್ರಯೋಗರತ್ನಂ'' ಇವರ ಪುಸ್ತಕಕ್ಕೆ ಶಿಕ್ಷಣ ಇಲಾಖೆಯ ಮಾನ್ಯತೆ ದೊರೆಯಿತು. ಹೀಗಾಗಿ ಶಬ್ದಕೋಶ, ಅಮರ ಇತ್ಯಾದಿ ಪ್ರಕಟಗೊಂಡವು.

ಸ್ವಂತ ಪ್ರಕಟಣೆ ಪ್ರಬೋಧ ಪುಸ್ತಕಮಾಲೆ ಆರಂಭವಾಯಿತು. ಸ್ವಂತ ಮುದ್ರಣಾಲಯ ತೆರೆದರು. ಸುಮಾರು 80ಕ್ಕೂ ಮಿಗಿಲಾದ ಗ್ರಂಥಗಳು ಇದುವರೆಗೆ ಹೊರಬಂದಿವೆಯೆಂಬುದು ಸಾಮಾನ್ಯ ಸಂಗತಿಯಲ್ಲ.

ವಚನ ಸಾಹಿತ್ಯಕ್ಕಿಂತ ಹಳಗನ್ನಡಕ್ಕೆ ಮಾರುಹೋಗಿದ್ದ ಶ್ರೀಯುತರು ವೀರಭದ್ರನನ್ನು ಕುರಿತ ಸಂಶೋಧನ ಲೇಖನಗಳಿಗೆ ಮತ್ತು ಪಂಚಪೀಠಗಳ ಪರಂಪರೆಗೆ ತಮ್ಮ ಅತೀವ ಒಲವನ್ನು ವ್ಯಕ್ತಪಡಿಸುತ್ತಿದ್ದರು. ಡಾ॥ ಜ.ಚ.ನಿ ಯವರ ಬಹುತೇಕ ಪುಸ್ತಕಗಳು ಅಲ್ಲಿಯೇ ಪ್ರಕಟಗೊಂಡಿವೆ. ವೀರಶೈವ ಸಿದ್ಧಾಂತಕ್ಕೆ ಸಂಬಂಧಿಸಿದ ಸಂಸ್ಕೃತದ ಸ್ವತ್ತನ್ನು ಕನ್ನಡಕ್ಕೆ ತಂದು ಬೆಳೆಸಿದರು. ಇಂದಿನ ಬಹುತೇಕ ಮಠಾಧಿಪತಿಗಳು ಅವರ ಶಿಷ್ಯರೇ ಎಂಬುದನ್ನು ಮರೆಯುವಂತಿಲ್ಲ.

ಮೂರು ದಶಕಗಳಿಗಿಂತಲೂ ಹೆಚ್ಚು ಕಾಲ ಶಿಕ್ಷಣ ಕ್ಷೇತ್ರದಲ್ಲಿದ್ದು ನಿವೃತ್ತಿಯಾದ ನಂತರವೂ ತಮ್ಮ ಬರವಣಿಗೆಯನ್ನು ನಿಲ್ಲಿಸಲಿಲ್ಲ. ತಮ್ಮ ೮೦ ರ ಇಳಿ ವಯಸ್ಸಿನಲ್ಲಿ ಸಹ ಮೈಸೂರಿನ ಅಕ್ಕಮ್ಮಣ್ಣಿ ಆಸ್ಪತ್ರೆಯ ಪಕ್ಕದಲ್ಲಿರುವ ಪ್ರಬೋಧ ಮುದ್ರಣಾಲಯದಲ್ಲಿ ತಮ್ಮ ಕಾರ್ಯಕ್ಷೇತ್ರವನ್ನು ಚುರುಕುಗೊಳಿಸಿದರು. ಸಾವಿರಾರು ಲೇಖನಗಳು ಗ್ರಂಥದ ರೂಪದಲ್ಲಿ ಬಿಡಿ ಬಿಡಿ ಲೇಖನಗಳಾಗಿ ಪ್ರಕಟಗೊಂಡಿವೆ. ಹಳೆಗನ್ನಡ ಸಾಹಿತ್ಯವನ್ನು ಸಂತುಷ್ಟಿಗೊಳಿಸಿದರು. ಉಪನಿಷತ್‌ಗಳಿಗೆ ಭಾಷ್ಯ ಬರೆದರು. ಇವರ ವಿಶೇಷ ಕಾರ್ಯವೆಂದರೆ ಸಂಸ್ಕೃತ ಶ್ಲೋಕಗಳನ್ನು ಯಥಾವತ್ತಾಗಿ ಕನ್ನಡ ಲಿಪಿಯಲ್ಲಿ ತಂದ ನಂತರ ಅದರರ್ಥವನ್ನು ಕೊಡುತ್ತಾ ಹೋಗುತ್ತಾರೆ. ಇದರಿಂದಾಗಿ ಸಂಸ್ಕೃತ ಬಾರದವರು ಸಹ ಅರ್ಥೈಸಿಕೊಳ್ಳಬಹುದಾಗಿದೆ. ಸುಮಾರು ಆರು

ದಶಕಗಳ ಕಾಲ ಸಂಸ್ಕೃತದ ಸಾರ ಸರ್ವಸ್ವವನ್ನು ಹೀರಿ ತಮ್ಮ ತಿಳಿಗನ್ನಡದಲ್ಲಿ ಕನ್ನಡಮ್ಮನ ಕಂದಮ್ಮಗಳಿಗೆ ಉಣ ಬಡಿಸಿದ್ದಾರೆ.

ಹೀಗೆ ಸಂಸ್ಕೃತದ ಬೆಳವಣಿಗೆಗೆ ತಮ್ಮನ್ನು ತಾವೇ ತೊಡಗಿಸಿಕೊಂಡು ಶ್ರಮಿಸಿದ ಬಹುಮುಖದ ಪರಿಚಯ ನಾಡಿನ ಜನತೆಗಾಗಬೇಕಾಗಿದೆ. ಅರಮನೆ ಗುರುಮನೆಗಳಿಂದ ಪುರಸ್ಕೃತದ ದೊಡ್ಡ ಪಟ್ಟಿಯೇ ಇದೆ. ಅವರು ಹೊದ್ದ ಶಾಲುಗಳಿಗೆ ಲೆಕ್ಕವಿಲ್ಲ. ಮನೆ ತುಂಬಾ ಅಭಿನಂದನೆಯ ಪಟಗಳು, ಅಪಾರ ಪುಸ್ತಕರಾಶಿ ತುಂಬಿ ತುಳುಕಾಡುತ್ತಿವೆ.

೭-೧೧-೯೦ ರಂದು ನಮ್ಮನ್ನಗಲಿದ ಶ್ರೀಮಾನ್ ಆರಾಧ್ಯರು ಆಸ್ಥಾನ ವಿದ್ವಾನ್ ನಂಜುಂಡಾರಾಧ್ಯರೆಂದೇ ಪ್ರಸಿದ್ಧಿ. ಇಂದು ನಮ್ಮೊಡನಿಲ್ಲದಿದ್ದರೂ ಅವರ ಗ್ರಂಥಗಳು, ಲೇಖನಗಳು ನಮ್ಮೊಡನೆ ಇವೆ. ಸದಾ ನೆನಪನ್ನು ತರುತ್ತವೆ. ಶ್ರೀಯುತರು ನಮ್ಮ ಗುರುಗಳು ಎಂದು ಹೇಳಿಕೊಳ್ಳುವ ಭಾಗ್ಯ ನಮ್ಮದಾಗಿದೆ. ಅವರ ಹೆಸರಿನಲ್ಲಿ ತರುತ್ತಿರುವ ಗ್ರಂಥಕ್ಕೆ ಇದೊಂದು ಶಿಷ್ಯನ ನುಡಿಕಾಣಿಕೆ.



# ಎಂ.ಜಿ. ನಂಜುಂಡಾರಾಧ್ಯರು

**ಅ.ನ. ಕೃಷ್ಣರಾಯ** (ಕನ್ನಡ ಕುಲರಸಿಕರು)

---

ವಿದ್ಯಾರ್ಜನೆಮಾಡಬೇಕೆಂಬ ಹಂಬಲ - ಉತ್ಕಟೇಚ್ಛೆ, ವಿದ್ಯಾರ್ಥಿಯಲ್ಲಿ ಹುಟ್ಟಿದರೆ ಬಡತನ ಸಿರಿತನವಾಗಲಿ, ಇತರ ಯಾವ ಅಡ್ಡಿ ಆತಂಕವೇ ಆಗಲಿ ಏನೂ ಮಾಡಲಾರದು ಎನ್ನುವುದಕ್ಕೆ ನಂಜುಂಡಾರಾಧ್ಯರ ಜೀವನವೇ ಸಾಕ್ಷಿ. ಗೋರಿಬಿದನೂರು ತಾಲ್ಲೂಕು ಗುಂಡ್ಲಹಳ್ಳಿ ಆರಾಧ್ಯರ ಹುಟ್ಟೂರು. ತಂದೆ ಕಡುಬಡವರು. ಗೂಳೂರಿಗೆ ಐದು ಮೈಲಿ ದೂರದಲ್ಲಿದ್ದ ಕೂಡಿಕೊಂಡೆ ಎಂಬ ಗ್ರಾಮದಲ್ಲಿ ವಾರಾನ್ನಮಾಡಿಕೊಂಡು ಆರಾಧ್ಯರು ತೆಲುಗು ಅಭ್ಯಾಸ ಆರಂಭಿಸಿದರು. ಕೆಲವು ವರ್ಷಗಳ ತರುವಾಯ ನಿಡುಮಾಮಿಡಿ ಮಠದ ಆಶ್ರಯದಲ್ಲಿ ಸ್ಥಾಪಿತವಾಗಿದ್ದ 'ಶ್ರೀಮದ್ದೇಶಿಕೇಂದ್ರ ವಿದ್ಯಾಲಯ'ದಲ್ಲಿ ಪ್ರವೇಶ ದೊರೆತು ವೇದಾಧ್ಯಯನ, ಕನ್ನಡ ಶಿಕ್ಷಣ ಆರಂಭವಾಯಿತು. ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ತೇರ್ಗಡೆಯೂ ಆಯಿತು. ಮಗನನ್ನು ಸಂಸ್ಕೃತ ವಿದ್ವಾಂಸನನ್ನಾಗಿ ಮಾಡಬೇಕೆಂದು ತಂದೆಯವರಿಗೆ ಹಂಬಲ. ಅವರ ಪ್ರೇರಣೆಯಿಂದ ಎರಡು ಮೂರು ಕಡೆ ಗುರು ಶುಶ್ರೂಷೆಮಾಡಿ ವಿದ್ಯಾಭ್ಯಾಸ ಮುಂದುವರಿಸಿದರು.

ಶ್ರೀ ನಿಡುಮಾಮಿಡಿ ಜಗದ್ಗುರುಗಳು ದೇಶಸಂಚಾರ ಹೊರಟಾಗ ಆರಾಧ್ಯರನ್ನೂ ಜತೆಯಲ್ಲಿ ಕರೆದೊಯ್ದರು. ಶ್ರೀ ದಯಾನಂದ ಸರಸ್ವತಿಗಳ 'ಸತ್ಯಾರ್ಥ ಪ್ರಕಾಶ' ಓದಿ ಪಂಡಿತರಾಗಬೇಕೆಂಬ ಹಂಬಲ ಆರಾಧ್ಯರಿಗೆ ಉತ್ಕಟವಾಯಿತು. ಬೆಳಗ್ಗೆ ಬೇಸಾಯ, ರಾತ್ರಿ ಕಾವ್ಯಾಭ್ಯಾಸ - ಇದು ಆರಾಧ್ಯರ ದೈನಂದಿನ ಕೆಲಸವಾಯಿತು. ಊರಿನಲ್ಲಿ ಚನ್ನಯ್ಯನೆಂಬ ಸಾಮಾನ್ಯ ರೈತ ಜೈಮಿನಿ ಭಾರತ ಓದಿ ಅರ್ಥ ಹೇಳುತ್ತಿದ್ದುದನ್ನು ಕಂಡು ಆರಾಧ್ಯರು ಜೈಮಿನಿ

ಭಾರತ, ಬೊಮ್ಮರ ಪೋತನ ಭಾಗವತ, ತೆಲುಗು ಭಾರತ, ಚನ್ನಬಸವ ಪುರಾಣ, ಶರಣಲೀಲಾಮೃತಾದಿ ಕಾವ್ಯಗಳನ್ನು ಓದಲು ಮೊದಲಿಟ್ಟರು. ಜತೆಗೆ ಅವುಗಳ ಪುರಾಣ ಹೇಳುವ ಕಾಯಕವೂ ಆರಂಭವಾಯಿತು.

ಮಗ ಬೇಸಾಯ ಮಾಡಿಕೊಂಡು ಹಳ್ಳಿಯಲ್ಲಿ ಕಾಲ ಕಳೆಯುವುದು ತಂದೆಯವರ ಮನಸ್ಸಿಗೆ ಒಪ್ಪಲಿಲ್ಲ. ಮಗನ ಕೈಗೆ ಐದು ರೂಪಾಯಿ ಹಾಕಿ 'ಬೆಂಗಳೂರಿಗೆ ಹೋಗಿ ವಿದ್ಯಾರ್ಜನೆಮಾಡು' ಎಂದು ಹೇಳಿದರು. ಆರಾಧ್ಯರು ಬೆಂಗಳೂರಿಗೆ ಬಂದು ಶ್ರೀ ಜಿ.ವಿ. ಗೌಡರ ಆಶ್ರಯದಲ್ಲಿ ನಿಂತರು. ಕೆಲಕಾಲ ಚಾಮರಾಜೇಂದ್ರ ಸಂಸ್ಕೃತ ಕಾಲೇಜಿನಲ್ಲಿ ಅಭ್ಯಸಿಸಿ ಸಿದ್ಧಗಂಗೆಯ ಗುರುಕುಲದಲ್ಲಿ ವಿದ್ಯಾಭ್ಯಾಸ ಮುಂದುವರಿಸಿದರು. ಶಿಕ್ಷಣ ಮುಗಿದ ಮೇಲೆ ಕೆಲವು ಕಾಲ ಪ್ರಾಚ್ಯಕೋಶಾಗಾರದಲ್ಲಿ ಸಂಶೋಧನಾ ಕಾರ್ಯದಲ್ಲಿದ್ದು ತರುವಾಯ ಚಾಮರಾಜೇಂದ್ರ ಸಂಸ್ಕೃತ ಕಾಲೇಜಿನಲ್ಲಿ ಅಧ್ಯಾಪಕರಾಗಿ ಸೇರಿದರು. ಈಗ ಅದೇ ಕಾಲೇಜಿನಲ್ಲಿ ಆರಾಧ್ಯರು ಅಸಿಸ್ಟೆಂಟ್ ಪ್ರೊಫೆಸರಾಗಿದ್ದಾರೆ.

ಸಾರ್ವಜನಿಕ ಜೀವನದಲ್ಲಿ ಆರಾಧ್ಯರು ಮೊದಲಿನಿಂದಲೂ ಆಸಕ್ತಿ ವಹಿಸಿ, ಕೆಲವು ಸಂಸ್ಥೆಗಳ ಹುಟ್ಟಿಗೆ ಕಾರಣರಾದರು. 'ಸಂಸ್ಕೃತ ವಿದ್ಯಾರ್ಥಿ ಸಂಘ', 'ವೀರಶೈವ ಸಮಾಜೋತ್ಕರ್ಷಸಾಧಕ ಸಂಘ', 'ತೋಂಟದಾರ್ಯ ವಿದ್ಯಾರ್ಥಿನಿ ಸಭೆ'ಗಳು ಆರಾಧ್ಯರ ಕ್ರಿಯಾಶಕ್ತಿಯ ದ್ಯೋತಕಗಳಾಗಿವೆ.

ವಿದ್ಯಾರ್ಥಿದೆಶೆಯಲ್ಲಿಯೇ ಆರಾಧ್ಯರು ಸಾಹಿತ್ಯಸೇವೆ ಆರಂಭಿಸಿದರು. ಶರಣ ಸಾಹಿತ್ಯ, ಶರಣ ಸಂದೇಶ, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಶಿವಾನುಭವ ಮೊದಲಾದ ಪತ್ರಿಕೆಗಳಿಗೆ ವಿದ್ವತ್ಪೂರ್ಣ ಲೇಖನಗಳನ್ನು ಬರೆಯಲಾರಂಭಿಸಿದರು. ಆದರೆ ಇವರ ಸಾಹಿತ್ಯಸೇವೆ ಕನ್ನಡಿಗರ ಕಣ್ಣಿಗೆ ಬೀಳುವಂತಾದುದು ೧೯೪೬ರಲ್ಲಿ ಇವರು ಬರೆದ 'ಶಿವನ ಸೋಲು' ನಾಟಕದಿಂದ. 'ಶಿವನ ಸೋಲು' ಗ್ರಂಥಕ್ಕೆ ಮುನ್ನುಡಿ ಬರೆಯುತ್ತಾ ನಾನು ಹೇಳಿರುವ ಮಾತುಗಳು ಗಮನಾರ್ಹವಾಗಿವೆ: ''ಕವಿ ಲೋಕವ್ಯಾಪಾರದಲ್ಲಿ ಲೀನನಾಗದೆ ಅನಾಸಕ್ತಿ ವಹಿಸಿದ್ದರೂ ಅದು ಅವನ ಕೃತಿಯ ಮೇಲೆ ತನ್ನ ಮುದ್ರೆಯನ್ನೊತ್ತದಿರುವುದಿಲ್ಲ. ಬಾಳು ಬೇರೆ ಕಲಾಕೃತಿ ಬೇರೆ ಎಂದು ಭಾವಿಸುವುದು ಸತ್ಯಕ್ಕೆ ಅಷ್ಟು ಮೆಚ್ಚುಗೆಯಾಗುವುದಿಲ್ಲ. ಕವಿ ಬೇಡೆಂದರೂ ಅವನ ಜೀವನದ ರಸ-ವಿಷ ನಿಮಿಷಗಳು ಅವನ ಕೃತಿಯ ಮೇಲೆ ತಮ್ಮ ಪ್ರಭಾವವನ್ನು ಮೂಡಿಸುತ್ತವೆ. ಕವಿಯ ಬಾಳು ಹಿರಿಯ ಬಾಳಾಗಿದ್ದರೆ ಅದರಿಂದ ಲೋಕಕ್ಕೆ ಕಲ್ಯಾಣವಾಗುತ್ತದೆ; ಅವನ ಬಾಳು ಅಲ್ಪತನದಿಂದ ತುಂಬಿದ್ದರೆ ಆದರಿಂದ ಲೋಕದ ಜಂಜಡ ಮತ್ತಷ್ಟು ಹೆಚ್ಚುತ್ತದೆ.

ಆರಾಧ್ಯರ ಕಲಾಕೃತಿ 'ಶಿವನ ಸೋಲು' ಒಂದು ಮಂಗಳ ಕಾವ್ಯ. ಸೊಗಸಾದ ವಸ್ತು, ಕಲಾಪ್ರಪೂರ್ಣವಾದ ನಿರ್ವಹಣ ಎರಡೂ ಕೂಡಿ ಮಿಸುನಿಗೆ ಮೆರುಗು ಕೊಟ್ಟಂತಾಗಿದೆ. ಗಿರಿಜಾಕಲ್ಯಾಣ ಇಬ್ಬರು ಮಹಾಕವಿಗಳ ಮೆಚ್ಚುಗೆಗೆ ಪಾತ್ರವಾದ ವಸ್ತು. ಕಾಳಿದಾಸ, ಹರಿಹರರಿಬ್ಬರೂ ಚೆಲುವಿನ ಚಿಲುಮೆಯಂತಿರುವ ಎರಡು ಮಹಾಕಾವ್ಯಗಳನ್ನು ನಮಗಿತ್ತಿದ್ದಾರೆ. ಅವರ ಜಾಡಿನಲ್ಲಿ ಹೋಗಲು ಹರಿಹಾಯುವ ಯಾವನಾದರೂ ಸಹಜವಾಗಿ ಅಂಜಬೇಕಾಗುತ್ತದೆ. ಪ್ರಾಚೀನವಾದರೂ ಹಳೆಯದಾಗದ ಕಥಾವಸ್ತು; ಭಾರತೀಯರ ಆರಾಧ್ಯ ಮೂರ್ತಿಗಳಾದ ಶಿವ, ಪಾರ್ವತಿ ಇವರ ಘನ ವ್ಯಕ್ತಿತ್ವ; ಕಣ್ಣು ಕೋರಯಿಸುವ ಬೆಳಕಿನ ರಾಶಿ ಹೀಗೆ ಎಲ್ಲೆಡೆಗಳಿಂದಲೂ ಕವಿಯನ್ನು ದಿಙ್ಮೂಢನನ್ನಾಗಿ ಮಾಡಿದರೂ ಅವನ ಕ್ರತುಶಕ್ತಿಯಾಗಿ ನಿಲ್ಲುವುದು ಅವನ ನೋಟ, ಅವನ ಅನುಭವದ ಅಮರವಾಣಿ.

ಅಂದು ಯುಗಯುಗಗಳ ಹಿಂದೆ ಲೋಕಕ್ಕೆ ಒಂದು ಮಹಾಕಂಟಕವೊದಗಿತ್ತು. ಲೋಕಮಾರಕನಾದ ತಾರಕನ ಉಪಟಳದಿಂದ ನೊಂದಿತ್ತು, ಬೆಂದಿತ್ತು. ಅವನ ಸಾಮ್ರಾಜ್ಯದಾಹಕ್ಕೆ ಮೂಲೋಕ ತಲ್ಲಣಿಸಿತ್ತು.

*"ಯುಕುತಿಯನು ಮುಂದಿರಿಸಿ ವಂಚಿಸುತೆ ದೀನರನು*
*ಒಳ ಜಗಳವೆಬ್ಬಿಸುತೆ ಕಲಹಗಳನುಲ್ಬಣಿಸಿ*
*ಸ್ವಾತಂತ್ರ್ಯ ಬಯಸುತಿಹ ಸಜ್ಜನರ ಬಂಧಿಸುತೆ*
*ಕನ್ಯಾಪಹಾರವನು ಮಾನ್ಯರಪಮಾನವನು*
*ವನ್ಯ ಮಿಗದಂತೆಸಗಿ ಸಂನ್ಯಾಸಿಗಳ ಕೊಲೆಯ*
*ಮಿತಿಮೀರಿ ಧರ್ಮವನು ಕಡೆಗಣಿಸಿ ಜನಹಿತವ*
*ಬಡಜನಕೆ ಬಡತನವ ಧನಿಕರಿಗೆ ಸಿರಿತನವ*
*ಪೆರ್ಚಿಸುತೆ ಪೀಡಿಪನು; ದೀನರೆದೆಯುರಿಯೆದ್ದು*
*ದಹಿಸುತಿದೆ ಲೋಕಗಳ; ಹಾ ! ಹಾ ? ನಿನಾದದಿಂ*
*ಬ್ರಹ್ಮಾಂಡಗಳು ಬಿರಿದು ನೆಮ್ಮದಿಯು ನಂದಿಸಿತು*
*ಅಸುರ ಸಂಸ್ಕೃತಿಬೀಜ ದೇವಭೂಮಿಯೊಳಿಂದು*
*ಬೆಳೆಯಾಗಿ ನೀಡುತಿದೆ ದಾಸ್ಯಫಲ ದಿವಿಜರಿಗೆ."*

ತಾರಕನೊಂದಿಗೆ ಹೋರಾಡಿ 'ಸ್ವರಾಜ್ಯ ಸ್ಥಾಪಿಸಲು ಚಾಗಿಗಳು ಬಲಿಯಾಗಿ ಜೀವನವ ತೆತ್ತಿಹರು; ಕಷ್ಟಗಳ ಸಹಿಸುತಲಿ ಸೆರೆಮನೆಯ ಸೇರುತಿದೆ ಸುರನಿಕರವನವರತ.' ಈ ಕಾರ್ಯದಲ್ಲಿ ಮುನ್ನಡೆದ ಮನ್ಮಥ ಹುತಾತ್ಮನಾಗಿದ್ದಾನೆ. ಸಾಕ್ಷಾತ್ ಪರಶಿವನ ತಪೋಭಂಗಕ್ಕೆ ಕೈಹಾಕಿ ಅವನ ಹಣೆಗಣ್ಣಿನ ದಳ್ಳುರಿಗೆ ತುತ್ತಾಗಿದ್ದಾನೆ. 'ಜನಕಾಗಿ ಮಡಿದವನ ಕೀರ್ತಿಯದು, ಶಶಿತಾರೆ.'

ಯೌವ್ವನ ಲಾವಣ್ಯಗಳಿಂದ ವಸಂತಲಕ್ಷ್ಮಿಯಂತೆ ವಿರಾಜಿಸುತ್ತಿರುವ ಗಿರಿಜೆ ತಪಸ್ವಿನಿಯಾಗಿಬಿಟ್ಟಿದ್ದಾಳೆ. ಶಿವನನ್ನು ಒಲಿಸಿ ಅವನ ಅರ್ಧಾಂಗಿಯಾಗಬೇಕೆಂದು ಅವಳ ಛಲ.

*"ದೀನರುದ್ಧಾರಕಿದೊ ತನುವ ಮೀಸಲುಗೈಯ್ದು*
*ಅಳಿಲಸೇವೆಯನೆಸಗಿ ಲೋಕಗಳ ಹಿತಬಯಸಿ*
*ಶಿವನ ಸೋಲಿಸಲು ಬನದಿ ಕಡುತಪವನಾನೆಸಗಿ*
*ತರಗೆಲೆಯ ತನಿವಣ್ಣಿನಲ್ಹೊರೆಯ ತಿಳಿನೀರ*
*ನಲ್ಪಿಸಿಲ ಸೇವಿಸುತೆ ನಾರುಮಡಿಗಳನುಡುತೆ*
*ಕಾರಿನೊಳು ಬೇಗೆಯೊಳು ಕಡುಚಳಿಯ ಕಾಲದೊಳು*
*ನೇಮದಲಿ ತಪವೆಸಗಿ ಕರೆತರುವೆ ಪರಶಿವನ*
*ದೀನರನು ಪೊರೆವಂತೆ ಬೇಡುವೆನು ಪದಕೆರಗಿ;*
*ತಪಕೊಲಿಯದಿರೆ ಹರನು ತೊರೆಯುವೆನು ಜೀವನವ."*

ಗಿರಿಜೆಯ ಪ್ರೇಮ ಭಿಕ್ಷೆಯಲ್ಲಿ ಉದಾತ್ತ ಆಶಯವು ಕೂಡಿದೆ. ತಮ್ಮ ಕಲ್ಯಾಣದಿಂದ ಲೋಕದುದ್ಧಾರವೆಂದು ಆಕೆಗೆ ಚೆನ್ನಾಗಿ ಗೊತ್ತು. ನಿಗಮಾಗಮಗಳಿಗತೀತನಾದ ಪರಮಾತ್ಮನನ್ನು ತ್ಯಾಗ, ತಪಸ್ಸು, ಸೇವೆಗಳಿಂದ ದೊರಕಿಸಿಕೊಂಡು ಜಗತ್ತಿನ ಶಾಂತಿಗೆ ಬುನಾದಿ ಹಾಕಬೇಕೆಂಬುದೇ ಗಿರಿಜೆಯ ದೃಢ ನಿರ್ಧಾರ.

ಗಿರಿಜೆ ತಪಸ್ಸಿಗೆ ಕುಳಿತ ತಾಣವನ್ನು ಕವಿ ಮನೋಹರವಾಗಿ ವರ್ಣಿಸಿದ್ದಾರೆ. ಅರ್ಜುನನು ಬನವಾಸಿಗೆಳತಂದು ಅದರ ಪೆಂಪನ್ನು ಸಾರಿದ ಪಂಪನನ್ನೂ, ವಶಿಷ್ಠರ ಆಶ್ರಮವನ್ನೂ ಹಂಪೆಯಲ್ಲಿ ಹೂಡಿದ ಹರಿಹರನನ್ನೂ ಈ ಭಾಗ ಸ್ಮೃತಿಪಥಕ್ಕೆ ತರುತ್ತದೆ. ಗಿರಿಜೆ ತಪಸ್ಸಿಗೆ ಕುಳಿತದ್ದು.

*"ತಪವೆಸಗೆ ನೆಲೆಯಿಹುದು ಹುಲುಸಾದ ಹೊಲಬಿಹುದು*
*ಭಾರತಾಂಬೆಯ ಬಲದ ಭುಜದಂತೆ ಮೆರೆಯುತಿಹ,*
*ಹೇಮಮಯ ಭೂದೇವಿ, ಸಸ್ಯಶಾಮಲಕಾಯೆ*
*ಗಿರಿಝರಿಯ ಹಾರಗಳು, ತೊರೆತೆರೆ ತುರಾಯಿಗಳು.*
*ಕೆರೆಕುಂಟೆ ಕಡಗಗಳ ಸೊಬಗಿಂದ ಸೊಗವೆತ್ತ;*
*ಶುಕಪಿಕವು ಗೊರವಂಕದಿಂಚರದಿ ಮೊಳಗುತಿಹ;*
*ಸವಿಫಲದ ತರುಗಳಿಂ ತನಿವಣ್ಣು ತೆನೆಗಳಿಂ*
*ತಂದು ಮರಿಗಳಗಿಕ್ಕಿ ಮುದ್ದಿಸುವ ಪಕ್ಕಿಗಳ;*
*ಹೊಲಗಳೊಳ ಗಟ್ಟಣೆಯನೇರಿ ಕವಣೆಯ ಪಿಡಿದು*

ವೈಯಾರದಿಂ ಬೀಸಿ ಹೋಯೆಂದು ಹಕ್ಕಿಗಳ
ಸೋವುತಿಹ ನುಣ್ದನಿಯ ಬಣ್ಣನೆಯ ಚನ್ನೆಯರ
ಕನ್ನಡದ ನೀರೆಯರ ರಮಣೀಯ ದೃಶ್ಯದಿಂ ;
ಹರಪೂಜೆ ಗುರುಸೇವೆ ಗೈಯುತಿಹ ಶರಣರಿಂ;
ದೀನಾಂಗ ಹೀನರನು ಕಂಡು ಮಾಮರುಕದಿಂ
ಅರವಟ್ಟಿಗೆಗಳನಿಟ್ಟು ಹೃತ್ಕಲಶ ಮುಖದಿಂದೆ
ಸ್ನೇಹಧಾರೆಯನೆರೆದು ಜನಮನವ ತಣಿಸುತಲಿ
'ಧನ್ಯರಾದೆವು' ಎಂಬ ಮಾನ್ಯ ಸಜ್ಜನರಿಂದೆ;
ಧನಪತಿಯ ನಾಚಿಸುವ ಧನಿಕ ಸಂದಣಿಯಿಂದೆ;
ನುಡಿದೇವಿ ಮಡಲಿನಲಿ ನಲಿವ ನಾಡಿಗರಿಂದೆ;
ಶೂರರಿಂ ಧೀರರಿಂ ಸಾರಸುಖ ಸೇವ್ಯರಿಂ;
ಮೆರೆಯುತಿಹ ನಾಡದುವೆ ಸ್ವರ್ಣಕರ್ನಾಟಕವು
ರಸಋಷಿಗಳಾಗರವು ಕೃಷಿಕಕುಲಸಾಗರವು"

ತಪಸ್ಸಿಗೆ ಕುಳಿತ ಗಿರಿಜಾದೇವಿಯ ಚಿತ್ತಮೋಹಕ ರೂಪವನ್ನು ಕವಿ ಆಕೆಯ ಸಖಿಯಾದ ವಿಜಯೆಯ ಬಾಯಿಂದ ನುಡಿಸುತ್ತಾರೆ. ಕವಿಯ ಔಚಿತ್ಯಜ್ಞಾನಕ್ಕೆ ಈ ವರ್ಣನೆ ಉತ್ತಮ ನಿದರ್ಶನವಾಗಿದೆ.

"ಇಂಗಡಲ ನೊರೆಯುಡೆಯ ದಡದಂತೆ ಧವಲಾಂಬ
ರವನುಟ್ಟು, ಹುಣ್ಣಿಮೆಯ ಚಂದ್ರಮನ ನಿಶೆಯಂತೆ
ಮಿಸುಪ ಕನ್ನಡಿವಿಡಿದು, ಸಿಂಗರದ ಕಣೆಯಂತೆ
ಮೆರವಗಜೆ, ಮೃದು ಕೇಶಪಾಶಗಳ ಜಡೆಯಣೆದು
ಮುದದಿಂದ ಯತಿಯಂತೆ ಮೃಡನಡಿಯ ಜಪಿಸುವಳು
ಪಾಚಿ ಮುಸುಕಿದೊಡೇನು ತಾವರೆಯ ಕಳೆ ಕಿರಿದೆ?
ಸಹಜ ತೇಜಕೆ ವೇಷಭೂಷಾಳಿ ಹಂಗುಂಟೆ?
ಕಲ್ನೆಲದಿ ನಡೆ ನಡೆದು ಕೆಂಪಡರಿದಡಿಗಳವು
ಅರಗು ಬಳಿದಂತೆಸೆದು ಮನವ ಮೋಹಿಸುತಿಹವು,
ಕುಶಗಳನು ತರುವಂದು ಕೆಂಪಾದ ನಖಗಳವು
ವಿಮಲಾಕ್ಷಮಾಲೆಯೊಳು ಪವಳಗಳ ತೆರನಿಹವು
ಅರಸಂಚೆ ತುಪ್ಪಳಿನ ಹಾಸಿಗೆಯ ನಡರಿರ್ದು
ಮುಡಿಯಿಂದಲುದರಿರ್ದ ಸುಮಗಳಿಂ ನೊಂದಗಜೆ

*ನಲವಿಂದ ಪುಳ್ಳೆಲದಿ ಬಗೆಯೊಪ್ಪೆ ಪವಡಿಪಳು.*
*ತಪಕೆ ತೆರಳುವ ಮುನ್ನ ವಿಲಸಿತವ ಲತೆಗಳೊಳು*
*ತರಳತರನೋಟಗಳ ಹರಿಣಿಯರ ನಯನದೊಳು*
*ಒತ್ತೊಯಾಗಿಸಿಯಗಜೆ ವನಬುವಿಯ ಸಸಿಗಳಿಗೆ*
*ಜಲವೆರೆದು ಸುತರೊಲುಮೆ ಬೀರುತಲಿ ಬೆಳೆಸುವಳು;*
*ಬೊಗಸೆ ಬೀಜಗಳಿಂದ ಬಳೆದ ನಲ್ಚಿಗರಿಗಳು*
*ಗಿರಿಸುತೆಯ ನಯನಗಳನಳೆದು ನಲಿಯುವ ತೆರದಿ*
*ಕೆಲದೊಳಗೆ ಚಲಿಸುವುವು! ಕುಲಕಲಹಗಳ ತೊರೆದ*
*ವನ್ಯ ಖಗಮಿಗ ಬಳಗ ಗೆಳೆತನವ ಗಳಿಸಿಹವು."*

ಇನ್ನೊಂದು ಸನ್ನಿವೇಶದಲ್ಲಿ ಗಿರಿಜೆಯ ರೂಪವನ್ನು ಕವಿ ಶಿವನ ಬಾಯಿಂದ ವರ್ಣಿಸುತ್ತಾರೆ. ಜಗನ್ಮಾತೆಯ ಅಂಗಾಂಗಗಳನ್ನು ಬಿಚ್ಚು ಮಾತಿನಿಂದ ವರ್ಣಿಸುವ ಲಾಕ್ಷಣಿಕ ಪರಂಪರೆಗಿಂತ ಈ ಸುಧಾರಣೆ ಹಿತವೂ, ಉಚಿತವೂ ಆದುದಾಗಿದೆ.

ತಾನೇ ಒಲಿದು ಬಳಿ ಸರಿದಾಗ ಒಲ್ಲೆನೆಂದು ಶಿವ ಈ ಅಚಲ ಅಮಲ ಭಕ್ತಿಗೆ ಬೆರಗಾಗಿ ಗಿರಿಜೆಯ ಬಳಿ ಬರುತ್ತಾನೆ ವಟು ವೇಷಧಾರಿಯಾಗಿ! ಗಿರಿಜೆಯ ಆಗಿನ ಸ್ಥಿತಿ.

*"ಸುಖಶಯನದೊಳಗಿರುಳು ಜಾಗರದಿ ಕನವರಿಸಿ,*
*'ಕರೆಗೊರಲ ಪೋಗದಿರು' ಎಂದು ತೋಳೊಳು ಗಿರಿಜೆ*
*ಬರಿದೆ ಬಿಗಿಯಪ್ಪುವಳು; 'ಭಾವದೊಳಗಡಗಿರುವೆ'*
*ಯನ್ನ ಮನವರಿಯದಿರೆ ಸರ್ವಗನು ನೀನೆಂತು?*
*ಎಂದುಗುಪಿತದಿ ಶಿವನ ನಿಂದಿಸುತೆ ವಂದಿಪಳು"*

ವಟು ಶಿವನನ್ನು ನಿಂದಿಸುತ್ತಾನೆ. ಶಿವನಿಗಾಗಿ ಕಾತರಿಸುವ ಗಿರಿಜೆಯ ತಪಸ್ಸನ್ನು ಏಡಿಸುತ್ತಾನೆ. ಗಿರಿಜೆ ಕೆಣಕಿದ ಫಣಿಯಂತೆದ್ದು ವಟುವನ್ನು ಎಚ್ಚರಿಸುತ್ತಾಳೆ.

*"ಜೀವನವ ಲೋಕಹಿತಯಾಗದೊಳು ಪೂರ್ಣಾಹು-*
*ತಿಯನಿತ್ತು ಮಾದರಿಯ ಮುನಿಯಾಗು ಮುನಿವರ್ಯ,*
*ಲೋಕಹಿತ ಬಯಸದಿಹ ತಪಮೆಲ್ಲ ಕಾಗದದ*
*ಪೂವಿನಿಂ ಶಿವನೊಲವ ಬಯಸುವೊಲು ನಿಷ್ಪಲವು;*
*ಋಷಿಮುನಿಗಳುರುತೇಜ ಸತಿಕುಲದ ನಿಜತೇಜ*
*ವಟುಗಣದ ದಿಟತೇಜ ಸ್ವಾರಾಜ್ಯ ದಡಿಗಲ್ಲು ;*
*ಮಾತಿನೊಳು ಕಾಲವನು ದೂಡಲೆನಗವಕಾಶ*

*ವಿನ್ನಿಲ್ಲವಿಪ್ರವರ, ಶರಣಾರ್ಥಿ ಬರುವೆನಿದೊ"*
ಇಂತಹ ಗಾಢಕರ್ತವ್ಯನಿಷ್ಠೆಯನ್ನು ಕಂಡು ಶಿವ
*"ಇಂದು ನಿನ್ನಯ ತಪಕೆ ಮೆಚ್ಚಿದೆನು ತನುಗಾತ್ರಿ,*
*ನಿನ್ನಚಲ ಭಕ್ತಿಗಾಂ ಸೋತಿಹೆನು ಮನದನ್ನೆ,*
*ಜಗಹಿತಕೆ ತನು ಸವೆಸಿಯಾದರ್ಶವಾಗಿರುವೆ.*
*ಪರರಿಗೆಸಗುವ ನೆರವೆ ಹಿರಿತನವು ಲೋಕದೊಳು ;*
*ಪಡೆದೆ ಮಂಗಳೆ ಪದವಿ."*

ಇದೇ ಶಿವನ ಸೋಲು ! ಗಿರಿಜೆಯ ರೂಪ ಲಾವಣ್ಯಗಳಿಗಲ್ಲಾ ಶಿವ ಸೋತದ್ದು. ಆಕೆಯ ಅಚಲ ಭಕ್ತಿ, ನಿರ್ಮಲ ಪ್ರೇಮ, ಅಗಾಧವಾದ ಲೋಕ ಕಲ್ಯಾಣ ಚಿಂತೆಗಳಿಗೆ ಮನಸೋತು ಸಂತೋಷದಿಂದ ಸೋಲನ್ನೊಪ್ಪಿಕೊಳ್ಳುತ್ತಾನೆ.

*"ಸಜ್ಜನರು ಲೋಕದೊಳಗೆಸಗುತಿಹ ಕಜ್ಜಗಳು*
*ಜಗಹಿತದ ಕುರುಹುಗಳು, ಚಾಪಲ್ಯಕೆಡೆಯಿಲ್ಲ.*
*ಜಗಹಿತದ ಸಲುವಾಗಿ ಕೈವಿಡಿವೆ ಗಿರಿಸುತೆಯ;*
*ಬೆಳಗಲೀ ಜಗವಿನ್ನು ಸುಖಶಾಂತಿ ಸಂಯಮದೆ."*

ನಡೆ ಕೈಲಾಸಕ್ಕೆ ಎಂದು ಶಿವ ಹೇಳಿದಾಗ ಗಿರಿಜೆ ಸ್ವಭಾವ ಸುಂದರವಾದ ನಸುನಾಚಿಕೆಯಿಂದ ಮಾವನವರ ಅಪ್ಪಣೆ ಪಡೆದುಕೊಳ್ಳಿ ಎನ್ನುತ್ತಾಳೆ. ಹಿಮವಂತನಲ್ಲಿ ಶಿವನಿಗಾಗಿ ಸತೀ ಭಿಕ್ಷೆಯನ್ನು ಋಷಿ ಬೇಡುವಾಗ ಅಗಸುತೆಯು.

*"ತಂದೆಕೆಲದೊಳುನಿಂದು ಮೌನದಲಿ ತಲೆವಾಗಿ*
*ಪೊನ್ನತಾವರೆ ದಳವನೆಣಿಸುತಲಿ ಕೇಳಿದಳು"*
ಎಂದು ಕವಿ ಹೃದಯಂಗಮವಾದ ಚಿತ್ರವನ್ನು ಮೂಡಿಸುತ್ತಾರೆ.

"ಆಶಾಸುವಾದಿಗಳು ನಮಗೆಂದು ಸೋಲಿಲ್ಲ" ಎಂದು ಕುಮಾರಸ್ವಾಮಿಯ ನಾಯಕತ್ವದಲ್ಲಿ ದೇವಗಣ ತಾರಕನಮೇಲೆ ಸಮರ ಸನ್ನಾಹ ಹೂಡುತ್ತದೆ. ಅಚ್ಯುತವಾದ ಸತ್ಯ ನಿತ್ಯವಾಗುತ್ತದೆ. ಅಧರ್ಮ ಕೊನೆಯಾಗಿ ಧರ್ಮಸಾಮ್ರಾಜ್ಯ ಸ್ಥಾಪಿತವಾಗುತ್ತದೆ.

*"ಅವರವರ ಧರ್ಮದೊಳಗವರವರ ನೇಮದೊಳ*
*ಗವರವರು ನೆಲೆಗೊಂಡು ನಿಜಸುಖದ ಸೊದೆಯುಣಲಿ"*
ಎಂದು ಶಿವ ತನ್ನ ಸಂದೇಶವನ್ನು ಬೀರುತ್ತಾನೆ. ಕವಿ

"ಹಿರಿಯ ಕಿರಿಯರಾ ಭೇದಗಳಿಲ್ಲ,
ಹೆಚ್ಚು ಕಡಿಮೆಯಾ ಕಿಚ್ಚೆಮಗಿಲ್ಲ,
ದೇಶವೆ ನಮ್ಮಯ ಹೃದಯಾರಾಮವು,
ದೇಹವೆ ದೇಶದ ಬಲಿಯಾಧಾಮವು."

ಎಂದು ತಮ್ಮ ನವಯುಗದ ಕಹಳೆಯನ್ನೂದುತ್ತಾರೆ.

ಉದಾತ್ತ ಧ್ಯೇಯ, ಉಚ್ಚ ವಿಚಾರ, ಮನಂಬುಗುವ ರಸನಿರೂಪಣೆ, ಅಮರತುಂಗಾಸಲಿಲದಂತೆ ಹರಿಯುವ ಕನ್ನಡದ ಕಾವ್ಯಝುರಿಗಳಿಂದ ಶಿವನ ಸೋಲು ತುಂಬಿ ತುಳುಕುತ್ತಿದೆ. ನವಯುಗದ ಹೊಸ್ತಿಲ ಮೇಲೆ ನಿಂತಿರುವ ಕವಿ ತನ್ನ ದೇಶದ ಭವಿತ್ಯವನ್ನು ಅಮರವಾಣಿಯಿಂದ ಚಿತ್ರಿಸಿದ್ದಾರೆ. ಭಾರತ ವರ್ಷದ ತರುಣ ಜನಾಂಗದ ನೋಟದ ರಸಗನ್ನಡಿ ಈ ಕಾವ್ಯವೆಂದರೆ ಅತಿಶಯೋಕ್ತಿಯಲ್ಲ.

'ಶಿವನ ಸೋಲು' ನಾಟಕದಿಂದ ಆರಂಭವಾದ ಆರಾಧ್ಯರ ಸಾಹಿತ್ಯ ಸೇವೆ ಇದುವರೆಗೆ ಅವಿಶ್ರಾಂತವಾಗಿ ನಡೆದು ಬಂದಿದೆ. ಅಭಿನವ ಕಾಳಿದಾಸ ಬಸವಪ್ಪಶಾಸ್ತ್ರಿಗಳವರ ಜೀವನದ ಬಗ್ಗೆ ಬಹು ಪ್ರಯಾಸದಿಂದ ವಿಷಯ ಸಂಗ್ರಹಿಸಿ ಅವರ ಮೇಲೆ ಸ್ವಾರಸ್ಯವಾದ ಗ್ರಂಥ ಬರೆದಿದ್ದಾರೆ. ಬಸವಪ್ಪಶಾಸ್ತ್ರಿಗಳವರ 'ರೇಣುಕ ವಿಜಯ' ಗ್ರಂಥವನ್ನು ಪರಿಷ್ಕರಿಸಿ ಪ್ರಕಟಿಸಿದ್ದಾರೆ. ಅವರ 'ವಿಕ್ರಮೋರ್ವಶೀಯ' ನಾಟಕವನ್ನು ಪರಿಷ್ಕರಿಸಿ ಪ್ರಕಟಿಸುವ ಉದ್ಯಮದಲ್ಲಿದ್ದಾರೆ.

ಆರಾಧ್ಯರ ಸ್ವತಂತ್ರ್ಯಕಾವ್ಯ ಕೃತಿಗಳಲ್ಲಿ 'ಗಗನಯಾತ್ರೆ' ಪ್ರಾಚೀನ ಕನ್ನಡನಾಡಿನ ರಮ್ಯಚಿತ್ರ. 'ಪಕ್ಷಲ್ಮಾಕ್ಷಿ' ಸೀತಾದೇವಿಯನ್ನು ಕುರಿತಾದ ಕಾವ್ಯ. ವೈದಿಕ ವಾಙ್ಮಯದಲ್ಲಿ ತಮಗಿರುವ ಆದರದ ಕುರುಹಾಗಿ ಪ್ರೊ. ಮ್ಯಾಕ್ಡೊನಾಲ್ಡರ 'ವೈದಿಕ ಸಾಹಿತ್ಯ ಚರಿತ್ರೆ'ಯನ್ನು ಕನ್ನಡಿಸಿದ್ದಾರೆ. ನಿಡುಮಾಮಿಡಿ ಸಂಸ್ಥಾನದ ಆಶ್ರಯದಲ್ಲಿ ಪ್ರಕಟವಾಗುತ್ತಿರುವ 'ಪ್ರಬೋಧ ಪುಸ್ತಕಮಾಲೆ'ಯ ಸಂಪಾದಕರಾಗಿ ಆರಾಧ್ಯರು ಉತ್ತಮ ಗ್ರಂಥಗಳನ್ನು ಬೆಳಕಿಗೆ ತರುತ್ತಿದ್ದಾರೆ.

ಆರಾಧ್ಯರ ಪಾಂಡಿತ್ಯವನ್ನು ಗೌರವಿಸಿ ಆಳುವ ಮೈಸೂರು ಶ್ರೀಮನ್ಮಹಾರಾಜರವರು ಅವರಿಗೆ ೧೯೪೪ನೆಯ ಇಸವಿಯಲ್ಲಿ 'ಆಸ್ಥಾನ ವಿದ್ವಾನ್' ಪದವಿಯನ್ನಿತ್ತು ಗೌರವಿಸಿದರು. ಆಸ್ಥಾನ ವಿದ್ವಾಂಸರಾದಾಗ ಆರಾಧ್ಯರ ವಯಸ್ಸು ಕೇವಲ ಮೂವತ್ತು.

ವಿದ್ಯಾರ್ಜನೆಗೆ ತಾವು ಪಟ್ಟ ಕಷ್ಟವನ್ನು ಮರೆಯದಿರುವುದು ಆರಾಧ್ಯರ ದೊಡ್ಡಗುಣವಾಗಿದೆ. ವಿದ್ಯಾರ್ಥಿಗಳಿಗೆ ಅವರು ನೀಡುವ ನೆರವು ಕಲ್ಪನಾತೀತ. ವಿದ್ಯಾಗುರುಗಳಾಗಿ, ಸಾಹಿತಿಗಳಾಗಿ, ಉತ್ತಮ ಭಾಷಣಕಾರರಾಗಿ ಆರಾಧ್ಯರು ಹಲವು ಬಗೆಯಲ್ಲಿ ಜ್ಞಾನಪ್ರಸಾರ ಮಾಡುತ್ತಿದ್ದಾರೆ.

ಸಂಪ್ರದಾಯ ಮಾರ್ಗದಲ್ಲಿ ಬೆಳೆದು ಬಂದಿದ್ದರೂ ಆರಾಧ್ಯರು ಪ್ರತಿಗಾಮಿಗಳಾಗಿಲ್ಲ; ವೈದಿಕ ವಿದ್ಯಾಸಂಪನ್ನರಾದರೂ ಸಂಕುಚಿತ ಮಾನಸರಾಗಿಲ್ಲ; ವೀರಶೈವರಾಗಿದ್ದರೂ ವೀರಶೈವೇತರರನ್ನು 'ಭವಿ'ಗಳೆಂದು ಭಾವಿಸಿಲ್ಲ. ದೊಡ್ಡದು ಎನ್ನುವ ವಸ್ತು ಎಲ್ಲೇ ಇದ್ದರೂ ಆರಾಧ್ಯರು ಅದನ್ನು ಪರಮಭಕ್ತಿಯಿಂದ ಆರಾಧಿಸುತ್ತಾರೆ. ಅವರ ನಿರಹಂಭಾವ, ಸರ್ವಧರ್ಮ ಸಮನ್ವಯ ದೃಷ್ಟಿ, ಜ್ಞಾನಾಕಾಂಕ್ಷೆ ಬೆರಗುಗೊಳಿಸುತ್ತವೆ.

ಸಖರಾಯಪಟ್ಟಣದ ಹಾಲುಸ್ವಾಮಿ ಮಠಾಧ್ಯಕ್ಷರಾದ ಶ್ರೀ ಷ. ಬ್ರಂ. ಶ್ರೀ ಪಟ್ಟಾಧ್ಯಕ್ಷ ಸದಾಶಿವ ಶಿವಾಚಾರ್ಯ ಸ್ವಾಮಿಗಳವರ ಕೈವಲ್ಯೋಪನಿಷತ್ತಿಗೆ ಬರೆದಿರುವ ಭಾಷ್ಯಕ್ಕೆ ಪ್ರಸ್ತಾವನೆ ಬರೆಯುತ್ತಾ ನಂಜುಂಡಾರಾಧ್ಯರು,

''ಶ್ರೀಗಳವರು ತಮ್ಮ ಭಾಷ್ಯದ ರೂಪುರೇಖೆಯ ವಿನ್ಯಾಸವನ್ನು ತಮ್ಮ ವಿಜ್ಞಾಪನೆಯ ಚಿಕ್ಕ ಮಾತಿನಲ್ಲಿ ಚಿತ್ತರಿಸಿದ್ದಾರೆ. ಅವರು 'ತಥಾಪಿ ಪಕ್ಷ ಪ್ರತಿಪಕ್ಷ ಖಂಡನ ಮಂಡನಾದಿ ಗಹನ ಶಾಸ್ತ್ರೀಯ ವಾಕ್ಯರಚನಾ ಮುತ್ಸೃಜ್ಯ .. ಉಪಲಬ್ಧೈರ್ನಿಗಮಾಗಮಾದ್ಯನೇಕ ಪ್ರಾಮಾಣ್ಯೈಸ್ಸಾಕಂ ಶಿವಾದ್ವೈತ ಸಿದ್ಧಾಂತಾನುಸಾರೇಣ .. ವಿರಚಿತಮಸ್ಮಾಭಿಃ' ಎಂದು ಅಪ್ಪಣೆ ಕೊಡಿಸಿರುವ ಅಂಶವು ಅರ್ಥಗರ್ಭಿತವೂ ಉದಾರವೂ ಆದುದಾಗಿದೆ. ಅನೇಕ ಭಾಷ್ಯಕಾರರು ಯಥಾರ್ಥವಾಗಿ ತಮಗೆ ಅನುಭೂತವಾದ ಅಂಶವನ್ನು ಪ್ರಕಾಶಪಡಿಸುವುದಕ್ಕೆ ಬದಲಾವ ಕೇವಲ ಪಾಂಡಿತ್ಯವನ್ನೇ ಅಡಿಗಲ್ಲಾಗಿ ಮಾಡಿಕೊಂಡು ಪರಮತ ನಿರಾಕರಣದಲ್ಲಿಯೇ ತಮ್ಮ ಶ್ರಮವನ್ನು ವಿನಿಯೋಗಿಸಿರುವುದು ಕಂಡು ಬರುತ್ತದೆ. ಅನುಭಾವಿಗಳಿಗೆ ಅಥವಾ ಬ್ರಹ್ಮ ಜಿಜ್ಞಾಸುಗಳಿಗೆ ಈ ಮಾರ್ಗವು ತುಂಬ ಜುಗುಪ್ಸೆಯನ್ನುಂಟುಮಾಡುವುದಾಗಿದೆ. 'ಸಿದ್ಧಾಂತ'ವೆಂಬ ಪದಕ್ಕೆ 'ರಾದ್ಧಾಂತ'ವೆಂಬ ಪರ್ಯಾಯನಾಮವಿದೆ. ಎಂದರೆ 'ಪರಮತನಿರಾಕರಣ ಪೂರ್ವಕ ಸ್ವಮತ ಸಿದ್ಧಾಂತ ಸ್ಥಿರೀಕರಣವೇ ರಾದ್ಧಾಂತ' ಶಬ್ದಾರ್ಥವು. ಆದರೆ ಶ್ರೀಗಳವರು ಈ ರಾದ್ಧಾಂತ ಲಕ್ಷಣದಲ್ಲಿ 'ಪರಮತ ನಿರಾಕರಣ'ವೆಂಬ ಪೂರ್ವಾರ್ಧವನ್ನು ಕೈಬಿಟ್ಟು ತಮ್ಮ ಅನುಷ್ಠಾನಾನುಭವಗಳ ಫಲವಾಗಿ ಗಳಿಸಿರುವ ಕೇವಲ 'ಸ್ವಮತ ಸಿದ್ಧಾಂತ'' ರಹಸ್ಯವನ್ನು ಮಾತ್ರ ಪ್ರಕಾಶಪಡಿಸಿರುವುದು ಭಾಷ್ಯರಚನೆಯ ಮಾರ್ಗದಲ್ಲಿ ಪ್ರಗತಿಕಾರಕವೂ ಆದರ್ಶವೂ ಆದುದಾಗಿದೆ.''

ಶ್ರೀ ಶ್ರೀಗಳವರ ಭಾಷ್ಯದ ಹೆಚ್ಚಳವನ್ನು ಎತ್ತಿ ತೋರಿರುವ ಆರಾಧ್ಯರು ಪರ್ಯಾಯವಾಗಿ ತಮ್ಮ ಮನಸ್ಸಿನ ಹೆಚ್ಚಳವನ್ನೂ ಎತ್ತಿ ತೋರಿದ್ದಾರೆ.

ನಂಜುಂಡಾರಾಧ್ಯರು ತಮ್ಮ ವಯೋಪ್ರಮಾಣಕ್ಕೆ ಮೀರಿದಷ್ಟು ಕೆಲಸಮಾಡಿ ಕನ್ನಡಿಗರ ವಿಶ್ವಾಸ ಗೌರವಗಳಿಗೆ ಪಾತ್ರರಾಗಿದ್ದಾರೆ. ಅವರ ಸಾಹಿತ್ಯಸೇವೆ, ಸಂಸ್ಕೃತಿಸೇವೆ, ಧರ್ಮಸೇವೆ ನಿರಾತಂಕವಾಗಿ ಸಾಗಲಿ ಎಂದು ಹೃತ್ಪೂರ್ವಕ ಹಾರೈಸುತ್ತೇನೆ.

# ನೆನಪಿನ ಸುಳಿಯಲ್ಲಿ

ಎಂ.ಎನ್. ಶಿವಪ್ರಭಾ

---

ನಮ್ಮ ಅಪ್ಪಾಜಿಯವರ ಬಗ್ಗೆ ಹೆಚ್ಚಿಗೆ ಹೇಳುವ ಶಕ್ತಿ ನನಗಿಲ್ಲದಿದ್ದರೂ ಅವರ ಮಗಳಾಗಿ ನಾನು ನನ್ನ ಅನುಭವಗಳನ್ನು ಈ ರೀತಿ ಹಂಚಿಕೊಳ್ಳಲು ಹೆಮ್ಮೆ ಪಡುತ್ತೇನೆ.

ಅಪ್ಪಾಜಿಯವರು ಬೆಂಗಳೂರಿಗೆ ವಿದ್ಯಾಭ್ಯಾಸಕ್ಕಾಗಿ ಬಂದಾಗ ಆಶ್ರಯ ನೀಡಿ ಮುನ್ನಡೆಸಿದವರು ಶ್ರೀಯುತರಾದ ಗೌಡರ ರುದ್ರಪ್ಪನವರು. ಅವರ ತಮ್ಮನವರಾದ ಚನ್ನಬಸಪ್ಪನವರ ಬಗ್ಗೆಯೂ ಅಪ್ಪಾಜಿಯವರಿಗೆ ಅಗಾಧವಾದ ಗೌರವ, ಪ್ರೀತಿ, ವಿಶ್ವಾಸಗಳಿದ್ದವು. ಚನ್ನಬಸಪ್ಪನವರ ಮಗಳಾದ 'ಶಿವಪ್ರಭಾ' ಎಂಬ ಹದಿನಾರು ವರ್ಷದ ಹುಡುಗಿ ಜ್ವರ ಬಂದು ತೀರಿಕೊಂಡಾಗ ಅವರ ದುಃಖದಲ್ಲಿ ಛತ್ರದಲ್ಲಿದ್ದ ವಿದ್ಯಾರ್ಥಿಗಳೆಲ್ಲರೂ ಪಾಲ್ಗೊಂಡರು. ಆನಂತರ ಆ ಹುಡುಗಿಯ ಜ್ಞಾಪಕಾರ್ಥವಾಗಿ ನನ್ನ ನಕ್ಷತ್ರನಾಮವಾದ 'ಭವಾನಿ' ಎಂಬುದನ್ನು ಬದಲಾಯಿಸಿ ಶ್ರೀ ವೈ.ಎಂ. ಉಮಾಪತಿಶರ್ಮರು 'ಶಿವಪ್ರಭಾ' ಎಂದೇ ನಾಮಕರಣ ಮಾಡಿದರು. ನಂತರದಲ್ಲಿ ಬಿ.ಕೆ. ಶಿವಯ್ಯನವರೂ ಹಾಗೂ ಎಂ.ಬಿ. ಬಸವರಾಜಯ್ಯನವರೂ ತಮ್ಮ ಮಕ್ಕಳಿಗೂ 'ಶಿವಪ್ರಭಾ' ಎಂದೇ ನಾಮಕರಣ ಮಾಡಿದುದು ಮಹತ್ವದ ಸಂಗತಿ.

ಬಾಲ್ಯದಲ್ಲಿ ನಮಗೆ ತಂದೆಯವರ ಬಗ್ಗೆ ಪ್ರೀತಿಗಿಂತ ಭಯವೇ ಹೆಚ್ಚಾಗಿತ್ತು. ಮಕ್ಕಳನ್ನು ಎತ್ತಿ ಮುದ್ದಾಡುವುದರ ಬದಲು ದೂರದಿಂದಲೇ 'ಏನಮ್ಮ, ಏನ್‌ಮರಿ' ಎಂದು ಚಿಟಿಕೆ ಹೊಡೆದು ಮಾತನಾಡಿಸುತ್ತಿದ್ದರು. ಅವರಿಗೆ ಬರೆಯಲು ತೊಂದರೆಯಾಗಬಾರದೆಂದು ಅಮ್ಮ ಮನೆ ಯಾವಾಗಲೂ ನಿಶ್ಶಬ್ದವಾಗಿರುವಂತೆ ನೋಡಿಕೊಳ್ಳುತ್ತಿದ್ದರು.

ಅಪ್ಪಾಜಿಯವರು ಪ್ರತಿದಿನ ರಾತ್ರಿ ಊಟವಾದ ನಂತರ ಮನೆಯ ಮುಂದೆ ಶತಪಥ (ವಾಕ್) ಹಾಕುತ್ತಿದ್ದರು. ನಾನು ಸುಮಾರು ೫-೬ ವರ್ಷದವಳಾಗಿದ್ದಾಗ ಒಂದು ದಿನ ಅವರು ನನ್ನನ್ನು ಎತ್ತಿಕೊಳ್ಳಲಿ ಎಂದು ಅವರ ಹಿಂದೆ ಹಿಂದೆ ಆ ಕಡೆಯಿಂದ ಈ ಕಡೆಗೆ, ಈ ಕಡೆಯಿಂದ ಆ ಕಡೆಗೆ ಎಷ್ಟು ಬಾರಿ ತಿರುಗಿದರೂ, ತಮ್ಮದೇ ಆದ ವಿಚಾರಗಳಲ್ಲಿ ಮಗ್ನರಾಗಿದ್ದ ಅವರಿಗೆ ನನ್ನ ಇರವಿನ ಅರಿವೇ ಆಗಿರಲಿಲ್ಲ. ನನಗೆ ನಿರಾಸೆಯಾಗಿ ಅಡಿಗೆ ಕೆಲಸದಲ್ಲಿ ಮಗ್ನರಾಗಿದ್ದ ಅಮ್ಮನ ಬಳಿ ಹೋಗಿ -

'ಅಮ್ಮ ಅಪ್ಪಾಜಿ ಎತ್ತಿಕೊಳ್ಳುತ್ತಾರೆ ಅಂತ ಅವರ ಹಿಂದೆ ಎಷ್ಟು ಓಡಾಡಿದರೂ ಅವರು ನನ್ನ ಕಡೆ ನೋಡಲೇಇಲ್ಲ' ಎಂದು ಅಳುಮುಖದಿಂದ ಹೇಳಿದೆ. ಅದು ಅಪ್ಪಾಜಿಗೆ ತಿಳಿದು "ಹೌದೇನಮ್ಮ, ನಿನ್ನನ್ನು ಎತ್ತಿಕೊಳ್ಳಬೇಕಾ ಬಾ" ಎಂದು ಎತ್ತಿಕೊಂಡರು. ಹೀಗೆ ಬಾಲ್ಯದಲ್ಲಿ ತಂದೆಯವರ ಪ್ರೀತಿವಾತ್ಸಲ್ಯದಿಂದ ನಾವು ವಂಚಿತರಾಗಿಯೇ ಇದ್ದೆವು. ಅವರು ತಾಯಿಯವರನ್ನು ಕುರಿತು - 'ಇವು ಇಂದು ಇದ್ದು ನಾಳೆ ಹೋಗುವ ಮಕ್ಕಳು. ಶಾಶ್ವತವಾದ ಮಕ್ಕಳೆಂದರೆ ನನ್ನ ಪುಸ್ತಕಗಳೇ" ಎನ್ನುತ್ತಿದ್ದರು. ನಮ್ಮ ಅಗತ್ಯಗಳನ್ನೆಲ್ಲ ನಾವು ನಮ್ಮ ತಾಯಿಯವರಿಂದಲೇ ಈಡೇರಿಸಿಕೊಳ್ಳುತ್ತಿದ್ದೆವು.

ಅಪ್ಪಾಜಿಯವರದು ಕಟ್ಟುನಿಟ್ಟಾದ ಶಿಸ್ತಿನ ದಿನಚರಿ. ದಿನನಿತ್ಯ ಬೆಳಗಿನ ಜಾವಕ್ಕೇ ಎದ್ದು ರೂಂನಲ್ಲಿ ಬಾಗಿಲು ಹಾಕಿಕೊಂಡು 'ಯೋಗಾಸನ' ಮಾಡುತ್ತಿದ್ದರು. 'ಶೀರ್ಷಾ

ಸನ' ಹಾಕಿ ತಲೆಕೆಳಗಾಗಿ ಗಂಟೆಗಟ್ಟಲೆ ನಿಲ್ಲುತ್ತಿದ್ದುದು ಮಸುಕು ಮಸುಕಾಗಿ ನೆನಪಿದೆ. ರಜೆಯಲ್ಲಿ ಗುಂಡ್ಲುಪಳ್ಳಿಗೆ ಹೋದಾಗ ಅಲ್ಲಿ ದೇವಸ್ಥಾನದ ಕಲ್ಯಾಣಿಯಲ್ಲಿ ಪದ್ಮಾಸನ ಹಾಕಿ ನೀರಿನ ಮೇಲೆ ತೇಲುತ್ತಿದ್ದುದನ್ನು ನಾವು ಆಶ್ಚರ್ಯದಿಂದ ನೋಡುತ್ತಿದ್ದೆವು. ಅಪ್ಪಾಜಿಯವರಿಗೆ ದೇವರಲ್ಲಿ ಅಚಲವಾದ ನಂಬಿಕೆ, ಭಕ್ತಿ. ಪ್ರತಿದಿನವೂ ಎರಡು ಹೊತ್ತು ತುಂಬಾ ನಿಷ್ಠೆಯಿಂದ ಪೂಜೆಯನ್ನು ಮಾಡುತ್ತಿದ್ದರು. ಹಬ್ಬಹರಿದಿನಗಳಲ್ಲಿ ಅವರು ಮಾಡುತ್ತಿದ್ದ 'ಮಂತ್ರಪಠಣ' ಇಂದೂ ನಮ್ಮ ಕಿವಿಗಳಲ್ಲಿ ಮೊಳಗುತ್ತಿರುವಂತೆ ಭಾಸವಾಗುತ್ತಿದೆ. ಅಪ್ಪಾಜಿಯವರು ಹೊರಗೆ ದೇವತಾ ಪ್ರತಿಷ್ಠಾಪನ ಕಾರ್ಯಗಳನ್ನು ಅತ್ಯಂತ ನಿಷ್ಠೆಯಿಂದ ನೆರವೇರಿಸುತ್ತಿದ್ದರು. ಆ ಕಾರ್ಯವನ್ನು ಯೋಜಿಸುತ್ತಿದ್ದ ಫಲಾಪೇಕ್ಷಿಗಳಿಗೆ ನಿರಾಸೆಯಾದ ನಿದರ್ಶನಗಳೇ ಇಲ್ಲವೆನ್ನಬಹುದು.

೨೪೨೧೧



ತಮ್ಮ ಉಡುಪಿನ ಬಗ್ಗೆ ಅವರು ವಿಶೇಷ ಕಾಳಜಿ ವಹಿಸುತ್ತಿದ್ದರು. ಮಲಿನವಾದ, ಇಸ್ತ್ರಿಮಾಡದ ಉಡುಪನ್ನೆಂದೂ ಅವರು ತೊಡುತ್ತಿರಲಿಲ್ಲ. ಆಹಾರ ಸೇವನೆಯಲ್ಲಿ ಅವರು ತುಂಬಾ ಕಟ್ಟುನಿಟ್ಟಾಗಿದ್ದರು. ಕಾಫಿ, ಟೀ ಮೊದಲಾದ ಯಾವುದೇ ಚಟಗಳಿರಲಿಲ್ಲ.

ಮೈಸೂರಿನ ವಾಣಿವಿಲಾಸ ಮಾರ್ಕೆಟ್ಟಿನ ಗಣಪತಿ ದೇವಸ್ಥಾನದ ಎದುರಿಗಿದ್ದ ನಮ್ಮ ಪ್ರೆಸ್ಸನ್ನು ನೋಡಿಕೊಳ್ಳಲು ನನ್ನ ಅಣ್ಣಂದಿರಾದ ವಿಜಯ, ಪಂಡಿತರೊಡನೆ ನಾನೂ ಶಾಲೆ ಮುಗಿಸಿಕೊಂಡು ಹೋಗುತ್ತಿದ್ದೆ. ಸಂಜೆ ಅಪ್ಪಾಜಿಯವರು ಕಾಲೇಜು ಮುಗಿಸಿಕೊಂಡು ನೇರ ಪ್ರೆಸ್ಸಿಗೆ ಬಂದು ಅಲ್ಲಿನ ಕೆಲಸ ಕಾರ್ಯಗಳನ್ನು ಗಮನಿಸಿಕೊಂಡು ಬೀಗಹಾಕಿ ನಮ್ಮೊಡನೆ ಮನೆಗೆ ಹೊರಡುತ್ತಿದ್ದರು. ದಾರಿಯಲ್ಲಿ ಅವರಿಂದ ಸೈಕಲ್ಲನ್ನು ಸರದಿಯ ಮೇಲೆ ಹೊಡೆಯುತ್ತಾ ಕಲಿಯುತ್ತಿದ್ದೆವು. ಒಮ್ಮೊಮ್ಮೆ ನನ್ನ ಅಣ್ಣ ಪಂಡಿತ ಮನೆಯಲ್ಲಿ ತಂಟೆ ಮಾಡಿ, ಹಠ ಮಾಡಿ ಅಮ್ಮನ ಹೆದರಿಕೆಯಿಂದ ನನ್ನನ್ನೂ ಎಳೆದುಕೊಂಡು ಪ್ರಭುದೇವ ಟಾಕೀಸಿನ ಹಿಂಭಾಗದ ಮೆಟ್ಟಿಲ ಮೇಲೆ ಸಿನಿಮಾದ ಹಾಡು ಹಾಗೂ ಡೈಲಾಗುಗಳನ್ನು ಕೇಳುತ್ತಾ ಕುಳಿತಿರುತ್ತಿದ್ದ. ನಾನು 'ಬಾರೋ ಮನೆಗೆ ಹೋಗೋಣ, ಕತ್ತಲಾಯ್ತು, ಅಮ್ಮ ಬೈತಾರೆ' ಎಂದರೆ, 'ಈಗ್ಲೆ ಹೋದ್ರೆ ಅಪ್ಪಾಜಿ ಇನ್ನೂ ಬಂದಿರುವುದಿಲ್ಲ, ಅಮ್ಮ ಬೈತಾರೆ ಅದಕ್ಕೆ ಅಪ್ಪಾಜೀನೇ ಹುಡುಕಿಕೊಂಡು ಬರುತ್ತಾರೆ ಸುಮ್ಮನಿರು' ಎಂದು ಹೇಳುತ್ತಿದ್ದ. ಹಾಗೆಯೇ ಅಪ್ಪಾಜಿ ಮನೆಗೆ ಹೋದಮೇಲೆ 'ಮಕ್ಕಳು ಇನ್ನೂ ಮನೆಗೆ ಬಂದಿಲ್ಲ' ಎಂದು ತಿಳಿದಾಗ ಅವರು ಹುಡುಕಿಕೊಂಡು ಬಂದು ನಮಗೆ ಸಮಾಧಾನ ಮಾಡಿ ಸೈಕಲ್ ಮೇಲೆ ಕೂರಿಸಿಕೊಂಡು ಹೋದಾಗ ನಮಗೆ ಅಮ್ಮನ ಬೈಗಳ ಸುರಿಮಳೆಯಿಂದ ಮುಕ್ತಿ ದೊರೆಯುತ್ತಿತ್ತು.

ಪ್ರತಿವರ್ಷ ಜೆ.ಎಸ್.ಎಸ್. ವಿದ್ಯಾಪೀಠದಲ್ಲಿ ಶಿವರಾತ್ರೀಶ್ವರ ಜಯಂತ್ಯೋತ್ಸವ ನಡೆಯುತ್ತಿದ್ದಾಗ ನಾನೂ ಅವರೊಂದಿಗೆ ಹೋಗುತ್ತಿದ್ದೆ. ಅಲ್ಲಿ ಅವರು ಮಾಡುತ್ತಿದ್ದ ಭಾಷಣಗಳನ್ನು ಆಸಕ್ತಿಯಿಂದ ಆಲಿಸುತ್ತಿದ್ದೆ. ಹಾಗೇ ಕ್ಯಾತನಹಳ್ಳಿ ಪಾಠಶಾಲೆಯಲ್ಲಿ, ಜಪದಕಟ್ಟೆ ಮಠದಲ್ಲಿ 'ಶ್ರಾವಣಮಾಸ'ದ ಕಾರ್ಯಕ್ರಮದಲ್ಲಿ ಗಮಕಿಗಳಾದ ಕೌಶಿಕ್, ಗೌರಮ್ಮ ನಾಗರಾಜ್ ಮತ್ತು ಜಯಶೀತರವರೊಂದಿಗೆ ವ್ಯಾಖ್ಯಾನಕಾರರಾಗಿ ವ್ಯಾಖ್ಯಾನ ಮಾಡುತ್ತಿದ್ದಾಗ ನಾನೂ ಅವರೊಂದಿಗೆ ಹೋಗುತ್ತಿದ್ದೆ. ಸಂಸ್ಕೃತ ಪಾಠಶಾಲೆಯಲ್ಲಿ ವಿದ್ಯಾರ್ಥಿಗಳಿಂದ ಪ್ರತಿಜ್ಞಾತಾಗಂಧರಾಯಣ, ಚಾಣಕ್ಯ, ಅಭಿಜ್ಞಾನ ಶಾಕುಂತಲ, ಮೃಚ್ಛಕಟಿಕ ಮೊದಲಾದ ಸಂಸ್ಕೃತ ನಾಟಕಗಳನ್ನು ಅವರು ಮಾಡಿಸುತ್ತಿದ್ದರು. ಈ ಎಲ್ಲಾ ದಟ್ಟ ಅನುಭವಗಳ ಪ್ರಭಾವದಿಂದ ನಾನೂ ಶಾಲಾ ಕಾಲೇಜುಗಳಲ್ಲಿ ಚರ್ಚಾ ಸ್ಪರ್ಧೆಗಳು ಹಾಗು ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಭಾಗವಹಿಸುವುದು ಸಾಧ್ಯವಾಯಿತು. ಅವರಿಗೆ ಹೆಣ್ಣುಮಕ್ಕಳು ವಿದ್ಯಾವಂತರಾಗಿ ಎಲ್ಲಾ ಕ್ಷೇತ್ರಗಳಲ್ಲಿಯೂ ಮುಂದುವರಿಯುವುದು ಅತ್ಯಂತ ಹೆಮ್ಮೆಯ ವಿಷಯವಾಗಿತ್ತು.

ನಮ್ಮ ಸ್ವಂತ ಮನೆ (ಬಸವೇಶ್ವರ ರಸ್ತೆ)ಗೆ ಬಂದಮೇಲೆ ನಾವು ನಾಲ್ಕು ಜನ ಮಕ್ಕಳು (ಉಮ, ವಿಜಯ, ಪಂಡಿತ ಮತ್ತು ನಾನು) ಬೆಳಗಿನ ಜಾವಕ್ಕೇ ಎದ್ದು ಬೆಟ್ಟದವರೆಗೂ ಓಡುತ್ತಿದ್ದೆವು (ಜಾಗಿಂಗ್). ಅಲ್ಲಿಂದ ಬಂದು ಸುತ್ತ ಮುತ್ತ ಇದ್ದ ಮನೆಯ ಕೆಲವು ಹುಡುಗರೊಂದಿಗೆ ಅಮರಕೋಶ ರುದ್ರ ಮುಂತಾದುವನ್ನು ನಿಖರವಾದ ಸ್ವರಗಳ ಏರಿಳಿತದೊಂದಿಗೆ ಕಲಿಯುತ್ತಿದ್ದೆವು. ಎಷ್ಟೇ ಚಳಿ ಇರಲಿ, ಮಳೆ ಇರಲಿ ಈ ದಿನಚರಿಯಲ್ಲಿ ಯಾವುದೇ ಬದಲಾವಣೆಗೆ ಅಪ್ಪಾಜಿ ಆಸ್ಪದವೀಯುತ್ತಿರಲಿಲ್ಲ.

ಸಿನಿಮಾತಾರೆ ವಿಷ್ಣುವರ್ಧನ್ (ಆಗಿನ ಕುಮಾರ್) ಅವರ ಕುಟುಂಬ ನಮ್ಮ ಮನೆಯಲ್ಲಿ ಬಾಡಿಗೆಗಿತ್ತು. ಅವರ ತಂದೆ ನಾರಾಯಣರಾಯರು ಹಾಗೂ ಅಪ್ಪಾಜಿಯವರು ರಾತ್ರಿ ಊಟವಾದ ನಂತರ ಮನೆಯ ಮುಂಭಾಗದಲ್ಲಿ ಕುಳಿತು ತಮ್ಮ ಅನುಭವಗಳನ್ನು, ಕಷ್ಟಸುಖಗಳನ್ನು ಪರಸ್ಪರ ಹಂಚಿಕೊಳ್ಳುತ್ತಿದ್ದರು. ನಾರಾಯಣರಾಯರದು ತುಂಬ ಹಾಸ್ಯಪ್ರವೃತ್ತಿ. ಅವರು ಆ ಸಭೆಯನ್ನು ಅನುಭವ ಮಂಟಪಕ್ಕೂ ಅಪ್ಪಾಜಿಯವರನ್ನು ಅಲ್ಲಮಪ್ರಭುಗಳಿಗೂ ಹೋಲಿಸಿ ತಮಾಷೆ ಮಾಡುತ್ತಿದ್ದರು.

ಬರೆಯಲು ಕುಳಿತರೆಂದರೆ ಸಮಯದ ಪರಿವೆಯೇ ಅವರಿಗಿರುತ್ತಿರಲಿಲ್ಲ. ಊಟ ತಿಂಡಿಗೆ ಹೊತ್ತು ಹೊತ್ತಿಗೆ ನಾವೇ ಜ್ಞಾಪಿಸಬೇಕಾಗಿತ್ತು. ಅಮ್ಮ - 'ಏನ್ರಿ ಹಾಗೆ ಒಂದೇ ಸಮನೆ ಬರೆಯುತ್ತೀರಲ್ಲ ನಿಮಗೆ ಆಯಾಸವಾಗುವುದಿಲ್ಲವೆ' ಎಂದರೆ ಹಿಡಿದ ಕೆಲಸವನ್ನು ಪೂರ್ತಿ ಮಾಡುವವರೆಗೂ ನನಗೆ ನೆಮ್ಮದಿ ಇಲ್ಲ ಎನ್ನುತ್ತಿದ್ದರು. ಅವರ ಲೇಖನಗಳಿಗೆ ಮೊದಲ ಶ್ರೋತೃ ಅಮ್ಮ. ಅಮ್ಮ ಅದನ್ನು ಕೇಳಿ ಕೆಲವು ತಿದ್ದುಪಡಿಗಳನ್ನು ಸೂಚಿಸಿದರೆ ಆಶ್ಚರ್ಯಪಡುತ್ತಾ, ಅವರ ಜಾಣತನ, ಬುದ್ಧಿವಂತಿಕೆಯ ಬಗ್ಗೆ ಹೆಮ್ಮೆ ಪಡುತ್ತಿದ್ದರು.

ಅವರಿಗೆ ಅವರ ನೆಂಟರಿಷ್ಟರ ಅಣ್ಣತಮ್ಮಂದಿರ ಮಕ್ಕಳು ನಗರಗಳಿಗೆ ಬಂದು ಓದಿ ವಿದ್ಯಾವಂತರಾಗಬೇಕು ಎಂಬ ಆಸೆ ಬಹಳವಾಗಿತ್ತು. ಅವರ ಅಣ್ಣತಮ್ಮಂದಿರ ಜಗಳಗಳನ್ನು ಆಗಾಗ್ಗೆ ತೀರ್ಮಾನ ಮಾಡಿ, ತಮ್ಮ ಪಾಲಿನ ಆಸ್ತಿಯನ್ನು ಅವರಿಗೇ ಹಂಚಿದ್ದರು. ಅವರ ಮಕ್ಕಳನ್ನು ಕರೆದುಕೊಂಡು ಬಂದು ಮನೆಯಲ್ಲಿಯೇ ಆಶ್ರಯಕೊಟ್ಟು ಎಲ್ಲಾ ರೀತಿಯ ಅನುಕೂಲಗಳನ್ನು ಮಾಡಿಕೊಟ್ಟಿದ್ದರು. ಅವುಗಳ ಉಪಯೋಗ ಪಡೆದುಕೊಂಡು ಮುಂದೆ ಬಂದವರು ಕೇವಲ ಬೆರಳೆಣಿಕೆಯಷ್ಟು ಮಂದಿ ಮಾತ್ರ. ಇಂದಿಗೂ ಎಷ್ಟೋ ಜನ ಅವರ ಬಗ್ಗೆ ಅದೇ ಕೃತಜ್ಞತೆ ವಿಶ್ವಾಸಗಳನ್ನಿರಿಸಿಕೊಂಡಿದ್ದಾರೆ. ಅಪ್ಪಾಜಿ ವ್ಯವಹಾರದಲ್ಲಿ ತೀರಾ ಮುಗ್ಧರು. ಅವರ ಮುಗ್ಧತೆಯ ದುರುಪಯೋಗ ಮಾಡಿಕೊಂಡವರೆಂದರೆ ಬೆಂಗಳೂರು ಮನೆಯ ಬಾಡಿಗೆದಾರರಾದ ಚಂದ್ರಶೇಖರ ಶೆಟ್ಟಿ, ರೇಣುಕಪ್ಪ, ಬಸವರಾಜಪ್ಪ, ಚಿನ್ನಸ್ವಾಮಿ ಮುಂತಾದವರು.

ನಿವೃತ್ತರಾದ ನಂತರ ಬೆಂಗಳೂರು ಮನೆಯನ್ನು ಕಾರ್ಯಾಲಯವನ್ನಾಗಿ ಮಾಡಿಕೊಂಡು ತಮ್ಮ ಕಾರ್ಯಕ್ಷೇತ್ರವನ್ನು ವಿಸ್ತರಿಸಬೇಕೆಂಬ ಉದ್ದೇಶ ಅವರಿಗಿತ್ತು. ಮನೆ ಬಿಡಿಸಿಕೊಳ್ಳುವ ಸಲುವಾಗಿ ಸುಮಾರು ಹತ್ತು ವರ್ಷಗಳ ಕಾಲ ಕೋರ್ಟಿಗೆ ತಮ್ಮ ಇಳಿವಯಸ್ಸಿನಲ್ಲಿ ಅಲೆದಾಡಿ ಸೋತು ಹೋಗಿದ್ದರು. ಅವರೊಂದಿಗೆ ಕೋರ್ಟು ಕಛೇರಿಗಳಿಗೆ ಅಲೆದು ಸಾಕಾಗಿ ನಾನೇನಾದರೂ ಮುಡುಕಿ ಮಾತನಾಡಿದರೆ ನನ್ನನ್ನೇ ಬೈಯುತ್ತಿದ್ದರು.

'ಯಾಕಮ್ಮಾ ಅಂತಹ ಮಾತನಾಡುತ್ತೀಯಾ, ನಮ್ಮ ಕಷ್ಟದ ಸಂಪಾದನೆ ಆದ್ರೆ ನಮಗೆ ಖಂಡಿತ ದಕ್ಕುತ್ತದೆ. ಉತ್ತಮರಿಗೆ ಕಷ್ಟ ತತ್ಕಾಲ ಅಷ್ಟೆ' ಎಂದು ನನಗೆ ಸಮಾಧಾನ ಮಾಡುತ್ತಿದ್ದರು. ಬೆಂಗಳೂರಿಗೆ ಬಂದಾಗಲೆಲ್ಲ, ಮನೆ ಬಿಡಿಸುವ ಸಲುವಾಗಿ ರೂಮಿನಲ್ಲಿ ಬವಣೆ ಪಡುತ್ತಿದ್ದ ನಮ್ಮೊಡನೆಯೇ ತಾವೂ ಅನುಸರಿಸಿಕೊಂಡು ಇದ್ದು ಬಿಡುತ್ತಿದ್ದರು. ಅವರ ಸಹನೆ ತಾಳ್ಮೆಗಳು ಖಂಡಿತ ನಮಗ್ಯಾರಿಗೂ ಬರಲು ಸಾಧ್ಯವಿಲ್ಲ.

ಅಪ್ಪಾಜಿಯವರು ಮಕ್ಕಳು ವಯಸ್ಸಿಗೆ ಬಂದಾಗ ಸ್ನೇಹಿತರಂತೆ ನೋಡಿಕೊಳ್ಳಬೇಕು ಎಂದು ತಮ್ಮೆಲ್ಲ ಭಾವನೆಗಳನ್ನು ನಮ್ಮೊಂದಿಗೆ ಹಂಚಿಕೊಳ್ಳುತ್ತಿದ್ದರು. 'ಬಾಲಾದಪಿ ಸುಭಾಷಿತಂ' ಎನ್ನುತ್ತಾ ಮಕ್ಕಳ ಮಾತಿಗೂ ಬೆಲೆ ಕೊಡುತ್ತಿದ್ದರು. ಎಷ್ಟೇ ಧರ್ಮ ನಿಷ್ಠರೂ, ಸಂಪ್ರದಾಯಶೀಲರಾಗಿದ್ದಾಗ್ಯೂ ಆಧುನಿಕ ಬದಲಾವಣೆಗೆ ಬಹುಬೇಗ ಹೊಂದಿಕೊಂಡು ಬಿಡುತ್ತಿದ್ದರು. ವೈಚಾರಿಕ ಮನೋಭಾವವನ್ನು ಹೊಂದಿದ್ದ ಅವರು ಕಂದಾಚಾರ, ಮೂಢನಂಬಿಕೆಗಳನ್ನು ತೀವ್ರವಾಗಿ ಖಂಡಿಸುತ್ತಿದ್ದರು.

'ದೇಶ ಸುತ್ತು ಕೋಶ ಓದು' ಎಂಬ ನಾಣ್ಣುಡಿಯಂತೆ ಪ್ರವಾಸ ಮಾಡಿ ಹೊಸ ಹೊಸ ಪ್ರದೇಶಗಳನ್ನು ಸಂದರ್ಶಿಸಿ ಅವುಗಳ ಇತಿಹಾಸ, ಸ್ಥಳ ಪುರಾಣಗಳನ್ನು ತಿಳಿಯುವುದು ಅವರಿಗೆ ಆಸಕ್ತಿಯ ವಿಷಯವಾಗಿತ್ತು. ಇಡೀ ಭಾರತವನ್ನು ಸಂದರ್ಶಿಸಬೇಕು, ವಿದೇಶಯಾತ್ರೆ ಮಾಡಬೇಕು ಎಂಬುದು ಅವರ ಹಂಬಲವಾಗಿತ್ತು. ತಮ್ಮ ಇಳಿವಯಸ್ಸಿನಲ್ಲಿಯೂ ಕೂಡ ಅವರು ನಮ್ಮಣ್ಣ ಪಂಡಿತನೊಂದಿಗೆ ಹಿಮಾಲಯದವರೆಗೂ ಪ್ರವಾಸವನ್ನು ಕೈಗೊಂಡು ಯಶಸ್ವಿಯಾಗಿ ಹಿಂದಿರುಗಿದ್ದರು.

ನಾನು ಕಾಲೇಜಿನಲ್ಲಿ ಬಿ.ಎ., ಓದುವಾಗ ಐಚ್ಛಿಕ ವಿಷಯವಾಗಿ ಕನ್ನಡವನ್ನು ಆರಿಸಿಕೊಂಡಾಗ ಅವರಿಂದ ಹಳಗನ್ನಡ ಕಾವ್ಯಗಳು, ಶಬ್ದಮಣಿ ದರ್ಪಣ, ಛಂದಶ್ಶಾಸ್ತ್ರಗಳನ್ನು ಕಲಿಯುತ್ತಿದ್ದೆ. ಹರಿಶ್ಚಂದ್ರ ಕಾವ್ಯ, ಅಭಿಜ್ಞಾನ ಶಾಕುಂತಲ ಮೊದಲಾದವನ್ನು ಓದುವಾಗ ಅವರು ತುಂಬಾ ಭಾವುಕರಾಗಿ ಬಿಡುತ್ತಿದ್ದರು. ಇತ್ತೀಚಿನ ಟಿವಿ ಧಾರವಾಹಿಗಳಾದ ರಾಮಾಯಣ, ಮಹಾಭಾರತಗಳನ್ನು ನೋಡುವಾಗ ಭಾವುಕರಾಗಿ ಅತ್ತೇ ಬಿಡುತ್ತಿದ್ದರು. ಮೊಮ್ಮಕ್ಕಳೊಂದಿಗೆ ಆಡುವಾಗ ತೀರಾ ಮುಗ್ಧರಾಗಿ ಬಿಡುತ್ತಿದ್ದರು.

ಅಪ್ಪಾಜಿಯವರಿಗೆ ಮೂಕಪ್ರಾಣಿಗಳ ಬಗ್ಗೆ ಅತೀವ ಪ್ರೀತಿ. ಹಸುಗಳನ್ನು ಸಾಕುವುದು ಅವುಗಳ ಸೇವೆಯನ್ನು ಮಾಡುವುದರಲ್ಲಿ ಸ್ವಲ್ಪವೂ ಬೇಸರಿಸುತ್ತಿರಲಿಲ್ಲ. ಹಾಗೇ ವ್ಯವಸಾಯದಲ್ಲಿಯೂ ಅವರಿಗೆ ಆಸಕ್ತಿ ಇತ್ತು. ಮನೆಯಲ್ಲಿ ಸದಾ ಅತಿಥಿ ಅಭ್ಯಾಗತರು, ವಿದ್ಯಾರ್ಥಿಗಳು ಇದ್ದೇ ಇರುತ್ತಿದ್ದರು. ಅವರ ಅವರ ಉಪಚಾರಗಳಿಗೆ ಅವರು ವಿಶೇಷ ಗಮನ ಕೊಡುತ್ತಿದ್ದರು.

ಅವರ ಕೊನೆಯ ದಿನಗಳಲ್ಲಿ ಆಸ್ಪತ್ರೆಯಲ್ಲಿ ಅವರ ಸೇವೆ ಮಾಡುವ ಸುಯೋಗ ನನ್ನ ಪಾಲಿಗೆ ಹೆಚ್ಚಾಗಿ ಲಭಿಸಿತ್ತು. ಆಗ ಅವರು ನನ್ನೊಂದಿಗೆ ಮನಃಬಿಚ್ಚಿ ತಮ್ಮ ಕಷ್ಟಸುಖಗಳನ್ನು ಹಂಚಿಕೊಳ್ಳುತ್ತಿದ್ದರು. ಅವರ ಬದುಕು ಪ್ರಾರಂಭದಿಂದ ಕೊನೆಯವರೆಗೂ ಒಂದು ಹೋರಾಟವೇ ಆಗಿತ್ತು. ಯಾವುದೇ ಕೆಲಸದಲ್ಲಿಯೂ ಅವರಿಗೆ ಬೇಸರ, ನಿರಾಸೆ ಎಂಬುದೇ ಇರುತ್ತಿರಲಿಲ್ಲ.

ಅವರ ಸರಳ ಜೀವನ, ಉನ್ನತ ಆದರ್ಶ ಅವರನ್ನು ಅನೇಕ ವ್ಯಕ್ತಿಗಳ ಆದರ್ಶ ವ್ಯಕ್ತಿಯನ್ನಾಗಿಸಿತ್ತು. ಫಲಾಪೇಕ್ಷೆಯಿಲ್ಲದೆ ಪರರ ಹಿತಕ್ಕಾಗಿ ದುಡಿಯುವ ನಿಃಸ್ವಾರ್ಥ ಮನೋಭಾವ, ದಿಟ್ಟ ನೇರ ನಡೆನುಡಿ ಅವರ ಎಂಬತ್ತನಾಲ್ಕು ವರ್ಷಗಳ ತುಂಬು ಜೀವನದಲ್ಲಿ ಹಾಸುಹೊಕ್ಕಾಗಿತ್ತು. ಇಂತಹ ಧೀಮಂತ ವ್ಯಕ್ತಿಯನ್ನು ಇನ್ನೂ ಕೆಲವು ಕಾಲ ನಮ್ಮೊಡನೆ ಉಳಿಸಿಕೊಳ್ಳಬೇಕೆಂಬುದು ನಮ್ಮ ಹಂಬಲವಾಗಿತ್ತು. ಆದರೆ ಮನುಷ್ಯನ ಆಸೆಗೆ ಕೊನೆ ಎಲ್ಲಿ? ಅವರ ಸಾರ್ಥಕ ಬದುಕು ನಮ್ಮ ಬಾಳಿನ ದಾರಿ ದೀಪ. ಆ ದೀಪದ ಬೆಳಕಿನ ಮುಂದೆ ನಾವು ಚುಕ್ಕೆಗಳು ಮಾತ್ರ. ಅವರ ಆಶೀರ್ವಾದ ಸದಾ ನಮ್ಮ ಬೆಂಗಾವಲಾಗಿರಲಿ ಎಂಬುದು ನನ್ನ ಆಶಯ.

■

# ಲೇಖಕರ ವಿಳಾಸಗಳು

೧. ಹೆಚ್. ಎಂ. ಸುಲೋಚನಾಶಾಸ್ತ್ರಿ
ನಂ.೫೦, ೧೩ನೇ ಮುಖ್ಯರಸ್ತೆ
ಕಾಮಾಕ್ಷಿ ಆಸ್ಪತ್ರೆ ರಸ್ತೆ
ಕುವೆಂಪು ನಗರ, ಮೈಸೂರು - ೨೩.

ಡಾ|| ಬಿ.ಆರ್. ಹಿರೇಮಠ
ಪ್ರವಾಚಕರು ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ - ೩.

೩. ಪ್ರೊ|| ಸಿ. ಮಹಾದೇವಪ್ಪ
೧೯೭, ೫ನೆಯ ಮುಖ್ಯರಸ್ತೆ
ರಿಸರ್ಚ್ ಕಾರ್ನರ್
ವೈಯಲಿಕಾವಲ್,
ಬೆಂಗಳೂರು -೫೬೦ ೦೦೩.

೪. ಪ್ರೊ|| ಚ. ಸುಂದರೇಶನ್
ಶ್ರೀ ಭವತಾರಿಣಿ ಅಧ್ಯಯನ
ಸಂಶೋಧನ ಕೇಂದ್ರ
೫೨, ಚೌಳುಬೀದಿ ಕಬ್ಬನ್‌ಪೇಟೆ,
ಮಾರ್ಕೆಟ್ ಹತ್ತಿರ,
ಬೆಂಗಳೂರು - ೫೬೦ ೦೦೨.

೫. ಡಾ|| ಚನ್ನಕ್ಕ ಎಲಿಗಾರ
ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ - ೫೮೦ ೦೦೩.

೬. ಡಾ|| ಬಿ.ವಿ. ಶಿರೂರ
ಪ್ರವಾಚಕರು ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ - ೫೮೦ ೦೦೩

೭. ಡಾ|| ವೀರಣ್ಣ ರಾಜೂರ
ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ - ೩.

೮. ವಿದ್ವಾನ್ ಎಚ್.ವಿ. ನಾಗರಾಜರಾವ್
ಉಪಸಂಪಾದಕರು
ಪ್ರಾಚೀನ ಭಾರತೀಯ ಸಾಹಿತ್ಯ ಯೋಜನೆ
೪೦೮, ಈಜುವ ಕೊಳದ ರಸ್ತೆ
ಸರಸ್ವತಿ ಪುರಂ ಮೈಸೂರು - ೯.

೯. ಶ್ರೀ ಎಸ್. ಶಿವಣ್ಣ
೧೪೫೭ (ಮಹಡಿ) ೭ನೇ ಎ ಮುಖ್ಯರಸ್ತೆ
ವಿಜಯನಗರ ೨ನೆ ಹಂತ
ಬೆಂಗಳೂರು - ೪೦.

೧೦. ಡಾ|| ವಿ. ಶಿವಾನಂದ
ಮುಖ್ಯಸ್ಥರು ಕನ್ನಡ ವಿಭಾಗ
ಹಿಂದೂ ವಿಶ್ವವಿದ್ಯಾಲಯ
ವಾರಾಣಾಸಿ, ಉತ್ತರಪ್ರದೇಶ - ೫.

೧೧. ವಿದ್ವಾನ್ ಎನ್. ರಂಗನಾಥಶರ್ಮಾ
೮೩೧, ೪ನೆಯ ಮೇನ್‌ರೋಡ್
ವಿಜಯನಗರ,
ಬೆಂಗಳೂರು - ೪೦.

೧೨. ಡಾ|| ಸಂಗಮೇಶ ಸವದತ್ತಿಮಠ
ಪ್ರವಾಚಕರು : ಕನ್ನಡ ಅಧ್ಯಯನ ಸಂಸ್ಥೆ
ಗುಲಬರ್ಗಾ ವಿಶ್ವವಿದ್ಯಾಲಯ
ಗುಲಬರ್ಗಾ - ೫೮೫ ೧೦೬.

೧೩. ಡಾ|| ವ್ಹಿ.ಜಿ. ಪೂಜಾರ
ಪ್ರವಾಚಕರು : ಕನ್ನಡ ಅಧ್ಯಯನಸಂಸ್ಥೆ
ಗುಲಬರ್ಗಾ ವಿಶ್ವವಿದ್ಯಾಲಯ
ಗುಲಬರ್ಗಾ - ೫೮೫ ೧೦೬.

೧೪. ಶ್ರೀ ಎನ್. ಬಸವಾರಾಧ್ಯ
೭೪೩, ೩ನೆಯ ಬ್ಲಾಕ್,
ರಾಜಾಜಿನಗರ
ಬೆಂಗಳೂರು - ೧೦.

೧೫. ಶ್ರೀ ಷಣ್ಮುಖಯ್ಯ ಅಕ್ಕೂರಮಠ
೬೭, ದೇವ ಗಂಗೋತ್ರಿ
ಶಂಕರ ಮಠದ ರಸ್ತೆ, ಶಂಕರಪುರಂ
ಬೆಂಗಳೂರು - ೪.

೧೬. ಶ್ರೀ ಟಿ.ಆರ್. ಮಹದೇವಯ್ಯ
೫೭೮, ಌನೇ ಮುಖ್ಯರಸ್ತೆ,
ಮಾಗಡಿ ಕಾರ್ಡ್‌ರಸ್ತೆ ವಿಸ್ತರಣ
ವಿಜಯನಗರ, ಬೆಂಗಳೂರು - ೪೦.

೧೭. ಶ್ರೀ ಕೆಳದಿ ಗುಂಡಾಜೋಯಿಸ್
ಕೆಳದಿ - ೫೭೭೪೦೧
ಸಾಗರ ತಾಲ್ಲೂಕು,
ಶಿವಮೊಗ್ಗ ಜಿಲ್ಲೆ

೧೮. ಮಲ್ಲೇಪುರಂ ಶ್ರೀ ಜಿ. ವೆಂಕಟೇಶ್
ಉಪ ಪ್ರಾಧ್ಯಾಪಕ
ಕನ್ನಡ ವಿಶ್ವವಿದ್ಯಾಲಯ
ಹಂಪಿ - ೫೮೩೨೧೧.

೧೯. ಶ್ರೀಮತಿ ಉಷಾಕಿರಣ್
೧೫, ಕೃಷಿ ವಿಶ್ವವಿದ್ಯಾಲಯ
ಸಿಬ್ಬಂದಿ ಗೃಹ, ಹೆಬ್ಬಾಳ
ಬೆಂಗಳೂರು - ೫೬೦ ೦೨೪.

೨೦. ಶ್ರೀ ಎನ್. ಸಿದ್ಧಲಿಂಗಯ್ಯ
ಸಹ ಶಿಕ್ಷಕರು : ಗ್ರಾಮಾಂತರ ನಿಲಯ
ಪ್ರೌಢಶಾಲೆ ಅಂಕನಹಳ್ಳಿಮಠ
ಕುಣಿಗಲ್ ತಾಲ್ಲೂಕು, ತುಮಕೂರುಜಿಲ್ಲೆ.

೨೧. ಶ್ರೀ ಜಿ. ಅಬ್ದುಲ್ ಬಷೀರ್
ಕನ್ನಡ ಅಧ್ಯಾಪಕರು: ಎ.ಪಿ.ಎಸ್. ಕಲೆ
ವಿಜ್ಞಾನ ಕಾಲೇಜು, ನರಸಿಂಹರಾಜ ಕಾಲೋನಿ
ಬೆಂಗಳೂರು - ೧೯.

೨೨. ಶ್ರೀಮತಿ ಶಶಕಲಾ ವೀರಯ್ಯಸ್ವಾಮಿ
೨೧೧೯ ಮಹಡಿ, ೧ನೇ ಮುಖ್ಯರಸ್ತೆ,
೭ನೇ ಅಡ್ಡರಸ್ತೆ, ವಿಜಯನಗರ
೨ನೇ ಹಂತ, ಬೆಂಗಳೂರು - ೪೦.

೨೩. ಡಾ. ಸೂರ್ಯನಾಥಯು. ಕಾಮತ್
೭೯೮, ೬ನೇ ಕ್ರಾಸ್ ೧೧ನೇ ಮೇನ್
ಹನುಮಂತನಗರ, ಬೆಂಗಳೂರು - ೧೯.

೨೪. ಡಾ|| ವಿಜಯಶ್ರೀ ಸಬರದ
ಕನ್ನಡ ಉಪನ್ಯಾಸಕರು
ಅಕ್ಕಮಹಾದೇವಿ ಕಾಲೇಜು, ಬೀದರ್-೦೧

೨೫. ಡಾ|| ಬಿ.ಎಸ್. ಕಂಬಿ
ವಿದ್ಯಾಶ್ರೀ
ಶಿವಗಿರಿ; ಧಾರವಾಡ - ೭.

೨೬. ಶ್ರೀ ಎಚ್. ಗಂಗಾಧರನ್
೧೧೮೯, ವಿಷ್ಣುವರ್ಧನ್ ರಸ್ತೆ
ಚಾಮರಾಜಪುರಂ, ಮೈಸೂರು ೪

೨೭. ಶ್ರೀ ಬಿ.ಸಿ. ವೀರಪ್ಪ
ನಂ.೯, ಕಾಳಪ್ಪ ಕಾಂಪೌಂಡ್
೨ನೇ ಕ್ರಾಸ್, ಅಗ್ರಹಾರ ದಾಸರಹಳ್ಳಿ
ಬೆಂಗಳೂರು - ೫೬೦ ೦೭೯.

೨೮. ಡಾ|| ಕೃಷ್ಣಭಟ್ ಅರ್ತಿಕಜೆ
ಮುಖ್ಯಸ್ಥರು, ಕನ್ನಡ ವಿಭಾಗ
ಮದ್ರಾಸ್ ವಿಶ್ವವಿದ್ಯಾನಿಲಯ
ಮದ್ರಾಸ್.

೨೯. ವಿದ್ವಾನ್ ಜಿ.ವಿ. ಶಿವಸ್ವಾಮಿ
೨೩೦೬, ೩ನೇ ಬಿ ಮುಖ್ಯರಸ್ತೆ
ವಿಜಯನಗರ ೨ನೇ ಹಂತ
ಬೆಂಗಳೂರು - ೪೦.

೩೦. ಪ್ರೊ|| ಆರ್. ರಾಚಪ್ಪ
"ರಜತಗಿರಿ" ೧೫೫, ೨ನೇ ಬಿ ಮೈನ್,
ವಿಜಯನಗರ ಎರಡನೇ ಹಂತ,
ಬೆಂಗಳೂರು ೫೬೦ ೦೪೦

೩೧. ಡಾ|| ಎಸ್. ವಿದ್ಯಾಶಂಕರ
೧೩೮, ೨ನೇ ಸಿ ಮೈನ್,
ವಿಜಯನಗರ ಎರಡನೇ ಹಂತ,
ಬೆಂಗಳೂರು - ೫೬೦ ೦೪೦

೩೨. ಡಾ|| ಟಿ.ವಿ. ವೆಂಕಟಾಚಲ ಶಾಸ್ತ್ರಿ
೬೮, ಬಿ. ಆಶ್ರಮರಸ್ತೆ
೩ನೇ ಬ್ಲಾಕ್, ಜಯಲಕ್ಷ್ಮಿಪುರಂ
ಮೈಸೂರು.

೩೩. ಶ್ರೀ ಎಂ.ಜಿ. ನಾಗರಾಜ್
೨೯, ೨ನೇ ಕ್ರಾಸ್, ಶ್ರೀರಾಮನಗರ
ಮಹಾಲಕ್ಷ್ಮಿಪುರ
ಬೆಂಗಳೂರು - ೮೬.

೩೫. ಡಾ॥ ಅಬ್ದುಲ್ ಹಮೀದ್
ಕನ್ನಡ ಉಪನ್ಯಾಸಕರು
ಜಿ.ವಿ.ಪಿ. ಜ್ಯೂನಿಯರ್ ಕಾಲೇಜ್
ಹಂದನಕೆರೆ ತಾಲ್ಲೂಕು ಚಿಕ್ಕನಾಯಕನಹಳ್ಳಿ
ತುಮಕೂರು ಜಿಲ್ಲೆ

೩೭.ಶ್ರೀಮತಿ ಜಯಾ ರಾಜಶೇಖರ
೩೩, ೧೫ನೇ ಕ್ರಾಸ್
೩ನೇ ಬ್ಲಾಕ್, ಜಯನಗರ
ಬೆಂಗಳೂರು - ೧೧.

೩೯. ಡಾ॥ ಬಸವರಾಜ ಸಬರದ
ಪ್ರವಾಚಕರು ಕನ್ನಡ ಅಧ್ಯಯನ ಸಂಸ್ಥೆ
ಗುಲಬರ್ಗಾ ವಿಶ್ವವಿದ್ಯಾಲಯ
ಗುಲಬರ್ಗಾ - ೫೮೫೧೦೬.

೪೧. ಡಾ॥ ಎಸ್. ರಂಗನಾಥ
ಸಂಸ್ಕೃತ ವಿಭಾಗ ಎನ್.ಎಂ.ಕೆ.ಆರ್.ವಿ. ಕಾಲೇಜ್
೩ನೇ ಬ್ಲಾಕ್ ಜಯನಗರ
ಬೆಂಗಳೂರು - ೧೧.

೪೩. ಡಾ॥ ಆರ್. ಶೇಷಶಾಸ್ತ್ರಿ
ಕನ್ನಡ ವಿಭಾಗದ ಮುಖ್ಯಸ್ಥರು
ಆಂಧ್ರಭಾರತಿ ಶ್ರೀಕೃಷ್ಣದೇವರಾಯ
ವಿಶ್ವವಿದ್ಯಾಲಯ
ಅನಂತಪುರ ಆಂಧ್ರಪ್ರದೇಶ.

೪೫. ಪ್ರೊ॥ ಎಂ. ಸಿದ್ಧರಾಮಯ್ಯ ಗೋರಟಾ
ಸಂಗೀತ ವಿಭಾಗ ಕಲಾ ಮಹಾವಿಧ್ಯಾಲಯ
ಬಾಗಲಕೋಟೆ - ೫೮ ೭ ೧೦೧.

೪೭. ಶ್ರೀಜಯ ಅನ್ನದಾನೀಶ್ವರ ಮಹಾಸ್ವಾಮಿಗಳು
ಸಂಸ್ಥಾನಮಠ ಮುಂಡರಗಿ
ಧಾರವಾಡ ಜಿಲ್ಲೆ

೩೪. ಶ್ರೀ ಪ್ರಧಾನ ಗುರುದತ್ತ
೭೪೩ ಇ ಮತ್ತು ಎಫ್ ಬ್ಲಾಕ್
ಮನುಜಪಥ
೪ನೇ ಕ್ರಾಸ್ ಕುವೆಂಪುನಗರ
ಮೈಸೂರು ೨೩

೩೬. ಲಿಂಗರಾಜು
ಶಿವದರ್ಶನ,
ಪರಫೆಕ್ಟ್ ಅಪರೇಟ್ ಹಿಂಭಾಗ
ಬಳೇಕಹಳ್ಳಿ, ಬನ್ನೇರಘಟ್ಟರಸ್ತೆ ಅಂಚೆ
ಬೆಂಗಳೂರು - ೫೬೦ ೦೭೬.

೩೮. ಡಾ॥ ಪಿ.ವಿ. ನಾರಾಯಣ
ತಂಗಾಳಿ, ೩೦, ಆರ್.ಬಿ.ಐ. ಕಾಲೋನಿ
ಜಯನಗರ ೩ನೇ ಬ್ಲಾಕ್ (ಪೂರ್ವ)
ಬೆಂಗಳೂರು - ೧೧.

೪೦. ಶ್ರೀ ಜಿ.ವಿ. ಶಿವಲಿಂಗಯ್ಯ
ನಂ ೩೧೭/೧ ಸುಬ್ಬಯ್ಯ ರಸ್ತೆ
ಮೈಸೂರು ೨೪

೪೨. ಡಾ॥ ಕೆ. ರಾಘವೇಂದ್ರರಾವ್
ಸಿ.ಹೆಚ್ ೩, ೪ನೆಯ ಮೇನ್
೮ನೆಯ ಕ್ರಾಸ್ ಜಯನಗರ,
ಮೈಸೂರು - ೧೪.

೪೪. ವಿದ್ವಾನ್ ಎಂ. ಶಿವಕುಮಾರಸ್ವಾಮಿ
ಗಾಯತ್ರಿ ೧೫೨೮ ಸಿ ಮತ್ತು ಡಿ
ಬಡಾವಣೆ, ಅನಿಕೇತನ ರಸ್ತೆ
೧೪ನೆಯ ತಿರುವು ಕುವೆಂಪುನಗರ
ಮೈಸೂರು - ೫೭೦ ೦೨೩.

೪೬. ಡಾ॥ ನಿಜಲಿಂಗಮ್ಮ ಕೊಪ್ಪಳ
ಪ್ರವಾಚಕರು ಸಂಸ್ಕೃತ ವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೪೮. ಡಾ॥ ಎಚ್. ತಿಪ್ಪೇರುದ್ರಸ್ವಾಮಿ
೨೨೩, ೧೨ನೆಯ ಮುಖ್ಯರಸ್ತೆ
ಸರಸ್ವತಿಪುರಂ, ಮೈಸೂರು - ೫೭೦ ೦೦೯

೪೯. ಶ್ರೀಮತಿ ಮುಕ್ತಾ ಶಿವಪ್ರಸಾದ್
ನಂ.೯೧೯ 'ಸಾಮುಪ್ರಿಯ'
೧೮ ಎ ಮೇನ್ ರಸ್ತೆ ೫ನೇ ಬ್ಲಾಕ್,
ರಾಜಾಜಿನಗರ ಬೆಂಗಳೂರು - ೧೦

೫೧. ವಿದ್ವಾನ್ ಹ.ಜ. ಶಿವಶಂಕರಪ್ಪ
೧೩೮, ೭ನೇ ಸಿ ಮೇನ್
ವಿಜಯನಗರ ೨ನೇ ಹಂತ,
ಬೆಂಗಳೂರು ೪೦

೫೩. ವಿದ್ವಾನ್ ಎಚ್.ಜ. ಶರಣಯ್ಯ
೧೦೭, ೯ನೇ ರಸ್ತೆ, ಜೋಗುಪಾಳ್ಯರಸ್ತೆ
ಅಲಸೂರು, ಬೆಂಗಳೂರು - ೮

೫೫. ದಿ. ಅ.ನ.ಕೃ.

೫೭. ಶ್ರೀ ಜಿ. ಚೆನ್ನವೀರಸ್ವಾಮಿ
ಶ್ರೀ ಸಿದ್ಧಲಿಂಗೇಶ್ವರ ನಿಲಯ,
ನಂ. ೮, ೮ನೇ ಅಡ್ಡರಸ್ತೆ, ೩ನೇ ಮುಖ್ಯರಸ್ತೆ,
ಹನುಮಂತನಗರ, ಬೆಂಗಳೂರು - ೧೯

೫೦. ಡಾ|| ಜಿ.ಎಸ್. ಸಿದ್ಧಲಿಂಗಯ್ಯ
೨೦೩, 'ಲಲಿತಕೃಪ' ೭ನೇ ಎ ಮುಖ್ಯರಸ್ತೆ
ಆರ್.ಪಿ.ಸಿ. ಲೇಔಟ್ ವಿಜಯನಗರ
೨ನೇ ಹಂತ, ಬೆಂಗಳೂರು - ೪೦.

೫೨. ಡಾ|| ಬಿ. ನಂಜುಂಡಸ್ವಾಮಿ
ತಾರಾನಾಥ ಆಯುರ್ವೇದಿಕ್ ಕ್ಲಿನಿಕ್
ಬಿ.ಹೆಚ್. ರೋಡ್
ತುಮಕೂರು - ೬೭೨೧೦೧

೫೪. ಶ್ರೀ ಎಲ್. ಶಿವಲಿಂಗಪ್ಪ
ಕಲಾವಿದ್ಯಾಲಯ, ಬಸವ ನಗರ
ಬೆಂಗಳೂರು - ೩೭.

೫೬. ಶ್ರೀ ಬಿ. ಕೆ. ಶಿವಯ್ಯ
ನಂ. ೯೧೯, ೧೮ನೆಯ ಮುಖ್ಯರಸ್ತೆ,
೫ನೇ ಬ್ಲಾಕ್, ರಾಜಾಜಿನಗರ,
ಬೆಂಗಳೂರು - ೧೦

೫೮. ಡಾ|| ಚದುರಂಗ
ವಾಣಿವಿಲಾಸ್ ಮೊಹಲ್ಲ
ಮೈಸೂರು.

೫೯. ಶಿವಪ್ರಭ
ನಂ. ೩೩೯, ೩ನೇ ಬ್ಲಾಕ್,
ರಾಜಾಜಿನಗರ, ಬೆಂಗಳೂರು - ೧೦

# ಪ್ರಬೋಧ ಪುಸ್ತಕಮಾಲೆ

ಬಸವೇಶ್ವರ ರಸ್ತೆ, ಮೈಸೂರು - ೪

**ಸ್ಥಾಪನೆ ೧೯೪೫**

---

**ಸಂಸ್ಕೃತ**

ಆಸ್ಥಾನವಿದ್ವಾನ್ ಎಂ.ಜಿ. ನಂಜುಂಡಾರಾಧ್ಯ ವಿರಚಿತ ಗ್ರಂಥಗಳು :

೧ ಶ್ರೀಕರಭಾಷ್ಯಂ (ಶ್ರೀಪತಿ ಪಂಡಿತಾರಾಧ್ಯ ವಿರಚಿತ ಸಂಸ್ಕೃತ - ಕನ್ನಡ ಭೂಮಿಕೆಯೊಡನೆ ಎರಡು ಸಂಪುಟಗಳಲ್ಲಿ; ಮೈಸೂರು ವಿಶ್ವವಿದ್ಯಾಲಯದ ಪ್ರಕಟನೆ) (೧೯೭೮ - ೭೯)

೨ ಬ್ರಹ್ಮಸೂತ್ರವೃತ್ತಿ (ಉಮಚಿಗಿ ಶಂಕರಶಾಸ್ತ್ರಿ ಕೃತ ೧೯೭೪)

೩ ಮುಂಡಕೋಪನಿಷತ್ ವೀರಶೈವಭಾಷ್ಯಂ (ಕನ್ನಡ ತಾತ್ಪರ್ಯಸಹಿತ - ೧೯೬೦)

೪ ಕೈವಲ್ಯೋಪನಿಷತ್ ಸಾದಾಶಿವಭಾಷ್ಯಂ (ಕನ್ನಡ ತಾತ್ಪರ್ಯ ಸಹಿತ ೧೯೫೧)

೫ ಈಶಾವಾಸ್ಯೋಪನಿಷತ್, ಶಾಂಕರೀ ವ್ಯಾಖ್ಯೆ (ಕನ್ನಡ ತಾತ್ಪರ್ಯ ಸಹಿತ ೧೯೭೯)

೬ ಸಂಸ್ಕೃತ ಸ್ತವನ ಮಂಜರಿ (ಬಸವಪ್ಪ ಶಾಸ್ತ್ರಿಕೃತ ೧೯೪೮)

೭ ಮಾದರ ಚನ್ನಃ (ನಾಟಕ - ೧೯೬೯)

೮ ಬಸವ ವಚನಾಮೃತಂ (ಭಾಷಾಂತರ) ೧೯೬೬ (ಬಸವ ಸಮಿತಿ ಪ್ರಕಾಶನ)

೯ ಶ್ರೀಶೈಲಪಂಡಿತಾರಾಧ್ಯ ಸುಪ್ರಭಾತಂ (೧೯೬೩)

೧೦ ಚೇಳ್ಳುಗುರಿಕಿ ಎರ್ರಿತಾತ ಸುಪ್ರಭಾತಂ (೧೯೬೩) (ಚೇ. ಪ್ರಕಾಶನ

೧೧ ಶಿವಯೋಗಿ ಎರ್ರಿತಾತ ತ್ರಿಶತಿ ನಾಮಾವಳಿಃ (೧೯೭೨) (ಚೇಳ್ಳುಗುರಿಕಿ ಪ್ರಕಾಶನ)

೧೨ ಕೂಡಲ ಸಂಗಮೇಶ್ವರ ಸುಪ್ರಭಾತಂ (ಬಸವ ಅಷ್ಟಮ ಶತಮಾನೋತ್ಸವ ಪ್ರಸಾರಿತ) (ಅಮುದ್ರಿತ)

೧೩. ಮಲೆಯ ಮಾದೇಶ್ವರ ಸುಪ್ರಭಾತಂ (ಬೆಂ. ಆಕಾಶವಾಣಿ ಪ್ರಸಾರಿತ) (ಅಮುದ್ರಿತ)

೧೪ ರೇಣುಕಗೀತಾ ಭಾಷ್ಯಂ (ಸಿದ್ಧಾಂತ ಶಿಖಾಮಣಿ ಶ್ರೀಮರಿತೋಂಟದಾರ್ಯ ವ್ಯಾಖ್ಯಾ ಸಂಗೃಹೀತ) ( ಅಮುದ್ರತ)

೧೫ ತೈತ್ತೀರಿಯೋಪನಿಷತ್ ಶೈವ ಭಾಷ್ಯಂ (ವೃಷಭ ಪಂಡಿತಕೃತ) (ಅಮುದ್ರಿತ)

೧೬ ವೈದಿಕ ಷಟ್‌ಸ್ಥಲ ಲಿಂಗ ಪೂಜಾ ವಿಧಿ (ಮಂತ್ರಾರ್ಥ ಸಹಿತ - ಮೂರನೆ ಆವೃತ್ತಿ ೧೯೭೩)

೧೭ ಸಂಕ್ಷಿಪ್ತ ಷ॥ ಲಿಂಗಪೂಜಾವಿಧಿ (ಮೂರನೇ ಆವೃತ್ತಿ) ೧೯೭೩
೧೮ ವೀರಶೈವ ಪೂರ್ವಪ್ರಯೋಗ ರತ್ನಂ (೧೯೫೦-೧೯೭೩) (ಮುಖ್ಯ ಮಂತ್ರಾರ್ಥ ಸಹಿತ) (ಮೂರನೇ ಆವೃತ್ತಿ)
೧೯ ವೀರಶೈವಾಗಮ ಪ್ರಯೋಗರತ್ನಂ (೧೯೬೮)
೨೦ ವೀರಶೈವ ಉತ್ತರ ಪ್ರಯೋಗಃ (ಅಂತ್ಯೇಷ್ಟಿ) (೧೯೭೦)
೨೧ ವೀರಶೈವ ಸದಾಚಾರ ಸಂಗ್ರಹಃ (೧೯೬೭)
೨೨ ಶಿವಪಂಚಾಕ್ಷರೀ ಸ್ತೋತ್ರಂ (ಶ್ರೀ ಶಂಕರಾಚಾರ್ಯ ವಿರಚಿತ ಕನ್ನಡ ತಾತ್ಪರ್ಯ ಸಹಿತ) (೧೯೫೬)
೨೩ ಸ್ತೋತ್ರ ಸಂಗ್ರಹಃ (೧೯೬೮)
೨೪ ಸ್ತೋತ್ರಮಂಜರಿ. (೧೯೭೦) (ಮೂರನೇ ಆವೃತ್ತಿ)
೨೫ ಶ್ರೀಕರ ಭಾಷ್ಯಂ (ಚತುಸ್ಸೂತ್ರೀ) (ಉ.ಶಂ.ಶಾಸ್ತ್ರಿ ವಿರಚಿತ ಕನ್ನಡ ಭಾವಾರ್ಥ ಸಹಿತ) ೧೯೭೩

## ಕನ್ನಡ (ಪದ್ಯ)

೨೬ ಶಿವನಸೋಲು (ಗೀತನಾಟಕ - ದ್ವಿತೀಯ ಆವೃತ್ತಿ) (೧೯೪೨ - ೧೯೫೦)
೨೭ ಪಕ್ಷ್ಮಲಾಕ್ಷಿ (ಲಘುಕಾವ್ಯ) (೧೯೪೭)
೨೮ ಸಿರಿಗನ್ನಡ ಶಿಶುಪಾಲ ವಧಂ (೧೯೫೬)
೨೯ ಕನ್ನಡ ಕಿರಾತಾರ್ಜುನೀಯ
೩೦ ಕನ್ನಡ ರಘುವಂಶಂ (ಎಂಟು ಸರ್ಗ ಮಾತ್ರ) (೧೯೫೫)
೩೧ ಹೃದಯ ಮಂಥನ (೧೯೬೮)
೩೨ ಮಧುರ ಚಿಂತನ (೧೯೮೧)
೩೩ ವಿಜಯನಾದ (ಕವನ ಸಂಗ್ರಹ) ೧೯೫೧
೩೪ ಎರ್ರಿತಾತ ಸುಪ್ರಭಾತ (೧೯೬೪) (ಚೇಳ್ಳುರಿಕಿ ಪ್ರಕಾಶನ)
೩೫ ರೇಣುಕ ವಿಜಯ (ಅಪೂರ್ಣ) ಬಸವಪ್ಪಶಾಸ್ತ್ರಿ ಕೃತ (೧೯೪೬)

## ಗದ್ಯ

೩೬ ಶ್ರೀಕರ ಭಾಷ್ಯ ಪ್ರಶಸ್ತಿ (೧೯೮೦)
೩೭ ಗೀತೆ, ಅಂತರ್ವಾಣಿ - ಗೀತೆಯ ಅಂತರ್ವಾಣಿ (೧೯೫೮)
೩೮ ಇಷ್ಟಲಿಂಗ ವಿಜ್ಞಾನ ೧೯೪೬ ಇಷ್ಟಲಿಂಗ ವಿಜ್ಞಾನಮು (ತೆಲುಗು - ಹೈದರಾಬಾದ್ ಪ್ರಕಾಶನ)
೩೯ ಶಿವಲಿಂಗ ಚಾರಿತ್ರ (ಶಾಂತವೀರ ದೇಶಿಕ) (೧೯೬೬)

೪೦ ವೈರಾಗ್ಯ ಸಿದ್ಧವಿರೂಪಾಕ್ಷ ದೇಶಿಕೇಂದ್ರ (೧೯೬೮)
೪೧ ಶಿವದೇವವಿಜಯ (೧೯೪೯)
೪೨ ಶಿವರಾತ್ರಿ ಶಿವಾಚಾರ್ಯ (೧೯೬೧)
೪೩ ಹೇಮರೆಡ್ಡಿ ಮಲ್ಲಮ್ಮ - ರಾಜಯೋಗಿ ವೇಮಣ್ಣ (೧೯೫೦)
೪೪ ವೀರಶೈವ ವೇದಾಧಿಕಾರ ವಿಜಯ (೧೯೬೯) (ಪಂಚಾಚಾರ್ಯ ಪ್ರೆಸ್ ಪ್ರಕಾಶನ)
೪೫ ಚಾರುದತ್ತ (೧೯೬೨)
೪೬ ಭೀಮೇಶ್ವರ ಕ್ಷೇತ್ರಗಳು (೧೯೬೫)
೪೭ ಶೈವದರ್ಶನ ಇತಿಹಾಸ ತತ್ತ್ವ ಪ್ರಕಾಶ ೧೯೭೪
೪೮ ಗಿರಿಜಾ ಕಲ್ಯಾಣ (ಹರಿಹರ ಕವಿ ಕೃತ ೧೯೭೭) ಕ.ಸಾ. ಪ್ರಕಾಶನ)
೪೯ ರೇವಣ ಸಿದ್ಧೇಶ್ವರ (ಭಾರತ - ಭಾರತಿ ಪುಸ್ತಕ ಸಂಪದ) (೧೯೭೫)
೫೦ ವೈದಿಕ ವಾಙ್ಮಯ ಚರಿತ್ರೆ ೧೯೫೦ (ಮೊಕ್ಡೋನಾಲ್ಡ್) ವಿರಚಿತ ಅನುವಾದ (ಅಮುದ್ರಿತ)
೫೧ ಅ. ಕಾ. ಬಸವಪ್ಪ ಶಾಸ್ತ್ರಿಗಳ ಸಮಗ್ರ ಕೃತಿಗಳು (೧೯೭೭)

## ಜೀವನ ಚರಿತ್ರೆಗಳು

೫೨ ಅ. ಕಾ. ಬಸವಪ್ಪ ಶಾಸ್ತ್ರಿಗಳು (ಜೀವನ ಕೃತಿ ವಿಮರ್ಶೆ) ೧೯೪೫
೫೩ ಅ.ಕಾ. ಬಸವಪ್ಪ ಶಾಸ್ತ್ರಿ (ಐ.ಬಿ.ಎಚ್. ಪ್ರಕಾಶನ) (೧೯೭೧)
೫೪ ದಾಸ ಮುಗ್ಗಳಿ (೧೯೭೨) - (ಐ.ಬಿ.ಎಚ್ ಪ್ರಕಾಶನ)

## ಮೈ. ವಿ. ವಿ. ಪ್ರಕಟಣೆಗಳು

೫೫ ಕವಿ ಮುರಾರಿ (೧೯೭೦)
೫೬ ಮಾಘ ಕವಿ (೧೯೭೨)
೫೭ ಮಹಾಕವಿ ಭಾರವಿ (೧೯೬೯)
೫೮ ಕವಿ ಶ್ರೀ ಹರ್ಷ (೧೯೭೦)
೫೯ ಭಟ್ಟ ನಾರಾಯಣ (೧೯೭೧)
೬೦ ಇಡಗೂರು ರುದ್ರಕವಿ (ಜೀವನ - ಕೃತಿ - ವಿಮರ್ಶೆ) (೧೯೬೪)
೬೧ ಶ್ರೀಗುರು ಹಾಲು ಸ್ವಾಮಿಗಳು (೧೯೫೪)
೬೨ ಗುಬ್ಬಿ ತೋಟದಪ್ಪನವರು (೧೯೬೧)
೬೩ ಜೀವ ಜ್ಯೋತಿ (ಉದ್ದಾನ ಶಿವಯೋಗಿ) (೧೯೪೧)
೬೪ ಗೌರೀ ಶಂಕರ ಸ್ವಾಮಿಗಳು (೧೯೫೨)

೬೫ ಎಚ್. ಸಿದ್ಧಯ್ಯನವರು (೧೯೫೪)
೬೬ ಪಿ.ಆರ್. ಕರಿಬಸವಶಾಸ್ತ್ರಿ (೧೯೭೯)
೬೭ ಎನ್.ಆರ್. ಕರಿಬಸವಶಾಸ್ತ್ರಿ (೧೯೭೯)
(ಜ. ತೋಂಟದಾರ್ಯ ಮಠದ ಪ್ರಕಾಶನ ಗದಗ)
೬೮ ಉಮಚಗಿ ಶಂಕರಶಾಸ್ತ್ರಿ (೧೯೮೧)
(ಜ. ತೋಂಟದಾರ್ಯ ಮಠದ ಪ್ರಕಾಶನ, ಗದಗ.)
೬೯ ಸಿರಸಿ ಗುರುಶಾಂತಶಾಸ್ತ್ರಿ (೧೯೮೧) (ಜ. ತೋಂಟದಾರ್ಯ ಮಠದ ಪ್ರಕಾಶನ, ಗದಗ.)
೭೦ ತೋಂಟಿನ ಮಠದ ಷಡಕ್ಷರ ಶಿವಯೋಗಿ (೧೯೭೬)
೭೧ ಭಾರತೀಯ ದರ್ಶನ (ಸಂಸ್ಕೃತ ವಿದ್ವತ್ ಪರೀಕ್ಷೆ ಪಠ್ಯಗ್ರಂಥ (೧೯೭೯) ಇತರರೊಡ
ಸಂಪಾದಿತ)
೭೨ ಶ್ರೀಶೈಲ ಪಂಡಿತಾರಾಧ್ಯ ಚರಿತ್ರಮುಂ (ತೆಲುಗು) (ಪುಲ್ಲ ಕವಿ) (ಸಂಪಾದಿತ ೧೯೫
೭೩ ದರ್ಶನ ದೀಪ್ತಿ (ಸಂಪಾದಿತ) (ಗಿರಿಯಾಪುರದ ಪ್ರಕಾಶನ) (೧೯೭೩)
೭೪ ವಿಭೂತಿ '' ೧೯೬೭ (ಗಿರಿಯಾಪುರದ ಪ್ರಕಾಶನ ೧೯೬೭)
೭೫ ಶ್ರೀಶೈಲ ಪೀಠದರ್ಶನ (ನಿಡುಮಾಮಿಡಿ ಶ್ರೀಶೈಲ ಗ್ರಂಥಮಾಲೆ ಪ್ರಕಾಶನ, (೧೯೬೭
೭೬ ದೇವರ ದಾಸಿಮಾರ್ಯಪ್ರಶಸ್ತಿ (ಸಂಪಾದಿತ) ೧೯೫೩

## ಪಠ್ಯ ಪುಸ್ತಕಗಳು

೭೭ ಅರ್ಜುನ ವಿಜಯ (೧೯೪೮)
೭೮ ಚಂದ್ರಗುಪ್ತನ ಭಾಗ್ಯ (ಪಠ್ಯ ಗ್ರಂಥ S.S.L.C) (೧೯೬೧)
೭೯ ಹೈಸ್ಕೂಲು ಮೊದಲ ತರಗತಿ ಪದ್ಯ (೧೯೫೨) (VIIIth Std)
೮೦ ಹೈಸ್ಕೂಲು ತರಗತಿ ಪದ್ಯ ೧೯೫೨ (IXth Std)
೮೧ ಸತ್ಯವ್ರತಿ ಭೀಷ್ಮ (೧೯೬೪)
೮೨ ಮಗ್ಗೆ ಮಾಯಿದೇವರು ಮತ್ತು ಅವರ ಕೃತಿಗಳು
೮೩ ಹಿಂದೂ ಧರ್ಮ ಮತ್ತು ವೀರಶೈವ ಸಂಸ್ಕೃತಿ

**ಬೆಂಗಳೂರಿನ ಶಾಖೆ**

**''ಅಮರವಾಣಿ ನಿಲಯ''**

ಪ್ರಬೋಧ ಪುಸ್ತಕಮಾಲ

೩೩೪, ೩ನೇಬ್ಲಾಕ್, ರಾಜಾಜಿನಗರ

ಬೆಂಗಳೂರು - ೫೬೦ ೦೧೦

ಆಸ್ಥಾನವಿದ್ವಾನ್ ಎಂ. ಜಿ. ನಂಜುಂಡಾರಾಧ್ಯರು, ಕೋಲಾರ ಜಿಲ್ಲೆಯ ಗೌರಿಬಿದನೂರು ತಾಲೂಕಿನ ಗುಂಡ್ಲಹಳ್ಳಿಯಲ್ಲಿ 1914 ಆಗಸ್ಟ್-1 ರಂದು ಜನ್ಮ ತಾಳಿದರು. ಅವರ ತಂದೆ ಗಂಗಾಧರಯ್ಯ ತಾಯಿ ವೀರಮ್ಮ. ಶ್ರೀಯುತರು ತಮ್ಮ ಪ್ರಾಥಮಿಕ ಶಿಕ್ಷಣವನ್ನು ಸ್ವಗ್ರಾಮದಲ್ಲಿಯೇ ಮುಗಿಸಿ. ನಂತರ ಶ್ರೀ ಸಿದ್ಧಗಂಗಾ ಸಂಸ್ಕೃತ ಮಹಾ ಪಾಠಶಾಲೆಯಲ್ಲಿ ವಿದ್ಯಾಭ್ಯಾಸ ಮಾಡಿದರು. ಆನಂತರ ಪ್ರೌಢವ್ಯಾಸಂಗಕ್ಕಾಗಿ ಬೆಂಗಳೂರಿಗೆ ಬಂದು ಶ್ರೀಗೌಡರ ವೀರಭದ್ರಪ್ಪನವರ ವೇದ-ಸಂಸ್ಕೃತ ಪಾಠಶಾಲೆಯ ಧರ್ಮಛತ್ರದಲ್ಲಿ ಆಶ್ರಯ ಪಡೆದು ಬೆಂಗಳೂರಿನ ಶ್ರೀ ಚಾಮರಾಜೇಂದ್ರ ಸಂಸ್ಕೃತ ಕಾಲೇಜಿನಲ್ಲಿ ತಮ್ಮ ವ್ಯಾಸಂಗವನ್ನು ಮುಂದುವರಿಸಿ ಅಲಂಕಾರ ಶಾಸ್ತ್ರ ಹಾಗೂ ಶಕ್ತಿವಿಶಿಷ್ಟಾದ್ವೈತ ವೇದಾಂತಗಳಲ್ಲಿ 'ವಿದ್ವಾನ್' ಪದವಿಗಳನ್ನು ಪಡೆದರು. ಅಲ್ಲದೆ, ಹಿಂದಿಯಲ್ಲಿ ರಾಷ್ಟ್ರಭಾಷಾ ವಿಶಾರದ, ಕನ್ನಡದಲ್ಲಿ ವಿದ್ವಾನ್ ಪದವಿಗಳನ್ನು ಗಳಿಸಿಕೊಂಡರು. ಹೀಗೆ ಅವರು ತ್ರಿಭಾಷಾ ಪಂಡಿತರು ಎಂಬ ಕೀರ್ತಿ ಪಡೆದರು ತಾವು ವ್ಯಾಸಂಗ ಮಾಡಿದ ಶ್ರೀ ಚಾಮರಾಜೇಂದ್ರ ಸಂಸ್ಕೃತ ಕಾಲೇಜಿನಲ್ಲಿ ಅಧ್ಯಾಪಕರಾಗಿ ಉಪಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ ತರುವಾಯ ಮೈಸೂರಿನ ಮಹಾರಾಜ ಸಂಸ್ಕೃತಕಾಲೇಜಿನಲ್ಲಿ ಶಕ್ತಿವಿಶಿಷ್ಟಾದ್ವೈತ ವೇದಾಂತ ಮತ್ತು ವೀರಶೈವಾಗಮದ ಅಧ್ಯಾಪಕ ಹಾಗೂ ಪ್ರಾಧ್ಯಾಪಕರಾಗಿ ಸುಮಾರು ಮೂವತ್ತು ಮೂರು ವರ್ಷ ಸೇವೆ ಸಲ್ಲಿಸಿದರು.

ನಮ್ಮ ನಾಡಿನ ಸಾವಿರಾರು ವಿದ್ಯಾರ್ಥಿಗಳಿಗೆ ಹಾಗೂ ಮಠಾಧೀಶ್ವರರಿಗೆ ವಿದ್ಯಾದಾನ ಮಾಡಿದ ಶ್ರೇಯಸ್ಸು ಶ್ರೀಯುತರಿಗೆ ಸಲ್ಲುತ್ತದೆ. ಶ್ರೀಯುತರಲ್ಲಿ ವ್ಯಾಸಂಗ ಮಾಡಿದವರಲ್ಲಿ ಕೆಲವರು ಇಂದು ಮಠಾಧೀಶರಾಗಿದ್ದಾರೆ ಮತ್ತೆ ಕೆಲವರು ಶ್ರೇಷ್ಠ ವಿದ್ವಾಂಸರೂ ಪ್ರಾಧ್ಯಾಪಕರೂ ಆಗಿದ್ದಾರೆ.



## ಮಧುರ ಚಿಂತನ

ಬದುಕಿರಲು ನರನ
ಗುಣವರಿಯರೈ ಧರೆಯ ಜನ !
ತನುವಳಿಯೆ ಬೆಳಗುವುದು
ಸಹಜಮಿಳೆಯೊಳ್ :
ಸೌದೆಯಲಿ ಬೆರೆದಿರ್ಪ
ಚಂದನದ ಸೌರಭಂ
ಉರಿಯುತಿರೆ
ಹರಡುವುದನರಿಯರೊಳರೆ !

* * *

ತಿಳಿವಿಲ್ಲದೆಯೆ ಬಾಲ್ಯ
ಕಳೆಯುವುದು ಮಾನವಗೆ
ಬೆಳೆವಾಗ ಬೇಕುಗಳು
ಕಾಡುತಿಹವು
ಹರಯದಲಿ ಕಾಮ
ದುನ್ಮಾದ ಕಡಲಿನ ಸೆಳೆತ
ಮತಿ ವಿಕಲ
ಮುದಿತನದೆ ಸುಖಿಪುದೆಂದು ?

—'ಅಮರವಾಣಿ'

## ಸೃಜನಶೀಲ ವಿದ್ವತ್ ಶಿಖರ

ವಿದ್ವಾನ್ ಶ್ರೀ ಎಂ.ಜಿ. ನಂಜುಂಡಾರಾಧ್ಯ ಅವರನ್ನು ಸ್ಮರಿಸಿಕೊಂಡಾಗಲೆಲ್ಲಾ ವಿದ್ವತ್ತಿನ ಔನ್ನತ್ಯದ ಜೊತೆಗೆ ಸೌಜನ್ಯ ಸಹೃದಯತೆಗಳ ಸ್ನೇಹಮೂರ್ತಿಯೊಂದು ಕಣ್ಣ ಮುಂದೆ ನಿಲ್ಲುತ್ತದೆ. ಅವರ ವ್ಯಕ್ತಿತ್ವವೇ ಅಂತಹದು. ಸಂಸ್ಕೃತ ಕನ್ನಡಗಳಲ್ಲಿ ಪ್ರಗಲ್ಭ ಪಾಂಡಿತ್ಯ; ಸಂಸ್ಕೃತ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದು ತಮ್ಮ ಪ್ರೌಢಪ್ರವಚನಗಳಿಂದಲೂ ಮತ್ತು ತಮ್ಮ ಪ್ರೌಢಗ್ರಂಥಗಳಿಂದಲೂ ಗಮನ ಸೆಳೆಯುವ ಸಿದ್ಧಾಂತ ಪ್ರತಿಪಾದನೆಯ ಶಿಸ್ತು; ಇದರ ಜೊತೆಗೆ ಪರಿಶುದ್ಧ ಜೀವನದ ನಿಷ್ಠಾವಂತ ಆಚರಣೆಯ ನಿಯಮಬದ್ಧ ಜೀವನ, ಇವುಗಳಿಂದ ಸಹಜವಾಗಿ ಬೆಳೆಯ ಬಹುದಾದ ಅಹಂಕಾರಕ್ಕೆ ಎಡೆಗೊಡದ ಸರಸ ಸಜ್ಜನಿಕೆಯ ಸರಳತೆ. ಈ ಮೂರು ಒಂದಾಗಿ ಕಂಡೊಡನೆ ಗೌರವವನ್ನು ಮೂಡಿಸುವಂತಹ ಆಕರ್ಷಕ ವ್ಯಕ್ತಿತ್ವ ಅವರದಾಗಿತ್ತು.

ಅವರ ವಿದ್ವತ್ತಿನ ಗುಣವೆಂದರೆ, ಶುಷ್ಕ ಪಾಂಡಿತ್ಯವಾಗಿರಲಿಲ್ಲ. ವಿಷಯದ ಪ್ರೌಢಿಮೆಯ ಜೊತೆಗೆ ನಿರೂಪಣೆಯ ಪರಿಣತಿಯೂ ಸೇರಿ ಅವರ ಶಾಸ್ತ್ರಗ್ರಂಥಗಳು ಜಡವಾಗದೆ ಕುತೂಹಲದಿಂದ ಓದಿಸಿಕೊಳ್ಳುತ್ತವೆ. ಪಾಂಡಿತ್ಯದ ಜೊತೆಗೆ ಸೃಜನಾತ್ಮಕ ಕೃತಿಗಳನ್ನು ಅವರು ರಚಿಸಿರುವುದನ್ನು ಗಮನಿಸಬಹುದು.

ಡಾ॥ ಎಚ್. ತಿಪ್ಪೇರುದ್ರಸ್ವಾಮಿ